## ಪ್ರಥಮ
## ದೈವ ಗ್ರಂಥ

## ತ್ರೈತ ಸಿದ್ಧಾಂತ

# ಭಗವದ್ಗೀತೆ

(578 ಶ್ಲೋಕಗಳ ವಚನ ಗ್ರಂಥ)



ರಚಿತ : ತ್ರಿಮತ ಐಕ್ಯೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

**www.thraithashakam.org**








ಪ್ರಥಮ ದೈವಗ್ರಂಥ

## ತ್ರೈತ ಸಿದ್ಧಾಂತ

# ಭಗವದ್ಗೀತೆ

(578 ಶ್ಲೋಕಗಳ ವಚನ ಗ್ರಂಥ)


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ
ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ**

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಆಗಸ್ಟ್ –2016

ಪ್ರತಿಗಳು : 1000 **ಬೆಲೆ. 440/–**

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## 'ಇಂದೂ ಜ್ಞಾನವೇದಿಕೆ' ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## 'ಇಂದೂ ಜ್ಞಾನವೇದಿಕೆ' ಪ್ರಕಟಣೆಗಳು





# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು– ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು ಚನಿಪೋಯಾಡಾ? ಚಂಪಬಡ್ಡಾಡಾ?
116. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.

---

**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# 'ಇಂದೂ ಜ್ಞಾನವೇದಿಕೆ' ಗ್ರಂಥಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P
Cell : **ಶ್ರೀನಿವಾಸ**–09705864675, **ಲಕ್ಷ್ಮೀನಾರಾಯಣಾಚಾರಿ**–09440556968.
**ವೆಂಕಟೇಶ್**–08096816963.

**(ಇಂದೂ ಜ್ಞಾನ ವೇದಿಕೆ ಸದಸ್ಯರು)**

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು (ಪೊ)
ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ,
(ತಾ) ಮಾನವಿ, ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆಂಟ್ ರೋಡ್, ಚಾಮರಾಜ
ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್,
ಬೆಂಗಳೂರು–560066
Cell : 9482516023

## ತ್ರೈತ ಸಿದ್ಧಾಂತವನ್ನು ತಿಳಿಸುವ ಇಂದೂ ಜ್ಞಾನವೇದಿಕೆಯ ಬೋಧನೆಗಳನ್ನು ಓದಿರಿ!

01. ವಿಶ್ವವ್ಯಾಪ್ತವಾಗಿ ಎಲ್ಲರಲ್ಲಿರುವುದು ತ್ರೈತವೆಂದು ತಿಳಿಸುವುದು ಇಂದೂ ಜ್ಞಾನವೇದಿಕೆ.
02. ವಿಶ್ವ ವ್ಯಾಪ್ತವಾಗಿರುವ ಎಲ್ಲಾ ಮತಗಳಲ್ಲಿ ಇಂದೂಮತ ಇದೆಯೆಂದು ಹೇಳುವುದು ಇಂದೂ ಜ್ಞಾನವೇದಿಕೆ.
03. ಯಾವ ಮತದವರಿಗಾದರೂ ಮತಸಾಮರಸ್ಯ ಹೊಂದಬೇಕೆಂದರೆ ದೇವರ ಜ್ಞಾನ ತಿಳಿಯಬೇಕೆನ್ನುತ್ತಿದೆ ಇಂದೂ ಜ್ಞಾನವೇದಿಕೆ.
04. ಎಲ್ಲಾ ಮತಗಳನ್ನು ಸಾಮರಸ್ಯವಾಗಿ ಬೋಧಿಸುವುದು ಇಂದೂ ಜ್ಞಾನವೇದಿಕೆ.
05. ಎಲ್ಲಾ ಮತಗಳ ಸಾರಾಂಶ ಹೊಂದಿರುವುದು ಇಂದೂ ಜ್ಞಾನವೇದಿಕೆ.
06. ಮಂತ್ರಗಳು, ಜಪಗಳು, ಉಪವಾಸಗಳು, ಧ್ಯಾನಗಳೊಂದಿಗೆ ಸಂಬಂಧ ವಿಲ್ಲದಂತೆ ಇಂದ್ರಿಯಾತೀತ ಜ್ಞಾನವನ್ನು ಬೋಧಿಸುವುದು ಇಂದೂ ಜ್ಞಾನವೇದಿಕೆ.
07. ನೀನು ನಿನ್ನ ಮತದಲ್ಲಿ ಸ್ವಚ್ಛವಾದ ಜ್ಞಾನಿ ಆಗಬೇಕೆಂದು ಕೋರಿಕೊಳ್ಳುವುದು ಇಂದೂ ಜ್ಞಾನವೇದಿಕೆ.
08. ಮನುಜರ ಮತಗಳಿಗತೀತವಾದ ಜ್ಞಾನವನ್ನು ತಿಳಿಸುವುದು ಇಂದೂ ಜ್ಞಾನವೇದಿಕೆ.
09. ಜೀವಾತ್ಮಗಿಂತ ದೊಡ್ಡದು ಮತ್ತು ದೇವರಿಗಿಂತ ಚಿಕ್ಕದು ಮತ್ತೊಂದಿದೆ. ಅದೇನೆಂದು ತಿಳಿಸುವುದೇ ಇಂದೂ ಜ್ಞಾನವೇದಿಕೆ.
10. ಹಿಂದೂ ಮತಕ್ಕಿಂತ ಅತೀತವಾದ ಇಂದೂ ಮತವನ್ನು ಕುರಿತು ಹೇಳಿ ಎಲ್ಲಾ ಮತದವರಿಂದ ನಾನು ಇಂದೂವೆಂದೂ (ಜ್ಞಾನಿಯೆಂದು) ಹೇಳಿಸುವುದು ಇಂದೂ ಜ್ಞಾನವೇದಿಕೆ.
11. ಜ್ಞಾನ ವಿಷಯ ತಿಳಿದುಕೊಂಡರೆ ಪ್ರತಿಯೊಬ್ಬರು ನಾನು ಇಂದೂ ಆಗಬೇಕೆಂದು ಆತುರ ಪಡುವಂತೆ ಮಾಡುವುದು ಇಂದೂ ಜ್ಞಾನವೇದಿಕೆ.
12. ಮಾಯೆ (ಸಾತಾನ್) ಅಥವಾ ಸೈತಾನನ್ನು ಮತ್ತು ದೇವರು ಎನ್ನುವ ಇಬ್ಬರನ್ನು ಮಾತ್ರವೇ ತಿಳಿಸುವುದು ಇಂದೂ ಜ್ಞಾನವೇದಿಕೆ.
13. ಭಗವದ್ಗೀತೆ, ಖುರಾನ್, ಬೈಬಲ್‌ನ ಸಾರಾಂಶವನ್ನು ತಿಳಿದು ಆಚರಿಸುವುದು ಇಂದೂ ಜ್ಞಾನವೇದಿಕೆ.
14. ದೇವರನ್ನು ಅಲ್ಲದೆ ಇತರೆ ಮಾಯೆಯನ್ನು (ಸೈತಾನನ್ನು) ಆರಾಧಿಸಬೇಡವೆಂದು ಹೇಳುವುದು ಇಂದೂ ಜ್ಞಾನವೇದಿಕೆ.

15. ದೇವರ ಜ್ಞಾನ ತಿಳಿಯದಿರುವುದು, ಅರ್ಥ ಆಗದಿರುವುದೆ ಭೂಮಿ ಮೇಲೆ ಎಲ್ಲಾ ಅನರ್ಥಗಳಿಗೆ ಕಾರಣವೆಂದು ತಿಳಿಸುವುದು ಇಂದೂ ಜ್ಞಾನವೇದಿಕೆ.

16. ಹಿಂಸೆಯಿಂದ ಯಾವ ಮತವನ್ನು, ಯಾವ ಮನುಷ್ಯನನ್ನು ಬದಲಾಯಿಸಲಾರೆವೆಂದು, ದೇವರ ಜ್ಞಾನದಿಂದ ಯಾರನ್ನಾದರೂ ಬದಲಾಯಿಸಬಹುದೆಂದು ತಿಳಿಸುವುದೇ ಇಂದೂ ಜ್ಞಾನವೇದಿಕೆ.

17. ದೇವರ ಜ್ಞಾನ ತಿಳಿಯುವವರೆಗೂ ಯಾವ ಮತಕ್ಕೆ ಸಂಬಂಧಿಸಿರುವುದೋ ಯಾರಿಗೂ ಅರ್ಥವಾಗದಿರುವುದು ಇಂದೂ ಜ್ಞಾನವೇದಿಕೆ.

18. ಕಣ್ಮರೆಯಾದ ಆಚಾರಗಳಿಗು, ಸಾಂಪ್ರದಾಯಗಳಿಗು ಅರ್ಥಗಳನ್ನು ತಿಳಿಸುವುದು ಇಂದೂ ಜ್ಞಾನವೇದಿಕೆ.

19. ಭಗವದ್ಗೀತೆ ಶ್ಲೋಕಗಳಿಗೂ, ಪರಿಶುದ್ಧ ಗ್ರಂಥದ ವಾಕ್ಯಗಳಿಗೂ, ಪವಿತ್ರ ಗ್ರಂಥದ ಸೂತ್ರಗಳಿಗೂ ಸಾರಾಂಶವಾದ ದೇವರನ್ನು ಮಾತ್ರ ತಿಳಿಸುವುದು ಇಂದೂ ಜ್ಞಾನವೇದಿಕೆ.

20. ದೇವರ ಜ್ಞಾನವೆಂಬ ಆಯುಧದಿಂದ ದೇವರ ಸೈನಿಕನಾಗಿ ಬದಲಾಗಿ ಪಕ್ಕದದಾರಿ ಹಿಡಿಸುತ್ತಿರುವ ಮಾಯೆ ಅಥವಾ ಸಾತಾನ್ ಮೇಲೆ ಪವಿತ್ರ ಯುದ್ಧ ಮಾಡಬೇಕು ಆದರೆ ಸಾಮಾನ್ಯ ಮನುಷ್ಯರ ಮೇಲೆ ಅಲ್ಲವೆಂದು ತಿಳಿಸುವುದೇ ಇಂದೂ ಜ್ಞಾನವೇದಿಕೆ.

21. ಶಾಸ್ತ್ರೀಯತೆಯನ್ನು ಅಶಾಸ್ತ್ರೀಯತೆಯನ್ನು ತಿಳಿಸುವುದು ಇಂದೂ ಜ್ಞಾನವೇದಿಕೆ.

22. ಗೀತಾಶಾಸ್ತ್ರದ ಆಧಾರದಿಂದ ಆಸ್ತಿಕರ ನಾಸ್ತಿಕರ ವಾಸ್ತವವನ್ನು ತಿಳಿಸುವುದು ಇಂದೂ ಜ್ಞಾನವೇದಿಕೆ.

23. ಜ್ಯೋತಿಷ್ಯವು ಶಾಸ್ತ್ರವೆಂದು, ವಾಸ್ತು ಶಾಸ್ತ್ರವಲ್ಲವೆಂದು ವಿವರಿಸಿ ಹೇಳುವುದು ಇಂದೂ ಜ್ಞಾನವೇದಿಕೆ.

24. ಯಜ್ಞಯಾಗಾದಿಗಳು, ವ್ರತಕ್ರತುಗಳು, ವೇದಾಧ್ಯಾಯನಗಳು, ತಪಸ್ಸುಗಳು ದೈವಸಮ್ಮತ ಅಲ್ಲವೆಂದು ತಿಳಿಸುವುದು ಇಂದೂ ಜ್ಞಾನವೇದಿಕೆ.

25. ನಂಬಿಕೆ ಮೂಡನಂಬಿಕೆ ಆಗಬಹುದು ಜಾಗ್ರತೆಯಾಗಿ ಪರಿಶೀಲಿಸಬೇಕೆಂದು ತಿಳಿಸುವುದು ಇಂದೂ ಜ್ಞಾನವೇದಿಕೆ.

26. ಮೂಢನಂಬಿಕೆಯಲ್ಲಿ ಮೂಢತ್ವವನ್ನು ವಿವರಿಸಿ ಖಂಡಿಸುವುದು ಇಂದೂ ಜ್ಞಾನವೇದಿಕೆ.

27. ನಾಲ್ಕು ಕುಲಗಳು ಇಲ್ಲವೆಂದು ನಾಲ್ಕು ಪದ್ಧತಿಗಳು ಇವೆಯೆಂದು ಕುಲರಹಿತವನ್ನು ತಿಳಿಸುವುದು ಇಂದೂ ಜ್ಞಾನವೇದಿಕೆ.

28. ಮತಗಳು ಮನುಷ್ಯರ ಸೃಷ್ಟಿಯೇ ಎಂದು ದೇವರಿಗೆ ಮತಗಳು ಇಲ್ಲವೆಂದು ತಿಳಿಸುವುದು ಇಂದೂ ಜ್ಞಾನವೇದಿಕೆ.

29. ದೇವರು ಒಬ್ಬನೇ ಎಂದು ಎಲ್ಲರಿಗಿಂತ ದೊಡ್ಡವನೆಂದು ಹೇಳುವವರು, ನಮ್ಮ ಮತವೆಂದು, ನಮ್ಮ ದೇವರೆಂದು ಹೇಳುವುದು ತಪ್ಪು ಅಲ್ಲವೆ ಎಂದು ವಿಮರ್ಶಿಸುವುದು ಇಂದೂ ಜ್ಞಾನವೇದಿಕೆ.
30. ಮನುಷ್ಯರೆಲ್ಲರಿಗೂ ದೇವರು ಒಬ್ಬನೇ, ದೈವಜ್ಞಾನ ಒಂದೇ ಎಂದು ಹೇಳುವುದು ಇಂದೂ ಜ್ಞಾನವೇದಿಕೆ.
31. ಜ್ಞಾನವನ್ನು ವಿಜ್ಞಾನಸಹಿತವಾಗಿ ವಿವರಿಸಿ ಹೇಳುವುದು ಇಂದೂ ಜ್ಞಾನವೇದಿಕೆ.
32. ಪ್ರಜೆಗಳಿಗೆ ಮಹಿಮೆಗಳು ಅನವಶ್ಯವೆಂದು, ಜ್ಞಾನ ಅವಶ್ಯವೆಂದು ಹೇಳುವುದು ಇಂದೂ ಜ್ಞಾನವೇದಿಕೆ.
33. ಶಾಸ್ತ್ರಬದ್ದವಲ್ಲದ ರಾಮಾಯಣವನ್ನು, ಹೇತುಬದ್ದವಲ್ಲದ ಭಾಗವತವನ್ನು ಬಿಟ್ಟು ಶಾಸ್ತ್ರಬದ್ಧತೆ ಹೇತುಬದ್ಧತೆ ಹೊಂದಿದ ಗೀತೆಯನ್ನು ನೋಡೆನ್ನುತ್ತಿದೆ ಇಂದೂ ಜ್ಞಾನವೇದಿಕೆ.
34. ಹೇತುವಿಲ್ಲದ ಹೇತುವಾದಿಗಳನ್ನು, ಆಸ್ತಿಕತ್ವವಿಲ್ಲದ ಆಸ್ತಿಕರನ್ನು ವಿಮರ್ಶಿಸುವುದು ಇಂದೂ ಜ್ಞಾನವೇದಿಕೆ.
35. ಭಗವಂತನಿಗೂ, ಪರಮಾತ್ಮನಿಗೂ, ದೇವರಿಗೂ ವಿವಿಧ ಅರ್ಥ ನಿರ್ವಚನೆ ತಿಳಿಸುವುದು ಇಂದೂ ಜ್ಞಾನವೇದಿಕೆ.
36. ಜ್ಯೋತಿಷ್ಯದಲ್ಲಿನ ಜ್ಯೋತಿಯನ್ನು, ಮೂಲಿಕೆಗಳಲ್ಲಿನ ಮೂಲವನ್ನು, ಜ್ಞಾನದಲ್ಲಿನ ಶಕ್ತಿಯನ್ನು, ಮಂತ್ರದಲ್ಲಿನ ಮಹಿಮೆಯನ್ನು ತಿಳಿಸುವುದು ಇಂದೂ ಜ್ಞಾನವೇದಿಕೆ.
37. ಟಕ್ಕು, ಟಮಾರಾ ಎಂದರೆ ಏನೋ, ಇಂದ್ರಜಾಲ ಮಹೇಂದ್ರಜಾಲ ಎಂದರೆ ಏನೋ, ಗೋಕರ್ಣ ಗಜಕರ್ಣ ವಿದ್ಯೆಗಳೆಂದರೆ ಏನೋ ಬಿಡಿಬಿಡಿಯಾಗಿ ವಿವರಿಸಿ ತಿಳಿಸುವುದು ಇಂದೂ ಜ್ಞಾನವೇದಿಕೆ.
38. ಪ್ರಭು ದೇವರು, ಶಿಲುಬೆ ಮಾಯೆ ಎಂದು ತಿಳಿಸುವುದು ಇಂದೂ ಜ್ಞಾನವೇದಿಕೆ.
39. ಮತಗಳಲ್ಲಿನ ವಿಧಾನವನ್ನು, ಸಿದ್ಧಾಂತಗಳಲ್ಲಿನ ಸಾರವನ್ನು, ಶಾಸ್ತ್ರಗಳಲ್ಲಿನ ಶಾಸ್ತ್ರೀಯತೆಯನ್ನು ಹುಡಿಕಿ ಇದ್ದರೆ ತೋರಿಸುವುದು ಇಲ್ಲದಿದ್ದರೆ ಪ್ರಶ್ನಿಸುವುದು ಇಂದೂ ಜ್ಞಾನವೇದಿಕೆ.
40. ಮನುಷ್ಯ ಒಬ್ಬನೇ, ದೇವರು ಒಬ್ಬನೇ ಆದಾಗ ಇಷ್ಟು ಮತಗಳು, ಇಷ್ಟುಜನ ದೇವರುಗಳು ಏಕೆಂದು ಪ್ರಶ್ನಿಸುವುದು ಇಂದೂ ಜ್ಞಾನವೇದಿಕೆ.

41. ಮನುಷ್ಯರಿಂದ ಮಹಾತ್ಮನು, ಗಿಡಗಳಿಂದ ಬದನಿಕೆ ಹೊರಗೆ ಬಂದಂತೆ, ಅಜ್ಞಾನಿಗಳಿಂದಲೇ ಜ್ಞಾನಿ ಹುಟ್ಟುತ್ತಾನೆಂದು ತಿಳಿಸುವುದೇ ಇಂದೂ ಜ್ಞಾನವೇದಿಕೆ.
42. ಬೇರೆ ಮತಗಳಲ್ಲಿನ ಅನರ್ಥಗಳಿಗೆ ನಿಜಾರ್ಥವನ್ನು ಕೊಟ್ಟು ಜ್ಞಾನಬೋಧನೆ ಮಾಡುವುದು ಇಂದೂ ಜ್ಞಾನವೇದಿಕೆ.
43. ಐದು ಮತ್ತೊಂದಾದ ಆರು  ಶಾಸ್ತ್ರಗಳಲ್ಲಿನ ಶಾಸ್ತ್ರಬದ್ಧತೆಯನ್ನು ತೋರಿಸುವುದು ಇಂದೂ ಜ್ಞಾನವೇದಿಕೆ.
44. ಶಾಸ್ತ್ರವಲ್ಲದ ವಿಷಯಗಳು ಶಾಸ್ತ್ರದಲ್ಲಿ ಬೆರೆತಿದ್ದರು ಅವುಗಳನ್ನು ತೆಗೆದುಹಾಕಿ ಶಾಸ್ತ್ರಕ್ಕೆ ಸ್ವಚ್ಚತೆಯನ್ನು ಕೈಗೂಡಿಸುವುದು ಇಂದೂ ಜ್ಞಾನವೇದಿಕೆ.
45. ಶಾಸ್ತ್ರವನ್ನು ಗುರುತಿಸಲಾರದೆ ಅಶಾಸ್ತ್ರೀಯವೆನ್ನುವವರಿಗೆ ಕಣ್ಣುತೆರೆಸಿ ಶಾಸ್ತ್ರದಲ್ಲಿನ ಶಾಸ್ತ್ರೀಯತೆಯನ್ನು ತಿಳಿಸುವುದು ಇಂದೂ ಜ್ಞಾನವೇದಿಕೆ.
46. ಅಜ್ಞಾನದಲ್ಲಿನ ಅಂಧಕಾರವನ್ನು, ಜ್ಞಾನದಲ್ಲಿನ ಪ್ರಕಾಶವನ್ನು, ವಿಜ್ಞಾನದಲ್ಲಿನ ಅನುಭವವನ್ನು ವಿವರಿಸಿ ತಿಳಿಸುವುದು ಇಂದೂ ಜ್ಞಾನವೇದಿಕೆ.
47. ಸತ್ಯವನ್ನು ಪ್ರಕಟಿಸುವುದು, ಅಸತ್ಯವನ್ನು ಖಂಡಿಸುವುದು ಮುಖ್ಯ ಕಾರ್ಯವಾಗಿ ಇಟ್ಟುಕೊಂಡಿದೆ ಇಂದೂ ಜ್ಞಾನವೇದಿಕೆ.
48. ಪೂರ್ವವಿದ್ದು ಈಗ ಇಲ್ಲದಂತೆ ಹೋಗಿರುವ ವಿಜ್ಞಾನವನ್ನು ವಿವರಿಸಿ ತಿಳಿಸುವುದು ಇಂದೂ ಜ್ಞಾನವೇದಿಕೆ.
49. ಶರೀರದಲ್ಲಿ ಪಿಟ್ಯೂಟರಿ ಗ್ಲಾಂಡ್, ಉಳಿದ ಆರು ಗ್ರಂಥಿಗಳಿಗೆ ರಾಜನಾದಂತೆ ವಿಶ್ವದಲ್ಲಿ ಬ್ರಹ್ಮವಿದ್ಯಾಶಾಸ್ತ್ರ ಉಳಿದ ಐದುಶಾಸ್ತ್ರಗಳಿಗೆ ರಾಜನಾಗಿದೆ ಎಂದು ತಿಳಿಸುವುದು ಇಂದೂ ಜ್ಞಾನವೇದಿಕೆ.
50. ಆಸ್ತಿಕವಾದಿಗಳಿಗೂ, ನಾಸ್ತಿಕವಾದಿಗಳಿಗೂ, ಹೇತುವಾದಿಗಳಿಗೂ ಮೊದಲಾದವರಿಗೂ ತಿಳಿಯದವನು ದೇವರೆಂದು ತಿಳಿಸುವುದು ಇಂದೂ ಜ್ಞಾನವೇದಿಕೆ.
51. ಟೆಲಿವಿಜನ್‌ನನ್ನು ಕಾಣಿಸುವ ಯಾವ ಸಂಬಂಧ ಇಲ್ಲದಂತೆ ಕೈಯಲ್ಲಿ ರಿಮೋಟ್‌ನಿಂದ ನಡೆಸಿದಂತೆ ಗಿಡಗಳ ಮೇಲಿನ ಬಳ್ಳಿಯನ್ನು ಕಾಣಿಸುವ ಯಾವ ಸಂಬಂಧ ಇಲ್ಲದಂತೆ ಭೂಮಿಯಲ್ಲಿನ ಗೆಡ್ಡೆ ಬೆಳೆಸುವಂತೆ, ಮನುಷ್ಯನನ್ನು ಕಾಣಿಸುವ ಯಾವ ಸಂಬಂಧವು ಇಲ್ಲದಂತೆ ಶೂನ್ಯದಲ್ಲಿನ ದೇವರು ಪೋಷಿಸುತ್ತಿದ್ದಾನೆಂದು ತಿಳಿಸುವುದು ಇಂದೂ ಜ್ಞಾನವೇದಿಕೆ.

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

01. ನೀನು ರೈತನಾದರೂ ಪರವಾಗಿಲ್ಲ ದೈವಭಕ್ತಿಯನ್ನು ತಿಳಿದುಕೋ.
02. ನೀನು ಉದ್ಯೋಗಿಯಾದರೂ ಪರವಾಗಿಲ್ಲ ದೈವಜ್ಞಾನ ತಿಳಿದುಕೋ.
03. ನೀನು ವ್ಯಾಪರಿಯಾದರೂ ಪರವಾಗಿಲ್ಲ ಆತ್ಮಜ್ಞಾನ ತಿಳಿದುಕೋ.
04. ನೀನು ರಾಜಕಾರಣೀಯಾದರೂ ಪರವಾಗಿಲ್ಲ ಶರೀರ ರಾಜ್ಯವನ್ನು ತಿಳಿದುಕೋ.



01. ನೀನು ತಾಮಸನಾದರೂ ಪರವಾಗಿಲ್ಲ ನಿನ್ನೊಳಗಿರುವವನನ್ನು ತಿಳಿದುಕೋ.
02. ನೀನು ರಾಜಸನಾದರೂ ಪರವಾಗಿಲ್ಲ ನಿನ್ನನ್ನು ಕದಲಿಸುವವನನ್ನು ತಿಳಿದುಕೋ.
03. ನೀನು ಸಾತ್ವಿಕನಾದರೂ ಪರವಾಗಿಲ್ಲ ನಿನ್ನ ಪಕ್ಕದಲ್ಲಿರುವವನನ್ನು ತಿಳಿದುಕೋ.
04. ನೀನು ಯೋಗಿಯಾದರೂ ಪರವಾಗಿಲ್ಲ ನಿನ್ನ ಪಕ್ಕದಲ್ಲಿ ಇರುವವನನ್ನು ತಿಳಿದುಕೋ.



01. ನೀನು ನಾಸ್ತಿಕವಾದಿಯಾದರೂ ಪರವಾಗಿಲ್ಲ ನೀನು ನಿನ್ನ ನಿದ್ರೆಯನ್ನು ಕುರಿತು ತಿಳಿದುಕೋ.
02. ನೀನು ಹೇತುವಾದಿಯಾದರೂ ಪರವಾಗಿಲ್ಲ ನೀನು ನಿನ್ನ ಸ್ವಪ್ನದ ಬಗ್ಗೆ ತಿಳಿದುಕೋ.
03. ನೀನು ಆಸ್ತಿಕವಾದಿಯಾದರೂ ಪರವಾಗಿಲ್ಲ ನೀನು ಅಸಲಾದ ದೇವರ್‍ಯಾರೋ ತಿಳಿದುಕೋ.
04. ನೀನು ಆತ್ಮವಾದಿಯಾದರೂ ಪರವಾಗಿಲ್ಲ ನೀನು ತ್ರೈತ ಎಂದರೆ ಏನೋ ತಿಳಿದುಕೋ.



01. ನೀನು ದ್ವೈತಿಯಾದರೂ ಪರವಾಗಿಲ್ಲ ತ್ರೈತದ ಬಗ್ಗೆ ತಿಳಿದಿಕೋ.
02. ನೀನು ವಿಶಿಷ್ಟಾದ್ವೈತಿಯಾದರೂ ಪರವಾಗಿಲ್ಲ ತ್ರೈತದ ಬಗ್ಗೆ ತಿಳಿದಿಕೋ.
03. ನೀನು ಅದ್ವೈತಿಯಾದರೂ ಪರವಾಗಿಲ್ಲ ತ್ರೈತದ ಬಗ್ಗೆ ತಿಳಿದುಕೋ.
04. ನೀನು ತ್ರೈತನಾದರೂ ಪರವಾಗಿಲ್ಲ ತ್ರೈತದ ಬಗ್ಗೆ ತಿಳಿದುಕೋ.

## ಶೈವರು

ಆಚರಿಸುವುದು _ **ಅದ್ವೈತ**

ಧರಿಸುವುದು _ ಮೂರು ವಿಭೂತಿ ರೇಖೆಗಳು

ಆರಾಧಿಸಲ್ಪಡುವವನು – ಶಂಕರನು

ಆರಾಧನೆ { ಪಂಚಾಕ್ಷರಿ ಮಂತ್ರ
ಓಂ ನಮಃ ಶಿವಾಯ

## ವೈಷ್ಣವರು

ಆಚರಿಸುವುದು –**ವಿಶಿಷ್ಟಾದ್ವೈತ**

ಧರಿಸುವುದು – ಮೂರು ನಾಮಗಳು

ಆರಾಧಿಸಲ್ಪಡುವವನು – ವಿಷ್ಣು

ಆರಾಧನೆ { ಅಷ್ಟಾಕ್ಷರಿ ಮಂತ್ರ
ಓಂ ನಮೋ ನಾರಾಯಣಾಯ

## ತ್ರೈತರು

ಆಚರಿಸುವುದು _ **ತ್ರೈತ**

ಧರಿಸುವುದು _ ಕಾಲ ಕರ್ಮ ಚಕ್ರಗಳು

ಆರಾಧಿಸಲ್ಪಡುವವನು – ಪರಮಾತ್ಮ

ಆರಾಧನೆ – ತ್ರೈತಾರಾಧನೆ

# ಇಸ್ಲಾಂ ಮತ

ಸೇರಿಸುವ ಗಮ್ಯ – ಅಲ್ಲಾ ಹತ್ತಿರಕ್ಕೆ **(ದೇವರ ಹತ್ತಿರಕ್ಕೆ)**

ಬೋಧಿಸಿದ ದಾರಿ – ವಿಶ್ವಾಸ ಯೋಗ **(ಭಕ್ತಿ ಯೋಗ)**

# ಕ್ರೈಸ್ತ ಮತ

ಸೇರಿಸುವ ಗಮ್ಯ – ಪರಲೋಕ ತಂದೆ ಹತ್ತಿರಕ್ಕೆ **(ದೇವರ ಹತ್ತಿರಕ್ಕೆ)**

ಬೋಧಿಸಿದ ದಾರಿ – ವಿಶ್ವಾಸ ಯೋಗ **(ಭಕ್ತಿ ಯೋಗ)**

ಕರ್ಮ ಯೋಗ **(ರಾಜಯೋಗ)**

# ಹಿಂದೂ ಮತ

ಸೇರಿಸುವ ಗಮ್ಯ – ಪರಮಾತ್ಮ ಹತ್ತಿರಕ್ಕೆ **(ದೇವರ ಹತ್ತಿರಕ್ಕೆ)**

ಬೋಧಿಸಿದ ದಾರಿ – ಜ್ಞಾನ ಯೋಗ **(ಬ್ರಹ್ಮ ಯೋಗ)**

ಕರ್ಮಯೋಗ **(ರಾಜ ಯೋಗ)**

ಭಕ್ತಿಯೋಗ **(ವಿಶ್ವಾಸ ಯೋಗ)**

# ವಿಷಯ ಸೂಚನೆ

# ಅಧ್ಯಾಯಗಳು – ಶ್ಲೋಕಗಳ ವಿವರಗಳು

| ಅಧ್ಯಾಯದ ಹೆಸರು | ಕಲ್ಪಿತ ಶ್ಲೋಕಗಳು | ಬರೆದಿರುವವು | ಬರೆಯದಿರುವವು | ಒಟ್ಟು |
|---|---|---|---|---|
| ಅರ್ಜುನ ವಿಷಾದಯೋಗ | – | – | 47 | 47 |
| ಸಾಂಖ್ಯ ಯೋಗ | 7 | 55 | 10 | 72 |
| ಕರ್ಮ ಯೋಗ | 7 | 36 | – | 43 |
| ಜ್ಞಾನ ಯೋಗ | 9 | 33 | – | 42 |
| ಕರ್ಮಸನ್ಯಾಸ ಯೋಗ | – | 29 | – | 29 |
| ಆತ್ಮಸಂಯಮ ಯೋಗ | 1 | 46 | – | 47 |
| ವಿಜ್ಞಾನ ಯೋಗ | – | 30 | – | 30 |
| ಅಕ್ಷರಪರಬ್ರಹ್ಮ ಯೋಗ | – | 28 | – | 28 |
| ರಾಜವಿದ್ಯಾ ರಾಜಗುಹ್ಯ ಯೋಗ | – | 34 | – | 34 |
| ವಿಭೂತಿ ಯೋಗ | – | 42 | – | 42 |
| ವಿಶ್ವರೂಪಸಂದರ್ಶನ ಯೋಗ | 10 | 45 | – | 55 |
| ಭಕ್ತಿ ಯೋಗ | – | 20 | – | 20 |
| ಕ್ಷೇತ್ರ ಕ್ಷೇತ್ರಜ್ಞ ವಿಭಾಗಯೋಗ | – | 35 | – | 35 |
| ಗುಣತ್ರಯ ವಿಭಾಗಯೋಗ | – | 27 | – | 27 |
| ಪುರುಷೋತ್ತಮಪ್ರಾಪ್ತಿ ಯೋಗ | – | 20 | – | 20 |
| ದೈವಾಸುರ ಸಂಪದ್ವಿಭಾಗ ಯೋಗ | – | 24 | – | 24 |
| ಶ್ರದ್ಧಾತ್ರಯವಿಭಾಗ ಯೋಗ | 6 | 22 | – | 28 |
| ಮೋಕ್ಷಸನ್ಯಾಸ ಯೋಗ | 14 | 52 | 12 | 78 |

**ಬರೆದಿರುವ ಶ್ಲೋಕಗಳ ಒಟ್ಟು ಸಂಖ್ಯೆ – 578**

**ಬರೆಯಲಾರದ ಶ್ಲೋಕಗಳು – 69**

**ಕಲ್ಪಿತ ಶ್ಲೋಕಗಳು – 54**

**ಗೀತೆಯಲ್ಲಿನ ಶ್ಲೋಕಗಳ ಒಟ್ಟು ಸಂಖ್ಯೆ – 701**

**ಭಾವವನ್ನು ಬದಲಾಯಿಸಿ ಬರೆದ ಶ್ಲೋಕಗಳು – 55**

ಭೂಮಿ ಮೇಲಿರುವ ಜೀವರಾಶಿಗಳಲ್ಲಿ ಮನುಷ್ಯ ಎಲ್ಲದಕ್ಕಿಂತಲೂ ಹೆಚ್ಚು ಬುದ್ಧಿಶಕ್ತಿ ಇರುವವನು. ಬುದ್ಧಿಯಲ್ಲಿ ಎಲ್ಲದಕ್ಕಿಂತ ದೊಡ್ಡವನಾದ ಮಾನವನು, ಎಲ್ಲಾ ರಂಗಗಳಲ್ಲಿಯೂ ಅತಿ ಸೂಕ್ಷ್ಮಾತಿ ಸೂಕ್ಷ್ಮವಾಗಿ ಯೋಚನೆ ಮಾಡುತ್ತಿದ್ದಾನೆ. ಆದರೆ ಒಂದೇ ಒಂದು ಆಧ್ಯಾತ್ಮಿಕ ರಂಗದಲ್ಲಿ ಮಾತ್ರ ಹೀನಾತಿಹೀನವಾಗಿ ಹಿಂದುಳಿದಿದ್ದಾನೆ. ಉದಾಹರಣೆಗೆ ಒಬ್ಬ ನ್ಯಾಯವಾದಿ (ಅಡ್ವಕೇಟ್) ಇದ್ದಾನೆಂದುಕೊಳ್ಳೋಣ. ಆತನು ಅನ್ಯಾಯಪರನ ಕಡೆ ವಾದಿಸುವುದಕ್ಕೆ ಒಪ್ಪಿಕೊಂಡು, ತನ್ನ ಬುದ್ಧಿಯಿಂದ ಅನ್ಯಾಯವನ್ನು ನ್ಯಾಯವಾಗಿ ವರ್ಣಿಸಿ, ತನ್ನ ಕ್ಲೈಂಟ್ ಮಾಡಿರುವುದು ನ್ಯಾಯವೆನಿಸಿ ಶಿಕ್ಷೆಯಿಂದ ತಪ್ಪಿಸುತ್ತಿದ್ದಾನೆ. ಹಾಗೆಯೇ ಒಬ್ಬ ಡಾಕ್ಟರ್ ತನ್ನ ಹತ್ತಿರಕ್ಕೆ ಬಂದಿರುವ ರೋಗಿಯೊಬ್ಬನ ಭಯಂಕರ ರೋಗವನ್ನು ಸಹ, ತನ್ನ ತಿಳುವಳಿಕೆಯಿಂದ ಚಿಕಿತ್ಸೆ ಮಾಡಿ ಗುಣಪಡಿಸುತ್ತಾನೆ. ಹೋಲಿಕೆ ಇಲ್ಲದ ಹೊಸ ರೋಗವನ್ನು ಬುದ್ಧಿಯಿಂದ ಯೋಚಿಸಿ ಗುಣಪಡಿಸಿದ ವೈದ್ಯನಾಗಲಿ, ಅನ್ಯಾಯವನ್ನು ನ್ಯಾಯವೆನ್ನುವಂತೆ ವಾದಿಸಿ ಗೆದ್ದ ನ್ಯಾಯವಾದಿಯಾಗಲಿ, ಇನ್ನೂ ಎಷ್ಟೋ ತಿಳುವಳಿಕೆ ಇರುವವರಾಗಲಿ, ದೈವಸಂಬಂಧವಾದ ವಿಷಯಗಳ ಹತ್ತಿರ ಮಾತ್ರ ಪೂರ್ತಿ ತಿಳುವಳಿಕೆ ಇಲ್ಲದವರಾಗಿ, ಯಾವ ಕಾರಣಕ್ಕೂ ಗ್ರಹಿಸದವರಾಗಿ ಹೋಗುತ್ತಿದ್ದಾರೆ. ಪ್ರಾಪಂಚಿಕ ವಿಷಯಗಳಲ್ಲಿ ವಿಕಾಸ ಹೊಂದಿದ ಬುದ್ಧಿ ಪರಮಾತ್ಮ ವಿಷಯಗಳಲ್ಲಿ ಮಾತ್ರ ಸಂಕುಚಿತ ಹೊಂದುತ್ತಿದೆ. ಮಾನವನು ಪ್ರಪಂಚದ ವಿಷಯಗಳಲ್ಲಿ ಎಷ್ಟೋ ಅಭಿವೃದ್ಧಿ ಸಾಧಿಸುತ್ತಾ ಪೂರ್ವದಲ್ಲಿ ಇಲ್ಲದಿರುವ, ಯಾರಿಗೂ ತಿಳಿಯದಿರುವವಾದ ಎಷ್ಟೋ ಹೊಸ ಸಿದ್ಧಾಂತಗಳನ್ನು, ಹೊಸ ಯಂತ್ರಗಳನ್ನು ಕಂಡುಹಿಡಿಯುತ್ತಿದ್ದರೂ ಆಧ್ಯಾತ್ಮಿಕ ವಿಷಯಗಳಲ್ಲಿ ಮಾತ್ರ ಪೂರ್ವದಲ್ಲಿರುವ ಮತ್ತು ಪೂರ್ವದಲ್ಲಿ ಎಲ್ಲರಿಗೂ ತಿಳಿದಿರುವ ವಿಷಯಗಳನ್ನು ಗ್ರಹಿಸಲಾರದೆ ಹೋಗುತ್ತಿದ್ದಾನೆ. ಪ್ರಪಂಚದ ವಿಷಯಗಳನ್ನು ಎಷ್ಟೋ ತಿಳಿದವನು, ಪರಮಾತ್ಮ ವಿಷಯಗಳನ್ನು ಏಕೆ ತಿಳಿಯಲಾರದೆ ಹೋಗುತ್ತಿದ್ದಾನೋ ಗ್ರಹಿಸಲಾರದೆ, ದೈವ ವಿಷಯಗಳಲ್ಲಿ ಪೂರ್ತಿಯಾಗಿ ಗೊಂದಲಕ್ಕೊಳಗಾಗುತ್ತಿದ್ದಾನೆ. ಅಕ್ಷರಗಳನ್ನು ಕಲಿತ ಮಾತ್ರಕ್ಕೆ ಎಲ್ಲ ಯೋಗ್ಯತಾ ಪತ್ರಗಳು ಬಂದಂತೆ ಎಂದೇ ತಿಳಿದವನಾಗಿ, ತನಗಿರುವ ಸ್ವಲ್ಪ ಭಕ್ತಿಯಿಂದಲೇ ತನಗೆ ಪೂರ್ತಿ ಜ್ಞಾನ ತಿಳಿದಿದೆ ಎಂದುಕೊಳ್ಳುತ್ತಿದ್ದಾನೆ.

ಇಂದಿನ ಮಾನವನ ಬುದ್ಧಿಗೆ ಆಧ್ಯಾತ್ಮಿಕ ವಿಷಯಗಳಲ್ಲಿ ಪೂರ್ಣಮಟ್ಟದ ಅವಗಾಹನೆ ಇಲ್ಲದಂತೆ ಹೋಗುತ್ತಿದೆ. ಉದಾಹರಣೆಗೆ ಒಂದು ದಾರಿಯಲ್ಲಿ ಇಬ್ಬರು ಸ್ತ್ರೀಯರು ಹೋಗುತ್ತಿದ್ದಾರೆ. ಅದೇ ದಾರಿಯಲ್ಲಿ ಮೂವರು ವ್ಯಕ್ತಿಗಳು ಕುಳಿತುಕೊಂಡಿದ್ದಾರೆ. ಮೈಲು ದೂರದಲ್ಲಿ ಬರುತ್ತಿರುವ ಇಬ್ಬರು ಸ್ತ್ರೀಯರಲ್ಲಿ ಒಬ್ಬರು ಸ್ತ್ರೀ ಆಗಿದ್ದು, ಒಬ್ಬರು ನಪುಂಸಕನಾಗಿದ್ದನು. ಸೀರೆ ಕುಪ್ಪಸ ಉಡುವುದರಲ್ಲಿಯೂ, ವೇಷಧಾರಣೆಯಲ್ಲಿಯೂ,

ಅಲಂಕಾರದಲ್ಲಿಯೂ ನಪುಂಸಕನು ಸ್ತ್ರೀಗೆ ಸಮಾನವಾಗಿರುವುದರಿಂದ ದೂರದಿಂದ ನೋಡಿದಾಗ ಇಬ್ಬರನ್ನೂ ಸ್ತ್ರೀಯರೆಂದುಕೊಳ್ಳುವುದರಲ್ಲಿ ತಪ್ಪಿಲ್ಲ. ಮೊದಲು ಇಬ್ಬರನ್ನು ಸ್ತ್ರೀಯರೆಂದೇ ದಾರಿ ಪಕ್ಕ ಕುಳಿತುಕೊಂಡವರು ಅಂದುಕೊಂಡರು. ಆ ಸ್ತ್ರೀಯರು ಸ್ವಲ್ಪ ಹತ್ತಿರವಾಗುತ್ತಲೇ ಮೂವರಲ್ಲಿ ಮೊದಲನೆಯವನು, ಅವರಲ್ಲಿ ನಡುವಳಿಕೆ, ಮುಖ ವರ್ಚಸ್ಸು ಸ್ವಲ್ಪ ಮಟ್ಟಿನ ವ್ಯತ್ಯಾಸದಿಂದ ಬರುತ್ತಿರುವುದು ಇಬ್ಬರು ಸ್ತ್ರೀಯರಲ್ಲ, ಅವರಲ್ಲಿ ಒಬ್ಬರು ಮಾತ್ರ ಸ್ತ್ರೀಯಾಗಿದ್ದು ಒಬ್ಬನು ನಪುಂಸಕನೆಂದು ಹೇಳಿದ್ದನು. ಆ ಮಾತನ್ನು ಕೇಳಿದ ಎರಡನೆಯವನು, ಮೂರನೆಯವನು ಅವರ ವ್ಯತ್ಯಾಸವನ್ನು ತಿಳಿಯಲಾಗದೆ, "ಅಲ್ಲ ಇಬ್ಬರು ಸ್ತ್ರೀಯರೇ" ಎಂದನು. ಹಾಗೆ ಅವರಂದುಕೊಂಡ ಸ್ವಲ್ಪ ಸಮಯಕ್ಕೆ ದಾರಿಯಲ್ಲಿ ಹೋಗುವ ಆ ಇಬ್ಬರು ಹತ್ತಿರಕ್ಕೆ ಬಂದರು. ಹತ್ತಿರದಿಂದ ನೋಡಿದ ಎರಡನೆಯವನಿಗೆ ಸ್ವಲ್ಪ ಅರ್ಥವಾಗಿ ಒಬ್ಬರು ನಪುಂಸಕನೆಂದು ನಿರ್ಧಾರಕ್ಕೆ ಬಂದನು, ಆದರೆ ಮೇಲ್ನೋಟಕ್ಕೆ ಒಪ್ಪಿಕೊಳ್ಳಲಿಲ್ಲ. ಇಷ್ಟೊತ್ತು ಅಲ್ಲವೆಂದು ಈಗ ಒಪ್ಪಿಕೊಂಡರೆ ನನಗೆ ಬೆಲೆ ಇರುವುದಿಲ್ಲ ಎಂದುಕೊಂಡನು. ಮೂರನೆಯವನು ಮಾತ್ರ ತಿಳುವಳಿಕೆ ಬಹಳ ಕಡಿಮೆ ಇರುವವನಾಗಿರಬೇಕು ಆಗಲೂ ಅವನಿಗೆ ಅರ್ಥವಾಗಲಿಲ್ಲ. ಅವರಲ್ಲಿನ ವ್ಯತ್ಯಾಸವನ್ನು ತಿಳಿಯಲಾರದೆ ಹೋದನು. ಮೊದಲನೆಯವನು ಎಷ್ಟೋ ವ್ಯತ್ಯಾಸಗಳನ್ನು ಹೇಳುತ್ತಿದ್ದರೂ, ಮೂರನೆಯವನಿಗೆ ಸ್ವಲ್ಪವೂ ಅರ್ಥವಾಗಲಿಲ್ಲ. ಮೇಲಕ್ಕೆ ಕಾಣಿಸುವ ಆಕಾರಗಳೇ ಮುಖ್ಯವೆಂದುಕೊಂಡಿದ್ದನು. ಒಳಗಿರುವ ಲಿಂಗಬೇಧವನ್ನು ಗ್ರಹಿಸಲಾರದೆ ಹೋಗಿದ್ದನು. ಕೊನೆಗೆ ಈ ವಿಧವಾಗಿ *"ಏನು ಹೇಳಿದರೂ ಒಪ್ಪಿಕೊಳ್ಳುವುದಿಲ್ಲ, ಪ್ರತ್ಯಕ್ಷವಾಗಿ ಸೀರೆ ಉಟ್ಟುಕೊಂಡ ಹೆಂಗಸರು ಕಾಣಿಸುತ್ತಿದ್ದರೆ ಹೇಗೆ ಇಲ್ಲ ಅನ್ನಬೇಕು ನಾನು ನಂಬುವುದಿಲ್ಲ ಖಂಡಿತ ನಂಬುವುದಿಲ್ಲ. ಕಿವಿಗಳಿಗೆ ಓಲೆಗಳು, ಕೈಯಿಗಳಿಗೆ ಬಳೆಗಳು, ಕಾಲುಗಳಿಗೆ ಕಾಲುಂಗರಗಳು, ಕೊರಳಲ್ಲಿ ಮಂಗಳಸೂತ್ರ ಎಲ್ಲಾ ಇದ್ದರೆ ಹೆಂಗಸು ಅಲ್ಲ ಎನ್ನುತ್ತೀಯೆ ನಿನಗೆ ಬುದ್ಧಿಯಿಲ್ಲಹೋಗು"* ಎಂದನು. ಎರಡನೆಯವನು ಮಾತ್ರ ಮೊದಲನೆಯವನ ಮಾತನ್ನು ಒಳಗೆ ಒಪ್ಪಿಕೊಂಡರೂ ಹೊರಗೆ ಮಾತ್ರ ಮೂರನೆಯವನು ಹೇಳಿರುವುದು ನಿಜವೆಂದಿದ್ದಾನೆ. ಅವರ ವಾದವನ್ನು ನೋಡಿ ಮೊದಲನೆಯವನು ಇವರು ಬಹಳ ತಿಳುವಳಿಕೆ ಇಲ್ಲದವರೆಂದು, ಇವರ ಹತ್ತಿರ ವಾದಿಸುವುದಕ್ಕಿಂತ ಸುಮ್ಮನಿರುವುದು ಒಳ್ಳೆಯದು ಎಂದುಕೊಂಡನು.

ಈ ವಿಧವಾಗಿಯೇ ಜಗತ್ತಿನಲ್ಲಿ ಮೂರು ವಿಧದ ಮನುಷ್ಯರಿದ್ದಾರೆ. ಸತ್ಯವನ್ನು ಗ್ರಹಿಸಿದವರು ಒಂದು ವಿಧ, ಸತ್ಯವನ್ನು ಗ್ರಹಿಸಿ ಮೇಲ್ನೋಟಕ್ಕೆ ಒಪ್ಪಿಕೊಳ್ಳದವರು ಎರಡನೆಯ ವಿಧ, ಸತ್ಯವನ್ನು ತಿಳಿಯಲಾರದೆ, ತಾನು ಹಿಡಿದಿರುವ ಮೊಲಕ್ಕೆ ಮೂರೇ ಕಾಲೆನ್ನುವಂತೆ

ಸ್ವಲ್ಪವಾದರೂ ಹಿಂದಿರುಗಿ ಆಲೋಚಿಸೋಣ ಎಂದುಕೊಳ್ಳದೆ, ತನಗೆ ತಿಳಿದಿರುವುದೇ ಸತ್ಯವೆಂದು ಮೂರ್ಖರಂತೆ ವಾದಿಸುವವರು ಮೂರನೇ ವಿಧ. ದೇವರ ವಿಷಯದಲ್ಲಿ ಸತ್ಯವನ್ನು ತಿಳಿದವರು ಕೋಟಿಗೊಬ್ಬರು ಅಪರೂಪವಾಗಿರುವಾಗ, ಅಂತರಂಗದಲ್ಲಿ ಸತ್ಯವನ್ನು ಒಪ್ಪಿಕೊಂಡು ಹೊರಗೆ ಒಪ್ಪಿಕೊಳ್ಳದವರು ಕೆಲವರಿದ್ದಾರೆ. ಸತ್ಯವನ್ನು ಯಾವಕಾರಣಕ್ಕೂ ಗ್ರಹಿಸಲಾರದೆ ಮೂರ್ಖರಂತೆ ವಾದಿಸುವವರು ಎಷ್ಟೋ ಜನ ಇದ್ದಾರೆ. ದೈವ ಮಾರ್ಗದಲ್ಲಿ ಸತ್ಯವನ್ನೇ ತಿಳಿಯಬೇಕೆಂಬ ಛಲವನ್ನು ಹೊಂದಿ ಸತ್ಯಾನ್ವೇಷಿಯಾಗಿ, ಸತ್ಯವನ್ನು ತಿಳಿದವನು ಕೋಟಿಗೊಬ್ಬನಿರುವುದು ಅಪರೂಪವಾದ ವಿಷಯವೇ. ಭೂಮಿ ಮೇಲೆ ಸತ್ಯವನ್ನು ತಿಳಿದವನು ಅಪರೂಪವಾಗಿ ಯಾರೋ ಒಬ್ಬನಿರಬಹುದು. ಅವನನ್ನು ದಾರಿಯಲ್ಲಿರುವ ಮೊದಲನೆ ವ್ಯಕ್ತಿಯಾಗಿ ಹೇಳಿಕೊಳ್ಳಬಹುದು. ಮೊದಲಿನಿಂದ ತಮಗೂ ಜ್ಞಾನ ತಿಳಿದಿದೆಯೆಂದು ಹೇಳಿಕೊಳ್ಳುತ್ತಾ ಗುರುಗಳಾಗಿ, ಸ್ವಾಮಿಗಳಾಗಿ, ಆಧ್ಯಾತ್ಮಿಕ ತಜ್ಞರಾಗಿ ಚಲಾವಣೆಯಾದವರಿಗೆ ದೇವರ ಮಾರ್ಗದಲ್ಲಿ ಸ್ವಲ್ಪ ತಿಳಿದಿರುವುದರಿಂದ ಕೊನೆಗೆ ತಮ್ಮ ಜ್ಞಾನ ತಪ್ಪೆಂದು, ಸತ್ಯಾನ್ವೇಷಿ ಹೇಳಿರುವ ಜ್ಞಾನವೇ ನಿಜವೆಂದು ತಿಳಿದು, ಮೇಲಕ್ಕೆ ಒಪ್ಪಿಕೊಂಡರೆ ಪ್ರಜೆಗಳಲ್ಲಿ ಗೌರವ ಕಡಿಮೆಯಾಗುತ್ತದೆ ಎಂದು, ಮೊದಲಿನಿಂದ ತಾವು ಹೇಳುತ್ತಿರುವುದೇ ಹೇಳುತ್ತಾರೆ. ತಮ್ಮಲ್ಲಿನ ತಪ್ಪು ಹೊರಬೀಳದಂತೆ, ತಾವು ಹೊರಬೀಳದಂತೆ ತಿಳಿದು ಅಸತ್ಯ ವಚನಗಳಾಡುತ್ತಾರೆ. ಇಂತಹವರು ದಾರಿಯಲ್ಲಿನ ಎರಡನೆ ವಿಧದವರು. ಸತ್ಯವನ್ನು ಯಾವ ಕಾರಣಕ್ಕೂ ಎಂದಿಗೂ ಗ್ರಹಿಸಲಾರದೆ ತಮಗಿರುವ ಸ್ವಲ್ಪ ಮಟ್ಟಿನ ಜ್ಞಾನವೇ ದೊಡ್ಡದೆಂದುಕೊಂಡು, ತಾವು ಮಾಡುವ ಆಚರಣೆಯೇ ಸರಿಯಾದುದೆಂದು ಕೊಂಡು, ಯಾರೇನೇ ಹೇಳಿದರೂ ಕೇಳದವರಿದ್ದಾರೆ. ಇಂತಹವರನ್ನು ದಾರಿಯಲ್ಲಿನ ಮೂರನೆಯ ವಿಧದವರಾಗಿ ಪರಿಗಣಿಸಬಹುದು.

ದಾರಿಯಲ್ಲಿ ಬರುವವರು ವೇಷಭೂಷಣದಲ್ಲಿ ಸ್ತ್ರೀಯರೇ ಆದರೂ ಅವರ ಭೌತಿಕ ಶರೀರದಲ್ಲಿ ವ್ಯತ್ಯಾಸವಿದೆ. ಇಬ್ಬರಲ್ಲಿ ಒಬ್ಬರು ಸ್ತ್ರೀಯಾಗಿದ್ದು ಎರಡನೆಯವರು ನಪುಂಸಕನು. ನಪುಂಸಕನ ಶರೀರ ಪುರುಷಾಂಗವನ್ನು ಹೊಂದಿರುವುದರಿಂದ ನಪುಂಸಕನನ್ನು ಸ್ತ್ರೀ ಎನ್ನುವುದಿಲ್ಲ. ಮೇಲೆ ಕಾಣಿಸುವುದಕ್ಕೆ ಎಲ್ಲಾ ವಿಧಗಳಲ್ಲಿ ಸ್ತ್ರೀಯಂತೆ ಇದ್ದರು ಒಳಗೆ ಮಾತ್ರ ಶರೀರ ಬೇರೆಯಾಗಿದೆ. ಮೊದಲು ದೂರದಿಂದ ನೋಡಿದಾಗ ಗುರುತಿಸಲಾರದೆ ಸ್ತ್ರೀಯರೆಂದುಕೊಂಡರೂ ಪರವಾಗಿಲ್ಲ ಆದರೆ, ಹತ್ತಿರಕ್ಕೆ ಬಂದ ನಂತರವೂ ಸಹ ಗುರುತಿಸದವರನ್ನು ತಿಳುವಳಿಕೆ ಇಲ್ಲದವರೆಂದು ಹೇಳಬಹುದು. ಅಷ್ಟೇ ಅಲ್ಲದೇ ಬಟ್ಟೆ ಬಿಚ್ಚಿ ನೋಡಿದರೂ ಸ್ತ್ರೀ ಪುರುಷರ ವ್ಯತ್ಯಾಸವನ್ನು ಗುರುತಿಸದವರನ್ನು ಬಹಳ ಮೂರ್ಖರೆಂದು ಹೇಳಬಹುದು. ದಾರಿಯಲ್ಲಿ ಬರುವ ಸ್ತ್ರೀಯರು ಕಾಣಿಸಿದಂತೆ, ಭೂಮಿಯ

ಮೇಲೆ ಕಾಣಿಸುವುದಕ್ಕೆ ಆಕಾರದಲ್ಲಿ ಒಂದೇ ಹೋಲಿಕೆ ಹೊಂದಿರುವ ಎರಡು ಬಗೆಯ ವ್ಯತ್ಯಾಸಗಳಿರುವ ಪುಸ್ತಕಗಳಿವೆ. ಅವುಗಳನ್ನು ನೋಡುವವರೂ ಮೂರು ವಿಧದವರಿದ್ದಾರೆ. ಪುಸ್ತಕಗಳು ಒಂದೇ ಆಕಾರಗಳಿದ್ದರೂ ಅವುಗಳೊಳಗೆ ವ್ಯತ್ಯಾಸಗಳಿವೆ ಎಂದು ಹೇಳುವ ಮೊದಲನೆಯ ವಿಧದವರಿದ್ದಾರೆ. ಹಾಗೆಯೇ ಆ ವ್ಯತ್ಯಾಸವನ್ನು ಮೊದಲು ಗುರುತಿಸದೆ ಹೋದರೂ ನಂತರ ಗುರುತಿಸಿ, ಆ ವಿಷಯವನ್ನು ಹೊರಗೆ ಒಪ್ಪಿಕೊಳ್ಳದೇ ಮೊದಲಿನಿಂದ ಹೇಳುವ ಮಾತನ್ನೇ ಹೇಳುವ ಎರಡನೇ ವಿಧದವರಿದ್ದಾರೆ. ಪುಸ್ತಕಗಳೆಲ್ಲ ಒಂದೇ ವಿಧವಾಗಿವೆ ಅಲ್ಲವೆ! ಎಂದು ಅವುಗಳ ವ್ಯತ್ಯಾಸವನ್ನು ಯಾವಕಾರಣಕ್ಕೂ ಒಪ್ಪಿಕೊಳ್ಳದ ಮೂರನೆ ವಿಧದ ಜನರೂ ಸಹ ಇದ್ದಾರೆ.

ಭೂಮಿ ಮೇಲೆ ಪುಸ್ತಕಗಳೆಲ್ಲ ಒಂದೇ ಆಕಾರ ಹೊಂದಿದ್ದರೂ ಅವುಗಳಲ್ಲಿನ ವಿಷಯಗಳನ್ನಾಧರಿಸಿ ಪುರಾಣಗಳು, ಶಾಸ್ತ್ರಗಳೆಂದು ಎರಡು ವಿಧಗಳಾಗಿ ವಿಭಜಿಸಬಹುದು. ನೋಡುವುದಕ್ಕೆ ಎಲ್ಲಾ ಪುಸ್ತಕಗಳೇ ಆದರೂ, ಅವುಗಳಲ್ಲಿನ ವಿಷಯಗಳನ್ನನುಸರಿಸಿ ಪುರಾಣಗಳೆಂದು, ಶಾಸ್ತ್ರಗಳೆಂದು ವಿಭಜಿಸಿಕೊಂಡು ಗುರುತಿಸುವ ಮೊದಲ ವಿಧದ ಮನುಷ್ಯರಿದ್ದಾರೆ. ಮೊದಲು ಎಲ್ಲಾ ಪುಸ್ತಕಗಳೇ ಅಲ್ಲವೆ! ಅದು ಶಾಸ್ತ್ರವಾದರೆ ಇದು ಏಕೆ ಶಾಸ್ತ್ರ ಆಗುವುದಿಲ್ಲವೆಂದು ವಾದಿಸುತ್ತಾ, ಕೊನೆಗೆ ಅವುಗಳ ವ್ಯತ್ಯಾಸವನ್ನು ಗಮನಿಸಿ ಹೊರಬೀಳದೆ, ಹಿಂದಿನ ಮಾತನ್ನೇ ಮಾತನಾಡುವ ಎರಡನೆ ವಿಧದವರಿದ್ದಾರೆ. ಹಾಗೆಯೇ ಅವುಗಳ ವ್ಯತ್ಯಾಸವನ್ನು ತಿಳಿಯಲಾರದೆ ಎಲ್ಲಾ ಒಂದೇ ಅಲ್ಲವೆ! ಎಂದು ಮೂರ್ಖನಂತೆ ವಾದಿಸುವ ಮೂರನೇ ವಿಧದವರಿದ್ದಾರೆ.

ಪುರಾಣದಲ್ಲಿನ ವಿಷಯಗಳು ಬೇರೆ ಎಂದು, ಶಾಸ್ತ್ರಗಳಲ್ಲಿನ ವಿಷಯಗಳು ಬೇರೆ ಎಂದು ತೀರ್ಮಾನಿಸಿ ಹೇಳುವವರಿದ್ದರು, ಅವುಗಳ ವ್ಯತ್ಯಾಸವನ್ನು ವಿವರಿಸುತ್ತಿದ್ದರು, ಮೊದಲು ಅಲ್ಲವೆಂದು ಕೆಲವು ದಿನಗಳಲ್ಲಿ ತಮ್ಮ ಮನಸ್ಸಿನಲ್ಲಿ ಸತ್ಯವನ್ನು ಗ್ರಹಿಸಿದವರು ಪುರಾಣಗಳನ್ನು ಬಿಡಲಾರದೆ ಮೇಲಾಗಿ ಎಲ್ಲಾ ಒಂದೇ ದಾರಿ ತೋರಿಸುತ್ತಿವೆ, ಏನೂ ವ್ಯತ್ಯಾಸ ಇಲ್ಲವೆಂದು ಹೇಳಿಕೊಳ್ಳುವವರಿದ್ದಾರೆ. ಪುರಾಣಗಳನ್ನು ಬೋಧಿಸುತ್ತಾ ಪುರಾಣಗಳಲ್ಲಿ ಬಹಳ ಹೆಸರುವಾಸಿ ಆದವರು, ಪುರಾಣಗಳು ಕಾಲಕ್ಷೇಪಕ್ಕೇ ಆಗಲಿ ಕರ್ಮ ಕ್ಷೇಪಕ್ಕೆ ಕೆಲಸಕ್ಕೆ ಬರುವುದಿಲ್ಲವೆಂದು, ಕೊನೆಗೆ ತಿಳಿದೂ ಸಹ ಮಧ್ಯದಲ್ಲಿ ಪುರಾಣಗಳ ಬಗ್ಗೆ ಕೇವಲವಾಗಿ ಹೇಳಿದರೆ, ಇಲ್ಲಿಯವರೆಗೂ ಉತ್ತಮವಾದವುಗಳೆಂದು ಹೇಳಿದ ತಮಗೆ ಬೆಲೆ ಇರುವುದಿಲ್ಲವೆಂದು, ಹೊರಗಡೆ ಅವುಗಳನ್ನು ದೊಡ್ಡದಾಗಿಯೇ ಹೇಳುತ್ತಾರೆ. ಸ್ವಲ್ಪ ಮನಸ್ಸಿನಲ್ಲಿ ಪುರಾಣಗಳಿಗಿಂತ ಶಾಸ್ತ್ರಗಳು ದೊಡ್ಡವೆಂದು ತೋಚುತ್ತಿದ್ದರು, ತಮ್ಮ

ಹೊರಗಿನ ಗೌರವಕ್ಕೋಸ್ಕರ ಪುರಾಣಗಳನ್ನು ಬಿಡದವರು ಬಹಳ ಜನರಿದ್ದಾರೆ. ಮನುಷ್ಯರನ್ನು ಇಷ್ಟೊಂದು ತೊಂದರೆಯಲ್ಲಿಡುವ ಪುರಾಣಗಳನ್ನು, ಶಾಸ್ತ್ರಗಳನ್ನು ಕುರಿತು ತಿಳಿದುಕೊಳ್ಳೋಣ.

ಒಂದು ವಿಷಯದ ಬಗ್ಗೆ ಹೇಳುವಾಗ ಬಾಯಿಂದ ಹೇಳಿದರೆ ಆ ಮಾತು ಆ ಸಮಯದಲ್ಲಿಯೆ, ಆ ಪ್ರಾಂತದಲ್ಲಿಯೇ ಕೇಳಿಸುತ್ತದೆ. ಹಾಗೆ ಅಲ್ಲದೇ ಹೇಳಿದ ವಿಷಯ ಎಂದಿಗೂ ಎಲ್ಲ ಪ್ರಾಂತಗಳಲ್ಲಿಯೂ ತಿಳಿಯಬೇಕೆಂದರೆ ಅದು ಗ್ರಂಥರೂಪವಾಗಬೇಕು. ಪುಸ್ತಕ ರೂಪವಾದ ವಿಷಯ ಪುಸ್ತಕ ಇರುವವರೆಗೂ ಇರುತ್ತದೆ. ಅಂತಹ ಪುಸ್ತಕಗಳಲ್ಲಿ ಎರಡು ವಿಧಗಳು ಇವೆ. ಅವುಗಳೆಂದರೆ ಪುರಾಣಗಳು ಮತ್ತು ಶಾಸ್ತ್ರಗಳು. ನಡೆಯಬೇಕಾದ ಕಾಲದಲ್ಲಿ ಮಾನವನು ಈ ವಿಧವಾಗಿ ನಡೆಯಬೇಕೆಂದು ಸಮಾಚಾರ ತಿಳಿಸುವಸಲುವಾಗಿ, ಬರೆಯಲ್ಪಟ್ಟ ಪುಸ್ತಕಗಳು ಕಲ್ಪಿತಗಳಿಂದ ಕೂಡಿಕೊಂಡಿರುವವು ಕೆಲವಾಗಿದ್ದು, ಯಾವುದೇ ಕಲ್ಪಿತಗಳು ಇಲ್ಲದಿರುವವು ಕೆಲವು ಇವೆ. ಕಲ್ಪಿತಗಳಿಂದ ಕೂಡಿಕೊಂಡಿರುವವೇ ಪುರಾಣಗಳು. ಮಾನವನನ್ನು ಒಳ್ಳೆಯ ಮಾರ್ಗದಲ್ಲಿ ನಡೆಸಬೇಕೆಂಬುವುದು ಪುರಾಣಗಳಲ್ಲಿರುವ ಉದ್ದೇಶ ಒಳ್ಳೆಯದೇ, ಆದರೂ ತಿಳಿಸಲಾದ ವಿಷಯ ಕಲ್ಪಿತಗಳಿಂದ ಕೂಡಿಕೊಂಡಿರುವುದರಿಂದ ಹೇತುವಾದಿಗಳ ವಿಮರ್ಶೆಗಳಿಗೆ ನಿಲ್ಲಲಾರದೆ ಹೋಗುತ್ತಿವೆ. ವಿಮರ್ಶೆಗಳಿಗೆ ಉತ್ತರ ಕೊಡುವ ಸಾಮರ್ಥ್ಯ ಪುರಾಣಗಳಲ್ಲಿಲ್ಲ. ವಾಸ್ತವ ಜ್ಞಾನ ಪುರಾಣಗಳಲ್ಲಿ ಇಲ್ಲದಿರುವುದರಿಂದ ಮಾನವನ ಕರ್ಮವನ್ನು ತೊಲಗಿಸುವ ಸಾಮರ್ಥ್ಯ ಅವುಗಳಲ್ಲಿ ಇಲ್ಲದಂತೆ ಹೋಗಿದೆ. ಆದುದರಿಂದ ಅವುಗಳನ್ನು ತಿಳಿಯುವುದರಿಂದ ಕಾಲಕ್ಷೇಪವೇಯಾಗಲಿ ಕರ್ಮಕ್ಷೇಪ ಇಲ್ಲವೆಂದು, ಪೂರ್ವದಿಂದ ಅವುಗಳಿಗೆ ಗುರುತಾಗಿ ಒಂದು ಹೆಸರು ಇಟ್ಟಿದ್ದಾರೆ, ಅದನ್ನೇ ಪುರಾಣ ಕಾಲಕ್ಷೇಪ ಎಂದಿದ್ದಾರೆ. ಪುರಾಣ ಕಾಲಕ್ಷೇಪವೆಂಬ ಮಾತಿನಿಂದ ಅವುಗಳಿಂದ ಕಾಲ ವ್ಯರ್ಥವಾಗುತ್ತದೆಂದು ಅರ್ಥ. ಹೊಸ ವಿಷಯಗಳನ್ನು ತಿಳಿಸುವುದರಲ್ಲಿ ಮಾನವನನ್ನೂ ಒಳ್ಳೆಯ ಮಾರ್ಗದಲ್ಲಿ ನಡೆಸುವುದಕ್ಕೆ ಉದ್ದೇಶಿಸಿದ ಪುರಾಣಗಳ ಪ್ರಯೋಗವೂ ಮಾನವನನ್ನು ಪೂರ್ತಿ ಕರ್ಮವಿಮುಕ್ತನನ್ನಾಗಿ ಮಾಡಲಾರದೆ ಹೋಗಿವೆ. ಪುರಾಣಗಳಿಗೆ ಪೂರ್ತಿಯಾಗಿ ಅಂಟಿಕೊಂಡು ಹೋಗಿರುವವರಿಗೆ ಈ ವಿಷಯ ಸ್ವಲ್ಪ ದುಃಖವನ್ನುಂಟು ಮಾಡುವುದಾದರೂ ಅವರನ್ನು ಮಾತ್ರ ಪುರಾಣಗಳು ಮುಕ್ತರನ್ನಾಗಿ ಮಾಡಲಾರವು. ಪುರಾಣಗಳಿಗೆ ಪೂರ್ವದಿಂದ ಪುಕ್ಕಟೆ ಪುರಾಣಗಳೆಂದು ಹೆಸರೂ ಸಹ ಇದೆ. ನಿಜವಾದ ವಿಷಯಗಳು ಹೊಕ್ಕಳ ಹತ್ತಿರದಿಂದ ಬರುತ್ತವೆಂದು, ಕಲ್ಪಿತಗಳು, ಅಸತ್ಯಗಳು ಬಾಯಿ ಪುಕ್ಕಟೆಯಿಂದ ಬರುತ್ತವೆಂದು ಕೆಲವರ ಉದ್ದೇಶ. ನಾವು ಚಿಕ್ಕಂದಿನಲ್ಲಿ ಪಾಠಶಾಲೆಯಲ್ಲಿ ಇರುವಾಗ ನಿನ್ನೆಯ ದಿನ ಏಕೆ ಬರಲಿಲ್ಲ ಎಂದು ನಮ್ಮ ಮೇಷ್ಟ್ರು ಒಬ್ಬ ಹುಡುಗನನ್ನು

ಕೇಳಿದಾಗ, ಆ ಹುಡುಗನು ನಿನ್ನೆಯ ದಿನ ನನಗೆ ತಲೆನೋವು ಇತ್ತು, ಅದಕ್ಕೆ ಬರಲಿಲ್ಲ ಎಂದನು. ಆ ಮಾತು ಕೇಳಿದ ಮೇಷ್ಟ್ರು ನೀನು ಹೇಳುವ ಮಾತು ಹೊಕ್ಕಳ ಹತ್ತಿರದಿಂದ ಬರುತ್ತಿದೆಯಾ ಅಥವಾ ಪುಕ್ಕಟೆಯಿಂದ ಬರುತ್ತಿದೆಯಾ ಎಂದು ಕೇಳಿದನು. ಆ ಮಾತಿನಲ್ಲಿ ಅರ್ಥ ನೀನು ಹೇಳಿದ ಮಾತು ನಿಜವಾ ಅಥವಾ ಸುಳ್ಳಾ ಎಂದು ಕೇಳುವುದು. ಇದರ ಪ್ರಕಾರವೇ ಪುಕ್ಕಟೆ ಪುರಾಣಗಳೆನ್ನುವುದರಲ್ಲಿ ಅಸತ್ಯದ ಪುರಾಣಗಳೆಂದು ಅರ್ಥವಾಗುತ್ತಿದೆ.

ಪುರಾಣಗಳು ಪುಕ್ಕಟೆಯಿಂದ ಬಂದಿರುವುವಾದರೆ, ಹೊಕ್ಕಳ ಹತ್ತಿರದಿಂದ ಬಂದಿರುವವು ಶಾಸ್ತ್ರಗಳೆಂದು ಹೇಳಬಹುದು. ಶಾಸ್ತ್ರಗಳೆಂದರೇ ಶಾಸನಗಳಿಂದ ಕೂಡಿಕೊಂಡಿರುವವೆಂದು ಹೇಳಬಹುದು. **"ಶಾಪ" ಎನ್ನುವ ಪದದಿಂದ ಹುಟ್ಟಿರುವುದು "ಶಾಸನ". ಶಾಸನ ಎಂದರೂ, ಶಾಪ ಎಂದರೂ ತಪ್ಪದೇ ನಡೆಯುವುದೆಂದು ಅರ್ಥ** ಶಾಸನಗಳಿಂದ ಕೂಡಿಕೊಂಡಿರುವುದು ಶಾಸ್ತ್ರ. ಶಾಸ್ತ್ರಗಳಲ್ಲಿನ ಪ್ರತಿಯೊಂದು ವಿಷಯ ಸತ್ಯದಿಂದ ಕೂಡಿಕೊಂಡಿರುತ್ತದೆ. ಒಂದು ಬಾರಿ ಹೇಳಲ್ಪಟ್ಟ ಶಾಸ್ತ್ರ ವಿಷಯ ಎಂದಿಗೂ ಅಸತ್ಯ ಆಗುವುದಿಲ್ಲ. ಉದಾಹರಣೆಗೆ ಎಲ್ಲರಿಗೂ ತಿಳಿದ ಗಣಿತ ಶಾಸ್ತ್ರವನ್ನು ತೆಗೆದುಕೊಳ್ಳೋಣ. ಅದರಲ್ಲಿ 5x4=20 ಎನ್ನುವುದು ಶಾಸನ. ಇದು ಒಂದು ಬಾರಿ ಹೇಳಿರುವುದಾದರೂ ಚಿರಕಾಲ ಇರುವುದು. ಎಂದಿಗಾದರು ಎಲ್ಲಿಯಾದರು ನಡೆದುತೀರುವುದೇ ಶಾಸನ ಅಥವಾ ಶಾಸ್ತ್ರ ಎನ್ನುವಂತೆ, 5x4=20 ಎನ್ನುವ ಮಾತು ಎಂದಿಗೂ ಬದಲಾವಣೆಯಾಗುವುದಿಲ್ಲ. ಈ ವಿಧವಾಗಿ ಇರುವವು ಶಾಸ್ತ್ರಗಳೆಂದು ತಿಳಿದುಕೊಂಡಿದ್ದೇವೆ. ಪುರಾಣಗಳು ಒಂದು ವಿಧವಾದ ಗ್ರಂಥಗಳು ಆಗಿದ್ದು, ಶಾಸ್ತ್ರಗಳು ಮತ್ತೊಂದು ವಿಧವಾದ ಗ್ರಂಥಗಳು. ಪ್ರಯಾಣ ಒಂದೇಯಾದರೂ ಪೂರ್ವ ಪಶ್ಚಿಮ ದಿಕ್ಕುಗಳು ಬೇರೆಯಾದಂತೆ, ಉದ್ದೇಶ ಒಂದೆಯಾದರೂ ಪುರಾಣಗಳು ಬೇರೆ, ಶಾಸ್ತ್ರಗಳು ಬೇರೆ. ಪೂರ್ವ ಪಶ್ಚಿಮಕ್ಕೆ ಇರುವಷ್ಟು ವ್ಯತ್ಯಾಸ ಪುರಾಣಕ್ಕೂ ಶಾಸ್ತ್ರಕ್ಕೂ ಇದೆ. ಅವುಗಳ ವ್ಯತ್ಯಾಸವನ್ನು ಗ್ರಹಿಸಿಲಾರದೆ ಎಲ್ಲಾ ಪುಸ್ತಕಗಳೇ ಅಲ್ಲವೇ ಎಂದರೆ ಸ್ತ್ರೀಗೂ, ನಪುಂಸಕನಿಗೂ ವ್ಯತ್ಯಾಸ ತಿಳಿಯದಂತಾಗುತ್ತದೆ. ಆದ್ದರಿಂದ ಯಾವ ಪುಸ್ತಕ ಯಾವ ಗುಂಪಿಗೆ ಸೇರಿರುವುದೊ, ಶಾಸ್ತ್ರ ಯಾವುದೊ, ಪುರಾಣ ಯಾವುದೊ, ಅವುಗಳಿಗಿರುವ ವ್ಯತ್ಯಾಸ ವೇನೋ ತಿಳಿಯಬೇಕಾದ ಅವಶ್ಯಕತೆ ಬಹಳ ಮುಖ್ಯ. ಹಾಗಾಗದಿದ್ದರೆ ಕಾಲಿನ ಮೇಲೆ ಹಾಕಿಕೊಳ್ಳಬೇಕಾದ ಧೂಳನ್ನು ನೆತ್ತಿ ಮೇಲೆ, ನೆತ್ತಿ ಮೇಲೆ ಹಾಕಿಕೊಳ್ಳಬೇಕಾದ ನೀರನ್ನು ಕಾಲಿನ ಮೇಲೆ ಹಾಕಿಕೊಂಡಂತೆ ಇರುತ್ತದೆ. ಕಾಲಿಗೆ ಧೂಳಾದಾಗ ತಲೆ ಮೇಲೆ ನೀರು ಹಾಕಿಕೊಂಡರೆ ಶರೀರವೆಲ್ಲಾ ನೆನೆದು ಶುಭ್ರವಾಗುವುದಲ್ಲದೆ, ಕಾಲಿಗಿರುವ ಧೂಳು ನೀರಿನಲ್ಲಿ ಕೊಚ್ಚಿ ಹೋಗಿ ಕಾಲು ಸಹ ಶುಭ್ರವಾಗುತ್ತವೆ. ಹಾಗಲ್ಲದೆ ಕಾಲಿನ ಮೇಲೆ ನೀರು ಹಾಕಿಕೊಂಡು

ತಲೆ ಮೇಲೆ ದೂಳು ಹಾಕಿಕೊಂಡರೆ ಅಲ್ಲಿಯವರೆಗೂ ಶುಭ್ರವಾಗಿರುವ ಶರೀರವೆಲ್ಲ ಅಶುಭ್ರವಾಗಿ ಬದಲಾಗುತ್ತದೆ. ಆ ವಿಧವಾಗಿಯೇ ಪುರಾಣಗಳು ಯಾವುದರ ಅವಗಾಹನೆ ಇಲ್ಲದವರಿಗೆ ಪ್ರಾಥಮಿಕವಾಗಿ ತಿಳಿದುಕೊಳ್ಳುವುದಕ್ಕೆಂದು, ಸ್ವಲ್ಪ ಗ್ರಹಿಸುವ ಶಕ್ತಿ ಇರುವವರಿಗೆ ಶಾಸ್ತ್ರಗಳ ಅವಶ್ಯಕತೆ ಇದೆಯೆಂದು ತಿಳಿಯಬೇಕು. ಹಾಗಲ್ಲದೆ ಗ್ರಹಿಸುತ್ತಿರು ವವರು ಪುರಾಣಗಳು ಓದಿದರೂ, ಗ್ರಹಿಸದವರು ಶಾಸ್ತ್ರಗಳು ಓದಿದರೂ ಸ್ವಲ್ಪವೂ ಅವರಿಗೆ ರುಚಿಸುವುದಿಲ್ಲ. ಈ ಕಾರಣದಿಂದಲೇ ಕೆಲವರು ಪುರಾಣಗಳನ್ನು ಅರ್ಥ ಮಾಡಿಕೊಂಡಂತೆ ಶಾಸ್ತ್ರಗಳನ್ನು ಅರ್ಥಮಾಡಿಕೊಳ್ಳದೆ ಹೋಗುತ್ತಿದ್ದಾರೆ. ಮತ್ತೆ ಕೆಲವರು ಶಾಸ್ತ್ರಗಳನ್ನು ತಿಳಿದು ಪುರಾಣಗಳ ಸಹವಾಸಕ್ಕೆ ಹೋಗದಂತೆ ಇದ್ದಾರೆ.

ಈಗ ನಾವು ನೋಡುವ ಭಗವದ್ಗೀತೆ ನೂರಕ್ಕೆ ನೂರರಷ್ಟು ಶಾಸ್ತ್ರಬದ್ಧವಾದ್ದರಿಂದ ಪುರಾಣಗಳಲ್ಲಿ ಇದನ್ನು ಸೇರಿಸಬಾರದೆಂದು ಮೊದಲೇ ತಿಳಿಸುತ್ತಿದ್ದೇವೆ. ಇಲ್ಲಿ ಮುಖ್ಯವಾಗಿ ನಾವು ತಿಳಿಸಬೇಕಾದ ವಿಷಯ, ನೀವು ಕೇಳಬೇಕಾದ ವಿಷಯ ಮತ್ತೊಂದು ಇದೆ. ಅದೇನೆಂದರೆ! ಒಟ್ಟು ಪುರಾಣಗಳು ಅಷ್ಟಾದಶ ಪುರಾಣಗಳೆಂದು 18 ಇವೆ. ಅವು ಕ್ರಮವಾಗಿ 1) ಬ್ರಹ್ಮ ಪುರಾಣ 2) ಪದ್ಮ ಪುರಾಣ 3) ವಿಷ್ಣು ಪುರಾಣ 4) ಶಿವ ಪುರಾಣ 5) ಭಾಗವತ 6) ನಾರದ ಪುರಾಣ 7) ಮಾರ್ಕಂಡೇಯ ಪುರಾಣ 8) ಅಗ್ನಿ ಪುರಾಣ 9) ಭವಿಷ್ಯತ್ ಪುರಾಣ 10) ಬ್ರಹ್ಮಕೈವರ್ತನ ಪುರಾಣ. 11) ಲಿಂಗ ಪುರಾಣ 12) ವರಾಹ ಪುರಾಣ 13) ಸ್ಕಂಧ ಪುರಾಣ 14) ವಾಮನ ಪುರಾಣ 15) ಕೂರ್ಮ ಪುರಾಣ 16) ಮತ್ಸ್ಯ ಪುರಾಣ 17) ಗರುಡ ಪುರಾಣ 18) ಬ್ರಹ್ಮಾಂಡ ಪುರಾಣ.

ಈ ಹದಿನೆಂಟು ಪುರಾಣಗಳು ಪೂರ್ವದಿಂದ ಹೆಸರುವಾಸಿಯಾಗಿವೆ. ಶಾಸ್ತ್ರಗಳು ಪುರಾಣಗಳಲ್ಲಿ ಮೂರನೆ ಭಾಗ ಮಾತ್ರ ಇವೆ. ಪುರಾಣಗಳು 18 ಆಗಿದ್ದು ಶಾಸ್ತ್ರಗಳು ಕೇವಲ 6 ಮಾತ್ರವೆ. ಶಾಸ್ತ್ರಗಳಿಗಿಂತ ಪುರಾಣಗಳು ಸಂಖ್ಯೆಯಲ್ಲಿ ಮೂರರಷ್ಟು ದೊಡ್ಡವಾದರೂ ಬೆಲೆಯಲ್ಲಿ ಕಲ್ಲಿಗೂ ರತ್ನಕ್ಕೂ ಇರುವಷ್ಟು ವ್ಯತ್ಯಾಸ ಪುರಾಣಗಳಿಗೂ, ಶಾಸ್ತ್ರಗಳಿಗೂ ಇದೆ. 18 ಪುರಾಣಗಳಿಗೆ ಇಲ್ಲದ ಬೆಲೆ 6 ಶಾಸ್ತ್ರಗಳಿಗಿರುವುದರಿಂದ ಆ ವಿಷಯ ಪೂರ್ವದಲ್ಲಿ ಕೆಲವರಿಗೆ ಜೀರ್ಣಿಸಿಕೊಳ್ಳದಂತಾಯಿತು. ಪೂರ್ವದಲ್ಲಿ ಪುರಾಣ ಪ್ರಿಯರು ಹೆಚ್ಚಾಗಿ, ಶಾಸ್ತ್ರಪ್ರಿಯರು ಕಡಿಮೆಯಾದಾಗ, ಅದೇ ಸಮಯದಲ್ಲಿ ಪುರಾಣಗಳಿಗೆ ಬೆಲೆಯನ್ನುಂಟುಮಾಡಲು, ಶಾಸ್ತ್ರಗಳಿಗೆ ಬೆಲೆ ಇಲ್ಲದಂತೆ ಮಾಡುವುದಕ್ಕೆ, ದೊಡ್ಡ ಕುತಂತ್ರ ನಡೆದಿದೆ. ಶಾಸ್ತ್ರಗಳನ್ನು ಇಲ್ಲದಂತೆ ಮಾಡಿ, ಶಾಸ್ತ್ರಗಳ ಸ್ಥಾನಗಳಲ್ಲಿ ಮತ್ತೊಂದು ಆರು ವಿಧಾನಗಳನ್ನು ಪ್ರವೇಶಮಾಡಿ, ಅವುಗಳೇ ಶಾಸ್ತ್ರಗಳೆಂದು ಪ್ರಚಾರಮಾಡಿದ್ದಾರೆ. ಹಾಗೆ

ಮೊದಲ ಆರು ಶಾಸ್ತ್ರಗಳು ಶಾಸ್ತ್ರಗಳಾಗಿ ಪ್ರಚಾರವಾಗದೇ, ಶಾಸ್ತ್ರಗಳಲ್ಲದ ಆರು ಶಾಸ್ತ್ರಗಳು ಪ್ರಚಾರವಾಗಿವೆ. ಆರು ಕ್ರಮವಾಗಿ ***1) ಶಿಕ್ಷ 2) ವ್ಯಾಕರಣ 3) ಛಂಧ 4) ನಿರುಕ್ತ 5) ಜ್ಯೋತಿಷ್ಯ 6) ಕಲ್ಪ.*** ಈ ಕಾಲದಲ್ಲಿ ಇವು ಎಲ್ಲರಿಗೂ ತಿಳಿಯದಿದ್ದರೂ ವೇದಪರಿಚಯ ಇರುವವರಿಗೆ, ಪುರಾಣಗಳಲ್ಲಿ ಪೂರ್ತಿ ಮುಳುಗಿರುವವರಿಗೆ ಚೆನ್ನಾಗಿ ತಿಳಿಯುತ್ತದೆ. ಶಾಸ್ತ್ರಗಳ ಹೆಸರು ತಗಲಿಸಿಕೊಂಡು ಇವುಗಳಲ್ಲಿ ಉದಾಹರಣೆಯಾಗಿ ಒಂದನ್ನು ವಿವರಿಸಿಕೊಳ್ಳೋಣ.

**1) ಶಿಕ್ಷ :–** ಇದರಲ್ಲಿ ವೇದ ಶಬ್ದಗಳೊಂದರ ಅಕ್ಷರಗಳ ಸ್ಥಾನ ಜ್ಞಾನಗಳನ್ನು, ಉದಾತ್ತ, ಅನುದಾತ್ತ, ಸ್ವರಿತ ಸ್ವರಗಳ ಜ್ಞಾನವನ್ನು ಹೇಳಲಾಗಿದೆ. ಉದಾತ್ತ ಎಂದರೆ ಉಚ್ಚ, ಅನುದಾತ್ತ ಎಂದರೆ ನೀಚ, ಸ್ವರಿತ ಎಂದರೆ ಸಮಾನವೆಂದು ತಿಳಿಯಬೇಕು. ಈ ಶಿಕ್ಷಾ ಶಾಸ್ತ್ರವನ್ನು ವ್ಯಾಸ ಶಿಕ್ಷ, ಭರದ್ವಾಜ ಶಿಕ್ಷ, ನಾರದ ಶಿಕ್ಷ ಎಂದು ಮೂರು ವಿಧಗಳಾಗಿ ಹೇಳುತ್ತಿದ್ದಾರೆ. ಇದು ಒಂದನೇ ಶಾಸ್ತ್ರವಾದ ಶಿಕ್ಷದಲ್ಲಿರುವ ಪದ್ಧತಿ, ವೇದಶಬ್ದಗಳು ಹೀಗೆ ಹೇಳಬೇಕೆಂದು ಒಂದು ಕಡೆ ಗಟ್ಟಿಯಾಗಿ ಹೇಳುವುದು, ಒಂದು ಕಡೆ ನಿಧಾನವಾಗಿ ಹೇಳುವುದಕ್ಕೆ ಹೇಳಿರುವ ಪದ್ಧತಿಯನ್ನು ಶಾಸ್ತ್ರ ಎಂದಿದ್ದಾರೆ. ಅದು ಒಂದು ಶಾಸನ ರೂಪವಾಗಿದ್ದು ಇದು ನಾರದನ ಪದ್ಧತಿಯೆಂದೂ, ಇದು ವ್ಯಾಸನ ಪದ್ಧತಿಯೆಂದು, ಇದು ಭರದ್ವಾಜ ಪದ್ಧತಿಯೆಂದು ತಿಳಿಸಿದ್ದಾರೆ. ಅದನ್ನನುಸರಿಸಿ ವ್ಯಾಸನು ಹೇಳಿದಂತೆ ಭರಧ್ವಾಜನು ಹೇಳಲಿಲ್ಲವೆಂದು, ಭರಧ್ವಾಜನು ಹೇಳಿದಂತೆ ನಾರದನು ಹೇಳಲಿಲ್ಲವೆಂದು ತಿಳಿಯುತ್ತಿದೆ. ಶಾಸ್ತ್ರ ಒಂದೇ ಪದ್ಧತಿ ಹೊಂದಿದ್ದು ಎಂದಿಗೂ ಬದಲಾಗುವುದಿಲ್ಲ ಎಂಬ ಸೂತ್ರಕ್ಕೆ ಶಿಕ್ಷಾ ಶಾಸ್ತ್ರ ಬೆಲೆ ಇಲ್ಲದಂತೆ ಮಾಡಿದೆ. ಮಧ್ಯದಲ್ಲಿ ಕಲ್ಪಿಸಲಾದ ಇಂತಹ ಶಾಸ್ತ್ರಗಳನ್ನು ಬಿಟ್ಟು ನಿಜವಾದ ಶಾಸ್ತ್ರಗಳು ಯಾವುವು ಎಂದು ತಿಳಿದುಕೊಳ್ಳೋಣ.

ಪುರಾಣಗಳಿಗಿಂತ ಶಾಸ್ತ್ರಗಳು ಎಷ್ಟೋ ಮೊದಲು ಹುಟ್ಟಿವೆ. ಅವು ಕ್ರಮವಾಗಿ ಈ ವಿಧವಾಗಿ ಇವೆ **1) ಗಣಿತಶಾಸ್ತ್ರ 2) ಜ್ಯೋತಿಷ್ಯ ಶಾಸ್ತ್ರ 3) ಖಗೋಳ ಶಾಸ್ತ್ರ 4) ರಸಾಯನ ಶಾಸ್ತ್ರ 5) ಭೌತಿಕ ಶಾಸ್ತ್ರ 6) ಯೋಗ ಶಾಸ್ತ್ರ.** ಈ ಆರು ಶಾಸ್ತ್ರಗಳು ವಿನಹಾ ಇನ್ಯಾವ ಶಾಸ್ತ್ರಗಳು ಇಲ್ಲ. ಇಲ್ಲಿ ಕೆಲವರೊಂದು ಪ್ರಶ್ನೆ ಕೇಳಬಹುದು. ಅದೇನೆಂದರೆ! ಈ ಆರು ಶಾಸ್ತ್ರಗಳಿಗಿಂತ ಈದಿನ ಬಹಳ ಪ್ರಚಾರದಲ್ಲಿರುವುದು ವಾಸ್ತುಶಾಸ್ತ್ರ. ಮನೆ ಕಟ್ಟಿಸಿಕೊಳ್ಳುವವರೆಲ್ಲ ವಾಸ್ತುಶಾಸ್ತ್ರದ ಪ್ರಕಾರ ಕಟ್ಟಿಸಿಕೊಳ್ಳುತ್ತಿದ್ದಾರೆ. ಅದು ನಿಮ್ಮ ಲೆಕ್ಕದಲ್ಲಿ ಇಲ್ಲವೇ ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ನಾವು ಹೇಳಿದ ಆರು ಶಾಸ್ತ್ರಗಳು ತಿಳಿದವರು ಬಹಳ ಕಡಿಮೆ ಇದ್ದಾರಾಗಲಿ, ವಾಸ್ತುಶಾಸ್ತ್ರಜ್ಞರು ಮಾತ್ರ ಎಲ್ಲಿ

ನೋಡಿದರು ತಯಾರಾಗಿದ್ದಾರೆ. ಇನ್ನು ಇದರ ವಿಷಯವನ್ನು ಕುರಿತು ಹೇಳಬೇಕೆಂದರೆ ಈಗಿರುವ ವಾಸ್ತುಶಾಸ್ತ್ರ ಎನ್ನುವುದು ಇಲ್ಲವೇ ಇಲ್ಲ. ವಾಸ್ತು ಪ್ರಕಾರ ಮನೆ ಕಟ್ಟಿಕೊಳ್ಳಬೇ ಕೆಂಬುವುದು ಮತ್ತಷ್ಟು ವಿಚಿತ್ರವಾದ ಮಾತು. ವಾಸ್ತು ಪ್ರಕಾರ ಇಲ್ಲದ ಮನೆಯಲ್ಲಿ ಕಷ್ಟ ನಷ್ಟಗಳು ಬರುತ್ತವೆಂಬುವುದು ಯೋಗಶಾಸ್ತ್ರಕ್ಕೆ ವಿರುದ್ಧವಾದ ಮಾತು. ಮನುಷ್ಯನಿಗೆ ಲಭ್ಯವಾಗುವ ಮನೆ ಅವನು ಹುಟ್ಟಿದಾಗಲೇ ಪ್ರಾರಬ್ಧದಲ್ಲಿ ನಿರ್ಣಯಿಸಲ್ಪಟ್ಟಿರುತ್ತದೆ. ಮಧ್ಯದಲ್ಲಿ ಯಾರೂ ನಿರ್ಣಯಿಸಲಾರರು. ಒಬ್ಬರಿಗೆ ಎಂತಹ ಮನೆ ಜೀವನದಲ್ಲಿ ಸಿಗಬೇಕೆಂಬ ವಿಷಯ ಜ್ಯೋತಿಷ್ಯದಲ್ಲಿರುತ್ತದೆ. ಅಷ್ಟೇ ಹೊರತು ಮನೆಯನ್ನು ಕುರಿತು ಪ್ರತ್ಯೇಕವಾದ ಶಾಸ್ತ್ರ ಇಲ್ಲವೆಂದು ಗುರುತಿಸಬೇಕು.

ಶಾಸ್ತ್ರಗಳು ಆರು, ಪುರಾಣಗಳು ಹದಿನೆಂಟರ ಸಂಖ್ಯೆ ಎಂದಿಗೂ ಬದಲಾಗುವು ದಿಲ್ಲ. ಆರು ಶಾಸ್ತ್ರಗಳಲ್ಲಿನ ಗಣಿತಶಾಸ್ತ್ರದಿಂದ ಜ್ಯೋತಿಷ್ಯ ಶಾಸ್ತ್ರ ಮುಡಿಹಾಕಲ್ಪಟ್ಟಿದೆ. ಆದ ಕಾರಣ ಗಣಿತವಿಲ್ಲದೆ ಜ್ಯೋತಿಷ್ಯ ಇರುವುದಿಲ್ಲ. ಹಾಗೆಯೇ ಜ್ಯೋತಿಷ್ಯಶಾಸ್ತ್ರದೊಂದಿಗೆ ಖಗೋಳ ಶಾಸ್ತ್ರ ಮುಡಿಹಾಕಲ್ಪಟ್ಟಿದೆ. ಹಾಗೆ ಖಗೋಳ ಶಾಸ್ತ್ರದೊಂದಿಗೆ ರಾಸಾಯನಿಕ ಶಾಸ್ತ್ರ, ರಾಸಾಯನಿಕಶಾಸ್ತ್ರದೊಂದಿಗೆ ಭೌತಿಕಶಾಸ್ತ್ರ, ಭೌತಿಕಶಾಸ್ತ್ರದೊಂದಿಗೆ ಯೋಗಶಾಸ್ತ್ರ ಅನುಸಂಧಾನವಾಗಿವೆ. ಭೌತಿಕ ಎಂದರೆ ಶರೀರಕ್ಕೆ ಸಂಬಂಧಿಸಿರುವುದು. ಮಾನವನು ಶರೀರ ಧರಿಸಿದ್ದಾನೆ. ಶರೀರದಲ್ಲಿ ಎಷ್ಟೋ ಭಾಗಗಳೊಂದಿಗೆ ನಿವಾಸ ಮಾಡುವ ಜೀವಾತ್ಮ, ಪರಮಾತ್ಮನೊಳಗೆ ಐಕ್ಯವಾಗುವುದಕ್ಕೆ ಯೋಗಶಾಸ್ತ್ರವನ್ನು ತಿಳಿಯಲೇಬೇಕು. ಗಣಿತ, ಜೋತಿಷ್ಯ, ಖಗೋಳ, ರಾಸಾಯನಿಕ, ಭೌತಿಕ ಎನ್ನುವ ಐದು ಶಾಸ್ತ್ರಗಳು ಮಾನವನ ಜೀವನದಲ್ಲಿ ಪ್ರಪಂಚ ಸಂಬಂಧವಾಗಿ ಉಪಯೋಗವಾಗುತ್ತಿವೆ. ಆರನೇಶಾಸ್ತ್ರವಾದ ಯೋಗಶಾಸ್ತ್ರ ಮಾತ್ರ ಮಾನವನಿಗೆ ಪ್ರಪಂಚಸಂಬಂಧವಾಗಿ ಅಲ್ಲದೇ ಪರಮಾತ್ಮ ಸಂಬಂಧವಾಗಿ ಉಪಯೋಗವಾಗುತ್ತಿದೆ. ಮಾನವನು ಪ್ರಪಂಚದಲ್ಲಿ ಬದುಕುವುದಕ್ಕೆ ಐದು ಶಾಸ್ತ್ರಗಳು ಬೇಕಾಗಿರುವಾಗ, ಪ್ರಪಂಚವನ್ನು ಬಿಟ್ಟು ಪರಮಾತ್ಮನಲ್ಲಿ ಐಕ್ಯವಾಗುವುದಕ್ಕೆ, ಆರನೆಯ ಶಾಸ್ತ್ರವಾದ ಯೋಗಶಾಸ್ತ್ರ ತಪ್ಪದೆ ಅಗತ್ಯವಾಗಿದೆ. ಮಾನವನಿಗೆ ತಪ್ಪದೆ ಅಗತ್ಯವಾದ ಯೋಗಶಾಸ್ತ್ರ ಎನ್ನುವುದು ಏನು? ಎಲ್ಲಿ ಇದೆಯೆಂದು ಕೆಲವರು ಕೇಳಬಹುದು. ಎಲ್ಲರಿಗೂ ಅಗತ್ಯವಾದ ಯೋಗಶಾಸ್ತ್ರವನ್ನು ಕುರಿತು, ಅದರ ಬೆಲೆಯನ್ನು ಕುರಿತು ಮೊದಲು ತಿಳಿದುಕೊಳ್ಳುವುದೂ ಸಹ ಮುಖ್ಯ.

ಮಾನವನಿಗೆ ಬಹಳ ಮುಖ್ಯವಾದ ಶಾಸ್ತ್ರ ಯೋಗಶಾಸ್ತ್ರ. ಯೋಗ ಶಾಸ್ತ್ರದಲ್ಲಿ ಮಾನವನ ಕರ್ಮವನ್ನು ರೂಪಬದಲಿಸುವ ವಿಧಾನ ಇದೆ. ಕರ್ಮನಿರ್ಮೂಲನಾ

ಸೂತ್ರಗಳನ್ನು ಮಾನವನು ಬೋಧಿಸಲಾರನು, ಆದ್ದರಿಂದ ಸ್ವತಃವಾಗಿ ಪರಮಾತ್ಮನೇ ಈ ಶಾಸ್ತ್ರವನ್ನು ಭಗವಂತನ ರೂಪದಿಂದ ಬೋಧಿಸಿದ್ದಾನೆ. ಭಗವಂತನು ಬೋಧಿಸಿದ ಯೋಗಶಾಸ್ತ್ರ ಮೂರು ಭಾಗಗಳಾಗಿದೆ. ಭೂಮಿ ಮೇಲೆ ಕೆಲವು ದೇಶಗಳಲ್ಲಿ ಯೋಗಶಾಸ್ತ್ರದಲ್ಲಿನ ಒಂದು ಭಾಗವನ್ನು ಭಗವಂತನು ಹೆಚ್ಚಾಗಿ ಬೋಧಿಸಿದ್ದಾನೆ. ಯಾವ ದೇಶದಲ್ಲಿ, ಯಾವ ಭಾಗ ಅಗತ್ಯವೊ, ಯಾವ ಭಾಗವನ್ನು ಅಲ್ಲಿನ ಪ್ರಜೆಗಳು ಅರ್ಥ ಮಾಡಿಕೊಳ್ಳುತ್ತಾರೊ ಆ ಭಾಗವನ್ನೇ ಹೆಚ್ಚಾಗಿ ಬೋಧಿಸಿದ್ದಾನೆ. ಭಾರತ ದೇಶದಲ್ಲಿ ಮಾತ್ರ ಯೋಗಶಾಸ್ತ್ರದಲ್ಲಿನ ಮೂರು ಭಾಗಗಳನ್ನು ಬೋಧಿಸಿದ್ದಾನೆ. ಇಲ್ಲಿ ಮೂರು ಭಾಗಗಳಲ್ಲಿ ಯಾವ ಭಾಗವನ್ನು ಅನುಸರಿಸಿದರೂ ಮೋಕ್ಷವನ್ನು ಹೊಂದುವ ಅವಕಾಶವಿದೆ. ಭಾರತದೇಶ ಇಂದೂ ದೇಶ, ಎಂದರೆ ಜ್ಞಾನ ಹೊಂದಿದ ದೇಶ. ಜ್ಞಾನವನ್ನು ಅವಗಾಹನೆ ಮಾಡಿಕೊಳ್ಳುವ ಸಾಮರ್ಥ್ಯ ಇಂದೂಗಳಲ್ಲಿದೆ, ಆದ್ದರಿಂದ ಯೋಗಶಾಸ್ತ್ರವೊಂದರ ಮೂರು ಭಾಗಗಳನ್ನು ಸಂಪೂರ್ಣವಾಗಿ ಬೋಧಿಸಿದ್ದಾನೆ. ಯೋಗಶಾಸ್ತ್ರದಲ್ಲಿನ ಮೂರು ಭಾಗಗಳು ಕ್ರಮವಾಗಿ 1) ಜ್ಞಾನಯೋಗ ಅಥವಾ ಬ್ರಹ್ಮಯೋಗ. 2) ರಾಜಯೋಗ ಅಥವಾ ಕರ್ಮಯೋಗ. 3) ಭಕ್ತಿಯೋಗ ಅಥವಾ ವಿಶ್ವಾಸಯೋಗ ಎನ್ನುವವೂ ಸಹ ಇವೆ. ಮೂರು ಯೋಗ ಭಾಗಗಳು ಸೇರಿರುವ ಯೋಗಶಾಸ್ತ್ರ ಭಾರತದೇಶದಲ್ಲಿಯೇ ಹೊರಬೀಳುವುದು ನಮ್ಮ ಅದೃಷ್ಟವೆಂದು ಹೇಳಬಹುದು. ಮೂರು ಯೋಗಭಾಗಗಳಲ್ಲಿ ಸ್ವತಃವಾಗಿ ಪರಮಾತ್ಮ ಅಂಶವಾದ ಭಗವಂತನಿಂದ ಹೇಳಲ್ಪಟ್ಟ ಯೋಗಶಾಸ್ತ್ರವೇ **ಭಗವದ್ಗೀತಾ** ಗ್ರಂಥ.

ಸ್ವಚ್ಛವಾದ ಯೋಗಶಾಸ್ತ್ರವಾದ **"ಭಗವದ್ಗೀತೆ"** ಗ್ರಂಥದಲ್ಲಿಯೇ ಉಳಿದ ದೇಶಗಳಲ್ಲಿರುವ ಇತರ ಮತ ಗ್ರಂಥರೂಪದಲ್ಲಿ ಹೇಳಲ್ಪಟ್ಟ ಸಾರಾಂಶವೂ ಇದೆ. ಆದ್ದರಿಂದ ಭಗವದ್ಗೀತೆಯನ್ನು ಯಾವ ಮತದವರು ಯಾವ ದೇಶದವರು ಖಂಡಿಸಲಾರನು. ಅವರವರ ಮತದಲ್ಲಿನ ಸಾರಾಂಶ ಭಗವದ್ಗೀತೆಯಲ್ಲಿ ಒಂದು ಭಾಗವಾಗಿರುವುದೇ ಇದರ ಪ್ರತ್ಯೇಕತೆ. **ಎಷ್ಟೋ ಉತ್ತಮ ಯೋಗಶಾಸ್ತ್ರವಾದ ಭಗವದ್ಗೀತೆಯನ್ನೂ ಸಹ ಕೆಲವರು ರಚನಕಾರರು ಹೇಳಿದ ಭಾವದಿಂದ ಅದರ ಪ್ರಾಮುಖ್ಯತೆಗೆ** ಮುಸುಗುಬೀಳುವ ಅಪಾಯ ಏರ್ಪಟ್ಟಿದೆ. ಗೀತೆಗೆ ಭಾಷೆಯನ್ನು ಹೇಳಿದವರಿಗೆ ಭಗವದ್ಗೀತೆಯಲ್ಲಿನ ಮೂರು ಭಾಗಗಳು ತಿಳಿಯದೆಹೋಗಿರುವುದು, ಅವರಲ್ಲಿ ಪುರಾಣಗಳ ಭಾವಗಳು ಒಳಗೊಂಡಿರುವುದು ಮತ್ತು ಭಗವದ್ಗೀತೆ ಒಂದು ಶಾಸ್ತ್ರವೆಂಬ ವಿಷಯವೂ ಅವರಿಗೆ ತಿಳಿಯದೆಹೋಗಿರುವುದು, ಮೊದಲಾದ ಕಾರಣಗಳಿಂದ ಗೀತೆಯೊಂದರ ಬೆಲೆ ಭಾರತ ದೇಶದಲ್ಲಿಯೇ ತಿಳಿಯದಂತೆ ಹೋಗಿದೆ. ಆದ್ದರಿಂದ ಇತರ ಮತಸ್ಥರೂ ಸಹ ಗೀತೆಯನ್ನು ಕುರಿತು ಕೇವಲವಾಗಿ

ಮಾತನಾಡುವ ಅವಕಾಶವಿದೆ. ಕೆಲವರು ಇಂದೂಗಳೇ ಗೀತೆಯನ್ನು ಸಣ್ಣದೃಷ್ಟಿಯಿಂದ ನೋಡುತ್ತಿದ್ದಾರೆ. ಇಂದೂಮತಕ್ಕೆ ಮೂಲಗ್ರಂಥ ಭಗವದ್ಗೀತೆ ಎಂದು ತಿಳಿಯದವರು ಬಹಳ ಜನರು ಇಂದೂಮತವನ್ನು ಬಿಟ್ಟು ಖುರಾನ್, ಬೈಬಲ್ ಮೊದಲಾದ ಮೂಲ ಗ್ರಂಥಗಳಿರುವ ಇತರೆ ಮತಗಳೆಡೆ ಹೋಗುತ್ತಿದ್ದಾರೆ. ಎಲ್ಲಾ ಮತಗಳ ಸೂತ್ರಗಳು ಭಗವದ್ಗೀತೆಯಲ್ಲಿನ ಭಾಗವಾಗಿರುವಾಗ, ಇಂದೂಮತವನ್ನೇ ಬಿಟ್ಟು ಇತರ ಮತದೊಳಗೆ ಹೋಗುವುದಕ್ಕೆ ಕಾರಣ, ಭಗವದ್ಗೀತೆಯ ಸಾರಾಂಶವಾಗಲಿ, ಅದರ ಬೆಲೆಯಾಗಲಿ ಯಾರಿಗೂ ತಿಳಿಯದಿರುವುದೇ ಎಂದು ತಿಳಿಯುತ್ತಿದೆ. ಎಷ್ಟೋಜನ ಭಗವದ್ಗೀತೆಯನ್ನು ಅನೇಕ ಭಾಷೆಗಳಲ್ಲಿ ಅನುವಾದಿಸಿರುವಾಗ, **ಇಂದೂಮತದಲ್ಲಿ ಇಲ್ಲಿಯವರೆಗೂ ಸುಮಾರು ಮುನ್ನೂರು ಜನ ಸ್ವಾಮೀಜಿಗಳು ಗೀತೆಗೆ ಭಾಷ್ಯವನ್ನು ಬರೆದಿರುವಾಗ, ಗೀತಾಬೋಧಕರೆಂದು ಕಂಕಣ ಕಟ್ಟಿಕೊಂಡಿರುವವರು ಅನೇಕರಿರುವಾಗ, ಈ ಮತವನ್ನೇ ಬಿಟ್ಟುಹೋಗುವ ಪರಿಸ್ಥಿತಿ ಏಕೆ ಏರ್ಪಟ್ಟಿದೆಯೋ ಎಲ್ಲರೂ ಆಲೋಚಿಸಬೇಕಾದ ಮುಖ್ಯ ವಿಷಯ.** ಈಗಲೂ ಹಳ್ಳಿ ಪ್ರಾಂತಗಳಲ್ಲಿ ಗೀತೆ ಎಂದರೆ ಏನೋ ತಿಳಿಯದವರು ಶೇ. 90 ರಷ್ಟುಭಾಗ ಇದ್ದಾರೆ. ಇವುಗಳಿಗೆಲ್ಲ ಕಾರಣ ಗೀತೆ ಇಲ್ಲಿಯವರೆಗೂ ಸರಿಯಾದ ವಿಧಾನದಲ್ಲಿ ಶಾಸ್ತ್ರಬದ್ಧವಾಗಿ ಬೋಧಿಸದಿರುವುದೇ ಎಂದು ಹೇಳಬಹುದು. ಶಾಸ್ತ್ರವನ್ನು ಶಾಸ್ತ್ರವಾಗಿ ಅಲ್ಲದೆ ಪುರಾಣದಂತೆ ಬೋಧಿಸುವುದರಿಂದಲೂ, ಎಷ್ಟೋ ಪುರಾಣ ವಿಷಯುಗಳು ಗೀತೆಯುಲ್ಲಿ ಸೇರಿಸಿರುವುದರಿಂದಲೂ, ಮುಖ್ಯವಾಗಿ ಮುಕ್ತಿಗೋಸ್ಕರ ಭಗವದ್ಗೀತೆ ಎಂದು ತಿಳಿಸದೆ, ಭುಕ್ತಿ ಮತ್ತು ಜೀವನ ಸರಳಿಗೋಸ್ಕರ ಎಂದು ಗೀತಾಮಹತ್ವವನ್ನು ಸೇರಿಸುವುದರಿಂದ, ಯೋಗಶಾಸ್ತ್ರವಾದ ಗೀತೆ ಅದರ ಬೆಲೆಯನ್ನು ಕಳೆದುಕೊಂಡಿದೆ ಎಂದು ತಿಳಿಸುತ್ತಿದ್ದೇವೆ. ಭಗವದ್ಗೀತೆ ಧರ್ಮಯುಕ್ತವಾಗದೆ ಅಧರ್ಮಯುಕ್ತವಾಗಿ ಹೋದಂತೆ ಕಾಣಿಸುತ್ತಿದೆ ಎಂದು ತಿಳಿಸುತ್ತಿದ್ದೇವೆ.

ಭಗವಂತನು ತಿಳಿಸಿದ ಸ್ವಚ್ಚವಾದ, ಶಾಸ್ತ್ರಬದ್ದವಾದ, ಯೋಗಶಾಸ್ತ್ರವಾದ ಭಗವದ್ಗೀತೆ ಇಂತಹ ಸಮಯದಲ್ಲಿ ಪೂರ್ತಿ ಅಗತ್ಯ. ಯಾವ ಮತಸ್ಥರು, ಯಾವ ದೇಶಸ್ಥರು ವಿಮರ್ಶಿಸದಿರುವುದು, ಇದು ನಮ್ಮ ಮತಕ್ಕೆ ಸಂಬಂಧಿಸಿರುವುದೇ ಎಂದು ಇತರರೂ ಹೇಳಿಕೊಳ್ಳುವಂತೆ, ಅರ್ಥಭಾವಗಳಿಂದ ಕೂಡಿಕೊಂಡ ಭಗವದ್ಗೀತೆ ನಮಗೆ ಬೇಕು. ಹೇತುವಾದಿಗಳ, ನಾಸ್ತಿಕವಾದಿಗಳ ಸಂಶಯಗಳನ್ನು ಇಲ್ಲದಂತೆ ಮಾಡಿ ಅವರನ್ನೂ ಸಹ ಆಸ್ತಿಕರಿಗಿಂತ ದೊಡ್ಡದಾಗಿ ದೇವರನ್ನು ವಿಶ್ವಾಸಿಸುವಂತೆ ಮಾಡುವ ಭಗವದ್ಗೀತೆ ಎಷ್ಟೋ ಅಗತ್ಯ. ಅಂತಹ ಭಗವದ್ಗೀತೆಯನ್ನು ಗುರುತಿಸಬೇಕೆಂದರೆ ಮೊದಲು ಅದರ ವಿವರ, ಪರಿಚಯ ಸ್ವಲ್ಪವಾದರೂ ತಿಳಿಯಬೇಕು. ಗೀತೆಯನ್ನು ಕುರಿತು ಮೊದಲು

ತಿಳಿಯಬೇಕಾದ ವಿವರವೇ, ಈ **"ಗೀತಾ ಪರಿಚಯ"**. ಭಗವದ್ಗೀತೆ ಎಂದರೆ, ಏನೋ ತಿಳಿಯಬೇಕೆಂದರೆ ತಪ್ಪದೆ ಗೀತಾ ಪರಿಚಯ ಓದಬೇಕು. ಗೀತಾ ಪರಿಚಯವನ್ನು ಓದಿದ ನಂತರ ಗೀತೆಯನ್ನು ಸುಲಭವಾಗಿ ಅವಗಾಹನೆ ಮಾಡಿಕೊಳ್ಳಬಹುದು.

ಇಲ್ಲಿಯವರೆಗೂ ಶಾಸ್ತ್ರಗಳನ್ನು, ಪುರಾಣಗಳನ್ನು ಬಿಡಿಸಿ ಹೇಳಿದ ನಾವು ಶಾಸ್ತ್ರಬದ್ಧವಾಗಿ ಭಗವದ್ಗೀತೆಯನ್ನು ಬರೆಯುವುದು ನಡೆದಿದೆ. ಅದೇ **"ತ್ರೈತ ಸಿದ್ಧಾಂತ ಭಗವದ್ಗೀತೆ"**. ತ್ರೈತ ಸಿದ್ಧಾಂತ ಭಗವದ್ಗೀತೆ ಆಧ್ಯಾತ್ಮಿಕ ವಿದ್ಯೆಯಲ್ಲಿ ಒಂದು ದೊಡ್ಡ ತಿರುವಿನಂತದ್ದು, ಇದರಲ್ಲಿ ಎಷ್ಟೋ ಕಲ್ಪಿತ ಶ್ಲೋಕಗಳನ್ನು ನಿರ್ಧಾಕ್ಷಿಣ್ಯವಾಗಿ ತೆಗೆದುಹಾಕುವುದು ಒಂದು ಮುಖ್ಯ ವಿಷಯವಾದರೆ, ಗೀತೆಯನ್ನು 17 ಅಧ್ಯಾಯಗಳೇ ಎಂದು ಒಂದು ಅಧ್ಯಾಯವನ್ನು ತೆಗೆದು ಹಾಕುವುದು ಮತ್ತೊಂದು ಸಂಚಲನ ವಿಷಯ. ತ್ರೈತ ಸಿದ್ಧಾಂತ ಭಗವದ್ಗೀತೆಯಲ್ಲಿ ಸುಮಾರು 50 ಶ್ಲೋಕಗಳಿಗೆ ಭಾವ ಬದಲಾಯಿಸಿ ಬರೆಯುವುದು ಒಂದು ವಿಪ್ಲವಾತ್ಮಕ ವಿಷಯ. ಗೀತೆಯಲ್ಲಿನ ಪುರಾಣಗಳನ್ನು ಖಂಡಿಸಿ ಸ್ವಚ್ಛವಾಗಿ ಗೀತೆಯನ್ನು ಶಾಸ್ತ್ರವಾಗಿ ರೂಪಿಸಲಾಗಿದೆ. ಎಷ್ಟೋ ತಿರುವುಗಳು ತಿರುಗಿದ **"ತ್ರೈತ ಸಿದ್ಧಾಂತ ಭಗವದ್ಗೀತೆ"**ಯನ್ನು ಓದುವುದಕ್ಕಿಂತ ಮೊದಲು ಗೀತಾಪರಿಚಯವನ್ನು ಓದಿದರೆ ಗೀತೆ ಸುಲಭವಾಗಿ ಅರ್ಥವಾಗುತ್ತದೆ. ಗೀತೆಯಲ್ಲಿ ಇಲ್ಲಿಯವರೆಗೂ ಏನಿದೆಯೋ, ಏನಿರಬೇಕೋ ತಿಳಿಯುವುದಕ್ಕೆ, ಗೀತೆವೊಂದರ ಹೆಸರಿನಲ್ಲಿರುವ ಅರ್ಥವನ್ನು ಮೊದಲು ವಿವರಿಸಿಕೊಳ್ಳುತ್ತಾ, ಗೀತಾಪರಿಚಯವನ್ನು ಮುಂದುವರೆಸೋಣ.

**"ಗೀತೆ"** ಎಂದರೆ ಎಷ್ಟೋ ಜನ ಹಿರಿಯರು ಎಷ್ಟೋ ಅರ್ಥಗಳನ್ನು ಹೇಳಿದ್ದಾರೆ. ಆದರೆ ನಮ್ಮೆಲ್ಲರಿಗೂ ಸುಲಭವಾಗಿ ತಿಳಿದ ಪದ್ಧತಿಯಲ್ಲಿ **"ಗೀತೆ" ಎಂದರೆ "ಹದ್ದು"**(ಮೇರೆ) ಎಂದು ತಿಳಿದಿದೆ. ರಾಮಾಯಣದಲ್ಲಿ ಒಂದು ದಿನ ಲಕ್ಷ್ಮಣನೂ ಸಹ ಈ ಗೆರೆ(ಗೀತೆ)ಯನ್ನು ದಾಟಬೇಡವೆಂದು ಒಂದು ಹದ್ದನ್ನು ಏರ್ಪಡಿಸಿ ಅರಣ್ಯದೊಳಗೆ ಹೋಗಿದ್ದಾನೆಂದು ಎಲ್ಲರಿಗೂ ತಿಳಿದಿದೆ. ಹಾಗೇ ಈ ಗೀತೆಯಲ್ಲಿದ್ದರೆ ಜೀವನಕ್ಕೆ ಅರ್ಥ ಇರುವುದೆಂದು, ಈ ಗೆರೆಯನ್ನು ದಾಟಿದರೆ ಮಾನವತ್ವಕ್ಕೆ ಅರ್ಥ ಇರುವುದಿಲ್ಲವೆಂದು ಭಗವಂತನು ಏರ್ಪಡಿಸಿರುವ ಹದ್ದನ್ನೇ **"ಭಗವದ್ಗೀತೆ"** ಎನ್ನುತ್ತಿದ್ದೇವೆ. ಲಕ್ಷ್ಮಣನು ಆ ದಿನ ಕಡ್ಡಿಯಿಂದ ಭೂಮಿ ಮೇಲೆ ಗೆರೆ ಗೀಚಿ ಇದರ ಒಳಗಿದ್ದರೆ ರಕ್ಷಣೆ ಇರುತ್ತದೆ ಎಂದು, ಅಪಾಯ ಇರುವುದಿಲ್ಲವೆಂದು, ಇದನ್ನು ದಾಟಬಾರದೆಂದು ಸೀತೆಗೆ ಹೇಳಿದ್ದಾನೆಂದು ಚರಿತ್ರೆಯಲ್ಲಿ ಇದೆ. ಹಾಗೆ ಭಗವಂತನಾಗಿ ಉದ್ಭವಿಸಿದ ಪರಮಾತ್ಮ ಮಾತುಗಳಿಂದ ಜೀವನಕ್ಕೆ ಹದ್ದು ಏರ್ಪಡಿಸಿ ಈ ಹದ್ದು ಮೀರಿದರೆ ಮಾನವತ್ವಕ್ಕೆ ಅರ್ಥವೇ ಇಲ್ಲದಂತೆ ಹೋಗುತ್ತದೆಂದು,

ಈ ಹದ್ದಿನಲ್ಲಿ ಇರುವವರೆಗೂ ಜೀವನಕ್ಕೆ ಅರ್ಥ ಇರುತ್ತದೆಂದು, ಈ ಗೀತೆಯೊಳಗಿರುವವನಿಗೆ ದೈವತ್ವ ಪ್ರಾಪ್ತಿಸುತ್ತದೆ ಎಂದು ತಿಳಿಸುತ್ತಾ ಕ್ರಮಪದ್ಧತಿಯಾಗಿ ಗೀಚಿರುವ ಗೀತೆಯೇ **"ಭಗವದ್ಗೀತೆ"**.

ಗೀತೆ ಎಂದರೆ ಹದ್ದು ಎಂದು, ರೇಖೆ ಎಂದೂ, ಗೀಚಲ್ಪಟ್ಟ ಗೀತೆ ಎಂದು ನಾವು ಹೇಳಿದರೆ ಅರ್ಥಮಾಡಿಕೊಳ್ಳದ ಅಪ್ರಬುದ್ಧರು ಕೆಲವರು "ಅರ್ಥವು ಯಾವ ನಿಘಂಟಿನಲ್ಲಿದೆ? ನಿಮಗೆ ಯಾರು ಹೇಳಿದ್ದಾರೆ? ನಮ್ಮಂತಹ ವಿಜ್ಞಾನಿಗಳು ನಗುತ್ತಾರೆಂಬ ಅರಿವೂ ಸಹ ಇಲ್ಲದಂತೆ ಹೇಳಿದ್ದೀರ!" ಎಂದು ಹೀಯಾಳಿಸಿ ನಮಗೆ ಪತ್ರಗಳೂ ಸಹ ಬರೆದಿದ್ದಾರೆ. ಅಂತವರಿಗೆಲ್ಲ ಹೇಳುವ ಉತ್ತರ ಏನೆಂದರೆ! ಇತರರು ಇದಕ್ಕಿಂತ ಮೊದಲು ಬರೆದ ವಿಷಯವನ್ನು, ನಾವು ಹೇಳುವುದಾಗಲಿ, ಬರೆಯುವುದಾಗಲಿ ಎಂದಿಗೂ ಇರುವುದಿಲ್ಲ. ಆದ್ದರಿಂದ ನಮ್ಮ ರಚನೆಯಲ್ಲಿನ ಪುಸ್ತಕಗಳಲ್ಲಿ ಎಲ್ಲ ಹೊಸ ವಿಷಯ ಗಳಾಗಿಯೇ ಕಾಣಿಸುತ್ತವೆ. ಕೃಷ್ಣನು ಗೀತೆಯನ್ನು ಹೇಳಿದ್ದಾನೆ, ಅದು ಅದಕ್ಕಿಂತ ಮೊದಲು ಯಾರು ಹೇಳಿರುವುದು ಅಲ್ಲ, ಬರೆದಿರುವುದು ಅಲ್ಲ. ಯೇಸುಪ್ರಭು ತನ್ನ ಜೀವನದಲ್ಲಿ ಕೆಲವು ಮಾತುಗಳು ಹೇಳಿದ್ದಾನೆ, ಅವು ಆತನಿಗಿಂತ ಮೊದಲು ಯಾರು ಹೇಳಲಿಲ್ಲ. ಕೃಷ್ಣನಾಗಲಿ, ಯೇಸು ಪ್ರಭುವಾಗಲಿ ಹೇಗೆ ಯಾರನ್ನು ಅನುಸರಿಸಿ ಹೇಳಲಿಲ್ಲವೊ, ಹಾಗೆ ನಾವು ಯಾರನ್ನು ಅನುಸರಿಸಿ ಹೇಳಲಿಲ್ಲ. ನಮ್ಮಿಂದ ಬರೆದಿರುವ ರಚನೆಗಳೆಲ್ಲ ಪ್ರತ್ಯೇಕತೆಯನ್ನು ಹೊಂದಿರುವವೆಂದು ಎಲ್ಲರೂ ಗ್ರಹಿಸಬಹುದು. ಅದೇ ಪದ್ಧತಿ ಪ್ರಕಾರ ಗೀತೆ ಎಂದರೆ ಇನ್ನೂ ಪ್ರತ್ಯೇಕವಾಗಿ ಏನು ಹೇಳುತ್ತಿದ್ದೇವೆಂದರೆ!.

ಗೀತೆ ಎಂದರೆ ಗೀಚಲ್ಪಟ್ಟಿರುವುದು. ಯಾರು ಗೀಚಿದ್ದಾರೆ ಎಂದು ಪ್ರಶ್ನಿಸಿಕೊಂಡರೆ, ದೇವರಿಂದ ಗೀಚಲ್ಪಟ್ಟಿದೆ ಎಂದು ಉತ್ತರ ತಿಳಿಯುತ್ತಿದೆ. ದೇವರು ಕಾಣಿಸುವವನು ಅಲ್ಲ, ಆತನು ಹೇಗೆ ಗೀಚಿದ್ದಾನೆಂದು ಪ್ರಶ್ನೆ ಬರಬಹುದು. ಅದಕ್ಕೆ ಉತ್ತರ ಏನೆಂದರೆ! ಶರೀರದಲ್ಲಿನ ಜೀವಾತ್ಮವೂ ಸಹ ಕಾಣಿಸುತ್ತಿಲ್ಲ. ಆದರೂ ನಮ್ಮ ಶರೀರದಲ್ಲಿ ಕಾಣಿಸದ ನಾವು (ಜೀವಿಗಳು) ಶರೀರಕ್ಕಿರುವ ಹಸ್ತದ ಮೂಲಕ ಗೆರೆಗಳನ್ನು ಗೀಚುತ್ತಿದ್ದೇವಲ್ಲವೆ! ಹಾಗೆಯೇ ಕಾಣಿಸದ ದೇವರು ಪ್ರಕೃತಿ ಎನ್ನುವ ತನ್ನ ಶರೀರದಿಂದ ಗೆರೆಯನ್ನು ಗೀಚಿದ್ದಾನೆ, ಎಂದು ನೀನು ಏಕೆ ತಿಳಿದುಕೊಳ್ಳಬಾರದು. ಈಗ ಮತ್ತೊಂದು ಪ್ರಶ್ನೆ ಬರಬಹುದು. ಜೀವಾತ್ಮ ಕಾಣಿಸಲಿಲ್ಲ, ದೇವರೂ ಸಹ ಕಾಣಿಸಲಿಲ್ಲ. ಆದರೂ ಕಾಣಿಸುವ ಶರೀರದಿಂದ ಗೀಚಿದ ಗೀತೆ ಕಾಣಿಸುತ್ತದೆ ಅಲ್ಲವೆ! ಹಾಗೆ ಕಾಣಿಸುವ ಪ್ರಕೃತಿಯಿಂದ ರಚಿಸಿದ ಗೆರೆ ಕಾಣಿಸಬೇಕು ಅಲ್ಲವೆ! ಹಾಗೆ ಎಲ್ಲಿಯೂ ಕಾಣಿಸಲಿಲ್ಲವೇ ಎಂದು ಪ್ರಶ್ನಿಸಬಹುದು.



**ದೇವರ ಗೀತೆ**

1) **ಇದು ದೇವರಿಂದ ರಚಿಸಲ್ಪಟ್ಟ ಗೀತೆ, ಈ ಗೀತೆದಾಟಿ ಯಾವ ಧರ್ಮ ಇಲ್ಲ.**

2) **ಈ ಗೀತೆಯಲ್ಲಿಯೇ ಭಗವಂತನು ಹೇಳಿದ ಶ್ಲೋಕಗಳೆಲ್ಲವು ಒಳಗೊಂಡಿವೆ.**

3) **ಈ ಗೀತೆಗಿಂತ ಹೊರಗಡೆ ಯಾರು ಭಗವದ್ಗೀತೆಯಲ್ಲಿನ ಒಂದು ಶ್ಲೋಕವನ್ನೂ ಸಹ ತೋರಿಸಲಾರರು.**

4) **ಶ್ರೀ ಭಗವದ್ಗೀತೆಯೇ ಈ ಗೀತೆ, ಈ ಗೀತೆಯೇ ಶ್ರೀ ಭಗವದ್ಗೀತೆ.**

5) **ದೇವರು ಸೃಷ್ಟಿಸಿರುವುದೇ ಶರೀರ ಹದ್ದು, ಭಗವಂತನು ಹೇಳಿರುವುದೇ ಭಗವದ್ಗೀತೆ.**

ತಿಳುವಳಿಕೆ ಇರುವವರಿಗೆ ಮತ್ತೊಂದು ವಿಧವಾಗಿ ಯೋಚನೆಬಂದು, ಕೃಷ್ಣನೂ ಸಹ ನಮ್ಮಂತಹ ಶರೀರ ಇರುವ ಮನುಷ್ಯನೇ, ಆತನ ಶರೀರದ ಮೂಲಕ ಬಂದಿರುವ ಗೀತೆ ಪುಸ್ತಕ ರೂಪದಲ್ಲಿ ಇದೆ. ದೇವರು ನಮ್ಮಂತಹ ಮನುಷ್ಯ ಅಲ್ಲದಿದ್ದರು ಪ್ರಕೃತಿ ಎನ್ನುವ ಆತನ ಶರೀರದ ಮೂಲಕ ಬಂದಿರುವ ಗೀತೆ ಯಾವ ರೂಪದಲ್ಲಿಯೂ ಕಾಣಿಸಲಿಲ್ಲವೇ ಎಂದು ಪ್ರಶ್ನಿಸಬಹುದು. ಈ ಪ್ರಶ್ನೆಗೆ ಉತ್ತರವೇನು, ಯಾವ ವಿಧವಾಗಿ ಅರ್ಥ ಮಾಡಿಕೊಳ್ಳಬೇಕೋ ಕೆಳಗೆ ನೋಡೋಣ.

**ಶ್ರೀ ಕೃಷ್ಣನಿಂದ ಗೀಚಲ್ಪಟ್ಟ ಭಗವದ್ಗೀತೆ ಎನ್ನುವ ಗ್ರಂಥ ಕೆಲವರ ಹತ್ತಿರ ಇರಬಹುದು ಕೆಲವರ ಹತ್ತಿರ ಇಲ್ಲದಿರಬಹುದು. ದೇವರಿಂದ ಗೀಚಲ್ಪಟ್ಟ ಗೀತೆ ಪ್ರತಿಯೊಬ್ಬರ ಹತ್ತಿರ ಇದೆ.** ಮಾನವರ ಹತ್ತಿರವೇ ಅಲ್ಲದೆ, ಸಮಸ್ತ ಜೀವರಾಶಿಗಳ ಹತ್ತಿರವೂ ಸಹ ಇದೆ. ದೇವರು ಗೀಚಿದ ಗೀತೆ ಅಥವಾ ಹದ್ದು ಜೀವಾತ್ಮನಾದ ನಿನ್ನನ್ನು ಬಿಟ್ಟು ಇಲ್ಲ. ಆ ಗೀತೆ

ಯಾವಾಗಲೂ ನಿನ್ನನ್ನು ಅಂಟಿಕೊಂಡು ಇದೆ. ದೇವರು ಗೀಚಿದ ಹದ್ದು ಏನೋ ನಂತರ ಚಿತ್ರದಲ್ಲಿ ನೋಡಿರಿ.

ಭೂಮಿ ಮೇಲೆ ಎಷ್ಟೊ ದೇಶಗಳು ಇವೆ. ಪ್ರತಿ ದೇಶಕ್ಕೂ ಆ ದೇಶದ ಸರಹದ್ದು ರೇಖೆ ಇರುತ್ತದೆ. ಸರಹದ್ದು ರೇಖೆಯೊಳಗಿರುವುದು ಇಂತಹ ದೇಶವೆಂದೊ, ಇಂತಹ ರಾಜ್ಯವೆಂದೊ ಹೇಳುತ್ತೇವೆ. ಈ ಪದ್ಧತಿ ಪ್ರಕಾರ ಭಾರತ ದೇಶದ ಸುತ್ತಾ ಒಂದು ಹದ್ದು ಇದೆ. ಹಾಗೆ ಪ್ರಪಂಚದಲ್ಲಿ ಎಷ್ಟೋ ಜೀವರಾಶಿಗಳು ಇವೆ. ಒಂದೊಂದು ಜೀವರಾಶಿ ಶರೀರ ಒಂದೊಂದು ವಿಸ್ತೀರ್ಣಹೊಂದಿದೆ. ಈ ಪದ್ಧತಿ ಪ್ರಕಾರ ಮಾನವನ ಶರೀರವೂ ಸಹ ಒಂದು ವಿಸ್ತೀರ್ಣ ಹೊಂದಿದೆ. ದೇಶಕ್ಕೆ ಹದ್ದು ಇದ್ದಂತೆ, ಮಾನವನ ಶರೀರಕ್ಕೂ ಸಹ ಹದ್ದು ಇದೆ. ದೇಶವೊಂದರ ಸರಹದ್ದಿನೊಳಗೆ ಆ ದೇಶದ ಕಾನೂನು, ರಾಜ್ಯಾಂಗ ಇರುತ್ತದೆ, ಹಾಗೆಯೇ ಶರೀರದ ಗೆರೆಯೊಳಗೆ ಆ ಶರೀರದ ನಿಬಂಧನ ರಾಜ್ಯಾಂಗ ಇರುತ್ತದೆ. ದೇಶವೊಂದರ ಕಾನೂನು, ರಾಜ್ಯಾಂಗ ಆ ದೇಶದ ಪರಿಧಿ ಎನ್ನುವ ಹದ್ದಿನೊಳಗೆ ಇರುತ್ತದೆ. ಹಾಗೆಯೇ ಶರೀರ ಒಂದರ ನಿಬಂಧನ ರಾಜ್ಯಾಂಗ ಆ ಶರೀರವೊಂದರ ಪರಿಧಿ ಎನ್ನುವ ಹದ್ದಿನಲ್ಲಿಯೇ ಇರುತ್ತದೆ. ದೇಶಕ್ಕೆ ಒಬ್ಬ ರಾಜನಿದ್ದಂತೆ, ಶರೀರಕ್ಕೂ ಸಹ ಜೀವಾತ್ಮನೆನ್ನುವ ರಾಜನಿದ್ದಾನೆ. ದೇಶದಲ್ಲಿನ ರಾಜನಿಗೆ ಸ್ವಲ್ಪ ಪರಿವಾರ ಇದ್ದಂತೆ, ಶರೀರದಲ್ಲಿನ ಜೀವಾತ್ಮನೆಂಬ ರಾಜನಿಗೂ ಸಹ 25 ಜನರ ಪರಿವಾರ ಇದೆ. ದೇಶದಲ್ಲಿನ ರಾಜ ಒಂದು ಕಡೆ ಕುಳಿತುಕೊಂಡು ತಾನು ಕದಲದಂತೆ ಇದ್ದು ತನ್ನ ಪರಿವಾರದಿಂದ ರಾಜ್ಯಪರಿಪಾಲನೆ ಮಾಡುತ್ತಿರುವಂತೆ, ಶರೀರದಲ್ಲಿನ ಜೀವಿಯು ಒಂದು ಕಡೆ ಕದಲದಂತೆ ಪರಿವಾರದಿಂದ ಶರೀರ ಪರಿಪಾಲನೆ ಮಾಡುತ್ತಿದ್ದಾನೆ. **ದೇಶ ಪರಿಧಿಯಲ್ಲಿನ ರಾಜ್ಯಾಂಗವನ್ನು ತಿಳಿಸುವುದು ಕಾನೂನು. ಹಾಗೆಯೇ ಶರೀರ ಪರಿಧಿಯಲ್ಲಿನ ಯಂತ್ರಾಂಗವನ್ನು ತಿಳಿಸುವುದು ನಿಬಂಧನೆ ಅಥವಾ ಧರ್ಮ**. ಕಾನೂನು ದೇಶ ಪರಿಧಿಯಲ್ಲಿ ಇದ್ದಂತೆ, ಧರ್ಮ ದೇಹದ ಪರಿಧಿಯಲ್ಲಿದೆ. ಕಾನೂನಿನಲ್ಲಿ ನ್ಯಾಯ, ಅನ್ಯಾಯ ಇದ್ದಂತೆ, ಧರ್ಮದಲ್ಲಿ ಪಾಪ, ಪುಣ್ಯಗಳು ಇವೆ. ದೇಶದಲ್ಲಿನ ಕಾನೂನು ನ್ಯಾಯ ಅನ್ಯಾಯಗಳನ್ನು ನಿರ್ಣಯಿಸಿದಂತೆ, ಶರೀರದಲ್ಲಿನ ಧರ್ಮ ಪಾಪಪುಣ್ಯಗಳನ್ನು ನಿರ್ಣಯಿಸುತ್ತದೆ.

ಸರಹದ್ದನ್ನು ಪರಿಶೀಲಿಸಿದರೆ ಅದು ಯಾವ ದೇಶವಾಗಿದೆ ಎಂದು, ಅದರಲ್ಲಿನ ಕಾನೂನು ಏನೆಂಬುವುದು ತಿಳಿಯುತ್ತದೆ. ಹಾಗೆಯೇ ಶರೀರಹದ್ದನ್ನು ಪರಿಶೀಲಿಸಿದರೆ ಅದು ಯಾವ ದೇಹವಾಗಿರುವುದು, ಅದರಲ್ಲಿನ ಧರ್ಮ ಏನೆಂಬುವುದು ತಿಳಿಯುತ್ತದೆ. ಕಾನೂನು ಏನೆಂಬುವುದು ದೇಶದ ಹದ್ದನ್ನು ನೋಡಿದರೆ ತಿಳಿಯುತ್ತದೆ. ನಿನ್ನ ಶರೀರದೊಳಗಿನ ಧರ್ಮಗಳೇನೋ ತಿಳಿಯಬೇಕೆಂದರೆ ಶರೀರದ ಗೀತೆ (ಗೆರೆ) ಯೊಳಗೇ

ತಿಳಿಯಬೇಕು. ದೇಹದೊಳಗಿರುವ ಸ್ಥೂಲ ಸೂಕ್ಷ್ಮ ವಿವರಗಳನ್ನು ತಿಳಿಸುವುದೇ ಗೀತೆ, ಅದೇ ಭಗವದ್ಗೀತೆ. **ಭಗವದ್ಗೀತೆಯಲ್ಲಿನ ಪ್ರತಿ ಶ್ಲೋಕ ಶರೀರ ಪರಿಧಿಯಲ್ಲಿನ ಧರ್ಮಗಳನ್ನೇ ತಿಳಿಸಿವೆ ಹೊರತು ಯಾವ ಶ್ಲೋಕವು ಶರೀರ ಪರಿಧಿಯನ್ನು ದಾಟಿ ಹೇಳಲಿಲ್ಲ.** ಶರೀರ ಪರಿಧಿಯೇ ಧರ್ಮಗಳಿಗೆ ನಿಲಯವಾಗಿದೆ, ಆದ್ದರಿಂದ ಪರಿಧಿಯೊಳಗೆ ಹೇಳಲ್ಪಟ್ಟಿರುವುದನ್ನು ಗೀತೆ ಎಂದಿದ್ದಾರೆ. ದೇವರು ಭಗವಂತನ ರೂಪದಲ್ಲಿ ಹೇಳಿರುವುದಾದ್ದರಿಂದ ಇದನ್ನು ಭಗವದ್ಗೀತೆ ಎಂದಿದ್ದಾರೆ.

ವಿಚಕ್ಷಣ ದೃಷ್ಟಿಯಿಂದ ನೋಡಿದರೆ ನಿನ್ನ ಗೆರೆಯೊಳಗಿರುವುದೇ ಭಗವದ್ಗೀತೆ ಎಂಬ ಗೀತೆಯಲ್ಲಿದೆ. ದೇವರು ಮಾನವನ ಊಹೆಗೆ ಎಷ್ಟೋ ಸಿದ್ಧಾಂತಗಳನ್ನು ತಿಳಿಸಿದಂತೆ "ಗೀತೆ" ಎನ್ನುವ ಪದವನ್ನೂ ತಿಳಿಸಿದ್ದಾನೆ. ಗೀತೆ ಎಂದರೆ ರೇಖೆ ಎಂದೂ, ಹದ್ದು ಎಂದೂ, ಗೀಚಲ್ಪಟ್ಟ ಗೆರೆ ಎಂದೂ ಬರೆಸಿದ್ದಾನೆ. ಹಾಗೆ ಬರೆಯಿಸುವುದರಿಂದ ಎಂದಿಗಾದರೂ ಮಾನವನ ಬುದ್ಧಿಗೆ ಸಂಶಯ ಬಂದು ಇದು ಯಾವ ಗೀತೆ? ಯಾವ ಹದ್ದು? ಎಂದು ಪ್ರಶ್ನಿಸಿಕೊಂಡು ಉತ್ತರಕ್ಕೋಸ್ಕರ ಎದುರುನೋಡುತ್ತಾನೆಂದು ದೇವರ ಉದ್ದೇಶ. ಹಾಗೆ ನೋಡುವವನಿಗೆ ಗೀತೆಯಲ್ಲಿನ ಧರ್ಮಗಳೆಲ್ಲ ಅರ್ಥವಾಗುತ್ತವೆಂದು ಆತನ ಭಾವ. ನಮ್ಮ ಒಳ್ಳೆಯದನ್ನು ಬಯಸಿ ದೇವರು ಗೀತೆಯನ್ನು ಗೀತೆಯಾಗಿಯೇ ಪರಿಚಯ ಮಾಡಿದರೆ, ಅದನ್ನು ತಿಳಿದುಕೊಳ್ಳೋಣವೆಂಬ ಯೋಚನೆ ಕೆಲವರ ಬುದ್ಧಿಗೆ ಬಾರದೆ, ಯಾವ ನಿಘಂಟಿನಲ್ಲಿದೆ ಈ ಅರ್ಥ ಎಂದು ಕೇಳಿದರೆ, ಅವರು ರಾಕ್ಷಸ ಜಾತಿಯವರೋ, ದೇವತೆಗಳ ಜಾತಿಯವರೋ, ಅವರನ್ನು ಏನನ್ನಬೇಕೋ ನೀವೇ ಯೋಚಿಸಿ. ನಿಘಂಟುಗಳಲ್ಲಿ (ಡಿಕ್ಷನರಿ) ಪ್ರಪಂಚ ಅರ್ಥಗಳಿರಬಹುದು. ಆದರೆ ಪರಮಾತ್ಮನ ಭಾವಗಳಿರುವುದಿಲ್ಲ. ಹಾಗಿದ್ದರೆ ದೇವರು ಭೂಮಿ ಮೇಲಕ್ಕೆ ಬಂದು ತನ್ನ ಜ್ಞಾನ ಇದು ಎಂದು ಹೇಳಬೇಕಾದ ಅವಶ್ಯಕತೆ ಇಲ್ಲ. ಧರ್ಮಗಳು ಅಧರ್ಮಗಳಾಗಿ ಬದಲಾದಾಗ ದೇವರು ತನ್ನ ಜ್ಞಾನವನ್ನು ತಿಳಿಸುತ್ತೇನೆಂದಿದ್ದಾನೆ. ದೇವರು ಭಗವಂತನಾಗಿ ಭೂಮಿ ಮೇಲಕ್ಕೆ ಬಂದಾಗ ಅಧರ್ಮಪರರಿಗೆ ಧರ್ಮಗಳು ರುಚಿಸುವುದಿಲ್ಲ. ಆದ್ದರಿಂದ ಶ್ರೀಕೃಷ್ಣನ ಜನ್ಮದಲ್ಲಿಯೂ, ಯೇಸುಪ್ರಭು ಜನ್ಮದಲ್ಲಿಯೂ ಆತನ ಮಾತನ್ನು ಧಿಕ್ಕರಿಸಿದವರು, ಆತನಿಗೆ ಆತಂಕವನ್ನುಂಟು ಮಾಡಿದವರು ಎಷ್ಟೋ ಜನ ಇದ್ದಾರೆ. ಆ ದಿನವೇ ದಿಕ್ಕರಿಸಿದವರಿರುವಾಗ ಈದಿನ ನಮ್ಮಂತಹವರನ್ನು ತಪ್ಪು ಹಿಡಿಯುವವರು ಎಷ್ಟೋ ಜನ ಇರಬಹುದು. ಅಂತವರನ್ನು ದೃಷ್ಟಿಯಲ್ಲಿಟ್ಟುಕೊಳ್ಳದೆ, ದೈವಜ್ಞಾನದ ಮೇಲೆ ಶ್ರದ್ಧೆ ಇರುವವರಿಗೆ ವಾಸ್ತವ ಜ್ಞಾನ ತಿಳಿಸಬೇಕೆಂಬ ಉದ್ದೇಶದಿಂದ, **ಗೀತೆ ಎಂದರೆ ದೇವರಿಂದ ಗೀಚಲ್ಪಟ್ಟ ಗೀತೆ(ಗೆರೆ)** ಎಂದು ಅರ್ಥ ಹೇಳುತ್ತಿದ್ದೇವೆ.

ಧರ್ಮಗಳೆನ್ನುವ ಮಾತುಗಳಿಂದ ಭಗವಂತನು ಗೀಚಿದ ಗೀತೆಯನ್ನು ನಿಮಗೆ ತಿಳಿಸಬೇಕೆಂದುಕೊಂಡಿದ್ದೇವೆ. ಆದರೆ ಮುಖ್ಯವಾಗಿ ಗಮನಿಸುವುದೇನೆಂದರೆ ಆರೋಗ್ಯವಂತನಿಗೆ ಅಲ್ಲದೆ ರೋಗ ಇರುವವನಿಗೆ ವೈದ್ಯನ ಅವಶ್ಯಕತೆ ಇರುವಂತೆ, ಇಲ್ಲಿಯವರೆಗೂ ಆತ್ಮವಾದಿಗಳಿಗಲ್ಲದೆ ಆಸ್ತಿಕರಿಗೂ, ನಾಸ್ತಿಕರಿಗೂ, ಹೇತುವಾದಿಗಳಿಗೂ ಸಹ ನಮ್ಮ ಭೋಧನೆಗಳು ಹೆಚ್ಚಾಗಿ ಉಪಯೋಗವಾಗಿವೆ. ಕೆಲವರು ಆಸ್ತಿಕರಿಂದ ಕೆಲವು ವಿಮರ್ಶೆಗಳು ಬಂದರೂ, ಹೇತುವಾದಿಗಳು, ಆಸ್ತಿಕರು, ನಾಸ್ತಿಕರು ನಮ್ಮ ಬೋಧನೆಗಳಿಂದ ನಿಜವಾದ ಆತ್ಮವಾದಿಗಳಾಗಿ ಬದಲಾಗುವುದು ನಮಗೆ ಉತ್ಸಾಹವನ್ನು ಕೊಟ್ಟಿದೆ. ಆದ್ದರಿಂದಲೇ ಹೇತುವಾದಿಗಳಿಗೂ ನಾಸ್ತಿಕ, ಆಸ್ತಿಕರಿಗೂ ಸಹ ಅರ್ಥವಾಗುವಂತೆ, ಅವರೂ ದೈವತ್ವವನ್ನು ತಿಳಿದುಕೊಳ್ಳುವಂತೆ, ಭಗವದ್ಗೀತೆ ಎಲ್ಲರಿಗೂ ಉತ್ತರವಾಗಿ ನಿಲ್ಲುವಂತೆ ಬರೆಯುತ್ತಿದ್ದೇವೆ. ನಾವು ಬರೆಯುವ ಭಗವದ್ಗೀತೆಯಲ್ಲಿ ಎಷ್ಟೋ ಹೊಸ ಅದ್ಭುತ ಆಶ್ಚರ್ಯಕರ ವಿಷಯಗಳು ಹೊರಬೀಳುತ್ತವೆಂದು ಮೊದಲೇ ಹೇಳುತ್ತಿದ್ದೇವೆ.

ಎಷ್ಟೋ ಪ್ರಶಂಸೆಗಳು ಮತ್ತೆಷ್ಟೋ ವಿಮರ್ಶೆಗಳು ನೋಡಿದ ನಾವು ಅವುಗಳೆಲ್ಲವನ್ನೂ ಯೋಚಿಸಿ, ಸತ್‌ವಿಮರ್ಶೆಗಳಿಗೆಲ್ಲಾ ಸಹಿಸಿಕೊಳ್ಳುವಂತೆ, ಸತ್ಯವನ್ನೇ ಪ್ರಕಟಿಸುವುದು ಒಳ್ಳೆಯದೆಂದು ನಮ್ಮಲ್ಲಿನ ಚಿತ್ತವು ನಿರ್ಣಯಿಸುವುದು ನಮಗೆ ಸಂತೋಷ. ಗೀತೆಯಲ್ಲಿ ಶ್ರೀಕೃಷ್ಣನು ಒಂದು ಮಾತು ಹೇಳಿದ್ದಾನೆ. ಅದೇನೆಂದರೆ ಮಾನವನಿಗೆ ಬೇಕಾದ ಸುಖಗಳಿಗೋಸ್ಕರವೇ ವೇದಾರ್ಥಗಳಿವೆಯೆಂದು, ಕಷ್ಟಗಳು ಕೊನೆಗೊಂಡು ಸುಖಗಳು ಪ್ರಾಪ್ತಿಸುವುದಕ್ಕೆ ವೇದಗಳು ಹೀಗೆ ಹೇಳುತ್ತೀವೆ ಎಂದು, ಎಷ್ಟೋ ವಿಧಗಳ ಉಪನ್ಯಾಸಗಳನ್ನು ಕೆಲವರು ವೇದವಾದಿಗಳು ಜೇನಿನಹಾಗೆ ಸಿಹಿಯಾಗಿರುವಂತೆ ಬೋಧಿಸುತ್ತಿದ್ದಾರೆಂದು, ಆ ಮಾತುಗಳು ಕೇಳಿದವರು ಅವರ ಸುಖಗಳಿಗೋಸ್ಕರವೇ ದೈವ ಪ್ರಾರ್ಥನಾ ಕ್ರಿಯೆಗಳು ಮಾಡುತ್ತಿದ್ದಾರೆಂದು, ಶ್ರೀಕೃಷ್ಣನು ಹೇಳಿದಂತೆ ಅಂತಹ ಸಿಹಿಯಾದ ಮಾತುಗಳು ನಮ್ಮ ಬೋಧನೆಗಳಲ್ಲಿ ಇಲ್ಲದ ಕಾರಣ ಕೆಲವರಿಗೆ ರುಚಿಸುವುದಿಲ್ಲ. **"ಸುಖಗಳಲ್ಲಿ ಆಸಕ್ತಿ ಇರುವವರು ಅವರ ಸುಖಗಳಿಗೋಸ್ಕರವೇ ಪೂಜೆಗಳು ಮಾಡುತ್ತಾರಾಗಲಿ ಅವರಿಗೆ ಆತ್ಮಜ್ಞಾನ ಸರಿ ಅನಿಸುವುದಿಲ್ಲ"** ಎಂದು ಶ್ರೀಕೃಷ್ಣನು ಹೇಳಿದ್ದಾನೆ. ಆ ವಿಧವಾಗಿಯೆ ಈಗಿನ ಪ್ರಜೆಗಳು ಬಹಳ ಜನರು ಅದೇ ಮಾರ್ಗದಲ್ಲಿದ್ದಾರೆ. ಅಷ್ಟೇ ಅಲ್ಲದೆ ಬೋಧಿಸುವ ಬೋಧಕರೂ ಸಹ ಭಗವದ್ಗೀತಾ ಶ್ಲೋಕಗಳನ್ನು ಮಂತ್ರಗಳಂತೆ ಜಪಿಸುತ್ತಿದ್ದಾರೆ. ಆದರೆ ಅದರಲ್ಲಿನ ಉನ್ನತ ಭಾವವನ್ನು ಗ್ರಹಿಸದಂತೆ ಇದ್ದಾರೆ.

ನಮ್ಮ ಬೋಧನೆಗಳು ಪ್ರಪಂಚ ವಿಷಯಗಳಿಗೆ ಯಾವುದೇ ಉಪಯೋಗ ವಾಗುವುದಿಲ್ಲ. ಆದ್ದರಿಂದ ಇಂದಿನ ಆಸೆಗಳ ವಾತಾವರಣದಲ್ಲಿ ನಮ್ಮ ಬೋಧನೆಗಳಿಗೆ

ಆದರಣೆ ಬಹಳ ಕಡಿಮೆ ಎಂದೂ ನಮಗೆ ತಿಳಿದಿದೆ. ಆದರೂ ಸತ್ಯವನ್ನೇ ತಿಳಿಸಿ ಮಾನವರನ್ನು ಶಾಶ್ವತವಾದ ಮೋಕ್ಷಪ್ರಾಪ್ತಿಯನ್ನು ಆಶಿಸುವಂತೆ ಮಾಡಬೇಕೆಂದು ನಮ್ಮ ಆಕಾಂಕ್ಷೆ. ನಮ್ಮ ಬೋಧನೆಗಳಿಂದ ಎಲ್ಲರೂ ಅಲ್ಲದೆ ಸಾವಿರಕ್ಕೊಬ್ಬನು ಮೋಕ್ಷಾಸಕ್ತನಾದರು ನಮ್ಮ ಕೃಷಿಗೆ ಫಲ ಕೈಗೂಡಿದಂತೆ. ನಮ್ಮ ಉದ್ದೇಶ ನೆರವೇರಿದಂತೆ.

ಗೀತೆ ಎಂದರೆ ಒಂದು ರೇಖೆ ಎಂದೂ, ಮಾನವನಿಗೆ ಒಂದು ಹದ್ದನ್ನು ತೋರಿಸಿದೆ ಎಂದೂ, ಮಾನವರಿಗೆಲ್ಲ ಕೆಲಸಕ್ಕೆ ಬರುವುದೆಂದು ಹೇಳಿದ್ದಾರೆ. ಆದರೆ ಇಂತಹ ಮತದವರಿಗೆಂದು ಹೆಸರಿಟ್ಟು ಹೇಳಲಿಲ್ಲ. ಆದ್ದರಿಂದ ಗೀತೆ ವಿಶ್ವಮಾನವರೆಲ್ಲರ ನಿಮಿತ್ತ ಶಾಸನ ರೂಪವಾಗಿರುವ ಶಾಸ್ತ್ರವೆಂದು ತಿಳಿಯಬೇಕು. ಅದರಲ್ಲಿ ತಿಳಿಸಿದ ವಿಷಯಗಳು ಮಾನವ ಜಾತಿಗೆಲ್ಲ ಉಪಯುಕ್ತವಾದರೂ, ಗೀತೆ ಕೇವಲ ಹಿಂದೂಗಳಿಗೆ ಮಾತ್ರವೆಂದೂ ಉಳಿದ ಮತದವರು ತಿಳಿದುಕೊಳ್ಳುವುದು ಶೋಚನಿಯ. ಬಹುಶಃ ಹೇಳಿದವನನ್ನು ಅನುಸರಿಸಿ ಆತನು ಆ ದಿನ ಯಾವ ಮತದವನೋ, ಆ ಮತಸಂಬಂಧವಾದದ್ದೇ ಎಂದು ಕೆಲವರಂದುಕೊಂಡು, ಗೀತೆಯನ್ನು ಒಂದು ಹಿಂದೂಮತಕ್ಕೆ ಪರಿಮಿತಿ ಮಾಡಿರಬಹುದು. ಭಗವದ್ಗೀತೆ ಪ್ರಕಟಿತವಾದ ಐದುಸಾವಿರದ ನೂರೈವತ್ತು ವರ್ಷಗಳ ಕೆಳಗೆ, ಯಾವ ಮತ ಇಲ್ಲವೆಂದು ಮುಖ್ಯವಾಗಿ ಗಮನಿಸಿದಂತಾದರೆ, ಗೀತೆ ಈಗಿರುವ ಎಲ್ಲ ಮತಗಳ ಮಾನವರಿಗೆಂದು ಸುಲಭವಾಗಿ ತಿಳಿಯುತ್ತದೆ. ಅದರಲ್ಲಿನ ವಿಷಯಗಳು ಜನ್ಮಿಸಿದ ಜೀವಾತ್ಮನಿಗೇ ಎಂದು ಇರುವುದರಿಂದ, ಎಲ್ಲಾ ಮತದವರು ಜನ್ಮಿಸಿದ ಜೀವಾತ್ಮಗಳೇ ಆಗಿರುವುದರಿಂದ, ಆ ವಿಷಯಗಳು ಸಮಸ್ತ ಮಾನವರಿಗೆ ಸಂಬಂಧಿಸಿರುವುದೆಂದು ತಿಳಿಯುತ್ತದೆ. ಇನ್ನೂ ಪರಿಶೀಲಿಸಿ ನೋಡಿದಂತಾದರೆ ಅದರಲ್ಲಿ ಸ್ತ್ರೀ ಪುರುಷರ ಭೇದವೂ ಸಹ ಇಲ್ಲದಂತೆ ಕೇವಲ ಆತ್ಮ ಪರವಾಗಿ ಹೇಳಲಾಗಿದೆಂದು ತಿಳಿಯುತ್ತದೆ. ಅಂತದರಲ್ಲಿ ಒಂದು ಕುಲವೆಂದು, ಒಂದು ಮತವೆಂದೇ ಅಲ್ಲದೆ, ಸ್ತ್ರೀ ಪುರುಷರ ವ್ಯತ್ಯಾಸವೂ ಸಹ ಇಲ್ಲದಂತೆ ಗೀತೆಯನ್ನು ತಿಳಿದುಕೊಳ್ಳಬಹುದೆಂದು ತಿಳಿಯುತ್ತದೆ. ಬೈಬಲ್ ಕ್ರೈಸ್ತರಿಗೆನ್ನುವಂತೆ, ಖುರಾನ್ ಮಹಮ್ಮದೀಯರಿಗೆ ಎನ್ನುವಂತೆ, ಭಗವದ್ಗೀತೆ ಹಿಂದೂಗಳಿಗೇ ಎಂದು ಬಹಳ ಜನರು ಭಾವಿಸುತ್ತಿದ್ದಾರೆ. ಬೈಬಲ್‌ನಲ್ಲಿ ಕ್ರೈಸ್ತರ ಹೆಸರು, ಖುರಾನ್‌ನಲ್ಲಿ ಇಸ್ಲಾಮ್ ಹೆಸರಿರುವುದರಿಂದ ಆಯಾ ಗ್ರಂಥಗಳನ್ನು ಆಯಾ ಮತ ಗ್ರಂಥಗಳೆನ್ನುವುದರಲ್ಲಿ ಅರ್ಥವಿದೆ. ಆದರೆ ಭಗವದ್ಗೀತೆಯಲ್ಲಿ ಯಾವ ಮತದ ಹೆಸರು ಇಲ್ಲ, ಹೇಳಿದವನು ಪ್ರವಕ್ತನಲ್ಲ, ಅಂತಹದರಲ್ಲಿ ಅದೊಂದು ಮತ ಗ್ರಂಥ ಎನ್ನುವುದರಲ್ಲಿ ಅರ್ಥವೇ ಇಲ್ಲ.

ಭಗವದ್ಗೀತೆಯನ್ನು ಅರ್ಥಮಾಡಿಕೊಂಡರೆ ಮಾನವ ಜಾತಿಗೆಲ್ಲ ಅಧಿಪತಿಯಾದ ದೇವರಿದ್ದಾನೆಂದು ತಿಳಿಯುತ್ತದೆ. ಆದ್ದರಿಂದ ಎಲ್ಲರಿಗೂ ಅಧಿಪತಿಯಾದ ದೇವರನ್ನು ಕುರಿತು ತಿಳಿದುಕೊಳ್ಳುವ ನಿಮಿತ್ತ ಭಗವದ್ಗೀತೆಯನ್ನು ಓದಬೇಕೆಂದು ಕೋರುತ್ತಿದ್ದೇವೆ. ಬಹುಶಃ ಕೆಲವರು ಭಗವದ್ಗೀತೆಯನ್ನು ಈಗಾಗಲೇ ಓದಿರಬಹುದು. ಅದರಲ್ಲಿ ಯೋಚಿಸುವವರಿಗೆ ಸಂಶಯಗಳು ಇರಬಹುದು. ಸಂಶಯಗಳು ತೀರದೆ ಗೀತೆಗೆ ದೂರವಾಗಿ, ನಾಸ್ತಿಕರಾಗಿ ಕೆಲವರು ಪರಿವರ್ತನೆಯಾಗಿರಬಹುದು. ಅಂತಹವರನ್ನೆಲ್ಲಾ ದೃಷ್ಟಿಯಲ್ಲಿಟ್ಟುಕೊಂಡು ಅವರಲ್ಲಿ ಉದ್ಭವಿಸಿದ ಪ್ರಶ್ನೆಗಳನ್ನು ಶೇಖರಿಸಿ ಆ ಪ್ರಶ್ನೆಗಳಿಗೆ ಸರಿಯಾದ ಉತ್ತರ ನೀಡುವ ಭಗವದ್ಗೀತೆಯನ್ನು ನಾವು ಬರೆದಿರುವುದು ನಡೆದಿದೆ. ಓದುವವರಾದ ನೀವು ನಮ್ಮ ಬರಹದಲ್ಲಿನ ಯಾವ ವಿಷಯವನ್ನು ಕುರುಡರಂತೆ ನಂಬದೆ ಯೋಚಿಸಿ ನಿರ್ಣಯಿಸಿಕೊಳ್ಳಿ. ನಾವು ಹೇಳುವ ವಿಷಯಗಳು ಕೆಲವು ನೀವು ಇಲ್ಲಿಯವರೆಗೂ ಕೇಳದಿರುವವು ಇರಬಹುದು. ಪೂರ್ವದಲ್ಲಿ ಯಾರು ಈ ಶೈಲಿಯಲ್ಲಿ ಹೇಳದೆ ಇನ್ನೊಂದು ಶೈಲಿಯಲ್ಲಿ ಹೇಳಿರಬಹುದು. ಆದರೂ ವಾಸ್ತವಿಕತೆಯನ್ನು ಅರ್ಥ ಮಾಡಿಕೊಳ್ಳುತ್ತೀರೆಂಬ ಭಾವದಿಂದ ಬರೆಯುತ್ತಿದ್ದೇವೆ.

ಭಗವದ್ಗೀತೆಯನ್ನು ಶ್ರೀಕೃಷ್ಣನು ಯುದ್ಧರಂಗದಲ್ಲಿ ಬೋಧಿಸಿದ್ದಾನೆಂದು ಎಲ್ಲರಿಗೂ ತಿಳಿಯುತ್ತದೆ ಭಗವದ್ಗೀತೆಯನ್ನು ಶ್ರೀಕೃಷ್ಣನು ಅರ್ಜುನನಿಗೆ **"ಇದು ರಹಸ್ಯವಾದ ಜ್ಞಾನ, ನಿನಗೆ ಮಾತ್ರವೇ ಬೋಧಿಸುತ್ತಿದ್ದೇನೆ"** ಎಂದು ಹೇಳಿದನು. ಅಂತದರಲ್ಲಿ ಅರ್ಜುನನಿಗೊಬ್ಬನಿಗೆ ತಿಳಿಸಿದ ವಿಷಯವನ್ನು ಸಂಜಯನು ಹೇಗೆ ಕೇಳಿದ್ದಾನೆ? ಎನ್ನುವುದು ಪ್ರಶ್ನೆ. ಒಂದು ವೇಳೆ ದೂರದೃಷ್ಟಿ, ದೂರಶ್ರವಣ ಸಂಜಯನು ಹೊಂದಿರಬಹುದು. ಆ ವಿಷಯ ಶ್ರೀಕೃಷ್ಣನಿಗೆ ತಿಳಿಯದಂತೆಯೇ ಸಂಜಯನು ಯುದ್ಧರಂಗದಲ್ಲಿನ ಪ್ರತಿ ವಿಷಯವನ್ನು ಧೃತರಾಷ್ಟ್ರನಿಗೆ ತಿಳಿಸುತ್ತಿದ್ದಾನೆಂದುಕೊಳ್ಳೋಣ. ವಿಶ್ವರೂಪ ಸಂದರ್ಶನ ಸಮಯದಲ್ಲಿ "ಪ್ರಕೃತಿ ಕಣ್ಣುಗಳಿಂದ ನನ್ನ ವಿಶ್ವರೂಪವನ್ನು ನೋಡಲಾರೆ, ನನ್ನೊಂದರ ವಿಶ್ವರೂಪ ಜ್ಞಾನನೇತ್ರಗಳಿಗೆ ಮಾತ್ರವೇ ಕಾಣಿಸುತ್ತದೆ. ದೇವತೆಗಳೂ ಸಹ ಇಲ್ಲಿಯವರೆಗೂ ನೋಡದ ನನ್ನ ವಿಶ್ವರೂಪವನ್ನು ನಿನಗೆ ಮಾತ್ರ ತೋರಿಸುತ್ತೇನೆ. ವಿಶ್ವರೂಪವನ್ನು ನೋಡುವುದಕ್ಕೆ ಜ್ಞಾನನೇತ್ರವನ್ನು ಕೊಡುತ್ತಿದ್ದೇನೆ" ಎಂದು ಶ್ರೀಕೃಷ್ಣನು ಹೇಳಿ ಪ್ರತ್ಯೇಕವಾದ ಜ್ಞಾನದೃಷ್ಟಿಯನ್ನು ಕೊಟ್ಟು ಅರ್ಜುನನಿಗೆ ಮಾತ್ರ ತೋರಿಸಿದಾಗ, ಸಂಜಯನು ಯಾವ ದೃಷ್ಟಿಯಿಂದ ವಿಶ್ವರೂಪವನ್ನು ನೋಡಿ ಧೃತರಾಷ್ಟ್ರನಿಗೆ ತಿಳಿಸಿದ್ದಾನೆ? ಎನ್ನುವುದು ಪ್ರಶ್ನೆ. ಅರ್ಜುನನ ಜೊತೆಯಲ್ಲಿಯೆ ಸಂಜಯನೂ ಸಹ ವಿಶ್ವರೂಪ ನೋಡಿದಾಗ, ಯಾರು ನೋಡದಿರುವುದನ್ನು ನಿನಗೆ ಮಾತ್ರವೇ ತೋರಿಸುತ್ತಿದ್ದೇನೆಂದು ಶ್ರೀಕೃಷ್ಣನು ಏಕೆ ಹೇಳಿದ್ದಾನೆ? ಹೀಗೆ ಆದಿಯಲ್ಲಿಯೇ

ಭಗವದ್ಗೀತೆ ಪ್ರಶ್ನಾಮಯವಾಗಿದೆ. ಪ್ರಶ್ನೆಗಳ ರೂಪದಲ್ಲಿ ಯೋಚಿಸುವವರಿಗೆ ಸತ್ಯವಾದ ಸಮಾಧಾನ ಏನೆಂಬುವುದು ನಾವು ನೋಡಬೇಕು.

ಹೀಗೆ ಯೋಚಿಸುತ್ತಾ ಹೋದರೆ ಗೀತೆಯಲ್ಲಿನ ಸತ್ಯಗಳು, ರಹಸ್ಯಗಳು ಹೊರಬೀಳುತ್ತವೆ. ಭಗವಂತನು ಹೇಳಿದ ಮಾತುಗಳು ಎಷ್ಟೋ ಸಂದರ್ಭಗಳಲ್ಲಿ, ಎಷ್ಟೋ ವಿಧಗಳಾಗಿ ಬದಲಾಗಿ, ಕೊನೆಗೆ ಏಳುನೂರು ಶ್ಲೋಕಗಳ ರೂಪದಲ್ಲಿ ಗೀತೆ ಇದೆ. ಈ ದಿನ ನಮ್ಮ ಮುಂದಿರುವ ಭಗವದ್ಗೀತೆಗು, ಆ ದಿನ ಶ್ರೀಕೃಷ್ಣನು ಹೇಳಿದ ಭಗವದ್ಗೀತೆಗು ಏನಾದರೂ ಬದಲಾವಣೆ ಇದೆಯಾ ಎಂದು ಯೋಚಿಸಿದರೆ, ಎಲ್ಲಾ ವಿಧಗಳಾದ ಪ್ರಶ್ನೆಗಳಿಗೆ ಸಮಾಧಾನ ದೊರೆಯುತ್ತದೆ. ಆ ಯೋಚನೆಗಳು ನಿರೂಪಣಾತ್ಮಕವಾಗಿ, ಶಾಸ್ತ್ರಬದ್ಧವಾಗಿರುವಾಗ ನೈಜವಾದ ಸತ್ಯಗಳು ಹೊರಬೀಳಬಲ್ಲವು. ಆಗ ಎಲ್ಲವುಗಳಿಗೂ ಸಮಾಧಾನಗಳು ದೊರೆಯುತ್ತವೆ. ಈ ವಿಧಾನದಿಂದ ಯೋಚಿಸಿದಾಗಲೇ ಯುದ್ಧರಂಗದಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಎಷ್ಟು ಸಮಯ ಬೋಧಿಸಿದ್ದಾನೆಂಬ ಪ್ರಶ್ನೆಗೆ ಸಮಾಧಾನವೂ ಸಹ ಲಭ್ಯವಾಗುತ್ತದೆ.

ಬರೆಯುವುದಕ್ಕೆ ಕೈಲಾಗದೆ ಅಥವಾ ಓದು ಬಾರದ ಒಬ್ಬ ವ್ಯಕ್ತಿ ಇನ್ನೊಂದು ಊರಿನಲ್ಲಿರುವ ತನ್ನ ಸಂಬಂಧಿಕನಿಗೆ ಸಮಾಚಾರ ತಿಳಿಸಬೇಕೆಂದುಕೊಂಡಾಗ, ಸಮಾಚಾರವನ್ನು ಬರೆಯಬೇಕಾದ ವ್ಯಕ್ತಿ ಹತ್ತಿರಕ್ಕೆ ಹೋಗಿ ಉತ್ತರವನ್ನು ಬರೆದುಕೊಡು ಎಂದು ಕೇಳುತ್ತಾನೆ. ಬರೆಯುವುದಕ್ಕೆ ಆ ವ್ಯಕ್ತಿ ಒಪ್ಪಿಕೊಂಡಾಗ ಸಮಾಚಾರ ಹೇಳುವವನು ಹೇಳಬೇಕಾದ ಮುಖ್ಯವಾದ ವಿಷಯವನ್ನು ಹೇಳಿ ಸುಮ್ಮನಿರುತ್ತಾನೆ. ಆ ವಿಷಯವನ್ನು ಕೇಳಿದಾತನು ಅದನ್ನು ಹೇಗೆ ಹೊಂದಿಸಿ ಬರೆದರೆ ಓದಿಕೊಳ್ಳುವವನು, ಸುಲಭವಾಗಿ ತಿಳಿದುಕೊಳ್ಳುತ್ತಾನೆಂದು ಯೋಚಿಸಿ, ಮತ್ತೊಬ್ಬನು ಅರ್ಥ ಮಾಡಿಕೊಳ್ಳುವುದಕ್ಕೆ ತಕ್ಕ ವಿಧಾನದಲ್ಲಿರುವಂತೆ ಮತ್ತು ಮೊದಲು ಕ್ಷೇಮ ಸಮಾಚಾರಗಳು ಕೇಳಿದಂತೆ, ಕೊನೆಯಲ್ಲಿ ಮುಕ್ತಾಯವನ್ನು ತಿಳಿಸುತ್ತಾ ಹೊಂದಿಸಿ ಬರೆಯುತ್ತಾನೆ. ಹೇಳಿದವನು ವಿಷಯ ಒಂದು ಹೇಳಿದರೂ ಬರೆಯುವವನು ಅದಕ್ಕೊಂದು ಪದ್ಧತಿ, ಸಾಲು, ಅಂದ, ಅರ್ಥವನ್ನು ಹೊಂದಿಸಿ ಬರೆದಂತೆ ಭಗವಂತನು ಹೇಳಿದ ಮೂಲ ಸಾರಾಂಶ ವಿಷಯವನ್ನು ವ್ಯಾಸನು ಶ್ಲೋಕಗಳ ರೂಪದಲ್ಲಿ ಬದಲಾಯಿಸಿ ಬರೆದಿದ್ದಾನೆ. ಭಗವಂತನು ಹೇಳಿದ ವಿಷಯ ಚಿಕ್ಕದಾದರೂ ಅದು ಅರ್ಥವಾಗುವುದಕ್ಕೆ ಅನೇಕ ಶ್ಲೋಕಗಳಾಗಿ, ಅನೇಕ ಅಧ್ಯಾಯಗಳಾಗಿ ವ್ಯಾಸನು ಬರೆಯುವುದರಿಂದ ಏಳುನೂರು ಶ್ಲೋಕಗಳ ಗ್ರಂಥವಾದ ಗೀತೆ ನಮ್ಮ ಮುಂದಿದೆ. ಎಲ್ಲ ಶ್ಲೋಕಗಳ ಸಾರಾಂಶವನ್ನು ಪರಿಶೀಲಿಸಿ ನೋಡಿದರೆ ಮೂಲ ವಿಷಯ ಬಹಳ

ಸ್ವಲ್ಪವಿದ್ದಂತೆ ತಿಳಿಯುತ್ತದೆ. ಎಲ್ಲ ಅಧ್ಯಾಯಗಳನ್ನು ಹಿಂಡಿ ನೋಡಿದರೆ ಸಾರಾಂಶ ಸ್ವಲ್ಪವೇ. **"ಸರ್ವವೂ ವ್ಯಾಪಿಸಿರುವವನು ನಾನೊಬ್ಬನೇ"** ಎನ್ನುವ ಮಾತಿಗೆ ವಿಭೂತಿ ಯೋಗವೆಂಬ ಅಧ್ಯಾಯದಲ್ಲಿ 42 ಶ್ಲೋಕಗಳನ್ನು ಹೇಳಲಾಗಿದೆ. **"ಸರ್ವವೂ ನಾನೇ"** ಎನ್ನುವ ವಿಷಯವನ್ನು ಸೂಚಿಸುವುದಕ್ಕೆ 42 ಶ್ಲೋಕಗಳು ಬರೆಯಲ್ಪಟ್ಟರೆ 701 ಶ್ಲೋಕಗಳಲ್ಲಿರುವ ಭಾವ ಕೆಲವು ನಿಮಿಷಗಳಲ್ಲಿ ಮಾತನಾಡುವ ಮಾತುಗಳಿಗಿಂತ ಮೀರಿ ಇರುವುದಿಲ್ಲ. ಚಿಕ್ಕ ವಿಷಯವನ್ನು ಉದ್ದವಾದ ಉತ್ತರ ಬರೆದುಕೊಂಡಂತೆ, ಶ್ರೀಕೃಷ್ಣನ ಚಿಕ್ಕ ಸಂದೇಶವನ್ನು ವ್ಯಾಸನು ದೊಡ್ಡದಾಗಿ ಬರೆದು ತೋರಿಸಿದ್ದಾನೇ ಹೊರತು ಇಷ್ಟು ಉದ್ದವಾದ ಭಗವದ್ಗೀತೆಯ ಬೋಧನೆ ರಣರಂಗದಲ್ಲಿ ನಡೆಯಲಿಲ್ಲ. ನಡೆಯುವು ದಕ್ಕೆಸಮಯವೂ ಇರಇಲ್ಲ. ವ್ಯಾಸನಿಂದ ಬರೆಯಲ್ಪಟ್ಟ ಇಷ್ಟು ದೊಡ್ಡ ಭಗವದ್ಗೀತೆ ಮಾನವರಿಗೆ ಸುಲಭವಾಗಿ ಅರ್ಥವಾಗುವುದಕ್ಕೆ ಹೊರತು ಬೇರೆ ಉದ್ದೇಶ ಇಲ್ಲವೆಂದು ತಿಳಿಯಬೇಕು.

ಸಂಜಯನು ಹೇಗೆ ಯುದ್ಧರಂಗದಲ್ಲಿನ ವಿಷಯವನ್ನು ಧೃತರಾಷ್ಟ್ರನಿಗೆ ತಿಳಿಸಿದ್ದಾನೆಂಬುವುದು ಗೀತೆಯಲ್ಲಿನ ಮೊದಲ ಪ್ರಶ್ನೆ. ಒಂದು ವೇಳೆ ಸಂಜಯನು ಶ್ರೀ ಕೃಷ್ಣನ ಸಂದೇಶವನ್ನು ಆತನ ವಿಶ್ವರೂಪವನ್ನು ತಿಳಿದುಕೊಂಡಿದ್ದಾನೆಂದುಕೊಳ್ಳೋಣ. ಆಗ ಅರ್ಜುನನಿಗೆ ಅಲ್ಲದೆ ಆ ವಿಷಯ ಸಂಜಯನಿಗೂ ಧೃತರಾಷ್ಟ್ರನಿಗೂ ಸಹ ತಿಳಿದಂತಾಗುತ್ತದೆ. ಹಾಗೆ ಯುದ್ಧರಂಗದ ಪ್ರಾರಂಭದಲ್ಲಿಯೇ ಶ್ರೀ ಕೃಷ್ಣನು ಇಂತವನೆಂದು ತಿಳಿದಿದ್ದರೆ ಸಂಜಯ ಧೃತರಾಷ್ಟ್ರರು ಇಬ್ಬರು ಯುದ್ಧರಂಗದೊಳಗೆ ಸರಾಸರಿ ಓಡಿಹೋಗಿ ಯುದ್ಧವನ್ನು ನಿಲ್ಲಿಸುತ್ತಿದ್ದರು. ಅದು ಅಲ್ಲದೇ ಗೀತಾ ಬೋಧನೆಯನ್ನು ಸಂಜಯನು ಕೇಳಿದ್ದರೆ **"ನಿನ್ನನ್ನು ಹೊರತು"** ಎಂದು ಭಗವಂತನು ಅರ್ಜುನನ ಹತ್ತಿರ ಹೇಳಿದ ಮಾತೇ ಅಸತ್ಯವಾಗುತ್ತದೆ. ಭಗವಂತನ ಮಾತು ಎಂದಿಗೂ ಅಸತ್ಯ ಆಗುವುದಿಲ್ಲ. ಸಂಜಯನು ಗೀತೆಯನ್ನು ಕೇಳಿದ್ದಾನೆಂಬ ಮಾತೇ ಅಸತ್ಯವೆಂದರೆ ಸಂಜಯ ಕೇಳಿ ಹೇಳದೇ ಹೋದರೆ ಭಗವದ್ಗೀತೆಯೇ ಇಲ್ಲತಾನೆ! ಎನ್ನುವ ಸಂಶಯ ಏರ್ಪಡುತ್ತದೆ. ಮುಂದೆ ಬಾವಿ ಹಿಂದೆ ಕೆರೆಯಂತೆ ಇರುವ ಈ ಪ್ರಶ್ನೆಗೆ ಸಮಾಧಾನ ಸಿಗಲಿಲ್ಲ ಎಂದರೆ ಇಲ್ಲಿಯವರೆಗೂ ನಾವು ಗೀತೆಯನ್ನು ಸರಿಯಾಗಿ ಅರ್ಥಮಾಡಿಕೊಂಡಿಲ್ಲವೆಂದು ತಿಳಿಯುತ್ತದೆ. ಗೀತೆ ವಿರುದ್ಧವಾದ ಮಾರ್ಗದಲ್ಲಿ ಅರ್ಥವಾಗಿದೆಯಾಗಲಿ, ಸಂಶಯರಹಿತವಾದ ಮಾರ್ಗದಲ್ಲಿ ಅರ್ಥವಾಗಲಿಲ್ಲ ಎಂದು ತಿಳಿಯುತ್ತದೆ. ಇಂತಹ ಪ್ರಶ್ನೆಗಳಿಗೆ ಉತ್ತರ ಹೇಳಲಾರದ ಸ್ಥಿತಿಯಲ್ಲಿ ತಾವು ಇದ್ದು, ಪ್ರಜೆಗಳ ದೃಷ್ಟಿಯಲ್ಲಿ ತಿಳಿದವರಂತೆ ಚಲಾವಣಿಯಾಗುತ್ತಿರುವ ಕೆಲವರು ನಿಮ್ಮ ಜ್ಞಾನ ಎಂತಹದೆಂದು ಅವಹೇಳನವಾಗಿ ಮಾತನಾಡುವುದೂ ಸಹ ನಡೆದಿದೆ. ಹಾಗೆ ಅವರು ನಮ್ಮನ್ನು ಅವಹೇಳನ

ಮಾಡಿದರು ಪರವಾಗಿಲ್ಲ. ಅವರ ಪರವಾಗಿ ಪ್ರಜೆಗಳು ಗೀತೆಯನ್ನು ಸರಿಯಾದ ಮಾರ್ಗದಲ್ಲಿ ಅರ್ಥಮಾಡಿಕೊಳ್ಳದೆ ಹೋಗಿದ್ದಾರೆಂಬುವುದೇ ನಮ್ಮ ಬಾಧೆ. ಇಲ್ಲಿಯವರೆಗೂ ಸತ್ಯವಾದ ವಿಷಯಗಳು ಯಾರ ಬಲಹೀನತೆಯಿಂದ ಹೊರಗೆ ಬರಲಿಲ್ಲವೊ ಪ್ರಜೆಗಳು ಗ್ರಹಿಸಬಲ್ಲರು. ಬ್ರಹ್ಮವಿದ್ಯೆಯಲ್ಲಿ ಸತ್ಯವನ್ನು ಅನ್ವೇಷಿಸುವವರಿಗೆ, ಹೇತುವಾದಿಗಳಿಗೆ ಇಲ್ಲಿಯವರೆಗೂ ಬಹಳ ಕಡೆ ಲಭಿಸಿದ ಜ್ಞಾನಗಳಲ್ಲಿ ಅವರಲ್ಲಿ ಉದ್ಭವಿಸಿದ ಪ್ರಶ್ನೆಗಳಿಗೆ ಉತ್ತರಗಳು ಸಿಗದೇ ಎಷ್ಟೋ ಜನ ನಾಸ್ತಿಕರಾಗಿದ್ದಾರೆ. "ನಮ್ಮ ಪ್ರಶ್ನೆಗಳಿಗೆ ಉತ್ತರಗಳು ಇಲ್ಲ. ಎಲ್ಲ ಬೂಟಾಟಿಕೆ, ಮಾತುಗಳಿಂದ ಮರುಳು ಮಾಡುವುದು ಹೊರತು ಮತ್ತೇನು ಇಲ್ಲ. ದೇವರ ಹೆಸರು ಹೇಳುತ್ತಾ ಸಂಶಯಗಳಿಂದ ಕೂಡಿಕೊಂಡ ಜ್ಞಾನ ಹೇಳುತ್ತಿದ್ದಾರೆ" ಎಂದು ನಾಸ್ತಿಕರೆನ್ನುತ್ತಿದ್ದಾರೆ.

ಅಂತಹ ನಾಸ್ತಿಕರೂ ಸಹ ನಮ್ಮ ಜ್ಞಾನದ ಮೂಲಕ ಅವರ ಪ್ರಶ್ನೆಗಳಿಗೆ ಉತ್ತರ ತೆಗೆದುಕೊಂಡು, ಈ ಪದ್ಧತಿ ಪ್ರಕಾರವಾದರೆ ದೇವರಿದ್ದಾರೆಂದು ಒಪ್ಪಿಕೊಳ್ಳುತ್ತಿರುವಾಗ ಉಳಿದವರು ಅವಹೇಳ ಮಾಡಿದರು ಪರವಾಗಿಲ್ಲ. ಬಹಳಜನ ಗೀತೆ ರಚನಕಾರರು ನಾವು ಕೇಳುವ ಪ್ರಶ್ನೆಗಳಿಗೆ ಉತ್ತರ ಹೇಳಲಾರರು. ಏಕೆಂದರೆ ಗೀತೆಯಲ್ಲಿ ವಿಶ್ವರೂಪಕ್ಕೆ ಆಕಾರವನ್ನು ಕಲ್ಪಿಸಿ ಹೇಳಿದ್ದಾರೆ. ಅಲ್ಲಿ ಅವರು ಹೇಳಿದಂತೆ ಕೋರೆಗಳು, ಮುಖ, ಬಾಯಿ ಹೀಗೆ ಚಿತ್ರಿಸಿಕೊಳ್ಳುತ್ತಾಹೋದರೆ ಪರಮಾತ್ಮನ ರೂಪ ವಿಕೃತವಾದ ದೊಡ್ಡ ಪಿಶಾಚಿ ಆಕಾರವನ್ನು ಹೋಲಿರುತ್ತದೆ. ಅಂತಹದ್ದಾ ಪರಮಾತ್ಮನ ಆಕಾರ? ಇದಕ್ಕೇನು ಸಮಾಧಾನ ಹೇಳಬಲ್ಲರು? ದೇವರು ಹೇಳಿದ **'ಚಾತುರ್ವರ್ಣಮ್'** ಎನ್ನುವ ಮಾತಿಗೆ ವಿವರ ಬ್ರಾಹ್ಮಣ, ವೈಶ್ಯ, ಕ್ಷತ್ರಿಯ, ಶೂದ್ರರೆಂದು ಕುಲಮತಗಳ ಹೆಸರು ಹೇಳಿ ಕುಲಗಳ ಭೇದಗಳನ್ನು ಉಂಟುಮಾಡುವ ಅಜ್ಞಾನಿಗಳ ಮಾತುಗಳಂತೆ ದೇವರ ಮಾತುಗಳನ್ನು ಕಲ್ಪಿಸಿದ್ದಾರೆ. ಅವರ ಮಾತುಗಳ ಪ್ರಕಾರ ಭೂಮಿ ಮೇಲೆ ಹಿಂದೂಮತಕ್ಕೆ ಸಂಬಂಧವಿಲ್ಲದ ಮತದಲ್ಲಿನ ಮನುಜರಲ್ಲಿ ಮೇಲೆ ಹೇಳಿದ ನಾಲ್ಕು ಕುಲಗಳು ಇಲ್ಲವೆ! ಅವರನ್ನು ಯಾವ ದೇವರು ಸೃಷ್ಟಿಸಿದ್ದಾನೆ? ಪ್ರಪಂಚಕ್ಕೆಲ್ಲ ಒಬ್ಬನೇ ದೇವರಾದಾಗ ಚಾತುರ್ವರ್ಣವೆಂಬ ಮಾತು ಅವರಿಗೆ ಅನ್ವಯಿಸುವುದಿಲ್ಲವೇ? ಈ ನಾಲ್ಕುಕುಲಗಳಿಲ್ಲದ ದೇಶಗಳು ಎಷ್ಟೋ ಇವೆ. ಅವರನ್ನು ಸೃಷ್ಟಿಸಿದವನು ಯಾರೆಂದು ಹೇಳುತ್ತೀರಾ?

ಗೀತೆಯಲ್ಲಿ ಜ್ಞಾನಯೋಗವೆಂಬ ಅಧ್ಯಾಯದ ಮೊದಲಿನಲ್ಲಿ ಆದಿಯಲ್ಲಿಯೇ ಸೂರ್ಯನಿಗೆ ಹೇಳಿದ್ದೇನೆಂದು ಭಗವಂತನು ಹೇಳಿದಾಗ, ಸೂರ್ಯನೊಬ್ಬ ಮನುಷ್ಯನು ಅಲ್ಲ ಅಲ್ಲವೆ! ಅದು ಒಂದು ಗೋಳವು ತಾನೆ! ಅಂತಹ ಗೋಳಕ್ಕೆ ಹೇಗೆ ಹೇಳಿದ್ದಾನೆ? ಎಷ್ಟೋ ದೂರದಲ್ಲಿರುವ ಸೂರ್ಯನು ಹೇಗೆ ಕೇಳಿದ್ದಾನೆಂಬ ಪ್ರಶ್ನೆಗೆ ಉತ್ತರ ಹೇಳ

ಬಲ್ಲಿರಾ? ಪ್ರಕೃತಿಯಿಂದ ಹುಟ್ಟಿರುವುದು, ಪ್ರಕೃತಿ ಸಂಬಂಧವಾದುದು ಶರೀರವೆಂದು, ಶರೀರದಲ್ಲಿನ ಚಲನಶಕ್ತಿ ಪುರುಷನಾದ ಪರಮಾತ್ಮನದೆಂದು, ಗುಣತ್ರಯ ವಿಭಾಗಯೋಗದಲ್ಲಿ 3, 4 ಶ್ಲೋಕಗಳಲ್ಲಿರುವಾಗ, ನಂತರ ಅಧ್ಯಾಯವಾದ ಪುರುಷೋತ್ತಮ ಪ್ರಾಪ್ತಿಯೋಗದಲ್ಲಿ 16, 17 ಶ್ಲೋಕಗಳಲ್ಲಿ ಕ್ಷರ ಅಕ್ಷರ ಪುರುಷೋತ್ತಮರಾಗಿ ಪುರುಷನನ್ನು ಮೂರು ವಿಭಾಗಗಳಾಗಿ ಮಾಡಿ ಹೇಳಿರುವಾಗ, ಆ ಶ್ಲೋಕಗಳ ವಿವರ ಕೇವಲ ಪುರುಷನಿಗೆ ಹೇಳದೆ ಪ್ರಕೃತಿಗೆ ಸಂಬಂಧಪಟ್ಟ ಶರೀರವನ್ನು ಏಕೆ ತೆಗೆದುಕೊಂಡಿದ್ದಾರೆಂದು ಕೇಳಿದರೆ ಉತ್ತರ ಹೇಳುತ್ತೀರಾ? ಇಲ್ಲಿಯವರೆಗೂ ಎಷ್ಟೋಜನರಿಂದ ಬರೆಯಲ್ಪಟ್ಟ ಗೀತೆಯಲ್ಲಿ ಇಂತಹ ಪ್ರಶ್ನೆಗಳಾಗಿ ಉಳಿದಿರುವ ವಿಷಯಗಳೆಷ್ಟೋ ಇವೆ, ಆದಕಾರಣ ಈಗಲಾದರೂ ಎಚ್ಚರಗೊಂಡು, ಪವಿತ್ರವಾದ ಕಾಲವನ್ನು ವ್ಯರ್ಥಮಾಡದೇ, ಜ್ಞಾನ ಸಮುದ್ರದಂತಹದೆಂದು, ಅದರಲ್ಲಿ ಇನ್ನೂ ತಿಳಿಯದ ವಿಷಯಗಳೆಷ್ಟೋ ಇವೆಯೆಂದು, ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸೋಣ.

ದೂರವಾಗಿ ಕುರುಕ್ಷೇತ್ರದಲ್ಲಿ ನಡೆಯುವ ಯುದ್ಧವನ್ನು ಸಂಜಯನು ನೋಡುತ್ತಿದ್ದಾನೆಂದುಕೊಳ್ಳೋಣ. ಅಲ್ಲಿ ಆತನಿಗೆ ಕಾಣಿಸಿರುವುದು ಕೇವಲ ಪ್ರಕೃತಿ ದೃಶ್ಯ. ಅಲ್ಲಿರುವ ಮನುಷ್ಯರು, ಆನೆಗಳು, ಕುದುರೆಗಳು, ರಥಗಳು ಕಾಣಿಸುತ್ತವೆ. ಇಂದು ನಾವು ನೋಡಿದರೆ ಹತ್ತಿರ ಇರುವವು ಮಾತ್ರ ಕಾಣಿಸುತ್ತವೆ. ಆದಿನ ಸಂಜಯನು ನೋಡಿದಾಗ ಹತ್ತಿರ ಇರುವವಲ್ಲದೆ ದೂರ ಇರುವವೂ ಸಹ ಕಾಣಿಸಿವೆಯಂತೆ. ಹಾಗೆ ನೋಡುವ ಶಕ್ತಿ ಆ ದಿನ ಸಂಜಯನಿಗೆ ಇದೆ ಎಂದುಕೊಳ್ಳೋಣ. ದೂರವಾಗಿ ಯುದ್ಧರಂಗದಲ್ಲಿರುವ ಅರ್ಜುನ ಶ್ರೀಕೃಷ್ಣ ಕಾಣಿಸಿರಬಹುದು. ಆದರೆ ಅಂತರಂಗದಲ್ಲಿ ಒಳದೃಷ್ಟಿಯಾದ ಜ್ಞಾನ ದೃಷ್ಟಿಗೆ ಕಾಣಿಸುವ ಪರಮಾತ್ಮನ ದರ್ಶನ ಹೇಗೆ ಕಾಣಿಸಿದೆ? ಸಂಜಯನು ಯುದ್ಧರಂಗದಲ್ಲಿ ಪ್ರಾರಂಭದಿಂದ ನೋಡಿದ್ದಾನೆಂದಾಗ ಪ್ರಕೃತಿ ಸಂಬಂಧವಾದ ಹೊರಗಿನ ದೃಶ್ಯಗಳೇ ಕಾಣಿಸಿರುತ್ತವೆ, ಆದರೆ ಪರಮಾತ್ಮ ದರ್ಶನ ಕಾಣಿಸಿರುವುದಿಲ್ಲವೆಂದು ತಿಳಿಯುತ್ತಿದೆ.

ಇಲ್ಲಿ ಕೆಲವರಿಗೆ ಒಂದು ಅನುಮಾನವೂ ಸಹ ಬರಬಹುದು. ಅದು ಏನೆಂದರೆ! ಶ್ರೀಕೃಷ್ಣನು ರಾಯಭಾರಕ್ಕಾಗಿ ಕೌರವಸಭೆಯೊಳಗೆ ಹೋದಾಗ, ಅಲ್ಲಿ ದುರ್ಯೋಧನ ದುಶ್ಯಾಸನರು ಮೊದಲಾದವರು ಹಗ್ಗದಿಂದ ಬಂಧಿಸಬೇಕೆಂದುಬಂದಾಗ, ಒಬ್ಬನಾದ ಶ್ರೀಕೃಷ್ಣನು ಅವರ ಹಗ್ಗಗಳಿಗೆ ಬಂಧಿಸಲ್ಪಡದೇ ವಿಶ್ವರೂಪ ತೋರಿಸಿದ್ದಾನೆ ಅಲ್ಲವೆ! ಆಗ ಕಣ್ಣುಗಳು ಮಿರಮಿರ ಹೊಳೆಯುವ ಆ ರೂಪವನ್ನು ನೋಡಲಾರದೆ ಅವರು ಕೆಳಗೆ ಬಿದ್ದುಹೋಗಿ, ಆ ರೂಪವನ್ನು ನೋಡಬೇಕೆಂಬ ಧೃತರಾಷ್ಟ್ರನ ಕೋರಿಕೆಯ ಮೇರೆಗೆ

ಶ್ರೀಕೃಷ್ಣನು ಆತನ ಅಂಧತ್ವವನ್ನು ತೆಗೆದುಹಾಕಿ ಕಣ್ಣುಗಳು ಕಾಣಿಸುವಂತೆ ಮಾಡಿದ್ದಾನೆಂದು, ಮತ್ತು ಆ ಕ್ಷಣವೇ ಧೃತರಾಷ್ಟ್ರನ ಹೆಂಡತಿ ಗಾಂಧಾರಿದೇವಿ ತನ್ನ ಕಣ್ಣುಗಳಿಗೆ ಕಟ್ಟಿಕೊಂಡ ವಸ್ತ್ರ ತೆಗೆದು ವಿಶ್ವರೂಪವನ್ನು ನೋಡಿದ್ದಾಳೆ ಎಂದು ಕೇಳಿದ್ದೇವೆ. ಆ ದಿನ ಎಲ್ಲರೂ ಸಾಮಾನ್ಯ ಕಣ್ಣುಗಳಿಂದಲೇ ತಾನೆ! ವಿಶ್ವರೂಪವನ್ನು ನೋಡಿರುವುದು. ಅಂತಹದರಲ್ಲಿ ಯುದ್ಧ ಸಮಯದಲ್ಲಿ ಅರ್ಜುನನಿಗೆ ತೋರಿಸಿದ ವಿಶ್ವರೂಪವನ್ನು ಸಂಜಯನು ಏಕೆ ನೋಡಿರುವುದಿಲ್ಲವೆಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ಅವರ ಮಾತಿನ ಪ್ರಕಾರ ದೂರವಾಗಿರುವ ಸಂಜಯನಿಗೆ ವಿಶ್ವರೂಪ ಕಾಣಿಸಿದ್ದರೆ ಅಲ್ಲಿಯೇ ಹತ್ತಿರದಲ್ಲಿರುವ ಸೈನ್ಯಕ್ಕೆ, ಇತ್ತ ಪಾಂಡವರಿಗೂ, ಅತ್ತ ಕೌರವರಿಗೂ ಎಲ್ಲರಿಗೂ ಕಾಣಿಸಿರಬೇಕು. ಹಾಗೆ ಎಲ್ಲರಿಗೂ ಕಾಣಿಸಿರುವಂತೆ ಯಾವ ಪುರಾವೆಯೂ ಇಲ್ಲ. ಹತ್ತಿರ ಇರುವವರಿಗೆ ಕಾಣಿಸದ ವಿಶ್ವರೂಪ ದೂರದಲ್ಲಿರುವ ಸಂಜಯನಿಗೆ ಕಾಣಿಸಿದೆಯೆಂಬುವುದು ಅಸತ್ಯ. ಹಾಗೆ ರಾಯಭಾರದಿಂದ ವಿಶ್ವರೂಪವನ್ನು ಕೆಲವರು ನೋಡುವುದು, ಕೆಲವರು ನೋಡದಂತೆ ಹೋಗಿದ್ದಾರೆಂಬ ಮಾತು ಕೇವಲ ಅಭೂತ ಕಲ್ಪನೆಯೇ ಆಗಲಿ ನಿಜವಲ್ಲ. ಆತ್ಮ ಪರಮಾತ್ಮರು ಇಂದ್ರಿಯಗಳಿಗೆ ಅಗೋಚರವಾದವು. ಕಣ್ಣಿಗೆ ಕಾಣಿಸುವುದಿಲ್ಲ, ಕಿವಿಗಳಿಗೆ ಕೇಳಿಸುವುದಿಲ್ಲವೆಂದು ಭಗವಂತನು ಗೀತೆಯಲ್ಲಿಯೇ ತಿಳಿಸಿದ್ದಾನೆಂದು ಮರೆಯಬಾರದು. ಹಾಗೆ ತಿಳಿಸಿರುವಾಗ ಪರಮಾತ್ಮ ಸ್ವರೂಪವಾದ ವಿಶ್ವರೂಪ ಕಣ್ಣಿಗೆ ಕಾಣಿಸಿದೆ ಎನ್ನುವುದು ಧರ್ಮವಿರುದ್ಧವಾದ ಮಾತು. ಕಾಣಿಸಿದೆ ಎಂದು ಹೇಳುವವರಿದ್ದರೆ ಭಗವದ್ಗೀತೆ ರಾಜವಿದ್ಯಾ ರಾಜಗುಹ್ಯ ಯೋಗವೆಂಬ ಅಧ್ಯಾಯದಲ್ಲಿ ನಾಲ್ಕನೆಯ ಶ್ಲೋಕದಲ್ಲಿ "**ಮಯಾತತ ಮಿದಂ ಸರ್ವಂ ಜಗದವ್ಯಕ್ತ ಮೂರ್ತಿನಾ**" ಇಂದ್ರಿಯಗಳಿಗೆ ಗೋಚರಿಸದೇ ಈ ಪ್ರಪಂಚವೆಲ್ಲಾ ನಾನು ವ್ಯಾಪಿಸಿದ್ದೇನೆ. ಎಂದು ಧರ್ಮಯುಕ್ತವಾಗಿ ಹೇಳಿದ ಭಗವಂತನ ಮಾತಿಗೆ ವಿರುದ್ಧವಾಗಿ ಹೇಳಿದವರಾಗುತ್ತಾರೆ. ಆದ್ದರಿಂದ ಗೀತೆಯನ್ನು ಜಾಗ್ರತೆಯಿಂದ ಪರಿಶೀಲಿಸಿ ಧರ್ಮಬದ್ಧವಾಗಿ ಹೇಳಬೇಕೆಂದರೆ, ಸಂಜಯನು ತನ್ನ ಕಣ್ಣುಗಳಿಂದ ವಿಶ್ವರೂಪವನ್ನು ಎಷ್ಟುಮಾತ್ರ ನೋಡಲಿಲ್ಲ. ರಾಯಭಾರದಲ್ಲಿ ವಿಶ್ವರೂಪವನ್ನು ತೋರಿಸುವುದಕ್ಕೆ ಅದೇನಾದರು ಗಾರುಡಿ ವಿದ್ಯೆಯಂತಹದ್ದಾ! ಅಗತ್ಯಬಂದಾಗಲೆಲ್ಲಾ ವಿಶ್ವರೂಪ ತೋರಿಸಿದರೆ ಅದಕ್ಕೆ ಬೆಲೆ ಇರುತ್ತದಾ! ಹಾಗೆ ತೋರಿಸುವುದೇ ಆದರೆ ವಿಶ್ವರೂಪಸಂದರ್ಶನ ಯೋಗದಲ್ಲಿ 47ನೇ ಶ್ಲೋಕದಲ್ಲಿ **"ನೀನು ಹೊರತು ಮತ್ತ್ಯಾರು ಇದನ್ನು ನೋಡಿದವರು ಇಲ್ಲ"** ಎನ್ನುವ ಮಾತು ಮತ್ತೆ 52ನೇ ಶ್ಲೋಕದಲ್ಲಿ **"ಅರ್ಜುನಾ ಈ ರೂಪವನ್ನು ನೋಡಬೇಕೆಂದು ದೇವತೆಗಳೂ ಸಹ ಕೋರಿಕೆಯಿಂದಿದ್ದಾರೆ ಆದರೂ ನಿನ್ನನ್ನು ಹೊರತು ಯಾರು ಇದನ್ನು ನೋಡಿದವರು ಇಲ್ಲ."** ಎಂಬ ಮಾತು ಕೆಲಸಕ್ಕೆ ಬಾರದಂತೆ ಹೋಗುತ್ತದೆ. ಅಂತಹದರಲ್ಲಿ

ಭಗವಂತನು ಹೇಳಿದ ಮಾತು ನಿಜವಾ ಅಥವಾ ಮಾನವರು ಹೇಳಿದ ಮಾತು ನಿಜವಾ ಎಂದು ಪರಿಶೋಧಿಸಿ ನೋಡಿದರೆ, ಭಗವಂತನು ಹೇಳಿರುವುದು ಸಿದ್ಧಾಂತಪರವಾದ ಶಾಸ್ತ್ರವಚನವೆಂದು, ಮಾನವನು ಹೇಳಿರುವುದು ಅಶಾಸ್ತ್ರವಚನವೆಂದು ತಿಳಿಯುತ್ತಿದೆ. ಹಾಗಲ್ಲದೆ ವಿಶ್ವರೂಪವನ್ನು ಯುದ್ಧರಂಗದಲ್ಲಿ ಸಂಜಯನು, ರಾಯಭಾರದಲ್ಲಿ ಉಳಿದವರು, ನೋಡಿದ್ದಾರೆಂದರೆ ಯಾರು ನೋಡಲಿಲ್ಲವೆಂಬ ಭಗವಂತನ ಮಾತು ಅಸತ್ಯವಾಗಿ ಒಟ್ಟಿನಲ್ಲಿ ಭಗವದ್ಗೀತೆಯೇ ಅಸತ್ಯವಾಗುತ್ತದೆ.

ಪುರುಷನಾದ ಪರಮಾತ್ಮ, ಪ್ರಕೃತಿಯಾದ ಮಾಯೆಯೊಂದರ ರಹಸ್ಯಗಳು ತಿಳಿಯಬೇಕೆಂದರೆ ಬಹಳ ಕಷ್ಟ. ಎಲ್ಲಿ ಪುರುಷನಿದ್ದಾನೋ ಅಲ್ಲಿ ಪ್ರಕೃತಿಯೂ ಸಹ ಇದೆ. ಎಲ್ಲಿ ಧರ್ಮ ಇದೆಯೋ ಅಲ್ಲಿಯೇ ಅಧರ್ಮವೂ ಸಹ ಇದೆ. ಹಾಗೆ ಧರ್ಮಗಳ ಸಂಗಮವಾದ ಭಗವದ್ಗೀತೆಯಲ್ಲಿಯೂ ಸಹ ಅಧರ್ಮದ ವಾಸನೆ ಇದ್ದೇ ಇದೆ.

ಆದ ಕಾರಣ ಪೂರ್ತಿ ವಿವರಣೆ ಮಾಡಿದಾಗಲೇ ಅದರಲ್ಲಿನ ಧರ್ಮಗಳನ್ನು ಸ್ವೀಕರಿಸಿ ಅಧರ್ಮಗಳನ್ನು ಬಿಡುತ್ತೇವೆ. ಅಂತಹ ವಿವರದ ಪ್ರಕಾರ ನೋಡಿದರೆ ಗೀತೆಯನ್ನು 700 ಶ್ಲೋಕಗಳ ರೂಪವಾಗಿ ಭಗವಂತನು ಹೇಳಲಿಲ್ಲ. ಮತ್ತು ಸಂಜಯನು ವಿಶ್ವರೂಪವನ್ನಾಗಲಿ, ಯುದ್ಧರಂಗದಲ್ಲಿನ ಪ್ರಕೃತಿ ದೃಶ್ಯವನ್ನಾಗಲಿ ನೋಡಲಿಲ್ಲ ಎಂದರೆ ಯುದ್ಧರಂಗದಲ್ಲಿ ನಡೆಯುತ್ತಿರುವ ಪ್ರತ್ಯಕ್ಷ ದೃಶ್ಯವನ್ನೂ ಸಹ ನೋಡಲಿಲ್ಲ. ಇಲ್ಲಿ ಕೆಲವರಿಗೆ ಆಶ್ಚರ್ಯ ಉಂಟಾಗಿ ಸಂಜಯನು ಹೇಳಿದಾಗ ಧೃತರಾಷ್ಟ್ರನು ಕೇಳಿದ ಮಾತುಗಳೇ ತಾನೆ ಭಗವದ್ಗೀತೆ ರೂಪವಾಗಿರುವುದೆಂಬ ಅನುಮಾನವನ್ನು ವ್ಯಕ್ತಮಾಡಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ಭಗವದ್ಗೀತೆ ಕೇವಲ ಶ್ರೀಕೃಷ್ಣನು ಅರ್ಜುನನು ಮಾತನಾಡಿದ ವಿಷಯವೇ ಆಗಲಿ ಇತರರಿಗೆ ಯಾವ ಸಂಬಂಧವಿಲ್ಲ. ಹಾಗಲ್ಲದೆ ಗೀತೆ ಸಂಜಯ ಧೃತರಾಷ್ಟ್ರರ ಸಂಭಾಷಣೆ ಆಗಿದ್ದರೆ ಗೀತೆಗೆ ಸಂಜಯ ಧೃತರಾಷ್ಟ್ರರ ಸಂವಾದವೆಂದು ಹೆಸರು ಬಂದಿರುತ್ತಿತ್ತು. ಶ್ರೀಕೃಷ್ಣಾರ್ಜುನ ಸಂವಾದವೆಂದು ಹೆಸರು ಬರುತ್ತಿರಲಿಲ್ಲ.

ಗೀತೆಯನ್ನು ಬರೆದ ವ್ಯಾಸನು ಸಂಜಯ ಧೃತರಾಷ್ಟ್ರರು ಮಾತನಾಡಿದಂತೆ ಬರೆದಿದ್ದಾನೆ ಅಲ್ಲವೆ! ಇದು ಅಸತ್ಯವಾ ಎಂದೂ ಸಹ ಕೆಲವರು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ವ್ಯಾಸನು ಜಾಣ್ಮೆಯಿಂದ ಶ್ರೀಕೃಷ್ಣಾರ್ಜುನರು ಮಾತನಾಡಿದ ವಿಷಯವೆನ್ನುತ್ತಲೇ ಆ ವಿಷಯವನ್ನು ಸಂಜಯ ಧೃತರಾಷ್ಟ್ರರು ಮಾತನಾಡಿದಂತೆ ಚಿತ್ರೀಕರಿಸಿದ್ದಾನೆ. ಆ ದಿನ ವ್ಯಾಸನು ಹಾಗೆ ಮಾಡುವುದರಲ್ಲಿ ಒಂದು ವಿಶೇಷವಿದೆ. ಪ್ರಜೆಗಳು ಸುಲಭವಾಗಿ ಅರ್ಥ ಮಾಡಿಕೊಳ್ಳಬೇಕೆಂಬ ಉದ್ದೇಶದಿಂದಲೇ ಸಂಜಯ

ಧೃತರಾಷ್ಟ್ರರ ಪಾತ್ರಗಳು ಕಲ್ಪಿಸಿ ಸ್ವಲ್ಪಮಟ್ಟಿನ ಗೀತೆಯನ್ನು 701 ಶ್ಲೋಕಗಳ ರೂಪವಾಗಿ ಮಾಡಿದ್ದಾನೆ. ಒಳ್ಳೆಯದನ್ನು ಬೋಧಿಸುವುದಕ್ಕೆ ಚಿಕ್ಕ ಮಕ್ಕಳಿಗೆ ಗುಮ್ಮನನ್ನು ಕಲ್ಪಿಸಿ ಕಥೆ ಹೇಳಿದಂತೆ, ವ್ಯಾಸನು ಸ್ವಲ್ಪ ಉದ್ದವಾಗಿ ಕೆಲವು ಪಾತ್ರಗಳನ್ನು ಕಲ್ಪಿಸಿ ಹೇಳುವುದರಲ್ಲಿ ತಪ್ಪಿಲ್ಲ. ಆದರೂ ಚಿಕ್ಕ ಮಕ್ಕಳಿಗೆ ಹೇಳುವ ಕಥೆಯಲ್ಲಿ ಗುಮ್ಮನಪಾತ್ರ ಎಷ್ಟು ಅಸತ್ಯವೊ, ಗೀತೆಯಲ್ಲಿನ ಸಂಜಯ ಧೃತರಾಷ್ಟ್ರರ ಪಾತ್ರಗಳು ಮತ್ತು 701 ಶ್ಲೋಕಗಳ ಉದ್ದ ಅಷ್ಟೇ ಅಸತ್ಯವಾಗಿರುತ್ತದೆ.

ಕೆಲವರು ಹಿರಿಯರು ತಮ್ಮ ಜ್ಞಾನವನ್ನು ಪುಸ್ತಕ ರೂಪದಲ್ಲಿ ಬರೆಯುವಾಗ ಅದನ್ನು ಹೇಗೆ ಹೇಳಬೇಕೆಂದು ಯೋಚಿಸಿ, ಹೇಗೆ ಹೇಳಿದರೆ ಪ್ರಜೆಗಳು ನಂಬುತ್ತಾರೆಂದು ಆಲೋಚಿಸಿ, ಕೆಲವು ಪಾತ್ರಗಳು ಕಲ್ಪಿಸಿ, ಅವರ ಸಂಭಾಷಣೆಯ ರೂಪದಲ್ಲಿ ಬರೆದಿದ್ದಾರೆ. ಉದಾಹರಣೆಗೆ ಅಂತವುಗಳೆ **"ಸೀತಾ ರಾಮಾಂಜನೇಯ ಸಂವಾದ", "ಶ್ರೀ ಕೃಷ್ಣರುಕ್ಮಿಣಿ ಸಂವಾದ", "ಶಿವ ಪಾರ್ವತಿ ಸಂವಾದ", "ಗುರುಶಿಷ್ಯ ಸಂವಾದ",** ಮೊದಲಾದವು ಇವೆ. ಹೀಗೆ ಎಷ್ಟೋ ಸಂವಾದರೂಪವಾಗಿ ಬರೆಯಲ್ಪಟ್ಟಿವೆ. ಆದರೆ ನಿಜವಾಗಲು ಸೀತಾ ರಾಮಾಂಜನೇಯರು, ಶ್ರೀಕೃಷ್ಣರುಕ್ಮಿಣಿಯರು ಮಾತನಾಡಲಿಲ್ಲ. ಹಾಗೆ ಶಿವಪಾರ್ವತಿಯರು, ಗುರುಶಿಷ್ಯರು ಮೊದಲಾದ ಪಾತ್ರಗಳೆಲ್ಲ ಕಲ್ಪಿತವೆ ಎಂದು ತಿಳಿಯಬೇಕು. ಹಾಗೆ ಇಲ್ಲಿ ಸಂಜಯ ಧೃತರಾಷ್ಟ್ರರ ಪಾತ್ರಗಳೂ ಸಹ ಕಲ್ಪಿತವೆ ಆಗುತ್ತವೆ.

ಈಗ ಭಗವಂತನು ಹೇಳಿದ ಗೀತೆ ವ್ಯಾಸನಿಗೆ ಹೇಗೆ ತಿಳಿದಿದೆಯೆಂಬ ಪ್ರಶ್ನೆಯೂ ಸಹ ಬರಬಹುದು. ಹಾಗೂ ಗೀತೆಯನ್ನು ವ್ಯಾಸನು ಯಾರಿಂದ ತಿಳಿದುಕೊಂಡಿದ್ದಾನೆನ್ನುವ ಪ್ರಶ್ನೆಯೂ ಸಹ ಬರಬಹುದು. ಅದಕ್ಕೆ ನಮ್ಮ ಸಮಾಧಾನವೇನೆಂದರೆ ಸಾವಧಾನವಾಗಿ ಪರಿಶೀಲಿಸಿ ನೋಡಿದರೆ ಶ್ರೀಕೃಷ್ಣನ ಮೂಲಕ ತಿಳಿದುಕೊಂಡ ಅರ್ಜುನನೇ ತಾನು ತಿಳಿದುಕೊಂಡ ವಿಷಯವನ್ನು ಯುದ್ಧದನಂತರ ಸ್ವಲ್ಪ ಕಾಲಕ್ಕೆ ವ್ಯಾಸನಿಗೆ ಸ್ವತಃವಾಗಿ ತಿಳಿಸಿರಬೇಕು. ಅರ್ಜುನನ ಮೂಖಾಂತರ ತಿಳಿದುಕೊಂಡ ವಿಷಯವನ್ನು ಹಳೆ ವಿಷಯ ಎನಿಸದಂತೆ, ಆಗಲೇ ನಡೆಯುತ್ತಿರುವ ತಾಜಾ ವಿಷಯವೆನ್ನುವಂತೆ, ಸಂಜಯ ಧೃತರಾಷ್ಟ್ರರ ಪಾತ್ರಗಳು ಕಲ್ಪಿಸಿ ವ್ಯಾಸನು ಬರೆದಿದ್ದಾನೆ. ಹಾಗೆ ವ್ಯಾಸನು ಬರೆಯುವುದರಿಂದ ಯಾರಿಗೂ ಅನುಮಾನ ಬರಲಿಲ್ಲ. ಆಲೋಚಿಸದ ಬೋಧಕರೂ ಸಹ ಹಾಗೆಯೇ ಹೇಳುತ್ತಾ ಹೋಗಿದ್ದಾರೆ. ಪ್ರಜೆಗಳೆಲ್ಲ ಅದೇ ನಿಜವೆಂದುಕೊಂಡಿದ್ದಾರೆ. ಆದರೆ ಯೋಚಿಸುವ ಕೆಲವರಿಗೆ ಮಾತ್ರ ಗೀತೆ ಅಡ್ಡಗೀತೆಯಾಗಿ ತಿಳಿಯುತ್ತಿದೆ. ಆಲೋಚಿಸುವವರಿಗೆ ಸ್ವಲ್ಪ ಅಸತ್ಯ ಅದರಲ್ಲಿ ಕಾಣಿಸುತ್ತಿದೆ. ಜ್ಞಾನದೃಷ್ಟಿ ಹೊಂದಿದವರಿಗೆ ಗೀತಾರೂಪವೇ ಬೇರೆಯಾಗಿ ಕಾಣಿಸುತ್ತಿದೆ.

ಅವರೆಲ್ಲ ಏನು ನಂಬಬೇಕೋ, ಏನು ನಂಬಬಾರದೋ ತಿಳಿಯದೆ ನಾಸ್ತಿಕರಾಗಿ ಬದಲಾಗಿದ್ದಾರೆ. ಇಂತಹ ಅರ್ಥವಾಗದ ಸಮಯದಲ್ಲಿ ಗೀತೆ ಸತ್ಯವಾದುದೆಂದು, ಹೇತುಬದ್ಧವಾದುದೆಂದು, ಅದರಲ್ಲಿನ ವಿಷಯಗಳು ಸಿದ್ಧಾಂತಪರವಾದ ಶಾಸನಗಳೆಂದು ಹೇಳುವುದು ನಮ್ಮ ಉದ್ದೇಶವಾಗಿದೆ.

ಸಂಜಯನಿಗೆ ಸಂಬಂಧವಿಲ್ಲವೆಂದು ಹೇಳುವುದರಲ್ಲಿ ಭಗವದ್ಗೀತೆ ನಿಜವಾಗಲು ಭಗವದ್ಗೀತೆಯೇ ಆಗುತ್ತದೆ. ಮಧ್ಯದಲ್ಲಿ ಸಂಜಯ ಗೀತೆ ಅಲ್ಲ. ಇದರಿಂದ ಭಗವದ್ಗೀತೆ ದೊಡ್ಡ ಸಂಚಲನೆಯನ್ನು ಸೃಷ್ಟಿಸಿದಂತಾಗಿದೆ. ಇಷ್ಟು ದೊಡ್ಡ ಬದಲಾವಣೆ (ತಿರುವು) ಮಾಡಿದರೆ ಮಾತ್ರವೆ ಚಿಕ್ಕುಗಳಿರುವ ತಪ್ಪುದಾರಿ ಬಿಟ್ಟು, ಆತಂಕಗಳಿಲ್ಲದ ಒಳ್ಳೆಯ ದಾರಿಯೊಳಗೆ ಸೇರಿಕೊಳ್ಳಲಾರೆವು. ಆದ್ದರಿಂದ ಓದುವವರು ಬಹಳ ಜಾಗ್ರತೆಯಾಗಿ ಸತ್ಯಾಸತ್ಯಗಳನ್ನು ಯೋಚಿಸಿ ತಿಳಿದುಕೊಳ್ಳಬೇಕೆಂದು ಕೋರುತ್ತಿದ್ದೇವೆ.

ಈಗೊಂದು ವಿಪ್ಲವಾತ್ಮಕವಾದ ಪ್ರಶ್ನೆ ಹಾಕಿಕೊಳ್ಳೋಣ. ಅದು ಏನೆಂದರೆ! ಭಗವಂತನು ಹೇಳಿರುವುದು ಭಗವದ್ಗೀತೆ ಎಂದು ಅರ್ಥವಲ್ಲವೆ! ಅಂತಹದರಲ್ಲಿ ನಾವು ಓದುತ್ತಿರುವ ಭಗವದ್ಗೀತೆ 18 ಅಧ್ಯಾಯಗಳಾಗಿ ಇದೆ. ಅದರಲ್ಲಿ ಮೊದಲನೆ ಅಧ್ಯಾಯ ಅರ್ಜುನ ವಿಷಾದ ಯೋಗದಿಂದ ಪ್ರಾರಂಭವಾಗಿದೆ. ಅರ್ಜುನನ ವಿಷಾದಯೋಗವೂ ಸಹ ಭಗವದ್ಗೀತೆಯೇನಾ! ಅಥವಾ ಅಲ್ಲವಾ? ಇದಕ್ಕೆ ಸಮಾಧಾನ ನೋಡೋಣ.

ಒಬ್ಬ ಡಾಕ್ಟರ್, ಒಬ್ಬರೋಗಿ ಮಾತನಾಡುಕೊಳ್ಳುತ್ತಿದ್ದಾರೆಂದುಕೊಳ್ಳೋಣ. ರೋಗಿ ತನಗಿರುವ ರೋಗವನ್ನು ಕುರಿತು ಹೇಳಿದಾಗ, ಡಾಕ್ಟರ್ ರೋಗ ನಿವಾರಣೆಗೆ ಬೇಕಾದ ಔಷಧಿಗಳು ಪತ್ಯಗಳು ಜಾಗ್ರತೆಗಳು ಮೊದಲಾದವೆಲ್ಲ ಹೇಳಿದ್ದಾನೆಂದುಕೊಳ್ಳೋಣ. ಈಗ ಏನನ್ನು ಚಿಕಿತ್ಸೆ ಎನ್ನುತ್ತೇವೆ? ಡಾಕ್ಟರ್ ಹೇಳಿದ ವಿಷಯವನ್ನು ಮಾತ್ರ ಚಿಕಿತ್ಸೆ ಎನ್ನುತ್ತೇವೆ ಅಲ್ಲವೆ! ರೋಗಿ ಹೇಳಿರುವುದನ್ನು ವೈದ್ಯವೆನ್ನುವುದಿಲ್ಲವಲ್ಲ! ಹಾಗೆಯೇ ಅರ್ಜುನನನ್ನು ರೋಗಿ ಎಂದುಕೊಳ್ಳೋಣ. ಶ್ರೀಕೃಷ್ಣನನ್ನು ವೈದ್ಯನು ಎಂದುಕೊಳ್ಳೋಣ. ಅಂತಹದರಲ್ಲಿ ಶ್ರೀಕೃಷ್ಣನು ಹೇಳಿರುವುದೇ ವೈದ್ಯವಾಗಲಿ, ಅರ್ಜುನ ಹೇಳಿರುವುದು ವೈದ್ಯವಲ್ಲ ತಾನೆ! ಅರ್ಜುನನು ತನ್ನಲ್ಲಿರುವ ಅಜ್ಞಾನವೆನ್ನುವ ರೋಗವನ್ನು ಹೊರಗಿಟ್ಟಾಗ, ಜ್ಞಾನವೆಂಬ ವೈದ್ಯವನ್ನು ಶ್ರೀಕೃಷ್ಣನು ಹೇಳಿದಾಗ, ಆ ವಿಷಯಕ್ಕೆ ವೈದ್ಯವೆಂದು ಹೆಸರಿಟ್ಟರೆ, ಅದು ಕೇವಲ ಶ್ರೀಕೃಷ್ಣನ ಮಾತುಗಳಿಗೆ ಅನ್ವಯಿಸಬೇಕು. ಕುರುಕ್ಷೇತ್ರ ಯುದ್ಧದಲ್ಲಿ ಅರ್ಜುನನು ತನ್ನಲ್ಲಿನ ವಿಷಾದವನ್ನು ಹೊರಗಿಟ್ಟಾಗ, ಸರ್ವದುಃಖಗಳನ್ನು ಹೋಗಲಾಡಿಸುವ ಜ್ಞಾನವನ್ನು ಶ್ರೀಕೃಷ್ಣನು ಹೇಳಿದ್ದಾನೆ. ಆಗ ಆತನ ಮಾತುಗಳಿಗೆ ಭಗವದ್ಗೀತೆ ಎನ್ನುವ ಹೆಸರು ಬಂದಿದೆ.

"ಭಗವದ್ಗೀತೆ" ಎಂದರೆ ಭಗವಂತನಾದ ಶ್ರೀಕೃಷ್ಣನು ಹೇಳಿರುವುದೇಯಾಗಲಿ ಅರ್ಜುನನು ಹೇಳಿರುವುದು ಅಲ್ಲವೆಂದು ತಿಳಿಯುತ್ತದೆ. ಅಂತಹದರಲ್ಲಿ ಭಗವದ್ಗೀತೆ ಎಲ್ಲಿಂದ ಪ್ರಾರಂಭವಾಗಿದೆ ಎನ್ನುವ ಪ್ರಶ್ನೆ ಉದ್ಭವಿಸಿದರೆ! ವೈದ್ಯರು ಹೇಳಿರುವುದೆ ವೈದ್ಯವೆನ್ನುವಂತೆ ಭಗವಂತನು ಹೇಳಿರುವುದೇ ಭಗವದ್ಗೀತೆಯಾಗುತ್ತದೆ. ಆದ್ದರಿಂದ ಭಗವಂತನ ಮಾತುಗಳು ಎಲ್ಲಿಂದ ಪ್ರಾರಂಭವಾಗಿವೆಯೋ ಅಲ್ಲಿಂದಲೇ ಭಗವದ್ಗೀತೆ ಪ್ರಾರಂಭವಾಗಿದೆ ಎಂದು ನಿಸ್ಸಂಕೋಚವಾಗಿ ಹೇಳಬಹುದು. ನಮಗೆ ಅವಶ್ಯಕವಾದ, ನಾವು ತಿಳಿದುಕೊಳ್ಳಬೇಕಾದ ವಿಷಯಗಳು, ಭಗವಂತನ ಮಾತುಗಳಿಂದಲೇ ಪ್ರಾರಂಭವಾಗಿವೆ. ಭಗವಂತನ ಮಾತುಗಳು ಜೀವಾತ್ಮಗಳು ತಿಳಿದುಕೊಳ್ಳಬೇಕಾದ ಹದ್ದು ಆದ್ದರಿಂದ ಅವುಗಳನ್ನು **"ಗೀತೆ"** ಎಂದು ಕರೆಯಲಾಗಿದೆ.

ಇಲ್ಲಿ ಕೆಲವರಿಗೊಂದು ಸಂಶಯ ಬರಬಹುದು. ಅದೇನೆಂದರೆ! ರೋಗಿ ಇಲ್ಲದೆ ವೈದ್ಯನು, ರೋಗ ಇಲ್ಲದೆ ಚಿಕಿತ್ಸೆ ಅವಶ್ಯಕತೆ ಇಲ್ಲ ತಾನೆ! ಅಂತಹದರಲ್ಲಿ ಅರ್ಜುನನು ಹೇಳಿದ ವಿಷಾದಯೋಗ ಭಗವದ್ಗೀತೆಯಲ್ಲಿ ಪ್ರಾಮುಖ್ಯ ಅಲ್ಲವೆ! ಎಂದು ಕೇಳಬಹುದು. ಅದಕ್ಕೆ ಸಮಾಧಾನ ಏನೆಂದರೆ ವಿಷಾದ ಎನ್ನುವುದು ಆ ದಿನದ ಅರ್ಜುನನಿಗೆ ಅಲ್ಲದೇ ಈ ದಿನದ ಮಾನವರಿಗೆಲ್ಲರಿಗೂ ವಿಷಾದವಿದೆ. ಅಂತಹದರಲ್ಲಿ ಗೀತೆ ಮಾನವರಿಗೆಲ್ಲರಿಗೂ ಅಗತ್ಯ. ವಿಷಾದ ಇದ್ದದ್ದು ಆ ದಿನದ ಅರ್ಜುನನಿಗೆ ಎನ್ನುವಂತೆ ಆತನ ವಿಷಾದವನ್ನೇ ಹೇಳಿಕೊಳ್ಳುವ ಅವಶ್ಯಕತೆ ಇಲ್ಲ. ಶ್ರೀಕೃಷ್ಣನು ಹೇಳಿದ ಮಾತುಗಳು ಭವರೋಗಗಳು ಇರುವವರಿಗೆಲ್ಲರಿಗೂ ವೈದ್ಯವಂತಹವು, ಭವರೋಗಗಳೆನ್ನುವವು ಮಾನವರಾದ ನಮ್ಮೆಲ್ಲರಿಗಿದ್ದೇ ಇವೆ. ಆದ್ದರಿಂದ ಅರ್ಜುನ ವಿಷಾದಯೋಗವೆಂಬ ಅಧ್ಯಾಯವನ್ನು ಭಗವದ್ಗೀತೆ ಎಂಬ ಹೆಸರಿನಿಂದ ಹೇಳಿಕೊಳ್ಳುವ ಅವಶ್ಯಕತೆ ಇಲ್ಲ. ಭಗವದ್ಗೀತೆಯನ್ನು ಪ್ರತಿ ಪುಸ್ತಕದಲ್ಲಿಯೂ ಭಗವಂತನು ಹೇಳಿದ ವಿಷಯಗಳಿಂದಲೇ ಪ್ರಾರಂಭಿಸಿ ಬರೆದಿದ್ದರೆ ಎಷ್ಟೋ ಚೆನ್ನಾಗಿರುತಿತ್ತು. ಹಾಗಲ್ಲದೆ ಪ್ರತಿ ಭಗವದ್ಗೀತೆಯಲ್ಲಿಯೂ ಅರ್ಜುನನ ವಿಷಾದಯೋಗದಿಂದ ಪ್ರಾರಂಭಿಸಿರುವುದರಿಂದ ಓದಿದವರೆಲ್ಲರೂ ಶ್ರೀಕೃಷ್ಣನು ಅರ್ಜುನನಿಗೆ ಹೇಳಿದ್ದಾನೆಂದು, ಆ ವಿಷಯಗಳು ಅರ್ಜುನನಿಗೋಸ್ಕರವೇ ಎಂದು, ಅರ್ಜುನನಿಂದ ಯುದ್ಧ ಮಾಡಿಸುವುದಕ್ಕೆಂದು, ಅಧೈರ್ಯಪಟ್ಟ ಪಾರ್ಥನನ್ನು ಧೈರ್ಯ ತುಂಬಿಸುವುದಕ್ಕೆಂದು, ಕೇವಲ ಅರ್ಜುನನಿಗೋಸ್ಕರ ಭಗವದ್ಗೀತೆ ಇದ್ದಂತೆ ತಿಳಿಯುತ್ತಿದ್ದಾರೆ. ಅರ್ಜುನ ವಿಷಾದಯೋಗ ಓದಿದ ಕೆಲವರು "ಅರ್ಜುನನಿಗೆ ದುಃಖ ಇದೆ. ಆದ್ದರಿಂದ ಆತನಿಗದು ಅಗತ್ಯವಾಗಿದೆ. ನಮಗೇನು ದುಃಖವಿಲ್ಲ ಆದ್ದರಿಂದ ನಮಗೆ ಅವಶ್ಯಕತೆ ಇಲ್ಲ" ಎನ್ನುತ್ತಿದ್ದಾರೆ. ಇಲ್ಲಿ ಮುಖ್ಯವಾಗಿ ಓದುವವನಿಗೆ ತನಗೋಸ್ಕರವೇ ಇದರಲ್ಲಿನ ವಿಷಯಗಳು ಇವೆಯೆಂದು

ಯಾರ ಆಲೋಚನೆಗೂ ಬರುತ್ತಿಲ್ಲ. ಆದ ಕಾರಣ ಈ ದಿನ ಭಗವದ್ಗೀತೆ ಪಾರಾಯಣ ಮಾಡುವುದಕ್ಕೇ ಇದೆಯೆಂದು, ಕಂಠಪಾಠ ಮಾಡಿಕೊಂಡು ಪಾರಾಯಣ ಮಾಡುತ್ತಿದ್ದಾರೆ. ಆದರೆ ಅದರ ಅರ್ಥವನ್ನು ಕುರಿತು ಯಾರೂ ಯೋಚಿಸುತ್ತಿಲ್ಲ.

ಚೆನ್ನಾಗಿ ಪಾರಾಯಣ ಮಾಡುವ ಒಬ್ಬರ ಹತ್ತಿರಕ್ಕೆಹೋಗಿ ನೀವು ಶ್ಲೋಕಗಳನ್ನು ಬಹಳ ಸ್ಪಷ್ಟವಾಗಿ ಪಾರಾಯಣ ಮಾಡುತ್ತಿದ್ದೀರಾ. ಅದರಲ್ಲಿನ ಅರ್ಥವೂ ನಿಮಗೆ ಚೆನ್ನಾಗಿ ತಿಳಿದಿರುತ್ತದೆಂದು ಕೇಳಿದಾಗ! ಅದಕ್ಕೆ ಆತನು "ಅರ್ಥದಿಂದ ನಮಗೆ ಕೆಲಸವಿಲ್ಲ, ಪಾರಾಯಣ ಮಾಡುವುದು ಒಳ್ಳೆಯದೆಂದು ಮಾಡುತ್ತಿದ್ದೇವೆ' ಎಂದನು. ಆ ಶ್ಲೋಕಗಳು ಯಾವುದರ ನಿಮಿತ್ತವಾಗಿ ಹೇಳಲ್ಪಟ್ಟವೆಯೋ ತಿಳಿಯದಂತೆ ಕೇವಲ ಪಾರಾಯಣ ಮಾಡುವುದು ಏನು ಒಳ್ಳೆಯದೆಂದು ನಾವು ಕೇಳಿದಾಗ! ಆತನು ಶ್ರೀಕೃಷ್ಣನು ಏನು ಹೇಳಿದರೆ ನಮಗೇನು? ಏನು ಹೇಳಿದ್ದಾನೆಂದು ನೋಡಿಕೊಳ್ಳಬೇಕಾಗಿರುವುದು ಅರ್ಜುನನೇ ಹೊರತು ನಾವಲ್ಲ. ನಾವು ದೊಡ್ಡವರು ಹೇಳಿದಂತೆ ಪಾರಾಯಣ ಮಾಡುವುದು ಒಳ್ಳೆಯದು, ಆದರೆ ಇದೇತಕ್ಕೆ ಅದೇತಕ್ಕೆಂದು ಕೇಳಬಾರದೆಂದು ಗದರಿಸಿ ಹೇಳಿದನು. ಹೀಗೆ ಬಹಳ ಜನರು ಗೀತೆಯಲ್ಲಿ ಮೊದಲ ಅಧ್ಯಾಯವಾದ ಅರ್ಜುನ ವಿಷಾದಯೋಗದಿಂದ ಗೀತೆಯೊಂದರ ಭಾವಕ್ಕೆ ದೂರವಾಗುತ್ತಿದ್ದಾರೆಂದು ತಿಳಿಯುತ್ತಿದೆ. ಆದ್ದರಿಂದ ನಾವು ಈಗ ಬರೆಯುವ ಭಗವದ್ಗೀತೆಯಲ್ಲಿ ಅರ್ಜುನ ವಿಷಾದಯೋಗ ಎನ್ನುವ ಅಧ್ಯಾಯ ಇಲ್ಲದಂತೆ ಕೇವಲ ಭಗವಂತನು ಹೇಳಿದ ಮಾತುಗಳಿಂದಲೇ ಪ್ರಾರಂಭ ಮಾಡಿ ಭಗವದ್ಗೀತೆ ಎನ್ನುವ ಹೆಸರಿಗೆ ಅರ್ಥ ಸಾರ್ಥಕವಾಗುವಂತೆ ಬರೆಯಬೇಕೆಂದುಕೊಂಡಿದ್ದೇವೆ.

ಕೆಲವರು ತಿಳುವಳಿಕೆಯುಳ್ಳವರು ಗೀತಾ ಪಾರಾಯಣದ ಮೇಲೆ ದೃಷ್ಟಿ ಇಡದೆ, ಅದರಲ್ಲಿ ಶ್ರೀಕೃಷ್ಣನು ಏನು ಹೇಳಿದ್ದಾನೆಂದು ನೋಡುವವರೂ ಸಹ ಇದ್ದಾರೆ. ಅಂತಹವರು, ಅದರಲ್ಲಿನ ಸತ್ಯವನ್ನು ತಿಳಿದುಕೊಳ್ಳಬೇಕೆನ್ನುವವರು, ಗೀತೆಯನ್ನು ಪೂರ್ತಿಯಾಗಿ ಓದಿದರೂ ಅದರಲ್ಲಿ ಏನು ತಿಳಿದುಕೊಳ್ಳದೆ ಕೊನೆಗೆ ಎಷ್ಟೋ ಸಂಶಯಗಳನ್ನು ಹೊಂದಿ ಇದು ನಮಗೇನು ಅರ್ಥವಾಗುತ್ತಿಲ್ಲ. ಇದರಲ್ಲಿನ ವಿಷಯಗಳು ಒಂದಕ್ಕೊಂದು ಹೋಲಿಕೆ ಇಲ್ಲದಂತೆ ಇವೆ. ಇದು ಅರ್ಜುನನಿಂದ ಯುದ್ಧ ಮಾಡಿಸುವುದಕ್ಕೋಸ್ಕರ ಆತನನ್ನು ಉತ್ಸಾಹಪಡಿಸುವುದಕ್ಕೆ ಹೇಳಿದ ಮಾತುಗಳಾಗಲಿ, ಸಿದ್ಧಾಂತಪರವಾಗಿ ಲೆಕ್ಕಿಸುವ ವಿಷಯಗಳು ಇಲ್ಲವೆನ್ನುತ್ತಿದ್ದಾರೆ. ಆ ಮಾತು ಕೇಳಿದ ನಾವು "ಭಗವದ್ಗೀತೆ ಧರ್ಮಯುಕ್ತವಾದದ್ದು, ಶಾಸ್ತ್ರಬದ್ಧವಾದದ್ದು. ಅಂತಹದ್ದನ್ನು ಸಿದ್ಧಾಂತಪರವಾಗಿಲ್ಲ ಎನ್ನುವುದು ಎಂತಹ ಮಾತು" ಎಂದು ಕೇಳಿದಾಗ! ಅವರು ಅವರಿಗಿರುವ ಅನುಮಾನಗಳನ್ನು ಹೀಗೆ ಹೇಳುತ್ತಿದ್ದಾರೆ.

ಏನಯ್ಯಾ ಗೀತೆಯಲ್ಲಿ ಇರೋದು? ಕುರುಡರಂತೆ ಓದುವವರಿಗಾದರೆ ಸರಿಹೋಗುತ್ತದೆ. ವಿವರಣಾ ದೃಷ್ಟಿಯಿಂದ ಓದುವ ನಮ್ಮಂತವರಿಗೆ ಸರಿಹೋಗುವುದಿಲ್ಲ. ಒಂದು ಕಡೆ ಇಂದ್ರಿಯಗಳಿಗೆ ತಿಳಿಯದಿರುವುದು 'ಆತ್ಮ' ಎನ್ನುತ್ತಾರೆ, ಮತ್ತೊಂದು ಕಡೆ 'ಓಂ' ಎನ್ನುವ ಅಕ್ಷರವೇ ದೇವರೆನ್ನುತ್ತಾರೆ, ಅಲ್ಲಿ ಕಾಣಿಸದವನು, ಕೇಳಿಸದವನು ಇಲ್ಲಿ ಹೇಗೆ ಕಾಣಿಸಿ ಕೇಳಿಸುವ 'ಓಂ' ಆಗಿದ್ದಾನೆ? ಒಂದು ಕಡೆ ಪ್ರಕೃತಿಯೇ ಎಲ್ಲಾ ಮಾಡುತ್ತಿದೆ, ನಾನು ಏನು ಮಾಡಲಿಲ್ಲ ನೋಡುತ್ತಿದ್ದೇನೆ, ಕೇವಲ ಸಾಕ್ಷಿ ಮಾತ್ರವೆ ಎಂದು ಹೇಳಿ, ಮತ್ತೊಂದು ಕಡೆ ಎಲ್ಲಾ ನಾನೇ ಮಾಡುತ್ತಿದ್ದೇನೆ, ಗೊಂಬೆಗಳ ಆಟದಂತೆ ಆಡಿಸುತ್ತಿದ್ದೇನೆನ್ನುವುದು ಧರ್ಮವಾ? ಸಿದ್ಧಾಂತವಾ? ಒಂದು ಕಡೆ ನನಗೆಲ್ಲರು ಸಮಾನವೆಂದು, ಎಲ್ಲರಿಗೂ ನಾನು ಸಮಾನನೆಂದು ಹೇಳಿದವನು, ಮತ್ತೊಂದು ಕಡೆ ಹೆಚ್ಚು ಕಡಿಮೆ ಕುಲಗಳಾಗಿ ಹುಟ್ಟಿಸುತ್ತೇನೆಂದು ಹೇಳುವುದು ದೈವತ್ವವಾ? ಒಂದು ಕಡೆ ಗುಣಗಳಿಂದಲೇ ಕಾರ್ಯಗಳು ನಡೆಯುತ್ತಿವೆಯೆನ್ನುತ್ತಾನೆ ಮತ್ತು ಗುಣಗಳನ್ನು ತ್ಯಜಿಸೆನ್ನುತ್ತಾನೆ. ಮತ್ತೊಂದು ಕಡೆ ಗುಣಗಳನ್ನು ತ್ಯಜಿಸಿ ಕೆಲಸಗಳನ್ನು ಮಾಡದಿರುವುದು ತಾಮಸವೆನ್ನುತ್ತಾನೆ. ಹಾಗೆ ಕೆಲಸಗಳು ಬಿಡಬಾರದೆನ್ನುತ್ತಾನೆ. ಒಂದುಕಡೆ ನಾಯಿಯನ್ನು, ಆನೆಯನ್ನು, ಚಂಡಾಲರೆಲ್ಲರನ್ನು ಸಮಾನವಾಗಿ ನೋಡೆನ್ನುತ್ತಾನೆ. ಮತ್ತೊಂದು ಕಡೆ ಅವನು ಶತ್ರು, ಅವನನ್ನು ಕೊಲ್ಲು ಎನ್ನುತ್ತಾನೆ. ಒಂದುಕಡೆ ಆತ್ಮ ಸಾಯಲ್ಪಡುವುದಿಲ್ಲ ಎನ್ನುತ್ತಾನೆ, ಮತ್ತೊಂದು ಕಡೆ ಎಲ್ಲರನ್ನು ನಾಶಮಾಡುವ ಕಾಲವು ನಾನೇ ಎನ್ನುತ್ತಾನೆ. ಈ ವಿಧವಾಗಿ ಗೀತೆಯಲ್ಲಿ ಎಷ್ಟೋ ದಿಕ್ಕು ತೋಚದ ಮಾತುಗಳಿವೆ. ಆದ್ದರಿಂದ ಅರ್ಥದಿಂದ ಕೆಲಸವಿಲ್ಲದಂತೆ ಕಂಠಪಾಠವಾಗಿ ಓದುವವರಿಗೆ ಸರಿಹೋಗುತ್ತದಾಗಲಿ ನಮಗೆ ಇಷ್ಟವಿಲ್ಲ ಹೋಗು" ಎನ್ನುತ್ತಿದ್ದಾರೆ.

ಭಾವವೇನೆಂದು ನೋಡುವವರಿಗೆ ಗೀತೆಯಲ್ಲಿ ಕೆಲವು ಸಂಶಯಗಳು ಬರುವ ಮಾತು ನಿಜವೆ. ಅಷ್ಟುಮಾತ್ರಕ್ಕೆ ಗೀತೆಯನ್ನು ಅಶಾಸ್ತ್ರೀಯ, ಸಿದ್ಧಾಂತ ಅಲ್ಲವೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಗೀತೆಯನ್ನು ಕನ್ನಡದೊಳಗೆ ಅನುವಾದಿಸಿ ಅರ್ಥ ಹೇಳುವವರು ಸರಿಯಾದ ವಿಧವಾಗಿ ಹೇಳಲಾರದೆ ಹೋಗುವುದರಿಂದ ಮೇಲಿನ ವಿಧವಾಗಿ ಅನುಮಾನಗಳು ಕೆಲವರಿಗೆ ಬಂದಿರಬಹುದು. ಸತ್ಯ ಹೇಳಬೇಕೆಂದರೆ ಆ ದಿನ ಭಗವಂತನು ತಿಳಿಸಿದ ಗೀತೆ ಇಂದಿನವರೆಗೂ ಅರ್ಥವಾಗಿಲ್ಲವೆಂದು ಹೇಳಬಹುದು. ಏಕೆಂದರೆ ಭಗವದ್ಗೀತೆಯನ್ನು ಸಕ್ರಮವಾಗಿ ಅರ್ಥ ಮಾಡಿಕೊಳ್ಳಬೇಕೆಂದರೆ ಮುಖ್ಯವಾಗಿ ನಾಲ್ಕು ಸೂತ್ರಗಳನ್ನು ಅನುಸರಿಸಿ ಓದಬೇಕಾಗಿರುತ್ತದೆ. ಬರೆಯುವವರೂ ಸಹ ಆ ನಾಲ್ಕು ಸೂತ್ರಗಳನ್ನು ಅನುಸರಿಸಿ ಬರೆದಿರಬೇಕು. ಹಾಗೆ ಸೂತ್ರಬದ್ಧವಾಗಲ್ಲದೆ ಇಷ್ಟಬಂದಂತೆ ಬರೆಯುವವರಿಗೆ, ಇಷ್ಟಬಂದಂತೆ ಓದುವವರಿಗೆ ಗೀತೆಯಲ್ಲಿನ ಅಂತರಾರ್ಥ ಎಂದಿಗೂ

ಅರ್ಥವಾಗುವುದಿಲ್ಲ. ಇಲ್ಲಿಯವರೆಗೂ ಈ ನಾಲ್ಕು ಸೂತ್ರಗಳನ್ನು ಯಾರು ಅನುಸರಿಸಲಿಲ್ಲ. ಆದ ಕಾರಣ ಗೀತೆಯೊಂದರ ಸ್ವರೂಪ ಯಾರಿಗೂ ಅರ್ಥ ಆಗಲಿಲ್ಲವೆಂದೇ ಹೇಳಬಹುದು. ಈ ಮಾತಿಗೆ ಕೆಲವರಿಗೆ ಕೋಪ ಬರಬಹುದು. ಗೀತೆ ನಮಗೆ ತಿಳಿದಿಲ್ಲವಾ ಎಂದು ನಮ್ಮನ್ನು ದೂಷಿಸಿದರೂ ಪರವಾಗಿಲ್ಲ. ಇಲ್ಲಿಯವರೆಗೂ ಸಂಶಯ ರಹಿತವಾದ ಗೀತೆ ಇಲ್ಲ! ಆದ್ದರಿಂದ ಸಂಶಯ ರಹಿತವಾದ ಗೀತೆ ಬೇಕೆಂದರೆ ಮುಖ್ಯವಾದ ನಾಲ್ಕು ಸೂತ್ರಗಳು ಇಲ್ಲಿ ಗಮನದಲ್ಲಿಟ್ಟು ಓದಬೇಕು. ಆ ನಾಲ್ಕು ಸೂತ್ರಗಳು ಏನೆಂದರೆ!

1) **ಓದುತ್ತಿರುವ ಶ್ಲೋಕ ಜೀವಾತ್ಮಕ್ಕಾ, ಆತ್ಮಕ್ಕಾ, ಪರಮಾತ್ಮಕ್ಕಾ, ಪ್ರಕೃತಿಗಾ? ಯಾರನ್ನು ಕುರಿತು ಹೇಳಲಾಗಿದೆ?**

2) **ಓದುತ್ತಿರುವ ಶ್ಲೋಕ ಬ್ರಹ್ಮಯೋಗಕ್ಕಾ! ಅಥವಾ ಕರ್ಮಯೋಗಕ್ಕಾ ಯಾವುದಕ್ಕೆ ಸಂಬಂಧಿಸಿರುವುದು?**

3) **ಓದುತ್ತಿರುವ ಶ್ಲೋಕ ಸಾಕಾರಕ್ಕಾ, ನಿರಾಕಾರಕ್ಕಾ.! ಯಾರನ್ನು ಕುರಿತು ಹೇಳಿರುವುದು?**

4) **ಓದುತ್ತಿರುವ ಶ್ಲೋಕ ಶಾಸ್ತ್ರಬದ್ಧವಾ! ಅಲ್ಲವಾ?**

ಈ ನಾಲ್ಕು ಸೂತ್ರಗಳು ಗೀತೆಯ ಮೇಲೆ ಪ್ರಯೋಗಿಸಿ ನೋಡದೆ ಹೋದರೆ ಅದು ಆಕಾರಪ್ರಾಯವೇ ಆಗುತ್ತದಾಗಲಿ ಅರ್ಥಸಹಿತವು ಆಗುವುದಿಲ್ಲ. ಈ ನಾಲ್ಕು ಸೂತ್ರಗಳ ಪ್ರಕಾರ ಇಲ್ಲಿಯವರೆಗೂ ಯಾವ ಭಗವದ್ಗೀತೆ ಬರೆದಿಲ್ಲ. ಆದ್ದರಿಂದ ಅವುಗಳಲ್ಲಿ ಎಷ್ಟೋ ಸಂಶಯಗಳು ಉಳಿದಿವೆ ಎನ್ನುವುದರಲ್ಲಿ ತಪ್ಪಿಲ್ಲ. ಸಂಶಯರಹಿತ ಜ್ಞಾನ ಗೀತೆಯಿಂದ ಅರ್ಥವಾಗಬೇಕೆಂದರೆ ತಪ್ಪದೆ ಮೇಲಿನ ಸೂತ್ರಗಳನ್ನು ಅನುಸರಿ ಸಬೇಕಾಗಿರುತ್ತದೆ. ಮೇಲಿನ ಸೂತ್ರಗಳಲ್ಲಿ ನಾಲ್ಕನೇ ಸೂತ್ರವನ್ನು ಗೀತೆಯ ಮೇಲೆ ಉಪಯೋಗಿಸಿದರೆ, ಅದರಲ್ಲಿನ ಅಶಾಸ್ತ್ರೀಯ ಕಲ್ಪಿತ ಶ್ಲೋಕಗಳೆಲ್ಲವೂ ಹೊರಬೀಳುತ್ತವೆ. ಭಗವಂತನ ಉದ್ದೇಶಕ್ಕೆ ಯಾವ ಶ್ಲೋಕಗಳಾದರೆ ಭಿನ್ನವಾಗಿವೆಯೋ ಅವೆಲ್ಲವೂ ಈ ಸೂತ್ರದಿಂದ ಸಿಗುತ್ತವೆ. ಭಗವಂತನು ಹೇಳಿದ ಭಾವವೆಲ್ಲ ಶಾಸ್ತ್ರಬದ್ಧವೆ, ಆದ್ದರಿಂದ ಆ ಮಾತುಗಳು ಓದಿದವರಿಗೆ ಎಂತಹ ಸಂಶಯಗಳು ಬರುವುದಿಲ್ಲ. ಮೇಲಿನ ನಾಲ್ಕು ಸೂತ್ರಗಳಿಗೆ ಸಂಬಂಧವಿಲ್ಲದ ಶ್ಲೋಕಗಳು ಭಗವದ್ಗೀತೆಗೆ ಯಾವ ಸಂಬಂಧವಿಲ್ಲವೆಂದು ಹೇಳಬಹುದು. ಈಗ ಈ ಸೂತ್ರಗಳು ಪ್ರಯೋಗಿಸಿ ಗೀತಾಮಹತ್ವಕ್ಕು, ಗೀತೆಗೂ ಸಂಬಂಧ ಏನಾದರೂ ಇದೆಯೇನೊ ನೋಡೋಣ.

ಗತ ಕಾಲದಲ್ಲಿನ ಹಿರಿಯರು ಏನೋ ಒಂದು ಒಳ್ಳೆಯದು ಮಾಡಬೇಕೆಂದು ಕೊಂಡರೆ ಆ ಕೆಲಸಗಳು ಈಗಿನ ಸಮಾಜದಲ್ಲಿ ದುರದೃಷ್ಟವಶಾತ್ ಅರ್ಥವಿಲ್ಲದಿರುವವಾಗಿ, ಅನರ್ಥಗಳೊಂದಿಗೆ ಕೂಡಿಕೊಂಡಿವೆ. ಹಿರಿಯರು ಆಸೆಪಟ್ಟ ಫಲಿತಗಳಿಗಿಂತ ಬೇರೆ ಫಲಿತಗಳು ಎದುರಾಗಿವೆ. ಉದಾಹರಣೆಗೆ ಯಮಲೋಕವನ್ನು ಕುರಿತು ಅದು ಎಲ್ಲೋ ಇದೆಯೆಂದು, ಅಲ್ಲಿ ಪಾಪಗಳ ಪಟ್ಟಿಯ ಪ್ರಕಾರ ನರಕವನ್ನು ಅನುಭವಿಸಬೇಕಾಗಿರುತ್ತದೆ ಎಂದು ಭಯ ಉಂಟಾಗುವಂತೆ ವಾಸ್ತವಕ್ಕೆ ಅಲ್ಲಿ ಇಲ್ಲದ ಯಮಲೋಕವನ್ನು ಕುರಿತು ವರ್ಣಿಸಿದ್ದಾರೆ. ಅದರಿಂದ ಪ್ರಜೆಗಳಿಗೆ ಪಾಪವೆಂದರೆ ಭಯವುಂಟಾಗಿ, ಪಾಪದ ಕೆಲಸಗಳು ಮಾಡದಂತಿರುತ್ತಾರೆಂದು ಹಿರಿಯರ ಭಾವ. ಅವರದು ಒಳ್ಳೆಯ ಭಾವವೇ ಆದರೂ ಅದರ ಫಲಿತ ಆಸೆಪಟ್ಟಂತೆ ಇಲ್ಲ ಅದು ಪ್ರಜೆಗಳಲ್ಲಿ ಬೇರೆ ವಿಧವಾಗಿ ತಯಾರಾಗಿಹೋಗಿದೆ. ಪಾಪ ಮಾಡುವವನಿಗೆ ಪಾಪಭೀತಿ ಉಂಟಾಗುತ್ತಿಲ್ಲ. ಮಾಡುವ ಕೆಲಸ ಕೆಟ್ಟದೆಂದು ತಿಳಿದರೂ ಅದು ಆ ಸಮಯಕ್ಕೆ ಅನುಕೂಲವಾದ ಕೆಲಸವೆಂದು ಪಾಪ ಬಂದರೆ ಬರಲಿಬಿಡು ಎಂದು, ಯಮಲೋಕಕ್ಕೆ ಹೋದಾಗ ಅಲ್ಲವೆ ಅನುಭವಿಸುವುದೆಂದು, ಮರಣಿಸಿದ ನಂತರ ಏನೋ ನಡೆಯುತ್ತದೆಂದು ಈಗೇಕೆ ಬಿಡಬೇಕೆಂದು, ಆಗ ಏನು ನಡೆಯುತ್ತದೋ ಯಾವನು ನೋಡಿದ್ದಾನೆಂದು, ಯಮಲೋಕ ಎನ್ನುವುದು ದೃಷ್ಟಾಂತ ಇಲ್ಲದ ಮಾತೆಂದು ಇಷ್ಟಬಂದಂತೆ ಯಾರಷ್ಟಕ್ಕೆ ಅವರಂದುಕೊಳ್ಳುವುದು ಪ್ರಾರಂಭ ಮಾಡಿದ್ದಾರೆ. ವಾಸ್ತವಕ್ಕೆ ಪಾಪಭೀತಿ ಇಲ್ಲದಂತೆ ಹೋಗಿದೆ.

ದೊಡ್ಡವರು ಯಮಲೋಕ ಎಲ್ಲೊ ಇದೆಯೆಂದು ವರ್ಣಿಸದೆ ಇಲ್ಲೆ ಇದೆಯೆಂದು, ಭೂಮಿ ಮೇಲೆ ಅನುಭವಿಸುವ ಕಷ್ಟಬಾಧೆಗಳೆಲ್ಲ ಯಮಬಾಧೆಗಳೇ ಎಂದು, ವಾಸ್ತವ ತಿಳಿಸಿದ್ದರೆ ಪ್ರತ್ಯಕ್ಷವಾಗಿ ನಡೆಯುವ ಘೋರವಾದ ಬಾಧೆಗಳನ್ನು ನೋಡಿ, ಮಾನವನು ಪಾಪದ ಪರಿಣಾಮ ಹೀಗಿರುತ್ತದೆಂದು ತಿಳಿದುಕೊಂಡು, ಪಾಪದ ಕೆಲಸಗಳಿಂದ ತಪ್ಪಿಸಿಕೊಳ್ಳುತ್ತಿದ್ದನು. ಇರುವುದು ಇದ್ದಹಾಗೆ ಹೇಳದೆ ಮಾನವರಿಗೆ ಅರ್ಥವಾಗಬೇಕೆಂದು ಕಥೆಗಳ ರೂಪದಲ್ಲಿ ಸೃಷ್ಟಿಸಿ ಹೇಳಿದ ಮಾತುಗಳು ಮಾನವರಿಗೆ ಅಡ್ಡ ದಾರಿಯನ್ನು ತೋರಿಸಿವೆ. ಹಾಗೆ ಈದಿನ "ಗೀತಾಮಹತ್ವ" ದಿಂದ ಗೀತೆಯ ಬಗ್ಗೆ ಮಾನವರ ಭಾವ ಅಡ್ಡದಾರಿಯೇ ಹಿಡಿದಿದೆ ಎಂದು ಹೇಳಬಹುದು.

ಕೆಲವರು ಹಿರಿಯರು ಗೀತೆಯನ್ನು ಎಲ್ಲರೂ ಓದಬೇಕೆಂದು, ಎಲ್ಲರಿಗೂ ಅದರಲ್ಲಿ ಭಕ್ತಿ ಉಂಟಾಗುವಂತೆ ಮಾಡಬೇಕೆಂದು, ಗೀತಾಮಹತ್ವವನ್ನು ಪ್ರಕಟಿಸಿದ್ದಾರೆ. ಅದರಿಂದ ಪ್ರಜೆಗಳು ಗೀತಾ ಮಹತ್ವದಲ್ಲಿ ಕಲ್ಪಿಸಿದ ಫಲಿತಗಳ ಮೇಲೆಯೇ ಮನಸ್ಸನ್ನು ಲಗ್ನಮಾಡಿ

ಗೀತೆಯಲ್ಲಿನ ವಿಷಯಗಳನ್ನು ಬಿಟ್ಟಿದ್ದಾರೆ. ಮಹತ್ವದಲ್ಲಿ ಪ್ರಕಟಿಸಿದ ಫಲಿತಗಳೆ ಬೇಕೆಂದುಕೊಳ್ಳುತ್ತಿದ್ದಾರೆ. ಗೀತೆಯಲ್ಲಿ ಪ್ರಕಟಿಸಿದ ಧರ್ಮಗಳನ್ನು ನೋಡಲಾರದೆ ಹೋಗುತ್ತಿದ್ದಾರೆ. ಕೆಲವರು ಹಿರಿಯರು ಒಳ್ಳೆಯದೆಂದು ತಿಳಿಸಿದ ಗೀತಾಮಹತ್ವ ಮಾನವರನ್ನು ಹದಗಡಿಸಿಟ್ಟು ಅಧರ್ಮಗಳ ಕಡೆ ಮರಳಿಸಿದೆ. ಆ ವಿಧವಾಗಿ ಬದಲಾಗುವುದಕ್ಕೆ ಗೀತಾಮಹತ್ವದಲ್ಲಿ ಭಗವದ್ಗೀತೆಗೆ ವಿರುದ್ಧವಾದ ಮತ್ತು ಧರ್ಮವಿರುದ್ದವಾದ ಮಾತುಗಳೆಷ್ಟೊ ಇವೆ. ಆದ ಕಾರಣ ನಾವೆಲ್ಲರೂ ಗೀತಾಮಹತ್ವ ಎಂದರೆ ಏನೋ ತಿಳಿದುಕೊಳ್ಳಬೇಕು.

ಭಗವಂತನು ಗೀತೆಯಲ್ಲಿ ಯಾವ ಉದ್ದೇಶವನ್ನು ಪ್ರಕಟಿಸಿದ್ದಾನೋ ಆ ಉದ್ದೇಶಕ್ಕೆ ವಿರುದ್ಧ ಭಾವಗಳು ಗೀತಾಮಹತ್ವದಲ್ಲಿ ಬರೆದಿರುವುದು ವಿಚಿತ್ರ. ಗೀತೆಯಲ್ಲಿ ಭಗವಂತನು ಧರ್ಮಗಳನ್ನು ತಿಳಿಸಿದ್ದರೆ, ಧರ್ಮಗಳಿಗೆ ವಿರುದ್ಧವಾಗಿರುವ ವಾಕ್ಯಗಳನ್ನು ಗೀತಾ ಮಹಾತ್ವಗಳೆಂಬ ಹೆಸರಿನಿಂದ ಎಷ್ಟೋಜನ ಮತ್ತೆ ಮತ್ತೆ ಹೇಳುತ್ತಾ ಮಾನವರನ್ನು ಪಕ್ಕದಾರಿಯನ್ನಿಡಿಸುವುದು ಬಹಳ ವಿಚಿತ್ರ. ಅಷ್ಟೊ ಇಷ್ಟೊ ಜ್ಞಾನ ಇರುವವರೂ ಸಹ ಗೀತಾಮಹತ್ವ, ಗೀತೆಗೆ ವಿರುದ್ಧವಾಗಿದೆ ಎಂದು ಯೋಚಿಸದೆ ನಿತ್ಯ ಪಾರಾಯಣ ಮಾಡುವುದು ಬಹಳಷ್ಟು ವಿಚಿತ್ರ. ಈ ನಮ್ಮ ಮಾತುಗಳಿಗೆ ಕೆಲವರಿಗೆ ಕೋಪಬಂದು ನಮ್ಮ ಮಾತುಗಳು ಅಜ್ಞಾನಪರವಾಗಿರುವವೆಂದು ಹೇಳಬಹುದು. ಓದುವವರಾಗಿ ನೀವು ಸ್ವತಃವಾಗಿ ಯೋಚಿಸುವ ಸ್ಥಿತಿಗೆ ಬನ್ನಿ. ಒಂದು ದಿನ ಸತ್ಯವನ್ನು ಹೇಳಿದ ಏಸುಪ್ರಭುವನ್ನು ಆ ದಿನದ ಜ್ಞಾನಿಗಳು ದೈವದೂಷಣೆ ಮಾಡಿದವನಂತೆ ಲೆಕ್ಕಿಸಿ ಹಿಂಸಿಸಿ ಸಾಯಿಸಿದ್ದಾರೆ. ಸತ್ಯ ತಿಳಿದುಕೊಂಡ ನಂತರ ಆ ದಿನದ ಏಸುಮಾತುಗಳು ಈದಿನ ಶಿರೋಧಾರ್ಯವಾಗಿವೆ. ಹಾಗೆ ಒಂದು ದಿನ ಖಗೋಳ ರಹಸ್ಯಗಳನ್ನು ಹೇಳಿದ ಗೆಲೀಲಿಯೋ ಎನ್ನುವವನನ್ನು ಆ ದಿನ ಜ್ಞಾನಿಗಳಾದವರು ಸಹ ಚಿತ್ರಹಿಂಸೆ ನೀಡಿದ್ದಾರೆ. ಮತ್ತೆ ಈ ದಿನ ಆ ಗೆಲೀಲಿಯೋ ಮಾತುಗಳೆ ಖಗೋಳಶಾಸ್ತ್ರಜ್ಞರಿಗೆ ಆಧಾರವಾಗಿವೆ. ಆದ್ದರಿಂದ ನಮ್ಮ ಲೆಕ್ಕದಲ್ಲಿ ಜ್ಞಾನಿಗಳೆಂದು ಹೆಸರು ಹೊಂದಿದವರು ಇದು ಅಸತ್ಯವೆಂದು ಕಿರುಚಿದ ಮಾತ್ರಕ್ಕೆ ನೀವು ಆತುರಪಡದೆ ಆಲೋಚಿಸಿ ನೋಡಿ. ಆಗಲೇ ಸತ್ಯ ತಿಳಿಯುತ್ತದೆ.

ನಾವು ಪ್ರಕಟಿಸಿದ ನಾಲ್ಕು ಸೂತ್ರಗಳಲ್ಲಿ ನಾಲ್ಕನೆ ಸೂತ್ರದ ಪ್ರಕಾರ ನೋಡಿದಂತಾದರೆ ಗೀತಾಮಹತ್ವ ಅಶಾಸ್ತ್ರೀಯವೆಂದು ತಿಳಿಯುತ್ತದೆ. ಗೀತೆಯು ಯೋಗಶಾಸ್ತ್ರವಾಗಿದ್ದು, ಗೀತಾಮಹತ್ವ ವರಾಹಪುರಾಣವಾಗಿರುವುದು ಗಮನಿಸಬೇಕಾದ ವಿಷಯ. ಶಾಸ್ತ್ರಗಳಿಗೂ ಪುರಾಣಗಳಿಗೂ ಎಷ್ಟೋ ವ್ಯತ್ಯಾಸವಿದೆ ಎನ್ನುವುದಕ್ಕೆ ನಿರೂಪಣೆಯಾಗಿ **ಶಾಸ್ತ್ರವಾದ ಗೀತೆ ಜನ್ಮರಾಹಿತ್ಯವನ್ನು ತಿಳಿಸಿದರೆ, ಪುರಾಣವಾದ ಗೀತಾಮಹತ್ವ ಗೀತಾಪಾರಾಯಣದಿಂದ ಪ್ರಪಂಚ ಇರುವವರೆಗೂ ಮಾನವ ಜನ್ಮ**

**ಉಂಟಾಗುತ್ತದೆಂದು ತಿಳಿಸಿದೆ.** ಗೀತಾಮಹತ್ವದಲ್ಲಿ 13ನೇ ಶ್ಲೋಕದಲ್ಲಿ ಗೀತೆಯನ್ನು ಪ್ರತಿದಿನ ಒಂದು ಅಧ್ಯಾಯ ಓದುವುದರಿಂದ ಮನ್ವಂತರದವರೆಗೂ ನರಜನ್ಮ ಹೊಂದಿ, ಭೂಮಿ ಮೇಲೆ ಹುಟ್ಟುತ್ತಾರೆಂದು ಇದೆ. ಇದು ಗೀತೆಗೆ ವಿರುದ್ಧವಾದ ಮಾತು ಅಲ್ಲವೆ!

ಹಗಲೆಲ್ಲ ಪಾಪ ಮಾಡಿ ಸಾಯಂಕಾಲ ಗೀತೆಯನ್ನು ಓದುವವರು, ಕೇಳುವವರು ಕೆಲವರಿದ್ದಾರೆ. ಏಕೆಂದರೆ! ಗೀತೆಯನ್ನು ಕೇಳುವುದರಿಂದ ಮಾಡಿಕೊಂಡ ಪಾಪವೆಲ್ಲವೂ ಪುಣ್ಯವಾಗಿ ಬದಲಾಗುತ್ತದೆಂದು ಗೀತಾಮಹತ್ವದಲ್ಲಿ 18ನೇ ಶ್ಲೋಕದಲ್ಲಿ ಇರುವುದರಿಂದ ಅವರು ನಿರ್ಭಯವಾಗಿ ಪಾಪ ಮಾಡುತ್ತಾ, ಸಾಯಂಕಾಲ ಅದನ್ನು ಪುಣ್ಯವಾಗಿ ಬದಲಾಯಿಸಿಕೊಳ್ಳುವುದಕ್ಕೆ ಗೀತೆಯನ್ನು ಕೇಳುವುದು ಓದುವುದು ಮಾಡುತ್ತಿದ್ದಾರೆ ಹೊರತು ಅದರಲ್ಲಿನ ಅರ್ಥವನ್ನು ಗ್ರಹಿಸುತ್ತಿಲ್ಲ. ಗೀತೆಯಲ್ಲಿ ಏನು ಹೇಳಿದ್ದಾರೋ ತಿಳಿದು ನಡೆದುಕೊ ಎಂದು ಹೇಳಿದರೆ ಅದು ನಮಗೆ ಅಗತ್ಯವಿಲ್ಲ, ಅದು ನಮಗೆ ಸಾಧ್ಯವಾಗುವುದಿಲ್ಲ, ಅದಕ್ಕಿಂತ ಗೀತಾಮಹತ್ವದಲ್ಲಿ ಹೇಳಿದಂತೆ ಗೀತೆಯನ್ನು ಕೇಳುತ್ತಾಬಂದರೆ ಪಾಪ ಪುಣ್ಯವಾಗಿ ಬದಲಾಗುತ್ತದೆ ಅಲ್ಲವೆ! ಇದೆ ಸುಲಭ ಅಲ್ಲವೆ! ಎನ್ನುತ್ತಿದ್ದಾರೆ.

ಭಗವದ್ಗೀತೆ ಪಾಪಪುಣ್ಯ ರಹಿತನಾಗಿ ಮೋಕ್ಷ ಹೊಂದು ಎಂದು ಹೇಳಿದರೆ, ಗೀತಾಮಹತ್ವ ಪಾಪಗಳನ್ನು ಪುಣ್ಯಗಳಾಗಿ ಬದಲಾಯಿಸಿಕೋ ಎಂದು ಹೇಳುತ್ತಿದೆ. ವಾಸ್ತವಕ್ಕೆ ಪಾಪಪುಣ್ಯಗಳು ಮಾನವರು ಸಂಪಾದಿಸಿದಾಗ ಅವು ಅವನ ಕರ್ಮಚಕ್ರದಲ್ಲಿನ ಸಂಚಿತಕರ್ಮದಲ್ಲಿ ಸೇರಿಹೋಗಿ ಮರುಜನ್ಮಗಳಲ್ಲಿ ಅನುಭವಿಸಬೇಕಾಗಿಬರುತ್ತದೆ. ಆದರೆ ಗೀತೆಯನ್ನು ಕೇಳುವುದರಿಂದ ಪಾಪ ಪುಣ್ಯವಾಗಿ ಬದಲಾಗುತ್ತದೆ ಎನ್ನುವುದು ಅಭೂತ ಕಲ್ಪನೆಯೇ ಆಗಲಿ ಸತ್ಯವಲ್ಲ. ಕೇಳುವುದಕ್ಕೆ ಅವಕಾಶ ಇದ್ದರೂ ಗೀತೆಯನ್ನು ಕೇಳದ ಒಬ್ಬ ವ್ಯಕ್ತಿಯನ್ನು ಭೇಟಿಯಾಗಿ "ಏನಯ್ಯ ನೀನು ಗೀತೆಯನ್ನು ಕನಿಷ್ಟ ಕೇಳುವುದೂ ಸಹ ಇಲ್ಲ. ನಿಮ್ಮ ಮನೆಯಪಕ್ಕ ದೇವಾಲಯದಲ್ಲಿ ಪ್ರತಿದಿನ ಗೀತೆಯನ್ನು ಪಾರಾಯಣ ಮಾಡುತ್ತಿದ್ದಾರೆ ಅಲ್ಲವೆ! ಕೇಳುವುದಕ್ಕೆ ಒಳ್ಳೆಯ ಅನುಕೂಲ ಅಲ್ಲವೆ" ಎಂದು ಕೇಳಿದರೆ, ಆತನು "ನಾನೇನು ಪಾಪಗಳು ಮಾಡಿಲ್ಲ. ಪಾಪ ಮಾಡಿದರೆ ಅಲ್ಲವೆ ಪುಣ್ಯಗಳನ್ನಾಗಿ ಬದಲಾಯಿಸಿಕೊಳ್ಳುವುದಕ್ಕೆ ಗೀತೆಯನ್ನು ಕೇಳಬೇಕು. ನಾನು ಪುಣ್ಯವನ್ನೇ ಮಾಡುತ್ತಿದ್ದೇನೆ, ಆದ್ದರಿಂದ ಗೀತೆಯನ್ನು ಕೇಳಬೇಕಾದ ಕೆಲಸವಿಲ್ಲ" ಎಂದನು. ನೀವೇಕೆ ಹಾಗೆನ್ನುತ್ತಿದ್ದೀರೆಂದು ನಾವು ಕೇಳಿದಾಗ "ಗೀತಾಮಹತ್ವದಲ್ಲಿ ಬರೆದಿಟ್ಟಿದ್ದಾರಲ್ಲಯ್ಯ! ನಿಮಗಷ್ಟರಮಟ್ಟಿಗೆ ತಿಳಿಯುವುದಿಲ್ಲವೆ" ಎಂದನು. ಆ ಮಾತು ಕೇಳಿದ ನಾವು ಗೀತಾಮಹತ್ವ ಮುಖ್ಯ ಅಲ್ಲಯ್ಯ ಗೀತೆಯೇ ಮುಖ್ಯವೆಂದು ಹೇಳಿದಾಗ, ಆತನು ನಗುತ್ತಾ ಹೀಗೆ ಹೇಳಿದ್ದಾನೆ.

"ಗೀತಾ ಮಹತ್ವದಲ್ಲಿ 20ನೇ ಶ್ಲೋಕವನ್ನು ನೋಡು. ಗೀತೆಯನ್ನು ಓದಿದರೂ ಗೀತಾಮಹತ್ವವನ್ನು ಓದದೆ ಹೋದರೆ ಫಲಿತವೇ ಇಲ್ಲವೆಂದು ಇದೆ. ಆದ್ದರಿಂದ ಗೀತೆಗಿಂತ ಗೀತಾಮಹತ್ವವೇ ಮುಖ್ಯವೆಂದು ನಮಗೆ ತಿಳಿಯುತ್ತಿದೆ"

ಹೀಗೆ ಎಷ್ಟೋಜನ ಗೀತೆಗಿಂತಲೂ ಗೀತಾಮಹತ್ವದಲ್ಲಿ ಹೇಳಿದ ಮಾತುಗಳನ್ನೇ ಹೆಚ್ಚಾಗಿ ನಂಬಿ ನಡೆದುಕೊಳ್ಳುತ್ತಿದ್ದಾರೆ. ಅಂತಹ ಮತ್ತೊಬ್ಬವ್ಯಕ್ತಿ ಹತ್ತಿರ ಭೇಟಿಯಾಗಿ ಗೀತೆಯಲ್ಲಿನ ವಿಷಯಗಳನ್ನು ಕೇಳಿದಾಗ ಅದರಲ್ಲಿನ ವಿವರ ನಮಗೆ ಗೊತ್ತಿಲ್ಲ ಎಂದಿದ್ದಾನೆ. ಇದೇನು ವಿಚಿತ್ರ ಗೀತೆಯನ್ನು ಪ್ರತಿದಿನ ಓದುತ್ತಿದ್ದೀರಲ್ಲವೆ ಎಂದು ಕೇಳಿದರೆ "ಹೌದಯ್ಯ ಗೀತೆಯನ್ನು ಪ್ರತಿದಿನ ಓದಿದರೆ ಅದರಲ್ಲಿನ ವಿಷಯಗಳಿಂದ ನಮಗೇನು ಕೆಲಸ" ಎಂದು ಹೇಳಿದನು. ಮತ್ತೆ ಆ ವಿಷಯಗಳ ಹತ್ತಿರ ಕೆಲಸವಿಲ್ಲದ್ದು ಏಕೆ ಗೀತೆಯನ್ನು ಓದುತ್ತಿದ್ದೀರೆಂದು ಕೇಳಿದರೆ ಮೋಕ್ಷಕ್ಕೋಸ್ಕರವೆಂದು ಸಮಾಧಾನ ಹೇಳಿದ್ದಾನೆ. ಮೋಕ್ಷ ಎಂದರೆ ಏನೆಂದು ವಿವರ ತಿಳಿದು ಅದನ್ನು ಹೊಂದಬೇಕೆಂದರೆ ಗೀತೆಯಲ್ಲಿನ ಧರ್ಮಗಳು ತಿಳಿಯಬೇಕಲ್ಲವೆ! ಎಂದು ಕೇಳಿದರೆ ಆತನು ನಗುತ್ತಾ ಬೆಟ್ಟವನ್ನು ಅಗೆದು ಇಲಿಯನ್ನು ಹಿಡಿದಂತೆ ಅಷ್ಟುಶ್ರಮ ಏಕಯ್ಯಾ ನಾವು ಸುಲಭವಾಗಿ ಮೋಕ್ಷಹೊಂದಿದ್ದೇವೆ ಅಂದನು. ಏನು ಬದುಕಿರುವಾಗಲೇ ಮೋಕ್ಷವಾ! ದೇಹದಿಂದ ಇದ್ದಾಗಲೇ ಮೋಕ್ಷ ಹೊಂದಿದ್ದೀರಾ ಎಂದು ಕೇಳಿದರೆ "ಹೌದಯ್ಯ ಗೀತಾಮಹತ್ವದಲ್ಲಿ 19ನೇ ಶ್ಲೋಕವನ್ನು ನೋಡಲಿಲ್ಲವಾ! ಗೀತೆಯನ್ನು ಗೀತಾ ಅರ್ಥವನ್ನು ಓದುವುದರಿಂದ ದೇಹದಿಂದಿರುವಾಗಲೇ ಮೋಕ್ಷ ಹೊಂದಿರುತ್ತಾರೆಂದು ಇದೆ ಅಲ್ಲವೆ! ನಾನು ಚಾಚೂ ತಪ್ಪದೆ ಪ್ರತಿದಿನ ಗೀತಾ ಶ್ಲೋಕಗಳ ತಾತ್ಪರ್ಯಗಳನ್ನು ಓದುತ್ತಿದ್ದೇನೆ. ಆದುದರಿಂದ ಗೀತಾಮಹತ್ವದ ಪ್ರಕಾರ ನಾನು ಈಗ ಮೋಕ್ಷದಲ್ಲಿ ಇದ್ದಂತೆ" ಎಂದು ಹೇಳಿದನು. ಹಾಗಲ್ಲಯ್ಯ ಮೋಕ್ಷ ಎಂದರೆ ಶರೀರವನ್ನು ಬಿಟ್ಟು, ಯಾವ ಶರೀರ ಧರಿಸದೆ ಅಣುಅಣುವಿನಲ್ಲಿರುವ ಪರಮಾತ್ಮನಲ್ಲಿ ಸೇರಿಹೋಗುವುದು ಎಂದು ನಾವು ಹೇಳಿದರೆ, ಆತನು ಕೋಪ ಮಾಡಿಕೊಂಡು "ವಿಷ್ಣು ಹೇಳಿದ ಗೀತಾಮಹತ್ವವನ್ನೇ ಅಲ್ಲವೆಂದು ಇದು ಮೋಕ್ಷ ಅಲ್ಲಾ ಎನ್ನುತ್ತೀಯಾ! ನಿನಗೇನು ತಿಳಿದಿಲ್ಲ ಹೋಗು" ಎಂದನು. ಹೀಗೆ ಎಷ್ಟೋಜನ ಗೀತಾಮಹತ್ವದಲ್ಲಿನ ಮಾತುಗಳನ್ನೇ ನಂಬಿ ಅಸಲಾದ ಧರ್ಮಗಳನ್ನು ಬಿಟ್ಟು ಗೀತೆಗೆ ವಿರುದ್ಧವಾಗಿ ಬದಲಾಗಿಹೋಗುತ್ತಿದ್ದಾರೆ. ಇದರಲ್ಲಿನ ಮೊದಲ ತಪ್ಪು ಗೀತಾಮಹತ್ವವನ್ನು ಹೇಳಿದವರದಾಗುತ್ತದೆ. ವಾಸ್ತವಕ್ಕೆ ಹೇಳಿದವರು ಪ್ರಜೆಗಳನ್ನು ತಪ್ಪುದಾರಿ ಹಿಡಿಸಬೇಕೆಂದು ಹೇಳಲಿಲ್ಲ, ಒಳ್ಳೆಯದೇ ಮಾಡಬೇಕೆಂದು ಹೇಳಿದ್ದಾರೆ. ಆದರೆ ಅದು ಪ್ರಜೆಗಳ ಬಳಿ ದುರಾದೃಷ್ಟವಶಾತ್ ತಪ್ಪಾಗಿ ಪರಿಣಮಿಸಿದೆ.

ಅದೇ ಪದ್ಧತಿಯಲ್ಲಿ ಮತ್ತೆ ಕೆಲವರು ಹಿರಿಯರು ಗೀತಾ ಶ್ಲೋಕಗಳು ಓದುವುದರಿಂದ ಪ್ರಪಂಚ ಕೆಲಸಗಳು ನೆರವೇರುತ್ತವೆಂಬ ಆಸೆಯನ್ನು ಕಲ್ಪಿಸಿದ್ದಾರೆ. ಒಂದೊಂದು ಶ್ಲೋಕ ಒಂದು ಮಂತ್ರವೆಂದು ಇಂತಹ ಶ್ಲೋಕವನ್ನು ಮಂತ್ರದಂತೆ ಓದುವುದರಿಂದ ಈ ರೋಗ ಹೋಗುತ್ತದೆಂದು, ಮತ್ತೊಂದು ಶ್ಲೋಕದಿಂದ ಕೋರ್ಟಿನಲ್ಲಿನ ಕೇಸು (ವ್ಯಾಜ್ಯವನ್ನು) ಗೆಲ್ಲುತ್ತೀರೆಂದು, ಹಾಗೆ ಸಂತಾನಕ್ಕೊಂದು ಶ್ಲೋಕ, ಧನಪ್ರಾಪ್ತಿಗೊಂದು ಶ್ಲೋಕ ಕೆಲಸಕ್ಕೆ ಬರುತ್ತದೆಂದು ಹೇಳಿದವರೂ ಇದ್ದಾರೆ. ಅದನ್ನು ನೋಡಿದ ನಾವು ಪ್ರಪಂಚ ಕೆಲಸಗಳಿಗೆ ಅಲ್ಲಯ್ಯ ಗೀತೆ ಇರುವುದು, ನಾವು ಜ್ಞಾನ ತಿಳಿದುಕೊಳ್ಳುವುದಕ್ಕೆಂದು ಹೇಳಿದರೆ, ಜ್ಞಾನ ಅರ್ಜುನನಿಗೆ ಹೇಳಿದ್ದಾನಾಗಲಿ ನಮಗೆ ಅಲ್ಲಯ್ಯ ಎನ್ನುತ್ತಿದ್ದಾರೆ. ಅರ್ಜುನನಿಗೆ ಹೇಳಿರುವುದೆ ನಮಗೂ ಕೆಲಸಕ್ಕೆ ಬರುತ್ತದೆ. ಆದ್ದರಿಂದ ಜ್ಞಾನ ತಿಳಿದು ಮೋಕ್ಷ ಹೊಂದಬಹುದೆಂದು ನಾವು ಹೇಳಿದರೆ, ಅದಕ್ಕೆ ಉತ್ತರವಾಗಿ ದೊಡ್ಡವರು ಇದರಿಂದ ಮೋಕ್ಷಬರುತ್ತದೆಂದು ಹೇಳಲಿಲ್ಲವೆ! ಈ ಶ್ಲೋಕ ಓದಿದರೆ ಈ ಕೆಲಸ ನೆರವೇರುತ್ತದೆಂದು ಹೇಳಿದ್ದಾರೆ ಅಲ್ಲವೆ! ಈ ಅಧ್ಯಾಯ ಓದಿದರೆ ಈ ಫಲಿತವಿರುತ್ತದೆಂದು ಬರೆದಿದ್ದಾರೆ. ನನಗೆ ಈಗ ಕೋರ್ಟಿನಲ್ಲಿ ಕೇಸು ಇದೆ, ಆದ್ದರಿಂದ ಅದು ನೆರವೇರುವುದಕ್ಕೆ ಇದು ಸರಿಹೋಗುತ್ತದೆಂದು ದೊಡ್ಡವರು ಹೇಳಿದ ಶ್ಲೋಕವನ್ನು ಪ್ರತಿದಿನ ಪಠಿಸುತ್ತಿದ್ದೇನೆಂದನು. ಹೀಗೆ ಗೀತಾಮಹತ್ವವು ಪ್ರಜೆಗಳನ್ನು ಗೀತೆಗೆ ಹತ್ತಿರಮಾಡಿದೆ ಆದರೆ ಗೀತೆಯೊಂದರ ಭಾವಕ್ಕೆ ದೂರ ಮಾಡಿದೆ. ಗೀತೆಗೆ ಮಹತ್ವವಿದೆ ಎಂದು ತಿಳಿದು ಕೊಂಡವರು ಶ್ಲೋಕಗಳನ್ನು ಪಾರಾಯಣ, ಪುಸ್ತಕಗಳನ್ನು ಪೂಜೆ ಮಾಡುತ್ತಿದ್ದಾರೆ ಹೊರತು ಗೀತೆಯಲ್ಲಿ ಜ್ಞಾನಕ್ಕೆ ಹತ್ತಿರವಾಗುತ್ತಿಲ್ಲ. ಈ ಕ್ಷಣದಿಂದ ಗೀತೆಯನ್ನು ಓದುವವರು ಶ್ರೀಕೃಷ್ಣನು ಆ ದಿನ ಅರ್ಜುನನಿಗೆ ಮಾತ್ರ ಅಲ್ಲ, ನಮಗೂ ಸಹ ಹೇಳಿದ್ದಾನೆಂದು ಅದರಲ್ಲಿನ ಭಾವವನ್ನು ಗ್ರಹಿಸಿ ಓದಿರಿ. ಅಷ್ಟೋ ಇಷ್ಟೋ ಜ್ಞಾನಿಗಳಾದವರು ಗೀತಾಮಹತ್ವವನ್ನು ಓದದಂತೆ ಗೀತೆಯಲ್ಲಿನ ವಿಷಯಗಳನ್ನೇ ಓದಿ ಅರ್ಥ ಮಾಡಿಕೊಳ್ಳಬೇಕು. ಗೀತಾಮಹತ್ವದ ಪ್ರಕಾರ ಯಾವುದೇ ಪ್ರಪಂಚ ಕೋರಿಕೆಗಳು ನೆರವೇರುತ್ತವೆಂಬ ಉದ್ದೇಶದಿಂದ ಗೀತೆಯನ್ನು ಓದಬಾರದು. ಫಲಿತದ ಮೇಲೆ ಆಸೆ ಇಲ್ಲದಂತೆ ಓದಬೇಕು. ಗೀತೆಗೂ, ಗೀತಾಮಹತ್ವಕ್ಕೂ ಎಂತಹ ಸಂಬಂಧವಿಲ್ಲವೆಂದು, ಗೀತೆ ಶಾಸ್ತ್ರಬದ್ಧವಾದುದೆಂದು, ಗೀತಾಮಹತ್ವ ಶಾಸ್ತ್ರ ಅಲ್ಲವೆಂದು, ಅದು ಕೇವಲ ಪುರಾಣವೆಂದು ತಿಳಿಯಬೇಕು. ಹೀಗೆ ವಿಶದೀಕರಿಸಿಕೊಳ್ಳುತ್ತಾ ಹೋದರೆ ಕುರುಕ್ಷೇತ್ರ ಧರ್ಮಕ್ಷೇತ್ರವೇನಾ! ಎನ್ನುವ ಪ್ರಶ್ನೆಯೂ ಉದ್ಭವಿಸುತ್ತದೆ. ಗೀತೆ ಯುದ್ಧರಂಗದಲ್ಲಿ ಪ್ರಾರಂಭವಾಗಿದೆ. ಆ ಯುದ್ಧ ಏಕೆ ಸಂಭವಿಸಿದೆಯೋ ಎಲ್ಲರಿಗೂ ತಿಳಿದಿದೆ. ನಿಜ

ಹೇಳಬೇಕೆಂದರೆ ಹೊತ್ತು ಹೋಗದೆ ಜೂಜಾಡಿ ಇಟ್ಟುಕೊಂಡ ಯುದ್ಧವೆಂದು ಎಲ್ಲರಿಗೂ ತಿಳಿದಿದೆ. ಆ ಯುದ್ಧ ಕುರುಕ್ಷೇತ್ರದಲ್ಲಿ ನಡೆದಿದೆ. ಆ ಕುರುಕ್ಷೇತ್ರವನ್ನು ಧರ್ಮಕ್ಷೇತ್ರ ಎನ್ನುವುದೂ ನಡೆದಿದೆ. ನಿಜಕ್ಕೆ ಕುರುಕ್ಷೇತ್ರ ಧರ್ಮಕ್ಷೇತ್ರವೇನಾ ಎನ್ನುವುದು ಪ್ರಶ್ನೆ, ಅದನ್ನು ಪರಿಶೀಲಿಸಿ ನೋಡೋಣ.

ಪ್ರಪಂಚದಲ್ಲಿ ಮೊದಲಿನಿಂದ ಬಡವನಿಗೊಂದು ನ್ಯಾಯ, ಧನಿಕನಿಗೊಂದು ನ್ಯಾಯ ಸಹಜವಾಗಿದೆ. ಬಡವನು ಚಿಕ್ಕ ತಪ್ಪು ಮಾಡಿದರೆ ಅವನನ್ನು ತಪ್ಪಿತಸ್ತನನ್ನಾಗಿ ಪ್ರಚಾರ ಮಾಡುತ್ತಾರೆ. ಅದೇ ಧನಿಕನು ಮಾಡಿದರೆ ಅವನನ್ನು ಏನೂ ಅನ್ನದೆ ಅವನು ಮಾಡಿದ ತಪ್ಪನ್ನೂ ಸಹ ಸಮರ್ಥಿಸುತ್ತಾರೆ. ಒಂದು ಊರಿನಲ್ಲಿ ಒಬ್ಬ ಬಡವನು ಒಬ್ಬ ಸ್ತ್ರೀಯಜೊತೆ ಅಕ್ರಮ ಸಂಬಂಧ ಏರ್ಪಡಿಸಿಕೊಂಡರೆ ಅವನನ್ನು ಬೈದ ಪ್ರಜೆಗಳೆ, ಅದೇ ಊರಿನಲ್ಲಿ ಅದೇ ಕೆಲಸವನ್ನು ಒಬ್ಬ ಧನಿಕನು ಮಾಡಿದರೆ ಅವನು ಗಂಡಸು ಏನು ಮಾಡಿದರು ತಪ್ಪಿಲ್ಲ ಎಂದಿದ್ದಾರೆ. ಹೀಗೆ ಅನೇಕ ಕಡೆ ಅನೇಕ ವಿಧಗಳ ತಪ್ಪುಗಳು ಧನಿಕರ ಬಳಿ ಒಂದು ವಿಧವಾಗಿ, ಬಡವರ ಬಳಿ ಮತ್ತೊಂದು ವಿಧವಾಗಿ ಮಾತನಾಡುವುದು ನಡೆಯುತ್ತಿದೆ. ನನಗೆ ತಿಳಿದ ಮತ್ತೊಬ್ಬ ವ್ಯಕ್ತಿ ಜೂಜಾಡಿ ಇರುವ ಆಸ್ತಿ ಎಲ್ಲವನ್ನೂ ಕಳೆದುಕೊಂಡರೆ ಆತನನ್ನು ಛೀ ಎಂದಿದ್ದಾರೆ. ಹಾಗಂದವರೇ ಆಸ್ತಿಯನ್ನು ಮತ್ತು ಹೆಂಡತಿಯನ್ನೂ ಸಹ ಜೂಜಿನಲ್ಲಿಟ್ಟು ಸೋತುಹೋದ ಧರ್ಮರಾಜನನ್ನು ಧರ್ಮಪರನು ಎಂದಿದ್ದಾರೆ. ಇದೇ ಬಡವ ಧನಿಕರಿಗಿರುವ ವ್ಯತ್ಯಾಸ ನೋಡಿರಿ.

ಆಸ್ತಿಯನ್ನು ಅಣ್ಣತಮ್ಮಂದಿರನ್ನು ಕೊನೆಗೆ ಹೆಂಡತಿಯನ್ನೂ ಸಹ ಕಳೆದುಕೊಂಡ ಧರ್ಮರಾಜ ಮತ್ತೆ ತನ್ನ ಆಸ್ತಿಗೋಸ್ಕರ ಯುದ್ಧಕ್ಕೆ ಸಿದ್ಧನಾಗಿದ್ದಾನೆ. ಆ ಯುದ್ಧ ಈ ದಿನ ಪಂಜಾಬ್ ರಾಷ್ಟ್ರದಲ್ಲಿರುವ ಕುರುಕ್ಷೇತ್ರದಲ್ಲಿ ನಡೆದಿದೆ. ಆ ಕ್ಷೇತ್ರದಲ್ಲಿ ಧರ್ಮ ಈಗಾಗಲಿ, ಆಗಾಗಲಿ ಇಲ್ಲ ಎಂದೇ ಹೇಳಬಹುದು. ಏಕೆಂದರೆ ಈದಿನ ಆ ಸ್ಥಳ ದೊಡ್ಡ ಪಟ್ಟಣವಾಗಿದೆ. ಎಲ್ಲಾ ಸ್ಥಳಗಳಲ್ಲಿ ನಡೆದಂತೆ ಅಲ್ಲಿಯೂ ಮೋಸಗಳು, ಕುತಂತ್ರಗಳು, ಹತ್ಯೆಗಳು, ಗಲಾಟೆಗಳು ನಡೆಯುತ್ತಲೇ ಇವೆ. ಈ ದಿನ ಸಿಕ್ಕರು ತಮಗೆ ಪ್ರತ್ಯೇಕವಾದ ರಾಷ್ಟ್ರ ಬೇಕೆಂದು ಹೋರಾಟ ನಡೆಸಿ ಎಷ್ಟೋಜನ ಹತವಾಗಿದ್ದಾರೆ. ಆ ದಿನ ಭೂಮಿಗಾಗಿಯೇ ಯುದ್ಧ ನಡೆದಿದೆ. ಭಾರತ ದೇಶದ ಚರಿತ್ರೆಯಲ್ಲಿ ಇಂದಿಗೂ ಅಂದಿಗೂ ಯುದ್ಧದಲ್ಲಿ ಹೆಸರುವಾಸಿಯಾಗಿ ರಕ್ತದಿಂದ ನೆಂದ ಆ ಭೂಮಿಯನ್ನು ಧರ್ಮಕ್ಷೇತ್ರ ಎನ್ನುವುದು ಸರಿಯಾದ ಭಾವನೆ ಅಲ್ಲವೆಂದೇ ಹೇಳಬಹುದು.

ಕುರುಕ್ಷೇತ್ರವನ್ನು ಧರ್ಮಕ್ಷೇತ್ರವೆಂದು ಶ್ರೀಕೃಷ್ಣನು ಕರೆದಿಲ್ಲ. ಮಧ್ಯದಲ್ಲಿರುವವರು ಕರೆದಿದ್ದಾರೆಂದುಕೊಳ್ಳಿ, ಅದಕ್ಕೆ ಆ ಹೆಸರು ಸರಿಯೋ, ಸರಿಯಲ್ಲವೊ ಎನ್ನುವ ಪ್ರಶ್ನೆಗಳನ್ನು ಹಾಕಿಕೊಂಡು ಯೋಚಿಸಬೇಕು. ಮೊದಲು ಧರ್ಮ ಎಂದರೆ ಏನೋ ತಿಳಿಯಬೇಕು. ಧರ್ಮ ಎಂದರೆ ಇಂತಹುದೆಂದು ತಿಳಿದಾಗಲೇ ಅದು ಧರ್ಮಕ್ಷೇತ್ರವೊ ಅಲ್ಲವೊ ಎಂಬ ವಿವರ ನಮಗೆ ತಿಳಿಯುತ್ತದೆ. ಆದೂ ಅಲ್ಲದೆ ಧರ್ಮಯುಕ್ತವಾದ ಭಗವದ್ಗೀತೆಯನ್ನು ತಿಳಿದುಕೊಳ್ಳುವುದಕ್ಕೆ ಮೊದಲು ಧರ್ಮಗಳನ್ನು ಕುರಿತು ಸ್ವಲ್ಪವಾದರು ತಿಳಿದಿರಬೇಕು. ಆಗಲೇ ಗೀತೆಯಲ್ಲಿ ಇವು ಭಗವಂತನು ಹೇಳಿದ ಧರ್ಮಯುಕ್ತವಾದ ವಾಕ್ಯಗಳೆಂದು, ಇವು ಮನುಷ್ಯರು ಹೇಳಿದ ಅಧರ್ಮಯುಕ್ತಗಳಾದ ಮಾತುಗಳೆಂದು ಗುರುತಿಸುವುದಕ್ಕೆ ಸಾಧ್ಯವಾಗುತ್ತದೆ.

ಜಡ್ಜ್‌ಗಳ ಮೀಟಿಂಗ್‌ನಲ್ಲಿ ಮಂತ್ರಿಯವರು ಉಪನ್ಯಾಸಿಸುತ್ತಾ ನ್ಯಾಯವನ್ನು ನಿರ್ಣಯಿಸಿ ತೀರ್ಪು ಹೇಳುವ ನ್ಯಾಯಮೂರ್ತಿಗಳನ್ನು ಧರ್ಮಪರರೆಂದು ವರ್ಣಿಸುತ್ತಾ, ನೀವು ಧರ್ಮದ ಪ್ರಕಾರ ತೀರ್ಪುಹೇಳುತ್ತಾ ಧರ್ಮವನ್ನು ಕಾಪಾಡಬೇಕಾಗಿರುವುದು ನಿಮ್ಮ ಕೈಯಲ್ಲಿ ಇದೆಯೆಂದು, ಯಾವ ಪ್ರಲೋಭಗಳಿಗೂ ಒಳಗಾಗದಂತೆ ಧರ್ಮವನ್ನು ಪೂರ್ಣಗೊಳಿಸಬೇಕೆಂದನು. ಇಲ್ಲಿ ಮಂತ್ರಿಗಳು ನ್ಯಾಯವನ್ನು ಮತ್ತು ಧರ್ಮವನ್ನು ಎರಡನ್ನು ಸೇರಿಸಿ ನ್ಯಾಯಮೂರ್ತಿಗಳನ್ನು ಧರ್ಮಮೂರ್ತಿಗಳು ಎಂದಿದ್ದಾರೆ. ಹಾಗೆಯೆ ಬಹಳ ಪ್ರಜೆಗಳೂ ಸಹ ನ್ಯಾಯ ಧರ್ಮ ಒಂದೇ ಎಂದು ತಿಳಿದು ನ್ಯಾಯವೆಂದು ಹೇಳುವ ಸಂದರ್ಭಗಳಲ್ಲಿ ಧರ್ಮವೆಂಬ ಪದ ಬಳಸುತ್ತಿದ್ದಾರೆ. ಇದು ಪ್ರಜೆಗಳ ತಪ್ಪಾದರೆ ಇನ್ನೂ ಸ್ವಾಮಿಗಳಾದವರು ಜ್ಞಾನ, ನೀತಿ ಎರಡು ಒಂದೇ ಎಂದು ತಿಳಿದು, ಅವರು ಜ್ಞಾನ ಹೇಳಬೇಕಾದ ಸಂದರ್ಭಗಳಲ್ಲಿ ನೀತಿಯನ್ನು ಹೇಳುತ್ತಿದ್ದಾರೆ. ಹೀಗೆ ಪ್ರಜೆಗಳಿಗೆ ನ್ಯಾಯಧರ್ಮಗಳ ವ್ಯತ್ಯಾಸ ತಿಳಿಯದೇ ಹೋಗಿ, ಜ್ಞಾನ, ನೀತಿ ವ್ಯತ್ಯಾಸಗಳು ಸ್ವಾಮಿಗಳಿಗೂ ಸಹ ತಿಳಿಯದಂತೆ ಹೋಗಿವೆ.

ನೀತಿ ನ್ಯಾಯಗಳು ಒಂದು ಜಾತಿಯಾಗಿದ್ದು, ಜ್ಞಾನ ಧರ್ಮಗಳು ಮತ್ತೊಂದು ಜಾತಿ ಆಗುತ್ತವೆ. ನೀತಿ ನ್ಯಾಯ ಪ್ರಪಂಚಸಂಬಂಧವಾಗಿದ್ದು, ಜ್ಞಾನಧರ್ಮಗಳು ಪರಮಾತ್ಮ ಸಂಬಂಧವಾಗುತ್ತವೆ. ನೀತಿ ನ್ಯಾಯಯುಕ್ತವಾದರೆ, ಜ್ಞಾನ ಧರ್ಮಯುಕ್ತವಾಗುತ್ತದೆ. ನೀತಿಯನ್ನು ಆಚರಿಸಿದರೆ ನ್ಯಾಯವಾಗುತ್ತದೆ, ಅವಿನೀತಿಯನ್ನು ಆಚರಿಸಿದರೆ ಅನ್ಯಾಯವಾಗುತ್ತದೆ. ಹಾಗೆ ಜ್ಞಾನವನ್ನು ಆಚರಿಸಿದರೆ ಧರ್ಮವಾಗುತ್ತದೆ. ಅಜ್ಞಾನವನ್ನು ಆಚರಿಸಿದರೆ ಅಧರ್ಮವಾಗುತ್ತದೆ. ನೀತಿ ನ್ಯಾಯಗಳನ್ನು ಆಚರಿಸುವುದರಿಂದ ಪುಣ್ಯ,

ಅವಿನೀತಿ ಅನ್ಯಾಯಗಳ ಆಚರಣೆಯಿಂದ ಪಾಪ ಬರುತ್ತದೆ. ಹಾಗೆ ಜ್ಞಾನ ಧರ್ಮಗಳಿಂದ ಪಾಪಪುಣ್ಯಗಳೆಂಬ ಕರ್ಮ ನಶಿಸಿಹೋಗುವುದು ನಡೆಯುತ್ತದೆ.

ನೀತಿ ಪ್ರಪಂಚದಲ್ಲಿ ಮಾನವನ ಪ್ರವರ್ತನೆಯನ್ನು ಸೂಚಿಸಿ ಸತ್‌ಪ್ರವರ್ತಕನನ್ನಾಗಿ ಮಾಡುತ್ತದೆ. ಮಾನವನ ಪ್ರವರ್ತನೆಯ ಮೇಲೆಯೇ ನ್ಯಾಯ ಅನ್ಯಾಯಗಳು ಆಧಾರಪಟ್ಟಿರುತ್ತವೆ. ಪ್ರವರ್ತನೆ ಸರಿಯಾದಾಗ ನ್ಯಾಯವೆಂದು, ಪ್ರವರ್ತನೆ ಸರಿಯಲ್ಲದಿರುವಾಗ ಅನ್ಯಾಯವೆಂದು ನಿರ್ಣಯಿಸಬೇಕಾಗಿರುತ್ತದೆ. ಹಾಗೆ ಜ್ಞಾನ ಆಧ್ಯಾತ್ಮಿಕವಾಗಿ ಮಾನವನ ಕಟ್ಟುಪಾಡುಗಳನ್ನು ಸೂಚಿಸಿ ಸತ್‌ಪುರುಷನನ್ನಾಗಿ (ಯೋಗಿಯನ್ನಾಗಿ) ಬದಲಾವಣೆ ಮಾಡುತ್ತದೆ. ಜ್ಞಾನವನ್ನು ಆಚರಿಸುವುದರ ಮೇಲೆಯೇ ಧರ್ಮಾಧರ್ಮಗಳು ಆಧಾರಪಟ್ಟಿರುತ್ತವೆ. ಮಾನವನ ಬಾಹ್ಯಾಚರಣೆಗೆ ಸಂಬಂಧಿಸಿರುವುದು ನ್ಯಾಯವಾದರೆ, ಅಂತರ್ಭಾವಗಳ ಮೇಲೆ ಆಧಾರಪಟ್ಟಿರುವುದು ಧರ್ಮ. ಅಂತರಾಚರಣೆ ಯಲ್ಲಿರುವ ಧರ್ಮ ಬಾಹ್ಯವಾಗಿ ಅವನೀತಿ ಅನ್ಯಾಯವಾಗಿ ಕಾಣಿಸಬಹುದು. ಆದುದರಿಂದ ಧರ್ಮಗಳು ಇವು ಎಂದು ಹೇಳಿದ ಶ್ರೀಕೃಷ್ಣನೂ ಸಹ ಬಾಹ್ಯ ಪ್ರಪಂಚದಲ್ಲಿ ಕೆಲವರಿಗೆ ಅಸತ್ಯಪರನಾಗಿ ಅಕ್ರಮಗಳು ಮಾಡಿದವನಾಗಿ ಕಾಣಿಸಿದ್ದಾನೆ.

ವಾಸ್ತವಕ್ಕೆ ನೀತಿನ್ಯಾಯವಿದು ಎಂದು, ಜ್ಞಾನ ಧರ್ಮಗಳು ಇವು ಎಂದು ತಿಳಿದರೆ ಮಾತ್ರವೇ ಎದುರಿಗಿರುವವನನ್ನು ಪೂರ್ತಿಯಾಗಿ ಗುರುತಿಸಲಾರೆವು. ನೀತಿ ನ್ಯಾಯಗಳು ತಿಳಿದರೆ ಮಾತ್ರ, ಪ್ರಪಂಚ ಮಾನವರ ಸ್ಥಾನವನ್ನು ಗುರುತಿಸಿ ಹೇಳಬಹುದು. ಆದರೆ ಯೋಗಮಾರ್ಗದಲ್ಲಿ ಯಾರೆಷ್ಟುಮಟ್ಟದವರೋ ಹೇಳಲಾರೆವು. ಭೂಮಿ ಮೇಲೆ ಮಾನವರು ನೀತಿ ನ್ಯಾಯವನ್ನು ಗುರುತಿಸುತ್ತಾರಾಗಲಿ, ಜ್ಞಾನ ಧರ್ಮಗಳನ್ನು ಗುರುತಿಸುವುದು ಬಹಳ ಕಷ್ಟ. ಆದ್ದರಿಂದ ಈಗಿನ ಕಾಲದಲ್ಲಿ ಬಹಳಜನರು ಸ್ವಾಮಿಗಳೂ ಸಹ ಜ್ಞಾನಧರ್ಮಗಳಿವು ಎಂದು ಗುರುತಿಸಲಾರದೆ ಹೋಗಿದ್ದಾರೆ. ಜ್ಞಾನವೆಂದುಕೊಂಡು ನೀತಿಯನ್ನು ಹಿಡಿದುಕೊಂಡು ನೇತಾಡುತ್ತಿದ್ದಾರೆ. ಪ್ರಜೆಗಳಿಗೆ ಪುಣ್ಯಬರುವ ಕೆಲಸಗಳನ್ನೇ ಬೋಧಿಸುತ್ತಾ ಅದೇ ಜ್ಞಾನಾಚರಣೆ ಎಂದುಕೊಳ್ಳುತ್ತಿದ್ದಾರೆ. ಪಾಪಪುಣ್ಯಗಳು ನಶಿಸುವ ಜ್ಞಾನವನ್ನು ತಿಳಿಸಲಾರದೆ ಹೋಗುತ್ತಿದ್ದಾರೆ. ಆದ್ದರಿಂದ ಬಹಳ ಜನರು ನೀತಿಯನ್ನೇ ಜ್ಞಾನವೆಂದು, ನ್ಯಾಯವನ್ನೇ ಧರ್ಮವೆಂದು ತಿಳಿಯುತ್ತಿದ್ದಾರೆ. ಕೋರ್ಟಿನಲ್ಲಿರುವ ನ್ಯಾಯಮೂರ್ತಿಗಳನ್ನು ಧರ್ಮಮೂರ್ತಿಗಳೆಂದು, ಅವರ ಆಸನಗಳನ್ನು ಧರ್ಮಾ ಸನಗಳೆಂದು ಹೇಳುವುದೂ ಸಹ ಕೇಳುತ್ತಿದ್ದೇವೆ.

ಎಷ್ಟೋ ಪುಣ್ಯಗಳು ಮಾಡುತ್ತಿರುವ ಮಾನವನು ಅವುಗಳನ್ನು ಧಾರ್ಮಿಕ ಕಾರ್ಯಗಳು ಮಾಡುವ ಹಾಗೆ ಹೇಳುತ್ತಿದ್ದಾನೆಂದರೆ ಧರ್ಮ ಎನ್ನುವುದು ಪ್ರತ್ಯೇಕವಾದುದೆಂದು ತಿಳಿಯದೆ ಹೋಗಿರುವುದೇ ಕಾರಣ. ಅಷ್ಟೇ ಅಲ್ಲದೆ ನೀತಿ ಕಾರ್ಯವಾದ ದಾನ ಮಾಡುವ ಪ್ರತಿ ಸಂದರ್ಭದಲ್ಲಿಯೂ ಧರ್ಮ ಮಾಡುತ್ತಿದ್ದೇ ನೆನ್ನುವುದೂ ಸಹ ಗ್ರಹಿಸಬಹುದು. ಒಂದು ದೇವಾಲಯದಲ್ಲಿ ಫ್ಯಾನನ್ನು ಒಬ್ಬನು ದಾನ ಮಾಡಿದ್ದಾನೆಂದುಕೊಳ್ಳೋಣ. ಫ್ಯಾನ್ ಮೇಲೆ ಇಂತಹವರ ಧರ್ಮವೆಂದು ದಾನ ಮಾಡಿದವರ ಹೆಸರನ್ನು ಬರೆದಿರುತ್ತಾರೆ. ಇಂತಹವರ ದಾನವೆಂದು ಮಾತ್ರ ಇರುವುದಿಲ್ಲ. ಆತನು ಮಾಡಿರುವುದು ದಾನವೇ ಆದರೂ ಧರ್ಮವೆಂದು ಬರೆಯುವುದರಲ್ಲಿ ಅರ್ಥವೇ ಇಲ್ಲ. ಹೀಗೆ ತಿಳಿಯದತನ ಎಲ್ಲರಲ್ಲಿ ವ್ಯಾಪಿಸಿ ಕೊನೆಗೆ ಭಿಕ್ಷೆ ಕೇಳುವವನೂ ಸಹ ದಾನ ಮಾಡಿ ಅನ್ನದೇ, ಧರ್ಮಮಾಡಿ ಎನ್ನುವುದು ನೋಡುತ್ತಲೇ ಇದ್ದೇವೆ. ಈ ಪರಿಸ್ಥಿತಿಯನ್ನು ನೋಡಿದರೆ ಧನಿಕರಿಂದ ಪ್ರಾರಂಭಿಸಿ ಭಿಕ್ಷುಕನವರೆಗೂ ಧರ್ಮ ಎಂದರೆ ಏನೆಂದು ತಿಳಿಯದೇ ಹೋಗಿದೆಯೆಂದು ಅರ್ಥವಾಗುತ್ತಿದೆ. ಸ್ವಾಮಿಗಳು ಸಹಿತ ಪುಣ್ಯ ಬರುವ ಸಿಹಿಯಾದ ನೀತಿಮಾತುಗಳೇ ಹೇಳುತ್ತಿದ್ದಾರೆ ಎಂದರೆ ಧರ್ಮಕ್ಕೆ ಭೂಮಿ ಮೇಲೆ ಗುರುತು ಇಲ್ಲವೆಂದು ಅರ್ಥವಾಗುತ್ತಿದೆ.

ಹೀಗೆ ಧರ್ಮಾಧರ್ಮಗಳ ವಿವರದ ಪ್ರಕಾರ ನೋಡಿದರೆ ಯಾವ ಕಾರಣಕ್ಕೂ ಕುರುಕ್ಷೇತ್ರವು ಧರ್ಮಕ್ಷೇತ್ರವಲ್ಲ. ಅವಿನೀತಿ, ಅನ್ಯಾಯಗಳಿಂದ ಅಭ್ಯಾಸವಾದ ಮನುಷ್ಯರ ಮಧ್ಯೆ ನಡೆದ ಹೋರಾಟದ ಸ್ಥಳವನ್ನು ಧರ್ಮಕ್ಷೇತ್ರ ಎನ್ನುವುದು ಸಮಂಜಸವಲ್ಲ. ಆ ದಿನ ಕೌರವ ಪಾಂಡವರು ನೀತಿಯನ್ನು ಉಲ್ಲಂಘಿಸಿ, ಸಂಗ್ರಾಮದಲ್ಲಿ ಯುದ್ಧದ ಕಟ್ಟುಪಾಡುಗಳನ್ನು ಅತಿಕ್ರಮಿಸಿ, ಮೋಸದಿಂದ ಒಬ್ಬರನ್ನೊಬ್ಬರು ಕೊಂದು ರಕ್ತಸಿಕ್ತವಾಗಿ ಚರಿತ್ರೆಗೆ ಏರಿದ ಸ್ಥಳ ಧರ್ಮಕ್ಷೇತ್ರವೇ? ಅದು ಹಾಗೆ ಧರ್ಮಕ್ಷೇತ್ರವಾದರೆ ಪೌರುಷವನ್ನೇ ಉಸಿರಾಗಿ ಮುಠಾಕಕ್ಷೆಗಳಿಂದ ಹೆಸರುವಾಸಿಯಾದ ಆಂಧ್ರಪ್ರದೇಶ್ ರಾಜ್ಯದಲ್ಲಿ ರಾಯಲಸೀಮೆಯ ಜಿಲ್ಲೆಗಳೂ ಸಹ ಧರ್ಮಕ್ಷೇತ್ರಗಳೇ ಆಗುತ್ತವೆ.

ಆಚರಣೆಗೆ ಯೋಗ್ಯವಾದುದು ಧರ್ಮ, ಅದು ಚಲನೆ ಹೊಂದಿದ ಮಾನವರು ಮಾತ್ರವೇ ಆಚರಿಸುವುದಕ್ಕೆ ಉಪಯೋಗಪಡುತ್ತದೆ. ಆದ್ದರಿಂದ ಧರ್ಮಪರನು ಅಧರ್ಮಪರನೆಂದು ಮಾನವರನ್ನು ಕರೆಯಬಹುದು. ಆದರೆ ಚೈತನ್ಯವಿಲ್ಲದ ಭೂಮಿಗೆ ಧರ್ಮಕ್ಷೇತ್ರವೆಂದು ಹೆಸರು ಇಡುವುದರಲ್ಲಿ ಅರ್ಥವಿಲ್ಲ. ಸೈನ್ಸ್ (ವಿಜ್ಞಾನದ) ಪ್ರಕಾರ ಒಂದೊಂದು ವಸ್ತುವಿಗು ಒಂದೊಂದು ಧರ್ಮವಿದೆ. ಹಾಗೆ ಬ್ರಹ್ಮವಿದ್ಯೆಯನ್ನು ತಿಳಿಸುವ

ಯೋಗಶಾಸ್ತ್ರದ ಪ್ರಕಾರ ದೈವಕ್ಕೂ ಸಹ ಧರ್ಮವಿದೆ. ದೈವಧರ್ಮವನ್ನು ಆಚರಿಸಿದಾಗ ಮಾನವನು ಸಹ ದೇವರಾಗಿ ಬದಲಾಗುತ್ತಾನೆ. ಮಾನವನು ಪರಮಾತ್ಮನಿಂದ ಹೊರಗೆ ಬಂದ ಜೀವಾತ್ಮ. ಜೀವಾತ್ಮ ತನ್ನ ಪೂರ್ವದ ಧರ್ಮವಾದ ಪರಮಾತ್ಮ ಧರ್ಮವನ್ನು ಎಂದರೆ ತನ್ನ ಸ್ವಧರ್ಮವನ್ನು ಆಚರಿಸಿದ ಪಕ್ಷದಲ್ಲಿ ಪುನಃ ಪರಮಾತ್ಮನ ಸ್ಥಾನದಲ್ಲಿ ಸೇರಿಹೋಗುತ್ತಾನೆ. ಗಾಳಿ ನೀರು ಬೇರೆ ಬೇರೆಯಾದರೂ ಗಾಳಿಯಿಂದಲೇ ನೀರು ಹುಟ್ಟಿದೆ. ಆದ್ದರಿಂದ ಪುನಃ ಗಾಳಿಯಾಗಿ ಬದಲಾವಣೆಯಾಗಬಲ್ಲದು. ನೀರು ಗಾಳಿಯಾಗಿ ಬದಲಾವಣೆಯಾಗುವುದಕ್ಕೆ ಪ್ರಯೋಗ ಅಗತ್ಯ. ಹಾಗೆಯೇ ಜೀವಾತ್ಮ ಪರಮಾತ್ಮನಾಗಿ ಬದಲಾಗುವುದಕ್ಕೆ ಯೋಗ ಅಗತ್ಯ. ಯಾವ ಪ್ರಯೋಗದ ಮೂಲಕ ನೀರು ಗಾಳಿಯಾಗಿ ಬದಲಾಗುತ್ತದೋ ಆ ವಿಧಾನವನ್ನು ಶಾಸ್ತ್ರಜ್ಞರು ತಿಳಿಸಿದಂತೆ, ಯಾವ ಯೋಗದ ಮೂಲಕ ಜೀವಾತ್ಮ ಪರಮಾತ್ಮನಾಗಿ ಬದಲಾಗುತ್ತಾನೋ ಆ ವಿಧಾನವನ್ನು ಭಗವಂತನಾದ ಶ್ರೀಕೃಷ್ಣನು ತಿಳಿಸಿದ್ದಾನೆ. ಪ್ರಯೋಗದಲ್ಲಿ ಯಾವ ಪದ್ಧತಿಗಳನ್ನು ಅನುಸರಿಸಬೇಕೋ ಎಂದು ಶಾಸ್ತ್ರಜ್ಞರು ತಿಳಿಸಿದಂತೆ ಯೋಗದಲ್ಲಿ ಯಾವ ಪದ್ಧತಿಗಳು ಅನುಸರಿಸಬೇಕೋ ಎಂದು ಶ್ರೀಕೃಷ್ಣನು ತಿಳಿಸಿದ್ದಾನೆ. ಆ ಪದ್ಧತಿಗಳೇ ಗೀತೆಯಲ್ಲಿವೆ. ನೀರು ಗಾಳಿಯಾಗಿ ಬದಲಾಗುವುದು ಶಾಸ್ತ್ರಬದ್ಧವಾದ ವಿಷಯ. ಹಾಗೆ ಜೀವಾತ್ಮ ಪರಮಾತ್ಮನಾಗಿ ಬದಲಾಗುವುದೂ ಸಹ ಶಾಸ್ತ್ರಬದ್ಧವಾದ ವಿಷಯ.

ಕೌರವರಿಗೂ ಪಾಂಡವರಿಗೂ ಮಧ್ಯೆ ನಡೆದ ಯುದ್ಧದಲ್ಲಿ ಶ್ರೀಕೃಷ್ಣನು ರಥಸಾರಥ್ಯವನ್ನು ವಹಿಸಿದ್ದಾನೆ. ಯುದ್ಧ ಪ್ರಾರಂಭದಲ್ಲಿ ಅರ್ಜುನನು ಮೋಹ ಗುಣದಿಂದ ಅಲ್ಲಿರುವವರೆಲ್ಲರನ್ನೂ ತನ್ನವರೆಂದು, ಅವರನ್ನು ಸಾಯಿಸುವುದರಿಂದ ಪಾಪ ಬರುತ್ತದೆಂದು, ಚಿಂತಿಸಿ ನಿಶ್ಚೇಷ್ಟನಾಗಿರುವಾಗ ಆಗ ಶ್ರೀಕೃಷ್ಣನು ಮಾತನಾಡುತ್ತಾ ಯುದ್ಧ ಮಾಡದೆ ಹೋದರೆ ಮೊದಲು ಅವರು ನಿನ್ನನ್ನು ಪೌರುಷ ಇಲ್ಲದವನಾಗಿ ಲೆಕ್ಕಿಸುತ್ತಾರೆಂದು, ಯುದ್ಧ ಮಾಡಿ ವೀರನೆನಿಸಿಕೋ ಎಂದು, ಪ್ರಪಂಚ ಸಂಬಂಧ ವಚನಗಳೇ ಹೇಳಿದಾಗ ಅರ್ಜುನ ಯುದ್ಧ ಮಾಡುವುದಕ್ಕೆ ಉತ್ಸಾಹ ಇಲ್ಲವೆಂದು, ಏನು ತೋಚದ ಸ್ಥಿತಿಯಲ್ಲಿ ಇದ್ದೇನೆಂದು, ನನ್ನನ್ನು ಶಿಷ್ಯನನ್ನಾಗಿ ತಿಳಿದು ನೀನು ಆದೇಶಿಸಿ ಏನು ಮಾಡಬೇಕೋ ಹೇಳೆಂದು ಕೇಳಿದಾಗ ಶ್ರೀಕೃಷ್ಣನು ತನ್ನ ಗೀತೆಯನ್ನು ಪ್ರಾರಂಭಿಸಿ ಹೇಳಿದ್ದಾನೆ. ಯಾವ ವಸ್ತುವಾದರು ಅವಶ್ಯಕತೆ ಇದ್ದಾಗ ಲಭಿಸಿದರೆ ಅದಕ್ಕೆ ಬೆಲೆ ಇರುತ್ತದೆ. ಅಗತ್ಯ ಇಲ್ಲದಿರುವಾಗ ಆ ವಸ್ತುವನ್ನು ದೊಡ್ಡದಾಗಿ ಲೆಕ್ಕಿಸುವುದಿಲ್ಲ. ಹಾಗೆಯೇ ಅರ್ಜುನನಿಗೆ ಅಗತ್ಯವಾದಾಗ ಗೀತೆಯನ್ನು ಹೇಳುವುದರಿಂದ ಅದಕ್ಕೆ ಬೆಲೆ ಇರುತ್ತದೆ. ಹಾಗೆ ಅವಶ್ಯ ಇಲ್ಲದಿರುವಾಗ ಹೇಳಿದರೆ ಗುಡಾಕೇಶನು (ನಿದ್ರೆಯನ್ನು ಜಯಿಸಿದವನು) ಎಂದು ಹೆಸರು ವಾಸಿಯಾದ

ಅರ್ಜುನನೂ ಸಹ ಆಕಳಿಸಿ ನಿದ್ರೆಹೋಗುತ್ತಾನೆಂದು ತಿಳಿದ ಶ್ರೀಕೃಷ್ಣನು ತನ್ನ ಜ್ಞಾನವನ್ನು ಅರ್ಜುನನು ಕೇಳುವವರೆಗೂ ಹೇಳಲಿಲ್ಲ. ಹಾಗೆಯೇ ಈಗಿನ ಮಾನವನೂ ಸಹ ತನಗೆ ಜ್ಞಾನ ಅವಶ್ಯವೆಂದು ತಿಳಿಯದವರೆಗೂ ಗೀತೆಯನ್ನು ಕುರಿತು ಹೇಳಿದರು ತಿಳಿಯಲಾರನು. ಯಾವಾಗಲೋ ಒಂದುಬಾರಿ ಅರ್ಜುನನಿಗೆ ಉಂಟಾದ ಅನುಭೂತಿಯಂತೆ ನಮಗೂ ಪಾಪ ಭೀತಿ ಏರ್ಪಟ್ಟಾಗ ಅರ್ಜುನನಿಗೆ ಅಗತ್ಯವಾದ ಗೀತೆಯೇ ನಮಗೂ ಅಗತ್ಯವಾಗುತ್ತದೆ. ಪಾಪಭೀತಿ ಈಗಿನ ಮಾನವನಿಗೆ ಎಲ್ಲಿ ಕಾಣಿಸುತ್ತಿಲ್ಲ. ಆದುದರಿಂದ ಶ್ರೀಕೃಷ್ಣನು ಏನು ಹೇಳಿದ್ದಾನೆಂಬುವುದು ಇವರಿಗೆ ಅವಶ್ಯಕತೆ ಇಲ್ಲದಿದ್ದರು. ಈಗಿನ ಮಾನವನಿಗೆ ಕಷ್ಟಭೀತಿ ಹೊರತು ಪಾಪಭೀತಿ ಇಲ್ಲ. ಕಷ್ಟಗಳು ಹೇಗೆ ಹೋಗುತ್ತವೆಂಬ ಆಲೋಚನೆ ಇದೆಯೇ ಹೊರತು, ಕಷ್ಟಗಳಿಗೆ ಕಾರಣವಾದ ಪಾಪ ಹೇಗೆ ಹೋಗುತ್ತದೆಂದು ಯೋಚಿಸುತ್ತಿಲ್ಲ. ಕಷ್ಟಗಳಿಗೆ ಕಾರಣವಾದ ಪಾಪವನ್ನು ಕುರಿತು ಯೋಚಿಸದೆ ಕೇವಲ ಕಷ್ಟನಿವಾರಣೆ ಉಪಾಯಗಳನ್ನು ಹುಡುಕುತ್ತಿದ್ದಾನೆ. ಅಂತಹ ಸಮಯದಲ್ಲಿ ದಾರಿ ತೋರಿಸಿ ಇದು ನಮ್ಮ ಕಷ್ಟಗಳಿಗೆ ಕಾರಣವೆಂದು ತಿಳಿಸಬೇಕಾದವರು ಗುರುಗಳು. ಈಗಿನ ಕಾಲದಲ್ಲಿ ಗುರುಗಳೂ ಸಹ ಜ್ಞಾನವೆಂಬ ಅಗ್ನಿಯಿಂದ ಪಾಪ ಕರ್ಮಗಳು ಸುಟ್ಟುಹೋಗುತ್ತವೆಂದು, ಆಗ ಕಷ್ಟಗಳಿಂದ ಹೊರಬೀಳುತ್ತೀರೆಂದು ಹೇಳದೇ ಕಷ್ಟನಿವಾರಣೆಗೆ ಈ ಪ್ರದಕ್ಷಣೆ ಮಾಡೆಂದು, ಈ ಯಜ್ಞಗಳು ಮಾಡೆಂದು, ದಾನಗಳು ಮಾಡೆಂದು ಅಥವಾ ಪೂಜೆಗಳು ಮಾಡೆಂದು ಹೇಳುತ್ತಿದ್ದಾರೆ. ಅದರಿಂದ ತಾತ್ಕಾಲಿಕ ಕಷ್ಟನಿವಾರಣೆಯಾಗಲು ಮಾನವನು ಕೈ ಮುಗಿಯುವುದು ಅಥವಾ ಯಜ್ಞಯಾಗಾದಿ ದಾನಗಳು ಮಾಡುವುದು ನಡೆಯುತ್ತಿದೆ. ಅಂತಹದರಲ್ಲಿ ಗೀತೆಯೊಂದರ ಅವಶ್ಯಕತೆ ಎಂತಹದೆಂದು ತಿಳಿಯದಂತೆ ಹೋಗಿದೆ. ಒಂದು ವೇಳೆ ಎಲ್ಲಿಯಾದರು ಗೀತೆಯನ್ನು ಓದುವುದಿದ್ದರೆ ಅದೂ ಇಂತಹ ಲಾಭ ಬರುತ್ತದೆಂಬ ಉದ್ದೇಶದಿಂದಲೇ ಓದುತ್ತಿದ್ದಾರೆಯೇ ಹೊರತು ಇದರಿಂದ ಜ್ಞಾನವೆಷ್ಟು ತಿಳಿಯುತ್ತದೆಂದು, ಜ್ಞಾನದಿಂದ ಕರ್ಮದಿಂದ ಹೊರಬಿದ್ದು ಮುಕ್ತಿ ಪಡೆಯಬಹುದೆಂಬ ಉದ್ದೇಶದಿಂದ ಓದುತ್ತಿಲ್ಲ. ಒಂದು ವಿಧವಾಗಿ ಹೇಳಬೇಕೆಂದರೆ ಗೀತೆ ಕೆಲವು ಗ್ರಾಮಗಳಲ್ಲಿ ಹೆಚ್ಚಾಗಿ ಪ್ರಚಾರದೊಳಗೆ ಬಂದಿದೆ. ಗೀತಾಮಂದಿರಗಳು ಕಟ್ಟಿಸಿಕೊಂಡು ಅಲ್ಲಿ ಗೀತೆಯನ್ನು ಇಟ್ಟುಕೊಂಡಿದ್ದಾರೆ. ಅಂತಹ ಕಡೆಯೂ ಸಹ ಗೀತಾಶ್ರವಣವೆಂದು ಕೇಳುವುದಕ್ಕೆ ಹೋಗುತ್ತಿದ್ದಾರೆ ಹೊರತು, ಅದರಲ್ಲಿ ಸಾರಾಂಶ ಏನೆಂದು ಗ್ರಹಿಸುವುದಕ್ಕೆ ಹೋಗುತ್ತಿಲ್ಲ.

ಇಂತಹ ಕಾಲದಲ್ಲಿಯೂ ಸಹ ಗೀತೆ ಎಂದರೆ ಏನು? ಗೀತಾ ಸಾರಾಂಶ ಏನೆಂದು ಯೋಚಿಸುವವರೂ ಸಹ ಅಲ್ಲಲ್ಲಿ ಇದ್ದಾರೆ. ಅಂತಹವರಿಗೆ ಇಲ್ಲಿಯವರೆಗಿರುವ ಗೀತೆಭಾವಗಳಲ್ಲಿ ಎಷ್ಟೋ ಲೋಪಗಳು ಕಾಣಿಸಿದಾಗ ಅವುಗಳ ನಿಜಸ್ವರೂಪವೇನೆಂದು

ಅನ್ವೇಷಿಸುತ್ತಿದ್ದಾರೆ. ಹಾಗೆ ಗೀತೆಯ ನಿಜಸ್ವರೂಪವೇನೋ ತಿಳಿದುಕೊಳ್ಳಬೇಕೆಂಬ ಆಸಕ್ತಿಹೊಂದಿದವರು ಇದ್ದಾರೆಂದು, ಅವರಿಗೋಸ್ಕರವೇ ಈ ಗೀತೆ ಹೊರಬೀಳುತ್ತಿದೆ ಎಂದು, ಅಂತವರಿಗೆ ಎಷ್ಟೋ ತಿಳಿಯದ ರಹಸ್ಯಗಳನ್ನು ತಿಳಿಸುತ್ತಾ **"ತ್ರೈತ ಸಿದ್ಧಾಂತ ಭಗವದ್ಗೀತೆ** ಮುಂದಕ್ಕೆ ಸಾಗಿಹೋಗುತ್ತದೆಂದು ಭಾವಿಸುತ್ತೇವೆ.

ಮಾನವ ಶರೀರದಲ್ಲಿ ಹೆಸರುವಾಸಿಯಾದ ಗುಣಗಳು ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆನ್ನುವವು ಇವೆ. ಕಾಮ ಎಂದರೆ ಆಸೆ, ಕ್ರೋಧ ಎಂದರೆ ಕೋಪ, ಲೋಭವೆಂದರೆ ಜಿಪುಣತನ, ಮೋಹ ಎಂದರೆ ನನ್ನದು ನನ್ನವರೆಂಬ ಭಾವ. ಮದವೆಂದರೆ ಗರ್ವ, ಮತ್ಸರವೆಂದರೆ ಅಸೂಯೆ ಎಂದು ಹೇಳಿಕೊಳ್ಳಬಹುದು. ಅಂತಹ ಗುಣಗಳಿಂದ ಸರ್ವಮಾನವರು ಚಲಿಸಲ್ಪಟ್ಟು ಕೆಲಸಗಳು ಮಾಡುತ್ತಿದ್ದಾರೆ. ಈ ಭೂಮಿ ಮೇಲೆ ಯಾವ ಜೀವರಾಶಿಯಾದರೂ ಗುಣಗಳಿಂದಲೇ ಚಲಿಸಿ ಕಾರ್ಯಗಳು ಮಾಡುತ್ತಿವೆ. ಈ ಪದ್ಧತಿ ಪ್ರಕಾರ ಅರ್ಜುನನು ಯುದ್ಧ ಮಾಡುವುದಿಲ್ಲ ಎಂಬುವುದಕ್ಕೆ ಕಾರಣವಾದ ಗುಣ ಮೋಹಗುಣ. ಮೊದಲು ಆಸೆ, ಕೋಪ ಯುದ್ಧಕ್ಕೆ ಪ್ರೇರೇಪಿಸಿದಾಗ ನಂತರ ಮೋಹಗುಣದಿಂದ ಇವರು ನನ್ನವರು ಇವರನ್ನು ಹೇಗೆ ಸಾಯಿಸುವುದೆಂದು ಕೊಂಡಿದ್ದಾನೆ. ಈ ವಿಧವಾಗಿ ಗುಣಗಳ ಮಧ್ಯ ಅಶಾಂತಿ ಪ್ರತಿ ಜೀವಾತ್ಮನಿಗೂ ಏರ್ಪಡುತ್ತಿದೆ. ಅರ್ಜುನನಿಗೆ ಏರ್ಪಟ್ಟಂತೆ ಮೋಹ ಗುಣವನ್ನು ಬುದ್ಧಿ ಯೋಚಿಸಿ ಇವರನ್ನು ಸಾಯಿಸುವುದರಿಂದ ಪಾಪ ಬರುತ್ತದೆಂದು ಸಂಕಲ್ಪ ಹುಟ್ಟಿದಾಗ ಅದೇ ಸರಿಯಾದ ಸಮಯವೆಂದು ಶ್ರೀಕೃಷ್ಣನು ಗೀತೆಯನ್ನು ಹೇಳಿದ್ದಾನೆ, ಅರ್ಜುನನಿಗೆ ಏರ್ಪಟ್ಟಂತೆ ಗುಣಗಳ ಮಧ್ಯೆ ಮಾನವನಿಗೆ ಅಶಾಂತಿ ಏರ್ಪಟ್ಟು ಪಾಪವೆಂಬ ಭಾವ ಬಂದರೂ ಶ್ರೀಕೃಷ್ಣನಂತೆ ತಕ್ಷಣ ಹೇಳುವ ಗುರು ಇಲ್ಲದಿರುವುದರಿಂದ ಮಾನವನು ವಿವರ ತಿಳಿಯದೇ ಅಶಾಂತಿಯಲ್ಲಿಯೇ ಮುಳಗಿಹೋಗುತ್ತಿದ್ದಾನೆ. ಅರ್ಜುನನಿಗೆ ಉಂಟಾದಂತೆ ಪ್ರತಿ ಮಾನವನಿಗೂ ಗುಣಗಳಿಂದ ದುಃಖ ಉಂಟಾಗುತ್ತಲೆ ಇದೆ. ಒಂದುಗುಣ ಒಂದು ಕಡೆಗೆ ಸೆಳೆದರೆ ಮತ್ತೊಂದು ಗುಣ ಇನ್ನೊಂದು ಕಡೆಗೆ ಸೆಳೆಯುತ್ತದೆ. ಗುಣಗಳ ಮಧ್ಯ ಸಿಲುಕಿ ಬಳಲುತ್ತಿರುವ ಮಾನವನಿಗೆ ಅಶಾಂತಿ ಇರುತ್ತದೆ. ಆದ್ದರಿಂದ ಶ್ರೀಕೃಷ್ಣನ ಗೀತೆ ಅರ್ಜುನನಿಗೊಬ್ಬನಿಗಲ್ಲದೆ ಗುಣಗಳಿರುವ ಜೀವರಾಶಿಗಳೆಲ್ಲರಿಗೂ ಅಗತ್ಯವೇ. ಶ್ರೀಕೃಷ್ಣನು ಹೇಳಿರುವುದು ಅರ್ಜುನನಿಗೆ ಎಂದು ತಿಳಿಯಬೇಡಿರಿ. ಗುಣಪ್ರಭಾವದಲ್ಲಿ ಸಿಲುಕಿಕೊಂಡ ವರೆಲ್ಲರಿಗೂ ಅನ್ವಯಿಸುವುದಾಗಿ ತಿಳಿದು, ಪ್ರತಿಯೊಬ್ಬರು ಗೀತೆ ತನಗಾಗಿಯೇ ಹೇಳಿದ್ದಾರೆಂದು ತಿಳಿದು ಓದಬೇಕು. ಈಗ ಇಲ್ಲಿ ಬರೆದ ಗೀತೆ ಅರ್ಜುನನಿಗೆ ಎಂದುಕೊಳ್ಳದೆ ಶ್ರೀಕೃಷ್ಣನು ನಿನಗೆ ಹೇಳುತ್ತಿದ್ದಾನೆಂಬ ಭಾವದಿಂದ ಶ್ರದ್ಧೆಯಿಂದ ಓದಿರಿ.

ಭಗವದ್ಗೀತೆ ಶ್ರೀ ಭಗವಾನುವಾಚದಿಂದ ಪ್ರಾರಂಭವಾಗಿದೆ. ಶ್ರೀಕೃಷ್ಣನು ಹೇಳಿದ ಮಾತುಗಳನ್ನು ಭಗವಾನುವಾಚ ಎನ್ನುವುದು ಏಕೆ? ಶ್ರೀಕೃಷ್ಣ ಉವಾಚ ಎಂದು ಏಕೆ ಅನ್ನಲಿಲ್ಲವೆಂಬ ಸಂಶಯ ಕೆಲವರಿಗಿರಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ಶ್ರೀಕೃಷ್ಣನು ಎಲ್ಲರಂತಹ ಮಾನವನಲ್ಲ. ಆತನು ಎಲ್ಲರಂತೆ ಜನ್ಮಿಸಲಿಲ್ಲ. ಈ ಪ್ರಪಂಚವೆಲ್ಲಾ ಯಾವ ಶಕ್ತಿಯ ಆಧಾರದಿಂದ ನಿಂತಿದೆಯೋ, ಆಕಾಶದಲ್ಲಿ ಸೂರ್ಯ, ಚಂದ್ರ, ನಕ್ಷತ್ರ ಗೋಳಗಳು ಯಾವ ಶಕ್ತಿ ಆಧಾರದಿಂದ ತಮ್ಮ ಗಮ್ಯಗಳು ತಪ್ಪದೆ ತೇಲಾಡುತ್ತಿವೆಯೋ, ಅಣುಅಣುವಿನಲ್ಲಿ ಯಾವಶಕ್ತಿ ದೈವವಾಗಿ ನಿಂತು ಅಧಿಪತಿಯಾಗಿದೆಯೋ, ಭೂಮಿ ಮೇಲಿರುವ ಎಲ್ಲಾ ಮತಗಳಿಗೂ ಯಾವ ಶಕ್ತಿ ದೇವರಾಗಿದೆಯೋ ಆ ಶಕ್ತಿಯೇ ಒಬ್ಬ ಮಾನವನಾಗಿ ಬಂದಿರುವ ಜನ್ಮ ಶ್ರೀಕೃಷ್ಣನದು. ಶ್ರೀಕೃಷ್ಣನು ಭಗದಿಂದ ಹುಟ್ಟಿದವನಾದ್ದರಿಂದ ಭಗವಂತನೆಂಬ ಹೆಸರು ಬಂದಿದೆ. ಭಗ ಎಂದರೆ ಸ್ತ್ರೀಯ ಯೋನಿ ಭಾಗವೆಂದು ಅರ್ಥ. ಅಂತಹದರಲ್ಲಿ ನಾವು ತಾಯಿ ಭಗದಿಂದಲೇ ಹುಟ್ಟಿದ್ದೇವಲ್ಲವೆ! ನಾವೆಲ್ಲಾ ಭಗವಂತರೇನಾ? ಎನ್ನುವ ಪ್ರಶ್ನೆ ಬರುತ್ತದೆ. ಇಲ್ಲಿರುವವರಿಗೆಲ್ಲ ತಿಳಿಯದಿರುವ ಸತ್ಯ ಏನೆಂದರೆ **ನಾವೆಲ್ಲರೂ ಭಗದಿಂದ ಹುಟ್ಟಲಿಲ್ಲ.** ಈ ಮಾತು ಬಹಳ ಜನರಿಗೆ ಆಶ್ಚರ್ಯವನ್ನು ಉಂಟುಮಾಡುತ್ತದೆ. ಇದರಲ್ಲಿ ಸತ್ಯ ತಿಳಿದರೆ ಆಶ್ಚರ್ಯಪಡಬೇಕಾದುದು ಏನೂ ಇಲ್ಲ. ಭಗದಿಂದ ನಮ್ಮ ಶರೀರಗಳು ಹುಟ್ಟಿವೆ, ಆದರೆ ಜೀವಾತ್ಮಗಳಾದ ನಾವು ಹುಟ್ಟಲಿಲ್ಲ. ಶಿಶು ಶರೀರ ಭಗದಿಂದ ಹೊರಗೆ ಬಂದ ನಂತರ ಸ್ವಲ್ಪ ಸಮಯಕ್ಕೆ ಎಂದರೆ ಐದು ನಿಮಿಷಗಳಿಗೊ, ಹತ್ತು ನಿಮಿಗಳಿಗೊ, ಅರ್ಧಗಂಟೆಗೊ, ಅಥವಾ ಗಂಟೆಗೊ ಎಲ್ಲೋ ಶರೀರವನ್ನು ಬಿಟ್ಟ ನಂತರ ನಾವು ಶಿಶು ಶರೀರದಲ್ಲಿ ಸೇರಿ ಅಳುತ್ತಿದ್ದೇವೆ. ಒಂದು ಕಡೆ ಮರಣಿಸಿದ ಜೀವಾತ್ಮ ಗುಣಗಳು ಪಾಪಪುಣ್ಯಗಳಿಂದ ಕೂಡಿಕೊಂಡು ಬಂದು ನಿರ್ಣಯಿಸಲ್ಪಟ್ಟು ಸಿದ್ಧವಾಗಿ ಹೊರಗೆ ಬಂದಿರುವ ಹೊಸ ಶರೀರದಲ್ಲಿ ಪ್ರವೇಶಿಸುತ್ತಿದ್ದಾನೆ. ಸರ್ವವ್ಯಾಪ್ತಿಯಾದ ಪರಮಾತ್ಮ ನಮ್ಮಂತೆ ಒಂದು ಕಡೆ ಮರಣಿಸಿ ಮತ್ತೊಂದು ಕಡೆಗೆ ಹೋಗಬೇಕಾದ ಅವಶ್ಯಕತೆ ಇಲ್ಲ. ಆತನು ಶರೀರ ಧರಿಸಿ ಮಾತನಾಡಿ ಧರ್ಮಗಳು ತಿಳಿಸಬೇಕೆಂದುಕೊಂಡಾಗ ಸ್ತ್ರೀ ಶರೀರದಲ್ಲಿಯೂ, ಗರ್ಭದಲ್ಲಿಯೂ, ಗರ್ಭಸ್ಥ ಶಿಶುವಿನಲ್ಲಿಯೂ, ಸರ್ವವೂ ವ್ಯಾಪಿಸಿ ಇದ್ದಾನಾದ್ದರಿಂದ ಶಿಶು ಶರೀರದೊಂದಿಗೆ ಸಜೀವವಾಗಿ ಹುಟ್ಟುತ್ತಿದ್ದಾನೆ. ಆದ್ದರಿಂದ ಆತನು ಒಬ್ಬನೇ ಭಗವಂತನಾಗುವನು, ಸರ್ವವ್ಯಾಪಿ, ಸರ್ವವು ತಾನಾಗಿರುವವನು ಮತ್ತೊಂದರ ಪ್ರಮೇಯ ಇಲ್ಲದಂತೆ ಹುಟ್ಟಬಲ್ಲನು. **"ಸ್ವಯಂಭು" ಆದ ಪರಮಾತ್ಮ ಹುಟ್ಟಬೇಕಾಗಿ ಬಂದಾಗ ಶಿಶುಶರೀರ ತಯಾರಾಗುವುದಕ್ಕೆ ಪುರುಷ ವೀರ್ಯಕಣಗಳಿಂದ ಸಹ ಕೆಲಸವಿಲ್ಲ. ಆದ್ದರಿಂದ ಸರ್ವವ್ಯಾಪಿಯಾದವನು ಕನ್ಯೆ ಗರ್ಭದಿಂದಾದರು**

**ಹುಟ್ಟಿಬರಬಲ್ಲನು. ಖುದ್ ಎಂದರೆ ತನಗೆ ತಾನಾಗಿ ಹುಟ್ಟುವವನು ಖುದಾ ಆಗುತ್ತಾನೆ. ಖುದಾ ಆದ ಪರಮಾತ್ಮನು ಸಜೀವವಾಗಿ ಹುಟ್ಟಿದ ಶರೀರಕ್ಕೆ ಶ್ರೀಕೃಷ್ಣ ಎನ್ನುವ ಹೆಸರು ಇಟ್ಟಿದ್ದಾರೆ. ಆದುದರಿಂದ ಶ್ರೀಕೃಷ್ಣನು ಭಗವಂತನು, ಆತನು ಹೇಳಿರುವುದೇ ಭಗವದ್ಗೀತೆ.**

ಧರ್ಮಗಳು ಎಂದರೆ ಏನೋ ತಿಳಿಯದಂತೆ ಹೋಗಿ ಅಧರ್ಮಗಳು ಮಾನವರಲ್ಲಿ ಹೆಚ್ಚಾದಾಗ ತಾನೇ ಉದ್ಭವಿಸಿ, ಧರ್ಮಗಳನ್ನು ಕುರಿತು ತಿಳಿಸುತ್ತೇನೆಂದು ಗೀತೆಯಲ್ಲಿ ಭಗವಂತನು ತಿಳಿಸಿದ್ದಾನೆ. ಆ ಮಾತಿನ ಪ್ರಕಾರ ದ್ವಾಪರಯುಗ ಅಂತ್ಯದಲ್ಲಿ ಭಗವಂತನು ಹುಟ್ಟಿದ್ದಾನೆಂದರೆ ಆಗ ಧರ್ಮಗಳಿಗೆ ಹಾನಿ ಏರ್ಪಟ್ಟು ಅಧರ್ಮಗಳು ಹೆಚ್ಚಾಗಿವೆಯೆಂಬ ಮಾತು. ಇಲ್ಲಿ ಕೆಲವರಿಗೊಂದು ಅನುಮಾನ ಬರಬಹುದು. ದ್ವಾಪರಯುಗ ಅಂತ್ಯದಲ್ಲಿ ವ್ಯಾಸನು, ಭೀಷ್ಮನು, ಮೊದಲಾದ ಎಷ್ಟೋ ಜನ ದೊಡ್ಡವರಿರುತ್ತಿದ್ದರು ಅಲ್ಲವೆ! ಆ ಸಮಯದಲ್ಲಿಯೇ ಧರ್ಮಗಳಿಗೆ ಗ್ಲಾನಿ (ಮುಪ್ಪು) ಏರ್ಪಟ್ಟಿದೆಯಾ? ಎನ್ನುವುದು ಪ್ರಶ್ನೆ. ಅದಕ್ಕೆ ಉತ್ತರ ಏನೆಂದರೆ! ಆ ಕಾಲದಲ್ಲಿ ತಪಸ್ಸುಗಳು, ಯಜ್ಞಯಾಗಾದಿಗಳು, ವ್ರತಕ್ರತುಗಳು ಹೆಚ್ಚಾಗಿರುತ್ತಿದ್ದವು. ವಾಸ್ತವಿಕ ಧರ್ಮಗಳು ತಿಳಿಯದ ಕಾರಣದಿಂದ ಆ ದಿನದ ಪ್ರಜೆಗಳಲ್ಲಿ ಭಕ್ತಿ ಎಂಬುವುದು ಇದ್ದರೂ ಅದು ಬಾಹ್ಯ ದೇವತಾರಾಧನೆಗಳ ಮೇಲೆ ಇರುತಿತ್ತು. ಅಂತರ್ಮುಖ ಆಧ್ಯಾತ್ಮಿಕದ ಮೇಲೆ ಇಲ್ಲದಂತಿತ್ತು. ಎಷ್ಟೋ ಜನ ಋಷಿಗಳು ಇದ್ದರು ಅವರೆಲ್ಲರು ದೇವತೆಗಳ ಮೇಲೆ ದೃಷ್ಟಿಯನ್ನಿಟ್ಟು ತಾವೇನೋ ಹೊಂದಬೇಕೆಂಬ ಚಿಂತನೆಯೇ ಹೊರತು, ಯೋಗವೇನೊ ತಿಳಿಯದಂತೆ ಇದ್ದರು. ಎಷ್ಟೇ ದೊಡ್ಡ ಋಷಿಗಳಾದರು ಪುಣ್ಯ ಬರುವ ಸತ್ಕಾರ್ಯಗಳನ್ನು ಹೊರತು, ಪುಣ್ಯವು ಅಂಟದಿರುವ ಕಾರ್ಯವಿಧಾನ ತಿಳಿಯದಂತಿದ್ದರು. ನೀತಿ ಹೊರತು ಜ್ಞಾನ ತಿಳಿಯದ ಆ ಕಾಲದಲ್ಲಿ, ನ್ಯಾಯ ಹೊರತು, ಧರ್ಮ ತಿಳಿಯದಂತಹ ಸಮಯದಲ್ಲಿ ಭಗವಂತನು ಉದ್ಭವಿಸಿದ್ದಾನೆ. ಆ ಭಗವಂತನು ಹೇಳಿರುವುದೇ ಭಗವದ್ಗೀತೆ. ಗೀತೆ ಭಗವಂತನ ಮೂಲಕ ಬೋಧಿಸಲ್ಪಟ್ಟಿದೆ, ಭಗವಂತನು ಗೀತೆಯನ್ನು ಶಾಶ್ವತವಾಗಿರುವಂತೆ ಗೀಚಿ ಹೋದರೂ ಆ ಹದ್ದಿನಲ್ಲಿನ ಆಧ್ಯಾತ್ಮಿಕ ರೂಪವನ್ನು ಅಜ್ಞಾನವೆಂಬ ಕುರುಡುತನದಿಂದ ಮಾನವನು ಸರಿಯಾಗಿ ನೋಡದೆ ಹೋಗಿದ್ದಾನೆ. ಇವು ಧರ್ಮಗಳೆಂದು ಗುರುತಿಸದೆ ಹೋಗಿದ್ದಾನೆ. ಇದು ಆಧ್ಯಾತ್ಮಿಕವೆಂದು ಭೋದಿಸುವುದಕ್ಕೆ ಮಾನವರಾದ ಕೆಲವರು ಗುರುಗಳಾಗಿ ಹೋದರೂ ಅವರಲ್ಲಿ ಮಾಯೆ ಪ್ರಭಾವಬೀರಿ ಆಧ್ಯಾತ್ಮಿಕವನ್ನೇ ಬೋಧಿಸುತ್ತೇವೆಂದು ಭ್ರಮೆಯನ್ನುಂಟು ಮಾಡಿ, ಅವರಿಂದ ಅಧರ್ಮಗಳನ್ನೇ ಬೋಧಿಸುವಂತೆ ಮಾಡಿದೆ. ಪರಮಾತ್ಮನಿಂದ ಸೃಷ್ಟಿಸಲ್ಪಟ್ಟ ಮಾಯೆ, ಪರಮಾತ್ಮನಿಗೆ ವಿರುದ್ಧವಾಗಿ ಬೋಧಿಸುವಂತೆ ಮತ್ತು ಆಚರಿಸುವಂತೆ ಮಾಡುವುದು ಅದರ ಕರ್ತವ್ಯ. ಆದ್ದರಿಂದ ಮಾನವರ ಶರೀರಗಳಲ್ಲಿ ಗುಣಗಳಲ್ಲಿ ಅಡಗಿದ್ದು, ಯಾರು

ಗುರುತಿಸದಿರುವಂತೆ ಮಾಯೆ ಮಾನವರನ್ನು ಸುಲಭವಾಗಿ ತನ್ನಕಡೆ ನಡೆಸಿಕೊಳ್ಳುತ್ತಿದೆ. ಎಷ್ಟೋ ಜನ ಗುರುಗಳನ್ನು ಸಹಿತ ಭ್ರಮೆಯಲ್ಲಿ ಮುಳುಗಿಸಿ, ಪರಮಾತ್ಮನ ವಿಧಾನವಾಗಲಿ, ಪರಮಾತ್ಮನ ಧರ್ಮಗಳನ್ನಾಗಲಿ, ಗುರುತಿಸದಂತೆ ಮಾಡಿ, ಅವರು ಬೋಧನೆ ಮಾಡುತ್ತಿರುವುದು ಪರಮಾತ್ಮನ ಜ್ಞಾನವೇ ಎನ್ನುವಂತೆ ತಿಳಿಯುವಹಾಗೆ ಮಾಡುತ್ತದೆ. ಆದ್ದರಿಂದ ಎಷ್ಟೋ ಜನ ಮಹಾನುಭಾವರೂ ಸಹ ಆಧ್ಯಾತ್ಮಿಕದಲ್ಲಿ ಪರಮಾತ್ಮ ಹೇಳಿದಂತೆ ಅಲ್ಲದೆ, ಸ್ವಲ್ಪ ಪಕ್ಕ ಮಾರ್ಗದಲ್ಲಿ ಹೋಗಿದ್ದಾರೆಂದೇ ಹೇಳಬಹುದು.

ತಿಳಿದವರೂ ಸಹ ಮುಖ್ಯವಾದ ಧರ್ಮಗಳ ಹತ್ತಿರ ಗೊಂದಲ ಬೀಳುವಂತೆ ಮಾಯೆ ಮಾಡಿದೆ. ಪ್ರಜೆಗಳಿಗೆ ಜ್ಞಾನವನ್ನು ಬೋಧಿಸುವ ಬೋಧಕರಿಂದಲೇ ಪಕ್ಕದಾರಿಯನ್ನು ಭೋಧಿಸುವಂತೆ ಮಾಡುತ್ತಿದೆ. ಉದಾಹರಣೆಗೆ ಒಂದು ವಿಷಯ ನೋಡೋಣ. ಒಂದು ಸಿನಿಮಾ ಶತದಿನೋತ್ಸವ ಸಭೆಯಲ್ಲಿ ಒಬ್ಬ ಸ್ವಾಮಿ ಉಪನ್ಯಾಸಮಾಡುತ್ತಾ, ಡೈರೆಕ್ಟರ್ ಉತ್ತಮ ಕೆಲಸ ಮಾಡಿದ್ದಾನೆ ಎಂದು ಹೇಳುತ್ತಾ, "**ಈ ಸಿನಿಮಾ ನಿರ್ದೇಶಕನು ಒಬ್ಬ ದೊಡ್ಡ ಯೋಗಿಯಾಗಿ ಎಷ್ಟೋ ತಪಸ್ಸು ಮಾಡಿ ಚಿತ್ರವನ್ನು ತಯಾರು ಮಾಡಿದ್ದಾನೆ, ಈ ಸಿನಿಮಾ ಬಗ್ಗೆ ಆತನು ಮಾಡಿದ ತಪಸ್ಸಿಗೆ ಮೆಚ್ಚಿಕೊಳ್ಳಬೇಕಾಗಿದ್ದೆ"** ಎಂದಿದ್ದಾರೆ. ಇಲ್ಲಿ ಸಿನಿಮಾ ನಿರ್ದೇಶಕನು ಪಟ್ಟಿರುವ ಶ್ರಮವನ್ನು ತಪಸ್ಸಾಗಿ ಹೋಲಿಸಿ ಹೇಳುವುದಲ್ಲದೆ ಆತನನ್ನೇ ಯೋಗಿ ಎನ್ನುವುದೂ ಸಹ ನಡೆದಿದೆ. ಇದನ್ನು ಅನುಸರಿಸಿ ಆತನ ಉಪನ್ಯಾಸದಲ್ಲಿ ಯೋಗಿ, ತಪಸ್ವಿ ಇಬ್ಬರೂ ಒಂದೇ ಎಂದು ತಿಳಿಯುತ್ತದೆ. ಇದು ಒಂದು ಸಂಘಟನೆಯಾಗಿದ್ದು ಮತ್ತೊಂದು ವಿಷಯವನ್ನು ನೋಡೋಣ. ಒಬ್ಬ ಸ್ವಾಮಿಯನ್ನು ಒಂದು ಪಟ್ಟಣಕ್ಕೆ ಅಲ್ಲಿನ ಪ್ರಜೆಗಳು ಅಹ್ವಾನಿಸಿದ್ದಾರೆ. ಮೊದಲೆ ಆ ವಿಷಯವನ್ನು ಪ್ರಜೆಗಳಿಗೆ ತಿಳಿಸುವುದಕ್ಕೆ ಎಲ್ಲರನ್ನು ಸ್ವಾಮಿಯವರ ದರ್ಶನಾರ್ಥವಾಗಿ ಬರಬೇಕೆಂದು ಹೇಳುವುದಕ್ಕೆ ಒಂದು ಆಹ್ವಾನ ಪತ್ರಿಕೆಯನ್ನು ಅಚ್ಚು ಹಾಕಿಸಿ ಹಂಚಿದ್ದಾರೆ. ಆ ಆಹ್ವಾನಪತ್ರಿಕೆಯನ್ನು ಅಚ್ಚು ಹಾಕಿದವರು ಆಧ್ಯಾತ್ಮಿಕ ವಿದ್ಯೆಯನ್ನು ಚೆನ್ನಾಗಿ ತಿಳಿದವರೆ. ಅವರು ಅಚ್ಚು ಹಾಕಿಸಿದ ಪತ್ರಿಕೆಯಲ್ಲಿ ಸಮಾಚಾರ ಈ ವಿಧವಾಗಿದೆ. **"ದ್ವಾದಶ ಸಂವತ್ಸರಗಳು ರುದ್ರ ಭೂಮಿಯಲ್ಲಿ ತಪವಾಚರಿಸಿ ಯೋಗಿಯಾಗಿ ಬದಲಾದ ಶ್ರೀ ಶ್ರೀ ಶ್ರೀ ಬಾಲ ಭಾರತಿ ಯೋಗಿಯವರು ನಮ್ಮ ಪಟ್ಟಣಕ್ಕೆ ಬರುತ್ತಿದ್ದಾರೆ. ಭಕ್ತರೆಲ್ಲರು ಬಂದು ದರ್ಶನ ಮಾಡಿಕೊಳ್ಳ ಬೇಕೆಂದು ಕೋರುತ್ತಿದ್ದೇವೆ"** ಎಂದು ಬರೆದಿದ್ದಾರೆ. ಇಲ್ಲಿ ಸಹ ಹನ್ನೆರಡು ವರ್ಷಗಳು ಸ್ಮಶಾನದಲ್ಲಿ ತಪಸ್ಸು ಮಾಡಿದ ತಪಸ್ವಿಯನ್ನು ಯೋಗಿ ಎಂದಿದ್ದಾರೆ. "**ತಪಸ್ಸು ಮಾಡಿ ಯೋಗಿಯಾಗಿ ಬದಲಾಗಿರುವ**" ಎಂದಿದ್ದಾರೆ. ಈ ವಿಷಯವನ್ನು ಬರೆದವರು ದೊಡ್ಡ ತತ್ತ್ವಜ್ಞರೇ ಆದರೂ ತಪಸ್ಸಿಗೂ ಯೋಗಕ್ಕೂ ಭೇದವನ್ನು ತಿಳಿಯಲಾರದೆ ಹೋಗಿದ್ದಾರೆ.

ತಪಮಾಡಿದವನನ್ನು ಯೋಗಿಯಾಗಿ, ಯೋಗ ಮಾಡಿದವನನ್ನು ತಪಸ್ವಿಯಾಗಿ ಹೇಳಿಕೊಳ್ಳುವುದರಿಂದ ಭಗವದ್ಗೀತೆಯಲ್ಲಿ ದೇವರು ಹೇಳಿದ ಧರ್ಮಗಳಿಗೆ ಮುಪ್ಪು ಏರ್ಪಡುತ್ತದೆ. ಧರ್ಮಗಳಿಗೆ ಗ್ಲಾನಿ ಏರ್ಪಟ್ಟಿದೆಯೆಂದು ಧರ್ಮಗಳನ್ನು ಕಾಪಾಡುವು ದಕ್ಕೋಸ್ಕರ ದೇವರೇ ಇಳಿದುಬಂದು *"ತಪಸ್ವಿಭ್ಯೋಧಿ ಕೋ ಯೋಗಿ"* ಎಂದು ಹೇಳಿದರೂ, ಯೋಗಕ್ಕಿರುವ ದೊಡ್ಡತನವನ್ನು ತಿಳಿಯದೇ ತಪಸ್ವಿಕರನ್ನು, ಯೋಗಿಗಳನ್ನು ಒಂದೇ ಎಂದುಕೊಳ್ಳುವುದು ತಪ್ಪಲ್ಲವೆ! ದೇವರು ಹೇಳಿದ ಧರ್ಮಕ್ಕೆ ವಿರುದ್ಧವಾಗಿ ಹೇಳಿದವರಾಗುವುದಿಲ್ಲವೆ! ದೇವರು ಹೇಳಿದ ಧರ್ಮಕ್ಕೆ ಹಾನಿಯನ್ನುಂಟುಮಾಡಿದವರಾಗಿ, ದೇವರ ಮಾತಿಗೆ ಬೆಲೆ ಇಲ್ಲದಂತೆ ಮಾಡಿದವರಾಗುತ್ತೇವೆ ಅಲ್ಲವೆ!

ಎಷ್ಟೋ ಸಣ್ಣ ಜ್ಞಾನವನ್ನೂ ಸಹ ಗ್ರಹಿಸಲಾರದೆ, ಎಷ್ಟೋ ದೊಡ್ಡ ಸ್ವಾಮಿಗಳೂ ತಪ್ಪಾಗಿ ಅರ್ಥೈಸಿಕೊಳ್ಳುವುದು ವಿಚಿತ್ರವಾಗಿದೆ! ಈಗಲೂ ಸಹ ನೂರಕ್ಕೆ ತೊಂಭತ್ತು ಜನರಿಗೆ ತಪಸ್ಸು ಬೇರೆ, ಯೋಗ ಬೇರೆಯೆಂದು ತಿಳಿಯದೆ ಹೋಗಿರುವುದು ವಿಚಿತ್ರವಾಗಿದೆ. ಬಹಳ ಪುರಾಣಗಳಲ್ಲಿ ತಪಸ್ಸು ಮತ್ತು ಯೋಗ ಎರಡನ್ನು ಒಂದಾಗಿಯೇ ಹೇಳಿ ಕೊಂಡಿದ್ದಾರೆ. ಒಬ್ಬ ಮಹರ್ಷಿ ಕಾಡಿನಲ್ಲಿ ಕುಳಿತುಕೊಂಡು ತಪಸ್ಸು ಮಾಡುತ್ತಿರುವಾಗ ಆತನ ಯೋಗದೀಕ್ಷೆಗೆ ಮೆಚ್ಚಿ ಇಂದ್ರನು ಪ್ರತ್ಯಕ್ಷನಾಗಿದ್ದಾನೆಂದು ಒಂದು ಪುಸ್ತಕದಲ್ಲಿ ಬರೆದಿದ್ದಾರೆ. ಹಾಗೆಯೇ ಒಬ್ಬ ರಾಜನು ಯೋಗ ಮಾಡುತ್ತಿರುವಾಗ ಆತನ ತಪಸ್ಸಿಗೆ ಮೆಚ್ಚಿ ಬ್ರಹ್ಮ ದೇವರು ಪ್ರತ್ಯಕ್ಷನಾಗಿದ್ದಾನೆಂದು ಮತ್ತೊಂದು ಪುಸ್ತಕದಲ್ಲಿ ಬರೆದಿದ್ದಾರೆ. ಈ ಬರಹಗಳಾಗಲಿ, ಕೆಲವರ ಬೋಧನೆಗಳಾಗಲಿ ಭಗವದ್ಗೀತೆಯಲ್ಲಿನ ಆತ್ಮಸಂಯಮ ಯೋಗ 46ನೇ ಶ್ಲೋಕದಲ್ಲಿ **"ತಪಸ್ವಿ ಬ್ಯೋಧಿಕೋ ಯೋಗಿ"**ಎನ್ನುವ ಮಾತಿಗೆ ವಿರುದ್ಧ ಧೋರಣೆಯಲ್ಲಿ ಇವೆ. ಮಾಯೆ ಜ್ಞಾನಿಗಳನ್ನೂ ಸಹ ದೇವರ ಮಾತಿಗೆ ವಿರೋಧಿಗಳನ್ನಾಗಿ ಮಾಡಬಲ್ಲದು. ಆದ ಕಾರಣ ಶಾಸ್ತ್ರವನ್ನು ಆಧಾರ ಮಾಡಿಕೊಂಡು ಜ್ಞಾನಮಾರ್ಗದಲ್ಲಿಯೇ ನಡೆಯಬೇಕು. ಹಾಗೆ ನಡೆಯದೆಹೋದರೆ ದಾರಿ ತಪ್ಪುವ ಅಪಾಯವಿದೆ.

ಈಗಿನ ಕಾಲದಲ್ಲಿ ಎಷ್ಟೋಜನ ಗುರುಗಳಾಗಿ ಹೆಸರುವಾಸಿಯಾದವರು ಇದ್ದಾರೆ. ಅವರಲ್ಲಿ ಸ್ವಚ್ಚವಾದ ಜ್ಞಾನ ವಿವರಗಳಲ್ಲದೆ ಪುರಾಣ ಇತಿಹಾಸಗಳಾದ ಭಾರತ, ಭಾಗವತ, ರಾಮಾಯಣ ಕಥೆಗಳನ್ನು ಹೇಳಿಕೊಳ್ಳುವ ಗುರುಗಳನ್ನು ಬಿಟ್ಟು, ಆತ್ಮ ವಿವರವನ್ನು ತಿಳಿಸುವಂತಹ ಜಗತ್ ಗುರುಗಳನ್ನು ಸಹಿತ ನೋಡಿದ ಪಕ್ಷದಲ್ಲಿ ಅವರಲ್ಲಿಯೂ ಸಹ ಸ್ವಲ್ಪ ಮಾಯೆ ಕೆಲಸ ಮಾಡಿದೆ ಎಂದು ಹೇಳಬಹುದು. ಉದಾಹರಣೆಗೆ ಅದ್ವೈತ ಸಿದ್ಧಾಂತವನ್ನು ಪ್ರಚಾರ ಮಾಡಿದವರಿದ್ದಾರೆ. ಮತ್ತು ದ್ವೈತ ಸಿದ್ಧಾಂತವನ್ನು ಪ್ರಚಾರ

ಮಾಡಿದವರೂ ಸಹ ಇದ್ದಾರೆ. ಪೀಠಾಧಿಪತಿಗಳಾಗಿ ದೊಡ್ಡ ಗುರುಗಳೆಂದು ಹೆಸರುವಾಸಿಯಾದವರೆ ಒಬ್ಬರ ಸಿದ್ಧಾಂತವನ್ನು ಮತ್ತೊಬ್ಬರು ಒಪ್ಪಿಕೊಳ್ಳದೆ ದ್ವೈತ ಸರಿಯಾದುದಲ್ಲವೆಂದು ಅದ್ವೈತರು, ಅದ್ವೈತ ಸರಿಯಾದುದಲ್ಲವೆಂದು ದ್ವೈತರವಾದ. ಆಲೋಚಿಸಿ ನೋಡಿದಂತಾದರೆ ಒಬ್ಬರದು ಸರಿಯಾದ ಸಿದ್ಧಾಂತವಾದರೆ ಮತ್ತೊಬ್ಬರದು ತಪ್ಪು ಸಿದ್ಧಾಂತವಾಗುತ್ತದೆ ಅಲ್ಲವೆ! ಆದುದರಿಂದ ಸಿದ್ಧಾಂತಗಳನ್ನೇ ಹೊರಡಿಸಿದ ಗುರುಗಳ ಹತ್ತಿರವೂ ಸಹ ಮಾಯೆ ಕೆಲಸಮಾಡಿದೆ ಎಂದು ಹೇಳಬಹುದು.

ಸಿದ್ಧಾಂತ ಎನ್ನುವುದು ಎಂದಿಗೂ ಬದಲಾಗದಂತದ್ದಾಗಿರಬೇಕು, ಮತ್ತು ಅಸತ್ಯವಾದುದಾಗಿರಬಾರದು, ಇನ್ನೂ ವಿವರ ಹೇಳಿಕೊಂಡರೆ ಸಿದ್ಧಿ ಎಂದರೆ ಪ್ರಾಪ್ತಿಸುವುದು, ಸಿದ್ಧಿಸುವುದು, ಅನುಭವಕ್ಕೆ ಬರುವುದೆಂದು ಅರ್ಥ. ಅನುಭವಕ್ಕೆ ಬರುವ ವಿಷಯ ತಿಳಿಸುವವನು ಸಿದ್ಧಾಂತಿಯಾಗುತ್ತಾನೆ. ಶಾಸನಗಳಿಂದ ಕೂಡಿಕೊಂಡಿರುವುದು ಶಾಸ್ತ್ರ. ಶಾಸನ ಮತ್ತು ಸಿದ್ಧಾಂತ ಎರಡು ಒಂದೇ. ಶಾಸ್ತ್ರ ತಿಳಿಸುವವನು ಶಾಸ್ತ್ರಿಯೆಂದು, ಸಿದ್ಧಾಂತವನ್ನು ತಿಳಿಸುವವನು ಸಿದ್ಧಾಂತಿಯೆಂದು ಪೂರ್ವದಲ್ಲಿ ಕರೆಯುತ್ತಿದ್ದರು. ಚಿಕ್ಕ ಚಿಕ್ಕ ಶಾಸನಗಳಿಂದ ಕೂಡಿಕೊಂಡಿರುವುದೇ ಒಂದು ಸಿದ್ಧಾಂತವಾಗುತ್ತದೆ. ಇದರ ಪ್ರಕಾರ ಎಲ್ಲಾ ವಿದ್ಯೆಗಳಿಗಿಂತ ದೊಡ್ಡ ವಿದ್ಯೆಯಾದ ಆಧ್ಯಾತ್ಮಿಕವು ಶಾಸನಪರವಾದ ಸಿದ್ಧಾಂತ ರೂಪವಾಗಿರಬೇಕು. ಹಾಗೆಯೇ ಜಗತ್ ಗುರುಗಳಾಗಿ ಹೆಸರುವಾಸಿಯಾದ ಶಂಕರಾ ಚಾರ್ಯರು ಅದ್ವೈತ ಸಿದ್ಧಾಂತವನ್ನು, ಮದ್ವಾಚಾರ್ಯರು ದ್ವೈತ ಸಿದ್ದಾಂತವನ್ನು ಪ್ರಚಾರ ಮಾಡಿದ್ದರು. ಇವು ಒಂದಕ್ಕೊಂದು ಭಿನ್ನವಾಗಿರುವುರಿಂದ ಯಾವುದು ಸತ್ಯ, ಯಾವುದು ಅಸತ್ಯವೆಂದು ಪರಿಶೀಲಿಸಿ ನೋಡಬೇಕಾಗಿದೆ. ಅವುಗಳ ವ್ಯತ್ಯಾಸಗಳು ಅವರಲ್ಲಿನ ಸತ್ಯಾಸತ್ಯಗಳು ತಿಳಿದುಕೊಳ್ಳುವುದಕ್ಕೆ ಪ್ರಮಾಣವಾಗಿ ಇಟ್ಟುಕೊಂಡು ನೋಡಬೇಕಾಗಿರುವುದೇ **ಭಗವಂತನು ಹೇಳಿದ ಭಗವದ್ಗೀತೆ.**

ಬ್ರಹ್ಮವಿದ್ಯೆಗೆ ಪ್ರಮಾಣ ಗ್ರಂಥವಾದ ಭಗವದ್ಗೀತೆ ನೂರಕ್ಕೆನೂರಷ್ಟು ಶಾಸ್ತ್ರಬದ್ಧವಾದ ಸಿದ್ಧಾಂತಗಳಿಂದ ಕೂಡಿಕೊಂಡಿದೆ. ಪರಮಾತ್ಮ ಸ್ವತಃ ತಿಳಿಸಿದ ಭಗವದ್ಗೀತೆಯ ಪ್ರಕಾರ ನೋಡಿದರೆ ಪರಮಾತ್ಮ ಜೀವಾತ್ಮಗಳು ಎರಡು ಅಲ್ಲ ಪರಮಾತ್ಮ ಒಂದೇ ಇದೆಯೆಂಬುವುದೇ ಅದ್ವೈತವು, ಜೀವಾತ್ಮ ಮತ್ತು ಪರಮಾತ್ಮ ಎರಡು ಇವೆಯೆಂದು ಹೇಳುವುದು ದ್ವೈತ, ಎರಡು ಗೀತೆಗೆ ಸ್ವಲ್ಪ ಪಕ್ಕಮಾರ್ಗದಲ್ಲಿ ಇವೆಯೆಂದು ತಿಳಿಯುತ್ತದೆ, ಎಂದರೆ ಪೂರ್ತಿಸರಿಯಾದ ಸಿದ್ಧಾಂತಗಳು ಅಲ್ಲವೆಂದು ಅರ್ಥವಾಗುತ್ತಿದೆ. ಗೀತೆಯನ್ನು ಪ್ರಮಾಣವಾಗಿ ಇಟ್ಟುಕೊಂಡು ನೋಡಿದಂತಾದರೆ ಮಾನವ ಮಾತ್ರರಾದ ಗುರುಗಳು ಹೇಳಿದ ದ್ವೈತ, ಅದ್ವೈತ ಸಿದ್ಧಾಂತಗಳು ಎರಡು ಹೇತುಬದ್ಧವಾಗಿಲ್ಲ. ದ್ವೈತ ಸಿದ್ಧಾಂತವನ್ನು

ಪರಿಶೀಲಿಸಿ ನೋಡಿದಂತಾದರೆ ಭೂಮಿ ಮೇಲೆ ಬೇರುಗಳು ಇಲ್ಲದಂತೆ ಗಿಡವಿದೆ ಎನ್ನುವುದು ಎಷ್ಟುಸತ್ಯವೋ ಅಷ್ಟೇ ಸತ್ಯವಾಗಿರುವಂತೆ ತಿಳಿಯುತ್ತದೆ. ಹಾಗೆ ಅದ್ವೈತ ಸಿದ್ಧಾಂತವನ್ನು ಪರಿಶೀಲಿಸಿದರೆ ಭೂಮಿ ಬೇರು ಇಲ್ಲದಂತೆಯೇ ಗಿಡ ಇದೆ ಎನ್ನುವುದು ಎಷ್ಟುಸತ್ಯವೋ ಅಷ್ಟೇ ಸತ್ಯವಾಗುತ್ತದೆ. ಅಂದರೆ ಎರಡು ಸಿದ್ಧಾಂತಗಳು ಅಶಾಸ್ತ್ರೀಯ ವಾಗಿವೆಯೆಂದು, ಹೇತುಬದ್ಧವಾಗಿಲ್ಲವೆಂದು ತಿಳಿಯುತ್ತಿದೆ. **ಈ ಎರಡು ಸಿದ್ಧಾಂತಗಳು ಅಶಾಸ್ತ್ರೀಯ ಅಹೇತುಕ ಎನ್ನುವುದಕ್ಕೆ ಗೀತೆಯಲ್ಲಿನ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿರುವ 16, 17 ನೇ ಶ್ಲೋಕಗಳು ಆಧಾರ. ಈ ಎರಡು ಶ್ಲೋಕಗಳು ದ್ವೈತ ಅದ್ವೈತ ಸಿದ್ಧಾಂತಗಳೆರಡನ್ನು ಒಂದೇ ಏಟಿಗೆ ಹೊಡೆದುಹಾಕುತ್ತಿವೆ. ಈ ಎರಡು ಶ್ಲೋಕಗಳೇ ನಿಜವಾದ ಆಧ್ಯಾತ್ಮಿಕ ಸಿದ್ಧಾಂತವಾದ ತ್ರೈತ ಸಿದ್ಧಾಂತವನ್ನು ಬೋಧಿಸುತ್ತಿವೆ. ಈ ಎರಡು ಶ್ಲೋಕಗಳೇ ಅಲ್ಲದೆ ಗೀತೆಯೊಂದರ ಸಾರಾಂಶವೆಲ್ಲವೂ ತ್ರೈತದ ಮೇಲೆ ಬೋಧಿಸಲ್ಪಟ್ಟಿದೆ.** ಕಲಿಯುಗದಲ್ಲಿ ದ್ವೈತ, ಅದ್ವೈತ ಸಿದ್ಧಾಂತಗಳು ಹೊರಗೆಬಂದರೆ, ದ್ವಾಪರಯುಗ ಅಂತ್ಯದಲ್ಲಿಯೇ ತ್ರೈತಸಿದ್ಧಾಂತ ಭಗವಂತನಿಂದ ಬೋಧಿಸಲ್ಪಟ್ಟಿದೆ. ಆದರೆ ಮಾಯಾ ಪ್ರಭಾವದಿಂದ ತ್ರೈತ ಅರ್ಥವಾಗದಂತೆ ಇದೆ. ಮಾಯ ಪ್ರಭಾವದಿಂದ ದ್ವೈತ, ಅದ್ವೈತಗಳು ಹೊರಬಿದ್ದಿವೆ. ಈಗಲೂ ದ್ವೈತ; ಅದ್ವೈತ ಗುರುಪರಂಪರೆಗಳಾದ ಮದ್ವಾಚಾರ್ಯ, ಶಂಕರಚಾರ್ಯ ಪೀಠಗಳು ಭೂಮಿ ಮೇಲೆ ಇವೆ. **ತ್ರೈತವೆಂಬ ಹೆಸರಾಗಲಿ ಅದನ್ನು ಬೋಧಿಸುವರಾಗಲಿ ಇಲ್ಲದಂತೆ ಹೋಗಿದ್ದಾರೆ ಇಂತಹ ಪರಿಸ್ಥಿತಿಯಲ್ಲಿ ತ್ರೈತ ಹೊರಗೆ ಬರುವುದು ನಮ್ಮ ಅದೃಷ್ಟವೆಂದು ತಿಳಿಯಬೇಕು. ತ್ರೈತದ ಪ್ರಕಾರವೇ ಭಗವದ್ಗೀತೆ ಇದೆ. ಭಗವದ್ಗೀತೆಯ ಪ್ರಕಾರವೆ ತ್ರೈತವಿದೆ.** ನಾವು ಇಲ್ಲಿ ಹೊಸದಾಗಿ ಹೇಳಿಕೊಳ್ಳುತ್ತಿರುವ ತ್ರೈತ ಸಿದ್ಧಾಂತವನ್ನು ಕುರಿತು ಸ್ವಲ್ಪ ವಿವರಿಸಿಕೊಳ್ಳೋಣ.

ಪರಮಾತ್ಮನನ್ನು ಹೊರತು ಎರಡನೆಯದು ಇಲ್ಲ ಎನ್ನುವುದು ಅದ್ವೈತ, ಪರಮಾತ್ಮ ಜೀವಾತ್ಮಗಳೆರಡು ಇವೆಯೆನ್ನುವುದು ದ್ವೈತ. ಪರಮಾತ್ಮ ಮತ್ತು ಜೀವಾತ್ಮದ ಮಧ್ಯೆ ಆತ್ಮ ಇದೆ ಎಂದು ಮೂರನ್ನು ಕುರಿತು ತಿಳಿಸುವುದು ತ್ರೈತ. ಯಾವ ವಿಧವಾಗಿ ಭೂಮಿಗೂ ಗಿಡಕ್ಕೂ ಮಧ್ಯದಲ್ಲಿ ಕಾಣಿಸದಂತೆ ಬೇರುಗಳಿವೆಯೋ, ಹಾಗೆಯೇ ಪರಮಾತ್ಮಕ್ಕೂ ಜೀವಾತ್ಮಕ್ಕೂ ಮಧ್ಯದಲ್ಲಿ ಆತ್ಮ ಇದೆ. ಭೂಮಿಗೂ ಗಿಡಕ್ಕೂ ಮಧ್ಯದಲ್ಲಿ ಬೇರುಗಳು ಎಷ್ಟು ಪ್ರಾಮುಖ್ಯತೆ ವಹಿಸಿವೆಯೋ, ಹಾಗೇ ಪರಮಾತ್ಮಕ್ಕೂ ಜೀವಾತ್ಮಕ್ಕೂ ಮಧ್ಯದಲ್ಲಿ ಆತ್ಮ ಅಷ್ಟೇ ಪ್ರಾಮುಖ್ಯತೆಯನ್ನು ವಹಿಸಿದೆ. ಪರಮಾತ್ಮ ಸರ್ವವ್ಯಾಪಿ, ಅನಂತವಾದರೆ ಆತ್ಮ ಶರೀರವೆಲ್ಲ ವ್ಯಾಪಿಸಿ ಶರೀರದಲ್ಲಿ ಒಂದು ಸ್ಥಾನದಲ್ಲಿರುವ ಜೀವಾತ್ಮ ಜೀವನವನ್ನು ಸಾಗಿಸುತ್ತಿದೆ. ಬೇರುಗಳು ಇಲ್ಲದೆಹೋದರೆ ಗಿಡ ಹೇಗೆ ಇಲ್ಲವೋ ಹಾಗೆಯೇ ಆತ್ಮ ಇಲ್ಲದೆಹೋದರೆ ಜೀವಾತ್ಮನೇ ಇರುವುದಿಲ್ಲ. ಭೂಮಿ ಮೇಲೆ ಗಿಡ ಎಲ್ಲಿದ್ದರೂ ಅದಕ್ಕೆ

ತಪ್ಪದೆ ಬೇರುಗಳು ಅನುಸಂಧಾನವಾಗಿದ್ದು ಗಿಡ ಜೀವನವನ್ನು ಸಾಗಿಸುವುದಕ್ಕೆ ಆಧಾರವಾಗಿ ಹೇಗಿವೆಯೋ, ಹಾಗೆಯೇ ಪರಮಾತ್ಮ ವ್ಯಾಪಿಸಿದ ಜಗತ್ತಿನಲ್ಲಿ ಜೀವಾತ್ಮ ಎಲ್ಲಿದ್ದರೂ ಆತ್ಮ ಅನುಸಂಧಾನವಾಗಿದ್ದು ಜೀವಾತ್ಮ ಜೀವನವನ್ನು ಸಾಗಿಸುವುದಕ್ಕೆ ಆಧಾರವಾಗಿದೆ. **ಜಗತ್ತಿನಲ್ಲಿ ಪರಮಾತ್ಮ, ಆತ್ಮ, ಜೀವಾತ್ಮ ಇಲ್ಲದ ಆಧ್ಯಾತ್ಮಿಕವೇ ಇಲ್ಲ. ಈ ವಿಷಯವನ್ನೇ ವಿವರಿಸುತ್ತಾ ಕ್ಷರನೆಂದು ಜೀವಾತ್ಮನನ್ನು, ಅಕ್ಷರನೆಂದು ಆತ್ಮನನ್ನು, ಪುರುಷೋತ್ತಮನೆಂದು ಪರಮಾತ್ಮನನ್ನು ಗೀತೆಯಲ್ಲಿ ಬೋಧಿಸಿದ್ದಾರೆ. ಜೀವಾತ್ಮ ಆತ್ಮಗಳೆರಡು ಕೂಟಸ್ಥವಾಗಿ ಕೂಡಿವೆಯೆಂದು, ಅವುಗಳಿಗೆ ಅತೀತವಾಗಿ ಪರಮಾತ್ಮ ಇದೆಯೆಂದು, ಜೀವಾತ್ಮ ಆತ್ಮಗಳೆಂಬ ಇಬ್ಬರು ಪುರುಷರಿಗಿಂತ ಅತೀತವಾಗಿರುವ ಪರಮಾತ್ಮ ಪುರುಷೋತ್ತಮನೆಂದು ಹೇಳಲಾಗಿದೆ.** ಈ ವಿಷಯ ಬ್ರಹ್ಮವಿದ್ಯಾಶಾಸ್ತ್ರವಾದ ಗೀತೆಯಲ್ಲಿ ಪರಮಾತ್ಮನ ಮಾತುಗಳ ರೂಪದಲ್ಲಿ ಹೇಳುವುದಲ್ಲದೆ ಪ್ರತಿ ಮಾನವನು ಈ ವಿಷಯವನ್ನು ತಿಳಿದುಕೊಳ್ಳುವಂತೆ, ಪ್ರತಿ ಮಾನವನ ಹಸ್ತದಲ್ಲಿ ಜೀವಾತ್ಮ, ಆತ್ಮ, ಪರಮಾತ್ಮರ ಗುರುತಾಗಿ ಮೂರು ರೇಖೆಗಳು ಮುದ್ರಿಸಿಟ್ಟಿದ್ದಾನೆ. ಪ್ರತಿ ಮನುಷ್ಯನ ಹಸ್ತದಲ್ಲಿನ ಮೂರು ರೇಖೆಗಳು ಮುಖ್ಯವಾಗಿರುತ್ತವೆ. ಅವುಗಳಲ್ಲಿ ಎರಡು ಕೆಳಗಿನ ರೇಖೆಗಳ ತುದಿಗಳು ಒಂದಕ್ಕೊಂದು ಸೇರಿರುತ್ತವೆ. ಮೇಲಿನ ರೇಖೆ ಒಂದು ಮಾತ್ರ ಪ್ರತ್ಯೇಕವಾಗಿರುವುದು ಗಮನಿಸಬಹುದು. ಬೆರೆತಿರುವ ಎರಡು ರೇಖೆಗಳು ಜೀವಾತ್ಮ, ಆತ್ಮಗಳಿಗೆ ಪ್ರತೀಕವಾಗಿರುವಾಗ ಪ್ರತ್ಯೇಕವಾಗಿ ಮೇಲಿರುವ ರೇಖೆ ಮಾತ್ರ ಪರಮಾತ್ಮಕ್ಕೆ ಗುರುತಾಗಿದೆ ಇದು ಪ್ರತಿ ಹಸ್ತದಲ್ಲಿರುವಾಗ ಗುರುಗಳಾಗಿರುವವರೂ ಸಹ ಇದನ್ನು ಗಮನಿಸಲಿಲ್ಲವೆಂದರೆ, ಮಾಯೆವೊಂದರ ಪ್ರಭಾವ ಎಷ್ಟು ಹೆಚ್ಚಾಗಿದೆಯೋ ಅರ್ಥ ಮಾಡಿಕೊಳ್ಳಬಹುದು. ಸೃಷ್ಟಿ ಆದಿಯಲ್ಲಿಯೇ ಮಾನವನ ಅಂಗೈಯಲ್ಲಿ ಮೂರು ಆತ್ಮಗಳ ರಹಸ್ಯವನ್ನಿಟ್ಟಿರುವ ಪರಮಾತ್ಮ ದ್ವಾಪರಯುಗ ಅಂತ್ಯದಲ್ಲಿಯೂ ಅದೇ ವಿಷಯವನ್ನು ಗೀತೆಯಲ್ಲಿ ಹೇಳಿದ್ದಾನೆ. ಕೈಯಲ್ಲಿಟ್ಟರು, ಬಾಯಿಂದ ಹೇಳಿದರು ಮಾನವನು ಗ್ರಹಿಸಲಾರದೆ ಹೋಗುತ್ತಿದ್ದಾನೆಂದು ಪೂರ್ವದಲ್ಲಿ ತಿಳಿದ ಹಿರಿಯರು ಪುರುಷನನ್ನು ಸೂಚಿಸುವ ಲಿಂಗಾಕೃತಿಯನ್ನು ದೇವಾಲಯಗಳಲ್ಲಿ ಪ್ರತಿಷ್ಠಾಪಿಸಿ ಗೀತೆಯಲ್ಲಿ ಹೇಳಿದಂತೆ **ಜೀವಾತ್ಮ, ಆತ್ಮ, ಪರಮಾತ್ಮಗಳಾಗಿ, ಪುರುಷನು ಮೂರು ಭಾಗಗಳಾಗಿ ಇದ್ದಾನೆಂದು ತಿಳಿಯುವಂತೆ, ಮೂರು ವಿಭೂತಿರೇಖೆಗಳನ್ನು ಲಿಂಗದ ಮೇಲೆ ರೂಪಿಸಿಟ್ಟಿದ್ದಾರೆ. ಮೂರು ಆತ್ಮಗಳ ವಿಷಯಗಳು ಪ್ರತಿ ಈಶ್ವರ ದೇವಾಲಯಗಳಲ್ಲಿ ಇರುವಂತೆ ಮಾಡಿದ್ದಾರೆ.** ಆದರೆ ಕಾಲಕ್ರಮವಾಗಿ ಧರ್ಮ ಯಾವಾಗಲೋ ಅಧರ್ಮವಾಗಿ ಬದಲಾಗಿ ಈಶ್ವರ ದೇವಾಲಯ ಕೊನೆಗೆ ಕತ್ತಿನಲ್ಲಿ ಹಾವು ಇರುವ ಶಿವನ ಆಲಯವಾಗಿ ಲೆಕ್ಕಿಸಲ್ಪಡುತ್ತಿದೆ. ಈಶ್ವರನೆಂದರೆ ಅಧಿಪತಿ ಎಂಬ ಅರ್ಥಹೋಗಿ ಈಶ್ವರನೇ ಶಂಕರನೆಂಬ ಬೇರೆ ಅರ್ಥ ಉಳಿದುಹೋಗಿದೆ.

ಆದಿಯಲ್ಲಿ ಸ್ವಚ್ಛವಾಗಿರುವ ಲಿಂಗ ಒಂದೇ ಇರುವ ಈಶ್ವರಾಲಯದಲ್ಲಿ ನಂತರ ಲಿಂಗದೊಂದಿಗೆ ಪಾರ್ವತಿ, ಎದುರಿಗೆ ನಂದಿಯನ್ನು ಪ್ರತಿಷ್ಠಾಪಿಸಿದ್ದಾರೆ. ಹೀಗೆ ಕೊನೆಗೆ ಈಶ್ವರಾಲಯ ಶಂಕರಾಲಯವಾಗಿ ಬದಲಾಗಿ ಶೈವರ ದೇವಾಲಯವಾಗಿದೆ. ಹೀಗೆ ಮೂರು ವಿಭೂತಿ ರೇಖೆಗಳ ಅರ್ಥವಾದ ಆತ್ಮಗಳ ಗುರುತು ಬದಲಾದರೂ ಅಸಲು ಸತ್ಯ ಸ್ಥಿರವಾಗಿರುವಂತೆ ನಮ್ಮ ಹಿರಿಯರು ಒಂದು ನಿಯಮವನ್ನು ಇಟ್ಟಿದ್ದಾರೆ. ಅದೇನೆಂದರೆ ಪ್ರತಿದಿನ ಬೆಳಗ್ಗೆ ನಿದ್ರೆಯಿಂದ ಎದ್ದಾಗ ಯಾರ ಮುಖವನ್ನೂ ಸಹ ನೋಡದಂತೆ ಮೊಟ್ಟಮೊದಲು ತನ್ನ ಅಂಗೈಯನ್ನು ನೋಡಬೇಕೆಂದು ಹೇಳುತ್ತಾರೆ. ಎದ್ದ ತಕ್ಷಣವೆ ಅಂಗೈಯನ್ನು ನೋಡುವುದರಿಂದ ಮೂರು ರೇಖೆಗಳು ಕಾಣಿಸುತ್ತವೆಂದು, ಎಂದಿಗಾದರೂ ಅವುಗಳನ್ನು ಕುರಿತು ಆಲೋಚಿಸುವುದಿಲ್ಲವಾ! ಎಂದು ಹಿರಿಯರ ಭಾವವಾಗಿರಬಹುದು. ಈ ಆಚಾರ ಈ ಕಾಲದಲ್ಲಿ ಎಲ್ಲಿಯಾದರು ಉಳಿದಿದ್ದರೂ ಅರ್ಥ ತಿಳಿದುಕೊಳ್ಳದೆ ಹೋಗುತ್ತಿದ್ದಾರೆ. ಅಂಗೈಯಲ್ಲಿ ಮೂರು ಆತ್ಮಗಳಿವೆ ಎಂದು, ಅಂಗೈಯಲ್ಲೆ ಎಲ್ಲಾ ಇದೆಯೆಂದು, ಅಂಗೈಯಲ್ಲೆ ವೈಕುಂಠ ಇದೆಯೆಂದು, ಅಂಗೈಯಲ್ಲಿಯೇ ತ್ರೈತ ಸಿದ್ಧಾಂತ ಇದೆ ಎಂಬ ಅರ್ಥದಿಂದ, ಯಾವ ಮತದವನಾದರೂ ನನ್ನ ಅಭಿಮತದಲ್ಲಿಯೇ ಇದ್ದಾನೆಂದು ಪರಮಾತ್ಮ ಮಾನವರ ಕೈಯಲ್ಲಿ ಮೂರು ರೇಖೆಗಳನ್ನು ಅಳವಡಿಸಿಟ್ಟಿದ್ದಾನೆ.

ಕೈಯಲ್ಲಿನ ಮೂರುರೇಖೆಗಳೇ ಶರೀರದಲ್ಲಿನ ಮೂರು ಆತ್ಮಗ್ಗಳೆಂದು. ಶರೀರದಲ್ಲಿನ ಮೂರು ಆತ್ಮಗಳನ್ನೇ ತ್ರೈತವೆನ್ನುತ್ತಿದ್ದೇವೆಂದು, ತ್ರೈತವನ್ನು ತಿಳಿಸುವುದೇ ತ್ರೈತಸಿದ್ಧಾಂತ ಭಗವದ್ಗೀತೆ ಎಂದು ತಿಳಿಸುತ್ತಿದ್ದೇವೆ. ತ್ರೈತಸಿದ್ಧಾಂತ ಮುಖ್ಯವಾಗಿ ಮೂರು ಆತ್ಮಗಳ ವಿವರವನ್ನು ಕುರಿತು ಹೇಳುತ್ತಾಹೋಗಿದೆ. ತ್ರೈತ ಎಂದರೂ ಮೂರು ಆತ್ಮಗಳೆಂದರೂ ಓದುವವರಿಗೆ ಹೊಸದಾಗಿರುತ್ತದೆ. ಆದ್ದರಿಂದ ಮೊದಲು ಗೀತಾ ಪರಿಚಯವನ್ನು ಓದಬೇಕಾದ ಅವಶ್ಯಕತೆ ಇದೆ. ಏಕೆಂದರೆ ಒಬ್ಬ ಹೊಸಬನನ್ನು ನಾವು ನೇರವಾಗಿ ಮಾತನಾಡಿಸಲಾರೆವು. ಅವನೊಂದಿಗೆ ಸ್ನೇಹ ಮಾಡಲಾರೆವು. ಹೊಸ ವ್ಯಕ್ತಿಯನ್ನು ಪರಿಚಯ ಮಾಡುವುದಕ್ಕೆ ಒಬ್ಬ ಮಧ್ಯವರ್ತಿ ಇದ್ದರೆ ಅವನೊಂದಿಗೆ ಸುಲಭವಾಗಿ ಪರಿಚಯ ಏರ್ಪಡುತ್ತದೆ. ಮಧ್ಯವರ್ತಿಯ ತಿಳಿವಳಿಕೆಯನ್ನನುಸರಿಸಿ, ಅವನು ತಿಳಿಸುವುದನ್ನನುಸರಿಸಿ, ಹೊಸ ವ್ಯಕ್ತಿಯ ವಿಷಯವೆಲ್ಲವೂ ನಮಗೆ ಮೊದಲೆ ಅವಗಾಹನೆ ಆಗಬಲ್ಲದು. ಅದರ ನಂತರ ಅವನೊಂದಿಗೆ ಸುಲಭವಾಗಿ ಬೆರೆತು ಹೋಗಬಹುದು. ಹಾಗೆಯೇ ತ್ರೈತ ಸಿದ್ಧಾಂತ ಭಗವದ್ಗೀತೆಯಲ್ಲಿನ ಸಾರಾಂಶವನ್ನು ತಿಳಿಯಬೇಕೆಂದರೆ, ಅದರ ಅವಗಾಹನೆ ಆಗಬೇಕೆಂದರೆ, ಮೊದಲು ಗೀತಾಪರಿಚಯವನ್ನು ಓದಿದ ನಂತರ ತ್ರೈತ ಸಿದ್ಧಾಂತ ಭಗವದ್ಗೀತೆ ಎನ್ನುವ ಹೊಸ ಗೀತೆ ಅರ್ಥವಾಗಬಲ್ಲದು. ಈ ಗೀತಾ ಪರಿಚಯ ನಿಮ್ಮನ್ನು ತ್ರೈತದ ಜೊತೆ

ಪರಿಚಯ ಮಾಡಿಸಿ, ತ್ರೈತ ಎಂದರೆ ಏನೊ ತಿಳಿಸಬಲ್ಲದು. ಗೀತಾಪರಿಚಯವನ್ನು ಓದಿದ ನಂತರ ನಮ್ಮಿಂದ ರಚಿಸಲ್ಪಟ್ಟ **ತ್ರೈತಸಿದ್ಧಾಂತ ಭಗವದ್ಗೀತೆಯನ್ನು** ಓದುತ್ತೀರೆಂದು ಕೋರುತ್ತಿದ್ದೇವೆ.

ಈ [ ] ಬಾಕ್ಸ್‌ನಲ್ಲಿರುವ ಶ್ಲೋಕಗಳ ಭಾವವನ್ನು ಪೂರ್ತಿಯಾಗಿ ಬದಲಾಯಿಸಿ ಬರೆಯಲಾಗಿದೆ. ಆದ್ದರಿಂದ ಬಹಳ ಯೋಚನಾ ಶಕ್ತಿಯನ್ನು ಉಪಯೋಗಿಸಿ ಓದಬೇಕೆಂದು ಕೋರುತ್ತಿದ್ದೇವೆ.

**ಭಾವವನ್ನು ಬದಲಾಯಿಸಿ ಬರೆದ ಶ್ಲೋಕಗಳು :–**

| | | |
|---|---|---|
| ಸಾಂಖ್ಯ ಯೋಗದಲ್ಲಿ | – | 11, 19, 22, 23, 24, 45, 47. |
| ಕರ್ಮ ಯೋಗದಲ್ಲಿ | – | 9, 21, 24, 35. |
| ಜ್ಞಾನ ಯೋಗದಲ್ಲಿ | – | 5, 6, 7, 8, 13, 17, 33. |
| ಕರ್ಮಸನ್ಯಾಸ ಯೋಗದಲ್ಲಿ | – | 6, 18. |
| ಆತ್ಮ ಸಂಯಮ ಯೋಗದಲ್ಲಿ | – | 1, 3, 5. 6, 32, 41. |
| ವಿಜ್ಞಾನ ಯೋಗದಲ್ಲಿ | – | 5, 11, 25. |
| ಅಕ್ಷರ ಪರಬ್ರಹ್ಮ ಯೋಗದಲ್ಲಿ | – | 4, 13, 23, 24, 25. |
| ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ | – | 13, 22, 24, 25, 26. |
| ವಿಭೂತಿ ಯೋಗ | – | 6. |
| ವಿಶ್ವರೂಪ ಸಂದರ್ಶನ ಯೋಗದಲ್ಲಿ | – | 23, 25, 27, 39. |
| ಕ್ಷೇತ್ರ ಕ್ಷೇತ್ರಜ್ಞ ವಿಭಾಗ ಯೋಗದಲ್ಲಿ | – | 2, 6. |
| ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ | – | 2, 14, 15, 16, 17, |
| ದೈವಾಸುರ ಸಂಪದ್ವಿಭಾಗ ಯೋಗ | – | 7, 8, 9. |
| ಮೋಕ್ಷಸನ್ಯಾಸ ಯೋಗದಲ್ಲಿ | – | 2. |



## ಮೊದಲನೆಯ ಅಧ್ಯಾಯ

# ಸಾಂಖ್ಯ ಯೋಗ

**ಶ್ರೀ ಭಗವಂತನು ಹೀಗೆ ಹೇಳುತ್ತಾನೆ :–**

**(1) ಶ್ಲೋ ॥ 11 : ಅಶೋಚ್ಯಾ ನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।**
**ಗತಾಸೂ ನಗತಾ ಸೂಂಶ್ಚ ನಾನುಶೋಚ ನ್ತಿ ಪಂಡಿತಾಃ ॥**
**(ಪ್ರಕೃತಿ, ಪರಮಾತ್ಮ)**

**ಭಾವಾರ್ಥ :** ಶೋಕಿಸಬಾರದವುಗಳನ್ನು ಕುರಿತು ನೀನು ಶೋಕಿಸುತ್ತಿರುವೆ. ಮತ್ತೂ ನಿನ್ನ ಪ್ರಜ್ಞೆ(ಬುದ್ಧಿ) ಎಲ್ಲವನ್ನು ಉಪಯೋಗಿಸಿ ಮಾತನಾಡುತ್ತಿರುವೆ. ಪಂಡಿತರು ಗತಿಗಳಿರುವ ಮತ್ತು ಗತಿಗಳಿಲ್ಲದವುಗಳನ್ನು ಕುರಿತು ದುಃಖಪಡುವುದಿಲ್ಲ.

**ವಿವರ :** ಶೋಕಿಸಬಾರದ ವಿಷಯವನ್ನು ಕುರಿತು ಶೋಕಿಸುತ್ತಿರುವೆ ಎಂದು ಪ್ರತ್ಯೇಕವಾಗಿ ತಿಳಿಸಿದಾಗ ಪರೋಕ್ಷವಾಗಿ ದುಃಖಪಡಬೇಕಾದ ವಿಷಯವನ್ನು ಕುರಿತು ದುಃಖಪಡಲಿಲ್ಲ ವೆಂದು, ನಿಜವಾಗಲು ದುಃಖ ಪಡಬೇಕಾಗಿರುವುದು ಏನೋ ಇದೆಯೆಂದು ತಿಳಿಯುತ್ತಿದೆ. ಇಲ್ಲಿ ವಿವರವಾಗಿ ಶೋಕಿಸದಿರುವುದು ಯಾವುದು? ಶೋಕಿಸುವುದು ಯಾವುದು? ಎಂದು ಯೋಚಿಸಬೇಕಾಗಿರುತ್ತದೆ. ಯಾವುದಕ್ಕೋಸ್ಕರ ಶೋಕಿಸಬಾರದೋ ಎಂದರೆ ದುಃಖಪಡಬಾರದೋ ಅದನ್ನು ಕುರಿತು ಅದೇ ಶ್ಲೋಕದಲ್ಲಿ "ಗತಾಸೂ ನಗತಾಸೂಂಶ್ಚ" ಎಂದು ಹೇಳಲಾಗಿದೆ. ಎಂದರೆ ಗತಿಗಳನ್ನು ಹೊಂದಿರುವ, ಗತಿಗಳು ಇಲ್ಲದವುಗಳನ್ನು ಕುರಿತು ದುಃಖಪಡುತ್ತಿರುವೆ. ಆಗ ಗತಿಗಳಿರುವ ಗತಿಗಳು ಇಲ್ಲದವುಗಳಿಗಿಂತ ಬೇರೆಯದನ್ನು ಕುರಿತು ದುಃಖಪಡಬೇಕಾಗಿದೆ ಎಂದು ಸುಲಭವಾಗಿ ಅರ್ಥವಾಗುತ್ತಿದೆ. ಈಗ ಪ್ರತಿ ಮಾನವನು ತಿಳಿಯಬೇಕಾದ ವಿವರವು ಗತಿಗಳು ಇರುವುದು ಯಾವುದು? ಗತಿಗಳು ಇಲ್ಲದಿರುವುದು ಯಾವುದು? ಗತಿಗಳು ಇರುವ ಮತ್ತು ಗತಿಗಳು ಇಲ್ಲದವುಗಳಿಗಿಂತ ಭಿನ್ನವಾಗಿರುವುದು ಯಾವುದು? ಎನ್ನುವ ವಿಷಯ ಮುಖ್ಯ. ಏಕೆಂದರೆ ಆ ಮೂರನೆಯದಕ್ಕೋಸ್ಕರ ನಾವು ದುಃಖಪಡಬೇಕು.

ಗತಿ ಎಂದರೆ ಎಷ್ಟೋ ಅರ್ಥಗಳು ಇವೆ 1) ಹೋಗು 2) ವಿಧ 3) ದಾರಿ 4) ಸ್ಥಾನ 5) ಆಧಾರ 6) ಪ್ರಯಾಣ 7) ಉಪಾಯ 8) ಚಲನೆ ಎಂದು ಇಷ್ಟು ಅರ್ಥಗಳು ಇವೆ. ಇಲ್ಲಿ ಸಂದರ್ಭಾನುಸಾರವಾಗಿ ಭೌತಿಕ ಅರ್ಥವಾದ "ಚಲನೆ" ಎನ್ನುವ

ಪದವನ್ನು ತೆಗೆದುಕೊಂಡಾಗಲೇ ಶ್ರೀಕೃಷ್ಣನ ಮಾತಿನಲ್ಲಿನ ನಿಜಾರ್ಥವು ಹೊರಬೀಳುತ್ತದೆಂದು ತಿಳಿಯಬೇಕು. ಅದರ ಪ್ರಕಾರ ಚಲನೆಹೊಂದಿರುವ ಶರೀರ ಇರುವ ಸಮಸ್ತ ಜೀವರಾಶಿಗಳಿವೆ. ಹಾಗೆ ಚಲನೆಯಿಲ್ಲದ ವಸ್ತುಜಾಲವು ಪ್ರಪಂಚದಲ್ಲಿ ಎಷ್ಟೋ ಇದೆ. ಚಲನೆ ಹೊಂದಿದ ಮಾನವರು, ಪ್ರಾಣಿಗಳು ಕ್ರಿಮಿ ಕೀಟಗಳು, ಚಲನೆಯಿಲ್ಲದ ವಸ್ತುಗಳೆಲ್ಲವನ್ನು ಸೇರಿಸಿ ಜ್ಞಾನ ತಿಳಿದ ಹಿರಿಯರು "ಪ್ರಕೃತಿ" ಎಂದು ಹೆಸರಿಟ್ಟಿದ್ದಾರೆ. ಚಲನೆ ಹೊಂದಿರುವ ಚಲನೆ ಇಲ್ಲದ ಈ ಪ್ರಕೃತಿಗಿಂತ ಬೇರೆಯಾದುದು ಒಂದಿದೆ. ಅದೇ 'ದೈವ'. ಆ ದಿನ ಅರ್ಜುನನು ಪ್ರಕೃತಿಯಲ್ಲಿನ ಮನುಜರನ್ನು ಕುರಿತೇ ದುಃಖಪಟ್ಟಿದ್ದಾನಾಗಲಿ ಪ್ರಕೃತಿಗೆ ಅತೀತವಾದ ದೈವವನ್ನು ಕುರಿತು ದುಃಖಪಡಲಿಲ್ಲ. ಆದ್ದರಿಂದಲೇ ಶ್ರೀಕೃಷ್ಣನು ಯಾವುದಕ್ಕೋಸ್ಕರ ದುಃಖಪಡಬಾರದೋ ಅದಕ್ಕೋಸ್ಕರವೇ ನೀನು ದುಃಖಪಡುತ್ತಿರುವೆ ಎಂದು ಎಚ್ಚರಿಸಿದ್ದಾನೆ. ಆ ದಿನದ ಅರ್ಜುನನೇ ಅಲ್ಲದೆ ಈ ದಿನದ ಪ್ರತಿ ಮಾನವನು ಪ್ರಕೃತಿ ಸಂಬಂಧವಾದ ವಿಷಯಗಳಿಗೇ ಪರದಾಡುತ್ತಿದ್ದಾನೆ. ತಾವು ಓದಿದ ದೊಡ್ಡದೊಡ್ಡ ಓದುಗಳೆಲ್ಲ ಈ ಪ್ರಕೃತಿಯಲ್ಲಿನ ವಿಷಯಗಳನ್ನು ಕುರಿತು ಯೋಚಿಸುವುದಕ್ಕೆ ಸರಿಹೋ ಗುತ್ತಿದ್ದಾನೆ. ನಿನ್ನ ಬುದ್ಧಿಯನ್ನೆಲ್ಲವೂ ಪ್ರಕೃತಿ ವಿಷಯಗಳಿಗೆ ಉಪಯೋಗಿಸಿ ಮಾತ ನಾಡುತ್ತಿದ್ದೀಯ ಎಂದು ಅರ್ಜುನನನ್ನು ಶ್ರೀಕೃಷ್ಣನು ಎಚ್ಚರಿಸಿದ್ದಾನೆ. ಎಂದರೆ ನಮ್ಮ ಬುದ್ಧಿ (ಪ್ರಜ್ಞೆ) ಯನ್ನು ದೇವರ ಕಡೆ ಉಪಯೋಗಿ ಸಲಿಲ್ಲವೆಂದು ಹೇಳದೆಯೇ ತಿಳಿಯುತ್ತಿದೆ. ತಿಳಿದ ಜ್ಞಾನಿಗಳು ಪ್ರಕೃತಿ ಜನಿತವಾದ ಸಮಸ್ತ ವಸ್ತುಗಳನ್ನು ಮತ್ತು ಜೀವಜಾಲಗಳನ್ನು ಕುರಿತು ಚಿಂತಿಸುವುದಿಲ್ಲವೆಂದು, ಅವರು ದೇವರನ್ನು ಕುರಿತು ಚಿಂತಿಸುತ್ತಾರೆಂದು, ಶೋಕಿಸುತ್ತಾರೆಂದು ಹೇಳಲಾಗಿದೆ.

ಭಗವಂತನು ತಿಳಿಸಿದ ಮೊಟ್ಟಮೊದಲ ಶ್ಲೋಕದಲ್ಲಿಯೇ ಕಾಣಿಸುವ ಸಮಸ್ತ ಜೀವರಾಶಿಗಳು ಪ್ರಕೃತಿ ಎಂದು, ಕಾಣಿಸದ ಪರಮಾರ್ಥ ಒಂದಿದೆ ಎಂದು ಸೂಚಿಸಿದ್ದಾನೆ. ಹಾಗೆ ನಾವು ಪ್ರತಿ ನಿತ್ಯ ದುಃಖಪಡುವುದು, ಅಳುವುದು, ಚಿಂತಿಸುವುದು, ಪ್ರಕೃತಿಯಲ್ಲಿನ ವಿಷಯಗಳಿಗೆಂದು ಪರಮಾರ್ಥ ವಿಷಯಕ್ಕಲ್ಲವೆಂದೂ ಸಹ ಸೂಚಿಸಿದ್ದಾನೆ. ಪಂಡಿತ ರಾದವರು ಎಂದರೆ ಜ್ಞಾನ ತಿಳಿದವರು ಚರಾಚರ ಪ್ರಕೃತಿಗೋಸ್ಕರ ಸ್ವಲ್ಪವೂ ದುಃಖ ಪಡುವುದಿಲ್ಲವೆಂದು ತಿಳಿಸಿದ್ದಾನೆ. ಹಾಗೇ ನೀನು ಚಲನೆ ಇರುವ, ಚಲನೆ ಇಲ್ಲದವು ಗಳಿಗೋಸ್ಕರ ನಿನ್ನ ಪ್ರಜ್ಞೆಯನ್ನೆಲ್ಲಾ ಉಪಯೋಗಿಸುತ್ತಿರುವೆ. ಅದು ಸರಿಯಾದ ಕೆಲಸವಲ್ಲವೆಂದೂ ಸಹ ತಿಳಿಸಿದ್ದಾನೆ. ಮೊದಲನೆ ಶ್ಲೋಕದಲ್ಲಿಯೇ ಶೋಕಿಸಲ್ಪಡುವವು, ಶೋಕಿಸದಿರುವವೆಂದು ಎರಡು ಭಾಗಗಳು ಮಾಡಿ ತೋರಿಸಿರುವುದು ದೊಡ್ಡ ವಿಶೇಷವು.

ಅದರಲ್ಲಿ ನಮ್ಮ ಪ್ರಜ್ಞೆಯನ್ನು ಪ್ರಕೃತಿ ಬಗ್ಗೆ ವಿನಿಯೋಗಿಸದೆ ಪರಮಾತ್ಮ ಬಗ್ಗೆ ವಿನಿಯೋಗಿಸಬೇಕೆಂದು ಸೂಚಿಸುವುದು ಮೊಟ್ಟಮೊದಲ ಶ್ಲೋಕದಲ್ಲಿನ ಪ್ರತ್ಯೇಕತೆ ಎಂದು ತಿಳಿಯಬೇಕು.

**(ಬಹಳ ಜನರು ಬರೆದ ಗೀತಾ ಗ್ರಂಥಗಳಲ್ಲಿ ಈ ಶ್ಲೋಕವೊಂದರ ಭಾವಕ್ಕೂ, ಇಲ್ಲಿ ನಮ್ಮಿಂದ ಬರೆಯಲಾದ ಭಾವಕ್ಕೂ ಬಹಳ ವ್ಯತ್ಯಾಸವಿದೆ. ಅವರು ಬರೆದಿರುವುದರಲ್ಲಿ ಕೇವಲ ಮಾನವರನ್ನು ಕುರಿತು ಸತ್ತವರನ್ನು ಬದುಕಿರುವವರನ್ನು ಕುರಿತು ಹೇಳಿರುವಾಗ, ನಮ್ಮ ಭಾವದಲ್ಲಿ ಎಲ್ಲಾ ಪ್ರಕೃತಿಯನ್ನು ಕುರಿತು, ಚಲನೆ ಇಲ್ಲದ ಚಲನೆ ಇರುವ, ಜೀವವಿರುವ, ಜೀವ ಇಲ್ಲದವುಗಳನ್ನು ಕುರಿತು ಹೇಳುವುದು ನಡೆದಿದೆ. ಬದುಕಿರುವ, ಮರಣಿಸಿದವರನ್ನು ಕುರಿತು ತಿಳಿದವರು ಚಿಂತಿಸುವುದಿಲ್ಲವೆಂದು ತಿಳಿಸಿದರೆ "ಅವರ ಮೇಲೆ ನಮಗೇನು ದುಃಖವಿಲ್ಲ. ನಮಗಿರುವ ಚಿಂತೆಯೆಲ್ಲವೂ ಧನದ ಮೇಲೆಯೇ, ಬದುಕಿರುವವರು ಹೇಗಿದ್ದರು ಪರವಾಗಿಲ್ಲ, ರುಚಿಯಿಲ್ಲದ ತಿಂಡಿ ತಿಂದರು ಪರವಾಗಿಲ್ಲ, ಹಣ ಮಾತ್ರ ಖರ್ಚಾಗಬಾರದು. ಬದುಕಿರುವವರು ರೋಗದಿಂದ ದುಃಖಪಡುತ್ತಿದ್ದರು ಪರವಾಗಿಲ್ಲ ಅವರ ಬಗ್ಗೆ ನನಗೇನು ಚಿಂತೆ ಇಲ್ಲ. ಆಸ್ಪತ್ರೆಗೆ ಹೋದರೆ ಹಣ ಖರ್ಚಾಗುತ್ತದೆ ಎಂಬುವುದೇ ನನ್ನ ಬಾಧೆ" ಎನ್ನುವವರು ಇದ್ದಾರೆ. ಹಾಗೆ ತನ್ನವರು ಮರಣಿಸಿದರು ಚಿಂತಿಸುವುದಿಲ್ಲ. ಹಾಗೆಂದು ಇವರನ್ನು ಜ್ಞಾನಿಗಳು ಎನ್ನೋಣವೆ! ಇವರಿಗೆ ಹಣ ಬಂಗಾರದ ಮೇಲೆ ಹೊರತು ಬದುಕಿದವರ, ಮರಣಿಸಿದವರ ಅವರ ಮೇಲೆ ಯಾವಮಾತ್ರವು ಚಿಂತೆ ದುಃಖ ಇರುವುದಿಲ್ಲ. ಪರ ಪುರುಷ ತನ್ನ ಹೆಂಡತಿಯನ್ನು ಬಲವಂತ ಮಾಡಿದರೂ, ಆಕೆಗೋಸ್ಕರ ಚಿಂತಿಸುವುದಿಲ್ಲ. ತನ್ನ ಸ್ವಂತ ಮಗನನ್ನು ಇತರರು ಹತ್ಯೆ ಮಾಡಿದರೂ, ತನ್ನ ಹಣ ಹೋಗುತ್ತದೆಂದು ಕೇಸು ಇಡುವುದಿಲ್ಲ. ಉಳಿದ ಗೀತೆಗಳಲ್ಲಿ ಬರೆಯಲಾದ ಈ ಶ್ಲೋಕಾರ್ಥದ ಪ್ರಕಾರವಾದರೆ ಇವರನ್ನು ಪರಮ ಜ್ಞಾನಿಗಳೆಂದು ಹೇಳಬಹುದು. ಇದು ನಿಜವಾ ಎಂದು ಯೋಚಿಸಿ ನೋಡಿದರೆ ಅವನು ಬಂಗಾರದ ಮೇಲೆ, ಹಣದ ಮೇಲೆ ಆಸೆ ಇರುವವನಾಗಲಿ ಜ್ಞಾನಿ ಯಾವಮಾತ್ರ ಅಲ್ಲವೆಂದು ತಿಳಿಯುತ್ತಿದೆ. ಆದ್ದರಿಂದ ಇಲ್ಲಿಯವರೆಗೂ ಎಲ್ಲರೂ ಬರೆದುಕೊಂಡ ಭಾವವು ಸರಿಯಲ್ಲವೆಂದು ಹೇಳಬಹುದು.)**

ಗತಿಸಿದ ಮತ್ತು ಗತಿಸದವರನ್ನು ಕುರಿತು ಜ್ಞಾನಿಗಳು ಚಿಂತಿಸುವುದಿಲ್ಲವೆಂದು ಬರೆದ ವಾಕ್ಯಗಳು ತಪ್ಪು, ಶ್ರೀಕೃಷ್ಣನು ಹಾಗೆ ಹೇಳಲಿಲ್ಲ. ಮನುಷ್ಯರನ್ನು ಕುರಿತು ಹೇಳಿದ್ದರೆ ಹೋದವರಿಗೋಸ್ಕರವಾಗಲಿ, ಇರುವವರಿಗೋಸ್ಕರವಾಗಲಿ ಚಿಂತಿಸದೆ ಕೇವಲ ಹಣಕ್ಕೋಸ್ಕರ ಚಿಂತಿಸುವ ಲೋಭಿಯನ್ನು ಸಹ ಜ್ಞಾನಿ ಎನ್ನಬೇಕಾಗಿ ಬರುತ್ತದೆ. ಆದ್ದರಿಂದ ಈ ಶ್ಲೋಕದಲ್ಲಿ ಶ್ರೀಕೃಷ್ಣನು ದೀರ್ಘವಾಗಿ ಹೇಳಿರುವ ಜ್ಞಾನವನ್ನು ಗ್ರಹಿಸಿದರೆ ಚರ ಅಚರ

ಪ್ರಕೃತಿಯನ್ನು ಕುರಿತು ಜ್ಞಾನಿಗಳಾದವರು ಚಿಂತಿಸುವುದಿಲ್ಲವೆಂದು, ಪ್ರಕೃತಿಗೆ ಅತೀತವಾದ ದೇವರನ್ನು ಕುರಿತು ಚಿಂತಿಸುವವನು ನಿಜವಾದ ಜ್ಞಾನಿಯೆಂದು ತಿಳಿಯುತ್ತಿದೆ. ಇಲ್ಲಿಯವರೆಗೂ ಈ ಅಧ್ಯಾಯದ ಮೊದಲನೆಯ ಶ್ಲೋಕದ ಅರ್ಥವನ್ನು ಎಲ್ಲರಿಗಿಂತಲೂ ಭಿನ್ನವಾಗಿ ಬರೆದಿದ್ದೀರ ಎಂದು ಕೆಲವರು ಅಂದುಕೊಳ್ಳಬಹುದು. ಎಷ್ಟೋ ಜನ ಸ್ವಾಮಿಗಳು, ಪೀಠಾಧಿಪತಿಗಳು, ಯೋಗಿಗಳು ಹೇಳಿದ ಭಾವವನ್ನು ಸರಿಯಿಲ್ಲ ಎನ್ನಬಹುದಾ? ಎಂದು ಕೆಲವರು ಕೇಳಬಹುದು. ಎಲ್ಲರಿಗೂ ಒಂದೇ ಉತ್ತರ ಹೇಳುವುದೇನೆಂದರೆ! ನಿಜವು ಕೆಂಡದಂತಹದ್ದು. ಎಂದಿಗಾದರೂ ಹೊರಬೀಳುತ್ತದೆ. ಮುಚ್ಚಿಟ್ಟಿರುವ ಸತ್ಯವನ್ನು ಬಹಿರಂಗ ಮಾಡುವುದೇ ನನ್ನ ಕೆಲಸವಾದಾಗ ಒಂದು ಭಗವದ್ಗೀತೆಯೇ ಅಲ್ಲ, ಯಾವ ಮತದಲ್ಲಿನ ಜ್ಞಾನವನ್ನಾದರೂ ಬಿಚ್ಚಿ ಹೇಳುವುದು ನನ್ನ ಕರ್ತವ್ಯ. ಈ ನನ್ನ ಕಾರ್ಯದಲ್ಲಿ ಭಗವದ್ಗೀತೆಯಲ್ಲಿ ನಂತರ ಬರುವ ಶ್ಲೋಕಗಳಿಗೂ ಸಹ ಭಾವ ಬದಲಾವಣೆ ತಪ್ಪದೆ ಇರುತ್ತದೆ. ಇದು ತ್ರೈತವೆಂಬ ಸಿದ್ಧಾಂತದ ಆಧಾರದಿಂದ ಬರೆಯುವುದು, ಆದ ಕಾರಣ ಶಾಸ್ತ್ರಬದ್ಧವಾದುದ್ದಾಗಿ ಲೆಕ್ಕಿಸಿ ನೋಡಬೇಕು. ಈ ಶ್ಲೋಕವಾಗಲಿ, ಬರುವ ಶ್ಲೋಕವಾಗಲಿ ಹೇತುವಾದಿಗಳಿಗೆ ಪ್ರಶ್ನೆಗಳು ಉಳಿಸುವುದಿಲ್ಲವೆಂದು ಎಲ್ಲದಕ್ಕೂ ಎಲ್ಲರಿಗೂ ಸಮಾಧಾನ ವಾಗಿರುತ್ತವೆ ಎಂದು ತಿಳಿಸುತ್ತಿದ್ದೇವೆ.

ಪ್ರತಿ ಶ್ಲೋಕವು ನಾಲ್ಕು ಸೂತ್ರಗಳ ಪ್ರಕಾರ ನೋಡಬೇಕೆಂದು ಮೊದಲೆ ಹೇಳಿದ್ದೇವೆ. ಅವುಗಳನ್ನು ಮತ್ತೊಂದು ಬಾರಿ ಜ್ಞಾಪಕ ಮಾಡುತ್ತಿದ್ದೇವೆ. 1) ಓದುತ್ತಿರುವ ಶ್ಲೋಕವು ಜೀವಾತ್ಮಕ್ಕಾ, ಆತ್ಮಕ್ಕಾ, ಪರಮಾತ್ಮಕ್ಕಾ, ಪ್ರಕೃತಿಗಾ, ಯಾರನ್ನು ಕುರಿತು ಹೇಳಲಾಗಿದೆ. 2) ಓದುತ್ತಿರುವ ಶ್ಲೋಕವು ಬ್ರಹ್ಮಯೋಗಕ್ಕಾ ಅಥವಾ ಕರ್ಮಯೋಗಕ್ಕಾ ಏನನ್ನು ಕುರಿತು ಹೇಳಲಾಗಿದೆ. 3) ಓದುತ್ತಿರುವ ಶ್ಲೋಕವು ಸಾಕಾರಕ್ಕಾ ನಿರಾಕಾರಕ್ಕಾ, ಯಾವುದನ್ನು ಕುರಿತು ಹೇಳಲಾಗಿದೆ. 4) ಓದುತ್ತಿರುವ ಶ್ಲೋಕವು ಶಾಸ್ತ್ರಬದ್ಧವಾದದ್ದಾ ಅಲ್ಲವಾ! ಎನ್ನುವವು ಸೂತ್ರಗಳಾದರೆ ನಾಲ್ಕನೇ ಸೂತ್ರದ ಪ್ರಕಾರ ಶಾಸ್ತ್ರಬದ್ಧವಾದ ಶ್ಲೋಕಗಳನ್ನೇ ನಾವು ಬರೆಯುತ್ತಾ ಶಾಸ್ತ್ರಬದ್ಧ ಇಲ್ಲದವುಗಳನ್ನು ಬಿಟ್ಟಿದ್ದೇವೆ. ಆದ ಕಾರಣ ನೀವು ಮುಖ್ಯವಾಗಿ ನೋಡಬೇಕಾಗಿರುವುದು ಮೂರು ಸೂತ್ರಗಳು ಮಾತ್ರವೇ. ಅವೂ ಸಹ ನಿಮಗೆ ಅರ್ಥವಾಗುವಂತೆ ಯಾವ ಶ್ಲೋಕ ಯಾವುದಕ್ಕೆ ಸಂಬಂಧಿಸಿದೆಯೋ ಶ್ಲೋಕದ ಪಕ್ಕದಲ್ಲಿ ಬ್ರಾಕೆಟ್‌ನಲ್ಲಿ ತಿಳಿಸುತ್ತಿದ್ದೇವೆ. ಆದ್ದರಿಂದ ಶ್ಲೋಕದ ಪಕ್ಕದಲ್ಲಿ ಬ್ರಾಕೆಟ್‌ನಲ್ಲಿರುವುದನ್ನು ಪ್ರತಿಯೊಬ್ಬರು ಗಮನಿಸಬೇಕಾಗಿ ತಿಳಿಸುತ್ತಿದ್ದೇವೆ.

**(1) ಶ್ಲೋ॥ 12 : ನ ತ್ವೇವಾಹಂ ಜಾತು ನಾಸಂ ನತ್ವಂ ನೇಮೇ ಜನಾಧಿಪಾಃ ।**
**ನಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಮ್ ॥**

**(ಜೀವಾತ್ಮ)**

**ಭಾವಾರ್ಥ :** ನಾನು ಇಲ್ಲ ಎನ್ನುವುದು ಎಂದಿಗೂ ಇಲ್ಲ. ನೀನು ಎಂದಿಗೂ ಇರುತ್ತೀಯಾ. ಈ ಧರಣಿ ಪಾಲಿಸುವ ರಾಜರೂ ಸಹ ಎಂದಿಗೂ ಇರುತ್ತಾರೆ. ಇನ್ನು ಮುಂದೆಯೂ ಸಹ ನಾವೆಲ್ಲರೂ ಇರುವುದಿಲ್ಲವೆಂಬುದೇ ಇಲ್ಲ.

**ವಿವರ :** ಸಮಸ್ತ ಜೀವರಾಶಿಗಳು ಇಲ್ಲದಂತೆ ಹೋಗುತ್ತವೆಂದು ನೀನು ದುಃಖ ಪಡುತ್ತೀಯೇನೋ! ಯಾರೂ ಇಲ್ಲದಂತೆ ಎಂದಿಗೂ ಹೋಗುವುದಿಲ್ಲ. ಜೀವರಾಶಿ ಗಳಾದವರು ಯಾರಾಗಲಿ, ನಾನಾಗಲಿ, ನೀನಾಗಲಿ, ಈ ಭೂಮಿಗೆ ರಾಜರಾದವರಾಗಲಿ, ಜೀವವಿರುವ ಪ್ರತಿಯೊಬ್ಬರು ಇಲ್ಲದಂತೆ ಹೋಗುತ್ತಾರೆ ಎಂಬುವುದು ಅಸತ್ಯ. ಎಲ್ಲರೂ ಎಂದಿಗೂ ಇರುತ್ತೇವೆಂದು ಶ್ರೀಕೃಷ್ಣನು ಹೇಳಿದಾಗ ನಮಗೊಂದು ಪ್ರಶ್ನೆ ಉದ್ಭವಿಸುತ್ತದೆ. ನಾವೆಲ್ಲರೂ ಸ್ವಲ್ಪಕಾಲ ಇದ್ದು ಮರಣಿಸುತ್ತಿದ್ದೇವೆ ಅಲ್ಲವೆ! ಹಾಗಿರುವಾಗ ಶಾಶ್ವತವಾಗಿ ಇರುತ್ತೇವೆಂದು, ಇಲ್ಲದಂತೆ ಹೋಗುತ್ತೇವೆನ್ನುವುದು ಅಸತ್ಯವೆಂದು ಹೇಗೆ ಎನ್ನುವುದು? ಅದಕ್ಕೆ ಸಮಾಧಾನವಾಗಿ ಕೆಳಗಿನ ಶ್ಲೋಕದಲ್ಲಿ ಹೀಗೆ ಇದೆ.

**(1) ಶ್ಲೋ॥ 13 : ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ ।**
**ತಥಾ ದೇಹಾನ್ತರ ಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥**

**(ಜೀವಾತ್ಮ)**

**ಭಾವಾರ್ಥ :** ದೇಹಿಗೆ ದೇಹದಲ್ಲಿ ಬಾಲ್ಯ, ಯೌವನ, ಕೌಮಾರ್ಯ, ವೃದ್ಧಾಪ್ಯವು ಕ್ರಮವಾಗಿ ಹೇಗೆ ಸಂಭವಿಸುತ್ತವೋ, ಹಾಗೆ ಶರೀರವನ್ನು ಬಿಟ್ಟು ಹೋಗುವುದೆಂಬ ಮರಣವೂ ಸಹ ಸಂಭವಿಸುತ್ತಿದೆ.

**ವಿವರ :** ದೇಹದಲ್ಲಿ ನಿವಾಸಿಸುವುದನ್ನು ದೇಹಿ ಎನ್ನುತ್ತಿದ್ದೇವೆ. ದೇಹದಲ್ಲಿ ಮೂರು ಆತ್ಮಗಳು ವಾಸಿಸುತ್ತಿವೆ. ಒಂದು ಜೀವಾತ್ಮ, ಎರಡನೆಯದು ಆತ್ಮ, ಮೂರನೆಯದು ಪರಮಾತ್ಮ ಈ ಮೂರನ್ನು ಸಂದರ್ಭಾನುಸಾರವಾಗಿ ಅರ್ಥ ಮಾಡಿಕೊಳ್ಳಬೇಕು ಆದರೆ ಜೀವಾತ್ಮಕ್ಕೆ ಹೇಳಿದ ಕಡೆ ಆತ್ಮಕ್ಕೆ, ಆತ್ಮಕ್ಕೆ ಹೇಳಿದ ಕಡೆ ಪರಮಾತ್ಮಕ್ಕೆ, ಪರಮಾತ್ಮಕ್ಕೆ ಹೇಳಿದ ಕಡೆ ಜೀವಾತ್ಮಕ್ಕೆ ಅರ್ಥ ಮಾಡಿಕೊಳ್ಳಬಾರದು. ಬಹಳ ಗೀತೆಗಳಲ್ಲಿ ಈ ಶ್ಲೋಕವು ಜೀವಾತ್ಮಕ್ಕೆ ಹೇಳಿರುವುದೆಂದುಕೊಳ್ಳದೆ ದೇಹಿ ಎನ್ನುತ್ತಲೇ ಆತ್ಮ ಎನ್ನುವ ಪದವನ್ನು

ಉಪಯೋಗಿಸಿ ಹೇಳಿದ್ದಾರೆ. ದೇಹಿ ಎನ್ನುತ್ತಲೇ ಒಂದನೆಯದಾ ಅಥವಾ ಎರಡನೆಯದಾ, ಮೂರನೆಯದಾ ಎಂದು ಪರಿಶೀಲಿಸಿ ನೋಡುತ್ತಿಲ್ಲ. ಇಂತಹ ತಪ್ಪು ಅರ್ಥಗಳು ನಡೆಯುತ್ತವೆಂಬ ಉದ್ದೇಶದಿಂದಲೇ ನಾವು ಪ್ರತಿ ಶ್ಲೋಕದ ಪಕ್ಕದಲ್ಲಿ ಬ್ರಾಕೆಟ್‌ನಲ್ಲಿ ಆ ಶ್ಲೋಕದಲ್ಲಿ ಯಾವುದನ್ನು ಕುರಿತು ಇದೆಯೋ ಅದನ್ನು ಗುರುತಿಸುತ್ತಿದ್ದೇವೆ. ಅರ್ಜುನನು ಮಾನವರಾದ ಜೀವಾತ್ಮ ಎನ್ನುವವರ ಬಗ್ಗೆ ಕೇಳಿದ್ದಾನೆ, ದೈವ ಸ್ವರೂಪವಾದ ಆತ್ಮದ ಬಗ್ಗೆ ಆತನು ಕೇಳಲಿಲ್ಲ. ಆದ ಕಾರಣ ಈ ಶ್ಲೋಕದಲ್ಲಿ ಜೀವಾತ್ಮವನ್ನು ಕುರಿತು ಹೇಳಿರುವುದು ನಡೆದಿದೆ.

ಜೀವಾತ್ಮ ಒಂದು ಶರೀರವನ್ನು ಧರಿಸುವಾಗ ಆ ಶರೀರವನ್ನು ಅನುಸರಿಸಿ ಸ್ವಲ್ಪ ಕಾಲ ಬಾಲ್ಯ ಎನ್ನುತ್ತೇವೆ. ಸ್ವಲ್ಪ ಕಾಲ ಕಳೆದಾಗ ವಯಸ್ಸು ಬಂದ ನಂತರ ಶರೀರದಲ್ಲಿರುವ ಜೀವಿಗೆ ಅಲ್ಲದೆ ಶರೀರಕ್ಕೆ ಯೌವನ ಬರುತ್ತದೆ. ಹಾಗೆ ಸ್ವಲ್ಪ ಕಾಲ ಕಳೆದರೆ ಕೌಮಾರ ಬರುತ್ತದೆ, ಇನ್ನೂ ಸ್ವಲ್ಪ ಕಾಲ ಕಳೆದರೆ ವೃದ್ಧಾಪ್ಯವು ಶರೀರಕ್ಕೆ ಏರ್ಪಡುತ್ತದೆ. ಆದರೆ ಶರೀರಕ್ಕೆ ಇಷ್ಟು ನಡೆಯುತ್ತಿದ್ದರೂ ಒಳಗಿರುವ ಜೀವಿಗೆ ಮಾತ್ರ ವಯಸ್ಸು ಹೆಚ್ಚಾಗುವುದು ಕಡಿಮೆಯಾಗುದು ಇಲ್ಲ. ವಯಸ್ಸು ಬೆಳೆಯುವುದು ಒಂದು ಶರೀರಕ್ಕೆ ಅಲ್ಲದೆ ಶರೀರದಲ್ಲಿಯೇ ಬಾಲ್ಯ, ಯೌವನ, ಕೌಮಾರ, ವೃದ್ಧಾಪ್ಯ ಮೊದಲಾದ ದಶೆಗಳು ಏರ್ಪಡುತ್ತಿವೆ.

ನಮಗೊಂದು ಕಾರು ಅಥವಾ ಜೀಪು ಇದೆ ಎಂದುಕೊಳ್ಳೋಣ. ಅದು ಚೆನ್ನಾಗಿರುವವರೆಗೂ ಅದನ್ನು ಹತ್ತಿ ಪ್ರಯಾಣಿಸುತ್ತೇವೆ. ಸ್ವಲ್ಪ ಕಾಲಕ್ಕೆ ಅದರಲ್ಲಿನ ಟೈರ್‌ಗಳು ಸವೆದುಹೋಗುತ್ತವೆ. ಹಾಗೆ ಟೈರ್‌ಗಳು ಕಾರಿಗೆ ಸವೆಯುತ್ತಿವೆಯಾಗಲಿ ಅದರಲ್ಲಿ ಕುಳಿತುಕೊಂಡ ವ್ಯಕ್ತಿಯ ಕಾಲುಗಳು ಸವೆಯಲಿಲ್ಲ ಅಲ್ಲವೆ! ಟೈರ್‌ಗಳು ಪೂರ್ತಿಯಾಗಿ ಸವೆದುಹೋಗಿ ಅವು ಹೋಗಲಾರದ ಸ್ಥಿತಿಗೆ ಬಂದು ಕಾರು ನಿಂತುಹೋದಾಗ, ಅದರಲ್ಲಿ ಪ್ರಯಾಣಿಸುತ್ತಿರುವ ವ್ಯಕ್ತಿಗೆ ಏನು ಆಗಲಿಲ್ಲ ಅಲ್ಲವೆ! ಕಾರಿಗೆ ಸವೆದ ಟೈರ್‌ಗಳು ಕೆಲಸಕ್ಕೆ ಬರುವುದಿಲ್ಲವೆಂದು ಅವುಗಳನ್ನು ತೆಗೆದುಹಾಕಿ ಬೇರೆ ಹೊಸ ಟೈರ್‌ಗಳನ್ನು ಬದಲಾಯಿಸಿಕೊಳ್ಳುತ್ತೇವೆ. ಟೈರ್‌ಗಳು ಸವೆದ ಹಾಗೆ ಅದರಲ್ಲಿ ಕುಳಿತುಕೊಂಡವನು ಹೇಗೆ ಸವೆದು ಹೋಗಲಿಲ್ಲವೋ, ಹಾಗೆ ಶರೀರವನ್ನು ಧರಿಸಿ ಅದನ್ನು ಬಳಸಿಕೊಳ್ಳುತ್ತಿರುವ ಜೀವಿಗೆ ಶರೀರಕ್ಕೆ ಬಂದಂತೆ ವೃದ್ಧಾಪ್ಯ ಬರುವುದಿಲ್ಲ. ಸವೆದುಹೋದ ಟೈರ್‌ಗಳನ್ನು ಬದಲಿಸಿ ಹೊಸ ಟೈರ್‌ಗಳನ್ನು ಹಾಕಿಕೊಂಡು ಕಾರನ್ನು ನಡೆಸಿದಂತೆ, ಹಳೆಯದಾದ ಶರೀರವನ್ನು ಬಿಟ್ಟು ಹೊಸ ಶರೀರವನ್ನು ಹೊಂದಿ ಜೀವಾತ್ಮ ಕಾಲ ಕಳೆಯುತ್ತಿದ್ದಾನೆ.

ಎಷ್ಟು ಕಾಲ ಕಳೆದರೂ, ಎಷ್ಟು ವರ್ಷಗಳು ನಡೆದರೂ ಜೀವಾತ್ಮ ಎಂದಿನಂತೆ ಇರುತ್ತದೆ. ಅವನಲ್ಲಿ ಯಾವ ಬದಲಾವಣೆಯೂ ಬರುವುದಿಲ್ಲ. ಒಂದು ಶರೀರ ಧರಿಸಿದಾಗ ಬಡವನಾಗಿ, ಮತ್ತೊಂದು ಶರೀರ ಧರಿಸಿದಾಗ ರಾಜನಾಗಿ ಇರಬಹುದು, ಆದರೆ ಅವನು ಮಾತ್ರ ಇಲ್ಲದಂತಾಗುವುದು ಅಸತ್ಯ. ಆದ ಕಾರಣ ಭಗವಂತನು ನೀನಾಗಲಿ ಈ ರಾಜರಾಗಲಿ ಇಲ್ಲದಂತೆ ಹೋಗುತ್ತಾರೆಂಬುವುದು ಇಲ್ಲವೆಂದಿದ್ದಾನೆ. ಇಲ್ಲಿ ಒಂದು ಸಂದೇಹವು ಕೆಲವರಿಗೆ ಬಂದು, ಇದು ಸಾಮಾನ್ಯ ಜೀವಾತ್ಮಗಳಿಗೆ ಅನ್ವಯಿಸುವ ಸೂತ್ರ, ಭಗವಂತನಾದ ಶ್ರೀಕೃಷ್ಣನು ನಾನೂ ಸಹ ಎಂದು ಹೇಳುತ್ತಾ ನಾವೆಲ್ಲರೂ ಇಲ್ಲದಂತೆ ಹೋಗುವುದಿಲ್ಲ ಎಂದಾಗ ದೇವರಿಗೂ ಸಹ ಈ ಸೂತ್ರವು ಅನ್ವಯಿಸುವುದೇ ಎಂದು ಕೇಳಬಹುದು. ಅದಕ್ಕೆ ಸಮಾಧಾನ ದೇವರಾದವನೂ ಸಹ ಸಾಮಾನ್ಯ ಮಾನವನಂತೆ ಶರೀರ ಧರಿಸಿದ್ದಾನೆ. ಆದ ಕಾರಣ ಸರ್ವ ಶರೀರಗಳಿಗೆ ಅನ್ವಯಿಸುವ ಸೂತ್ರದ ಪ್ರಕಾರ ತನ್ನನ್ನೂ ಸಹ ಸೇರಿಸಿಕೊಂಡು ಹೇಳಿದ್ದಾನೆ. ಅದು ಅಲ್ಲದೆ ತಾನು ದೇವರಾದ್ದರಿಂದ ಎಂದಿಗೂ ಇರುವವನೇ ಆದ್ದರಿಂದ ತಾನೂ ಸಹ ಯಾವಾಗಲೂ ಇರುವವನಾಗಿ ಹೇಳಿದ್ದಾನೆ.

ಇಲ್ಲಿ ಮತ್ತೊಂದು ಪ್ರಶ್ನೆ ಬರುತ್ತದೆ. ಜೀವಿಯು ಜ್ಞಾನ ತಿಳಿದುಕೊಂಡು ಮೋಕ್ಷಹೊಂದಿ ಜೀವಿಯಾಗಿ ನಾಶಹೊಂದಿ ಪರಮಾತ್ಮನಾಗಿ ಬದಲಾದಾಗ ಜೀವಾತ್ಮಕ್ಕೆ ನಾಶವಿದೆ ಅಲ್ಲವೆ! ಆ ಉದ್ದೇಶದಿಂದಲೇ ಜೀವಾತ್ಮನನ್ನು ಕ್ಷರನು ಎಂದಿದ್ದಾರೆ (ನಾಶವಾಗುವ ವನು ಎಂದಿದ್ದಾರೆ) ಹಾಗೆ ಪರಮಾತ್ಮನಲ್ಲಿ ಸೇರಿ ಹೋದಾಗ ಜೀವಾತ್ಮ ನಾಶವಾದವನೆ ಅಲ್ಲವೆ! ಆಗ ಅವನು ಇಲ್ಲದಂತೆ ಹೋಗುತ್ತಿದ್ದಾನೆ ಅಲ್ಲವೆ! ಅಂತಹದರಲ್ಲಿ ಎಂದಿಗೂ ಇಲ್ಲದಂತೆ ಹೋಗುತ್ತಾನೆಂಬುವುದು ಇಲ್ಲ ಎನ್ನುವುದರಲ್ಲಿ ದೊಡ್ಡತನ ಏನೆಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ಇಲ್ಲಿ ಶ್ಲೋಕದಲ್ಲಿ ಹೇಳಿರುವುದು ಜೀವಿಗಳಿಗೆ ಆದರೂ, ಅದು ಕೇವಲ ಅಜ್ಞಾನದಲ್ಲಿ ಇರುವವರಿಗೆ ಮಾತ್ರ ಹೇಳುತ್ತಿರುವ ವಿಷಯ. ಸರ್ವಸಾಧಾರಣ ಜೀವಾತ್ಮಗಳನ್ನು ಕುರಿತಾದ ವಿಷಯ ಹೊರತು ಇತರೆ ಅಲ್ಲವೆಂದು ತಿಳಿಯಬೇಕು. ಏಕೆಂದರೆ ಶರೀರಗಳು ನಾಶವಾದಾಗ ಎಂದರೆ ಮರಣಿಸಲ್ಪಟ್ಟಾಗ ಅಥವಾ ಮರಣಹೊಂದಿದಾಗ ಅದರಲ್ಲಿರುವ ಜೀವಾತ್ಮವೂ ಸಹ ನಾಶ ಆಗುತ್ತಾನೇನೋ ಎಂಬ ಅರ್ಜುನನ ಅನುಮಾನಕ್ಕೆ ತಕ್ಕಂತೆ ಶರೀರ ಬದಲಾವಣೆಯಲ್ಲಿ ಜೀವಾತ್ಮ ನಾಶವಾಗುವುದಿಲ್ಲ ಎಂದು ಹೇಳಲಾಗಿದೆ. ಇದು ಒಂದು ಶರೀರ ಬದಲಾವಣೆಯಲ್ಲಿ ಶರೀರ ನಶಿಸಿದಾಗ ಜೀವಿಯ ಸ್ಥಿತಿಯನ್ನು ಕುರಿತು ಹೇಳಿರುವುದು. ಮುಂದಿನ ಶ್ಲೋಕಗಳಲ್ಲಿ ಕರ್ಮ ನಾಶವಾದಾಗ ಜೀವಾತ್ಮ ಪೂರ್ತಿ ನಶಿಸಿ ಹೋಗುತ್ತದೆ ಆದ್ದರಿಂದ ಜೀವಾತ್ಮ ಕ್ಷರನು ಎನ್ನಲ್ಪಡುತ್ತಿದ್ದಾನೆ.

ಈ ಶ್ಲೋಕದಲ್ಲಿ ಮುಖ್ಯವಾಗಿ ಮೂರು ಆತ್ಮಗಳಲ್ಲಿ ಕೇವಲ ಒಂದು ಜೀವಾತ್ಮವನ್ನು ಕುರಿತು ಹೇಳಲಾಗಿದೆ ಎಂದು ಮತ್ತು ಶರೀರಪತನ ನಡೆದಾಗ ಶರೀರವು ಮಾತ್ರ ಹೋಗಿ ಜೀವಾತ್ಮ ಹೋಗದಂತೆ ಎಲ್ಲಿಯೋ ಒಂದು ಕಡೆ ಇರುತ್ತಾನೆಂದೂ ತಿಳಿಯಪಡಿಸಲಾಗಿದೆ. ಇದು ಶರೀರಪತನದ ಬಗ್ಗೆ ಜೀವಿಯ ಬದಲಾವಣೆಯನ್ನು ಕುರಿತು ಹೇಳಿರುವುದಾಗಲಿ ಕರ್ಮಪತನದ ಬಗ್ಗೆ ಹೇಳಿರುವುದು ಅಲ್ಲವೆಂದು ತಿಳಿಯಬೇಕು. ಅದೂ ಅಲ್ಲದೆ ಬಹಳ ಭಗವದ್ಗೀತೆಗಳಲ್ಲಿ ಎಷ್ಟೋ ಜನ ಬರೆದಂತೆ ಈ ಶ್ಲೋಕ ಆತ್ಮಕ್ಕೆ ಅಲ್ಲ ಕೇವಲ ಜೀವಾತ್ಮಕ್ಕೆ ಎಂದು ತಿಳಿಯಬೇಕು.

ಸರಿ, ಈ ವಿಷಯ ತಿಳಿದ ನಂತರ ಅರ್ಜುನನು ಅಥವಾ ನಾವಾಗಲಿ ನಮ್ಮ ಎದುಗಿರುವವನು ಅಥವಾ ನಮ್ಮ ಮನೆಯಲ್ಲಿರುವವನಿಗೆ ಶರೀರ ದಶೆಗಳೆಲ್ಲಾ ಕಳೆದುಹೋದಾಗ ಇವನು ಶರೀರವನ್ನು ಮಾತ್ರ ಬಿಟ್ಟುಹೋಗಿದ್ದಾನೆ, ಇವನು ನಾಶಹೊಂದಲಿಲ್ಲ, ಇವನು ಇದ್ದಾನೆ, ಅವನಿಗೋಸ್ಕರ ಏಕೆ ಅಳಬೇಕು ಎಂದು ತಿಳಿದರೂ ನಮಗೆ ಪರಿಚಯವಿರುವ ಈ ಶರೀರ ಬಿಟ್ಟುಹೋಗಿದ್ದಾನಲ್ಲವೆ ಎಂದಾಗಲಿ ಅಥವಾ ಅವನು ನಮ್ಮ ಹತ್ತಿರ ಇಲ್ಲದಂತೆ ಈ ಶರೀರವು ಬಿಟ್ಟು ಎಲ್ಲಿಗೋ ಹೋಗಿದ್ದಾನೆ ಅಲ್ಲವೆ! ಇನ್ನು ಅವನಿದ್ದರೂ ಅವನು ಎಲ್ಲಿರುವುದು ನಮಗೆ ತಿಳಿದಿಲ್ಲ ಅಲ್ಲವೆ! ಎಂದು ಅಷ್ಟೋ ಇಷ್ಟೋ ದುಃಖಪಡುತ್ತೇವೆ. ಅವನು ಸತ್ತುಹೋಗಿದ್ದಾನೆ ಎಂದಲ್ಲ, ಅವನು ದೂರವಾಗಿದ್ದಾ ನೆಂದು ಅಳುತ್ತಿದ್ದೇವೆ ಎಂದು ತಿಳಿದವರು ಎನ್ನುವುದೂ ಸಹ ಕೇಳಬಹುದು. ಆದ್ದರಿಂದ ಭಗವಂತನು ಮತ್ತೆ ಇನ್ನೊಂದು ಶ್ಲೋಕದಲ್ಲಿ ಹೀಗೆನ್ನುತ್ತಿದ್ದಾನೆ.

**(1) ಶ್ಲೋ॥ 14 : ಮಾತ್ರಾಸ್ಪರ್ಶಾಸ್ತು ಕೌಂತೇಯ! ಶೀತೋಷ್ಣಸುಖದುಃಖದಾಃ ।**
**ಆಗಮಾಪಾಯಿನೋ ನಿತ್ಯಾಸ್ತಾಂ ಸ್ತಿತಿಕ್ಷಸ್ವ ಭಾರತ ! ॥**

**(ಜೀವಾತ್ಮ)**

**ಭಾವಾರ್ಥ :** ಪಂಚತನ್ಮಾತ್ರಗಳಿಂದ, ಶೀತೋಷ್ಣಗಳು ಸುಖದುಃಖಗಳು ಮಾನವರಿಗೆ ಉಂಟಾಗುತ್ತಿರುತ್ತವೆ. ಶೀತೋಷ್ಣಗಳು ಸುಖದುಃಖಗಳು ಯಾವಾಗಲೂ ಇರುವವಲ್ಲ ಅಶಾಶ್ವತವಾದವು. ಬಂದು ಹೋಗುವವುಗಳನ್ನು ಆ ಸ್ವಲ್ಪ ಕಾಲ ಸಹಿಸಿಕೊಳ್ಳಬೇಕು.

**ವಿವರ :** ಪಂಚ ತನ್ಮಾತ್ರಗಳೆನ್ನುವವು ನಮ್ಮ ಶರೀರದಲ್ಲಿ ಜ್ಞಾನೇಂದ್ರಿಯಗಳಿಗಿರುವ ಶಕ್ತಿಗಳು. ಜ್ಞಾನೇಂದ್ರಿಯಗಳು ಐದು ಆದ್ದರಿಂದ ಆ ಐದಕ್ಕಿರುವ ಶಕ್ತಿಗಳನ್ನು ಐದು ತನ್ಮಾತ್ರಗಳೆಂದು ಕರೆಯುತ್ತಾರೆ. ಉದಾಹರಣೆಗೆ ಜ್ಞಾನೇಂದ್ರಿಯಗಳಲ್ಲಿ ಕಣ್ಣು ಇದೆ ಅಲ್ಲವೆ! ಆ ಕಣ್ಣು

ಎಲ್ಲರಿಗೂ ಇದ್ದರೂ ಅದಕ್ಕಿರುವ ದೃಷ್ಟಿಯಲ್ಲಿ ಮನುಷ್ಯ ಮನುಷ್ಯನಿಗೂ ವ್ಯತ್ಯಾಸ ಇರುತ್ತದೆ. ಪ್ರತಿ ಮನುಷ್ಯನಿಗಿರುವ ಕಣ್ಣು ಕಾಣಿಸುತ್ತದೆ. ಆದರೆ ಆ ಕಣ್ಣಿಗೆಷ್ಟು ದೃಷ್ಟಿ ಇದೆಯೋ ಕಾಣಿಸುವುದಿಲ್ಲ. ಇಂದ್ರಿಯವಾದ ಕಣ್ಣು ಕಾಣಿಸಿದರೂ, ಅದರ ಶಕ್ತಿಯಾದ ತನ್ಮಾತ್ರವೆಂಬ ದೃಷ್ಟಿ ಕಾಣಿಸುವುದಿಲ್ಲವೆಂದು ತಿಳಿಯಬೇಕು. ಎಂದರೆ ಕಣ್ಣು ಬೇರೆ, ದೃಷ್ಟಿ ಬೇರೆ ಎಂದು, ಕಣ್ಣು ಕಾಣಿಸಿದರೂ ದೃಷ್ಟಿ ಕಾಣಿಸುವುದಿಲ್ಲವೆಂದು ತಿಳಿಯುತ್ತಿದೆ. ಹಾಗೆ ಇತರರ ಕಿವಿ ಕೇಳಿಸಿದರೂ, ಅವರ ಕಿವಿಗೆ ಎಷ್ಟು ಶ್ರವಣಶಕ್ತಿ (ಕೇಳುವುದು) ಇದೆಯೋ ಅವನು ಕಿವುಡನೋ ಅಲ್ಲವೋ ನೋಡಿದ ಕೂಡಲೇ ಹೇಳಲಾರೆವು. ಈ ವಿಧವಾಗಿ ಕಾಣಿಸುವ 1) ಕಣ್ಣು 2) ಮೂಗು 3)ಕಿವಿ 4) ನಾಲಿಗೆ 5) ಚರ್ಮ ಎನ್ನುವವುಗಳಿಗೆ 1) ದೃಷ್ಟಿ 2) ವಾಸನೆ 3) ಶಬ್ದ 4) ರುಚಿ 5) ಸ್ಪರ್ಶ ಎನ್ನುವ ಕಾಣಿಸದ ತನ್ಮಾತ್ರಗಳು ಇವೆ.

ಈ ತನ್ಮಾತ್ರಗಳಿಂದಲೇ ಶರೀರದಲ್ಲಿರುವ ಜೀವಾತ್ಮಗಳಿಗೆ ಹೊರಗಿನ ಪ್ರಪಂಚದ ವಿಷಯಗಳು ತಿಳಿಯುತ್ತಿವೆ. ಆ ವಿಷಯಗಳು ತಿಳಿಯುವುದರಿಂದಲೇ ಅವನಿಗೆ ಸುಖ ದುಃಖ ಉಂಟಾಗುತ್ತಿವೆ. ದೇಹವು ಧರಿಸಿದ ಪ್ರತಿ ಜೀವಿಗೂ ಎಂದರೆ ಅವನು ಯಾವ ಮತದವನಾದರೂ, ಯಾವ ಜಾತಿಯವನಾದರೂ, ಯಾವ ಜೀವರಾಶಿಯಾದರೂ ಪಂಚ ತನ್ಮಾತ್ರಗಳ ಮೂಲಕವೇ ಶೀತ, ಉಷ್ಣ, ಸುಖ, ದುಃಖವು ಉಂಟಾಗಬೇಕು. ಈ ಸಿದ್ಧಾಂತದ ಪ್ರಕಾರ ನಾವೂ ಸಹ ತನ್ಮಾತ್ರಯಗಳ ಮೂಲಕ ಸುಖ ದುಃಖಗಳನ್ನು ಅನುಭವಿಸುತ್ತಿದ್ದೇವೆ.

ಒಬ್ಬ ಮನುಷ್ಯನಿಗೆ ಹತ್ತಿರವಾದ ಹೆಂಡತಿ ಅವನೊಂದಿಗೆ ಮಾತನಾಡುವುದರಿಂದ ಶಬ್ದವೆಂಬ ತನ್ಮಾತ್ರದಿಂದ ಸಂಬಂಧಹೊಂದುತ್ತಿದ್ದಾನೆ. ಆಕೆಯನ್ನು ನೋಡುತ್ತಿರುವುದರಿಂದ ಆತನ ದೃಷ್ಟಿ ಎನ್ನುವ ತನ್ಮಾತ್ರದಿಂದ ಸಂಬಂಧಹೊಂದಿದ್ದಾನೆ. ಆಕೆ ಮರಣಿಸಿದಾಗ ತನ್ಮಾತ್ರದ ಸಂಬಂಧ ಹೊಂದಿರುವವನಾದ್ದರಿಂದ ಅವನಿಗೆ ಅಷ್ಟೋ ಇಷ್ಟೋ ಜ್ಞಾನವಿದ್ದರು, ಅವಳ ಶರೀರವು ಮರಣಿಸಿದೆಯಾಗಲಿ ಆಕೆ ಸತ್ತುಹೋಗಿಲ್ಲವೆಂದು ತಿಳಿದರೂ, ತನ್ಮಾತ್ರಗಳ ಪ್ರಾಬಲ್ಯದಿಂದ ಅವನಿಗೆ ದುಃಖ ಏರ್ಪಡುತ್ತದೆ. ಆ ದುಃಖವು ಸ್ವಲ್ಪ ದಿನಗಳಿಗೆ ಇಲ್ಲದಂತೆ ಹೋಗುತ್ತದೆ. ಏಕೆಂದರೆ ತನ್ನ ತನ್ಮಾತ್ರಗಳು ಬೇರೆ ವಿಷಯಗಳಲ್ಲಿ ಲಗ್ನವಾಗಿ ಆ ವಿಷಯ ಸಂಬಂಧ ಸುಖ ದುಃಖಗಳನ್ನು ಉಂಟುಮಾಡುತ್ತಿರುತ್ತವೆ. ಆದ್ದರಿಂದ ಮೊದಲ ಸುಖ ದುಃಖಗಳನ್ನು ಮನುಷ್ಯ ಮರೆತು ಹೋಗುತ್ತಿದ್ದಾನೆ. ಹೀಗೆ ಸ್ವಲ್ಪಕಾಲಕ್ಕೆ ಹೆಂಡತಿಯೊಂದಿಗೆ ಇರುವ ತನ್ಮಾತ್ರ ವಿಷಯಗಳು ಮರೆತು ಹೋಗುವುದರಿಂದ ಅವಳ ಜ್ಞಾಪಕ ಬರುವುದಿಲ್ಲ, ಆ ದುಃಖವು ಬರುವುದಿಲ್ಲ. ತನ್ಮಾತ್ರಗಳು ಹೊರಗಿನ ವಿಷಯಗಳ ಸುಖದುಃಖಗಳು ಉಂಟುಮಾಡುವವು, ಆದ್ದರಿಂದ ಕಾಲಕ್ರಮವಾಗಿ ಯಾವ ಸುಖವಾಗಲಿ ಶಾಶ್ವತವಾಗಿರದೆ

ಬದಲಾಗಿ ಹೋಗುತ್ತಿರುತ್ತದೆ. ಆದ ಕಾರಣ ತನ್ನವನು ಹೋದರೂ ಅವನ ದುಃಖ ಸ್ವಲ್ಪಕಾಲವೆ, ಹಾಗೆ ತನಗೆ ಮಗನು ಹುಟ್ಟಿದರೂ ತನಗೆ ಸಂತೋಷವು ಸ್ವಲ್ಪಕಾಲವೆ, ಆದ್ದರಿಂದಲೇ ಗೀತೆಯಲ್ಲಿನ ಈ ಶ್ಲೋಕದಲ್ಲಿ **"ಶಿತೋಷ್ಣ ಸುಖದುಃಖದಾಃ ಆಗಮಾಪಾಯಿನ ಅನಿತ್ಯಾಃ"**ಎಂದಿದ್ದಾನೆ. ಎಂದರೆ ಬಂದು ಹೋಗುವುವು ಉಂಟಾಗಿವೆ, ಅನಿತ್ಯವಾದವು, ಸುಖದುಃಖಗಳೆಂದು ಅರ್ಥ. ಇಂತಹ ಅಶಾಶ್ವತವಾದ ಸುಖ ದುಃಖಗಳು, ತನ್ಮಾತ್ರಗಳು ಇರುವುದರಿಂದ ಯಾರಿಗಾದರೂ ಅವು ಉಂಟಾಗುತ್ತಿರುತ್ತವೆ. ಆದರೂ ಅವುಗಳಿಗೆ ಆ ಸಮಯದಲ್ಲಿ ಸುಖಗಳಿಗೆ ಹಿಗ್ಗದೆ, ದುಃಖಗಳಿಗೆ ಕುಗ್ಗದೆ ಸ್ವಲ್ಪ ಸಹಿಸಿಕೊಳ್ಳಬೇಕು.

ಎಂತಹ ಜ್ಞಾನಿಗಾದರೂ ಸುಖದುಃಖಗಳು ಬರುವುದು ತಪ್ಪುವುದಿಲ್ಲ. ಹಾಗೆ ಬಂದರೂ ಅವುಗಳನ್ನು ಸ್ವಲ್ಪ ಸಹಿಸಿಕೊಂಡು ಅವುಗಳ ದುಃಖವನ್ನು ಯಾರು ಹೊಂದುವುದಿಲ್ಲವೋ, ಅಂತಹವನು ಎಷ್ಟು ಸಮರ್ಥನು, ಯಾವುದಕ್ಕೆ ಸಮರ್ಥನೆಂಬ ವಿಷಯವು ಕೆಳಗಿನ ಶ್ಲೋಕದಲ್ಲಿ ಭಗವಂತನು ಹೇಳುತ್ತಿದ್ದಾನೆ.

**(1) ಶ್ಲೋ॥ 15 : ಯಂ ಹಿ ನ ವ್ಯಥಯಂ ತ್ಯೇತೇ ಪುರುಷಂ ಪುರುಷರ್ಷಭ ।**
**ಸಮ ದುಃಖಸುಖಂ ಧೀರಂ ಸೋಽ ಮೃತತ್ವಾಯ ಕಲ್ಪತೇ ॥**
**(ಜೀವಾತ್ಮ)**

**ಭಾವಾರ್ಥ :** ಯಾರು ಸುಖದುಃಖ ಭೇದಗಳು ಎಣಿಸಿಕೊಳ್ಳುವುದಿಲ್ಲವೋ, ಯಾರಿಗೆ ಅವರ ವ್ಯಥೆ ಉಂಟಾಗುವುದಿಲ್ಲವೋ ಅವರೇ ಅಮೃತತ್ವಕ್ಕೆ ಅರ್ಹನಾಗುತ್ತಾರೆ.

**ವಿವರ :** ಕಷ್ಟಸುಖಗಳು ಶಿತೋಷ್ಣಗಳು ಉಂಟಾಗುತ್ತಿದ್ದರೂ ಸ್ವಲ್ಪ ಸಹಿಸಿಕೊಳ್ಳಬೇಕೆಂದು ಹೇಳಿದ್ದಾನೆ ಅಲ್ಲವೆ! ಹಾಗೆ ಸಹಿಸಿಕೊಳ್ಳುವುದಕ್ಕೆ ಅಭ್ಯಾಸವಾಗುವುದರಿಂದ ತನ್ಮಾತ್ರಗಳ ಸಂಬಂಧವು ಇಲ್ಲದಂತೆ ಹೋಗಬಹುದು. ಹಾಗೆ ಅಭ್ಯಾಸವಾಗುತ್ತಾ ದೃಷ್ಟಿ, ಸ್ಪರ್ಶ, ವಾಸನೆ, ರುಚಿ, ಶಬ್ದಗಳಿಂದ ಸಂಬಂಧಪಡದೆ ಹೋಗುವುದರಿಂದ ಅವನಿಗೆ ಬ್ರಹ್ಮಯೋಗ ಅಭ್ಯಾಸವಾಗಿ ಮೃತವಿಲ್ಲದ, ನಾಶವಾಗದ ಪರಮಾತ್ಮನನ್ನು ಸೇರುವುದಕ್ಕೆ ಅರ್ಹನಾಗುತ್ತಾನೆ.

**(1) ಶ್ಲೋ॥ 16 : ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।**
**ಉಭಯೋ ರಪಿ ದೃಷ್ಟೋಽನ್ತ ಸ್ತ್ವನಯೋ ಸ್ತತ್ತ್ವದರ್ಶಿಭಿಃ ॥**
**(ಆತ್ಮ)**

**ಭಾವಾರ್ಥ :** ಸತ್ತು ಆಗಿರುವುದರಿಂದ ಆತ್ಮಕ್ಕೆ ನಾಶವಿಲ್ಲ. ಶರೀರವು ಅಸತ್ತು ಆಗಿರುವುದರಿಂದ ಅದಕ್ಕೆ ನಾಶ ತಪ್ಪುವುದಿಲ್ಲ. ನಿಶ್ಚಯವಾದ ಈ ಎರಡರ ನಿರ್ಣಯ ವಿಧಾನಗಳು ಆತ್ಮವನ್ನು ದರ್ಶಿಸಿದವರಿಗೆ ತಿಳಿದಿರುತ್ತದೆ.

**ವಿವರ :** ನಮ್ಮ ಶರೀರದಲ್ಲಿ ಜೀವಾತ್ಮವೇ ಅಲ್ಲದೆ ಆತ್ಮ ಎನ್ನುವುದೊಂದು ಇದೆ ಅದು ನಾಶವಿಲ್ಲದಿರುವುದು. ನಾಶವಿರುವ ಜೀವಾತ್ಮ ನಿವಾಸವಿರುವ ಶರೀರದಲ್ಲಿಯೇ ನಾಶವಿಲ್ಲದ ಆತ್ಮವೂ ಸಹ ಇದೆ. ಜೀವಾತ್ಮ ಶರೀರಗಳು ಬದಲಿಸುತ್ತಾ ನಾಶವಾಗದೆ ಇದ್ದರೂ ಮೋಕ್ಷ(ಶರೀರವೆಂಬ ಜೈಲಿನಿಂದ ಬಿಡುಗಡೆ) ಹೊಂದಿದಾಗ ನಾಶ ಆಗಬೇಕಾದ್ದೆ. ಆದ್ದರಿಂದ ಜೀವಾತ್ಮವನ್ನು ಕ್ಷರನು (ನಾಶವಾಗುವವನು) ಎಂದಿದ್ದಾರೆ. ಜೀವಾತ್ಮನಂತೆ ಅಲ್ಲದೆ ಆತ್ಮ ಶರೀರಗಳಲ್ಲೆಲ್ಲವೂ ಸಮಾನವಾಗಿ ಆವರಿಸಿದರೂ ನಾಶವಿಲ್ಲ. ಆದಕಾರಣ ಅದನ್ನು ಅಕ್ಷರನು (ನಾಶ ಇಲ್ಲದವನು) ಎಂದಿದ್ದಾರೆ. ಅಮೃತನಾದ ಆತ್ಮ ಎಲ್ಲಾ ಜೀವ ಶರೀರಗಳಲ್ಲಿ ವ್ಯಾಪಿಸಿ, ಆಯಾ ಜೀವರಾಶಿಗಳ ತಲೆಯಲ್ಲಿ ಕೇಂದ್ರವೇರ್ಪಡಿಸಿಕೊಂಡು ನಿವಾಸಿಸುತ್ತಾ, ಶರೀರ ನಾಡಿಗಳ ಮೂಲಕ ಅದರ ಶಕ್ತಿಯನ್ನು ಶರೀರವೆಲ್ಲಾ ಪ್ರಸಾರಮಾಡುತ್ತಿದೆ. ಎಲ್ಲಾ ಜೀವ ಶರೀರಗಳಲ್ಲಿ ಅವಯವಗಳು ಕೆಲಸ ಮಾಡುವುದಕ್ಕೆ ಈ ಆತ್ಮಶಕ್ತಿ ಅಗತ್ಯ. ಆತ್ಮಶಕ್ತಿ ಇಲ್ಲದಿರುವಾಗ ಅವಯವಗಳು ಕೆಲಸಮಾಡುವುದಿಲ್ಲ. ನಮಗೆ ಉಪಯೋಗಪಡುವ ರೇಡಿಯೋ, ಫ್ಯಾನ್, ಲೈಟ್‌ಗಳು ವಿವಿಧ ರೀತಿಯ ಪರಿಕರಗಳು ಕೆಲಸಮಾಡುವುದಕ್ಕೆ ವಿದ್ಯುತ್ ಎಂಬ ಶಕ್ತಿ ಹೇಗೆ ಅಗತ್ಯವೋ, ಹಾಗೆಯೇ ನಮ್ಮ ಶರೀರ ಅವಯವಗಳು ಕೆಲಸಮಾಡುವುದಕ್ಕೆ ಆತ್ಮ ಚೈತನ್ಯವೆಂಬ ಶಕ್ತಿ ಉಪಯೋಗಪಡುತ್ತಿದೆ. ಆತ್ಮ ಚೈತನ್ಯವಿಲ್ಲದ ಸಜೀವ ಶರೀರವು ಭೂಮಿ ಮೇಲೆ ಇರುವುದಿಲ್ಲವೆಂದು ತಿಳಿಯಬೇಕು. ಜೀವಾತ್ಮ ಸುಖ ದುಃಖಗಳನ್ನು ಅನುಭವಿಸುವುದಕ್ಕಾಗಲಿ, ಶರೀರ ಅವಯವಗಳು ಕದಲುವುದಕ್ಕಾಗಲಿ, ಶರೀರಾಂತರ್ಭಾಗಗಳು ಕೆಲಸ ಮಾಡುವುದಕ್ಕಾಗಲಿ ಎಲ್ಲದಕ್ಕೂ ಆತ್ಮಶಕ್ತಿ ಇಲ್ಲದೆ ನಡೆಯುವುದಿಲ್ಲ. ಸಮಸ್ತ ಶರೀರಗಳಲ್ಲಿ ಸಾರಾಂಶವಾದುದು ಆತ್ಮ ಚೈತನ್ಯ ಶಕ್ತಿಯಾದ್ದರಿಂದ ಆತ್ಮವನ್ನು ಸತ್ತು ಎಂದು ಕರೆಯುತ್ತಿದ್ದರು. ಆತ್ಮವಿಲ್ಲದ ಶರೀರವು ಸತ್ತು ಇಲ್ಲದಿರುವುದಾದ್ದರಿಂದ ನಿಸ್ಸತ್ತುವಾದುದೆಂದು ಸತ್ತುಹೋಗಿದೆ ಎಂದು ಎನ್ನುತ್ತಿದ್ದರು.

ಪ್ರತಿ ಜೀವರಾಶಿಯಲ್ಲಿಯೂ ಈ ಸತ್ತು (ಚೈತನ್ಯ) ಇದೆ. ಹಸುವಿನಲ್ಲಿಯೂ, ಆನೆಯಲ್ಲಿಯೂ, ಇರುವೆಯಲ್ಲಿಯೂ, ಸೊಳ್ಳೆಯಲ್ಲಿಯೂ, ಮನುಷ್ಯನಲ್ಲಿಯೂ ಎಲ್ಲರಲ್ಲಿಯೂ ಒಂದೇ ವಿಧವಾದ ಸತ್ತು (ಆತ್ಮ) ಇದೆಯೆಂದು ತಿಳಿಯಬೇಕು. ಸತ್ತು ಶರೀರವೆಲ್ಲಾ ವ್ಯಾಪಿಸಿರುವಾಗ ಎಲ್ಲಾ ಅವಯವಗಳು ಕೆಲಸ ಮಾಡುತ್ತಿರುತ್ತವೆ. ಆ ಸತ್ತು ಒಂದು ಕೈಯೊಳಗೆ ಪ್ರಸಾರವಾಗಿಲ್ಲವೆಂದುಕೊಳ್ಳಿ ಆಗ ಆ ಕೈ ಕೆಲಸ ಮಾಡುವುದಿಲ್ಲ. ಅಂತಹವನು ಪೂರ್ವದಲ್ಲಿ ನನ್ನ ಕೈ ಸತ್ತು ಇಲ್ಲದಂತೆ ಹೋಗಿದೆ ಎಂದು ಹೇಳುತ್ತಿದ್ದನು. ಕೆಲವು ಪ್ರಾಂತಗಳಲ್ಲಿ ಕಾಲಕ್ರಮವಾಗಿ **'ಸತ್ತು' ಎನ್ನುವ ಮಾತು 'ಸಚ್ಚು'** ಎನ್ನುವ ಮಾತಾಗಿ

ಬದಲಾಗಿದೆ. ಆದ ಕಾರಣ ಈಗಲೂ ಸಹ ಕೈ ಕೆಲಸ ಮಾಡದವನು ನನ್ನ ಕೈ 'ಸಚ್ಚು' ಬಂದಿದೆಂದು ಹೇಳುವುದು ಪ್ರತ್ಯಕ್ಷ ಪ್ರಮಾಣವಾಗಿ ಇದೆ. ಹಾಗೆ ನನ್ನ ಕಾಲು ಸಚ್ಚು (ಬಲಹೀನ) ಬಂದಿದೆ ಎಂದು ಹೇಳುವುದು ಬಿದ್ದು ಹೋಗಿದೆಯೆನ್ನುವುದೂ ಸಹ ಕೇಳುತ್ತಿದ್ದೇವೆ. ಆ ಬಿದ್ದುಹೋಗಿದೆ ಎಂದು ಏನನ್ನು ಕರೆಯುತ್ತಿದ್ದೇವೋ ಅದೇ ಆತ್ಮಶಕ್ತಿಯೆಂದು ತಿಳಿಯಬೇಕು, ಅದು ಇಲ್ಲದ್ದು ಯಾವ ಮತಸ್ಥನ ಶರೀರವು ಕೆಲಸ ಮಾಡುವುದಿಲ್ಲ.

ನನ್ನದು ಈ ಮತ, ನಿನ್ನದು ಆ ಮತವೆಂದು ಎಷ್ಟು ಭೇದಗಳು ಇಟ್ಟುಕೊಂಡರು ಅವರೆಲ್ಲರಿಗೂ ಸತ್ತು ಒಂದೇ, ಅದು ಮಾನವರಿಗೆ ಅಲ್ಲ ಎಲ್ಲಾ ಜೀವರಾಶಿಗಳಲ್ಲಿಯೂ ಸಹ ಇದೆ. ಹಸು ಶರೀರದಲ್ಲಿ ಸತ್ತುಹೋಗಿದೆ ಎಂದುಕೊಳ್ಳೋಣ. ಆಗ ಅದನ್ನು ಹಸು ಸತ್ತುಹೋಗಿದೆಯೆಂದು ಪೂರ್ವದಲ್ಲನ್ನುತ್ತಿದ್ದರು. ಈದಿನ ಆ ಮಾತನ್ನೇ ಹಸು ಸತ್ತೋಗಿದೆ ಎಂದು ಕರೆಯುತ್ತಿದ್ದೇವೆ. ಹಾಗೆ ಎಮ್ಮೆ ಸತ್ತೋಗಿದೆ ಎಂದು, ಎತ್ತು ಸತ್ತೋಗಿದೆ ಎನ್ನುತ್ತಿದ್ದೇವೆ. ಅದೇ ವಿಧವಾಗಿ ಮನುಷ್ಯನೂ ಸಹ ಸತ್ತೋಗಿದ್ದಾನೆ ಎನ್ನುತ್ತಿದ್ದಾರೆ. ಆ ಸಚ್ಚು ಎಂದರೆ ಸತ್ತು ಏನೆಂದು ಯಾರು ಯೋಚಿಸಲಿಲ್ಲ. ನಮ್ಮಲ್ಲಿರುವ ನಾವು ಯೋಚಿಸದ ಸತ್ತನ್ನೇ ಆತ್ಮವೆಂದು ಕರೆಯಬಹುದು.

ಸತ್ತು ಎನ್ನುವ ಆತ್ಮಕ್ಕೆ ಒಂದು ಸಿದ್ಧಾಂತವಿದೆ. ಅದು ಏನೆಂದರೆ! ಜೀವಾತ್ಮ ಎಲ್ಲಿಯಾದರೆ ಇದೆಯೋ ಅಲ್ಲಿ ಆತ್ಮವೂ ಸಹ ಇರಬೇಕು. ಆದ ಕಾರಣ ಜೀವಾತ್ಮ ಬಿಟ್ಟುಹೋಗುವ ಶರೀರವನ್ನು ಆತ್ಮವೂ ಸಹ ಬಿಟ್ಟುಹೋಗುತ್ತಿದೆ. ಜೀವಾತ್ಮ ಎಲ್ಲಿ ಪ್ರವೇಶಿಸುತ್ತಿದೆಯೋ ಆತ್ಮವೂ ಸಹ ಅಲ್ಲಿಯೇ ಪ್ರವೇಶಿಸುತ್ತಿದೆ. ಮರಣದಲ್ಲಿ ಜೀವಿಯೊಂದಿಗೆ ಹೋದ ಆತ್ಮ, ಹುಟ್ಟುವಾಗ ಜೀವಿಯೊಂದಿಗೆ ಶರೀರದಲ್ಲಿ ಪ್ರವೇಶಿಸುತ್ತಿದೆ. ಆದ್ದರಿಂದಲೇ ಮರಣಿಸಿದ ಶರೀರದಲ್ಲಿ ಕದಲಿಕೆಗಳು ನಿಂತುಹೋಗುವುದು, ಹುಟ್ಟಿದ ಶರೀರದಲ್ಲಿ ಕದಲಿಕೆಗಳು ಬರುವುದು ನಡೆಯುತ್ತಿದೆ. ಶರೀರಗಳಿಗೆ ಸ್ವಯಂ ಚೈತನ್ಯಶಕ್ತಿ ಇಲ್ಲವಾದ್ದರಿಂದ ಅವುಗಳನ್ನು ಅಸತ್ತು ಎನ್ನುತ್ತಿದ್ದೇವೆ. ಸ್ವಯಂ ಚೈತನ್ಯಶಕ್ತಿ ಇರುವ ಆತ್ಮವನ್ನು ಸತ್ತು ಎನ್ನುತ್ತಿದ್ದೇವೆ. ಚೈತನ್ಯವಿಲ್ಲದ ಅಸತ್ತಾದ ಶರೀರಗಳು ಕೃಶಿಸಿಹೋಗುತ್ತವೆಂದು, ಸತ್ತಾದ ಆತ್ಮ ನಾಶ ಆಗದಿರುವುದೆಂದು ಆತ್ಮವನ್ನು ತಿಳಿದುಕೊಂಡವರಿಗೆ ಪೂರ್ತಿ ಅರ್ಥವಾಗಿರುತ್ತದೆ. ಸರ್ವ ಶರೀರಗಳಿಗೆ ದೀಪದಂತಿದೆ ಸತ್ತು. ಅದು ಇರುವುದರಿಂದಲೇ ಕೆಲವರು ಮಂತ್ರಿ ಪದವಿಗಳು, ಮತ್ತೆ ಕೆಲವರು ಕಂತ್ರಿಪದವಿಗಳು, ಕೆಲವರು ಪೋಲೀಸ್ ಇನ್‌ಸ್ಪೆಕ್ಟರ್ಸ್, ಕೆಲವರು ಕಲೆಕ್ಟರ್ಸ್, ಕೆಲವರು ಕಳ್ಳರಾಗಿ ಅನೇಕ ವಿಧಗಳಾಗಿ ಮಾನವಜಾತಿ ಜೀವನ

ಸಾಗಿಸುತ್ತಿದೆ. ಅದು ತಿಳಿಯದೆ ನಾನು ಪೋಲೀಸ್ ಆಫೀಸರ್ ಎಂದು ಕೋಲು ಕೈಯಲ್ಲಿ ಹಿಡಿದುಕೊಂಡು ಆಡಿಸುತ್ತಾ, ಆ ಆಡಿಸುವ ಶಕ್ತಿ ಯಾರದೋ ಮರೆಯಬಾರದು. ಹಾಗೆ ನಾನು ಒಬ್ಬ ಜಡ್ಜ್‌ನೆಂದು ನನ್ನ ಕೈಯಲ್ಲಿ ಪೆನ್ನು ಇದೆಯೆಂದು, ನಾನು ಹೇಗೆ ಬರೆದರೆ ಹಾಗೆ ನಡೆಯುತ್ತದೆ ಎಂದು ಅಂದುಕೊಳ್ಳಬಾರದು. ಆ ಬರಹಕ್ಕೆ ಉಪಯೋಗಪಡುವ ಶಕ್ತಿ ಯಾರದೋ ತಿಳಿಯಬೇಕು. ಸರ್ವಸಾಧಾರಣವಾಗಿ ಎಲ್ಲರೂ ನನ್ನಲ್ಲಿರುವುದು ನನ್ನಶಕ್ತಿ ಅಲ್ಲದೆ ಇನ್ನ್ಯಾರ ಶಕ್ತಿಯೆಂದುಕೊಳ್ಳಬಹುದು. ಆತ್ಮ ಜೀವಾತ್ಮಗಳ ವಿಷಯ ತಿಳಿದ ಏಸುವನ್ನು ಒಂದುದಿನ ಖೈದಿಯಾಗಿ ಕೋರ್ಟಿನಲ್ಲಿ ನಿಲ್ಲಿಸಿದ ದಿನದಂದು, ಆ ಜಡ್ಜ್ **'ನಾನು ಏನು ಹೇಳಿದರೆ ಆ ಶಿಕ್ಷೆ ಹಾಗೆಯೇ ಜಾರಿಯಾಗುತ್ತದೆ"** ಎಂದು ಹೇಳಿದಾಗ ಏಸು ಹೀಗೆ ಹೇಳಿದನು.' ***ಮೇಲಿಂದ ನಿನಗೆ ಕೊಟ್ಟಿದ್ದರೆ ಹೊರತು ನನ್ನ ಮೇಲೆ ನಿನಗೆ ಯಾವ ಅಧಿಕಾರವು ಇರುವುದಿಲ್ಲ'*** ಆ ಮಾತಿನಲ್ಲಿ ಯಾರು ಸ್ವತಂತ್ರರು ಅಲ್ಲವೆಂದು, ಎಲ್ಲರಿಗೂ ಮೇಲಿನ ಅಧಿಕಾರಿ ಆತ್ಮ (ಸತ್ತು) ಇದೆಯೆಂದು ಸ್ಪಷ್ಟವಾಗುತ್ತಿದೆ. ಇನ್ನೂ ಪರಮಾತ್ಮ ಎಂತಹದು ಎನ್ನುವುದು ಮುಂದಿನ ಶ್ಲೋಕದಲ್ಲಿ ನೋಡಿರಿ.

**(1) ಶ್ಲೋ॥ 17 : ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್ ।**
**ವಿನಾಶ ಮವ್ಯಯ ಸ್ಯಾಸ್ಯ ನ ಕಶ್ಚಿ ತ್ಕರ್ತು ಮರ್ಹತಿ ॥**

**(ಪರಮಾತ್ಮ)**

**ಭಾವಾರ್ಥ :** ನಾಶವಿಲ್ಲದ ಪರಮಾತ್ಮ ಪ್ರಪಂಚವೆಲ್ಲಾ ವ್ಯಾಪಿಸಿ ಸರ್ವವೂ ಅಡಗಿದೆ. ಇದು ಶರೀರದೊಳಗೂ ಸಹ ಇದೆ. ಅಂತದ್ದನ್ನು ಯಾರು ನಾಶ ಮಾಡಲಾರನು.

**ವಿವರ :** ಜೀವಾತ್ಮದೊಂದಿಗೆ ಆತ್ಮವೂ ಸಹ ಶರೀರದಲ್ಲಿ ವಾಸಿಸುತ್ತಿದೆ. ಜೀವಾತ್ಮ ಆತ್ಮವೇ ಅಲ್ಲದೆ ಪರಮಾತ್ಮ ಎನ್ನುವುದೂ ಸಹ ಶರೀರದಲ್ಲಿ ವಾಸಿಸುತ್ತಿದೆ. ಪರಮಾತ್ಮ ಜೀವಾತ್ಮ ಆತ್ಮದಂತೆ ಶರೀರದಲ್ಲಿಯೇ ಅಲ್ಲದೆ, ಶರೀರದ ಹೊರಗೂ ಸಹ ಎಲ್ಲಾ ಕಡೆ ವ್ಯಾಪಿಸಿ ಸರ್ವವು ತುಂಬಿರುವುದಾಗಿದೆ. ಅವಧಿಯಿಲ್ಲದ ಪರಮಾತ್ಮ ಶರೀರದೊಳಗೂ, ಹೊರಗೂ ಅಲ್ಲದೆ ಉಳಿದ ನಿರ್ಜೀವವಾದ ಎಲ್ಲಾ ಪದಾರ್ಥಗಳಲ್ಲಿಯೂ ಸಹ ಅಣುವಣುವಿನಲ್ಲಿ ವ್ಯಾಪಿಸಿದೆ. ಅದಕ್ಕಿಂತ ಭಿನ್ನವಾದುದು ಬೇರೆಯಾವುದು ಇಲ್ಲ. ಒಂದುಕಡೆ ಇದ್ದು ಮತ್ತೊಂದುಕಡೆ ಇಲ್ಲದಿರುವುದನ್ನಾದರೆ ಸಾಯಿಸಬಹುದು. ಹಾಗಲ್ಲದೆ ಎಲ್ಲಾಕಡೆಯಲ್ಲಿಯೂ ವ್ಯಾಪಿಸಿಕೊಂಡಿರುವುದನ್ನು ಯಾರು ಸಾಯಿಸುತ್ತಾರೆ. ಸಾಯಿಸುವುದಕ್ಕೆ ಕಾಣಿಸುವುದು ಅಲ್ಲ, ತಿಳಿಯುವುದು ಅಲ್ಲ. ಶರೀರವನ್ನು ಯಾರಾದರೂ ಸಾಯಿಸಬಹುದು. ಆದ್ದರಿಂದ ಆ ಶರೀರದಲ್ಲಿನ ಆತ್ಮ ಜೀವಾತ್ಮಗಳ ಜೋಡಿ ಮತ್ತೊಂದು ಶರೀರವನ್ನು ಆಶ್ರಯಿಸುತ್ತಿವೆ.

ಆತ್ಮ, ಜೀವಾತ್ಮದಂತೆ ಅಲ್ಲದೇ ಪರಮಾತ್ಮ ಮರಣಿಸಿದ ಶರೀರದಲ್ಲಿಯೂ ಸಹ ಅಣುಅಣುವಿನಲ್ಲಿ ವ್ಯಾಪಿಸಿದೆ. ಆದ್ದರಿಂದ ಅದು ಯಾರಿಂದಲೂ ಸಾಯಲ್ಪಡುವುದಲ್ಲ, ಯಾರು ಅದನ್ನು ಸಾಯಿಸಲಾರರು.

**(1) ಶ್ಲೋ॥ 18 : ಅನ್ತ ವನ್ತ ಇಮೇ ದೇಹಾಃ ನಿತ್ಯಸ್ಯೋಕ್ತಾ ಶ್ಶರೀರಿಣಃ ।**
**ಅನಾಶಿನೋಽ ಪ್ರಮೇಯಸ್ಯ ತಸ್ಮಾ ದ್ಯುಧ್ಯಸ್ವ ಭಾರತ ! ॥**
**(ಆತ್ಮ, ಪರಮಾತ್ಮ)**

**ಭಾವಾರ್ಥ :** ಶರೀರಗಳಲ್ಲಿ ನಿತ್ಯವು ಇರುವವನಾದ ಆತ್ಮವು, ನಾಶವಿಲ್ಲದವನು ಅಪ್ರಮೇಯನು ಆದ ಪರಮಾತ್ಮನು ವಾಸಿಸುವ ಶರೀರಕ್ಕೆ ಎಂದಿಗಾದರೂ ನಾಶ ತಪ್ಪುವುದಿಲ್ಲ ಆದ ಕಾರಣ ಯುದ್ಧ ಮಾಡೆಂದನು.

**ವಿವರ :** ಒಂದು ಸಜೀವ ಶರೀರವನ್ನು ಬೇರ್ಪಡಿಸಿ ನೋಡಿದರು ಅದರಲ್ಲಿ ಶರೀರವಲ್ಲದೆ ಜೀವಾತ್ಮ, ಆತ್ಮ, ಪರಮಾತ್ಮಗಳು ಎನ್ನುವವು ಮೂರು ಇವೆಯೆಂದು ತಿಳಿಯುತ್ತಿದೆ. ಈ ಶ್ಲೋಕದಲ್ಲಿ ಜೀವಾತ್ಮದ ಬಗ್ಗೆ ಸ್ವಲ್ಪವೂ ಹೇಳದೆ ಶರೀರ ಆತ್ಮ ಪರಮಾತ್ಮಗಳನ್ನು ಕುರಿತು ಹೇಳಿದ್ದಾರೆಂದು ತಿಳಿಯಬೇಕು. **"ಅಂತವಂತ ಇಮೇ ದೇಹಾ"** ಎನ್ನುವ ಮಾತನ್ನು ಅನುಸರಿಸಿದರೆ ಈ ದೇಹಕ್ಕೆ ನಾಶವಿದೆ ಎಂದು ಅರ್ಥ. ಎಂದಿಗಾದರೂ ನಾಶವಾಗುವ ಶರೀರದಲ್ಲಿ ನಿತ್ಯನಾದ ಆತ್ಮ ಇದ್ದಾನೆ. ಈ ಆತ್ಮ ಒಂದು ಶರೀರದಲ್ಲಿ ಒಂದು ಖಂಡವಾಗಿದ್ದು, ಸಮಸ್ತ ಶರೀರಗಳಲ್ಲಿ ಒಂದೇ ಅಂಶವಾಗಿದೆ. ಆದ್ದರಿಂದ ಎಲ್ಲಾ ಶರೀರಗಳಲ್ಲಿರುವ ಆತ್ಮಗಳು ಒಂದೇ ಎಂದು ತಿಳಿಯುತ್ತಿದೆ. ಎಲ್ಲಾ ಶರೀರಗಳಲ್ಲಿರುವ ಜೀವಾತ್ಮಗಳು ಕರ್ಮರೀತ್ಯ ಬೇರೆ ಬೇರೆ ಇವೆ. ಅವು ಎಲ್ಲಾ ಒಂದೇ ಅಲ್ಲ, ಅವು ಒಂದಕ್ಕೊಂದು ಭಿನ್ನವಾದವು, ಆದ್ದರಿಂದ ಜೀವಾತ್ಮಗಳು ಅನೇಕವಾಗಿವೆ. ಆತ್ಮ ಹಾಗಲ್ಲದೆ ಅನೇಕ ಶರೀರಗಳಲ್ಲಿ ಅನೇಕ ಆತ್ಮಗಳಿದ್ದರೂ ಅವೆಲ್ಲವೂ ಒಂದೇ ಎಂದು ತಿಳಿಯಬೇಕು. ಒಂದು ಶರೀರದಲ್ಲಿರುವ ಆತ್ಮ ಹತ್ಯೆ ಮಾಡಲ್ಪಟ್ಟರೂ ಎಲ್ಲಾ ಶರೀರಗಳಲ್ಲಿರುವ ಆತ್ಮ ಉಳಿದಿದೆ. ಆದ್ದರಿಂದ ಆತ್ಮಕ್ಕೆ ನಾಶವಿಲ್ಲ ಎಂದಿದ್ದೇವೆ. ಇಲ್ಲಿ ಮುಖ್ಯವಾಗಿ ಗ್ರಹಿಸಬೇಕಾದ ವಿಷಯ ಏನೆಂದರೆ! ಒಂದು ಶರೀರಪರವಾಗಿ ನೋಡಿದರೆ ನಾಶವಾಗುವ ಆತ್ಮ, ಸಮಸ್ತ ಶರೀರಪರವಾಗಿ ನೋಡಿದಾಗ ನಾಶವಿಲ್ಲದಿರುವುದೆಂದು ಹೇಳಬಹುದು. ಈ ವಿಷಯವು ಮುಂದಿನ ಶ್ಲೋಕಗಳಲ್ಲಿ ವಿವರಿಸಲ್ಪಟ್ಟಿದೆ.

ಪರಮಾತ್ಮನ ವಿಷಯಕ್ಕೆ ಬಂದರೆ ಎಂದಿಗಾದರೂ ಎಲ್ಲಿಯು ನಾಶವಿಲ್ಲದವನು, ಯಾವುದರಿಂದಲೂ ತಿಳಿಯದೆ ಇರುವವನು, ಕೊನೆಗೆ ಯೋಗದಿಂದಲೂ ಸಹ ತಿಳಿಯದೆ ಇರುವವನು, ಯಾವ ಪ್ರಮಾಣದಿಂದಲೂ ತಿಳಿಯದೆ ಇರುವವನು, ಯಾವ ಹೆಸರು ಇಲ್ಲದಿರುವವನು ಆದ ಪರಮಾತ್ಮ ಮತ್ತು ಆತ್ಮವೂ ಈ ಶರೀರದಲ್ಲಿ ವಾಸಿಸುತ್ತಿವೆ. ಆದರೂ ಶರೀರವು ಪ್ರಕೃತಿ ಜನಿತವಾದದು ಆದ್ದರಿಂದ ಅದಕ್ಕೆ ನಾಶ ತಪ್ಪದೆ ಉಂಟಾಗುತ್ತದೆ. ಈ ದೇಹವು ಶಾಶ್ವತವಾಗಿರುವುದು ಅಲ್ಲ. ಏಕೆಂದರೆ ಶರೀರಕ್ಕೆ ಬಾಲ್ಯ, ಯೌವನ, ಕೌಮಾರ, ವೃದ್ಧಾಪ್ಯ ಎನ್ನುವ ಮೊದಲಾದ ದಶೆಗಳು ಇವೆ. ಒಂದರ ಹಿಂದೆ ಒಂದು ಅವು ನಾಶದ ಕಡೆ ಪ್ರಯಾಣಿಸುತ್ತಿವೆ. ಕೊನೆಗೆ ಶರೀರವು ಶಿಥಿಲವಾಗಿ ಮರಣ ಏರ್ಪಡುತ್ತದೆ. ಆದರೆ ಶರೀರದಲ್ಲಿನ ಆತ್ಮಕ್ಕೂ ಪರಮಾತ್ಮಕ್ಕೂ ಶರೀರಕ್ಕಿರುವಂತೆ ದಶೆಗಳು ಇಲ್ಲ. ಆದ್ದರಿಂದ ಅವುಗಳಿಗೆ ನಾಶವಿಲ್ಲ. ಶರೀರ ಕೆಲವು ಭಾಗಗಳೊಂದಿಗೆ ಕೂಡಿಕೊಂಡಿದೆ. ಬದಲಾವಣೆ ಯಾಗುವ ಕಾಣಿಸುವ ಸ್ಥೂಲ ಶರೀರವು ಹತ್ತು ಭಾಗಗಳಾಗಿದೆ. ಹತ್ತು ಭಾಗಗಳಾದ ಸ್ಥೂಲ ಶರೀರವು ಪ್ರತಿ ದಿನವು ಕ್ಷಣಕ್ಷಣವು ಬದಲಾವಣೆ ಆಗುತ್ತಿದೆ. ಹೇಗೆಂದರೆ ದಿನಕ್ಕೆ 12 ಗಂಟೆಗಳು ಹಗಲು ಅಥವಾ 720 ನಿಮಿಷಗಳು, ಸೆಕೆಂಡುಗಳಾದರೆ 43,200. ಸ್ಥೂಲ ಶರೀರವಾದ ಹತ್ತು ಭಾಗಗಳು ಸೂಕ್ಷ್ಮವಾಗಿ ಕಾಣಿಸದಂತೆ ಬದಲಾವಣೆಯಾಗುತ್ತಿದೆ. ಆದ ಕಾರಣ ಒಂದು ದಿನಕ್ಕೆ ಹತ್ತರಷ್ಟು ಕಾಲವನ್ನು 4,32,000 ಸೂಕ್ಷ್ಮ ಕಾಲ ಎನ್ನುತ್ತೇವೆ. ಒಂದು ದಿನಕ್ಕೆ ಕಾಣಿಸದ 4,32,000 ಬದಲಾವಣೆಗಳು ಶರೀರದಲ್ಲಿ ನಡೆಯುತ್ತಿರುವುದರಿಂದ ಸ್ವಲ್ಪ ಕಾಲಕ್ಕೆ ಶರೀರವು ವೃದ್ಧಾಪ್ಯವಾಗುತ್ತಿದೆ. ಪ್ರತ್ಯಕ್ಷವಾಗಿ ಕಾಣಿಸುವ ಶರೀರವು ಪರೋಕ್ಷವಾಗಿ ಬದಲಾವಣೆಯಾಗುತ್ತಿದೆ ಎಂದು ಬಹಳ ಜನರಿಗೆ ತಿಳಿದಿಲ್ಲ. ಪ್ರತ್ಯಕ್ಷವಾಗಿ ಕ್ಷಣ ಕ್ಷಣಕ್ಕೂ ಬದಲಾವಣೆ ಆಗುತ್ತಿದೆಯೆಂದು, ಹಾಗೆ ನಾಶವಿದೆಯೆಂದೂ ಸಹ ಎಲ್ಲರಿಗೂ ತಿಳಿಯುತ್ತದೆ. ಅಂತಹ ಶರೀರವನ್ನು ಕುರಿತು ಲೆಕ್ಕಿಸದೆ ಯುದ್ಧ ಮಾಡು ಎಂದಿದ್ದಾನೆ. ಕಲಿಯುಗ ಆಯಸ್ಸು ಸಹ 4,32,000 ವರ್ಷಗಳೆನ್ನುವುದು ಗಮನಾರ್ಹವಾದುದು.

**(1) ಶ್ಲೋ॥ 19 : ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇಹತಮ್ ।**
**ಉಭೌ ತೌ ನ ವಿಜಾನೀತೋ ನಾಯಂಹಂತಿ ನ ಹನ್ಯತೇ ॥**
**(ಜೀವಾತ್ಮ)**

**ಭಾವಾರ್ಥ :** ಜೀವಾತ್ಮವನ್ನು ಸಾಯಿಸುತ್ತೇನೆಂದು ಯಾರಂದುಕೊಳ್ಳುತ್ತಾರೊ ಮತ್ತು ಅದು ಸಾಯಲ್ಪಡುತ್ತದೆಂದು ಸಹ ಯಾರಂದುಕೊಳ್ಳುತ್ತಾರೊ ಆ ಇಬ್ಬರು ಜ್ಞಾನ ಶೂನ್ಯರೆಂದು ತಿಳಿಯಿರಿ. ಜೀವಾತ್ಮ ಸಾಯುವುದು ಇಲ್ಲ, ಸಾಯಲ್ಪಡುವುದು ಇಲ್ಲ.

**ವಿವರ : ಜೀವಾತ್ಮ ಸಾಯುವುದು ಅಲ್ಲ, ಸಾಯಲ್ಪಡುವುದು ಅಲ್ಲ ಎನ್ನುವ ಮಾತು ಬಹುಶ ಈ ಯುಗದಲ್ಲಿ ನಮ್ಮದೇ ಮೊದಲ ಮಾತಾಗಿರುತ್ತದೆಂದುಕೊಳ್ಳುತ್ತೇವೆ.** ಜೀವಾತ್ಮಕ್ಕೆ ಸಾವು ಇಲ್ಲವೆಂದು ಬಹುಶಃ ಯಾವ ಭಗವದ್ಗೀತೆಯಲ್ಲಿಯೂ ನೀವು ನೋಡಿರುವುದಿಲ್ಲ ಎಂದುಕೊಳ್ಳುತ್ತೇವೆ. ಎಷ್ಟೋ ಜನ ಹಿರಿಯರು ಹೇಳದಿರುವುದನ್ನು ನೀವು ಹೇಗೆ ಹೇಳುತ್ತಿದ್ದೀರೆಂಬ ಪ್ರಶ್ನೆ ನೀವು ಕೇಳಬಹುದು. ಅದಕ್ಕೆ ಸಮಾಧಾನ ಇಲ್ಲಿಯವರೆಗಿರುವ ಭಗವದ್ಗೀತೆಗಳಲ್ಲಿ ಪುರುಷನಾದ ಪರಮಾತ್ಮನನ್ನು ಮೂವರು ಪುರುಷರಾಗಿ ವಿಭಜಿಸಿಕೊಂಡಿಲ್ಲ. ಆ ಒಂದು ತಪ್ಪು ಎಲ್ಲರನ್ನೂ ತಪ್ಪುದಾರಿ ಹಿಡಿಸಿದೆ. ಗುರಿ ತಪ್ಪಿದ ದಾರಿಯಾಗಿ ಸಂಶಯಗಳಿಂದ ಕೂಡಿಕೊಂಡು ಉತ್ತರ ಇಲ್ಲದಂತೆ ಮಾಡಿದೆ. ಈ ಮಾತುಗಳು ಬಹಳ ಜನ ಹಿರಿಯರಿಗೆ ದುಃಖವನ್ನುಂಟುಮಾಡುತ್ತದೆ ಎಂದೂ ಸಹ ನಮಗೆ ತಿಳಿದಿದೆ. ಆದರೆ ಒಬ್ಬರಿಗೆ ದುಃಖ ಆಗುತ್ತದೆಂದು  ಸತ್ಯವನ್ನು ಬಚ್ಚಿಡಬಾರದು. ಅದರಲ್ಲಿಯೂ ಜ್ಞಾನ ವಿಷಯಗಳಲ್ಲಿ ಮತ್ತಷ್ಟು ಜಾಗ್ರತೆಯಾಗಿರಬೇಕು. ವಾಸ್ತವವನ್ನು ಧೈರ್ಯವಾಗಿ ಪ್ರಕಟಿಸಬೇಕು. ಸಪ್ರಮಾಣವಾದ ಸತ್ಯವನ್ನು ಮುಚ್ಚಿಡುವುದರಿಂದ ಮಹಾಪಾಪ ಏರ್ಪಡುತ್ತದೆ.

ಒಂದು ವಿಧವಾಗಿ ಇಲ್ಲಿಯವರೆಗೂ ಈ ವಿಷಯವನ್ನು ಬರೆಯದ ಹಿರಿಯರದೇನೂ ತಪ್ಪಿಲ್ಲವೆಂದು ಹೇಳಬಹುದು. ಏಕೆಂದರೆ! ಮಾಯೆ ದೈವನಿರ್ಮಿತವಾದುದು. ಒಂದು ವಿಧವಾಗಿ ಅದಕ್ಕೆ ದೈವಶಕ್ತಿ ಇದೆಯೆಂದು ಹೇಳಬಹುದು. ದೇವರನ್ನು ಕುರಿತು ಬೋಧಿಸಬೇಕೆಂದುಕೊಳ್ಳುವವರ ಮೇಲೆ ಇನ್ನೂ ಹೆಚ್ಚಿನ ಬಲದಿಂದ ಕೆಲಸಮಾಡುತ್ತದೆ. ಮಾಯೆಗೆ ವಿರೋಧವಾದವರು ಬೋಧಕರೆಂದು, ಅವರನ್ನು ತಪ್ಪು ದಾರಿ ಹಿಡಿಸಿದರೆ ಅವರನ್ನನುಸರಿಸಿ ಉಳಿದವರೆಲ್ಲರೂ ಇದು ಒಳ್ಳೆಯ ದಾರಿ ಎಂದುಕೊಂಡು ಅದರ ಹಿಂದೆ ಹೋಗುತ್ತಾರೆಂದು ಮಾಯೆಯೊಂದರ ಅಭಿಪ್ರಾಯ. ಆದುದರಿಂದ ನಾವು ಮಾಯೆ ಪ್ರಭಾವದಲ್ಲಿ ಸಿಲುಕಿಕೊಳ್ಳದೆ, ನಮಗೆ ಇತರರು ಹೇಳುವುದು ಸರಿಯಲ್ಲವೆನ್ನುವ ಅಸೂಯೆಯನ್ನು ಬಿಟ್ಟು ಬುದ್ಧಿಗೆ ಕೆಲಸ ಇಟ್ಟು ನೋಡುತ್ತೀರೆಂದು ಆಶಿಸುತ್ತೇವೆ. ಇಷ್ಟೇ ಅಲ್ಲದೆ **ಇಲ್ಲಿ ಜೀವಾತ್ಮಕ್ಕೆ ಸಾವು ಇಲ್ಲವೆಂದು ಹೇಳುವುದು ಒಂದು ಸಂಚಲನವಾದರೆ, ನಂತರ ಆತ್ಮಕ್ಕೆ ಸಾವಿದೆ ಎಂದು ಹೇಳುವುದು ಮತ್ತೊಂದು ಸಂಚಲನ.** ಇವೆಲ್ಲವೂ ಹೇತುಕವಾಗಿ ಹೇಳಿರುವವೇ. ಹೇತುವಾದಿಗಳಿಗೆ ಉತ್ತರ ಕೊಡುವ ವಿಷಯಗಳೇ. ಇಲ್ಲಿಯವರೆಗೂ ಅಗಮ್ಯಗೋಚರವಾಗಿರುವ ವಿಷಯಗಳನ್ನು ವಿವರವಾಗಿ ತಿಳಿದುಕೊಂಡು ಯಾವ ಪ್ರಶ್ನೆಗಾದರು ಉತ್ತರ ಕೊಡುವವರಾಗಿ ಬದಲಾವಣೆಯಾಗಿ ಇತರರಿಗೆ ಈ ಹೊಸ ವಿಷಯದ ವಿವರವು ತಿಳಿಸಿ ಅಜ್ಞಾನದ ರೂಪ ಬದಲಾಯಿಸುತ್ತೀರೆಂದು ಕೋರುತ್ತಿದ್ದೇವೆ.

ಭಗವದ್ಗೀತೆಯಲ್ಲಿ ಒಂದು ಸಂದರ್ಭದಲ್ಲಿ ಜೀವಾತ್ಮ ಕ್ಷರನು, ಆತ್ಮ ಅಕ್ಷರನು ಎಂದಿದ್ದಾರೆ. ಅಂತಹದರಲ್ಲಿ ಇಲ್ಲಿಯೇನೋ ಆತ್ಮ ಸಾಯುತ್ತದೆ ಎಂದು (ಕ್ಷರನೆಂದು), ಜೀವಾತ್ಮ ಸಾಯುವುದಿಲ್ಲ ಎಂದು (ಅಕ್ಷರನೆಂದು) ಹೇಳುವುದು ಕಾಣಿಸುವ ತಪ್ಪಲ್ಲವೆ! ಎಂದು ಕೆಲವರು ಕೇಳಬಹುದು. ಅದಕ್ಕೆ ಸಮಾಧಾನ, ಒಬ್ಬ ಉದ್ಯೋಗಿ ಒಂದು ಊರಿನಲ್ಲಿ ವರ್ಗಾವಣೆಯಾಗಿ ಮತ್ತೊಂದು ಊರಿಗೆ ಹೋಗಿ ಉದ್ಯೋಗ ಸಾಗಿಸುತ್ತಿದ್ದಾನೆ ಎಂದುಕೊಳ್ಳಿ. ಹಾಗೆ ಎಷ್ಟೋ ವರ್ಗಾವಣೆಗಳು ಹೊಂದಿ ಎಷ್ಟೋ ಊರುಗಳಲ್ಲಿ ಉದ್ಯೋಗ ಮಾಡುತ್ತಿದ್ದಾನೆ. ಇಲ್ಲಿ ವರ್ಗಾವಣೆ ಆದಾಗಲೇ ಊರು ಬದಲಿಸಿದಂತೆ ಒಬ್ಬ ಜೀವಿಯು ಒಂದು ಶರೀರದಲ್ಲಿ ಕೆಲಸ ಮಾಡುತ್ತಾ ಇದ್ದು, ಶರೀರವು ಮರಣ ಹೊಂದಿದಾಗ ಆ ಶರೀರವು ಬಿಟ್ಟು ಮತ್ತೊಂದು ಶರೀರ ಸೇರುತ್ತಿದ್ದಾನೆ. ಉದ್ಯೋಗಿಗೆ ವರ್ಗಾವಣೆಯಂತದ್ದೆ ಜೀವಿಗೆ ಮರಣ. ಬದಲಾದಷ್ಟು ಮಾತ್ರಕ್ಕೆ ಉದ್ಯೋಗಸ್ತನು ಇಲ್ಲದಂತೆ ಹೋಗಲಿಲ್ಲ. ಹಾಗೆ ಮರಣಹೊಂದಿ ಶರೀರ ಬದಲಿಸಿದಷ್ಟು ಮಾತ್ರಕ್ಕೆ ಜೀವಿ ಇಲ್ಲವೆಂಬುವುದು ಸರಿಯಲ್ಲ. ಎಷ್ಟು ಊರುಗಳು ಬದಲಾಯಿಸಿದರೂ, ಕೊನೆಗೆ ರಿಟೈರ್ಡ್ ಆದ ನಂತರ ಅವನು ನಿರುದ್ಯೋಗಿಯಂತೆ ಹೇಗೆ ಹೋಗುತ್ತಾನೋ, ಹಾಗೆ ಜೀವಿಯು ಸಹ ಎಷ್ಟು ಶರೀರಗಳು ಬದಲಿಸಿದರೂ ಮೋಕ್ಷ ಹೊಂದಿದ ನಂತರವೇ ಜೀವಾತ್ಮ ಇಲ್ಲದಂತೆ ಹೋಗುತ್ತಾನೆ. ರಿಟೈರ್ಡಿನಿಂದ ಉದ್ಯೋಗಿ ಎನ್ನುವ ಹೆಸರು ಇಲ್ಲದ ಹಾಗೆ ಹೋಗುವಂತೆ, ಮೋಕ್ಷದಿಂದ ಜೀವನ ಇಲ್ಲದಂತೆ ಹೋಗಿ ಜೀವಾತ್ಮನೂ ಸಹ ಇಲ್ಲದಂತೆ ಹೋಗುತ್ತಾನೆ. **ಆದ್ದರಿಂದ ಇಲ್ಲಿ ಗ್ರಹಿಸಬೇಕಾಗಿರುವುದು ಮರಣಿಸುವುದು ಎನ್ನುವುದು ನಾಶವಲ್ಲ. ನಾಶ ಎನ್ನುವುದು ಮರಣವು ಅಲ್ಲ. ಮರಣಕ್ಕೂ, ನಾಶಕ್ಕೂ ಎಷ್ಟೋ ವ್ಯತ್ಯಾಸವಿದೆ ಎಂದು ತಿಳಿಯಬೇಕು.** ಜೀವಾತ್ಮಕ್ಕೆ ಸಾವು ಇಲ್ಲವೆಂದಿದ್ದೇವೆ, ಆದರೆ ನಾಶ ಹೊಂದುವುದಿಲ್ಲವೆಂದು ಹೇಳಲಿಲ್ಲ. ಹಾಗೆ ಆತ್ಮ ಸಾಯಲ್ಪಡುತ್ತದೆ ಎಂದಿದ್ದೇವೆ, ಆದರೆ ನಾಶ ಆಗುವವನೆಂದು ಹೇಳಲಿಲ್ಲ! ಜೀವಾತ್ಮ ಹೇಗೆ ಸಾಯುವುದಿಲ್ಲವೋ, ಆತ್ಮ ಹೇಗೆ ಸಾಯುತ್ತಿದೆಯೋ ಕೆಳಗೆ ತಿಳಿದು ಕೊಳ್ಳೋಣ.

ಒಂದು ಸಜೀವ ಶರೀರವನ್ನು ಪರಿಶೀಲಿಸಿ ನೋಡಿದರೆ ಆ ಶರೀರವು ಎಷ್ಟೋ ಭಾಗಗಳಾಗಿ ಇದೆ. ಒಂದೊಂದು ಭಾಗವು ಒಂದೊಂದು ಕೆಲಸವನ್ನು ಮಾಡುತ್ತಾ ಯಂತ್ರದಂತೆ ಸಾಗಿ ಹೋಗುತ್ತಿದೆ. ಶರೀರದಲ್ಲಿ ಎಲ್ಲಾ ಭಾಗಗಳು ಕೆಲಸ ಮಾಡುವುದಕ್ಕೆ ಶಕ್ತಿ ಅಗತ್ಯ. ಆ ಶಕ್ತಿಯನ್ನು ಕುಂಡಲಿಶಕ್ತಿ ಎಂದೂ, ಆತ್ಮಶಕ್ತಿ ಎಂದೂ ಕರೆಯುತ್ತಿದ್ದೇವೆ, ಆತ್ಮ ಶರೀರದಲ್ಲಿನ ತಲೆ ಭಾಗದಲ್ಲಿ, ಬೆನ್ನು ಮೂಳೆಯನ್ನು ಕೇಂದ್ರವಾಗಿ ಮಾಡಿಕೊಂಡು

ಶರೀರವೆಲ್ಲಾ ವ್ಯಾಪಿಸಿ ಎಲ್ಲಾ ಭಾಗಗಳಿಂದ ಕೆಲಸ ಮಾಡಿಸುತ್ತಿದೆ. ಎಲ್ಲಾ ಶರೀರ ಭಾಗಗಳ ವರೆಗೂ ಆತ್ಮ ವ್ಯಾಪಿಸಿದೆ. ಈ ವಿಧವಾಗಿ ಶರೀರಗಳಲ್ಲಿ ಆತ್ಮ ಇರುವಾಗ, ಜೀವಾತ್ಮ ಮಾತ್ರ ಶರೀರದಲ್ಲಿ ಒಂದು ಕಡೆ ಮಾತ್ರವಿದೆ. ಶರೀರದಿಂದ ತನಗೆ ಎಂತಹ ಸಂಬಂಧ ಇಲ್ಲದಿರುವುದಾಗಿ ಜೀವಾತ್ಮ ಇದೆ. ಜೀವಾತ್ಮಕ್ಕೆ ತನ್ನವರೆಗೂ ಬಂದ ಕಷ್ಟ ಸುಖಗಳನ್ನು ಅನುಭವಿಸುವ ಕೆಲಸವನ್ನು ಹೊರತು ಪಡಿಸಿ ಏನು ಇಲ್ಲ. ಆತ್ಮನಿಂದ ಕೆಲಸ ಮಾಡುತ್ತಿರುವ ಕಣ್ಣು ಕಳಿಸಿದ ಸಮಾಚಾರವನ್ನು ಬುದ್ಧಿ ಮೂಲಕ ಜೀವಾತ್ಮ ಅನುಭವಿಸುತ್ತಾ ಆ ದೃಶ್ಯದಲ್ಲಿನ ಆನಂದವನ್ನೋ, ಕಷ್ಟವನ್ನೋ ಅನುಭೂತಿ ಹೊಂದುತ್ತಿದ್ದಾನೆ. ಹಾಗೆ ಜ್ಞಾನೇಂದ್ರಿಯಗಳಾದ ಮೂಗು, ಕಿವಿಗಳು, ನಾಲಿಗೆ, ಚರ್ಮಗಳಿಂದ ಮನಸ್ಸು ಕಳಿಸುವ ವಿಷಯಗಳನ್ನು ಬುದ್ಧಿ ಮೂಲಕ ಮಾತ್ರವೇ ಜೀವಾತ್ಮ ಅನುಭವಿಸುತ್ತಿದ್ದಾನೆ. ಹೊರಗಿನ ಜ್ಞಾನೇಂದ್ರಿಯಗಳಿಗು ಒಳಗಿನ ಜೀವಿಗು ಮಧ್ಯವರ್ತಿಯಾಗಿ ಮನಸ್ಸು ಇದೆ. ಮಧ್ಯದಲ್ಲಿರುವ ಮನಸ್ಸು ಇಲ್ಲದಿದ್ದರೂ, ಕೆಲಸ ಮಾಡದೆ ಹೋದರೂ ಜೀವಾತ್ಮ ಕತ್ತಲಕೋಣೆಯಲ್ಲಿ ಇದ್ದಂತಾಗುತ್ತದೆ. ಹೊರಗಿನ ಪ್ರಪಂಚ ವಿಷಯವೇನು ತಿಳಿಯುವುದಿಲ್ಲ. ಹಾಗೆ ಹೊರಗಿನ ಜ್ಞಾನೇಂದ್ರಿಯವು ಯಾವುದೊಂದು ಇಲ್ಲದಿದ್ದರೂ ಅದರ ವಿಷಯ ಜೀವಿಗೆ ತಿಳಿಯದಂತೆ ಹೋಗುತ್ತದೆ. ಕಣ್ಣುಗಳಿಲ್ಲದ ಶರೀರದಲ್ಲಿರುವ ಜೀವಾತ್ಮನು ದೃಶ್ಯಗಳ ಸುಖವನ್ನಾಗಲಿ, ಕಷ್ಟವನ್ನಾಗಲಿ ಅನುಭವಿಸುವುದಿಲ್ಲ.

ಶರೀರದಲ್ಲಿ ಹೊರಗಿನ ಜ್ಞಾನೇಂದ್ರಿಯಗಳು ಕೆಲಸ ಮಾಡಬೇಕೆಂದರೂ, ಅಥವಾ ಒಳಗಿನ ಮನಸ್ಸು ಕೆಲಸ ಮಾಡಬೇಕೆಂದರೂ ಎಲ್ಲದಕ್ಕೂ ಆತ್ಮವೇ ಕಾರಣ. ಶರೀರದಲ್ಲಿನ ತಲೆ ಮಧ್ಯದಲ್ಲಿರುವ ಜೀವಾತ್ಮಕ್ಕೂ ಶರೀರಕ್ಕೂ ಯಾವ ಸಂಬಂಧವಿಲ್ಲವೆಂದು, ಆತ್ಮದಿಂದ ಕೆಲಸ ಮಾಡುವ ಶರೀರ ಭಾಗಗಳಿಂದಲೇ ಜೀವಿಗೆ ಎಲ್ಲಾ ತಿಳಿಯಬೇಕೆಂದು, ಹಾಗೆ ತಿಳಿಯದೆ ಹೋದರೆ ಜೀವಾತ್ಮ ಕತ್ತಲ ಕೋಣೆಯಲ್ಲಿ ಇರುವವನಿಗೆ ಸಮಾನವೆಂದು ಕೊಳ್ಳಬೇಕು. ಉದಾಹರಣೆಗೆ ಒಂದು ಬಾವಿ ಹತ್ತಿರ ನೀರು ತುಂಬಿ ಕಾಲುವೆಯಲ್ಲಿ ಒಯ್ಯುವವನಿರುವಾಗ, ಕಾಲುವೆಯ ಮೂಲಕ ಬರುವ ನೀರನ್ನು ಸ್ವಲ್ಪ ದೂರದಲ್ಲಿ ದಿನ್ನೆಯಮೇಲೆ ಕುಳಿತುಕೊಂಡು ಕುಡಿಯುವವನು ಮತ್ತೊಬ್ಬನಿದ್ದಾನೆಂದುಕೊಳ್ಳೋಣ. ತನ್ನ ಶಕ್ತಿಯನ್ನು ಉಪಯೋಗಿಸಿ ಬಾವಿಯಿಂದ ನೀರು ತುಂಬಿ ಒಯ್ಯುತ್ತಿರುವಾಗ, ಅಲ್ಲಿಂದ ಬಂದಿರುವ ನೀರು ಸಿಹಿಯಾದವಾಗಲಿ, ಉಪ್ಪುನೀರಾಗಲಿ, ಕುಡಿಯುವವನು ದೂರವಾಗಿ ಕುಳಿತುಕೊಂಡವನು. ಆ ನೀರಿನಲ್ಲಿನ ಉಪ್ಪನ್ನಾಗಲಿ, ಸಿಹಿಯನ್ನಾಗಲಿ ಅನುಭವಿಸುವವನು ಹೊಲದಲ್ಲಿ ದಿನ್ನೆಯ ಮೇಲೆ ಕುಳಿತುಕೊಂಡವನು ಆ ನೀರಿನಲ್ಲಿನ

ಉಪ್ಪನ್ನಾಗಲಿ, ಸಿಹಿಯನ್ನಾಗಲಿ ನೀರು ಒಯ್ಯುವವನು ಅನುಭವಿಸುವುದಿಲ್ಲ. ನೀರು ಒಯ್ಯುವವನದು ಶಕ್ತಿ ಮಾತ್ರವೇ. ಅನುಭವಿಸುವವವನು ಹೊಲದಲ್ಲಿ ಇರುವವನು. ಇದೇ ವಿಧವಾಗಿ ಪ್ರಪಂಚವೆಂಬ ಬಾವಿಯಿಂದ ತನ್ನ ಶಕ್ತಿಯಿಂದ ಶರೀರೇಂದ್ರಿಯಗಳ ಮೂಲಕ ಕಷ್ಟಸುಖಗಳೆಂಬುವ ನೀರನ್ನು ಒದಗಿಸುವವನು ಆತ್ಮವಾದಾಗ, ಹೊಲದಲ್ಲಿ ಕುಳಿತುಕೊಂಡು ನೀರು ಕುಡಿಯುವವನಾಗಿ ಶರೀರದಲ್ಲಿ ಎಲ್ಲಿಯೋ ಒಳಗೆ ಕುಳಿತುಕೊಂಡ ಜೀವಾತ್ಮ ಇದ್ದಾನೆ. ಬಾವಿಯಿಂದ ನೀರು ಒಯ್ಯುವ ಪರಿಕರಗಳು ಇಲ್ಲದಿದ್ದರೂ ಅಥವಾ ತನ್ನವರೆಗೂ ಬರುವ ಕಾಲುವೆ ಇಲ್ಲದಿದ್ದರೂ ಕುಡಿಯುವವನಿಗೆ ನೀರು ಸಿಗುವುದಿಲ್ಲ. ಹಾಗೇ ಇಲ್ಲಿ ಶರೀರ ಭಾಗಗಳಾದ ಜ್ಞಾನೇಂದ್ರಿಯಗಳೆನ್ನುವ ನೀರನ್ನು ಪರಿಕರಗಳಾಗಿ, ಕಾಲುವೆಯನ್ನು ಮನಸ್ಸಿಗೆ ಹೋಲಿಸಿಕೊಳ್ಳಬೇಕು. ಬುದ್ಧಿಯನ್ನು ನೀರನ್ನು ಒದಗಿಸುವ ಪಾತ್ರೆಯಾಗಿ ಹೋಲಿಸಿಕೊಳ್ಳಬೇಕು. ಜ್ಞಾನೇಂದ್ರಿಯಗಳಾಗಲಿ, ಮನಸ್ಸಾಗಲಿ, ಯಾವು ದೊಂದು ಕೆಲಸ ಮಾಡದಿದ್ದರೂ ಜೀವಾತ್ಮನಿಗೆ ಸಮಾಚಾರ ಸೇರುವುದಿಲ್ಲ.

ಇಲ್ಲಿ ವಿಧಿವಶಾತ್ತು ಬಾವಿಯಲ್ಲಿಬಿದ್ದು ಮರಣಿಸುವ ಅವಕಾಶ ನೀರು ತುಂಬುವವನಿಗೆ ಇದೆ, ಆದರೆ ದೂರವಾಗಿ ಹೊಲದಲ್ಲಿ ಕುಳಿತುಕೊಂಡವನಿಗೆ ಯಾವ ಅಪಾಯ ಇಲ್ಲ. ಹಾಗೆ ವಿಧಿವಶಾತ್ತು ಹತ್ಯೆ ನಡೆದಪಕ್ಷದಲ್ಲಿ ಮರಣಿಸುವ ಅವಕಾಶ ಹೊರಗಿನವರೆಗೂ ಇರುವ ಆತ್ಮಕ್ಕೆ ಇದೆ, ಆದರೆ ಒಳಗಿರುವ ಜೀವಾತ್ಮಕ್ಕೆ ಇಲ್ಲ. ಹೀಗೆ ಹತ್ಯೆ ಸಮಯದಲ್ಲಿ ಜೀವಾತ್ಮಕ್ಕೆ ಮರಣವಿಲ್ಲವೆಂದು, ಆತ್ಮಕ್ಕೆ ಮರಣ ಇದೆಯೆಂದು ತಿಳಿಯಬೇಕು. ಒಂದುವೇಳೆ ಆತ್ಮಸಾಯುವುದಿಲ್ಲ ಜೀವಾತ್ಮವೇ ಸಾಯುತ್ತಿದೆ ಎಂದು ಯಾರಾದರೂ ಅಂದರು, ಬಾವಿ ಹತ್ತಿರ ನೀರು ತುಂಬುವವನು ಬಾವಿಯಲ್ಲಿ ಬೀಳಲಿಲ್ಲ, ಹೊಲದಲ್ಲಿರುವವನು ಬಿದ್ದಂತೆ ಎನ್ನುವ ಹಾಗೆ ಇರುತ್ತದೆ. ಆತ್ಮ ಜೀವಾತ್ಮಗಳ ಹತ್ಯೆ, ಆತ್ಮಹತ್ಯೆಗಳನ್ನು ಕುರಿತು ಕೆಳಗೆ ವಿವರವಾಗಿ ತಿಳಿದುಕೊಳ್ಳೋಣ.

ಒಂದು ಜೈಲಿನಲ್ಲಿ ಶಿಕ್ಷೆ ಹಾಕಿದ ಖೈದಿಗೆ ಒಬ್ಬ ಕಾವಲುಗಾರನಿದ್ದು, ಆ ಖೈದಿ ಎಲ್ಲಿಗೂ ಓಡಿಹೋಗದಂತೆ ಅವನ ಕೈಯಿಗೆ ಹಾಕಿರುವ ಬೇಡಿಗಳ ಚೈನನ್ನು ತನ್ನ ಸೊಂಟಕ್ಕೆ ಕಟ್ಟಿಕೊಂಡಿದ್ದಾನೆ ಎಂದುಕೊಳ್ಳಿ. ಹಾಗೆ ಕಟ್ಟಿಕೊಳ್ಳುವುದರಿಂದ ಖೈದಿ ಎಲ್ಲಿಗೆ ಹೋದರು ಕಾವಲುಗಾರನೂ ಸಹ ಅವನ ಹಿಂದೆ ಹೋಗಬೇಕಾಗಿದೆ. ಒಂದುವೇಳೆ ಕಾವಲುಗಾರನು ಹೋಗಬೇಕಾಗಿ ಬಂದರೆ ಅವನ ಹಿಂದೆ ಖೈದಿಯೂ ಸಹ ಹೋಗಬೇಕಾ ಗುತ್ತದೆ. ಖೈದಿಯನ್ನು ಇನ್ನೊಂದು ಜೈಲಿಗೆ ಬದಲಿಸಿದ ಪಕ್ಷದಲ್ಲಿ ಅವನೊಂದಿಗೆ ಕಾವಲುಗಾ

ರನೂ ಸಹ ಆ ಜೈಲಿಗೆ ಹೋಗಬೇಕಾಗುತ್ತದೆ. ಖೈದಿಗೆ ಕಾವಲುಗಾರನನ್ನು ಶಾಶ್ವತವಾಗಿ ನಿರ್ಣಯಿಸಿರುವುದರಿಂದ, ಖೈದಿ ಯಾವ ಜೈಲಿಗೆ ಹೋದರು ತಪ್ಪದೇ ಅವನ ರಿಕಾರ್ಡ್‌ಗಳೊಂದಿಗೆ ಕಾವಲುಗಾರನೂ ಸಹ ಹೋಗಬೇಕಾಗುತ್ತದೆ. ಶಿಕ್ಷೆಯ ಪ್ರಕಾರ ಖೈದಿಗೆ ಆಹಾರ ಮೊದಲಾದವು ಕೊಡುತ್ತಾ, ಅವನಿಂದ ಏನು ಕೆಲಸ ಮಾಡಿಸಬೇಕೋ ಆ ಕೆಲಸಗಳನ್ನೇ ಕಷ್ಟವಾದವುಗಳಾಗಲಿ, ಸುಖವಾದವುಗಳಾಗಲಿ ಮಾಡಿಸುತ್ತಾ, ಅವನು ಮಾಡುವ ಎಲ್ಲಾ ಕೆಲಸಗಳಿಗೆ ಕಾವಲುಗಾರನು ಪ್ರತ್ಯಕ್ಷ ಸಾಕ್ಷಿಯಾಗಿರುತ್ತಾನೆ. ಜೈಲಿನಲ್ಲಿ ಖೈದಿಗೆ ಕಾವಲುಗಾರನು ಇದ್ದಂತೆ, ಒಂದು ಶರೀರವೆಂಬ ಜೈಲಿನಲ್ಲಿ ಖೈದಿಯಾಗಿ ಜೀವಾತ್ಮ ಇರುವಾಗ, ಕಾವಲುಗಾರನಾಗಿ ಆತ್ಮ ಇದ್ದು ಅವನಿಗೆ ಸಾಕ್ಷಿಯಾಗಿಯೂ ಸಹ ಇದ್ದು ಅವನಿಂದ ಕೆಲಸಗಳು ಅನುಭವಿಸುವಂತೆ ಮಾಡುತ್ತಿದೆ. ಒಂದು ಶರೀರ ಬಿಟ್ಟು ಹೋಗುವಾಗ ಜೀವಾತ್ಮದೊಂದಿಗೆ ಅವನ ಕರ್ಮವೆಂಬ ರಿಕಾರ್ಡ್‌ನ್ನು ತೆಗೆದುಕೊಂಡು ಮತ್ತೊಂದು ಶರೀರಕ್ಕೆ ಆತ್ಮ ಹೋಗುತ್ತಿದೆ.

ಶರೀರವು ಜೈಲಿನಂತದ್ದು, ಅದರಲ್ಲಿರುವ ಜೀವಾತ್ಮವೆಂಬ ಖೈದಿ ಮೊದಲು ಮಾಡಿರುವ ತಪ್ಪುಗಳಿಗೆ ಶಿಕ್ಷೆಯನ್ನು ಅನುಭವಿಸುತ್ತಾ ಆ ಜೈಲಿನಲ್ಲಿಯೇ ಮತ್ತೆ ಹೊಸ ತಪ್ಪುಗಳು ಮಾಡಿದ್ದಾನೆಂದುಕೊಳ್ಳೋಣ, ಅವನ ರಿಕಾರ್ಡಿನಲ್ಲಿ ಹೊಸ ತಪ್ಪುಗಳು ರಿಕಾರ್ಡ್‌ಮಾಡಿ ಶಿಕ್ಷೆಯನ್ನು ಹೆಚ್ಚಿಸುತ್ತಾರೆ. ಹಾಗೆ ಒಂದು ಶರೀರದಲ್ಲಿ ಕರ್ಮವನ್ನು ಅನುಭವಿಸುವ ಜೀವಾತ್ಮ ಅದೇ ಶರೀರದಲ್ಲಿ ಹೊಸ ಕರ್ಮವನ್ನು ಸಂಪಾದಿಸಿಕೊಂಡರು, ಮತ್ತೆ ಹೊಸ ಶರೀರವೆಂಬ ಜೈಲಿಗೆಹೋಗಿ ಶಿಕ್ಷೆ ಅನುಭವಿಸಬೇಕಾಗುತ್ತದೆ. ಜೀವಾತ್ಮ ಹಳೆ ಕರ್ಮವನ್ನು ಅನುಭವಿಸುತ್ತಾ ಹೊಸ ಕರ್ಮವನ್ನು ಸಂಪಾದಿಸಿಕೊಳ್ಳುವುದರಿಂದ, ಶರೀರಗಳೆಂಬ ಜೈಲುಗಳನ್ನು ಖೈದಿ ಎನ್ನುವ ಜೀವಾತ್ಮ ಬದಲಾಗುತ್ತಲೇ ಇದ್ದಾನೆ. ಅವನೊಂದಿಗೆ ಕಾವಲುಗಾರನಾದ ಆತ್ಮವೂ ಸಹ ಬದಲಾಯಿಸುತ್ತಲೇ ಇದೆ. ಈ ವಿಧವಾಗಿ ಜೈಲು ಬದಲಾವಣೆಯನ್ನು ಮರಣ ಎನ್ನುತ್ತೇವೆ. ಒಂದು ಶರೀರದಲ್ಲಿ ಅನುಭವಿಸಬೇಕಾದ ಕರ್ಮವನ್ನು ಪೂರ್ತಿಯಾಗಿ ಅನುಭವಿಸಿ ಇನ್ನೊಂದು ಶರೀರಕ್ಕೆ ಹೋಗುವುದು ಮರಣವಾದರೆ, ಒಂದು ಶರೀರದಲ್ಲಿ ಅನುಭವಿಸಬೇಕಾದ ಕರ್ಮವನ್ನು ಪೂರ್ತಿಯಾಗಿ ಅನುಭವಿಸದ ಮೊದಲೆ ಆ ಶರೀರವನ್ನು ಬಿಟ್ಟು ಹೋಗುವುದನ್ನು **'ಅಕಾಲ ಮರಣ'** ಎನ್ನುತ್ತೇವೆ. ಈ ಅಕಾಲಮರಣವು ಎರಡು ವಿಧಗಳಾಗಿದೆ. ಒಂದು ಹತ್ಯೆ, ಎರಡನೆಯದು

**ಆತ್ಮಹತ್ಯೆ. ಅನುಭವಿಸಬೇಕಾದ ಪ್ರಾರಬ್ಧಕರ್ಮವನ್ನು ಶರೀರದಲ್ಲಿ ಅನುಭವಿಸದ ಮೊದಲೇ ಆ ಶರೀರವನ್ನು ಜೀವಾತ್ಮ ಬಿಟ್ಟುಹೋಗುವುದನ್ನು ಹತ್ಯೆ ಎನ್ನುತ್ತೇವೆ. ಹಾಗೆ ಒಂದು ಶರೀರದಲ್ಲಿ ಅನುಭವಿಸಬೇಕಾದ ಪ್ರಾರಬ್ಧವನ್ನು ಅನುಭವಿಸದೆ ಮೊದಲೇ ಆತ್ಮ ಆ ಶರೀರವನ್ನು ಬಿಟ್ಟುಹೋದರೆ ಅದನ್ನು ಆತ್ಮಹತ್ಯೆ ಎನ್ನುತ್ತೇವೆ. ಇಲ್ಲಿ ಗಮನಿಸಬೇಕಾದ ವಿಷಯ ಏನೆಂದರೆ! ಜೀವಾತ್ಮ ಆತ್ಮಗಳಲ್ಲಿ ಯಾವುದು ಮೊದಲುಹೊರಡುತ್ತಿದೆಯೋ ಅದನ್ನನುಸರಿಸಿ ಹತ್ಯೆನಾ, ಆತ್ಮಹತ್ಯೆನಾ ಎಂದು ನಿರ್ಣಯಿಸುವುದು ನಡೆಯುತ್ತಿದೆ.**

ಮೂರು ಆತ್ಮಗಳಲ್ಲಿ ಮೊದಲನೆಯದಾದ ಜೀವಾತ್ಮವನ್ನು ಭಗವದ್ಗೀತೆಯಲ್ಲಿ ಕ್ಷರನೆಂದಿದ್ದೇವೆ. **'ಕ್ಷರನು'** ಎಂದರೆ ನಾಶವಾಗುವವನೆಂದು ಅರ್ಥ. ಶರೀರವು ನಾಶವಾದರೂ ಜೀವಾತ್ಮ ನಾಶವಾಗುವುದಿಲ್ಲವೆಂದೂ ಸಹ ಇದೇ ಗೀತೆಯಲ್ಲಿಯೇ ಹೇಳಿಕೊಂಡಿದ್ದೇವೆ. ಒಂದು ಕಡೆ ನಾಶ ಆಗುವವನೆಂದು ಇನ್ನೊಂದು ಕಡೆ ನಾಶ ಇಲ್ಲದವನೆಂದು ಎನ್ನುವುದು ವಿಚಿತ್ರವಾದರೂ ಎರಡು ವಾಸ್ತವವೆಂದು ತಿಳಿಯಬೇಕು. ಸಂದರ್ಭಾನುಸಾರ ಹೇಳುವುದರಲ್ಲಿ ಹಾಗೆ ಹೇಳಬೇಕಾಗಿ ಬಂದಿದೆ. ಶರೀರ ನಾಶವಾದಾಗ ಜೀವಾತ್ಮ ನಾಶವಾಗದ ಮಾತು ನಿಜವೇ. ಎಷ್ಟು ಶರೀರಗಳು ಬದಲಾಯಿಸಿದರು ಜೀವಾತ್ಮ ನಾಶವಾಗುವವನು ಅಲ್ಲ, ಇಲ್ಲಿ ನಾಶವಾಗದ ಮಾತು ನಿಜವೇ ಆದರೂ ಜೀವಾತ್ಮ ಕ್ಷರನೇ, ನಾಶವಾಗುವವನೇ. ಅದು ಹೇಗೆ ಎಂದರೆ! ಜೀವಾತ್ಮ ಕರ್ಮಗಳಿಂದ ಹೊರಬೀಳುವಾಗ ಮತ್ತೆ ಹುಟ್ಟಬೇಕಾಗಿರುವುದು ಇಲ್ಲ. ಪರಮಾತ್ಮನಾಗಿ ಬದಲಾದಾಗ ಇನ್ನು ಜೀವಾತ್ಮ ಇಲ್ಲ. ಆಗ ಜೀವಾತ್ಮ ನಾಶವಾಗಿದ್ದಾನೆಂದು ಹೇಳಬಹುದು. ಅಲ್ಲಿಯವರೆಗೂ ಶರೀರಕ್ಕೆ ಹೊರತು ಜೀವಾತ್ಮಕ್ಕೆ ನಾಶವಿಲ್ಲ ಎಂದ ನಾವೇ, ಈಗ ಜೀವಾತ್ಮಕ್ಕೆ ನಾಶವಿದೆ ಎಂದು ಒಪ್ಪಿಕೊಳ್ಳದೆ ತಪ್ಪುವುದಿಲ್ಲ. ಹಾಗೆ ಆತ್ಮವನ್ನು ಅಕ್ಷರನೆಂದು ಗೀತೆಯಲ್ಲಿ ಹೇಳಿದ್ದೇವೆ. ಅಕ್ಷರನೆಂದರೆ ನಾಶ ಇಲ್ಲದವನೆಂದು ಅರ್ಥ. ಕ್ಷರನಾದ ಜೀವಾತ್ಮನನ್ನು ಎಂದರೆ ನಾಶ ಇರುವವನನ್ನು ನಾಶವಿಲ್ಲದ ಆತ್ಮವನ್ನೂ ಸಹ ಮರಣ ಇರುವವನೆಂದು ಸಂದರ್ಭಾನುಸಾರವಾಗಿ ಹೇಳಬೇಕಾಗಿ ಬಂದಿದೆ. ಹತ್ಯೆ, ಆತ್ಮಹತ್ಯೆ ಎನ್ನುವುದರಲ್ಲಿ ಆತ್ಮಹತ್ಯೆಯೊಂದರ ಅರ್ಥ ಆತ್ಮ ಸಾಯಲ್ಪಡುತ್ತಿದೆಯೆಂದು. ಆ ವಿಷಯ ಅರ್ಥ ಆಗಬೇಕೆಂದರೆ ಹಾಗೆ ಹೇಳದೆ ತಪ್ಪುವುದಿಲ್ಲ. ಇದನ್ನು ಯಾರು ಅಪಾರ್ಥಮಾಡಿಕೊಳ್ಳಬಾರದು. ಮೇಲಿನ ಶ್ಲೋಕದಲ್ಲಿ ***'ಹಂತಿನ ಹನ್ಯತೇ'*** ಎಂಬ ಮಾತು ಬಂದಿದೆಯಾದ್ದರಿಂದ ಹತ್ಯೆಯನ್ನು ಕುರಿತು ಪೂರ್ತಿ ವಿವರ ಇಲ್ಲಿ ಕೊಡಬೇಕಾಗಿ ಬಂದಿದೆ. ಹತ್ಯೆ, ಆತ್ಮಹತ್ಯೆಗಳ ವಿವರವನ್ನು ಕೆಳಗೆ ನೋಡೋಣ.

ಹತ್ಯೆ ಎಂದರೆ ಇತರರಿಂದ ಸಾಯಲ್ಪಡುವುದೆಂದು, ಆತ್ಮಹತ್ಯೆ ಎಂದರೆ ತನ್ನ ತಾನೇ ಸಾಯಿಸಿಕೊಳ್ಳುವುದೆಂದು ಈ ದಿನ ಎಲ್ಲರಿಗೂ ತಿಳಿದ ವಿಷಯವೇ ಅಲ್ಲವೆ! ಎಂದು ತಿಳಿದುಕೊಳ್ಳಬೇಡಿ. ಇಲ್ಲಿ ಧರ್ಮವು ಅಧರ್ಮವಾಗಿ ಬದಲಾಗಿದೆ. ಧರ್ಮದ ಸ್ಥಾನದಲ್ಲಿ ಅಧರ್ಮವು, ಅಧರ್ಮದ ಸ್ಥಾನದಲ್ಲಿ ಧರ್ಮವು ನಿಂತಿದೆ. ಆದ್ದರಿಂದ ಈ ವಿಷಯದಲ್ಲಿ ಧರ್ಮಯಾವುದೋ, ಅಧರ್ಮಯಾವುದೋ ವಿವರವಾಗಿ ತಿಳಿದುಕೊಳ್ಳೋಣ.

ಜೀವಿಗಳಿಗೆ ಮರಣ ಎರಡು ವಿಧಗಳಾಗಿ ಇದೆ. ಒಂದು ಕಾಲಮರಣ, ಎರಡನೆಯದು ಅಕಾಲಮರಣ. ಹತ್ಯೆ, ಆತ್ಮಹತ್ಯೆಗಳು ಎರಡು ಅಕಾಲಮರಣಕ್ಕೆ ಸೇರಿರುವವು. ಕಾಲಮರಣವನ್ನು ಕುರಿತು ನಮ್ಮ ರಚನೆಯಲ್ಲಿನ **'ಜನನ ಮರಣ ಸಿದ್ಧಾಂತ'** ಎನ್ನುವ ಪುಸ್ತಕದಲ್ಲಿ ವಿವರವಾಗಿ ತಿಳಿಸಲಾಗಿದೆ. ಜೀವಾತ್ಮ ಕರ್ಮದ ಪ್ರಕಾರ ಶರೀರದಲ್ಲಿ ವಾಸವಿದ್ದು ಕಷ್ಟಸುಖಗಳನ್ನು ಅನುಭವಿಸುತ್ತಿದ್ದಾನೆ. ಶರೀರದಲ್ಲಿ ಜೀವಾತ್ಮದ ಕೆಲಸ ಕಷ್ಟಸುಖಗಳನ್ನು ಅನುಭವಿಸುವುದು ಮಾತ್ರವೇ ಎಂದು ತಿಳಿಯಬೇಕು. ಜೀವಾತ್ಮ ಕಷ್ಟಸುಖಗಳನ್ನು ಅನುಭವಿಸುವುದಕ್ಕೆ ತಕ್ಕ ಕಾರ್ಯಗಳು ಮಾಡುವುದಕ್ಕೆ ಶರೀರವನ್ನು ಕದಲಿಸುತ್ತಿರುವುದು ಆತ್ಮವೆಂದು ತಿಳಿಯಬೇಕು. ಆತ್ಮ ಚೈತನ್ಯದಿಂದ ಶರೀರವನ್ನು ಕದಲಿಸುತ್ತಿರುವಾಗ ಏರ್ಪಡುವ ಸುಖದುಃಖಗಳನ್ನು ಜೀವಾತ್ಮ ಒಳಗಿನಿಂದ ಅನುಭವಿಸುತ್ತಿದ್ದಾನೆ. ಇದರಿಂದ ಜೀವಿಗೆ ಶರೀರವನ್ನು ಕದಲಿಸುವ ಶಕ್ತಿ ಇಲ್ಲ. ಕೇವಲ ಒಂದು ಆತ್ಮಕ್ಕೆ ಆ ಶಕ್ತಿ ಇದೆಯೆಂದು ತಿಳಿಯುತ್ತಿದೆ. ಆತ್ಮವೊಂದರ ಚೈತನ್ಯಶಕ್ತಿ ಶರೀರದಲ್ಲಿನ ಸಕಲ ಅವಯವಗಳನ್ನು ಕರ್ಮದ ಪ್ರಕಾರ ಕದಲಿಸುತ್ತಾ, ಜೀವರಾಶಿಗಳನ್ನು ಪ್ರಪಂಚದಲ್ಲಿ ಕದಲುವಂತೆ ಮಾಡುತ್ತಿರುವಾಗ, ನನ್ನಿಂದಲೇ ಶರೀರವು ಕದಲುತ್ತಿದೆ ಎಂದು ಜೀವಾತ್ಮ ಭ್ರಮಿಸುತ್ತಿದ್ದಾನೆ. ಅಜ್ಞಾನದಿಂದ ಆತ್ಮ ಎಂದರೆ ಏನೆಂದು, ಅದರ ಕೆಲಸ ಏನೆಂದು ತಿಳಿಯದೆ ಜೀವಾತ್ಮ ತಾನೇ ಎಲ್ಲಾ ಕೆಲಸಗಳಿಗೆ ಕಾರಣ ಎಂದುಕೊಳ್ಳುವುದು ಸಹಜವಾಗಿದೆ. ವಾಸ್ತವಕ್ಕೆ ಜೀವಾತ್ಮ ಬೇರೆ, ಆತ್ಮಬೇರೆ. ಕರ್ಮರೀತ್ಯಾ ನಡೆಯಬೇಕಾದ ಕೆಲಸಗಳೆಲ್ಲವನ್ನು ಆತ್ಮವೇ ಶರೀರದಿಂದ ಮಾಡಿಸುತ್ತಿದೆ.

ಈಗ ಮೂಲ ವಿಷಯಕ್ಕೆ ಬರೋಣ. ಸಜೀವವಾದ ಶರೀರದಲ್ಲಿ ಆತ್ಮ ಜೀವಾತ್ಮ ಎನ್ನುವ ಎರಡು ಆತ್ಮಗಳಿವೆ. ಇದು ಎಲ್ಲಾ ಶರೀರಗಳಿಗೆ ಅನ್ವಯಿಸುವ ವಿಷಯ. ಉದಾಹರಣೆಗೆ ಹಲ್ಲಿಯ ಶರೀರವನ್ನು ತೆಗೆದುಕೊಳ್ಳೋಣ. ಅದರಲ್ಲಿಯೂ ಎರಡು ಆತ್ಮಗಳು ಇವೆ, ಹಲ್ಲಿಯ ಶರೀರವು ಗೋಡೆ ಮೇಲೆ ಕದಲುವುದಕ್ಕೆ ಅದರಲ್ಲಿನ ಆತ್ಮವೇ ಕಾರಣ. ಅದು ಕದಲುತ್ತಾ ಹೋಗುತ್ತಿರುವಾಗ ಹಿಡಿತ ತಪ್ಪಿ ಕಾಲುಜಾರಿ ಕೆಳಗೆ ಬಿದ್ದಿದೆ.

ಆಗ ಅದರ ಕೊನೆಬಾಲ ತುಂಡಾಗಿದೆ. ಹಲ್ಲಿ ಪೂರ್ತಿಶರೀರವೆಲ್ಲಾ ಒಂದು ಭಾಗವಾಗಿ, ಕೊನೆಯ ಸ್ವಲ್ಪ ಬಾಲ ಮಾತ್ರ ಇನ್ನೊಂದು ಭಾಗವಾಗಿ ತುಂಡಾಗಿದೆ. ಹಲ್ಲಿಯ ಪೂರ್ತಿ ಶರೀರವೆಲ್ಲವೂ ಸಹಜವಾಗಿಯೆ ಇದೆ. ಆದ ಕಾರಣ ಅದು ತಕ್ಷಣ ಮತ್ತೆ ಗೋಡೆ ಮೇಲೆ ಅರಿದಾಡುತ್ತ ಹೋಗಿದೆ, ಆದರೆ ಕೆಳಗೆ ಕತ್ತರಿಸಿದ ಬಾಲ ಒಂದು ನಿಮಿಷದ ಕಾಲ ಡೊಂಕುಗಳು ತಿರುಗುತ್ತಾ ಎಗರೆಗರಿ ಬೀಳುತ್ತಿರುತ್ತದೆ. ಈ ಘಟನೆ ಬಹಳ ಜನರು ನೋಡಿಯೇ ಇರುತ್ತಾರೆ. ತುಂಡಾದ ಬಾಲದವರೆಗೂ ವ್ಯಾಪಿಸಿರುವ ಆತ್ಮಚೈತನ್ಯವು ಬಾಲ ತುಂಡಾದಾಗ ಅದರಲ್ಲಿ ಸ್ವಲ್ಪ ಉಳಿದುಹೋಗಿದೆ. ಆ ಸ್ವಲ್ಪಶಕ್ತಿಯಿಂದ ಬಾಲ ಎಗರಿಬೀಳುತ್ತಾ ಕದಲಿದೆ. ಆ ಶಕ್ತಿ ಮುಗಿದುಹೋದ ಕೂಡಲೇ ಅದು ನಿಂತುಹೋಗಿ ಚಲನೆ ಇಲ್ಲದ್ದಾಗಿದೆ. ಹಲ್ಲಿಯ ಶರೀರದಲ್ಲಿ ಉಳಿದ ಮುಖ್ಯವಾದ ಭಾಗಗಳೆಲ್ಲವು ಇವೆ. ಆದ್ದರಿಂದ ಅದರಲ್ಲಿ ಆತ್ಮ ನಿವಾಸಕ್ಕೆ ಯೋಗ್ಯವಾಗಿರುವುದರಿಂದ, ಹಲ್ಲಿಯ ಶರೀರವು ಕದಲುತ್ತಾ ಬದುಕಿದೆ. ಶರೀರವೆಲ್ಲಾ ವ್ಯಾಪಿಸಿದ ಆತ್ಮ ಸ್ವಲ್ಪ ಖಂಡಿಸಲ್ಪಟ್ಟಿದೆಯೆಂದು ಈ ಘಟನೆಯ ಮೂಲಕ ತಿಳಿಯುತ್ತಿದೆ.

ಕೋಳಿ ಶರೀರದಿಂದ ಅದರ ತಲೆಯನ್ನು ಬೇರೆ ಮಾಡಿದಾಗ ಆ ಕೋಳಿ ಶರೀರವು ಸ್ವಲ್ಪ ಸಮಯ ಹೊದ್ದಾಡುವುದೂ ಸಹ ಎಲ್ಲರಿಗೂ ತಿಳಿದ ವಿಷಯವೇ. ಇಲ್ಲಿ ಶರೀರದಲ್ಲಿನ ಮುಖ್ಯವಾದ ಭಾಗಗಳು ಎಲ್ಲವನ್ನು ತಲೆಯಿಂದ ಬೇರೆ ಮಾಡುವುದರಲ್ಲಿ ತಲೆಯಲ್ಲಿ ಆತ್ಮ ಒಂದು ಭಾಗವಾಗಿ, ಶರೀರವೆಲ್ಲಾ ವ್ಯಾಪಿಸಿದ ಆತ್ಮ ಒಂದು ಭಾಗವಾಗಿ ಖಂಡಿಸಲ್ಪಟ್ಟಿವೆ. ತಲೆಯಲ್ಲಿನ ಕರ್ಮ ಸಂಪರ್ಕ ಮತ್ತು ಆತ್ಮಚೈತನ್ಯ ಪ್ರಸಾರ ನಿಂತುಹೋಗುವುದರಿಂದ ಆ ಶರೀರ ಮೃತ್ಯು ಹೊಂದಿದೆ. ಶರೀರ ಇಲ್ಲದಿರುವುದರಿಂದ ತಲೆಭಾಗದಲ್ಲಿನ ಆತ್ಮ ಜೀವಾತ್ಮಗಳು ಆ ಭಾಗವನ್ನೂ ಸಹ ಬಿಟ್ಟುಹೋಗುತ್ತಿವೆ. ಈ ಘಟನೆಯಲ್ಲಿ ಆತ್ಮ ಎರಡು ಭಾಗಗಳಾಗಿ ಖಂಡಿಸಲ್ಪಟ್ಟಿದೆ ಎಂದು ತಿಳಿಯುತ್ತಿದೆ. ಆಶ್ಚರ್ಯವಾಗಿದೆ ಅಲ್ಲವೆ! **ಆತ್ಮ ಆಯುಧಗಳಿಂದ ಖಂಡಿಸಲ್ಪಡುವುದಿಲ್ಲ, ನೀರಿಗೆ ತೋಯುವುದಿಲ್ಲ, ಅಗ್ನಿಗೆ ಸುಡುವುದಿಲ್ಲ ಎಂದು ಭಗವದ್ಗೀತೆಯಲ್ಲಿ ಹೇಳಿದಾಗ "ಈತನಿಗೇನು ಹುಚ್ಚು ಹಿಡಿದಿದೆ ಆತ್ಮ ಖಂಡಿಸಲ್ಪಡುತ್ತಿದೆಯೆನ್ನುತ್ತಿದ್ದಾನೆ"** ಎಂದು ನೀವು ಅಂದುಕೊಳ್ಳ ಬಹುದು ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ಭಗವದ್ಗೀತೆಯಲ್ಲಿ ಹೇಳಿರುವುದು ನಿಜವೇ, ಆದರೆ ನಾವು ಅವಗಾಹನೆ ಮಾಡಿಕೊಳ್ಳುವುದರಲ್ಲಿ ತಪ್ಪಾಗಿ ಅರ್ಥೈಸಿಕೊಂಡಿದ್ದೇವೆ. ಅಲ್ಲಿ ಖಂಡಿಸಲ್ಪಡುವುದಿಲ್ಲವೆಂದು ಹೇಳಿರುವುದು ಯಾವ ಆತ್ಮವನ್ನು ಕುರಿತು? ಜೀವಾತ್ಮನಾ? ಆತ್ಮನಾ? ಪರಮಾತ್ಮನಾ? ಈ ಮೂರು ಆತ್ಮಗಳ ವಿವರ ತಿಳಿಯದೆಹೋದರೆ ನಾವು ಕೆಸರಿನಲ್ಲಿ ಕಾಲು ಹಾಕಿದಂತೆ. ಅಷ್ಟು ಏಕೆ ನಾನೊಂದು ಪ್ರಶ್ನೆ ಕೇಳುತ್ತೇನೆ ಹತ್ಯೆ

ಎಂದರೆ ಸಾಯುವುದೆಂದು ಅರ್ಥವಿರುವಾಗ ಆತ್ಮಹತ್ಯೆ ಎಂದಾಗ ಆತ್ಮ ಸಾಯಿಸಲ್ಪಡುವುದೆಂದೇ ಅರ್ಥ. ಹೌದು ಆತ್ಮ ಖಂಡಿಸಲ್ಪಡುತ್ತಿದೆ. ಖಂಡಿಸಲ್ಪಟ್ಟ ಶರೀರದಲ್ಲಿನ ಆತ್ಮವೂ ಸಹ ಖಂಡಿಸಲ್ಪಡುತ್ತಿದೆ. ಖಂಡಿಸಲ್ಪಟ್ಟು ಚೂರು ಚೂರಾದ ಭಾಗಗಳಲ್ಲಿ ಆತ್ಮ ಕದಲಿಕೆಗಳನ್ನು ನಾವು ಕಣ್ಣುಗಳಿಂದ ನೋಡಿಯೂ ಸಹ ಅರ್ಥ ಮಾಡಿಕೊಳ್ಳದೆ ಹೋಗುತ್ತಿದ್ದೇವೆ. ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಯನ್ನು (ಇರಿದಾಗ) ಕಡಿದಾಗ, ಕಡಿಯಲ್ಪಟ್ಟ ಶರೀರದಲ್ಲಿನ ಆತ್ಮ ಶರೀರದೊಂದಿಗೆ ಛಿದ್ರವಾಗಿ ಚಲನೆಯಿಲ್ಲದಾಗಿ ಹೋಗುತ್ತದೆ. ಹಾಗೆ ಒಂದು ಪ್ರಾಣಿ ಇನ್ನೊಂದು ಪ್ರಾಣಿಯನ್ನು ಬೇಟೆಯಾಡಿ ಸೀಳಿ ಹಾಕಿದಾಗಲೂ ಸಹ ಆತ್ಮ ಅದೇ ಸ್ಥಿತಿ ಹೊಂದಿ ಚಲನೆಯಿಲ್ಲದ್ದಾಗಿ ಹೋಗುತ್ತದೆ. ಯಥಾರ್ಥ ಸಂಘಟನೆಯಾದ ಒಂದು ಮುಖ್ಯ ಉದಾಹರಣೆಯನ್ನೂ ಸಹ ಇಲ್ಲಿ ಪರಿಶೀಲಿಸೋಣ.

ರೈಲ್ವೇ ಸೇತುವೆ ಮೇಲೆ ಒಬ್ಬ ವಿದ್ಯಾರ್ಥಿ ತನ್ನ ಜೊತೆ ಸೈಕಲ್‌ನ್ನು ತಳ್ಳಿಕೊಂಡು ಹೋಗುತ್ತಾ, ವಿಧಿವಶಾತ್ತು ಕಾಲುಜಾರಿ ಸೇತುವೆ ಮೇಲಿಂದ ಮೂವತ್ತು ಅಡಿಗಳ ಕೆಳಗೆ ಬಿದ್ದಿದ್ದಾನೆ. ಬಿದ್ದಾಗ ಆತನಿಗೆ ಯಾವ ರಕ್ತ ಗಾಯಗಳು ಆಗಲಿಲ್ಲ. ಆದರೆ ಕೆಳಗೆಬಿದ್ದಾಗ ಬೆನ್ನು ಮೂಳೆಯಲ್ಲಿನ ಬೆನ್ನುಹುರಿ ಮಧ್ಯಕ್ಕೆ ತುಂಡಾಗಿದೆ. ಮಧ್ಯಕ್ಕೆ ತುಂಡಾಗಿರುವುದರಿಂದ ಆತನು ನೋಡುತ್ತಿರುವಂತೆ ಸೊಂಟದಿಂದ ಕೆಳಗಿನ ಶರೀರವಾದ ಕಾಲುಗಳು ಒದ್ದಾಡುತ್ತಿರುವುದು ಕಣ್ಣಾರೆ ನೋಡಿದ್ದಾನೆ. ಅವು ಏಕೆ ಹಾಗೆ ಎಗಿರಿ ಬೀಳುತ್ತಿವೆಯೋ ಅರ್ಥವಾಗಲಿಲ್ಲ. ಗುಂಡಿಗೆಯ ಕೆಳಗಿನ ಭಾಗದವರೆಗೂ ಬೆನ್ನುಮೂಳೆ ಕಟ್ಟಾಗಿರುವುದರಿಂದ ಹಾರ್ಟ್ (ಗುಂಡಿಗೆ) ಶ್ವಾಸ ಕೋಶಗಳು ಕೆಲಸಮಾಡುತ್ತಿವೆ. ಆದರೆ ಕೆಳಗಿನ ಭಾಗವನ್ನು ನಡೆಸುವ ಚೈತನ್ಯ ಬೆನ್ನುಮೂಳೆಯಿಂದ ಕೆಳಗೆ ಪ್ರಸಾರವಾಗಲಿಲ್ಲ. ಆದ್ದರಿಂದ ಆತನಲ್ಲಿನ ಜೀರ್ಣಾಶಯವೂ ಸಹ ಕೆಲಸಮಾಡಲಿಲ್ಲ. ಶರೀರವು ತುಂಡಾಗದಿದ್ದರು ಚೈತನ್ಯವು ಪ್ರಸಾರವಾಗುವ ನಾಡಿ ತುಂಡಾಗಿರುವುದರಿಂದ, ಕೆಳಗಿನ ಭಾಗದಲ್ಲಿನ ಚೈತನ್ಯ ಎರಡು ನಿಮಿಷಗಳ ಕಾಲ ಒದ್ದಾಡಿ ನಿಂತುಹೋಗಿದೆ. ಅರ್ಧ ಶರೀರ ಸತ್ತುಹೋಗಿ, ಅರ್ಧಶರೀರ ಮಾತ್ರ ಉಳಿದಿರುವ ಆತನು, ಎರಡು ದಿನಗಳಿಗೆ ಸತ್ತುಹೋಗಿರುವುದು ನಡೆದಿದೆ. ಈ ಸಂಘಟನೆಯಲ್ಲಿಯೂ ಸಹ ಆತ್ಮ ಎರಡು ಭಾಗಗಳಾಗಿ ಅರ್ಧ ಶರೀರ ಮರಣಹೊಂದಿ, ಉಳಿದ ಅರ್ಧ ಎರಡು ದಿನಗಳಿಗೆ ನಿಂತುಹೋಗಿದೆ ಎಂದು ತಿಳಿಯುತ್ತಿದೆ.

ಇಷ್ಟು ಸಂಘಟನೆಗಳ ಆಧಾರದಿಂದ ಶರೀರದಲ್ಲಿನ ಆತ್ಮ ಖಂಡಿಸಲ್ಪಡುತ್ತಿದೆ ಎಂದು ಜೀವಾತ್ಮದೊಂದಿಗೆ ಮರಣಹೊಂದಿ ಮತ್ತೊಂದು ಶರೀರವನ್ನು ಸೇರುತ್ತಿದೆ ಎಂದು ತಿಳಿಯುತ್ತಿದೆ. ಇದರ ಪ್ರಕಾರ ಒಬ್ಬನು ಇನ್ನೊಬ್ಬನನ್ನು ಕತ್ತಿನಿಂದ ಇರಿದು

ಸಾಯಿಸಿದಾಗ, ಶರೀರ ಭಾಗಗಳಲ್ಲಿ ವ್ಯಾಪಿಸಿದ ಆತ್ಮವೂ ಸಹ ಕತ್ತರಿಸಲ್ಪಡುತ್ತಿದೆ. ಆದ್ದರಿಂದ ಅದನ್ನು **'ಆತ್ಮಹತ್ಯೆ'** ಎನ್ನುವುದು ಸಮಂಜಸ. ಒಬ್ಬರಿಂದ ಇನ್ನೊಬ್ಬರು ಸಾಯುವುದು **'ಹತ್ಯೆ'** ಎನ್ನುವುದು ಎಲ್ಲರಿಗೂ ತಿಳಿದಿರುವುದೆ. ಆದರೆ ಅದು ಹತ್ಯೆ ಅಲ್ಲ ಆತ್ಮಹತ್ಯೆ ಎಂದು ತಿಳಿಯಬೇಕು. ಶರೀರವೆಲ್ಲಾ ವ್ಯಾಪಿಸಿರುವ ಆತ್ಮವನ್ನು ಇನ್ನೊಬ್ಬರು ಬಲವಂತವಾಗಿ ನಿಲ್ಲಿಸುವುದನ್ನು ಹತ್ಯೆ ಎನ್ನಬಾರದು, ಆತ್ಮಹತ್ಯೆ ಎನ್ನಬೇಕು. ಒಬ್ಬ ಮನುಷ್ಯ ಇನ್ನೊಬ್ಬ ಮನುಷ್ಯನನ್ನಾಗಲಿ, ಪ್ರಾಣಿ ಮನುಷ್ಯನನ್ನಾಗಲಿ, ಸಾಯಿಸಿದಂತಾದರೆ ಅದು ಹತ್ಯೆಯಲ್ಲ **'ಆತ್ಮಹತ್ಯೆ'** ಎಂದು ತಿಳಿಯಬೇಕು. ಇಷ್ಟು ಕಾಲ ಹತ್ಯೆ ಎಂದು ಏನನ್ನು ಅಂದು ಕೊಳ್ಳುತ್ತಿದ್ದೇವೋ, ಅದು ಆತ್ಮಹತ್ಯೆ ಎಂದು ತಿಳಿದಿದೆ ಅಲ್ಲವೆ! ಹಾಗೆ ಇಷ್ಟು ಕಾಲ ಆತ್ಮಹತ್ಯೆ ಎಂದು ಏನನ್ನು ಅಂದುಕೊಳ್ಳುತ್ತಿದ್ದೇವೋ, ಅದು **'ಹತ್ಯೆ'** ಎಂದು ತಿಳಿಯಬೇಕು ಇನ್ನು **'ಹತ್ಯೆ'** ಒಂದರ ವಿವರವು ತಿಳಿದುಕೊಳ್ಳೋಣ.

ಶರೀರದಲ್ಲಿ ಜೀವಾತ್ಮ, ಆತ್ಮ ಎನ್ನುವ ಇಬ್ಬರು ಪುರುಷರಿದ್ದಾರೆಂದು ಭಗವದ್ಗೀತೆ ಪುರುಷೋತ್ತಮ ಪ್ರಾಪ್ತಿಯೋಗದಲ್ಲಿ 16ನೇ ಶ್ಲೋಕದಲ್ಲಿ ಹೇಳಲಾಗಿದೆ. ಇದರಲ್ಲಿ ಆತ್ಮ ಸಾಯಲ್ಪಡುವುದನ್ನು ಆತ್ಮಹತ್ಯೆ ಎಂದು ಇದಕ್ಕು ಮೊದಲು ತಿಳಿದುಕೊಂಡಿದ್ದೇವೆ. ಆತ್ಮ ಜೀವಾತ್ಮಗಳು ಸಾವಿನಲ್ಲಿಯೂ ಹುಟ್ಟುವುದರಲ್ಲಿಯೂ ಒಂದರ ಹಿಂದೆ ಒಂದು ಹೋಗದೆ ತಪ್ಪುವುದಿಲ್ಲ. ಶರೀರವನ್ನು ಧರಿಸುವಾಗಾಗಲಿ, ಶರೀರವನ್ನು ಬಿಡುವಾಗಾಗಲಿ ಆತ್ಮ ಜೀವಾತ್ಮ ಇಬ್ಬರು ಒಂದೇ ಸಲ ಬರುವುದು ಹೋಗುವುದು ನಡೆಯುತ್ತಿದೆ. ಆತ್ಮ ಶರೀರವನ್ನು ಮೊದಲೆ ಬಿಡಬೇಕೆಂದುಕೊಂಡಾಗ ಅದರ ಹಿಂದೆಯೇ ಜೀವಾತ್ಮವೂ ಸಹ ಹೋಗುತ್ತದೆ. ಅದೇ ವಿಧವಾಗಿ ಜೀವಾತ್ಮ ಶರೀರವನ್ನು ಬಿಡುವಾಗ ಅದರ ಹಿಂದೆ ಆತ್ಮ ಹೋಗುತ್ತದೆ. ಇವುಗಳ ಭೇದಗಳಲ್ಲಿಯೇ 'ಹತ್ಯೆ' 'ಆತ್ಮಹತ್ಯೆ' ಎನ್ನುವುದು ನಡೆಯುತ್ತಿದೆ. **ಆತ್ಮದೊಂದಿಗೆ ಜೀವಾತ್ಮ ಹೋದರೆ ಆತ್ಮಹತ್ಯೆ ಎಂದೂ, ಜೀವಾತ್ಮದ ಹಿಂದೆ ಆತ್ಮ ಹೋಗುವುದನ್ನು ಹತ್ಯೆ ಎಂದು ಕರೆಯುತ್ತಿದ್ದೇವೆ.** ಇನ್ನೊಂದು ಶರೀರದಿಂದ ಶರೀರದಲ್ಲಿನ ಆತ್ಮ ಮರಣಿಸುವು ದನ್ನು ಆತ್ಮಹತ್ಯೆ ಅಂದುಕೊಂಡಿದ್ದೇವೆ. ಆ ವಿಧವಾಗಿಯೇ ಒಂದು ಶರೀರದಲ್ಲಿನ ಆತ್ಮದಿಂದ ಅದೇ ಶರೀರದಲ್ಲಿರುವ ಜೀವಾತ್ಮ ಸಾಯಲ್ಪಡುವುದನ್ನು ಹತ್ಯೆ ಎನ್ನುತ್ತೇವೆ. ಆತ್ಮ ಸಾಯುವುದು ಆತ್ಮಹತ್ಯೆ ಆದರೆ ಜೀವಾತ್ಮ ಸಾಯುವುದು ಹತ್ಯೆ ಆಗುತ್ತಿದೆ. ಇಲ್ಲಿ ಗಮನಿಸಬೇಕಾದ ವಿಷಯ ಏನೆಂದರೆ! ಜೀವಾತ್ಮ ಆತ್ಮಗಳ ವ್ಯತ್ಯಾಸ ತಿಳಿಯದಿರುವಾಗ ಹತ್ಯೆ ಆತ್ಮಹತ್ಯೆಗಳ ವ್ಯತ್ಯಾಸವೂ ಸಹ ತಿಳಿಯುವುದಿಲ್ಲ.

ಒಬ್ಬನು ಹಗ್ಗದಿಂದ ಕತ್ತನ್ನು ಬಿಗಿದುಕೊಂಡು ನೇಣುಹಾಕಿಕೊಂಡಿದ್ದಾ ನೆಂದುಕೊಳ್ಳೋಣ. ಅದು ಆತ್ಮಹತ್ಯೆ ಅಲ್ಲ ಹತ್ಯೆ ಆಗುತ್ತದೆ. ಆ ಶರೀರದಲ್ಲಿನ ಆತ್ಮ ತನ್ನ

ಚೈತನ್ಯದಿಂದಲೇ ಜೀವಾತ್ಮ ಆ ಶರೀರದಲ್ಲಿ ವಾಸಿಸುವುದಕ್ಕೆ ಸಾಧ್ಯವಿಲ್ಲದಂತೆ ಮಾಡುತ್ತಿದೆ. ಆದ ಕಾರಣ ಆತ್ಮ ಜೀವಾತ್ಮನನ್ನು ಸಾಯಿಸಿದಂತಾಗುತ್ತಿದೆ. ಮರಣಿಸಿದಾಗ ಇಲ್ಲಿ ಜೀವಾತ್ಮದ ಹಿಂದೆ ಆತ್ಮ ಹೋಗುತ್ತಿದೆ ಆದ್ದರಿಂದ ಅದು ಹತ್ಯೆ ಎನ್ನುತ್ತೇವೆ. ಅದೇ ವಿಧವಾಗಿ ಮರಣ ಶಿಕ್ಷೆಗೀಡಾಗಿರುವ ಖೈದಿಯನ್ನು ಮರಣ ಶಿಕ್ಷೆಯಲ್ಲಿ ಇನ್ನೊಬ್ಬನು ಕತ್ತಿಗೆ ಹಗ್ಗ ಬಿಗಿದು ಸಾಯಿಸಿದ್ದಾನೆಂದುಕೊಳ್ಳಿ. ಅದು ಮೇಲಿನ ವಿಧವಾಗಿ ಹತ್ಯೆ ಅಲ್ಲ ಆತ್ಮಹತ್ಯೆ ಆಗುತ್ತಿದೆ. ಇಲ್ಲಿ ಆತ್ಮದೊಂದಿಗೆ ಜೀವಾತ್ಮ ಹೋಗುತ್ತಿದ್ದಾನೆ. ಇಲ್ಲಿ ಶಾಸ್ತ್ರಬದ್ಧವಾದ ಧರ್ಮಸೂಕ್ಷ್ಮ ಏನೆಂದರೆ! ಇತರ ಶರೀರದಿಂದ ಒಂದು ಶರೀರ ಸತ್ತುಹೋದಾಗ ಆ **'ಸಾವು'** ನೇರವಾಗಿ **ಆತ್ಮಕ್ಕೆ** ಸೇರುತ್ತದೆ. ಹಾಗೆ ಒಂದು ಶರೀರ ಇನ್ನೊಬ್ಬರ ಜೋಕ್ಯ ಇಲ್ಲದಂತೆ ಆತ್ಮದಿಂದ ಮರಣಿಸಿದಾಗ ಆ **'ಮರಣ'** ನೇರವಾಗಿ **ಜೀವಾತ್ಮಕ್ಕೆ** ಸೇರುತ್ತದೆ. ಅದು ಯಾವ ವಿಧವಾಗಿಯೆಂದರೆ! ಒಂದು ಶರೀರದಲ್ಲಿನ ಜ್ಞಾನಾಗ್ನಿ ಇನ್ನೊಂದು ಶರೀರದಲ್ಲಿನ ಕರ್ಮವನ್ನು ಸುಡುವಾಗ ಅದು ಪ್ರಾರಬ್ಧವನ್ನೇ ಸುಡುತ್ತದೆ. ಹಾಗೆ ಒಂದು ಶರೀರದಲ್ಲಿನ ಜ್ಞಾನಾಗ್ನಿ ಅದೇ ಶರೀರದಲ್ಲಿನ ಕರ್ಮವನ್ನು ಸುಡಬೇಕೆಂದರೆ ಅದು ಪ್ರಾರಬ್ಧವನ್ನು ಸುಡುವುದಿಲ್ಲ. ನೇರವಾಗಿ ಸಂಚಿತಕರ್ಮವನ್ನು ಸುಡುತ್ತದೆ. ಒಂದೇ ಜ್ಞಾನಾಗ್ನಿ ತನ್ನ ಶರೀರದಲ್ಲಾದರೆ ಸಂಚಿತಕರ್ಮದ ಮೇಲೆ, ಇತರ ಶರೀರಗಳಲ್ಲಾದರೆ ಪ್ರಾರಬ್ಧದ ಮೇಲೆ ಹೇಗೆ ಕೆಲಸ ಮಾಡುತ್ತಿದೆಯೋ, ಅದೇ ರೀತಿ ಒಂದೇ **'ಮರಣ'** ತನ್ನ ಶರೀರದ ಮೂಲಕ ಏರ್ಪಟ್ಟರೆ ಜೀವಾತ್ಮಕ್ಕೆ, ಇತರ ಶರೀರಗಳ ಮೂಲಕ ಏರ್ಪಟ್ಟರೆ ಆತ್ಮಕ್ಕೆ ಸೇರುತ್ತದೆ ಎಂದು ತಿಳಿಯಬೇಕು. ತನ್ನ ಶರೀರ ಮರಣಕ್ಕೆ ತಾನೇ ಕಾರಣವಾದಾಗ ಅದು **'ಹತ್ಯೆ'** ಎಂದು, ಇನ್ನೊಬ್ಬರು ಕಾರಣವಾದಾಗ **'ಆತ್ಮಹತ್ಯೆ'** ಎಂದು ಶಾಸ್ತ್ರಬದ್ಧ ವಾಗಿರುವಾಗ ಅಜ್ಞಾನದಿಂದ ಅದಕ್ಕೆ ವಿರುದ್ಧವಾಗಿ ಹತ್ಯೆಯನ್ನು ಆತ್ಮಹತ್ಯೆ ಎಂದು, ಆತ್ಮಹತ್ಯೆಯನ್ನು ಹತ್ಯೆಯೆಂದು ಎಲ್ಲರೂ ತಿಳಿದುಕೊಳ್ಳುತ್ತಿದ್ದಾರೆ. ಆತ್ಮಹತ್ಯೆಯಾಗಲಿ, ಹತ್ಯೆಯಾಗಲಿ ಅಕಾಲಮರಣದಲ್ಲಿ ಇರುವವೆಂದು ಜ್ಞಾಪಕ ಇಟ್ಟುಕೊಳ್ಳಬೇಕು.

ಆತ್ಮ ಪ್ರಯತ್ನದಿಂದ ಜೀವಾತ್ಮ ಸತ್ತುಹೋಗುವುದು ಸೂತ್ರಬದ್ಧವಾಗಿ ಹತ್ಯೆಯಾಗುತ್ತದೆ. ಅದರಿಂದ ಬರುವ ಪಾಪವು ಆತ್ಮವನ್ನು ಅಂಟುವುದಿಲ್ಲ. ಜೀವಾತ್ಮ ಸಾಯುವುದರಿಂದ ಬರುವ ಪಾಪವು ಆತ್ಮಕ್ಕೆ ಅಹಂಕಾರ ಇಲ್ಲವಾದ್ದರಿಂದ ಅದು ಆತ್ಮವನ್ನು ಅಂಟುವುದಿಲ್ಲ. ಒಂದು ಶರೀರವು ಇನ್ನೊಂದು ಶರೀರವೊಂದರ ಸಾವಿಗೆ ಕಾರಣವಾದಾಗ ಅದು ಆತ್ಮಹತ್ಯೆ ಆಗುತ್ತದೆ. ಅದರಲ್ಲಿ ಬರುವ ಪಾಪವು ಬಹಳ ಭಯಂಕರವಾದುದು. ದೇವರನ್ನು ಸಾಯಿಸಿದಷ್ಟು ಪಾಪವು ಜೀವಾತ್ಮಕ್ಕೆ ಏರ್ಪಡುತ್ತದೆ. ಒಂದು ಶರೀರದಲ್ಲಿನ ಆತ್ಮ ಮರಣಕ್ಕೆ ಇನ್ನೊಂದು ಶರೀರದಲ್ಲಿನ ಆತ್ಮಚೈತನ್ಯವೇ ಕಾರಣವಲ್ಲವೇ ಅಂತಹದರಲ್ಲಿ

ಆತ್ಮಹತ್ಯೆ ಪಾಪವು ಜೀವಿಗೆ ಏಕೆ ಅಂಟುತ್ತದೆ? ಎನ್ನುವ ಪ್ರಶ್ನೆ ಬರುತ್ತದೆ. ಅದಕ್ಕೆ ಸಮಾಧಾನ ಆತ್ಮಹತ್ಯೆಗೆ ಆತ್ಮ ಕಾರಣವೆಂಬುವುದು ನಿಜವೆ, ಜೀವಾತ್ಮ ಏನು ಮಾಡದವನೆಂಬ ಸೂತ್ರದ ಪ್ರಕಾರ ಅವನಿಗೂ ಆತ್ಮಹತ್ಯೆಗೂ ಏನು ಸಂಬಂಧವಿಲ್ಲ. ಆದರೂ ಶರೀರದಲ್ಲಿನ ಅಹಂಕಾರ ಜೀವಾತ್ಮನಿಂದ ತಾನೇ ಮಾಡಿದಂತೆ ಒಪ್ಪಿಸುತ್ತಿದೆ. ಆದ ಕಾರಣ ಅಲ್ಲಿ ಬರುವ ಪಾಪವು ಜೀವಿಯ ಕರ್ಮಕೂಂಡಲಿಯಲ್ಲಿ ಸೇರುತ್ತಿದೆ. ಸಂಬಂಧವಿಲ್ಲದ ಕರ್ಮವನ್ನು ಜೀವಿಯು ಅನವಶ್ಯಕವಾಗಿ ತನ್ನ ಮೇಲೆ ಅಹಂಕಾರದಿಂದ ಹಾಕಿಕೊಳ್ಳುತ್ತಿದ್ದಾನೆ.

ಉಳಿದ ಪ್ರಪಂಚದ ಕೆಲಸಗಳಲ್ಲಿ ಜೀವಾತ್ಮಕ್ಕೆ ಚಿಕ್ಕ ಚಿಕ್ಕ ಕರ್ಮಗಳು ಅಹಂಕಾರದಿಂದ ಬರುತ್ತಿರುತ್ತವೆ. ಅವುಗಳ ಫಲಿತವು ಅಷ್ಟುದೊಡ್ಡದಾಗಿ ಇಲ್ಲದಿದ್ದರೂ ಮರಣ ವಿಷಯದಲ್ಲಿ ಬರುವ ಕರ್ಮ ಬಹಳ ಭಯಂಕರವಾದುದು. ಅದು ಆತ್ಮವನ್ನೇ ಹತ್ಯೆ ಮಾಡಿದೆ, ಆದಕಾರಣ ಜೀವಾತ್ಮ ಎಲ್ಲಿ ಅಹಂಕಾರ ಹೊಂದಿದರೂ ಸಣ್ಣ ಕರ್ಮಬರುತ್ತದಾಗಲಿ, **ಸಾವಿನ** ವಿಷಯದಲ್ಲಿ **ಅಹಂಕಾರ** ಹೊಂದುವುದರಿಂದ ಭಯಂಕರವಾದ ಕರ್ಮಬರುತ್ತದೆ. ಆದ್ದರಿಂದ **ಆತ್ಮಹತ್ಯೆ ಮಹಾ ಪಾಪವೆಂದು** ದೊಡ್ಡವರು ಹೇಳಿದ್ದಾರೆ. ಈ ದಿನ ಭೂಮಿ ಮೇಲೆ ಕೆಲವು ಜನರು ಹಣಕ್ಕಾಗಿ ಬಹಳ ಜನರನ್ನು ಸಾಯಿಸುತ್ತಿದ್ದಾರೆ. ಹತ್ಯೆ. ಆತ್ಮಹತ್ಯೆಗಳ ವಿವರವು ತಿಳಿಯದವರು ತಾವು ಹತ್ಯೆ ಮಾಡಿದ್ದೇವೆ ಅಂದುಕೊಳ್ಳುತ್ತಿದ್ದಾರೆ. ಅವರು ಮಾಡಿರುವುದು ಆತ್ಮಹತ್ಯೆಯೆಂದು ಅವರಿಗೆ ತಿಳಿದಿಲ್ಲ. ಆದ್ದರಿಂದ ಬರುವ ಪಾಪವು ಭಯಂಕರವಾದುದೆಂದೂ ಸಹ ಅವರಿಗೆ ತಿಳಿದಿಲ್ಲ. ಈಗ ಈ ವಿಷಯ ತಿಳಿದುಕೊಂಡ ಹಿರಿಯರು ಪ್ರಜೆಗಳಿಗೆ ಆತ್ಮ ಜೀವಾತ್ಮಗಳ ಭೇದಗಳು, ಹತ್ಯೆ ಆತ್ಮಹತ್ಯೆಗಳ ಭೇದಗಳನ್ನು ತಿಳಿಸಿ ಅವರನ್ನು ಅಜ್ಞಾನದಿಂದ ಹೊರಬೀಳುವಂತೆ ಮಾಡುತ್ತಾರೆಂದು ಕೋರುತ್ತಿದ್ದೇವೆ.

ಒಂದು ಶರೀರದಲ್ಲಿ ಜೀವಾತ್ಮ ಒಬ್ಬನೇ ಆದಾಗ ಅದಕ್ಕೆ ಕಾವಲಾಗಿರುವ ಆತ್ಮವೂ ಸಹ ಒಂದೇ. ಎಲ್ಲಾ ಶರೀರಗಳಲ್ಲಿ ಒಂದೇ ನಿಬಂಧನೆಯಿಂದ, ಒಂದೇ ರೀತಿಯಲ್ಲಿ ಬೇರೆ ಬೇರೆ ಆತ್ಮಗಳು ಇರುವುದರಿಂದ ಒಂದು ಶರೀರದಲ್ಲಿನ ಆತ್ಮಕ್ಕೆ ಅನ್ವಯಿಸಿರುವುದು ಒಂದೇಬಾರಿ ಎಲ್ಲಾ ಶರೀರಗಳಲ್ಲಿ ಅನ್ವಯಿಸುವುದಿಲ್ಲ. ಆದ ಕಾರಣ ಒಂದು ಶರೀರದಲ್ಲಿ ಹತ್ಯೆ ಮಾಡಿದರೂ ಎಲ್ಲಾ ಶರೀರಗಳಲ್ಲಿ ಆತ್ಮ ಹತ್ಯೆ ಆಗಲಿಲ್ಲ. ಆತ್ಮವನ್ನು ವಿಶಾಲವಾಗಿ ನೋಡಿದಾಗ ಅದು ಹತ್ಯೆ ಆಗಲಿಲ್ಲ. ಆತ್ಮವನ್ನು ವಿಶಾಲವಾಗಿ ಅಲ್ಲದೇ ಶರೀರದಲ್ಲಿ ಒಂದು ಖಂಡವಾಗಿ ನೋಡಿದರೆ ಆ ಮರಣವನ್ನು ಆತ್ಮಹತ್ಯೆ ಎನ್ನುತ್ತೇವೆ. ಪ್ರತಿ ಶರೀರದಲ್ಲಿ ಭಿನ್ನವಾಗಿರುವ ಜೀವಾತ್ಮ ನಾಶ ಆಗುವವನಾದರು ಸಂದರ್ಭಾನುಸಾರವಾಗಿ ಮರಣದಲ್ಲಿ

ಶರೀರಕ್ಕೆ ನಾಶವು, ಜೀವಾತ್ಮಕ್ಕೆ ಇಲ್ಲವೆನ್ನುವಂತೆ, **ಎಲ್ಲಾ ಶರೀರಗಳಲ್ಲಿ ಒಂದೇ ಅಂಶವಾಗಿರುವ ಆತ್ಮ ನಾಶ ಇಲ್ಲದಿರುವುದಾದರು ಕೆಲವು ಮರಣಗಳಲ್ಲಿ ಮರಣಿಸುವುದಾಗಿ ಹೇಳಲಾಗುತ್ತದೆ. ನಾಶ ಆಗುವ ಜೀವಾತ್ಮಕ್ಕೆ ಸಾವು ಇಲ್ಲ ಎಂದರೂ, ನಾಶವಿಲ್ಲದ ಆತ್ಮಕ್ಕೆ ಸಾವು ಇದೆಯೆಂದರೂ ಕೊನೆಗೆ ಜೀವಾತ್ಮಕ್ಕೆ ನಾಶವಿದೆ, ಆತ್ಮಕ್ಕೆ ನಾಶವಿಲ್ಲವೆಂದು ತಿಳಿಯಬೇಕು**. ಮರಣಕ್ಕೂ, ನಾಶಕ್ಕೂ ಎಷ್ಟೋ ವ್ಯತ್ಯಾಸ ಇದೆಯೆಂದು ತಿಳಿಯಬೇಕು. ಒಂದು ಶರೀರದಲ್ಲಿನ ಆತ್ಮವನ್ನು ತಿಳಿದುಕೊಂಡರೆ ಅದು ಅವನಿಗೆ ಆತ್ಮದರ್ಶನವಾದಂತೆ. ಸಕಲ ಜೀವರಾಶಿಗಳಲ್ಲಿ ಆತ್ಮ ಹೇಗೆ ಇದೆಯೋ ತಿಳಿದುಕೊಂಡಂತಾಗುತ್ತದೆ. ಮೂರನೇ ಆತ್ಮವಾದ ಪರಮಾತ್ಮನನ್ನು ಭೂಮಿ ಮೇಲೆ ಬದುಕಿರುವ ಯಾವ ಜೀವರಾಶಿಯಾಗಲಿ ತಿಳಿದುಕೊಂಡಿಲ್ಲ, ಇದು ಶಾಸನ. ಎರಡನೇ ಆತ್ಮವನ್ನು ತಿಳಿದುಕೊಂಡ ನಂತರ ಶರೀರವನ್ನು ಬಿಟ್ಟಾಗ ಮೂರನೇ ಆತ್ಮವಾದ ಪರಮಾತ್ಮ ಎನ್ನುವುದು ಏನೋ ತಿಳಿಯುತ್ತದೆ. ಅಂತಹವನು ಮತ್ತೆ ಹುಟ್ಟುವುದಿಲ್ಲ. ಅದೇ ಬಿಡುಗಡೆ ಅಥವಾ ಮೋಕ್ಷ ಎನ್ನುತ್ತಾರೆ. ಆತ್ಮವನ್ನು ತಿಳಿದವನು ಭೂಮಿ ಮೇಲೆ ಇರಬಹುದಾಗಲಿ ಪರಮಾತ್ಮನನ್ನು ತಿಳಿದವನು ಭೂಮಿ ಮೇಲೆ ಇರುವುದಿಲ್ಲವೆಂದು ತಿಳಿಯಬೇಕು.

**(1) ಶ್ಲೋ॥ 20 : ನಜಾಯತೇಮ್ರಿಯತೇವಾಕದಾಚಿನ್ನಾಯಂಭೂತ್ವಾಭವಿತಾವಾನ ಭೂಯಃ**
**ಅಜೋ ನಿತ್ಯಶ್ಯಾಶ್ವತೋ೭ಯಂ ಪುರಾಣೋ ನಹನ್ಯತೇ ಹನ್ಯಮಾನೇಶರೀರೇ ॥**
**(ಪರಮಾತ್ಮ)**

**ಭಾವಾರ್ಥ :** ಪರಮಾತ್ಮ ಹುಟ್ಟುವುದೂ ಅಲ್ಲ ಸಾಯುವುದು ಅಲ್ಲ. ಒಂದು ಸಮಯದಲ್ಲಿದ್ದು ಇನ್ನೊಂದು ಸಮಯದಲ್ಲಿ ಇಲ್ಲವೆಂಬುದಕ್ಕೆ ಸಾಧ್ಯವಾಗುವುದಿಲ್ಲ. ನಿತ್ಯ ಇರುವವನು, ಪುರಾಣನೂ ಶರೀರವು ಹತವಾದರೂ ತಾನು ಸಾಯುವವನು ಅಲ್ಲ.

**ವಿವರ :** ಈಗ ಈ ಶ್ಲೋಕದಲ್ಲಿ ಪ್ರತ್ಯೇಕಿಸಿ ಮೂರನೇ ಪುರುಷನಾದ ಪರಮಾತ್ಮನನ್ನು ಕುರಿತು ತಿಳಿಸುತ್ತಿದ್ದಾನೆ. ಇದರಿಂದ ಮೂವರು ಪುರುಷರ ವಿಷಯ ಸ್ವಲ್ಪ ಅವಗಾಹನೆ ಯಾಗುತ್ತದೆ. ಪರಮಾತ್ಮ ಎನ್ನುವುದು ಆತ್ಮ ಜೀವಾತ್ಮಗಳಂತೆ ಮರಣವಾಗಲಿ ನಾಶವಾಗಲಿ ಹೊಂದುವುದು ಅಲ್ಲ. ಒಂದುಕಡೆ ಇದ್ದು ಮತ್ತೊಂದು ಕಡೆ ಇಲ್ಲದವನು ಅಲ್ಲ. ಸರ್ವವು ತುಂಬಿ ಅಣುಅಣುವಿನಲ್ಲಿ ವ್ಯಾಪಿಸಿರುವವನು, ಭೂತಕಾಲದಲ್ಲಿದ್ದು ಭವಿಷ್ಯತ್ತಿನಲ್ಲಿರುವುದಿಲ್ಲ ಎಂಬುದಕ್ಕೆ ಸಾಧ್ಯವಿಲ್ಲದವನು. ಎಂದಿನಿಂದ ಇರುವನೋ ತಿಳಿಯದ ಪುರಾಣನು, ಸಾವುಹುಟ್ಟು ಇಲ್ಲದವನು, ಹೊರಗೆ ಬಯಲಿನಲ್ಲಿಯೂ, ವಸ್ತುವೊಂದರ ಅಣುಅಣುವಿನಲ್ಲಿ,

ಶರೀರಗಳ ಒಳಗೂ ವ್ಯಾಪಿಸಿರುವ ಪರಮಾತ್ಮ, ಶರೀರ ಮರಣಿಸಿದರೂ ಅದರಲ್ಲಿನ ಅಣುಅಣುವಿನಲ್ಲಿಯೂ ಸಹ ಇದ್ದಾನೆ. ಸಾಯಿಸಲ್ಪಟ್ಟ ಶರೀರದಲ್ಲಿ ಇದ್ದರೂ ಸಹ ಸಾಯುವವನು ಅಲ್ಲವೆಂದು, ಸತ್ತುಹೋದ ಬದುಕಿರುವ ಶರೀರಗಳಲ್ಲಿಯೂ ಸಹ ಒಂದೇ ರೀತಿಯಲ್ಲಿ ಇದ್ದಾನೆಂದು ತಿಳಿಯಬೇಕು.

**(1) ಶ್ಲೋ॥ 21 : ವೇದಾಽವಿನಾಶಿನಂ ನಿತ್ಯಂ ಯಏನ ಮಜಮವ್ಯಯಮ್ ।**
**ಕಥಂ ಸ ಪುರುಷಃ ಪಾರ್ಥ! ಕಂ ಘಾತಯತಿ ಹನ್ತಿಕಮ್ ॥**

**(ಪರಮಾತ್ಮ)**

**ಭಾವಾರ್ಥ :** ನಿತ್ಯನು, ನಾಶವಿಲ್ಲದವನು ಪರಮಾತ್ಮ ಎಂದು ಯಾವನು ತಿಳಿದು ಕೊಳ್ಳುತ್ತಾನೋ, ಆತನು ಅಂತಹ ಪರಮಾತ್ಮನನ್ನು ಹೇಗೆ ಹಿಂಸಿಸುತ್ತಾನೆ? ಹಿಂಸೆ ಮಾಡುವುದಕ್ಕಾದರೂ ಹೇಗೆ ತಿಳಿಯುತ್ತಾನೆ?

**ವಿವರ :** ಜೀವಾತ್ಮ ಅಲ್ಲದೆ ಮತ್ತು ಆತ್ಮನಂತೆಯೂ ಅಲ್ಲದೇ ಆತ್ಮಗಿಂತ ಬೇರೆಯಾದ ಪರಮಾತ್ಮ ನಾಶ ಆಗದಿರುವವನೆಂದು, ಎಲ್ಲಾಕಡೆ ತುಂಬಿ ಯಾವಾಗಲೂ ಇರುವವನೆಂದೂ, ತಿಳಿದವನ್ಯಾರಾದರೂ ಪರಮಾತ್ಮನಿಗೆ ಬಾಧೆ ಕೊಡುತ್ತೇನೆಂದಾಗಲಿ, ಪರಮಾತ್ಮ ಬಾಧೆ ಪಡುತ್ತಾನೆಂದಾಗಲಿ ತಿಳಿಯುವುದಿಲ್ಲ. ಪರಮಾತ್ಮಕ್ಕೆ ಏನು ಇಲ್ಲ, ಸಾವು ಹುಟ್ಟುಗಳಾಗಲಿ, ಕಷ್ಟಸುಖಗಳಾಗಲಿ ಹೊಂದುವವನು ಅಲ್ಲ. ಪ್ರಪಂಚದಲ್ಲಿ ಯಾವುದಕ್ಕೂ ತಿಳಿಯದವನನ್ನು ಯಾರಾದರೂ ಹೇಗೆ ತಾಕುತ್ತಾರೆ? ಇನ್ನೂ ಪರಮಾತ್ಮ ಎಂತಾದ್ದೆಂದರೆ, ಈ ಪ್ರಪಂಚವೆಲ್ಲವೂ ನಾಶವಾದರೂ ನಾಶವಾಗದೆ ನಿಂತಿರುವುದು. ಪರಮಾತ್ಮ ಸೃಷ್ಟಿ ಆದಿಯಲ್ಲಿ ಪ್ರಕೃತಿಯೊಂದರ ಪಂಚಭೂತಗಳನ್ನು ತಯಾರುಮಾಡಿ ಅದರ ಮೂಲಕ ಜನಿತವಾದ ಗುಣಗಳಿಂದ ಬುದ್ಧಿಗೆ, ಬುದ್ಧಿಯಿಂದ ಚಿತ್ತಕ್ಕೆ, ಚಿತ್ತದಿಂದ ಮನಸ್ಸಿಗೆ, ಮನಸ್ಸಿನಿಂದ ಶರೀರದ ಹೊರಗಿರುವ ಜ್ಞಾನೇಂದ್ರಿಯಗಳಾದ ಕಣ್ಣು, ಮೂಗು, ಕಿವಿ, ನಾಲಿಗೆ, ಚರ್ಮಗಳಿಗೆ ಅನುಸಂಧಾನ ಏರ್ಪಡಿಸಿ, ದೊಡ್ಡ ಯಂತ್ರಾಂಗವು ತಯಾರುಮಾಡಿಟ್ಟಿದ್ದಾನೆ. ಮನಸ್ಸಿಗೆ ಶರೀರದಲ್ಲಿ ಎರಡು ಕೆಲಸಗಳನ್ನು ಕಲ್ಪಿಸಿ ಒಂದು ಹೊರಗಿನ ಇಂದ್ರಿಯಗಳಿಗೂ ಒಳಗಿನ ಇಂದ್ರಿಯ ಗಳಿಗೂ ಸಮಾಚಾರವನ್ನು ಸೇರಿಸುವ ಮಧ್ಯವರ್ತಿಯಾಗಿ, ಆ ಕೆಲಸ ಇಲ್ಲದಿರುವಾಗ ವಿಷಯಗಳನ್ನು ಮನನ ಮಾಡುವುದನ್ನು ಎರಡನೆ ಕೆಲಸವಾಗಿ ನಿರ್ಣಯಿಸಿಟ್ಟಿದ್ದಾನೆ. ಮನಸ್ಸು ವಿಷಯಗಳನ್ನು ಜ್ಞಾಪಕ ಮಾಡಿದಾಗ, ವಿಷಯಗಳಿಗೆ ತಕ್ಕ ಗುಣಗಳು ಹೊರಬಂದಾಗ, ಅವುಗಳನ್ನು ಬುದ್ಧಿ ಎರಡು ವಿಧಗಳಾಗಿ ಯೋಚಿಸಿದಾಗ, ಯೋಚಿಸಿದ

ಎರಡು ವಿಧಾನಗಳಲ್ಲಿ ಚಿತ್ತವು ಕರ್ಮಾನುಸಾರ ನಿರ್ಣಯಿಸಿದಾಗ, ಆ ನಿರ್ಣಯ ಮನಸ್ಸಿನ ಮೂಲಕ ಹೊರಗಿನ ಶರೀರ ಭಾಗಗಳಾದ ಕರ್ಮೇಂದ್ರಿಯಗಳಿಗೆ ಸೇರಿದಾಗ, ಮನಸ್ಸಿನ ಆದೇಶದ ಪ್ರಕಾರ ಅವು ಕೆಲಸಮಾಡುತ್ತಿವೆ. ಈ ವಿಧವಾಗಿ ಹೊರಗಿನ ಪ್ರಪಂಚದಲ್ಲಿ ಒಳಗೆ ಉದ್ರೇಕಗೊಂಡ ವಿಷಯವು ಕಾರ್ಯರೂಪವಾಗುತ್ತಿದೆ. ಕಾರ್ಯಗಳು ಮಾಡುವಂತೆ ಯಂತ್ರಾಂಗವು ಅಳವಡಿಸಿರುವುದು ಪರಮಾತ್ಮನೇ. ಕರ್ಮಾನುಸಾರ ಕಾರ್ಯರೂಪಗಳಾಗಿ ನಡೆಯುವ ಕೆಲಸಗಳನ್ನು ತಾನೇ ಮಾಡುವಂತೆ ಜೀವಾತ್ಮ ಅಹಂಕಾರದಿಂದ ನಾನೇ ಎಂದುಕೊಳ್ಳುವುದರಿಂದ ನಡೆಯುವ ಕೆಲಸಗಳಲ್ಲಿ ಪಾಪವಾಗಲಿ, ಪುಣ್ಯವಾಗಲಿ ಪುನಃ ಆ ಜೀವಾತ್ಮನಿಗೆ ಏರ್ಪಡುವಂತೆ, ಹಾಗೆ ಏರ್ಪಡುವುದರಿಂದ ಬಂದಿರುವ ಕರ್ಮವನ್ನು ಮತ್ತೆ ಶರೀರದ ಮೂಲಕ ಅನುಭವಿಸುವಂತೆ ಜೋಡಣೆಯನ್ನು ಏರ್ಪಡಿಸಿರುವುದೂ ಸಹ ಪರಮಾತ್ಮನೇ. ಇಷ್ಟು ಅನುಸಂಧಾನಗಳನ್ನು ಏರ್ಪಡಿಸಿರುವುದರಿಂದ, ಪ್ರಪಂಚವೆಲ್ಲವೂ ತುಂಬಿದ ಮನುಜರೆಲ್ಲರೂ ತಮ್ಮಲ್ಲಿನ ಯಂತ್ರಾಂಗವು ತಿಳಿಯದೆ ಕರ್ಮಾನುಸಾರ ಹೊರಗಿನ ಕಾರ್ಯಗಳನ್ನೇ ಮಾಡುತ್ತಿರುವುದರಿಂದ, ನಾವು ನೋಡುತ್ತಿರುವ ಗೊಂದಲ ಪ್ರಪಂಚ ಏರ್ಪಟ್ಟಿದೆ. ಯಾರೇನು ಹೇಳಿದರು ಕೇಳುವ ಸ್ಥಿತಿಯಲ್ಲಿ ಇಲ್ಲ. ಜ್ಞಾನ ತಿಳಿದುಕೊಳ್ಳಿ ಎಂದರೆ ನಮಗೆ ಸಮಯ ಎಲ್ಲಿದೆ ಎನ್ನುತ್ತಿದ್ದಾರೆ. ಪರಮಾತ್ಮ ಹಾಗೆ ಸಮಯವಿಲ್ಲದಷ್ಟು ಕೆಲಸಗಳಲ್ಲಿ ಇರಿಸುವುದಲ್ಲದೆ, ತನ್ನ ಜ್ಞಾನ ತಿಳಿದುಕೊಳ್ಳುವುದಕ್ಕೆ ಶ್ರದ್ಧೆ ಎಂಬುದನ್ನು ಶರೀರದಲ್ಲಿಟ್ಟಿದ್ದಾನೆ. ಶ್ರದ್ಧೆ ಹೊಂದಿದವನು ಜ್ಞಾನವನ್ನು ತಿಳಿದುಕೊಳ್ಳುವಂತೆಯೂ ಸಹ ಮಾಡಿದ್ದಾನೆ. ಈ ವಿಧವಾಗಿ ಪರಮಾತ್ಮ ಮಾನವರನ್ನು ಮಾಯೆಯಲ್ಲಿಯೂ ಸಿಲುಕಿಸಿದ್ದಾನೆ. ಅದುದರಿಂದ ತಪ್ಪಿಸಿಕೊಳ್ಳುವುದಕ್ಕೆ ದಾರಿಯನ್ನೂ ಸಹ ಏರ್ಪಡಿಸಿದ್ದಾನೆ.

ಇಷ್ಟು ದೊಡ್ಡ ಪ್ರಪಂಚವನ್ನೇ ಸೃಷ್ಟಿಸಿದ ಪರಮಾತ್ಮ ಈ ಪ್ರಪಂಚವೆಲ್ಲವೂ ಮತ್ತೆ ನಾಶವಾಗುವಂತೆ, ನಂತರ ಸ್ವಲ್ಪಕಾಲಕ್ಕೆ ಸೃಷ್ಟಿಸಲ್ಪಡುವಂತೆಯೂ ಸಹ ಏರ್ಪಡಿಸಿಟ್ಟಿದ್ದಾನೆ. ಈ ಪ್ರಪಂಚವೆಲ್ಲವೂ ನಾಶವಾದಾಗಲೂ ಸಹ ಪರಮಾತ್ಮ ಉಳಿದಿದ್ದಾನೆ. ಇದರಿಂದ ಪರಮಾತ್ಮಕ್ಕೆ ಮರಣವಾಗಲಿ, ನಾಶವಾಗಲಿ ಇಲ್ಲವೆಂದು ತಿಳಿಯುತ್ತಿದೆ. ಪ್ರಪಂಚವನ್ನೇ ಸೃಷ್ಟಿಸಿ ಅದರಲ್ಲಿ ಯಾರ್ಯಾರು ಅವರವರ ಕೆಲಸಗಳನ್ನು ಮಾಡಿಕೊಳ್ಳುವಂತೆ ಹೊಂದಿಸಿದ ಮೇಧಾವಿ ಪರಮಾತ್ಮ. **ಸ್ವತಃ ತಾನೇ ಮನುಷ್ಯರ ಮಧ್ಯಕ್ಕೆ ಬಂದು, ನಾನು ನಿಮ್ಮನ್ನು ತಯಾರು ಮಾಡಿದವನೆಂದು ಹೇಳಿದರೂ, ನಂಬದಂತೆ ಯಂತ್ರಾಂಗವನ್ನು ತಯಾರು ಮಾಡಿದ ಮೇಧಾವಿ ಪರಮಾತ್ಮ. ಮನುಜರನ್ನೇ ಅಲ್ಲದೇ ಸಕಲ ಜೀವಿಗಳನ್ನು, ಭೂಗೋಳವನ್ನು, ಚಂದ್ರಗೋಳವನ್ನೂ, ಸೂರ್ಯಗೋಳವನ್ನೂ, ನಕ್ಷತ್ರಗಳನ್ನು ತನ್ನ**

**ಶಕ್ತಿಯಿಂದಲೇ ಆಡಿಸುತ್ತಿದ್ದಾನೆಂದು ತಿಳಿದವರು ಯಾರಾದರೂ, ಅಂತವನನ್ನು ಸಾಯಿಸುತ್ತೇನೆಂದಾಗಲಿ ಆತನು ಸಾಯುತ್ತಾನೆಂದಾಗಲಿ ಹೇಗೆಂದುಕೊಳ್ಳುತ್ತಾರೆ.**

ಇಲ್ಲಿಯವರೆಗೂ ಮೂರು ಆತ್ಮಗಳ ವಿವರವು ತಿಳಿಸುತ್ತಾ, ಸಾವಿನಲ್ಲಿ ಒಂದಕ್ಕೊಂದು ಹೇಗೆ ಭೇದಗಳಿವೆಯೋ ತಿಳಿಸುತ್ತಾ, ಮೂರು ಆತ್ಮಗಳ ವಿವರಗಳಲ್ಲಿ ಮರಣದ ಬಗ್ಗೆಯೇ ತಿಳಿಸಿದ ಭಗವಂತನು ಆ ಮೂರು ಆತ್ಮಗಳನ್ನು ಅರ್ಥಮಾಡಿ ಕೊಳ್ಳುವಂತೆ ಅವುಗಳ ವಿಧಾನವನ್ನು ಕುರಿತು ಇನ್ನೂ ತಿಳಿಸುತ್ತಾ ಜೀವಾತ್ಮ ಹೇಗೆ ದೇಹವನ್ನು ಪಡೆಯುತ್ತಿದೆಯೋ ಮತ್ತು ಬಿಡುತ್ತಿದೆಯೋ ಕೆಳಗಿನ ಶ್ಲೋಕದಲ್ಲಿ ತಿಳಿಸುತ್ತಿದ್ದಾನೆ.

**(1) ಶ್ಲೋ॥ 22 : ವಾಸಾಂಸಿ ಜೀರ್ಣಾನಿ ಯಥಾ ವಿಹಾಯ ನವಾನಿಗೃಹ್ಣಾತಿನರೋಽಪರಾಣಿ ।**
**ತಥಾ ಶರೀರಾಣಿ ವಿಹಾಯ ಜೀರ್ಣಾನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥**
**(ಜೀವಾತ್ಮ)**

**ಭಾವಾರ್ಥ :** ಮಾನವನು ಹಳೆ ವಸ್ತ್ರವನ್ನು ಬಿಟ್ಟು ಹೊಸವಸ್ತ್ರವನ್ನು ಧರಿಸಿದಂತೆ ಆತ್ಮ ಶಿಥಿಲಾವಸ್ಥೆಗೆ ಬಂದಿರುವ ಹಳೆ ದೇಹವನ್ನು ಬಿಟ್ಟು ಹೊಸ ಶರೀರದಲ್ಲಿ ಪ್ರವೇಶಿಸುತ್ತಿದೆ.

**ವಿವರ** : ಭಗವಂತನು ಈ ಶ್ಲೋಕದಲ್ಲಿ ಹೇಳಿದ ಭಾವವು ನೂರಕ್ಕೆ ನೂರಷ್ಟು ಬಹಳ ಜನರಿಗೆ ಅರ್ಥ ಆಗಿಲ್ಲವೆಂದು ನಾವು ಹೇಳುತ್ತಿದ್ದೇವೆ. ಏಕೆಂದರೆ ಈ ಶ್ಲೋಕದ ಭಾವನೆಗೆ ವಿರುದ್ಧವಾಗಿ ವಿವರ ತಮಗೆ ತಿಳಿಯದೆ ಅವರಲ್ಲಿ ನಿಂತುಹೋಗಿದೆ. ಭಗವಂತನು ಈ ಶ್ಲೋಕದಲ್ಲಿ ಉದಾಹರಣೆಯಾಗಿ **ಹಳೆ ವಸ್ತ್ರ, ಹೊಸ ವಸ್ತ್ರವೆಂದು ಹೇಳಿ ಹಳೆ ದೇಹ, ಹೊಸ ದೇಹವೆಂದೂ ಸಹ ವಿವರಿಸಿದ್ದಾನೆ.** ಆದರೆ ಇಲ್ಲಿ ಹೊಸ ದೇಹವೆಂದರೆ ಏನೋ ತಿಳಿಯದೆ ಬಹಳ ಜನರು ಮೇಲಿನ ಶ್ಲೋಕದ ಭಾವನೆಯನ್ನೇ ಹತ್ಯೆ ಮಾಡಿದ್ದಾರೆಂದು ಹೇಳಬಹುದು. ವಿಚಕ್ಷಣ, ವಿವರಣೆಯ ದೃಷ್ಟಿ ಇಲ್ಲದವರೆಲ್ಲರೂ ಗೀತೆಯಲ್ಲಿ ಹೊಸ ದೇಹ ಎಂದಾಗ ತಲೆಯಾಡಿಸಿದ್ದಾರೆ. ಮತ್ತೆ ಕೆಲವು ಪುಸ್ತಕಗಳಲ್ಲಿ ಗರ್ಭದಲ್ಲೇ ಪೂರ್ತಿ ತಯಾರಾಗದ ಅಸಂಪೂರ್ಣ ಶರೀರದಲ್ಲಿ ಜೀವಾತ್ಮ ಆರು ತಿಂಗಳಿಗೆ ಪ್ರವೇಶಿಸುತ್ತದೆಂದು ತಿಳಿಸಿದಾಗಲೂ ಸಹ ತಲೆಯಾಡಿಸಿದ್ದಾರೆ. ಹಾಗೆ ಹಳೆ ಗೃಹವನ್ನು ಬಿಟ್ಟು ಹೊಸ ಗೃಹದಲ್ಲಿ ಪ್ರವೇಶಿಸುತ್ತಿದ್ದಾನೆಂದಾಗಲೂ ಸಹ ತಲೆ ಆಡಿಸಿದ್ದಾರೆ. ಆ ಹೊಸ ಗೃಹಕ್ಕೆ ಮೇಲ್ಚಾವಣಿ ಹಾಕದೆ ಬಾಗಿಲು ಇಡದೆ ಅರ್ಧವೂ ಸಹ ತಯಾರಾಗದ ಅದರೊಳಗೆ ಪ್ರವೇಶಿಸುತ್ತಿದ್ದಾನೆಂದಾಗಲೂ ಸಹ ತಲೆ ಆಡಿಸಿದ್ದಾರೆ. ಹೊಸ ಮನೆ ಎಂದರೆ ಪೂರ್ತಿ ತಯಾರಾಗಿರುವುದ,

ಹೊಸ ಶರೀರ ಎಂದರೆ ಪೂರ್ತಿ ರೂಪುರೇಖೆಗಳು ತಿದ್ದುಕೊಂಡಿರುವುದು ಎಂದು, ಯೋಚಿಸದೆ ಹೋಗಿದ್ದಾರೆ. ಯಾರು ಹೇಗೆ ಅಂದುಕೊಂಡರು ಭಗವಂತನು ಹೇಳುವ ಮಾತು ಏನೆಂದರೆ! ಹಳೆ ಶರೀರವನ್ನು ಬಿಟ್ಟಿರುವ ಆತ್ಮ, ಪೂರ್ತಿ ತಯಾರಾದ ಹೊಸದೆನಿಸಿಕೊಂಡ ಶರೀರದಲ್ಲಿ ಸೇರುತ್ತಿದೆಯೆಂದು ತಿಳಿಸುತ್ತಿದ್ದಾನೆ. ಜೀವಾತ್ಮ ಎಲ್ಲಿ ಇದ್ದಾನೋ ಆತ್ಮವೂ ಸಹ ಅದರೊಂದಿಗೆ ಕೂಡಿ ಇದೆ. ಆದ್ದರಿಂದ ಜೀವಾತ್ಮ ಜನಿಸಿದರೆ ಅದರೊಂದಿಗೆ ಆತ್ಮವೂ ಸಹ ಮರುಜನ್ಮವನ್ನು ಪ್ರವೇಶಿಸುತ್ತಿದೆ. ಜೀವಾತ್ಮ ಹೇಗೆ ಶರೀರಗಳನ್ನು ಬದಲಾಯಿಸುತ್ತದೊ ತಿಳಿದರೆ, ಆತ್ಮವೂ ಸಹ ಹೊಸ ಶರೀರವನ್ನು ಹೇಗೆ ಸೇರುತ್ತಿರುವುದು ತಿಳಿಯುತ್ತದೆ. ಆದ್ದರಿಂದ ಅದಕ್ಕೆ ಬೇಕಾದ ಪೂರ್ತಿ ಸವಿವರವನ್ನು ಆಧ್ಯಾತ್ಮಿಕರೀತ್ಯಾ, ವಿಜ್ಞಾನದ (ಸೈನ್ಸು) ರೀತ್ಯಾ ಮತ್ತು ಸಿದ್ಧಾಂತರೀತ್ಯಾ ಕೆಳಗೆ ಬರೆಯುತ್ತಿದ್ದೇವೆ ನೋಡಿರಿ.

ಸ್ತ್ರೀ ಪುರುಷ ಸಂಯೋಗದಲ್ಲಿ ಪುರುಷನ ವೀರ್ಯ ಸ್ತ್ರೀ ಯೋನಿ ಮಾರ್ಗವಾಗಿ ಪ್ರವೇಶಿಸಿ ಗರ್ಭಕೋಶವನ್ನು ಸೇರಿ, ಅದರಲ್ಲಿ ಶರೀರವಾಗಿ ತಯಾರಾಗುವುದಕ್ಕೆ ಪ್ರಾರಂಭವಾಗುತ್ತದೆ. ಪುರುಷನ ವೀರ್ಯವು ಸ್ತ್ರೀ ಗರ್ಭದಲ್ಲಿ ಪೂರ್ತಿ ಶರೀರವಾಗಿ ತಯಾರಾಗುವುದಕ್ಕೆ ಸುಮಾರು ಒಂಭತ್ತು ತಿಂಗಳಕಾಲವು ಬೇಕಾಗುತ್ತದೆ. ಸ್ತ್ರೀ ಗರ್ಭದಲ್ಲಿ ಮಾವಿ ಎಂಬ ಚೀಲದಲ್ಲಿ ಪೂರ್ತಿಯಾಗಿ ತಯಾರಾದ ಶಿಶುಶರೀರವು ಜೀವ ಇಲ್ಲದಿರುವುದು. ಬಹಳ ಜನರಿಗೆ ಇದು ತಿಳಿಯದ ವಿಷಯವಾಗಿದೆ. ಆರನೇ ತಿಂಗಳಲ್ಲಿ ಶಿಶು ಶರೀರಕ್ಕೆ ಪ್ರಾಣ ಬರುತ್ತದೆಂದು ಬಹಳ ಜನರು ತಿಳಿದುಕೊಂಡಿದ್ದಾರೆ. ಆದರೆ ತಾಯಿ ಗರ್ಭದಲ್ಲಿರುವ ಶಿಶುವಿಗೆ ಪ್ರಾಣ ಬರುವುದು ಅಸತ್ಯ. ಗರ್ಭದಲ್ಲಿ ಪೂರ್ವಜನ್ಮ ಜ್ಞಾಪಕ ಹೊಂದುವುದು ಪೂರ್ತಿ ಅಸತ್ಯ. ಇಲ್ಲಿ ಕೆಲವರಿಗೊಂದು ದೊಡ್ಡ ಸಂಶಯ ಏರ್ಪಡಬಹುದು. ಅದು ಏನೆಂದರೆ? ಶಿಶು ಶರೀರದೊಳಗೆ ಪ್ರಾಣ ಬರದಿದ್ದಲ್ಲಿ, ಗರ್ಭದಲ್ಲಿನ ಶಿಶುವು ಕದಲುತ್ತಿರುವಂತೆ ತಿಳಿಯುತ್ತಿದೆ ಅಲ್ಲವೆ! ಅದು ಹೇಗೆ ನಡೆಯುತ್ತದೆ? ಒಂದು ವೇಳೆ ಆರು ತಿಂಗಳಲ್ಲಿ ಪ್ರಾಣ ಬರದಿದ್ದರೆ, ಗರ್ಭದಲ್ಲಿನ ಶಿಶುವು ಕದಲದಂತೆ ಇರುತ್ತದಲ್ಲವೆ! ಆರು ತಿಂಗಳಿಂದಲೇ ಕದಲಿಕೆಗಳು ನಡೆಯುತ್ತವೆ. ಆದ್ದರಿಂದ ಶಿಶು ಶರೀರಕ್ಕೆ ಪ್ರಾಣ ಬಂದಂತೆ ನಾವು ನಂಬುತ್ತಿದ್ದೇವೆಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ತಿಳಿಸುತ್ತೇವೆ. ದೂರದಿಂದ ನೋಡಿ ಹುಣಿಸೆಮರದಂತೆ ಇರುವ ಬನ್ನಿಮರವನ್ನು ಹುಣಿಸೆ ಮರವೆಂದು ಕೊಂಡಂತೆ, ಗರ್ಭದಲ್ಲಿ ಶಿಶುವಿನ ಕದಲಿಕೆಗೆ ಕಾರಣ ತಿಳಿಯದ ನಾವು ಗರ್ಭದಲ್ಲಿನ ಶಿಶುವಿಗೆ ಪ್ರಾಣ ಬರುತ್ತದೆಂಬುವುದರಲ್ಲಿ ವಿಶೇಷವೇನಿದೆ. ಹತ್ತಿರಕ್ಕೆ ಹೋಗಿ ನೋಡಿದಾಗಲೇ

ಹುಣಿಸೆಮರದಂತಿರುವ ಬನ್ನಿಮರ, ಹುಣಿಸೆಮರ ಅಲ್ಲವೆಂದು ತಿಳಿಯುವುದು. ನಿಜವಾಗಲೂ ಗರ್ಭದಲ್ಲಿ ನಡೆಯುತ್ತಿರುವ ಬದಲಾವಣೆಗಳನ್ನು ಗಮನಿಸಿದಾಗಲೇ ಅಲ್ಲವೆ! ನಮಗಿರುವ ಸಂಶಯವು ತೀರುವುದು. ಆದ್ದರಿಂದ ಗರ್ಭದಲ್ಲಿ ಶಿಶು ಶರೀರವು ಹೊಂದುವ ಬದಲಾವಣೆಗಳನ್ನು ಕುರಿತು ತಿಳಿದುಕೊಳ್ಳೋಣ.

ಸ್ತ್ರೀ ಗರ್ಭವು ಧರಿಸಿದ ಮೊದಲ ತಿಂಗಳಿಂದ ಸುಮಾರು ಆರುತಿಂಗಳವರೆಗೂ ಶಿಶು ಶರೀರವು ತಯಾರಾಗಿ ಆಕೃತಿಯನ್ನು ಸೇರಿಕೊಳ್ಳುತ್ತದೆ. ಆರುತಿಂಗಳವರೆಗೂ ಶಿಶು ಶರೀರವು ತಯಾರಾಗುವಂತೆ ತಾಯಿ ಶರೀರದಲ್ಲಿನ ನಾಡಿಗಳೇ ಮಾಡುತ್ತವೆ. ತಾಯಿ ಶರೀರದಲ್ಲಿನ ಬ್ರಹ್ಮನಾಡಿಯಿಂದ ಹೊರಟ ಕೆಲವು ನರಗಳು ಗರ್ಭಕೋಶವನ್ನು ಆಕ್ರಮಿಸಿ, ಶಿಶು ಶರೀರದಿಂದ ಹೊಕ್ಕಳ ಮೂಖಾಂತರ ಸಂಬಂಧ ಹೊಂದಿ, ಆ ಶರೀರವನ್ನು ಬೆಳೆಯುವಂತೆ ಮಾಡುತ್ತವೆ. ತಾಯಿ ಶರೀರದಲ್ಲಿ ಭಾಗಗಳಾಗಿ ಜೀರ್ಣಾಶಯ, ಗುಂಡಿಗೆ, ಪಿತ್ತಕೋಶ (ಲಿವರ್) ಮೊದಲಾದ ಅವಯವಗಳು ಇದ್ದಂತೆ, ಗರ್ಭವನ್ನೂ ಸಹ ಒಂದು ಭಾಗವಾಗಿ ಲೆಕ್ಕಿಸಿಕೊಳ್ಳಬೇಕು. ಜೀರ್ಣಾಶಯ, ಗುಂಡಿಗೆ ಮೊದಲಾದ ಅವಯವಗಳನ್ನು ನಾಡಿಗಳು ಆಕ್ರಮಿಸಿ ಯಾವ ವಿಧವಾಗಿ ಕದಲಿಸುತ್ತಿವೆಯೋ, ಆ ವಿಧವಾಗಿಯೇ ಆರು ತಿಂಗಳ ನಂತರ ಗರ್ಭದಲ್ಲಿನ ಶಿಶುವನ್ನೂ ಸಹ ಆಗಾಗ ಕದಲಿಸುತ್ತಿರುತ್ತವೆ. ಕುಂಬಾರನು ಮಡಿಕೆಯನ್ನು ಒಂದು ಆಕೃತಿ ಬರುವವರೆಗೂ ಒಂದೇ ಸ್ಥಿತಿಯಲ್ಲಿ ತಯಾರು ಮಾಡಿ, ಒಂದು ಆಕೃತಿ ಏರ್ಪಟ್ಟ ನಂತರ ಮಡಿಕೆಯನ್ನು ತಿರುವಿ ತಿರುವಿ ಪೂರ್ತಿ ಸೋರೆಯಾಗಿ ಹೇಗೆ ತಯಾರು ಮಾಡುತ್ತಾನೋ, ಹಾಗೆ ಆತ್ಮ ಬ್ರಹ್ಮನಾಡಿ ಮೂಖಾಂತರ ಆರುತಿಂಗಳವರೆಗೂ ಶಿಶು ಶರೀರವನ್ನು ಒಂದು ಆಕೃತಿ ಬರುವಂತೆ ಮಾಡಿ, ಆ ನಂತರ ಆ ಶರೀರವನ್ನು ತಲೆಕೆಳಗಾಗಿಯೂ, ಅಡ್ಡವಾಗಿಯೂ ಮತ್ತೆ ಇತರ ಸ್ಥಿತಿಗಳಾಗಿ ಮಾವಿಯಲ್ಲಿ ಆಗಾಗ ತಿರುಗಿಸುತ್ತಾ, ಪೂರ್ತಿ ಆಕೃತಿ ಬಂದು ಜೀವಾತ್ಮ ಸೇರುವುದಕ್ಕೆ ತಕ್ಕ ರೀತಿಯಲ್ಲಿ ಶರೀರವನ್ನು ತಯಾರುಮಾಡುತ್ತದೆ. ನಾಡಿಗಳು ಕದಲಿಸುವ ಚಲನೆಯಿಂದ ಕೆಲವರು ಗರ್ಭದಲ್ಲಿ ಆರನೇ ತಿಂಗಳಲ್ಲಿ ಶಿಶು ಶರೀರಕ್ಕೆ ಪ್ರಾಣ ಬಂದಿದೆ ಎಂದು ಭ್ರಮಿಸುತ್ತಿದ್ದಾರೆ.

ತಾಯಿ ಗರ್ಭದಲ್ಲಿ ನಾಡಿಗಳು ಶಿಶು ಶರೀರದಜೊತೆ ಸಂಬಂಧ ಹೊಂದಿದ್ದು, ಒಂಭತ್ತು ತಿಂಗಳ ಪರ್ಯಂತ ಜೀವಿಗೆ ವಾಸಿಸುವುದಕ್ಕೆ ಯೋಗ್ಯವಾದ ಶರೀರವನ್ನು ತಯಾರಾಗುವಂತೆ ಮಾಡಿ, ಪೂರ್ತಿ ಶರೀರವನ್ನು ತಯಾರಾದ ಕೂಡಲೇ ಒಂದು ಕ್ಷಣವೂ ಸಹ ಗರ್ಭದಲ್ಲಿ ಶಿಶುವಿನ ಶರೀರವನ್ನಿಡದೆ, ಗರ್ಭಕೋಶವನ್ನು ಮುಕಳಿಸುವಂತೆ ಮಾಡಿ, ಯೋನಿಯ ಮುಖಾಂತರ ವಿಕಾಸಹೊಂದುವಂತೆ ಮಾಡಿ, ಶಿಶು ಶರೀರವನ್ನು

ಹೊರಗೆ ತಳ್ಳುತ್ತವೆ. ಶಿಶು ಶರೀರವು ಹೊರಬೀಳುವವರೆಗೂ ತಾಯಿ ಗರ್ಭದಲ್ಲಿನ ನಾಡಿಗಳು ಶಿಶು ಶರೀರ ಸಂಬಂಧವನ್ನು ಹೊಂದಿರುತ್ತವೆ. ಯಾವಾಗಾದರೆ ಗರ್ಭದಿಂದ ಶಿಶು ಶರೀರವು ಹೊರಗೆ ಬರುತ್ತದೋ, ಆಗಲೇ ಗರ್ಭದಲ್ಲಿನ ನಾಡಿಗಳ ಸಂಬಂಧಗಳು ನಿಂತುಹೋಗುತ್ತವೆ. ಗರ್ಭದಿಂದ ಹೊರಬೀಳುವ ಶಿಶು ಶರೀರವು ಶವದಂತೆ ಹೊರಬೀಳುತ್ತದೆ. ಶರೀರವು ಹೊರ ಬೀಳುವವರೆಗೂ ಪ್ರಾಣ ಇರುವುದಿಲ್ಲ. ಆದ್ದರಿಂದ ಅದನ್ನು ಶವವಾಗಿಯೇ ಹೇಳಿಕೊಳ್ಳಬೇಕು. ಈಗ ಕೆಲವರ **'ಗರ್ಭದಲ್ಲಿನ ಶಿಶುವಿಗೆ ಪ್ರಾಣ ಇಲ್ಲದಿದ್ದರೆ ಅದು ಕೊಳೆತು ತಾಯಿ ಪ್ರಾಣಕ್ಕೆ ಹಾನಿ ಉಂಟುಮಾಡುತ್ತದೆ ಅಲ್ಲವೆ! ಆರು ತಿಂಗಳ ನಂತರ ಯಾವಾಗಾದರೆ ಗರ್ಭದಲ್ಲಿ ಪಿಂಡವು ಚಲಿಸದೆ ನಿಂತುಹೋಗುತ್ತದೋ ಆಗಲೇ ತಾಯಿಗೆ ಅಪಾಯವು ಸಂಭವಿಸುತ್ತದೆ ಅಲ್ಲವೆ! ಪಿಂಡದ ಚಲನೆ ಯಾವಾಗಾದರೆ ನಿಂತುಹೋಗಿ ತಾಯಿಗೆ ನೋವುಂಟಾಗುತ್ತದೊ, ಆಗ ವೈದ್ಯಶಾಲೆಗೆ ತೆಗೆದುಕೊಂಡು ಹೋದರೆ ಅಲ್ಲಿ ವೈದ್ಯನು ಈಕೆಗೆ ಪಿಂಡವು ಒಳಗೆ ಸತ್ತು ಹೋಗಿದೆ ಎಂದು ಹೇಳಿ, ಆಲಸ್ಯ ಮಾಡಿದರೆ ಅಪಾಯವೆಂದು ಆಪರೇಷನ್ (ಶಸ್ತ್ರಚಿಕಿತ್ಸೆ) ಮಾಡಿ ಪಿಂಡವನ್ನು ಹೊರಗೆ ತೆಗೆದುಹಾಕುವುದೂ ಸಹ ನಡೆಯುತ್ತಿದೆ ಅಲ್ಲವೆ! ಏನು ತಿಳಿಯದ ಮೊರಟರೂ ಸಹ ಪಿಂಡದ ಚಲನೆಯಿಂದ ಶಿಶುವಿಗೆ ಪ್ರಾಣ ಬಂದಿದೆ ಎಂದು, ಪಿಂಡವೊಂದರ ಚಲನೆ ನಿಂತುಹೋದ ತಕ್ಷಣ ಶಿಶುವಿಗೆ ಪ್ರಾಣ ಹೋಗಿದೆಯೆಂದು ತಿಳಿದುಕೊಳ್ಳುತ್ತಿದ್ದಾರೆ! ನಿಮ್ಮ ಮಾತು ಹೇಗೆ ನಂಬುವುದು? ಅಷ್ಟೇ ಅಲ್ಲದೆ ಪಿಂಡದಲ್ಲಿ ಪ್ರಾಣ ಹೋದ ತಕ್ಷಣ ತಾಯಿಗೆ ಅಪಾಯ ನಡೆಯುವುದೂ ಸಹ ತಿಳಿದ ವಿಷಯ. ಈ ವಿಧವಾಗಿ ಪ್ರತ್ಯಕ್ಷವಾಗಿ ತಿಳಿಯುವುದರಿಂದ ಗರ್ಭದಲ್ಲಿನ ಶಿಶುವಿಗೆ ಪ್ರಾಣಬರುತ್ತದೆಂದು ನಾವು ನಂಬುತ್ತಿದ್ದೇವೆ'** ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ!

ಗರ್ಭದಲ್ಲಿ ಆರನೇ ತಿಂಗಳಲ್ಲಿ ಕದಲಿಕೆ ಬರುವುದು ನಿಜ. ಆ ಕದಲಿಕೆ ನಿಂತುಹೋದ ತಕ್ಷಣ ತಾಯಿಗೆ ತೊಂದರೆಯಾಗುವ ಮಾತು ಸಹ ನಿಜ. ಆದರೆ ಅಷ್ಟು ಮಾತ್ರಕ್ಕೆ ಶಿಶುವಿಗೆ ಪ್ರಾಣ ಬಂದಿದೆಯೆಂದು, ಹೋಗಿದೆ ಎಂದು ತಿಳಿದುಕೊಳ್ಳುವುದು ಬಹಳ ತಪ್ಪಾಗುತ್ತದೆ. ಆರನೇ ತಿಂಗಳಲ್ಲಿ ಪ್ರಾಣ ಬಂದಿದೆ ಎಂದರೂ, ಅಲ್ಲಿಯವರೆಗೂ ಪ್ರಾಣ ಇಲ್ಲವೆಂದೇ ಅಲ್ಲವೆ ಅರ್ಥ, ಪ್ರಾಣವಿಲ್ಲದ ಸಮಯದಲ್ಲಿ ತಾಯಿಗೆ ಅಪಾಯ ಸಂಭವಿಸಬಹುದಲ್ಲವೆ! ನಿಜ ತಿಳಿಯದೆ ಎಲ್ಲರೂ ಅಲ್ಲಿಯೇ ತಪ್ಪಾಗಿ ತಿಳಿಯುತ್ತಿದ್ದಾರೆ. ವಾಸ್ತವ ವಿಷಯ ಏನೆಂದರೆ! ನಮ್ಮ ಶರೀರದಲ್ಲಿ ಕೆಲವು ಅವಯವಗಳು ಇದ್ದರು ನಮಗೆ ಯಾವ ಹಾನಿ ಉಂಟಾಗದಂತೆ, ಗರ್ಭಸ್ಥ ಶಿಶುವು ತಾಯಿ ಶರೀರದಲ್ಲಿ ಒಂದು

ಭಾಗವಾಗಿದ್ದು, ತಾಯಿಗೆ ಯಾವ ಹಾನಿ ಉಂಟುಮಾಡದಂತೆ ಇರುತ್ತದೆ. ತಾಯಿ ಶರೀರದಲ್ಲಿನ ನಾಡಿಗಳೇ ಶಿಶು ಶರೀರವನ್ನೂ ಸಹ ಆಕ್ರಮಿಸಿ ಆ ಶರೀರವನ್ನು ಬೆಳೆಸುತ್ತಿವೆ. ಆದ್ದರಿಂದ ಶಿಶು ಶರೀರವು ತಾಯಿ ಶರೀರದಲ್ಲಿ ಒಂದು ಭಾಗವಾಗಿದೆ ಎಂದು ಹೇಳಬಹುದು. ಆರನೇ ತಿಂಗಳಿಂದ ನರಗಳಿಂದ ಪಿಂಡವು ಕದಲಿದರು ತಾಯಿಗೆ ಯಾವ ವಿಧವಾದ ನೋವು ಇರುವುದಿಲ್ಲ. ಈ ವಿಧವಾಗಿದ್ದು ಒಂಭತ್ತನೆ ತಿಂಗಳಲ್ಲಿ ಶಿಶು ಶರೀರವು ಪೂರ್ತಿ ತಯಾರಾದ ತಕ್ಷಣ ನರಗಳ ಒತ್ತಡದಿಂದ ತಾಯಿ ಪ್ರಸವಿಸುತ್ತಿದ್ದಾಳೆ. ಈ ವಿಧವಾಗಿ ಅಲ್ಲದೆ ಯಾರಿಗಾದರೂ ಶರೀರದಲ್ಲಿ ಆರೋಗ್ಯಲೋಪದಿಂದ ಆರನೇ ತಿಂಗಳಿಗಿಂತ ಮೊದಲೆ ಬ್ರಹ್ಮನಾಡಿಯಿಂದ ಹೊರಟ ನರಗಳ ಸಂಬಂಧ ಗರ್ಭಕೋಶದಿಂದ ಕಿತ್ತು ಹೋದರೂ ಆ ಗರ್ಭವು ತಾಯಿ ಶರೀರದಲ್ಲಿ ಬೇರೆ ಪದಾರ್ಥವಾಗಿ ಅಲ್ಲಿ ನಿಲ್ಲದಂತೆ ಸ್ರವಿಸಿಹೋಗುತ್ತದೆ ಇದನ್ನೆ **'ಗರ್ಭಸ್ರಾವ'** ಎಂದು ಕರೆಯುತ್ತಾರೆ ಇದು ಬಹಳ ಜನ ಸ್ತ್ರೀಯರಿಗೆ ಆರುತಿಂಗಳೊಳಗೆ ನಡೆಯುತ್ತಿರುತ್ತದೆ. ಆರು ತಿಂಗಳೊಳಗೆ ಶಿಶು ಶರೀರವು ಒಂದು ಆಕಾರಕ್ಕೆ ಬಂದಿರುವುದಿಲ್ಲ. ಆದ್ದರಿಂದ ರಕ್ತವಾಗಿಯೋ, ಅಥವಾ ರಕ್ತದಮುದ್ದೆ ಯಾಗಿಯೋ ಹೊರಗೆ ಹೋಗುತ್ತದೆ. ರಕ್ತವಾಗಿಯೂ ರಕ್ತದಮುದ್ದೆಯಾಗಿಯೂ ಇರುವುದರಿಂದ ಹೊರಗೆ ಹೋಗುವುದಕ್ಕೆ ಅನುಕೂಲವಾಗಿರುತ್ತದೆ. ಒಂದು ಎರಡು ತಿಂಗಳ ಗರ್ಭಸ್ರಾವವು ಹೆಚ್ಚಿನ ಬಾಧೆಯನ್ನುಂಟುಮಾಡುವುದಿಲ್ಲ. ತಿಂಗಳು ಹೆಚ್ಚಾದಂತೆಲ್ಲ ಗರ್ಭಸ್ರಾವದಲ್ಲಿ ಬಾಧೆ ಹೆಚ್ಚಾಗುತ್ತದೆ.

ಆರನೇ ತಿಂಗಳ ನಂತರ ಪಿಂಡ ಒಂದು ಆಕೃತಿ ಧರಿಸಿ ಸ್ರವಿಸುವುದಕ್ಕೆ ಸಾಧ್ಯವಾಗದಂತೆ ಇರುತ್ತದೆ. ತಾಯಿ ಅನಾರೋಗ್ಯದಿಂದ ಆರನೆ ತಿಂಗಳ ನಂತರ ಗರ್ಭಕೋಶದಲ್ಲಿ ನಾಡಿಗಳು ಗರ್ಭದೊಂದಿಗೆ ಸಂಬಂಧವಿಲ್ಲದೆ ಹೋದ ಪಕ್ಷದಲ್ಲಿ, ಆ ಗರ್ಭ ಸ್ರವಿಸುವುದಕ್ಕೆ ಸಾಧ್ಯವಿಲ್ಲದಿರುವುದರಿಂದ, ಆ ಗರ್ಭಸ್ಥ ಶಿಶು ಶರೀರಕ್ಕೆ ತಾಯಿ ಶರೀರದೊಂದಿಗೆ ಸಂಬಂಧ ಇಲ್ಲದೆ ಬೇರೆ ಪದಾರ್ಥವಾಗಿ ಅಲ್ಲಿಯೇ ನಿಂತುಹೋಗುತ್ತದೆ. ನರಗಳ ಒತ್ತಡ ಗರ್ಭಕೋಶದ ಮೇಲೆ ಇಲ್ಲದಿರುವುದರಿಂದ ಶಿಶು ಶರೀರವು ಇತರೆ ಪದಾರ್ಥವಾಗಿ ಗರ್ಭಕೋಶದಲ್ಲಿಯೇ ನಿಂತುಹೋಗಿ ಕೊಳೆಯುವುದಕ್ಕೆ ಪ್ರಾರಂಭವಾಗುತ್ತದೆ. ಶಿಶು ಶರೀರವು ಉಬ್ಬಿದಂತೆಲ್ಲ ಅದನ್ನು ಅಂಟಿಕೊಂಡಿರುವ ಅವಯವಗಳಿಗೆ ಒತ್ತಡ ಏರ್ಪಡುತ್ತದೆ. ಆ ಸ್ಥಿತಿಯಲ್ಲಿ ಉಬ್ಬುತ್ತಿರುವ ಶಿಶು ಶರೀರದ ಒತ್ತಡಕ್ಕೆ ಉಳಿದ ಸುನ್ನಿತವಾದ ಅವಯವಗಳು ಒಂದಕ್ಕೊಂದು ಒತ್ತಡ ಉಂಟುಮಾಡುತ್ತಾ ಹೋಗಿ ಕೊನೆಗೆ ಗುಂಡಿಗೆಗೆ ಒತ್ತಡ ಉಂಟುಮಾಡುತ್ತದೆ. ಹಾರ್ಟ್ (ಗುಂಡಿಗೆ) ಗೆ ಸ್ವಲ್ಪ ಮಟ್ಟಿನ ಒತ್ತಡ ತಗುಲಿದರು

ಕೂಡಲೇ ನಿಂತುಹೋಗುವ ಅಪಾಯ ಇದೆ. ಅದೃಷ್ಟವಶಾತ್ ತಕ್ಷಣ ವೈದ್ಯರ ಹತ್ತಿರಕ್ಕೆ ಹೋಗಿ ಕೆಟ್ಟುಹೋಗುತ್ತಿರುವ ಶಿಶು ಶರೀರವನ್ನು ಹೊರಗೆ ತೆಗೆದುಹಾಕಿದಂತಾದರೆ ತಾಯಿ ಬದುಕುವುದಕ್ಕೆ ಸಾಧ್ಯವಾಗುತ್ತದೆ. ಈ ವಿಷಯ ಹೀಗಿರುವಾಗ ನಾವು ಬೇರೆ ಬೇರೆ ವಿಧಗಳಾಗಿ ಹೋಲಿಸಿಕೊಂಡು ಗರ್ಭದಲ್ಲಿಯೇ ಪ್ರಾಣ ಬಂದಿದೆ ಎಂದು ಹೋಗಿದೆಂದು ತಿಳಿದುಕೊಳ್ಳುವುದು ನಡೆಯುತ್ತಿದೆ.

ತಾಯಿ ಆರೋಗ್ಯ ಸರಿಯಾಗಿದ್ದು ಪೂರ್ತಿಯಾಗಿ ತಯಾರಾದ ಶಿಶು ಶರೀರವು ಒಂಭತ್ತು ತಿಂಗಳಿಗೆ ಗರ್ಭಕೋಶದಲ್ಲಿನ ನರಗಳ ಒತ್ತಡಗಳಿಂದ ಹೊರಬೀಳುತ್ತದೆ. **ಒಂದು ತಾನಿನಲ್ಲಿನ ವಸ್ತ್ರವು ದರ್ಜಿಯವನಿಂದ ಹೊಲಿಯಲ್ಪಟ್ಟು ಒಬ್ಬ ವ್ಯಕ್ತಿ ಧರಿಸುವುದಕ್ಕೆ ಹೇಗೆ ಯೋಗ್ಯವಾಗಿದೆಯೋ, ಹಾಗೇ ಗರ್ಭಕೋಶದಿಂದ ಹೊರಬೀಳುವ ಶರೀರವೂ ಸಹ ಜೀವಿಗೆ ವಾಸಮಾಡುವುದಕ್ಕೆ ಅನುಕೂಲವಾಗಿ ನರಗಳ ಚೈತನ್ಯದಿಂದ ತಯಾರಾಗಿ ಹೊರಗೆ ಬರುತ್ತಿದೆ.** ಆ ವಿಧವಾಗಿ ಹೊರಗೆ ಬಂದ ಶರೀರದಲ್ಲಿ ಜೀವಾತ್ಮ ಪ್ರವೇಶಿಸುತ್ತಿದ್ದಾನೆ. ಮರಣಿಸಿದ ಕೂಡಲೆ ಜೀವಾತ್ಮ ಸ್ವಲ್ಪವೂ ಆಲಸ್ಯವಿಲ್ಲದೆ ಹೊರಗೆ ಬಂದ ಹೊಸ ಶರೀರವನ್ನು ಧರಿಸುತ್ತಿದ್ದಾನೆ. ಇದನ್ನೇ ಗೀತಾಶಾಸ್ತ್ರದಲ್ಲಿ **'ಹಳೆ ವಸ್ತ್ರವನ್ನು ಬಿಟ್ಟು ಹೊಸವಸ್ತ್ರವನ್ನು ಧರಿಸಿದಂತೆ, ಜೀವಾತ್ಮ ನಾಶವಾದ ಹಳೆ ಶರೀರವನ್ನು ಬಿಟ್ಟು ಹೊಸ ಶರೀರವನ್ನು ಧರಿಸುತ್ತಿದ್ದಾನೆ'** ಎಂದು ಪರಮಾತ್ಮ ಹೇಳಿದ್ದಾನೆ. ಜೀವಾತ್ಮ ಹೊಸ ಶರೀರವನ್ನು ಧರಿಸುವುದು ಅವನ ಕರ್ಮಾನುಸಾರವಾಗಿರುತ್ತದೆ ಜೀವಾತ್ಮ ಮಾಡಿಕೊಂಡ ಪಾಪ ಪುಣ್ಯಗಳನ್ನು ಅನುಸರಿಸಿಯೇ ಹೊಸ ಶರೀರವೂ ಸಹ ಲಭ್ಯವಾಗುತ್ತದೆ. ಒಬ್ಬ ತಾಯಿ ಗರ್ಭದಿಂದ ಹೊರಬಿದ್ದ ಶರೀರವನ್ನು ಧರಿಸುವುದಕ್ಕೆ ತಕ್ಕ ಜೀವಾತ್ಮ ಮತ್ತೊಂದು ಶರೀರದಿಂದ ಬಂದು ಪ್ರಸವಿಸಿದ ಶರೀರದಲ್ಲಿ ಪ್ರವೇಶಿಸುತ್ತಾನೆ. ತಾಯಿಗರ್ಭದಿಂದ ಹೊರಬೀಳುವ ಶರೀರವೊಂದರ ತಲೆ ಹೊರಗೆ ಬಂದನಂತರವೇ ಆ ಶರೀರದಲ್ಲಿ ಜೀವಾತ್ಮ ಪ್ರವೇಶಿಸುವುದಕ್ಕೆ ಅವಕಾಶ ಹೊಂದಿರುತ್ತದೆ. ಆದ ಕಾರಣ ಸ್ವಲ್ಪ ಮಾತ್ರಹೊರಗೆ ಬಂದ ಶರೀರವು ಸಹ ಪ್ರಾಣ ಹೊಂದಿ ಕಿರುಚುವುದಕ್ಕೆ ಪ್ರಾರಂಭಿಸುತ್ತದೆ. ಕೆಲವು ಕಡೆ ಒಂದು ನಿಮಿಷದಿಂದ ಗಂಟೆ ಎರಡುಗಂಟೆವರೆಗೂ ಶಿಶು ಶರೀರದೊಳಗೆ ಪ್ರಾಣ ಬಾರದಿರುವುದು ಸಂಭವಿಸುತ್ತಿದೆ. ಅದಕ್ಕೆ ಕಾರಣ ಆ ಶರೀರದಲ್ಲಿ ಪ್ರವೇಶಿಸುವ ಜೀವಾತ್ಮ ಹಳೆ ಶರೀರವನ್ನು ಬಿಡುವುದರಲ್ಲಿ ಆಲಸ್ಯವಾಗಿರಬಹುದು. ಅಂದರೆ ಆ ಶರೀರದಲ್ಲಿ ಪ್ರವೇಶಿಸುವ ಜೀವಾತ್ಮ ಮತ್ತೊಂದು ಕಡೆ ಮರಣಿಸುವುದು ಆಲಸ್ಯವಾಗಿದೆ ಎಂಬ ಮಾತು. ಆದ್ದರಿಂದ ಇಲ್ಲಿಯೂ ಸಹ ಶಿಶು ಶರೀರಹೊರಗೆ ಬಂದ ನಂತರ ಆಲಸ್ಯವಾಗಿ ಜೀವಾತ್ಮ ಪ್ರವೇಶ ನಡೆಯುತ್ತಿದೆ. ಕೆಲವು

ಕಡೆ ಶಿಶು ಶರೀರವು ಹೊರಗೆ ಬಂದನಂತರ ಪ್ರಾಣ ಬರುವುದಕ್ಕೆ ಕೆಲವು ಗಂಟೆಗಳ ಕಾಲವು ನಡೆದಿರುವ ಸಂದರ್ಭಗಳೂ ಸಹ ಇವೆ. 12 ಗಂಟೆಗಳ ನಂತರ ಪ್ರಾಣಬಂದ ಸಂಘಟನೆಯನ್ನು ಮುಂಬರುವ ಪುಟಗಳಲ್ಲಿ ನೋಡಬಹುದು.

ಪ್ರಸವಿಸಲ್ಪಟ್ಟ ಶರೀರದೊಳಗೆ ಜೀವಾತ್ಮ ಆಲಸ್ಯವಾಗಿ ಏಕೆ ಸೇರುತ್ತಿದ್ದಾನೆಂದು ತಿಳಿಯದ ಗ್ರಾಮೀಣ (ದಾದಿಯರು) ಸೂಲಗಿತ್ತಿಯರು, ಮಾವಿಯಲ್ಲಿ ಪ್ರಾಣವಿದೆ ಎಂದು ಮಾವಿ ಮೇಲೆ ನೀರು ಹಾಕಿ ತಟ್ಟುತ್ತಿದ್ದರು. ತಿಳಿಯದ ತನದಿಂದ ಇಲ್ಲಿ ಸೂಲಗಿತ್ತಿಯರು ಮಾವಿಯನ್ನು ನೀರಿನಿಂದ ತಟ್ಟುತ್ತಿರುವಾಗ, ಜೀವಾತ್ಮ ಮತ್ತೊಂದು ಕಡೆಯಿಂದ ಬಂದು ಶರೀರದೊಳಗೆ ಪ್ರವೇಶಿಸುತ್ತಿದ್ದಾನೆ. ಜೀವಾತ್ಮ ಪ್ರವೇಶಿಸಿದಾಗಲೇ ಶ್ವಾಸ ಶರೀರದೊಳಗೆ ಪ್ರವೇಶಿಸುತ್ತಿದೆ. ಆದ್ದರಿಂದ ಮೊದಲ ಶ್ವಾಸದಿಂದ ಜನ್ಮ ಹೊಂದುತ್ತಿದ್ದಾನೆಂದು ಹೇಳಬಹುದು. ಶಿಶು ಶರೀರದಲ್ಲಿ ಜೀವಾತ್ಮ ಪ್ರವೇಶಿಸುತ್ತಲೇ ಕಿರುಚುವುದಕ್ಕೆ ಪ್ರಾರಂಭ ಮಾಡುತ್ತದೆ. ಆಗ ಸೂಲಗಿತ್ತಿಯರು ಮಾವಿಯಲ್ಲಿನ ಪ್ರಾಣವು ಶಿಶುವಿನಲ್ಲಿ ಬಂದಿದೆ ಎಂದು ಹೊಕ್ಕಳು ಕತ್ತರಿಸುತ್ತಾರೆ. ಪ್ರಾಣ ಬಾರದ ಮೊದಲೆ ಹೊಕ್ಕಳು ಕತ್ತರಿಸಿದರು, ಮಾವಿಯಲ್ಲಿನ ಪ್ರಾಣ ಶರೀರದೊಳಗೆ ಬರಲಿಲ್ಲವೆಂದು ಅವರ ನಂಬಿಕೆ. ಆದ್ದರಿಂದ ಪ್ರಾಣಬಾರದ ಮೊದಲು ಹೊಕ್ಕಳು  ಕತ್ತರಿಸುವುದಿಲ್ಲ. ಪ್ರಾಣ ಬಾರದ ಮೊದಲೆ ಹೊಕ್ಕಳು ಕತ್ತರಿಸಿದ ಪಕ್ಷದಲ್ಲಿ, ಆ ಶಿಶು ಶರೀರದೊಳಗೆ ಪ್ರಾಣ ಬಾರದೆಹೋಗುವ ಮಾತು ನಿಜವೆ. ಮಾವಿಯಿಂದ ಪ್ರಾಣ ಬರುತ್ತದೆಂಬುವುದು ಮಾತ್ರ ಅಸತ್ಯ.

ಹೊಕ್ಕಳು ಕತ್ತರಿಸಿದ ನಂತರ ಪ್ರಾಣ ಬಾರದಂತೆಹೋಗುವುದಕ್ಕೆ ಕಾರಣ ಏನೆಂದರೆ, ಹೊಸದಾಗಿ ಮೊಳಕೆಬರುವ ಹುಣಿಸೆ ಮೊಳಕೆಗೆ, ಬೀಜಗಳ ಬೇಳೆಗಳು ಯಾವ ವಿಧವಾಗಿ ಆಹಾರ ಬಲವನ್ನು ಕೊಡುತ್ತಿವೆಯೋ, ಆ ವಿಧವಾಗಿಯೇ ಹೊಸದಾಗಿ ಹೊರಬಿದ್ದ ಶರೀರಕ್ಕೆ, ಜೀವಾತ್ಮ ಪ್ರವೇಶಿಸುವವರೆಗೂ  ಮಾವಿ ಆಧಾರವಾಗಿ ಶಿಶು ಶರೀರದಲ್ಲಿನ ರಕ್ತವು ಗಡ್ಡೆಕಟ್ಟದಂತೆ ಮಾಡುತ್ತಿದೆ. ಆ ವಿಧವಾಗಿ ಸ್ವಲ್ಪ ಸಮಯ ಮಾತ್ರ ಮಾಡಬಲ್ಲದು. ಜೀವಾತ್ಮ ಪ್ರವೇಶಿಸಿದ ತಕ್ಷಣ ಶ್ವಾಸ ರಕ್ತಪ್ರಸರಣ ನಡೆಯುತ್ತಿವೆ. ಆದರೆ ಮಾವಿಯ ಅವಶ್ಯಕತೆ ಇಲ್ಲ. ಆದ್ದರಿಂದ ಹೊಕ್ಕಳ ಕರುಳನ್ನು ಕತ್ತರಿಸಿ ಮಾವಿಯನ್ನು ಬೇರೆ ಮಾಡುತ್ತಿದ್ದೇವೆ. ಜೀವಾತ್ಮ ಶರೀರದಲ್ಲಿ ಪ್ರವೇಶಿಸದ ಮೊದಲೆ ಹೊಕ್ಕಳು ಕತ್ತರಿಸಿದರು, ರಕ್ತ ತಣ್ಣಗಾಗಿ ಶರೀರದಲ್ಲಿ ಗಡ್ಡೆಕಟ್ಟಿಕೊಂಡು ಜೀವಾತ್ಮ ಪ್ರವೇಶಿಸುವುದಕ್ಕೂ ಶ್ವಾಸ ನಡೆಯುವುದಕ್ಕೆ ಅಯೋಗ್ಯವಾಗುತ್ತದೆ. ಆದ ಕಾರಣ ಮೊದಲೆ ಹೊಕ್ಕಳು ಕತ್ತರಿಸುವ ಪದ್ಧತಿ ಒಳ್ಳೆಯದಲ್ಲ. ಒಂದು ವೇಳೆ ತಿಳಿಯದವರು ಮೊದಲೆ ಹೊಕ್ಕಳು ಕತ್ತರಿಸಿದರು

ಆ ಶರೀರದಲ್ಲಿನ ರಕ್ತ ತಣ್ಣಗಾಗದ ಮೊದಲೆ ಒಂದು ನಿಮಿಷದೊಳಗೆ ಜೀವಾತ್ಮ ಬಂದು ಸೇರಿದರು ಸೇರಬಹುದು. ಆ ನಿಮಿಷದಲ್ಲಿಯೇ ಬಂದು ಸೇರದೆಹೋದರೆ ಆ ಶರೀರದಲ್ಲಿ ರಕ್ತ ಗಡ್ಡೆಕಟ್ಟಿ ಕೆಲಸಕ್ಕೆ ಬಾರದಂತೆ ಹೋಗುತ್ತದೆ. ಆದ್ದರಿಂದ ತಿಳಿದವರಾಗಲಿ, ತಿಳಿಯದವರಾಗಲಿ, ಪ್ರಾಣಬಾರದ ಮೊದಲೆ ಹೊಕ್ಕಳು ಕತ್ತರಿಸಬಾರದು. ಹೊಕ್ಕಳು ಮೊದಲು ಕತ್ತರಿಸದ ಕಾರಣದಿಂದ ಮಾವಿಯಿಂದ ಪ್ರಾಣಬರುತ್ತಿದೆ ಎಂದು ಬಹಳ ಜನರಿಗೆ ನಂಬಿಕೆಯಿದೆ. ಆ ನಂಬಿಕೆಯಿರುವ ಸೂಲಗಿತ್ತಿಯರ ಮಾತುಕೇಳಿ **'ಏನಮ್ಮ ನೀವು ಆರನೇ ತಿಂಗಳಲ್ಲಿ ಶಿಶುವಿಗೆ ಪ್ರಾಣಬಂದಿದೆ ಎಂದು ಹೇಳುತ್ತೀರಲ್ಲ, ಹಾಗಾದರೆ ತಾಯಿ ಪ್ರಸವಿಸಿದಾಗ ಶಿಶು ಶರೀರದಲ್ಲಿ ಪ್ರಾಣಬಂದಿರುವುದು ಶಿಶುವಿಗಾ? ಅಥವಾ ಮಾವಿಗಾ? ಶಿಶುವಿಗೆ ಪ್ರಾಣಬಂದಿದ್ದರೆ ಅದು ಶಿಶುವಿನಲ್ಲಿ ಇರದೆ ಮಾವಿಯೊಳಗೆ ಏಕೆ ಹೋಗಿದೆ, ಮತ್ತೆ ಶರೀರದೊಳಗೆ ಏಕೆ ಬರುತ್ತಿದೆ?'** ಎಂದು ಕೇಳಿದರೆ ಅವರು ಯಾವ ಸಮಾಧಾನ ಹೇಳಲಾರರು.

ನಮ್ಮ ಜನ್ಮವನ್ನು ಕುರಿತು ನಾವೇ ತಿಳಿದುಕೊಳ್ಳದ ಅಜ್ಞಾನ ಅಂಧಕಾರದಲ್ಲಿದ್ದು ಕತ್ತಲಲ್ಲಿರುವ ವಸ್ತುವನ್ನು ಕುರಿತು ಊಹಿಸಿ ಹೇಳಿದಂತೆ, ತಿಳಿಯದ ಹುಟ್ಟುವಿಕೆಯನ್ನು ಕುರಿತು ಕೆಲವರು ಆರನೆತಿಂಗಳಲ್ಲಿ ಜೀವಾತ್ಮ ತಾಯಿಗರ್ಭದಲ್ಲಿ ಪ್ರವೇಶಿಸಿ ಪೂರ್ವ ಜನ್ಮಗಳನ್ನು ಜ್ಞಾಪಕ ತಂದುಕೊಂಡು ಬಾಧೆ ಬೀಳುತ್ತಾನೆನ್ನುವುದು ಹೇಗಿರುತ್ತದೋ ನೀವೇ ಆಲೋಚಿಸಿ. ಪೂರ್ವಕಾಲದಲ್ಲಿ ಹುಟ್ಟಿದ ನಂತರವೇ ಪ್ರಾಣಬರುತ್ತದೆಂದು ವಿಶ್ವಾಸಿಸುತ್ತಿದ್ದರು. ಧರ್ಮಗಳೆಲ್ಲ ಅಧರ್ಮಗಳಾಗಿ ಬದಲಾಗಿ ಹೋಗುತ್ತವೆಂದು ಪರಮಾತ್ಮ ಹೇಳಿದಂತೆ, ಈಗ ಪ್ರಾಣ ಹುಟ್ಟುವುದಕ್ಕಿಂತ ಮೊದಲೆ ಇದೆಯೆಂದು ಹೇಳುತ್ತಿದ್ದಾರೆ. ಪೂರ್ವಕಾಲದಲ್ಲಿ ಹುಟ್ಟಿದ ಶರೀರದೊಳಗೆ ಪ್ರಾಣಬಂದಾಗ ಜೀವಾತ್ಮನಿಗೆ ಜನ್ಮ ಉಂಟಾದಂತೆ ಲೆಕ್ಕಿಸಿಕೊಂಡು, ಆ ಲೆಕ್ಕದ ಮೂಲಕ ಜಾತಕ ಚಕ್ರ ಬರೆದು ನೋಡುತ್ತಿದ್ದರು. ಈಗಲೂ ಆ ಪದ್ಧತಿ ಇದೆ. ಜ್ಯೋತಿಷ್ಯಶಾಸ್ತ್ರದ ಪ್ರಕಾರವೂ ಸಹ ಶರೀರದಲ್ಲಿ ಮೊದಲ ಶ್ವಾಸ ಯಾವಾಗ ಪ್ರವೇಶಿಸುತ್ತಿದೆಯೋ, ಆಗಲೇ ಜನ್ಮವೆಂದು ಗ್ರಹಿಸುತ್ತಿದ್ದರು. ಈ ಕಾಲದ ಜ್ಯೋತಿಷ್ಯದಲ್ಲಿ ಪ್ರಸವ ನಡೆದ ಸಮಯವನ್ನೇ ಜನ್ಮವಾಗಿ ಲೆಕ್ಕಿಸಿಕೊಳ್ಳುತ್ತಿದ್ದಾರೆ. ನಿಜವಾದ ಜನ್ಮ ಶ್ವಾಸ ಶರೀರದಲ್ಲಿ ಪ್ರವೇಶಿಸಿದಾಗಲೇ ಆಗುತ್ತಿದೆ. ಆದಕಾರಣ ಲೆಕ್ಕಪ್ರಕಾರ ಜ್ಯೋತಿಷ್ಯವು ಸ್ಪಷ್ಟವಾಗಿ ತಿಳಿಯುತ್ತಿತ್ತು. ಈಗ ಪ್ರಸವ ಸಮಯವನ್ನೇ ಜನ್ಮವಾಗಿ ಲೆಕ್ಕಿಸಿಕೊಳ್ಳುತ್ತಿದ್ದಾರೆ. ಆದ್ದರಿಂದ ಭವಿಷ್ಯತ್ತು ಸರಿಯಾಗಿ ತಿಳಿಯದಂತೆ ಇದೆ. ಆರನೆ ತಿಂಗಳಲ್ಲಿ ಜೀವಾತ್ಮ ಹೊಸ ಶರೀರವನ್ನು ಸೇರಿದ್ದರು ಜ್ಯೋತಿಷ್ಯರು ಅದನ್ನೇ ಜನ್ಮವಾಗಿ ಲೆಕ್ಕಿಸಿಕೊಳ್ಳಬೇಕು

ಅಲ್ಲವೆ! ಹಾಗಲ್ಲದೆ ಪ್ರಸವಿಸಿದ ನಂತರ ಲೆಕ್ಕಿಸಿಕೊಳ್ಳುತ್ತಿದ್ದಾರೆಂದರೆ ಧರ್ಮವು ಪೂರ್ತಿ ನಾಶವಾಗದೆ ಇನ್ನೂ ಸ್ವಲ್ಪ ಉಳಿದಿದೆ ಎಂದು ಅರ್ಥವಾಗುತ್ತಿದೆ.

ಇಂದಿನ ಶರೀರ ಶಾಸ್ತ್ರಜ್ಞರಿಗೆ ಮತ್ತು ವೈದ್ಯರಿಗೆ ಈ ವಿಷಯಗಳಲ್ಲಿ ಬಹಳ ಅನುಮಾನಗಳು ಇರಬಹುದು. ಏಕೆಂದರೆ ಅವರು ಓದಿದ ಓದಿನಲ್ಲಿ ಪುರುಷನ ಶರೀರದಲ್ಲಿ ತಯಾರಾದ ವೀರ್ಯದಲ್ಲಿ ವೀರ್ಯಕಣಕ್ಕೆ ಪ್ರಾಣವಿದ್ದಂತೆ ತಿಳಿಸಲಾಗಿದೆ. ಆದ್ದರಿಂದ ಒಬ್ಬ ವೈದ್ಯನು ನಮ್ಮ ಬೋಧನೆ ಕೇಳಿದ ಒಬ್ಬವ್ಯಕ್ತಿಯ ಜೊತೆ ಮಾತನಾಡಿ "ಆತನು ಹೇಳಿರುವುದು ಪೂರ್ತಿಶಾಸ್ತ್ರ ವಿರುದ್ಧವಾಗಿದೆ. ಶರೀರ ಶಾಸ್ತ್ರಜ್ಞರಾಗಿ, ವೈದ್ಯರಾಗಿರುವ ನಮಗಿಂತ ಆತನಿಗೆ ಹೆಚ್ಚಾಗಿ ತಿಳಿದಿರುತ್ತದೆಯಾ? ಪ್ರಸವಿಸಿದ ನಂತರ ಶರೀರಕ್ಕೆ ಪ್ರಾಣ ಬರುವುದು ಪೂರ್ತಿ ಅಸತ್ಯ. ಆರನೆತಿಂಗಳಲ್ಲಿ ಪ್ರಾಣ ಬರುತ್ತದೆಂದು ಉಳಿದ ವೇದಾಂತಿಗಳು ಹೇಳುವ ಮಾತುಗಳು ಸಹ ಅಸತ್ಯವೇ. ಪುರುಷ ವೀರ್ಯಕಣದಲ್ಲಿಯೇ ವೀರ್ಯಕಣಗಳು ಜೀವವನ್ನು ಹೊಂದಿವೆ. ಜೀವವಿರುವ ವೀರ್ಯಕಣವೂ ಸ್ತ್ರೀ ಶರೀರದಲ್ಲಿ ರಜೋಕಣ ದೊಂದಿಗೆ ಬೆರೆತು ಶರೀರವಾಗಿ ಬದಲಾವಣೆಯಾಗಿ, ಒಂಭತ್ತು ತಿಂಗಳ ನಂತರ ಜೀವದಿಂದಲೇ ತಾಯಿ ಗರ್ಭದಿಂದ ಹೊರಗೆ ಬರುತ್ತಿದೆ. ಜೀವವಿಲ್ಲದಂತೆ ಬರುತ್ತದೆಂಬ ಮಾತು ಬಹಳ ತಪ್ಪು. ವೀರ್ಯದಲ್ಲಿ ವೀರ್ಯಕಣಕ್ಕೆ ಜೀವವಿದ್ದಂತೆ ನಾವು ಎಷ್ಟೋ ನಿದರ್ಶನಗಳನ್ನು ತೋರಿಸುತ್ತೇವೆ. ಪ್ರಾಣವಿರುವ ಜಂತು ಶರೀರದಿಂದ ವೀರ್ಯವನ್ನು ತೆಗೆದು, ಸ್ವಲ್ಪಕಾಲ ಹೊರಗೆ ಅದಕ್ಕೆ ತಕ್ಕ ವಾತಾವರಣದಲ್ಲಿ ಇಟ್ಟು, ಅಗತ್ಯವಿದ್ದಾಗ ಆ ವೀರ್ಯವನ್ನು ಸ್ತ್ರೀ ಜಂತುವೊಂದರ ಯೋನಿಯಲ್ಲಿ ಬಿಟ್ಟು ಅದಕ್ಕೆ ಗರ್ಭ ಏರ್ಪ ಡಿಸುತ್ತಿದ್ದೇವೆ." ಎಂದು ಹೇಳುತ್ತಿದ್ದಾರೆ ವೀರ್ಯಕ್ಕೆ ಪ್ರಾಣವಿದೆಯೆಂದು ಆ ವ್ಯಕ್ತಿ ಪೂರ್ತಿ ಯಾಗಿ ನಂಬುವುದಕ್ಕೆ ಹೆಚ್ಚಿನ ತಂಪಾದ ವಾತಾವರಣದಲ್ಲಿ ಅಂದರೆ 0' ಡಿಗ್ರಿಯಿಂದ 4'ಸೆಲ್ಸಿಯಸ್ಸ್ ಉಷ್ಣೋಗ್ರತೆ ಇರುವ ಒಂದು ಫ್ಲಾಸ್ಕಿನಿಂದ ಟೆಸ್ಟ್ ಟ್ಯೂಬ್ ತರಹ ಇರುವ ಒಂದು ಗಾಜಿನ ಕೋಣೆಯಲ್ಲಿ ಭದ್ರಪಡಿಸಿರುವ ಪಶುವೀರ್ಯವನ್ನು ತೆಗೆದು ತಕ್ಷಣ ಗಾಜಿನ ಪಲಕದ ಮೇಲೆ ಇಟ್ಟು, ಮೈಕ್ರೋಸ್ಕೋಪ್ (ಸೂಕ್ಷ್ಮ ದರ್ಶನಿ) ಯಿಂದ ತೋರಿಸಿದಾಗ, ಒಂದುಹನಿ ವೀರ್ಯದಲ್ಲಿ ತಲೆಬಾಲ ಹೊಂದಿದ ವೀರ್ಯಕಣಗಳು ಅಸಂಖ್ಯಾತವಾಗಿದ್ದು, ಅವು ಚಲನೆಹೊಂದಿ ಬಾಲವನ್ನು ಕದಲಿಸುತ್ತಾ ಮುಂದಕ್ಕೆ ಈಜುತ್ತಿರುವಂತೆ ಕಾಣಿಸುವುದರಿಂದ, ಆ ವ್ಯಕ್ತಿ ಬಹಳ ಆಶ್ಚರ್ಯವಾಗಿ ವೀರ್ಯದಲ್ಲಿನ ವೀರ್ಯಕಣಕ್ಕೆ ಪ್ರಾಣವಿದೆ ಎಂದು ಪೂರ್ತಿ ವಿಶ್ವಸಿಸುತ್ತಿದ್ದಾನೆ. ವೀರ್ಯಕಣವೊಂದರ ಚಿತ್ರವನ್ನು ನಂತರ ಚಿತ್ರದಲ್ಲಿ ನೋಡಬಹುದು.




ವೀರ್ಯದಲ್ಲಿ ವೀರ್ಯಕಣಗಳು ಚಲಿಸುತ್ತಿರುವುದು ನೋಡಿದ ಆ ವ್ಯಕ್ತಿ ವೀರ್ಯಕ್ಕೆ ಜೀವವಿರುವಾಗ, ಪ್ರಸವಿಸಿದನಂತರ ಜೀವಬರುತ್ತದೆ ಎಂಬುವುದು ಅಸತ್ಯವಾಗಿರಬಹುದೆಂದು ಭಾವಿಸಿ, ಆತನು ನಮ್ಮನ್ನು ಬೇಟಿಯಾಗಿ "ಸ್ವಾಮಿಯವರೆ! ಜೀವಾತ್ಮ ಜನ್ಮಹೊಂದುವ ವಿಷಯವಾಗಿ ನೀವು ಹೇಳಿದ ಬೋಧನೆ ಕೇಳಿದ ನಾನು, ಒಂದು ಪರಿಶೋಧನೆಯಲ್ಲಿ ವೀರ್ಯಕ್ಕೆ ಪ್ರಾಣವಿದ್ದಂತೆ ನೋಡಿದ್ದೇನೆ. ವೀರ್ಯದಲ್ಲಿ ವೀರ್ಯಕಣಗಳಿಗೆ ಮೊದಲೆ ಪ್ರಾಣವಿರುವಾಗ ಪ್ರಸವದ ನಂತರ ಪ್ರಾಣ ಬರುತ್ತದೆಂಬ ನಿಮ್ಮ ಮಾತು ನಮಗೆ ಸಂಶಯವಾಗಿ ಇದೆ. ಒಂದು ವೇಳೆ ಪ್ರಸವದ ನಂತರ ಪ್ರಾಣಬಂದಂತೆ ಭಾವಿಸಿದರು ವೀರ್ಯಕಣ ಚಲಿಸುವುದು ಕಣ್ಣಾರೆ ನೋಡಿದ್ದೇವಲ್ಲವೆ! ಎನ್ನುವ ಸಂಶಯವೊಂದು ಕಡೆ ಏರ್ಪಡುತ್ತಿದೆ. ಆದ ಕಾರಣ ನೀವು ಹೇಳಿದ ಬೋಧನೆ ನಿಜವಾ? ಅಥವಾ ವೈದ್ಯರು ಹೇಳಿತೋರಿಸಿರುವುದು ನಿಜವಾ? ಯಾವುದು ಸತ್ಯ ಯಾವುದು ಅಸತ್ಯ ಎನ್ನುವ ಸಂದಿಗ್ಧಾವಸ್ಥೆಯಲ್ಲಿ ಇದ್ದೇನೆ. ಇದರ ವಿಷಯವಾಗಿ ನೀವೇನು ಹೇಳುತ್ತೀರಾ" ಎಂದು ಆತನು ನಮ್ಮನ್ನು ಪ್ರಶ್ನಿಸಿದ್ದಾನೆ.

ಇದಕ್ಕೂ ಮೊದಲೇ ಆಧ್ಯಾತ್ಮಿಕ ಗ್ರಂಥಗಳಲ್ಲಿ ಆರುತಿಂಗಳಿಗೆ ಪ್ರಾಣ ಬರುತ್ತದೆಂಬ ವಿಷಯ ನಿಜ ಅಲ್ಲವೆಂದು? ಪ್ರಸವಿಸಿದನಂತರ ಜೀವಬರುತ್ತದೆಂದು ನಮ್ಮ ಸಿದ್ಧಾಂತವನ್ನು ತಿಳಿಸಿದ್ದೇವೆ. ಈಗ ವೈದ್ಯರು ವೀರ್ಯಕ್ಕೆ ಜೀವವಿರುವಂತೆ ಅವರ ಉದ್ದೇಶವನ್ನು ತಿಳಿಸುತ್ತಿದ್ದಾರೆ. ಆದ್ದರಿಂದ ಅವರ ಸಂಶಯ ತೀರುವಂತೆ ಕೆಳಗೆ ವಿಜ್ಞಾನರೂಪವಾಗಿ ತಿಳಿಸುತ್ತಿದ್ದೇವೆ ಶ್ರದ್ಧೆಯಿಂದ ಗ್ರಹಿಸಿ.

ಜೀವಾತ್ಮ ಕಾಣಿಸುವವನು ಅಲ್ಲ. ಜ್ಞಾನನೇತ್ರಕ್ಕೆ ಮಾತ್ರ ಜೀವಾತ್ಮ ಕಾಣಿಸಬಲ್ಲನು. ಜ್ಞಾನನೇತ್ರ ಇಲ್ಲದ ವೈದ್ಯರು ಕದಲುತ್ತಿರುವ ವೀರ್ಯಕಣದಲ್ಲಿ ಜೀವವಿದ್ದಂತೆ ಭಾವಿಸಿಕೊಳ್ಳುತ್ತಿದ್ದಾರಾಗಲಿ ಜೀವವನ್ನು ನೋಡಲಿಲ್ಲ. ಕದಲುತ್ತಿರುವ ಮಾತ್ರಕ್ಕೆ

ಜೀವವಿರುವಂತೆ ಏಕೆ ಭಾವಿಸಿಕೊಳ್ಳಬೇಕು? ಕಣಕ್ಕೆ ಚಲನೆ ಇರುವುದರಿಂದ ಜೀವವಿರುವಂತೆ ಊಹಿಸಿದರೆ, ಬಸ್ಸುಗಳು ರೈಲುಗಳು ಚಲಿಸುತ್ತಿವೆ ಅಲ್ಲವೆ! ಅವುಗಳಿಗೂ ಜೀವವಿದೆಯಾ? ಮನುಷ್ಯರು ಇಲ್ಲದೆಯೇ ಅಂತರಿಕ್ಷದಲ್ಲಿ ಪ್ರಯಾಣಿಸುವ ರಾಕೆಟ್‌ಗಳಿಗೆ ಜೀವವಿದೆಯಾ! ಇಲ್ಲ. ಚಲಿಸುತ್ತಿರುವ ಯಂತ್ರಗಳಿಗೆ ಜೀವಹೇಗೆ ಇಲ್ಲವೋ, ಆ ವಿಧವಾಗಿಯೇ ಕದಲುತ್ತಿರುವ ವೀರ್ಯಕಣಕ್ಕೆ ಜೀವವಿಲ್ಲವೆಂದು ತಿಳಿಸುತ್ತಿದ್ದೇವೆ. ಜೀವ ಇಲ್ಲದಿದ್ದರೂ ವೀರ್ಯಕಣ ಏಕೆ ಕದಲುತ್ತಿದೆ ಎಂದು ಕೆಲವರಲ್ಲಿ ಸಂಶಯ ಏರ್ಪಡಬಹುದು. ಆ ಸಂಶಯ ತೀರುವುದಕ್ಕೆ ವೀರ್ಯದಲ್ಲಿನ ವೀರ್ಯಕಣವು ಪುರುಷ ಶರೀರದಲ್ಲಿ ಯಾವ ವಿಧವಾಗಿ ತಯಾರಾ ಗುತ್ತಿದೆಯೋ ಸಂಪೂರ್ಣವಾಗಿ ತಿಳಿದುಕೊಳ್ಳಬೇಕಾಗಿದೆ. ಆದ್ದರಿಂದ ಇಂದಿನ ಶರೀರ ಶಾಸ್ತ್ರಜ್ಞರಿಗು ಮತ್ತು ವೈದ್ಯರಿಗೂ ತಿಳಿಯದ ಜನನ ಸಿದ್ಧಾಂತವನ್ನು ಈ ಕಾಲದ ಶರೀರ ಶಾಸ್ತ್ರವನ್ನು ಅನುಸರಿಸಿಯೇ ತಿಳಿಸುತ್ತಿದ್ದೇವೆ.

ಪುರುಷ ಶರೀರದಲ್ಲಿ ಅಂಗಕ್ಕೆ ಪಕ್ಕದಲ್ಲಿರುವ ಬೀಜಗಳಲ್ಲಿ (ವೃಷಣಗಳಲ್ಲಿ) ವೀರ್ಯವು ತಯಾರಾಗುತ್ತದೆ. ಬೀಜಗಳು ಪ್ರಾಣಿಗಳಿಗೆ ದೊಡ್ಡದಾಗಿರುತ್ತವೆ. ಮಾನವರಿಗೆ ಚಿಕ್ಕದಾಗಿರುತ್ತವೆ. ಪ್ರಾಣಿಗಳಿಗೂ ಮಾನವರಿಗೂ ಎಂದರೆ ಪಿಂಡದಿಂದ ಉದ್ಭವಿಸುವ ಎಲ್ಲ ಜೀವಿಗಳಿಗೂ ವೀರ್ಯವು ತಯಾರಾಗುತ್ತದೆ. ಮಾನವನ ಬೀಜಗಳಲ್ಲಿ 200ಕ್ಕೂ ಮೇಲೆ ಲಾಬ್ಯೂಲು ಎನ್ನುವ ಸೂಕ್ಷ್ಮಭಾಗಗಳು ಇರುತ್ತವೆ. ಪ್ರತಿ ಲಾಬ್ಯೂಲು ಎನ್ನುವ ಸೂಕ್ಷ್ಮಭಾಗದಲ್ಲಿಯೂ ಮಡತೆಗಳಾಗಿ ಒಂದು ಕಟ್ಟೆಯಂತೆ ಇರುವ ನಾಳಗಳಿವೆ. ಇವುಗಳನ್ನೇ ವೀರ್ಯ ಉತ್ಪತ್ತಿ ನಾಳಗಳೆಂದು ಹೇಳುತ್ತಿದ್ದೇವೆ. ಈ ಮಡತೆಗಳಿರುವ ನಾಳಗಳಲ್ಲಿಯೇ ವೀರ್ಯಕಣಗಳು ಉತ್ಪತ್ತಿಯಾಗುತ್ತಿವೆ. ವೀರ್ಯೋತ್ಪತ್ತಿ ನಾಳಗಳೆಲ್ಲವೂ ಒಂದಾಗಿ ಸೇರಿ **ಎಪಿಡೈಡಿಮಿಸ್** ಎನ್ನುವ ಒಂದು ದೊಡ್ಡ ಕೊಳವೆಯಾಗಿ ಉದರಭಾಗದೊಳಗೆ ಪ್ರವೇಶಿಸಿ ಅಲ್ಲಿ ಒಂದು ಚೀಲವಾಗಿ ವಿಸ್ತರಿಸಿರುತ್ತದೆ. ವೀರ್ಯವು ಈ ಚೀಲದಲ್ಲಿ ನೆಲೆಸಿರುತ್ತದೆ. ಆದ್ದರಿಂದ ಇದನ್ನು ವೀರ್ಯಾಶಯ ಎನ್ನುತ್ತಿದ್ದೇವೆ. ಎರಡು ಬೀಜಗಳಿಂದ ಬರುವ ನಾಳಗಳು ಎರಡು ವೀರ್ಯಾಶಯಗಳಾಗಿ ವಿಸ್ತರಿಸಲ್ಪಟ್ಟಿದ್ದು, ವೀರ್ಯಾಶಯಗಳಿಂದ ನಾಳಗಳು ಹೊರಟು ಪ್ರೊಸ್ಟೇಟು ಎನ್ನುವ ಗ್ರಂಥಿಯೊಳಗೆ ಹೋಗಿ, ಅಲ್ಲಿಂದ ಮೂತ್ರನಾಳದೊಳಗೆ ತೆರೆದುಕೊಂಡು ಇವೆ. ಮಾನವನ ಬೀಜ ನಿರ್ಮಾಣ ಕೆಳಗಿನ ಚಿತ್ರದಲ್ಲಿ ನೋಡಬಹುದು.

ಬೀಜಗಳಲ್ಲಿ ತಯಾರಾದ ವೀರ್ಯಕಣಗಳು ಎಪಿಡೈಡಿಮಿಸ್ ಸೇರಿ, ಅಲ್ಲಿಂದ ವೀರ್ಯನಾಳದ ಮೂಲಕ ವೀರ್ಯಾಶಯದೊಳಗೆ ಹೋಗಿ, ಸ್ವಲ್ಪಕಾಲ ನೆಲೆಸಿದ್ದು




**1. ಎಪಿಡೈಡಿಮಿಸ್ ನಾಳ** **2. ವೀರ್ಯಾಶಯ** **3. ಪ್ರೊಸ್ಟೇಟು ಗ್ರಂಥಿ**

**4. ಲಿಂಗ** **5. ಬೀಜ** **6. ಲಾಬ್ಯುಲು**

ಸ್ಕಲನ ಕಾಲದಲ್ಲಿ ಪ್ರೊಸ್ಟೇಟುಗ್ರಂಥಿ ಮೂಲಕ ಬಂದಾಗ, ಅದು ಸ್ರವಿಸಿದ ಹಾಲಿನಂತಹ ತೆಳುವಾದ ದ್ರವದಿಂದ ಕಲೆತು ಮೂತ್ರನಾಳದೊಳಗೆ ಬಂದು, ಅಲ್ಲಿ **ಕೌಪರ್** ಎನ್ನುವ ಚಿಕ್ಕ ಗ್ರಂಥಿಗಳು ತಯಾರುಮಾಡಿದ ದ್ರವವನ್ನು ಮತ್ತು ಮೂತ್ರನಾಳದಲ್ಲಿ **ಮ್ಯೂಕಸ್** ಎನ್ನುವ ಪೊರೆ ಸ್ಯಂಧಿಸಿದ ಮ್ಯೂಕಸ್ ಎನ್ನುವ ಜಿಗುರು ಪದಾರ್ಥವನ್ನು ಬೆರೆಸಿಕೊಂಡು ವೀರ್ಯವು ಬಿಳಿಯ ಜಿಗುರು ಪದಾರ್ಥವಾಗಿ ಹೊರಗೆ ಬರುತ್ತಿದೆ. ಇದನ್ನೇ ವೀರ್ಯ ಎನ್ನುತ್ತೇವೆ. ಇಂಗ್ಲೀಷ್‌ನಲ್ಲಿ ಸ್ಪರ್ಮ್ (Sperm) ಎನ್ನುತ್ತಾರೆ.

ವೀರ್ಯದಲ್ಲಿರುವ ವೀರ್ಯಕಣಗಳು ತಲೆ (ಶಿರಸ್ಸು) ಕಂಠ (ಕತ್ತು) ಬಾಲ (ಪುಚ್ಛ) ಎನ್ನುವ ಮೂರು ಭಾಗಗಳಾಗಿರುತ್ತವೆ. ಬೀಜವೀರ್ಯನಾಳದಲ್ಲಿ ತಯಾರಾದ ವೀರ್ಯಕಣವು ಚಲನೆರಹಿತವಾದದು ಬೀಜವೀರ್ಯನಾಳದಲ್ಲಿ ತಯಾರಾದ ವೀರ್ಯಕಣವು ಪೂರ್ತಿ ಪರಿಮಾಣ ಹೊಂದುವುದಿಲ್ಲ. ಎಪಿಡೈಡಿಮಿಸ್‌ನಲ್ಲಿಯೂ, ವೀರ್ಯನಾಳದಲ್ಲಿಯೂ ಮತ್ತು ವೀರ್ಯಾಶಯದಲ್ಲಿಯೂ ವೀರ್ಯಕಣವೊಂದರ ಪೂರ್ತಿ ಆಕಾರವು ತಯಾರಾಗುತ್ತದೆ. ವೀರ್ಯಕಣ ಪೂರ್ತಿ ಪರಿಮಾಣ ಹೊಂದಿದ ನಂತರವೇ ಚಲನೆ ಹೊಂದಿರುತ್ತದೆ. ಪೂರ್ತಿ ಆಕಾರ ತಯಾರಾಗದವರೆಗೂ ಚಲನೆ ಇರುವುದಿಲ್ಲವೆಂದು

ಮುಖ್ಯವಾಗಿ ಗ್ರಹಿಸಬೇಕು. ಪೂರ್ತಿಯಾಗಿ ತಯಾರಾದ ವೀರ್ಯಕಣವು ದ್ರವಪದಾರ್ಥದಲ್ಲಿ ಒಂದು ನಿಮಿಷಕ್ಕೆ ನಾಲ್ಕು ಮಿಲಿಮೀಟರ್‌ಗಳ ವೇಗದಿಂದ ಈಜುತ್ತಿರುತ್ತದೆ. ವೀರ್ಯಕಣದ ಬಾಲ ಹಾವಿನಬಾಲ ಚಲಿಸಿದಂತೆ ಚಲಿಸುತ್ತಿರುವುದರಿಂದ ವೀರ್ಯಕಣವು ಮುಂದಕ್ಕೆ ಚಲಿಸುತ್ತಿರುತ್ತದೆ. ವೀರ್ಯಕಣಗಳು ಆಮ್ಲಗುಣ ದ್ರವ ಪದಾರ್ಥದಲ್ಲಿ ಚಲಿಸಲಾರವು. ಕ್ಷಾರಗುಣ ದ್ರವಪದಾರ್ಥದಲ್ಲಿ ಚಲಿಸುತ್ತವೆ. ಪುರುಷ ಶರೀರದಲ್ಲಿ ವೀರ್ಯಕಣಗಳು ಕೆಲವು ವಾರಗಳವರೆಗೂ ಚಲನಶಕ್ತಿ ಹೊಂದಿರುತ್ತವೆ. ಸ್ಖಲಿತವಾದನಂತರ ಕೆಲವು ಗಂಟೆಗಳಕಾಲ ಮಾತ್ರವೆ ಸ್ತ್ರೀ ದೇಹ ಶೀತೋಷ್ಣಸ್ಥಿತಿಯಲ್ಲಿ ಚಲಿಸುತ್ತವೆ.

ಈಗ ವೀರ್ಯಕಣ ಚಲಿಸುವುದಕ್ಕೆ ಕಾರಣವೇನೆಂಬ ವಿಷಯ ಪರಿಶೀಲಿಸಿ ದಂತಾದರೆ ವೀರ್ಯಾಶಯದೊಳಗೆ ಗ್ಲೂಕೋಜ್ ಅಧಿಕವಾಗಿರುವ ದ್ರವವು ಸಂಧಿಸಲ್ಪಡುತ್ತದೆ. ಬಾಲವು ಇರುವ ವೀರ್ಯಕಣಕ್ಕೆ ಗ್ಲೂಕೋಜ್ ತಗಲಿದ ಕೂಡಲೇ ಬಾಲವು ಚಲಿಸುತ್ತದೆ. ವೀರ್ಯಾಶಯದಲ್ಲಿನ ದ್ರವದಲ್ಲಿ ಗ್ಲೂಕೋಜ್ ಸಂಧಾನವು ಸಾಮಾನ್ಯವಾಗಿರುತ್ತದೆ. ಆದ ಕಾರಣ ವೀರ್ಯಕಣವು ಎಷ್ಟು ದಿನಗಳಾದರೂ ಪುರುಷ ಶರೀರದಲ್ಲಿ ಚಲನೆ ಹೊಂದಿರುತ್ತದೆ. **ದ್ರವದಲ್ಲಿ ಗ್ಲೂಕೋಜ್ ಇಲ್ಲದ ಪಕ್ಷದಲ್ಲಿ ವೀರ್ಯಕಣ ಚಲಿಸುವುದಿಲ್ಲ.** ಸುಣ್ಣದಕಲ್ಲಿಗೆ ನೀರು ತಗಲಿದ ಕೂಡಲೇ ಯಾವ ವಿಧವಾಗಿ ಚಲನೆ ಹುಟ್ಟುತ್ತಿದೆಯೋ, ನಿಂಬೆರಸಕ್ಕೆ ಸೋಡಾ ತಗುಲಿದ ತಕ್ಷಣ ಯಾವವಿಧವಾಗಿ ಚಲನೆ ಬರುತ್ತದೋ, ಪಾದರಸಕ್ಕೆ ಶಾಖ ತಗುಲಿದರೆ ಯಾವ ವಿಧವಾಗಿ ಚಲಿಸುತ್ತಿದೆಯೋ ಆ ವಿಧವಾಗಿಯೇ ವೀರ್ಯಕಣ ಬಾಲಕ್ಕೆ ಗ್ಲೂಕೋಜ್ ತಗುಲಿದ ತಕ್ಷಣ ಬಾಲದಲ್ಲಿ ಕದಲಿಕೆ ಏರ್ಪಡುತ್ತದೆ. ಗ್ಲೂಕೋಜ್‌ಗೂ ವೀರ್ಯಕಣಬಾಲಕ್ಕೂ ಸರಿಹೋಗುವುದಿಲ್ಲ. ಆದ್ದರಿಂದ ವೀರ್ಯಕಣ ಬಾಲಕ್ಕೆ ಯಾವಾಗ ಗ್ಲೂಕೋಜ್ ತಗುಲುತ್ತದೊ ಆಗ ರಾಸಾಯನಿಕ ಕ್ರಿಯೆ ಏರ್ಪಡುತ್ತದೆ. ಆ ಕ್ರಿಯೆಯೇ ವೀರ್ಯಕಣ ಬಾಲದ ಚಲನೆ. ವೀರ್ಯಕಣಬಾಲ ಚಲಿಸುವುದರಿಂದ ವೀರ್ಯಕಣ ಎಲ್ಲವೂ ಚಲಿಸುತ್ತದೆ. ಅಷ್ಟು ಮಾತ್ರಕ್ಕೆ ವೀರ್ಯಕಣಕ್ಕೆ ಪ್ರಾಣ ಬಂದಿದೆಂಬುವುದು ಅಸತ್ಯ. ಶಾಸ್ತ್ರಜ್ಞರೆಲ್ಲರೂ ಇಲ್ಲಿಯೇ ತಪ್ಪಾಗಿ ಅರ್ಥೈ ಸಿಕೊಂಡಿದ್ದಾರೆ. **ಯಾವಾಗಾದರೆ ಗ್ಲೂಕೋಜ್ ಇಲ್ಲದಂತೆ ಹೋಗುತ್ತದೋ ಆಗ ವೀರ್ಯಕಣ ಚಲನೆ ನಿಂತುಹೋಗುತ್ತದೆನ್ನುವ ವಿಷಯ ಮುಖ್ಯವಾಗಿ ಗ್ರಹಿಸಬೇಕು.**

ಶಾಸ್ತ್ರಜ್ಞರ ಪರಿಶೋಧನೆ ಪ್ರಕಾರ ವೀರ್ಯಕಣ ಜೀವ ಇರುವುದೇ ಆದರೆ ಅದರ ಚಲನೆ ಮುಂದಕ್ಕೆ ಮಾತ್ರವೇ ಇರದೆ ಹಿಂದಕ್ಕೂ ಪಕ್ಕಕ್ಕೂ ಸಹ ಇರಬೇಕು. ಅದಕ್ಕೆ ಜೀವ ಇಲ್ಲದಿರುವುದರಿಂದ ಪಕ್ಕಕ್ಕೂ ಹಿಂದಕ್ಕೂ ಚಲಿಸುವುದಿಲ್ಲ ಎಂಬ ವಿಷಯ

ಮುಖ್ಯವಾಗಿ ಗಮನಿಸಬೇಕು. ಗ್ಲೂಕೋಜ್‌ಗೂ ಬಾಲಕ್ಕೂ ಸರಿಹೋಗದ ಕಾರಣವಾಗಿ, ಬಾಲವು ಚಲಿಸುವುದರಿಂದ, ವೀರ್ಯಕಣವು ಮುಂದಕ್ಕೇ ಹೋಗುತ್ತದೆಂದು ಗ್ರಹಿಸಬೇಕು. ವೀರ್ಯಕಣ ಬಾಲ ಚಲನೆ ಎಂಬ ರಾಸಾಯನಿಕ ಕ್ರಿಯೆಯಿಂದ ಗ್ಲೂಕೋಜ್ ಖರ್ಚಾಗಿ ಹೋಗಿರುತ್ತದೆ. ಗ್ಲೂಕೋಜ್ ಖರ್ಚಾಗಿ ವೀರ್ಯದ್ರವದಲ್ಲಿ ಇಲ್ಲದಂತೆ ಹೋದಾಗ, ವೀರ್ಯಾಶಯವು ಗ್ಲೂಕೋಜ್‌ನ್ನು ಸ್ಯಂಧಿಸುತ್ತಲೇ ಇರುತ್ತದೆ. ಆದ್ದರಿಂದ ವೀರ್ಯಕಣ ಚಲನೆಗೆ ಒಳಗೆ ಯಾವ ಆತಂಕವು ಇಲ್ಲವೆಂದು ಹೇಳಬಹುದು.

ಸಂಯೋಗ ಸಮಯದಲ್ಲಿ ವೀರ್ಯವು ಸ್ತ್ರೀಯೊಂದರ ಯೋನಿಯಲ್ಲಿ ಸೇರುತ್ತದೆ. ವೀರ್ಯದಲ್ಲಿನ ವೀರ್ಯಕಣವು ಸ್ತ್ರೀಗರ್ಭದಲ್ಲಿನ ರಜೋಕಣದ ಜೊತೆ ಸೇರಿದಾಗಲೇ ಸ್ತ್ರೀ ಗರ್ಭಧರಿಸುವುದಕ್ಕೆ ಸಾಧ್ಯವಿದೆ. ವೀರ್ಯಕಣವು ಗರ್ಭಾಶಯದಲ್ಲಿರುವ ರಜೋಕಣದೊಂದಿಗೆ ಸೇರುವುದಕ್ಕೆ ಬಹಳ ದೂರ ಹೋಗಬೇಕಾಗಿರುತ್ತದೆ. ವೀರ್ಯಕಣ ಬಾಲದ ಚಲನೆಯು ವೀರ್ಯಕಣವನ್ನು ಮುಂದಕ್ಕೇ ತೆಗೆದುಕೊಂಡು ಹೋಗುತ್ತದೆ. ವೀರ್ಯಕಣವು ಸ್ವಲ್ಪ ದೂರ ಪ್ರಯಾಣಿಸಿದ ನಂತರವೇ ರಜೋಕಣದೊಂದಿಗೆ ಸೇರುವುದಕ್ಕೆ ಸಾಧ್ಯವಿದೆ. ವೀರ್ಯಕಣ ಚಲನೆ ರಜೋಕಣದಜೊತೆ ಸೇರುವುದಕ್ಕೇ ನಿರ್ಮಿಸಲ್ಪಟ್ಟಿದೆ. ಇಲ್ಲದಿದ್ದರೆ ಚಲನೆಯಿಂದ ಅವಶ್ಯಕತೆಯೇ ಇಲ್ಲ. ಸ್ತ್ರೀ ಯೋನಿಯಲ್ಲಿ ಸ್ಕಲನವು ನಡೆದ ವೀರ್ಯದಲ್ಲಿ ಗ್ಲೂಕೋಜ್ ಇರುವವರೆಗೂ ವೀರ್ಯಕಣಗಳು ಚಲಿಸಿ ಮುಂದಕ್ಕೆ ಹೋಗುತ್ತವೆ. ಗ್ಲೂಕೋಜ್ ಮುಗಿದುಹೋದ ತಕ್ಷಣ ನಿಂತುಹೋಗುತ್ತದೆ. ವೀರ್ಯಕಣವು ಕದಲುತ್ತಾ ಎಷ್ಟು ಮುಂದಕ್ಕೆ ಹೋಗುತ್ತದೆಂಬ ವಿಷಯ ವೀರ್ಯದ್ರವದಲ್ಲಿರುವ ಗ್ಲೂಕೋಜ್‌ನ್ನನುಸರಿಸಿ ನಿರ್ಣಯಿಸಬಹುದು. ಸ್ಕಲನ ಕಾಲದಲ್ಲಿ ಪ್ರೊಸ್ಟೇಟು ಗ್ರಂಥಿ ತನ್ನ ಸಂಧನದಲ್ಲಿ ಹೆಚ್ಚಾಗಿ ಗ್ಲೂಕೋಜ್‌ನ್ನು ಸ್ಯಂಧಿಸುತ್ತದೆ. ಆದ ಕಾರಣ ವೀರ್ಯಕಣ ಯೋನಿಯಲ್ಲಿ ಚಲನೆಹೊಂದಿ ಮುಂದಕ್ಕೆ ಹೋಗುತ್ತದೆಂದು ಹೇಳಬಹುದು.

ಆಮ್ಲಗುಣ ದ್ರವದಲ್ಲಿ ಗ್ಲೂಕೋಜ್ ಇದ್ದರೂ ರಾಸಾಯನಿಕ ಕ್ರಿಯೆ ನಡೆಯದೆ ವೀರ್ಯವು ಚಲನೆಯಿಲ್ಲದಾಗುತ್ತದೆ. ಕ್ಷಾರ ಗುಣದ್ರವದಲ್ಲಿ ಮಾತ್ರವೇ ಗ್ಲೂಕೋಜ್ ಸಂಯೋಗದಿಂದ ಚಲನೆಹೊಂದಿ ಮುಂದಕ್ಕೆ ಹೋಗುತ್ತದೆ. ಸ್ತ್ರೀ ಯೋನಿಯಲ್ಲಿ ದ್ರವಗಳು ಆಮ್ಲಗುಣ ಹೊಂದಿರುವವಾಗಿವೆ. ಆದ್ದರಿಂದ ಯೋನಿಯಲ್ಲಿ ವೀರ್ಯಕಣ ಚಲನೆ ರಹಿತವಾಗಿ ಮುಂದಕ್ಕೆ ಹೋಗಲಾರದ ಸ್ಥಿತಿ ಏರ್ಪಡುತ್ತಿದೆ. ಸ್ತ್ರೀ ಯೋನಿಯಲ್ಲಿ ಬಿದ್ದಿರುವ ವೀರ್ಯವು ಆಮ್ಲದ್ರವ ಪ್ರಭಾವದಿಂದ ನಿರ್ವೀರ್ಯವಾಗಿ ಹೋಗದಂತೆ ಪ್ರೊಸ್ಟೇಟು ಗ್ರಂಥಿ ಕ್ಷಾರಗುಣ ಇರುವ ಬಿಳಿಯ ದ್ರವವನ್ನು ಸ್ಕಲನಕಾಲದಲ್ಲಿ ಸ್ಯಂಧಿಸುತ್ತದೆ.

ಸ್ಖಲಿತವಾದ ವೀರ್ಯದಲ್ಲಿ ಕ್ಷಾರಗುಣ ದ್ರವ ಇರುವುದರಿಂದ ವೀರ್ಯವು ಸ್ತ್ರೀ ಯೋನಿಯಲ್ಲಿನ ಆಮ್ಲದ್ರವದಲ್ಲಿ ನಿಂತುಹೋಗದಂತೆ ಎರಡು ಮೂರು ಗಂಟೆಗಳ ಕಾಲದವರೆಗೂ ಚಲಿಸಬಲ್ಲದು. ವೀರ್ಯ ಬಿಳಿಯಾಗಿರುವುದಕ್ಕೆ ಪ್ರೊಸ್ಟೇಟು ಗ್ರಂಥಿ ಕಾರಣ ಎಂದು ತಿಳಿಯಿರಿ.

ಸ್ತ್ರೀ ಪುರುಷರ ಸಂಯೋಗ ಮಾಡಿದ ಪ್ರತಿಸಾರಿ ವೀರ್ಯಕಣ ಸ್ತ್ರೀ ರಜೋಕಣ ದೊಂದಿಗೆ ಸೇರುವುದಿಲ್ಲ. ಪ್ರತಿ ಸಂಯೋಗದಲ್ಲಿಯೂ ವೀರ್ಯಕಣ ಚಲನೆಗೆ ಬೇಕಾದ ಗ್ಲೂಕೋಜ್ ಖಾಲಿಯಾಗಿರುವುದೋ ಅಥವಾ ಯೋನಿಯಲ್ಲಿ ಆಮ್ಲಗುಣ ದ್ರವಪ್ರಭಾವ ಹೆಚ್ಚಾಗುವುದೋ ಇರುತ್ತದೆ. ಒಂದುವೇಳೆ ವೀರ್ಯದಲ್ಲಿ ಗ್ಲೂಕೋಜ್ ಸಂಪೂರ್ಣವಾಗಿದ್ದು ಕ್ಷಾರಗುಣ ದ್ರವವೂ ಸಹ ಹೆಚ್ಚಾಗಿದ್ದರೂ ವೀರ್ಯಕಣವು ಪೂರ್ತಿ ಮುಂದಕ್ಕೆ ಹೋದರೂ ಗರ್ಭ ಕೋಶದಲ್ಲಿ ಆ ಸಮಯಕ್ಕೆ ರಜೋಕಣ ಇಲ್ಲದಂತಾದರೆ ಆ ಸಂಯೋಗ ನಿಷ್ಪ್ರಯೋಜನೆಯಾಗುತ್ತದೆ. ಯಾವಾಗಲೋ ಒಂದುಸಲ ಎಲ್ಲಾ ಅನುಕೂಲಗಳು ಏರ್ಪಟ್ಟರೆ ವೀರ್ಯಕಣವು ರಜೋಕಣದೊಂದಿಗೆ ಸೇರುತ್ತದೆ. ಯಾವ ಒಂದು ಅನುಕೂಲವು ಇಲ್ಲದಿದ್ದರೂ ಆ ಸಂಯೋಗ ಫಲಿಸುವುದಿಲ್ಲ. ಆದ್ದರಿಂದ ಮಾನವರ ಎಲ್ಲ ಸಂಯೋಗಗಳು ಫಲಿಸುವುದಿಲ್ಲವೆಂದು ಹೇಳಬಹುದು. ಇದರ ಕಾರಣದಿಂದಲೇ ಕೆಲವರಿಗೆ ಸಂತಾನ ನಿಧಾನವಾಗಿ ಆಗುತ್ತದೆ. ಪಿಂಡಜಗಳಾದ ಪ್ರಾಣಿಗಳು ಒಂದು ಪರ್ಯಾಯ ಸಂಯೋಗಿಸಿದರು ಅದು ಸಫಲವಾಗಿ ಸಂತತಿ ನಡೆಯುತ್ತದೆ. ಇದಕ್ಕೆ ಕಾರಣ ಪ್ರಾಣಿಯ ವೀರ್ಯದಲ್ಲಿ ಕ್ಷಾರಗುಣ ದ್ರವವು ಹೆಚ್ಚಾಗಿರುವುದು ಮತ್ತು ವೀರ್ಯದಲ್ಲಿ ಗ್ಲೂಕೋಜ್ ಸಹ ಅಧಿಕವಾಗಿರುತ್ತದೆ ಎಂದು ತಿಳಿದುಕೊಳ್ಳಿ. ಸ್ತ್ರೀ ಪ್ರಾಣಿಗಳಲ್ಲಿ ರಜೋಕಣ ತಯಾರು ಆದಾಗಲೇ ಆ ಪ್ರಾಣಿ ಶರೀರದಲ್ಲಿ ಬದಲಾವಣೆಗಳು ಕಾಣಿಸಿ ಪುರುಷ ಪ್ರಾಣಿಯನ್ನು ಆಕರ್ಷಿಸುತ್ತವೆ. ಆ ಬದಲಾವಣೆಯನ್ನು ನೋಡಿದಾಗಲೇ ಪುರುಷ ಪ್ರಾಣಿಯಲ್ಲಿ ಕಾಮಗುಣ ಹುಟ್ಟುತ್ತದೆ. ಸ್ತ್ರೀ ಪ್ರಾಣಿಗಳಲ್ಲಿಯೂ ಸಹ ರಜೋಕಣ ತಯಾರಾದಾಗಲೇ ಕಾಮವಾಂಛ ಉಂಟಾಗುತ್ತದೆ. ಆಗಲೇ ಪುರುಷ ಪ್ರಾಣಿಗೋಸ್ಕರ ಹುಡುಕಾಡುತ್ತದೆ. ಆ ಸ್ಥಿತಿಯನ್ನೇ ಬೆದೆಯಾ (ಮನಸ್ಸಾ) ಗಿದೆ ಎಂದು ನಾವು ಕರೆಯುತ್ತಿರುತ್ತೇವೆ. ರಜೋಕಣ ತಯಾರಾದಾಗ ಸಂಯೋಗ ನಡೆಯುತ್ತಿದೆ. ಮತ್ತು ಆ ವೀರ್ಯದಲ್ಲಿ ಕಣಗಳು ಮುಂದಕ್ಕೆ ಹೋಗುವ ಅನುಕೂಲತೆಗಳು ಇವೆ. ಆದ್ದರಿಂದ ಪ್ರಾಣಿಗಳ ಸಂಯೋಗವು ಒಂದು ಪರ್ಯಾಯ ನಡೆದ ಕೂಡಲೇ ಅದು ಸಫಲವಾಗುತ್ತದೆ. ಮನುಷ್ಯ ಸಂಯೋಗದಲ್ಲಿ ವೀರ್ಯಕ್ಕೆ ಎಷ್ಟೋ ಆತಂಕಗಳು ಇವೆ. ಆದ ಕಾರಣ ಮಾನವರ ಸಂಯೋಗ ಎಷ್ಟುಬಾರಿ ನಡೆದರೂ ಅದು ಸಫಲವಾಗದೆ ಹೋಗಬಹುದು.

ವೀರ್ಯಕಣವು ಶರೀರ ಉಷ್ಣೋಗ್ರತೆಯಲ್ಲಿ ಗ್ಲೂಕೋಜ್ ಬೆರೆಯುವುದರಿಂದ ರಸಾಯನಿಕ ಕ್ರಿಯೆಯಿಂದ ಚಲಿಸಬಲ್ಲದು. ವೀರ್ಯಕಣ ಗ್ಲೂಕೋಜ್ ರಸಾಯನಿಕ ಕ್ರಿಯೆಗೆ ಉಷ್ಣೋಗ್ರತೆ ಅವಶ್ಯವೆಂದು ಇಲ್ಲಿ ತಿಳಿಯುತ್ತದೆ. ಶರೀರ ಉಷ್ಣೋಗ್ರತೆಗಿಂತ ಸ್ವಲ್ಪಮಟ್ಟಿನ ಹೆಚ್ಚಿನ ಉಷ್ಣವಾದರು ಫರವಾಗಿಲ್ಲ. ಅತೀ ಹೆಚ್ಚಿನ ಉಷ್ಣೋಗ್ರತೆಯಲ್ಲಿ ರಸಾಯನಿಕ ಕ್ರಿಯೆ ನಡೆಯುವುದಿಲ್ಲ. ಮತ್ತು ವೀರ್ಯಕಣ ಕೆಟ್ಟುಹೋಗುತ್ತದೆ. ಅದೇ ವಿಧವಾಗಿ ಶರೀರ ಉಷ್ಣೋಗ್ರತೆಗಿಂತ ಸ್ವಲ್ಪ ಉಷ್ಣೋಗ್ರತೆ ಕಡಿಮೆ ಇರುವ ವೀರ್ಯಕಣ ಗ್ಲೂಕೋಜ್ ರಸಾಯನಿಕ ಕ್ರಿಯೆ ನಡೆಯುತ್ತದೆ. ಆದರೆ ಪೂರ್ತಿಶೀತಲ ಏರ್ಪಟ್ಟರೆ ರಸಾಯನಿಕ ಕ್ರಿಯೆ ನಡೆಯುವುದಿಲ್ಲ. ಹೆಚ್ಚಿನ ಶೀತದಲ್ಲಿ ವೀರ್ಯಕಣ ಕೆಟ್ಟುಹೋಗುವುದಿಲ್ಲ. ಈಗಿನ ಉಷ್ಣೋಗ್ರತೆ ಅಳತೆ ಪ್ರಮಾಣದಲ್ಲಿ 0' ಸೆಲ್ಸಿಯಸ್ ಶೀತದಲ್ಲಿ ಇಟ್ಟಿರುವ ವೀರ್ಯವು ಕೆಟ್ಟುಹೋಗುವುದಿಲ್ಲ. ಆ ಶೀತದಲ್ಲಿ ವೀರ್ಯದಲ್ಲಿನ ರಸಾಯನಿಕ ಕ್ರಿಯೆ ನಡೆಯದೆ ನಿಂತುಹೋಗುತ್ತದೆ. ಆದರೆ ವೀರ್ಯಕಣಗಳು ಕೆಟ್ಟು ಹೋಗುವುದಿಲ್ಲ. ರಸಾಯನಿಕ ಕ್ರಿಯೆ ನಡೆಯದಿರುವುದರಿಂದ ವೀರ್ಯದಲ್ಲಿನ ಗ್ಲೂಕೋಜ್ ಖರ್ಚಾಗದೆ ಹಾಗೇ ಇರುತ್ತದೆ. ಆದ್ದರಿಂದ ಈ ಕಾಲದಲ್ಲಿ ವೀರ್ಯವನ್ನು ಹೊರಗಡೆ **"0 ಸೆಲ್ಸಿಯಸ್"** ಶೀತದ ಪ್ರದೇಶದಲ್ಲಿ ಶೇಕರಿಸಿ ಇಡುತ್ತಿದ್ದಾರೆ. ಶೇಕರಿಸಿ ಇಟ್ಟಿರುವ ವೀರ್ಯಕಣಕ್ಕೆ ಮತ್ತೆ ಶಾಖ ತಗುಲಿದ ತಕ್ಷಣ ರಸಾಯನಿಕ ಕ್ರಿಯೆ ನಡೆದು ಚಲಿಸುವುದಕ್ಕೆ ಪ್ರಾರಂಭವಾಗುತ್ತದೆ. ಆದಕಾರಣ ವೀರ್ಯವನ್ನು ಅವಶ್ಯಕ ಬಂದಾಗ ಸಂತಾನ ಕಾರ್ಯಕ್ಕೆ ಬಳಸಿಕೊಳ್ಳುತ್ತಿದ್ದಾರೆ. ಈ ಕಾರ್ಯವು ಪ್ರಾಣಿಗಳಲ್ಲಿ ಹೆಚ್ಚಾಗಿ ಮಾಡುತ್ತಿದ್ದಾರೆ.

ಈ ಕಾಲದ ಶಾಸ್ತ್ರಜ್ಞರಿಗೆ ಜ್ಞಾನನೇತ್ರವಾಗಲಿ, ಸೂಕ್ಷ್ಮದೃಷ್ಠಿಯಾಗಲಿ ಇರುವುದಿಲ್ಲ. ಆದ್ದರಿಂದ ಅವರ ಭಾವಗಳೆಲ್ಲವೂ ಸ್ಥೂಲ ಪರಿಶೋಧನೆಗಳ ಮೇಲೆ ಆಧಾರಪಟ್ಟಿರುತ್ತವೆ. ವೀರ್ಯಕಣ ಚಲಿಸುತ್ತಿದೆಯೆಂದರೆ ಅದಕ್ಕೆ ಪ್ರಾಣ ಇದ್ದಂತೆ ಎಂದು ಅವರ ಲೆಕ್ಕಚಾರ ಇರುತ್ತದೆ. ಅವರಿಗೆ ಜೀವಾತ್ಮದ ವಿಷಯ ತಿಳಿದಿಲ್ಲ. ಜೀವಾತ್ಮ ಒಂದುಕಡೆ ವಾಸಿಸುವುದಕ್ಕೆ ಅವನೊಂದಿಗೆ ಎಷ್ಟು ಭಾಗಗಳು (ಶಕ್ತಿಯುತ ಭಾಗಗಳು) ಇರುತ್ತವೆಂಬ ವಿಷಯ ಅವರಿಗೆ ತಿಳಿದಿಲ್ಲ. ಜೀವಾತ್ಮ ಒಂದು ವೀರ್ಯಕಣದಲ್ಲಿಯೇ ಅಲ್ಲದೆ, ಯಾವ ಶರೀರದಲ್ಲಿ ವಾಸಿಸಿದರು ಅಲ್ಲಿ ಪಂಚಭೂತಗಳು ಇರಬೇಕು. ಆಕಾಶ, ಗಾಳಿ, ಅಗ್ನಿ, ನೀರು, ಭೂಮಿಯಿಂದ ತಯಾರಾದ ಮನಸ್ಸು, ಬುದ್ಧಿ, ಚಿತ್ತ, ಅಹಮ್ ಎನ್ನುವ ಮೊದಲಾದ ಇಪ್ಪತ್ತುನಾಲ್ಕು ಭಾಗಗಳು ಇರುವಕಡೆಯೇ ಜೀವಾತ್ಮ ನಿವಾಸ ಮಾಡುತ್ತಾನೆ. ಆದರೆ 24 ಭಾಗಗಳಿಲ್ಲದ ಕಡೆ ಜೀವಿಯು ಇರುವುದಿಲ್ಲವೆಂದು ತಿಳಿಯಬೇಕು. ಜೀವಾತ್ಮ ಮರಣದಲ್ಲಿ ಹಳೆ ಶರೀರವನ್ನು ಬಿಟ್ಟು, ಜನ್ಮದಲ್ಲಿ ಹೊಸ ಶರೀರವನ್ನು ಧರಿಸುತ್ತಾನೆಂದು ಪರಮಾತ್ಮ

ಗೀತೆಯಲ್ಲಿ ತಿಳಿಸಿದ್ದಾನೆ. ಮತ್ತು ಹೊಸ ಶರೀರದಲ್ಲಿ ಬಾಲ್ಯ, ಯೌವ್ವನ, ಕೌಮಾರ, ವೃದ್ಧಾಪ್ಯ ಎನ್ನುವ ದಶೆಗಳು ಇರುತ್ತವೆಂದು ತಿಳಿಸಿದ್ದಾನೆ. ಆದರೆ ವೀರ್ಯಕಣವಾಗಿ ಗರ್ಭದಲ್ಲಿ ವೃದ್ಧಿ ಹೊಂದುವಂತೆ ತಿಳಿಸಲಿಲ್ಲ. ಜೀವಾತ್ಮ ಧರಿಸುವ ಶರೀರ ಸ್ಥೂಲವು, ಸೂಕ್ಷ್ಮವೆಂದು ಎರಡು ಭಾಗಗಳಾಗಿರುತ್ತದೆ. ಈ ಎರಡು ಭಾಗಗಳಲ್ಲಿ ಸ್ಥೂಲಭಾಗ ಇಲ್ಲದಿದ್ದರೂ, ಸೂಕ್ಷ್ಮಭಾಗವಿದ್ದರೂ ಅದರಲ್ಲಿ ಜೀವಾತ್ಮ ನಿವಾಸ ಮಾಡುತ್ತಾನೆ. ಆದರೆ ಸೂಕ್ಷ್ಮ ಇಲ್ಲದಿದ್ದರೆ ಜೀವಾತ್ಮ ವಾಸ ಮಾಡಲಾರನು. ಜೀವಾತ್ಮ ವಾಸ ಮಾಡುವ ವಿಧಾನ ಸಾಂಖ್ಯಯೋಗ ತಿಳಿದ ಯೋಗಿಗಳಿಗೆ ಮಾತ್ರವೇ ತಿಳಿಯುತ್ತದೆ. ಇಂದಿನ ಡಾಕ್ಟರ್‌ಗಳಿಗೂ, ಶಾಸ್ತ್ರಜ್ಞರಿಗೂ ತಿಳಿದಿಲ್ಲ. ಜೀವಾತ್ಮವನ್ನು ಜ್ಞಾನನೇತ್ರ ಇರುವ ಯೋಗಿಗಳು ಮಾತ್ರ ನೋಡುತ್ತಾರೆ. ಡಾಕ್ಟರ್‌ಗಳು, ಶಾಸ್ತ್ರಜ್ಞರು ತಮ್ಮ ಸ್ಥೂಲನೇತ್ರಗಳಿಂದ ನೋಡಲಾರರು.

ವೀರ್ಯಕಣಕ್ಕೆ ಬಾಲ, ತಲೆ ಇರುವುದಾಗಿ ತಿಳಿಸಿದ್ದೇವೆ. ಬಾಲವು ಚಲನೆ ಹೊಂದಿ ತಲೆಯಾಗಿರುವುದನ್ನು ಮುಂದಕ್ಕೆ ತಳ್ಳಿಕೊಂಡು ಹೋಗುತ್ತದೆ. ಬಾಲವು ವೀರ್ಯಕಣ ತಲೆಭಾಗವನ್ನು ಮುಂದಕ್ಕೆ ತೆಗೆದುಕೊಂಡುಹೋಗುವ ವಾಹನವಾಗಿಯೇ ಇದೆ. ವೀರ್ಯಕಣದಲ್ಲಿನ ತಲೆಯೇ ಸಂತಾನಕ್ಕೆ ಕಾರಣವೆಂದು ತಿಳಿಯುತ್ತಿದೆ. ಇದಕ್ಕೂ ಮೊದಲು ವೀರ್ಯಕಣ ಬಾಲದ ಬಗ್ಗೆ ತಿಳಿದುಕೊಂಡಿದ್ದೇವೆ. ಈಗ ಅದರ ತಲೆಯನ್ನು ಕುರಿತು ತಿಳಿದುಕೊಳ್ಳೋಣ. ವೀರ್ಯಕಣದ ತಲೆ ಒಳಗಿನ ಭಾಗದಲ್ಲಿ ಒಂದು ದುಂಡನೆಯ ಭಾಗವಿದೆ. ಅದು ಚಂಡಿನಂತೆ ಇರುತ್ತದೆ. ಆ ದುಂಡಾಗಿರುವ ಕಣವು ಒಂದು ವಿಧವಾಗಿ ಪ್ರಕಾಶ ಹೊಂದಿರುತ್ತದೆ.

**ಪರಿಶೋಧಿಸಿ ದುಂಡನೆ ಭಾಗದಲ್ಲಿನ ಪ್ರಕಾಶವನ್ನು ನೋಡಬಹುದು. ಈ ದುಂಡನೆಯ ಭಾಗವು ಸ್ತ್ರೀ ಗರ್ಭದಲ್ಲಿ ರಜೋಕಣದೊಂದಿಗೆ ಬೆರೆತು ಶರೀರವಾಗಿ ಬದಲಾಗುವುದಕ್ಕೆ ಅನುಕೂಲವಾಗಿ ನಿರ್ಮಾಣವಾಗಿರುತ್ತದೆ. ಇದೇ ಪುರುಷ ವೀರ್ಯದಲ್ಲಿನ ಬೀಜವೆಂದು ಹೇಳಬಹುದು.**

ಸ್ತ್ರೀ ಗರ್ಭಕೋಶದಲ್ಲಿ ಓವರೀ (ovary) ಎನ್ನುವ ಭಾಗದಿಂದ ರಜೋಕಣವು ತಯಾರಾಗುತ್ತದೆ. ರಜೋಕಣವು ಓವರಿಯಲ್ಲಿ ತಿಂಗಳಿಗೊಂದು ತಯಾರಾಗುತ್ತಿರುತ್ತದೆ. ರಜೋಕಣವನ್ನೆ ಇಂಗ್ಲೀಷಿನಲ್ಲಿ ಓವಮ್ (ovum) ಎಂದೂ ಸಹ ಕರೆಯುತ್ತಾರೆ. ಈ ರಜೋಕಣವು ಪ್ರೋಟೋಪ್ಲಾಜ ಎನ್ನುವ ಪದಾರ್ಥದಿಂದ ತಯಾರಾಗಿರುತ್ತದೆ. ಬಾದಾಮಿ ಬೀಜದ ಆಕೃತಿ ಇರುವ ಓವರಿಗಳು ಸ್ತ್ರೀ ಗರ್ಭಕೋಶದಲ್ಲಿ ಗರ್ಭಾಶಯಕ್ಕೆ ಎರಡುಕಡೆ

ಎರಡು ಇರುತ್ತವೆ. ಓವರೀಯಲ್ಲಿ ತಯಾರಾದ ರಜೋಕಣವು ಗರ್ಭಾಶಯಕ್ಕೆ ಹತ್ತಿರವಾಗಿರುವ ನಾಳದೊಳಗೆ ಹೋಗಿ ನಿಂತಿರುತ್ತದೆ. ಪುರುಷ ವೀರ್ಯದಲ್ಲಿನ ವೀರ್ಯಕಣ ಸಂಯೋಗ ನಡೆದ ನಂತರ ಯೋನಿಯಲ್ಲಿ ಮುಂದಕ್ಕೆ ಚಲಿಸುತ್ತಾಹೋಗಿ, ವಿಕಾಸಗೊಂಡ ಪುಷ್ಪದ ಆಕೃತಿ ಹೊಂದಿದ ಭಾಗದಲ್ಲಿ ಪ್ರವೇಶಿಸಿ, ಅದರಲ್ಲಿರುವ ನಾಳದ ಮೂಖಾಂತರ ಗರ್ಭಕೋಶಕ್ಕೆ ಹೋಗಿ, ಗರ್ಭಾಶಯ ಮೊದಲ ಭಾಗದಲ್ಲಿರುವ ನಾಳದಲ್ಲಿ ರಜೋಕಣದೊಂದಿಗೆ ಸೇರುತ್ತದೆ. ರಜೋಕಣ ವೀರ್ಯಕಣ ಸೇರುವುದನ್ನೇ ಗರ್ಭಧಾರಣೆ ಎಂದು ಹೇಳುತ್ತಾರೆ. ರಜೋಕಣದೊಂದಿಗೆ ಸೇರಿದ ವೀರ್ಯಕಣ ಮತ್ತೆ ಗರ್ಭಾ ಶಯದೊಳಗೆ ಬಂದು, ಅದರಲ್ಲಿರುವ ಜಿಗುರು ಪದಾರ್ಥದಿಂದ ತಯಾರಾದ ಪೊರೆಗಳಲ್ಲಿ ಹೋಗಿ ಸ್ಥಾನ ಏರ್ಪಡಿಸಿಕೊಂಡು ಶಿಶುವಾಗಿ ವೃದ್ಧಿಯಾಗುತ್ತದೆ.

ಸ್ತ್ರೀ ರಜೋಕಣದಜೊತೆ ವೀರ್ಯಕಣ ಬೆರೆತಾಗ ವೀರ್ಯಕಣ ತಲೆ ಭಾಗದಲ್ಲಿನ ದುಂಡನೆ ಕಣ ಅನೇಕ ಕಣಗಳಾಗಿ ವಿಭಜನೆ ಹೊಂದಿ (Mitosis), ಆ ಕಣಗಳೆಲ್ಲವು ಬೆರೆತು ಒಂದು ಶರೀರವಾಗಿ ತಯಾರಾಗುವುದಕ್ಕೆ ಪ್ರಾರಂಭವಾಗುತ್ತದೆ. ವೀರ್ಯಕಣವು ಅನೇಕವಾಗಿ ವಿಭಜನೆಯಾಗುವುದೂ ಸಹ ರಾಸಾಯನಿಕ ಪ್ರಕ್ರಿಯೆಯೇ ಎಂದು ತಿಳಿದುಕೊಳ್ಳಿ. ವೀರ್ಯಕಣವು ಸ್ತ್ರೀ ಶರೀರ ಜನಿತ ಪ್ರೋಟೋಪ್ಲಾಜ ರಜೋಕಣದೊಂದಿಗೆ ಸೇರಿದಾಗಲೇ ಈ ರಸಾಯನಿಕ ಕ್ರಿಯೆ ನಡೆಯುತ್ತದೆ. ವೀರ್ಯಕಣ ತಲೆಯಲ್ಲಿನ ದುಂಡನೆ ಭಾಗವು ಮತ್ತು ಸ್ತ್ರೀ ರಜೋಕಣ ರಸಾಯನಿಕ ಕ್ರಿಯೆಗೆ ಅನುಕೂಲ ಪದಾರ್ಥಗಳಿಂದ ತಯಾರಾಗಿವೆ ಎಂದು ತಿಳಿದುಕೊಳ್ಳಿ. ಈ ಎರಡು ಪದಾರ್ಥಗಳು ಜೀವರಹಿತಗಳೇ ಎಂದು ಜ್ಞಾಪಕ ಇಟ್ಟುಕೊಳ್ಳಿರಿ. ಈ ಎರಡು ಪದಾರ್ಥಗಳೊಂದರ ಕೂಡುವಿಕೆಯಿಂದ ಏರ್ಪಟ್ಟ ರಾಸಾಯನಿಕ ಕ್ರಿಯೆಯಲ್ಲಿ ವೀರ್ಯಕಣ ಅನೇಕ ಕಣಗಳಾಗಿ ಸೀಳಿಹೋಗುತ್ತಾ, ಆ ಕಣಗಳೆಲ್ಲವೂ ಒಂದು ಗುಂಪಾಗಿ ಸೇರುತ್ತಾ, ಶಿಶು ಶರೀರ ತಯಾರಾಗುತ್ತದೆ. ಗರ್ಭೋತ್ಪತ್ತಿ ಆದ ಮೂರನೆ ತಿಂಗಳಿಂದ ಗರ್ಭಾಶಯದಲ್ಲಿ ವೀರ್ಯಕಣ ಅಭಿವೃದ್ಧಿ ನಡೆಯುವ ಪೊರೆಯನ್ನು ಅಂಟಿ ರಕ್ತಪುಷ್ಕಳವಾದ ಒಂದು ಚೀಲದಂತಹ ಪೊರೆ ನಿರ್ಮಿತವಾಗುತ್ತದೆ. ಇದರಲ್ಲಿರುವ ರಕ್ತನಾಳಗಳಿಗು ತಾಯಿಯಲ್ಲಿರುವ ರಕ್ತನಾಳ ಶಾಖೆಗಳು ಬೆರೆತಿರುತ್ತವೆ. ಈ ರಕ್ತನಾಳಗಳಿಂದ ಹೊರಟಿರುವ ನಾಡಿಗಳು ಹೊಕ್ಕಳವರೆಗೂ ಏರ್ಪಟ್ಟು ಶಿಶು ನಾಭಿಯನ್ನು ಅಂಟಿರುತ್ತವೆ. ಶಿಶು ಶರೀರದಲ್ಲಿ ನಡೆಯುವ ಕಾರ್ಯಕಲಾಪಗಳಿಗೆ ಬೇಕಾದ ಆಕ್ಸಿಜನ್, ಆಹಾರ ಪದಾರ್ಥಗಳು, ವಿಟಮಿನ್‌ಗಳು ಹೊಕ್ಕಳ ಮೂಲಕವೇ ಸರಬರಾಜು ಆಗುತ್ತವೆ. ಗರ್ಭಧಾರಣೆಯಾದ ನಂತರ 280 ದಿನಗಳಿಗೆ ಶಿಶು ಶರೀರವು ಪೂರ್ತಿಯಾಗಿ ತಯಾರಾಗುತ್ತದೆ.

ಗರ್ಭಧಾರಣೆ ನಡೆದ ನಂತರ ಓವರಿಯಲ್ಲಿ ಒಂದು ಭಾಗದಲ್ಲಿ ಗರ್ಭರಕ್ಷಕ ರಸವು ತಯಾರಾಗಿ ರಕ್ತದಲ್ಲಿ ಸೇರಿಹೋಗುತ್ತದೆ. ಆ ರಸದಲ್ಲಿ 'ಪ್ರೊಜೆಸ್ಟಿರಾನ್' ಎನ್ನುವ ಹಾರ್ಮೋನ್ ಇದೆ. ಈ ಹಾರ್ಮೋನು ಗರ್ಭಕೋಶದ ಮೇಲೆ ಕೆಲಸ ಮಾಡುವ ನಾಡಿಗಳಿಗೆ ಬಲವನ್ನುಂಟುಮಾಡಿ ಗರ್ಭಸ್ರಾವವು ಆಗದಂತೆ ಕಾಪಾಡುತ್ತದೆ. ಪ್ರೊಜೆಸ್ಟಿರಾನ್ ಚೆನ್ನಾಗಿ ತಯಾರಾಗುವುದಕ್ಕೆ ತಾಯಿ ತನ್ನ ಶರೀರ ಆರೋಗ್ಯವನ್ನು ಜಾಗ್ರತೆಯಾಗಿ ನೋಡಿಕೊಳ್ಳಬೇಕು. ಪ್ರೊಜೆಸ್ಟಿರಾನ್ ಸಕ್ರಮವಾಗಿ ತಯಾರಾಗದ ತಾಯಿ ಶರೀರ, ಗರ್ಭದ ಬೆಳವಣಿಗೆಯಲ್ಲಿ ಅನಾರೋಗ್ಯವಾದುದಾಗಿರುತ್ತದೆ. ಪ್ರೊಜೆಸ್ಟಿರಾನ್ ತಯಾರಾಗದ ಶರೀರದಲ್ಲಿ ಗರ್ಭಸ್ರಾವ ನಡೆಯುತ್ತಿರುತ್ತದೆಂದು ತಿಳಿದುಕೊಳ್ಳಬೇಕು. ಅಂತವರು ಗರ್ಭಸ್ರಾವ ನಡೆಯದಂತೆ ಪ್ರೊಜೆಸ್ಟಿರಾನ್ ಹಾರ್ಮೋನನ್ನು ಇಂಜಕ್ಷನ್ ರೂಪದಲ್ಲಿ ತೆಗೆದುಕೊಳ್ಳಬೇಕು.

ತಾಯಿ ಶರೀರದಲ್ಲಿ ಬ್ರಹ್ಮನಾಡಿಯಿಂದ ಹೊರಟ ಕೆಲವು ನರಗಳು ಗರ್ಭಕೋಶವನ್ನು ಆಶ್ರಯಿಸಿರುತ್ತವೆ. ಆ ನಾಡಿಗಳು ವೀರ್ಯಕಣ ಶರೀರವಾಗಿ ಬದಲಾವಣೆ ಹೊಂದುವುದರಲ್ಲಿ ಯಾವ ಆಕೃತಿಯಾಗಿ ತಯಾರಾಗಬೇಕಾಗಿರುವುದು ನಿರ್ಣಯಿಸುತ್ತವೆ. ಆ ನಾಡಿಗಳೇ ಶರೀರವನ್ನು ಯಾವ ವಿಧವಾಗಿ ಬೆಳೆಸಬೇಕೋ ಆ ವಿಧವಾಗಿ ಬೆಳೆಸಿ ಪ್ರಸವಿಸುವಂತೆ ಮಾಡುತ್ತವೆ. ಬ್ರಹ್ಮನಾಡಿಯಿಂದ ಹೊರಟ ನಾಡಿಗಳೇ ಶಿಶು ಶರೀರವನ್ನು ಗರ್ಭಾಶಯದಲ್ಲಿ ಕದಲುವಂತೆ ಮಾಡುತ್ತಿವೆ. ಆ ನಾಡಿಗಳಲ್ಲಿ ಚೈತನ್ಯ ಕಡಿಮೆ ಪ್ರಸಾರವಾಗಿ ಗರ್ಭಾಶಯ ಕಡಿಮೆ ಕದಲುತ್ತಿದ್ದರು, ಶಿಶು ಶರೀರವು ಕ್ರಮಪದ್ಧತಿಯಾಗಿ ಬೆಳೆಯುವುದಿಲ್ಲ. ತಾಯಿ ಅನಾರೋಗ್ಯ ಕಾರಣದಿಂದ ಗರ್ಭದಲ್ಲಿ ಶಿಶು ಕದಲಿಕೆಗಳು ಕಡಿಮೆ ಇದ್ದರೂ, ಆ ಶಿಶುವ ಕ್ರಮಪದ್ಧತಿಯಾಗಿ ಬೆಳೆಯದೆ ಸೊಂಟದಿಂದ ಮೇಲಕ್ಕೆ ಹೆಚ್ಚಾಗಿ ಬೆಳೆದು ಕಾಲುಗಳು ಕಡಿಮೆ ಬೆಳೆದಿರುತ್ತವೆ. ಕೆಲವರಿಗೆ ಸೊಂಟದಿಂದ ಕಾಲುಗಳು ಹೆಚ್ಚಾಗಿ ಬೆಳೆದು ಸೊಂಟದ ಮೇಲಿನ ಶರೀರ ಕಡಿಮೆ ಪ್ರಮಾಣ ಬೆಳೆದಿರುತ್ತದೆ. ಕೆಲವರಿಗೆ ತಲೆ ದಪ್ಪವಾಗಿರುತ್ತದೆ, ಸೊಂಟವು ದೊಡ್ಡದಾಗಿಯೂ, ಸಣ್ಣದಾಗಿಯೂ, ಕೈಯಿಗಳು ಗಿಡ್ಡದಾಗಿ, ಉದ್ದವಾಗಿ ಹೀಗೆ ಅನೇಕ ವಿಧಗಳ ಬದಲಾವಣೆಗಳು ಕಾಣಿಸಿದರು ಶಿಶು ಶರೀರವು ಸಕ್ರಮವಾಗಿ ಬೆಳೆಯಲಿಲ್ಲವೆಂದು ತಿಳಿಯಿರಿ. ಅವಯವಗಳು ಕ್ರಮವಾಗಿ ಬೆಳೆಯುವುದಕ್ಕೆ ಬ್ರಹ್ಮನಾಡಿ ಚೈತನ್ಯ ಅಗತ್ಯ. ಬ್ರಹ್ಮನಾಡಿ ಚೈತನ್ಯ ಇಲ್ಲದಿದ್ದರೆ ಶಿಶು ಶರೀರ ಬೆಳೆಯುವುದಿಲ್ಲ, ಕದಲುವುದಿಲ್ಲ ಮತ್ತು ಆಕೃತಿ ಏರ್ಪಡುವುದಿಲ್ಲ.

ಈಗಿನ ಶರೀರ ಶಾಸ್ತ್ರಜ್ಞರು ಪುರುಷ ವೀರ್ಯಕಣವನ್ನು. ಸ್ತ್ರಿ ರಜೋ ಕಣವನ್ನು ಪರಿಶೋಧನಾ ಶಾಲೆಗಳಲ್ಲಿ ಶೇಕರಿಸಿ ಅವುಗಳಿಗೆ ಬೇಕಾದ ವಾತಾವರಣವನ್ನು. ಅಭಿವೃದ್ಧಿಗೆ

ಬೇಕಾದ ಪೋಷಕ ಪದಾರ್ಥಗಳನ್ನು, ರಕ್ತವನ್ನು ಸರಬರಾಜು ಮಾಡಿದಾಗ ವೀರ್ಯಕಣ ರಜೋಕಣದೊಂದಿಗೆ ಸೇರಿ ರಾಸಾಯನಿಕ ಕ್ರಿಯೆಯಿಂದ ವಿಭಜನೆ ನಡೆದು ಮಾಂಸಕಣಗಳು ಮುದ್ದೆಯಾಗಿ ಸ್ವಲ್ಪ ಬೆಳೆದು ನಿಂತುಹೋಗುತ್ತವೆ. ಶರೀರವು ಪೂರ್ತಿ ಬೆಳೆಯುವುದಿಲ್ಲ, ತಯಾರಾದ ಶರೀರ ಒಂದು ಮಾಂಸದ ಮುದ್ಧೆಯಾಗಿ ಉಳಿದುಹೋಗಿದೆ. ಯಾವ ಆಕೃತಿ ಏರ್ಪಡಲಿಲ್ಲ. ಆ ಪರಿಶೋಧನೆಯಿಂದ ತಾಯಿ ಶರೀರದಲ್ಲಿಯೇ ಶಿಶು ಆಕೃತಿಯಾಗಿ ಬೆಳೆಯುತ್ತದೆ ಎಂದು, ಹಾಗಲ್ಲದೆ ಹೋದಲ್ಲಿ ಶರೀರಕ್ಕೆ ಆಕೃತಿ ಬರುವುದಿಲ್ಲವೆಂದು ತಿಳಿಯುತ್ತದೆ. ಬ್ರಹ್ಮನಾಡಿ ಸ್ಪರ್ಶವಿಲ್ಲದೆ ಶರೀರವು ತಯಾರಾಗುವುದಿಲ್ಲವೆಂದು ತಿಳಿಯದ ಶಾಸ್ತ್ರಜ್ಞರು ಪರಿಶೋಧನೆ ನಡೆಸಿ ಅದರಲ್ಲಿ ವಿಫಲವಾಗಿ ನಮಗಿಂತ ಮಿಗಿಲಾದ ದೇವರು ಒಬ್ಬನಿದ್ದಾನೆಂದು ಕೊನೆಗೆ ಅಂಗೀಕರಿಸಿದ್ದಾರೆ. ಒಂದುವೇಳೆ ಅವರ ಪರಿಶೋಧನೆಯಲ್ಲಿ ಶಿಶುವು ಒಂದು ಆಕೃತಿಯಾಗಿ ತಯಾರಾಗಿ ಅದರಲ್ಲಿ ಜೀವವೇ ಪ್ರವೇಶಿಸಿದ್ದರೆ, ನಮಗಿಂತ ಬೇರೆ ದೇವರು ಇಲ್ಲವೆಂದೆನ್ನುತ್ತಿದ್ದರೇನೋ?

ಇಷ್ಟು ಕೇಳಿದ ನಂತರವೂ ಸಹ ಕೆಲವರಿಗೊಂದು ಸಂಶಯ ಹುಟ್ಟಿ "ಹಿರಣ್ಯಕಶಿಪನ ಕುಮಾರನಾದ ಪ್ರಹ್ಲಾದನು, ತಾಯಿಗರ್ಭದಲ್ಲಿಯೇ ನಾರಾಯಣ ಮಂತ್ರವನ್ನು ನಾರದನ ಮೂಲಕ ಕೇಳಿದ್ದಾನೆ ಅಲ್ಲವೆ! ತಾಯಿಗರ್ಭದಲ್ಲಿ ಪ್ರಹ್ಲಾದನಿಗೆ ಪ್ರಾಣವಿಲ್ಲದ ಪಕ್ಷದಲ್ಲಿ ನಾರಾಯಣ ಮಂತ್ರವನ್ನು ಹೇಗೆ ಕೇಳಿದನು" ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ಒಂದು ವೇಳೆ ಅವರ ಮಾತಿನ ಪ್ರಕಾರ ಪ್ರಹ್ಲಾದನಿಗೆ ಗರ್ಭದಲ್ಲಿಯೇ ಪ್ರಾಣವಿದೆ ಎಂದುಕೊಂಡರು ಹೊರಗಿನ ಮಾತುಗಳು ಗರ್ಭದೊಳಗೆ ಹೇಗೆ ಕೇಳಿಸುತ್ತವೆ? ಹಾಗೆ ಕೇಳಿಸುತ್ತವೆಂದುಕೊಂಡರು ಈಗಲೂ ಸಹ ಗರ್ಭದಲ್ಲಿರುವ ಶಿಶುಗಳಿಗೆ ಹೊರಗಿನವರು ಬೋಧಿಸಿದ ಬೋಧನೆ ತಿಳಿಯಬೇಕಲ್ಲವೆ! ಹಾಗೆ ಒಳಗೆ ಕೇಳಿದ್ದೇವೆ ಎನ್ನುವವರಾಗಲಿ, ಕೇಳಿದವರಾಗಲಿ ಯಾರು ಇಲ್ಲವೆ! ಪರಿಶೀಲಿಸಿ ನೋಡಿದರು ಅನುಭವಕ್ಕೆ ಬಾರದ ಕವಿಗಳು ಹೇಳಿರುವ ಮಾತುಗಳೆಂದು ಪ್ರಹ್ಲಾದನ ವಿಷಯವು ತಿಳಿಯುತ್ತದೆ. ಬ್ರಹ್ಮವಿದ್ಯೆ ಮಾತ್ರ ಯೋಗಿಗಳೊಬ್ಬರಿಗೆ ಮಾತ್ರ ತಿಳಿಯುತ್ತದೆ. ಭಾಷಾ ಪಂಡಿತರು, ಕವಿಗಳು ಬ್ರಹ್ಮವಿದ್ಯೆಯನ್ನು ಕುರಿತು ಏನೂ ಹೇಳಲಾರರು. ಆದ್ದರಿಂದ ಜ್ಞಾನದೃಷ್ಟಿ ಇಲ್ಲದ ಕವಿಗಳು ಬರೆದ ಮಾತುಗಳು ಪೂರ್ತಿ ಅಸತ್ಯ.

**ಪ್ರಹ್ಲಾದನ ವಿಷಯ ಪುರಾಣದೊಳಗಿನದು. ಪುರಾಣಗಳು ಕೇವಲ ಕಲ್ಪಿತ. ವಿಷ್ಣುವನ್ನು ಕುರಿತು ಬರೆಯಲು ಸಿದ್ಧವಾದ ಕವಿಗಳು, ಅವರ ಇಷ್ಟಾನುಸಾರ ಎಣೆದ ಕಥೆಯೇ ಪ್ರಹ್ಲಾದನ ವಿಷಯ.** ಇಂತಹ ಕೆಲವು ಕಥೆಗಳು ನೋಡಿ, ಅಷ್ಟು ದೊಡ್ಡವರು ಬರೆದಿರುವ

ವಿಷಯಗಳು ನಿಜವಲ್ಲದೆ ಅಸತ್ಯಗಳಿರುತ್ತವಾ ಎಂದು, ಉಳಿದ ಕವಿಗಳೆಲ್ಲರೂ ಆ ವಿಧವಾಗಿಯೇ ಬರೆಯುವುದಕ್ಕೆ ಪ್ರಾರಂಭಿಸಿ ಶಾಸ್ತ್ರಕ್ಕೆ ಪೂರ್ತಿ ಧಕ್ಕೆಯುಂಟುಮಾಡಿದ್ದಾರೆ. ನಾನು ಇಲ್ಲಿಯವರೆಗೂ ಹೇಳಿದರೂ ನನ್ನ ಮಾತು ಕೇಳದೆ ಧರ್ಮಯಾವುದು? ಅಧರ್ಮ ಯಾವುದು? ಎಂದು ಗ್ರಹಿಸದೆ ಅಧರ್ಮವಾದನೆ ಮಾಡುವವರು ಪರಮಾತ್ಮ ಗೀತೆಯಲ್ಲಿ ತಿಳಿಸಿದ ವಿಷಯಕ್ಕೆ ವಿರೋಧಿಗಳು.

ನಾವು ತಿಳಿಸುವ ಬೋಧನೆ ಜೀವಾತ್ಮಕ್ಕೂ, ಆತ್ಮಕ್ಕೂ ಸಂಬಂಧಿಸಿದ ವಿಷಯವು, ಆದ್ದರಿಂದ ಜೀವವಿರುವ ಸಮಸ್ತ ಜೀವರಾಶಿಗಳಿಗೂ ಅನ್ವಯಿಸುತ್ತದೆ. ಜನ್ಮ ಎನ್ನುವುದು ಒಬ್ಬ ಮಾನವನಿಗೆ ಅಲ್ಲದೆ ಎಲ್ಲಾ ಜೀವರಾಶಿಗಳಿಗೂ ಇದೆ. ಆದ ಕಾರಣ ಕ್ರಿಮಿ, ಕೀಟ, ಪಶು, ಪಕ್ಷಿ, ಮೃಗಾದಿಗಳಿಗೂ ಸಹ ನಮ್ಮ ಬೋಧನೆ ಅನ್ವಯಿಸುತ್ತದೆ. ಈ ನಮ್ಮ ಮಾತುಗಳು ಕೇಳಿದ ಕೆಲವರಿಗೆ ಒಂದು ಸಂಶಯ ಏರ್ಪಟ್ಟು" ಕೋಳಿ ಮೊಟ್ಟೆಗೆ ಗರ್ಭದಲ್ಲಿ ಜೀವಬಾರದೆ ಹೊರಗೆ ಬಂದ ನಂತರ ಬರುತ್ತದೆಂದುಕೊಳ್ಳುವುದಕ್ಕೆ ಅದು ಚಲನೆ ರಹಿತವಾದುದಾಗಿದೆ. ಚಲನೆ ಇಲ್ಲದ ಕೋಳಿಮೊಟ್ಟೆಗೆ ಪ್ರಾಣ ಇಲ್ಲ ಎಂಬುವುದಕ್ಕೆ ಮೊಟ್ಟೆಯಲ್ಲಿಯೇ ಮರಿ ಪ್ರಾಣಹೊಂದಿ ಹೊರಗೆ ಬರುವುದು ನೋಡುತ್ತಲೇ ಇದ್ದೇವೆ. ಮೊಟ್ಟೆಯಿಂದ ಹುಟ್ಟುವ ಜೀವಿಗಳಿಗೆ ನೀವು ಹೇಳುವ ಬೋಧನೆ ಹೇಗೆ ಅನ್ವಯಿಸುತ್ತದೆ? ಮೊಟ್ಟೆಯಲ್ಲಿ ಜೀವವಿದ್ದಂತೆಯಾ ಅಥವಾ ಗರ್ಭದಿಂದ ಹೊರಗೆ ಬಂದಿರುವ ಮೊಟ್ಟೆಯಲ್ಲಿ ಜೀವಾತ್ಮನು ಸೇರಿದಂತೆಯಾ" ಎಂದು ಕೇಳಬಹುದು. ಈ ಅನುಮಾನವನ್ನು ತಿಳಿದುಕೊಂಡರೆ ಅಂಡಜಗಳ ವಿಷಯವೆಲ್ಲವೂ ಅರ್ಥವಾಗುತ್ತದೆ. ಆದ್ದರಿಂದ ಕೋಳಿಮೊಟ್ಟೆ ವಿಷಯ ತಿಳಿದುಕೊಳ್ಳೋಣ.

ಮೊಟ್ಟೆಯಿಂದ ಹುಟ್ಟುವ ಪ್ರಾಣಿಗಳಿಗೂ, ಪಿಂಡದಿಂದ ಹುಟ್ಟುವ ಪ್ರಾಣಿಗಳಿಗೂ ಜನ್ಮ ವಿಷಯದಲ್ಲಿ ಸ್ವಲ್ಪ ಬದಲಾವಣೆ ಇದೆ. ಜನ್ಮ ವಿಷಯದಲ್ಲಿ ಅಂಡಜ, ಪಿಂಡಜಗಳಿಗೆ ಭೇದವಿದ್ದರೂ, ಸಿದ್ಧಾಂತ ಮಾತ್ರ ಎಲ್ಲದಕ್ಕೂ ಒಂದಾಗಿಯೇ ಇರುತ್ತದೆ. ಅಂಡಜಗಳಿಗೂ, ಪಿಂಡಜಗಳಿಗೂ, ಭೂಜಗಳಿಗೂ (ಗಿಡ) ಮೊದಲಾದವುಗಳಿಗೆ ಮೊದಲ ಶ್ವಾಸದಿಂದಲೇ ಜನ್ಮ ಉಂಟಾಗುತ್ತದೆ ಎನ್ನುವ ಸಿದ್ಧಾಂತ ಅನ್ವಯಿಸುತ್ತದೆ. ಕೋಳಿ ಜನ್ಮವನ್ನು ವಿವರಿಸಿಕೊಂಡರು ಕೋಳಿಗೆ ಯುಕ್ತವಯಸ್ಸು ಬಂದಕೂಡಲೇ ಶರೀರದಲ್ಲಿ ಕೆಲವು ಪದಾರ್ಥಗಳು ತಯಾರಾಗಿ ದುಂಡನೆ ಆಕೃತಿ ಧರಿಸುತ್ತಾ ದಿನ ದಿನಕ್ಕೆ ಬೆಳೆದು ಅಂಡಾಕೃತಿಗೆ ಸೇರಿಕೊಳ್ಳುತ್ತದೆ. ಕೋಳಿಶರೀರದಲ್ಲಿ ಅಂಡಕ್ಕೆ ಅವಶ್ಯವಾದ ಪದಾರ್ಥಗಳು ತಯಾರಾಗುತ್ತಿರುವ ಸಮಯದಲ್ಲಿ ಹೆಣ್ಣು ಕೋಳಿ ಹುಂಜದೊಂದಿಗೆ ಸಂಬಂಧ

ಏರ್ಪಡಿಸಿಕೊಳ್ಳುತ್ತದೆ. ಹುಂಜದೊಂದಿಗೆ ಸಂಪರ್ಕ ನಡೆದಾಗ ಆ ಸಂಪರ್ಕ ಫಲಿತವಾಗಿ ಒಂದು ಪದಾರ್ಥವನ್ನು ಹೆಣ್ಣು ಕೋಳಿ ಶರೀರದಲ್ಲಿ ಅಂಡಕ್ಕೋಸ್ಕರ ತಯಾರಾಗುತ್ತಿರುವ ಪದಾರ್ಥಗಳೊಂದಿಗೆ ಸೇರಿಕೊಳ್ಳುತ್ತದೆ. ಈ ವಿಧವಾಗಿ ಕೋಳಿ ಶರೀರದಲ್ಲಿ ತಯಾರಾದ ಪದಾರ್ಥಗಳು ಕೆಲವು ಅಂಡವಾಗಿ ಬದಲಾಗಿ ಹೊರಗೆ ಬರುತ್ತವೆ. ಕೋಳಿ ಪ್ರತಿದಿನ ಒಂದು ಅಂಡವನ್ನು ತಯಾರುಮಾಡುತ್ತದೆ. ಹೊರಗೆ ಬಂದ ಅಂಡವನ್ನು ಪರಿಶೀಲಿಸಿದರೆ ಅದರಲ್ಲಿ ಬಿಳಿಭಾಗ, ಹಳದಿ ಭಾಗ ಎನ್ನುವ ಪದಾರ್ಥಗಳು ಕಾಣಿಸುತ್ತವೆ. ಈ ಪದಾರ್ಥಗಳಲ್ಲಿ ಎಷ್ಟು ಮಾತ್ರ ಪ್ರಾಣ ಇರುವುದಿಲ್ಲ. ಆದ್ದರಿಂದ ಮೊಟ್ಟೆಗೆ ಪ್ರಾಣವಿಲ್ಲವೆಂದು ಹೇಳಬಹುದು. ಪಿಂಡವು ಹೊರಗೆ ಬಂದ ಕೂಡಲೇ ಪ್ರಾಣಬಂದಂತೆ ಅಂಡವು ಹೊರಗೆ ಬಂದ ಕೂಡಲೇ ಪ್ರಾಣ ಅದರಲ್ಲಿ ಪ್ರವೇಶಿಸುವುದಿಲ್ಲ. ಇದೆ ಅಂಡಜಗಳಿಗೂ, ಪಿಂಡಜಗಳಿಗೂ ಇರುವ ಭೇದ. ಅಂಡದಲ್ಲಿನ ಪದಾರ್ಥಗಳು ನಿರ್ಜೀವವಾದವುಗಳಾಗಿ, ಆ ಪದಾರ್ಥಗಳು ತಕ್ಕ ವಾತಾವರಣದಲ್ಲಿ ಬದಲಾವಣೆ ಆಗುವವಾಗಿರುತ್ತವೆ. ಕೋಳಿಮೊಟ್ಟೆ 40 ಡಿಗ್ರೀ ಸೆಂಟಿಗ್ರೇಡ್ ಉಷ್ಣೋಗ್ರತೆಯಲ್ಲಿ ಬದಲಾವಣೆ ಹೊಂದುವವಾಗಿರುತ್ತವೆ. ಉಳಿದ ಬೇರೆ ಬೇರೆ ಜಾತಿ ಮೊಟ್ಟೆಗಳಿಗೆ ಬೇರೆ ಬೇರೆ ಉಷ್ಣೋಗ್ರತೆ ಅಗತ್ಯವಾಗಿರುತ್ತದೆ. ತಕ್ಕ ಉಷ್ಣೋಗ್ರತೆಗೆ ಪದಾರ್ಥಗಳಲ್ಲಿ ರಸಾಯನಿಕ ಬದಲಾವಣೆ ನಡೆಯುವಂತೆ ಅಂಡಗಳು ನಿರ್ಮಿಸಲ್ಪಟ್ಟಿರುತ್ತವೆ. ಅಂಡಜದಲ್ಲಿ ಕೋಳಿಮರಿ ಶರೀರ ತಯಾರಾಗುವುದಕ್ಕೆ ಅಗತ್ಯವಾದ ಪೋಷಕಪದಾರ್ಥಗಳು, ವಿಟಮಿನ್‌ಗಳು ಮತ್ತು ಇತರ ಪದಾರ್ಥಗಳೊಂದಿಗೆ ನಿರ್ಣಯಿಸಲ್ಪಟ್ಟಿರುತ್ತದೆ, ಕೈಬಾಂಬುಗಳಲ್ಲಿ ರಸಾಯನಿಕ ಪದಾರ್ಥಗಳು ತುಂಬಿಕೊಂಡಿರುವಂತೆ ಕೋಳಿಮೊಟ್ಟೆಯಲ್ಲಿಯೂ ಸಹ ರಸಾಯನಿಕ ಪದಾರ್ಥಗಳು ತುಂಬಲ್ಪಟ್ಟಿರುತ್ತವೆ. ಕೈಬಾಂಬಿಗೆ ಯಾವಾಗ ಒತ್ತಡ ಉಂಟಾಗುತ್ತದೊ ಆಗ ಅದು ಸಿಡಿದಂತೆ, ಮೊಟ್ಟೆಗೂ ಸಹ ಯಾವಾಗ ತಕ್ಕ ಶಾಖ ತಗುಲತ್ತದೋ ಆಗ ಮರಿಯಾಗಿ ಬದಲಾಗುವುದಕ್ಕೆ ಪ್ರಾರಂಭವಾಗುತ್ತದೆ.

ತಾಯಿ ಕೋಳಿ ಮೊಟ್ಟೆಯ ಮೇಲೆ ಕುಳಿತಾಗ ಕೋಳಿ ಶರೀರದಲ್ಲಿನ ಶಾಖ ಮೊಟ್ಟೆಗೆ ತಗಲುವುದರಿಂದ ಮೊಟ್ಟೆಯಲ್ಲಿ ಪದಾರ್ಥಗಳು ಬದಲಾವಣೆ ಯಾಗುತ್ತಾ ಮರಿಯಾಗಿ ತಯಾರಾಗುತ್ತದೆ. ಮೊಟ್ಟೆಯಲ್ಲಿ ಹಳದಿಸೊನೆ ಭಾಗದಲ್ಲಿ ಮಧ್ಯದಲ್ಲಿ ಒಂದು ದುಂಡನೆ ಪದಾರ್ಥವಿರುತ್ತದೆ. ಅದು ಶಾಖ ತಗುಲಿದ ಕೂಡಲೇ ಅದು ಬದಲಾವಣೆ ಯಾಗುವುದಕ್ಕೆ ಪ್ರಾರಂಭವಾಗುತ್ತದೆ. ಮಧ್ಯಭಾಗದಲ್ಲಿನ ಪದಾರ್ಥವನ್ನೇ ನಾವು ಪುರುಷ ಬೀಜವಾಗಿ ಲೆಕ್ಕಿಸಿಕೊಳ್ಳಬೇಕು. ಹಳದಿಸೊನೆ ಬಿಳಿಸೊನೆ ವಿನಿಯೋಗದಿಂದ ಈ ಪದಾರ್ಥವು ಬೆಳೆಯುತ್ತಿದೆ. ಆದ್ದರಿಂದ ಬಿಳಿ ಹಳದಿಸೊನೆಗಳನ್ನು ಸ್ತ್ರೀ ಕಣಗಳಾಗಿ ಲೆಕ್ಕಿಸಿಕೊಳ್ಳುತ್ತಿದ್ದೇವೆ. ತಕ್ಕ ಶಾಖ ತಗುಲಿದಾಗಲೇ ಮೊಟ್ಟೆಯಲ್ಲಿ ಅಡಕವಾಗಿರುವ ಪುರುಷಕಣವು ಸ್ತ್ರೀ

ಕಣಪದಾರ್ಥಗಳು ಬೆರೆತು, ಪುರುಷಕಣ ವೃದ್ಧಿಹೊಂದುತ್ತಾಹೋಗಿ, ಕೆಲವು ದಿನಗಳಿಗೆ ಪೂರ್ತಿಮರಿಯಾಗಿ ತಯಾರಾಗುತ್ತದೆ. ಮಾನವರಿಗೆ ಪುರುಷಕಣವು ಗರ್ಭಾಶಯದಲ್ಲಿಯೇ ಸ್ತ್ರೀ ಕಣದೊಂದಿಗೆ ಸೇರುತ್ತದೆ. ಕೋಳಿ ಮೊಟ್ಟೆಗೆ ಬಿಸಿ ತಗುಲಿದ ತಕ್ಷಣವೇ ಮೊಟ್ಟೆಯಿಂದ ಬೀಜಕಣವು ಬದಲಾವಣೆಯಾಗುವುದಕ್ಕೆ ಪ್ರಾರಂಭವಾಗುತ್ತದೆ. ಮೊಟ್ಟೆಯಲ್ಲಿ ಪೂರ್ತಿ ಮರಿ ಶರೀರವು ತಯಾರಾಗುವುದಕ್ಕೆ 21 ದಿನಗಳ ಕಾಲ ಬೇಕಾಗುತ್ತದೆ. ಮರಿಯಾಗಿ ಬದಲಾವಣೆಯಾಗುವ ಕಾಲ ಎಲ್ಲಾ ಜಾತಿಯ ಮೊಟ್ಟೆಗಳಿಗೆ ಒಂದೇ ರೀತಿಯಾಗಿರುವುದಿಲ್ಲ. ಒಂದೊಂದು ಜಾತಿಗೆ ಒಂದೊಂದುಕಾಲ ಪರಿಮಿತಿ ಇರುತ್ತದೆ. 40 ಡಿಗ್ರೀ ಸೆಂಟಿಗ್ರೇಡು ಉಷ್ಣಕ್ಕಿಂತ ಹೆಚ್ಚಿನ ಶಾಖದಿಂದ ಮೊಟ್ಟೆಯಲ್ಲಿನ ಪದಾರ್ಥಗಳು ಕೆಟ್ಟುಹೋಗುತ್ತವೆ. ಆದ್ದರಿಂದ ಬೇಸಿಗೆಕಾಲ ಕೋಳಿಮೊಟ್ಟೆಗಳು ಮರಿಗಳಾಗಿ ಬದಲಾಗುವುದು ಕಡಿಮೆ ಇರುತ್ತದೆ. ಮೊಟ್ಟೆಗಳು ಕೋಳಿ ಕೆಳಗೆ ಅಲ್ಲದೆ ಅವುಗಳಿಗೆ ತಕ್ಕ ವಾತಾವರಣದಲ್ಲಿ ಎಲ್ಲಿಯಾದರೂ ಮರಿಗಳಾಗಿ ಬದಲಾಗುತ್ತವೆ. ಈ ಕಾಲದಲ್ಲಿ ಮೊಟ್ಟೆಯನ್ನು ಮರಿಗಳಾಗಿ ತಯಾರುಮಾಡುವ ಯಂತ್ರಗಳು ಇವೆ. ಆ ಯಂತ್ರಗಳಲ್ಲಿ ಮೊಟ್ಟೆಗೆ ಬೇಕಾದ ಶಾಖವನ್ನು ಒದಗಿಸುತ್ತಾರೆ. ಆದ್ದರಿಂದ ಮೊಟ್ಟೆ ಮರಿಯಾಗಿ ಬದಲಾವಣೆಯಾಗುತ್ತಿದೆ. ಇವುಗಳನ್ನೆ ಉಷ್ಣಪೋಷಕ ಯಂತ್ರ (Incubators) ಎನ್ನುತ್ತಾರೆ. ಕೆಲವು ಕಡೆಗಳಲ್ಲಿ ಮಡಿ ಕೆಯಲ್ಲಿಟ್ಟಿರುವ ಮೊಟ್ಟೆಯೂ ಸಹ ಮರಿಯಾಗಿ ಬದಲಾದ ಸಂಘಟನೆಗಳಿವೆ. ಹುಂಜದಕೋಳಿಯ ಹತ್ತಿರ ಸಂಬಂಧವಿಲ್ಲದ ಹೆಣ್ಣುಕೋಳಿಯೂ ಸಹ ಮೊಟ್ಟೆ ಇಡುತ್ತದೆ. ಆ ವಿಧವಾಗಿ ಇಟ್ಟಿರುವ ಮೊಟ್ಟೆಗಳು ಉದಗ ಹಾಕಿದರೂ ಮರಿಯಾಗಿ ತಯಾರಾಗುವುದಿಲ್ಲ. ಕಾರಣ ಏನೆಂದರೆ ಆ ಮೊಟ್ಟೆಯಲ್ಲಿ ಪುರುಷ ಬೀಜವಿಲ್ಲ. ಮೊಟ್ಟೆಯಲ್ಲಿ ಬಿಳಿಸೊನೆ, ಹಳದಿಸೊನೆ, ಉಳಿದವೆಲ್ಲ ಸ್ತ್ರೀ ಪದಾರ್ಥಗಳಿರುತ್ತವೆ. ಆದರೆ ಹಳದಿ ಮಧ್ಯಭಾಗದಲ್ಲಿ ಪುರುಷಕಣ ಇರುವುದಿಲ್ಲ. ಪುರುಷಕೋಳಿ ಸಂಪರ್ಕಹೊಂದಿದ ಕೋಳಿಮೊಟ್ಟೆ ಮಾತ್ರವೇ ಪುರುಷಬೀಜ ಇರುವುದಾಗಿರುತ್ತದೆ. ಒಂದೊಂದು ಮೊಟ್ಟೆಗೂ ಒಂದೊಂದು ಸಂಪರ್ಕವಿರಬೇಕು. ಒಂದು ಸಂಪರ್ಕವೇ ಎಲ್ಲ ಮೊಟ್ಟೆಗಳಲ್ಲಿ ಬೀಜವು ಅಲ್ಲ. ಆದ್ದರಿಂದ ಮೊಟ್ಟೆಗಳಿಡುವ ಕೋಳಿ ಒಂದು ವಿಧವಾಗಿ ಕೇರುತ್ತಾ ಹುಂಜಕೋಳಿಯನ್ನು ಆಕರ್ಷಿಸುತ್ತಾ ಪ್ರತಿದಿನ ಸಂಪರ್ಕವು ನಡೆಯುತ್ತದೆ.

ಮಾನವರಿಗೆ ಗರ್ಭಕೋಶದಲ್ಲಿ ಮಾವಿಯಲ್ಲಿ ಶಿಶುವು ತಯಾರಾದಂತೆ, ಅಂಡಜಗಳಿಗೂ ಮೊಟ್ಟೆಯಲ್ಲಿ ಮರಿ ತಯಾರಾಗುತ್ತದೆ. ಮಾವಿಯಲ್ಲಿ ತಯಾರಾದ ಶಿಶುವಿಗೆ ಪ್ರಾಣ ಹೇಗೆ ಇಲ್ಲವೊ. ಮೊಟ್ಟೆಯಲ್ಲಿ ತಯಾರಾದ ಮರಿಗೂ ಪ್ರಾಣ ಇರುವುದಿಲ್ಲ.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಷಯ ಏನೆಂದರೆ? ಮಾವಿಯಿಂದ ಪ್ರಸವಿಸಲ್ಪಟ್ಟ ಶಿಶುವಿಗೆ ಹೊರಗೆ ಪ್ರಾಣಬರುತ್ತಿದೆ. ಆದರೆ ಅಂಡದಲ್ಲಿ ತಯಾರಾದ ಮರಿ ಶರೀರಕ್ಕೆ ಮೊಟ್ಟೆಯಿಂದ ಹೊರಗೆ ಬಾರದ ಮುನ್ನವೆ ಮೊಟ್ಟೆಯಲ್ಲಿಯೇ ಪ್ರಾಣ ಬರುತ್ತದೆ. ಪಿಂಡಜಗಳಿಗೆ ಮೊದಲ ಶ್ವಾಸದಿಂದಲೇ ಪ್ರಾಣಬರುತ್ತದೆ. ಅಂಡಜಗಳಿಗೂ ಸಹ ಮೊದಲ ಶ್ವಾಸದಿಂದಲೇ ಪ್ರಾಣಬರುತ್ತಿದೆ. ನಿರ್ಜೀವವಾದ ಮರಿ ಮೊಟ್ಟೆಯೊಂದರ ಚಿಪ್ಪೆಯನ್ನು ಸೀಳಿಕೊಂಡು ಬರಲಾರದು. ಚಿಪ್ಪೆಯನ್ನು ಹೊಡೆದುಕೊಳ್ಳುವುದಕ್ಕೆ ಅಗತ್ಯವಾದ ಶಕ್ತಿ ಪ್ರಾಣವಿದ್ದಾಗಲೇ ಲಭ್ಯವಾಗುತ್ತದೆ. ಆದ್ದರಿಂದ ಚಿಪ್ಪೆಯನ್ನು ಹೊಡೆದುಕೊಂಡು ಹೊರಗೆ ಬರುವ ನಿಮಿತ್ತವು, ಮರಿಗೆ ಒಳಗಡೆಯೇ ಪ್ರಾಣಬರುವ ಏರ್ಪಾಟು ದೇವರು ಮಾಡಿಟ್ಟಿದ್ದಾನೆ. ಜೀವಿ ನಿವಾಸ ಮಾಡುವುದಕ್ಕೆ ಯೋಗ್ಯವಾಗಿ ಶರೀರವು ಯಾವಾಗ ತಯಾರಾಗಿದೆಯೋ, ಆಗ ಆ ಶರೀರದಲ್ಲಿ ಮತ್ತೊಬ್ಬ ಜೀವಾತ್ಮ ಮೊದಲ ಶ್ವಾಸದಿಂದ ಪ್ರವೇಶಿಸುತ್ತದೆಂಬ ಸಿದ್ಧಾಂತ ಎಲ್ಲರಿಗೂ ತಿಳಿದಿರುವುದೇ. ಆ ಪ್ರಕಾರ ಮೊಟ್ಟೆಯಲ್ಲಿ ತಯಾರಾದ ಮರಿ ಶರೀರದೊಳಗೆ ಜೀವಾತ್ಮ ಮೊದಲಶ್ವಾಸದಿಂದ ಪ್ರವೇಶಿಸುತ್ತಿದ್ದಾನೆ. ಇಲ್ಲಿ ಕೆಲವರಿಗೆ ಒಂದು ಸಂಶಯ ಏರ್ಪಡಬಹುದು. ಶ್ವಾಸ ಆಡುವುದಕ್ಕೆ ಗಾಳಿ ಅಗತ್ಯ ಅಲ್ಲವೆ! ಹೊರಗಿನ ಗಾಳಿ ಒಳಗೆ ಬಾರದೆ ಕೋಳಿಮರಿ ಹೇಗೆ ಶ್ವಾಸಿಸುತ್ತದೆಂದು ಕೇಳಬಹುದು. ಅದಕ್ಕೆ ಸಮಾಧಾನ ಏನೆಂದರೆ! ತಾಯಿ ಕೋಳಿ ಶರೀರದಲ್ಲಿ ಮೊಟ್ಟೆ ತಯಾರಾದಾಗಲೇ ಮೊಟ್ಟೆಯಲ್ಲಿ ಮರಿಯಾಗಿ ತಯಾರಾಗುವುದಕ್ಕೆ ಅಗತ್ಯವಾದ ಪದಾರ್ಥಗಳೆಲ್ಲವೂ ತುಂಬಲ್ಪಟ್ಟು, ಆ ಪದಾರ್ಥಗಳೆಲ್ಲವೂ ಒಂದು ಪೊರೆಯಲ್ಲಿ ಬಂಧಿಸಲ್ಪಟ್ಟಿರುತ್ತವೆ. ಆ ಪೊರೆಗೂ ಸಿಪ್ಪೆಗೂ ಮಧ್ಯೆ ಒಂದು ಪಕ್ಕದಲ್ಲಿ ಸ್ವಲ್ಪ ಖಾಲಿ ಸ್ಥಳವಿರುತ್ತದೆ. ಅದರಲ್ಲಿ ಗಾಳಿ ತುಂಬಿರುತ್ತದೆ. ಮೊಟ್ಟೆಯಲ್ಲಿ ಗಾಳಿ ಎಲ್ಲಿರುವುದು ಕೆಳಗಿನ ಚಿತ್ರದಲ್ಲಿ ನೋಡಬಹುದು.

ಅಂಡದಲ್ಲಿ ಪೂರ್ತಿಯಾಗಿ ತಯಾರಾದ ಮರಿಯಲ್ಲಿಯೇ ಜೀವಾತ್ಮ ಪ್ರವೇಶಿಸುತ್ತಾನೆ. ಮರಿ ತಯಾರಾದ ಕೊನೆಯ ಸಮಯದಲ್ಲಿ ತೆಳುವಾದ ಪೊರೆ ಹರಿದು ಹೋಗಿ ಮೊಟ್ಟೆ ಎಲ್ಲವೂ ಮರಿ ಶರೀರವು ಆಕ್ರಮಿಸಿರುತ್ತದೆ. ಪೊರೆ ಹರಿದ ನಂತರ ಗಾಳಿ ಮೊಟ್ಟೆ ಎಲ್ಲವೂ ವ್ಯಾಪಿಸಿರುತ್ತದೆ. ಮೊಟ್ಟೆಯಲ್ಲಿ ಗಾಳಿ ಇರುವುದರಿಂದ ಜೀವಾತ್ಮನು ಮರಿ ಶರೀರದೊಳಗೆ ಮೊದಲ ಶ್ವಾಸದಿಂದ ಪ್ರವೇಶಿಸುತ್ತಿದ್ದಾನೆಂದು ತಿಳಿದುಕೊಳ್ಳಿ. ಮರಿ ಶರೀರದೊಳಗೆ ಪ್ರವೇಶಿಸಿದ ಜೀವಾತ್ಮ ಮೊಟ್ಟೆಯೊಳಗಿದ್ದರು ಗಾಳಿಯನ್ನು ಶ್ವಾಸಿಸುತ್ತಿರುತ್ತದೆ. ಹಾಗೆ ಕೆಲವು ನಿಮಿಷಗಳು ಶ್ವಾಸನಡೆದನಂತರ ಆ ಗಾಳಿಯಲ್ಲಿನ (ಆಕ್ಸಿಜನ್) ಪ್ರಾಣವಾಯುವು ಮುಗಿದುಹೋಗುತ್ತದೆ. ಆಗ ಶ್ವಾಸ ಆಡುತ್ತಿದ್ದರೂ ಆ ಶ್ವಾಸದಲ್ಲಿ




1) ಗಾಳಿ ಭಾಗ 2) ತೆಳುವಾದ ಪೊರೆ 3) ಸಿಪ್ಪೆ
4) ಬಿಳಿಸೊನೆ 5) ಪುರುಷಕಣ 6) ಹಳದಿ ಸೊನೆ

ಪ್ರಾಣವಾಯುವು ಲಭಿಸದ ಕಾರಣ ಮರಿ ಕಕ್ಕಾ ಬಿಕ್ಕಿ ಯಾಗುತ್ತದೆ. ಆಗ ತಳ್ಳುವುದಕ್ಕೆ ಪ್ರಾರಂಭಿಸುತ್ತದೆ. ದಿಕ್ಕು ತಿಳಿಯದೆ ಸಿಪ್ಪೆಯನ್ನು ಮೂಗಿನಿಂದ ಇರಿಯುತ್ತದೆ. ಮರಿ ಹೊಡೆಯುವಾಗ ಮೂಗಿನಿಂದ ಇರಿದಾಗ ಚಿಪ್ಪೆ ಸಣ್ಣ ರಂಧ್ರಬಿದ್ದು ನಂತರ ಹೊಡೆದುಹೋಗುತ್ತದೆ. ಆಗ ಹೊರಗಿನ ಗಾಳಿಯಲ್ಲಿ ಮರಿ ಬದುಕು ಸಾಗಿಸಲ್ಪಡುತ್ತದೆ. ಇದೇ ವಿಧವಾಗಿ ಅಂಡಜಗಳಿಗೆಲ್ಲ ಜನ್ಮ ಉಂಟಾಗುತ್ತಿದೆ ಎಂದು ತಿಳಿದುಕೊಳ್ಳಿ. ಸ್ತ್ರೀಯರಿಗೆ ಗರ್ಭವ್ಯರ್ಥವಾಗಿ ಹೋದಂತೆ ಮೊಟ್ಟೆಗಳೂ ಸಹ ವ್ಯರ್ಥವಾಗಿ ಹೋಗುತ್ತವೆ. ಮೊಟ್ಟೆ ತಯಾರಾಗುವುದರಲ್ಲಿ ಪದಾರ್ಥಗಳು ಹೆಚ್ಚು ಕಡಿಮೆ ಇರುವ ದೋಷಗಳಿಂದಾಗಲಿ, ಮೊಟ್ಟೆ ಹೊರಗೆ ಬಂದ ನಂತರ ಶಾಖ ಲಭ್ಯವಾಗುವುದರಲ್ಲಿ ಹೆಚ್ಚು ಕಡಿಮೆಗಳ ದೋಷದಿಂದಾಗಲಿ, ಮೊಟ್ಟೆ ಮುರುಗಿದ ಮೊಟ್ಟೆಯಾಗಿ ವ್ಯರ್ಥವಾಗಿ ಹೋಗುವುದು ನಡೆಯುತ್ತಿರುತ್ತದೆ. ಇಲ್ಲಿಯವರೆಗೂ ಅಂಡಜಗಳೊಂದರ ಜನ್ಮವನ್ನು ಕುರಿತು ತಿಳಿದುಕೊಂಡಿದ್ದೇವೆ. ಅಂಡಜಗಳ ವಿಷಯದಲ್ಲಿ ಅಂಡಕ್ಕೆ ಪ್ರಾಣ ಇಲ್ಲದ ವಿಷಯ ತಿಳಿದುಹೋಗಿದೆ. ಈಗ ಭೂಮಿಯಿಂದ ಹುಟ್ಟುವ ಜೀವಿಗಳಿಗೆ ಜನ್ಮ ಹೇಗೆ ಉಂಟಾಗುತ್ತಿದೆಯೋ ತಿಳಿದುಕೊಳ್ಳೋಣ.

ಭೂಮಿಯಿಂದ ಹುಟ್ಟುವ ವೃಕ್ಷಲತಾದಿಗಳೆಲ್ಲವನ್ನೂ ಭೂಜಗಳೆಂದು ಹೇಳುತ್ತಾರೆ. ಕೋಳಿಮೊಟ್ಟೆಯಿಂದ ಮರಿ ಹುಟ್ಟಿದಂತೆ. ಬೀಜಗಳಿಂದ ಸಸಿಗಳು ಹುಟ್ಟುತ್ತವೆ. ತಾಯಿ

ಕೋಳಿ ಶರೀರದಲ್ಲಿ ತಯಾರಾದ ಮೊಟ್ಟೆಗೆ ಪ್ರಾಣವಿಲ್ಲದಂತೆ, ಗಿಡದಿಂದ ತಯಾರಾದ ಬೀಜಕ್ಕೂ ಸಹ ಪ್ರಾಣವಿಲ್ಲ. ಬೀಜಕ್ಕೆ ಪ್ರಾಣವಿಲ್ಲವೆಂಬ ಮಾತು ಕೆಲವರಿಗೆ ಬಹಳ ವಿಚಿತ್ರ ವಾಗಿರುತ್ತದೆ. ಪ್ರಜೆಗಳಲ್ಲಿ ಬೀಜಕ್ಕೆ ಪ್ರಾಣವಿದೆ ಎಂಬ ನಂಬಿಕೆ ಪೂರ್ತಿ ಜೀರ್ಣಿಸಿ ಕೊಂಡುಹೋಗಿದೆ. ಆದ್ದರಿಂದ ನಮ್ಮಮಾತು ಕೇಳುತ್ತಲೇ ಬಹಳ ಆಶ್ಚರ್ಯ ಉಂಟಾಗಬಹುದು. ಕೆಲವರಿಗೆ ನಮ್ಮ ಮಾತು ಅಸತ್ಯವೆಂದು ಪುಸ್ತಕ ಓದದೆ ಮುಚ್ಚಿಹಾಕುತ್ತಾರೇನೊ! ಯಾರು ನಂಬಿದರು ನಂಬದೆ ಹೋದರು ಬೀಜಗಳಿಗೆ ಪ್ರಾಣವಿಲ್ಲ ಎಂಬ ಮಾತು ಸತ್ಯ.

ಕೋಳಿ ಶರೀರದಲ್ಲಿ ಮೊಟ್ಟೆ ತಯಾರಾಗುವಂತೆ, ವೃಕ್ಷದಲ್ಲಿಯೇ ಬೀಜಗಳು ತಯಾರಾಗುತ್ತವೆ. ವೃಕ್ಷಗಳಿಗೆ ಬೆಳೆಯುವ ಕಾಯಿಗಳಲ್ಲಿ ಬೀಜಗಳು ತಯಾರಾಗುತ್ತವೆ. ಪ್ರತಿ ಜಾತಿ ಬೀಜವು ಎರಡು ಭಾಗಗಳಾಗಿ ವಿಭಜಿಸಲ್ಪಟ್ಟಿರುತ್ತವೆ. ಬೀಜವು ಮೊಳಕೆ ಯಾಗುವುದಕ್ಕೆ ಬೇಕಾದ ಕೆಲವು ಪದಾರ್ಥಗಳು ಕಾಯಿಗಳಲ್ಲಿಯೇ ತಯಾರಾಗಿ ಬೀಜದಲ್ಲಿ ನೆಲೆಸಿರುತ್ತದೆ. ಬೀಜವೊಂದರ ಎರಡು ಬೇಳೆಗಳಲ್ಲಿ ಮೊಳಕೆಗೆ ಬೇಕಾದ ಆಹಾರ ಪದಾರ್ಥಗಳು, ಮತ್ತೆ ಕೆಲವು ರಸಾಯನಿಕ ಪದಾರ್ಥಗಳು ತಯಾರಾಗಿರುತ್ತವೆ. ಮೊಟ್ಟೆಗೆ ಚಿಪ್ಪೆ ಯಾವ ವಿಧವಾಗಿ ಇದೆಯೊ, ಆ ವಿಧವಾಗಿ ಬೀಜಕ್ಕೆ ಒಂದು ಪೊರೆ ಮುಚ್ಚಲ್ಪಟ್ಟಿರುತ್ತದೆ. ಈ ಪೊರೆಯಲ್ಲಿ ಒಂದು ಕಡೆ ಸಣ್ಣ ಮುಡಿ ಹೊಂದಿರುತ್ತದೆ. ಆ ಮುಡಿ ಬೀಜದೊಳಗಿರುವ ಬೇಳೆಗಳನ್ನು ಪೊರೆಯನ್ನು ಸೇರಿಸಿರುತ್ತದೆ. ಬೀಜದ ಬೇಳೆಗಳು ಮೇಲಿನ ಪೊರೆ ಸೇರುವ ಮುಡಿಯಲ್ಲಿ **'ಮೊನೆ'** ಎನ್ನುವ ಒಂದು ಸಣ್ಣ ಭಾಗವಿರುತ್ತದೆ. ಈ ಮೊನೆ ಬೀಜದಲ್ಲಿ ಮುಖ್ಯವಾದುದು. ಈ ಮೊನೆಯಲ್ಲಿಯೇ ಪುರುಷಕಣ ಇರುತ್ತದೆ. ಬೀಜದಲ್ಲಿ ಮೊನೆ ವಿನಹವಿರುವ ಬೇಳೆಗಳನ್ನು ಸ್ತ್ರೀ ಕಣಗಳಾಗಿ ಲೆಕ್ಕಿಸಿಕೊಳ್ಳಬೇಕು. ಸ್ತ್ರೀ ಪುರುಷಕಣಗಳನ್ನು ಕಾಪಾಡುತ್ತಾ ಪ್ರತಿಜಾತಿ ಬೀಜಕ್ಕೂ ಒಂದು ಪೊರೆ ಇರುತ್ತದೆ. ಇದನ್ನು ಬೀಜರಕ್ಷಕ ಪೊರೆ ಎನ್ನುತ್ತಾರೆ. ಹೊಟ್ಟು ಇಲ್ಲದ ಬೀಜಗಳು ರಕ್ಷಣೆ ಇಲ್ಲದವುಗಳಾಗಿ ಕಣಗಳು ಕೆಟ್ಟುಹೋಗುತ್ತವೆ. ಆದ್ದರಿಂದ ಹೊಟ್ಟುಹೋದ ಬೀಜಗಳು ಮೊಳಕೆಬರುವುದಿಲ್ಲ. ಬೀಜಕ್ಕೆ ಒಂದು ಕಡೆ ಮುಡಿಯಿದೆ ಎಂದು ತಿಳಿದುಕೊಂಡಿದ್ದೇವಲ್ಲವೆ! ಆ ಮುಡಿಯ ಹತ್ತಿರ ಮೇಲಿನ ಪೊರೆ ಸಣ್ಣ ರಂಧ್ರಹೊಂದಿರುತ್ತದೆ. ಈ ವಿಧವಾಗಿರುವ ಬೀಜವು ಪೂರ್ತಿ ತಯಾರಾಗಿದೆ ಎಂದು ಹೇಳಬಹುದು. ಬೇಳೆ ಮುದರದಿರುವಂತದ್ದು, ಪೊರೆ ತಯಾರಾಗದಿರುವಂತಹದ್ದು, ಪೊರೆಗೆ ರಂಧ್ರವು ಇಲ್ಲದಿರುವುದು ಪೂರ್ತಿ ತಯಾರಾಗದ ಬೀಜವೆಂದು ತಿಳಿದುಕೊಳ್ಳಿ. ಅಂತಹ ಬೀಜವು ಜನ್ಮಕ್ಕೆ ಅಯೋಗ್ಯವಾದುದು. ಪೂರ್ತಿಯಾಗಿ

ತಯಾರಾದ ಬೀಜವು ನೀರು ತಗಲಿದ ಕೂಡಲೇ ಬದಲಾವಣೆ ಹೊಂದುತ್ತಿರುತ್ತದೆ. ಭೂಮಿಯಲ್ಲಿ ಬಿದ್ದಿರುವ ಬೀಜಕ್ಕೆ ತೇವ ತಗಲಿದ ತಕ್ಷಣ ಅದು ಗಿಡವಾಗಿ ಬೆಳೆಯುವುದಕ್ಕೆ ಪ್ರಾರಂಭವಾಗುತ್ತದೆ. ಬೀಜದಲ್ಲಿರುವ ಮುಡಿಯ ಹತ್ತಿರವಿರುವ ರಂಧ್ರದ ಮೂಲಕ ನೀರು ಬೀಜದೊಳಗಿನ ಭಾಗದಲ್ಲಿರುವ ಮೊನೆಗೆ ತಗಲುತ್ತದೆ. ನೀರು ತಗಲಿದ ಕೂಡಲೇ ಮೊನೆಯಲ್ಲಿ ಬದಲಾವಣೆ ಬರುತ್ತದೆ ಬೀಜದ ಬೇಳೆಗಳಲ್ಲಿಯೂ ಸಹ ಬದಲಾವಣೆ ಬರುತ್ತದೆ. ಮೃದುವಾಗಿ ತಯಾರಾಗುತ್ತದೆ. ಬೀಜದಲ್ಲಿ ಮೊನೆ ಎರಡು ಬೇಳೆಗಳನ್ನು ಆಧಾರ ಮಾಡಿಕೊಂಡು ಬೆಳೆಯುವುದಕ್ಕೆ ಪ್ರಾರಂಭಿಸುತ್ತದೆ. ಆಗ ಬೀಜದ ಮೇಲಿನ ಪೊರೆ ಮೃದುವಾಗಿ ಹರಿದು ಹೋಗುತ್ತದೆ. ಮೊನೆಯಿಂದ ಬೆಳೆಯುವುದಕ್ಕೆ ಹೊರಟ ಒಂದು ಭಾಗವು ಭೂಮಿಯೊಳಗೆ ಹೋಗುತ್ತದೆ. ಎರಡನೆಯ ಭಾಗ ಭೂಮಿ ಮೇಲಕ್ಕೆ ಬೆಳೆಯುತ್ತದೆ. ಮೊಟ್ಟೆಯಲ್ಲಿ ಮರಿಗೆ ಪ್ರಾಣ ಇಲ್ಲದಿದ್ದರೂ ಯಾವ ವಿಧವಾಗಿ ಬೆಳೆಯುತ್ತಿದೆಯೋ, ಅದೇ ವಿಧವಾಗಿಯೇ ಬೀಜದಲ್ಲಿ ಪ್ರಾಣವಿಲ್ಲದಿದ್ದರೂ ಮೊನೆಯಲ್ಲಿನ ಪುರುಷಕಣವು ಬೆಳೆಯುತ್ತಿದೆ. ಇದು ಎಲ್ಲ ಬೀಜದಲ್ಲಿನ ರಾಸಾಯನಿಕ ಕ್ರಿಯೆ ಎಂದು ತಿಳಿಯಬೇಕು. ಹಾಗೆ ಬೆಳೆಯುವ ಸಮಯದಲ್ಲಿ ಬೀಜದಲ್ಲಿನ ಪದಾರ್ಥಗಳು ಮೊಳಕೆಗೆ ವಿನಿಯೋಗವಾಗುತ್ತವೆ. ಪುರುಷಕಣ ಬೀಜದಲ್ಲಿನ ಪದಾರ್ಥಗಳನ್ನು ವಿನಿಯೋಗಿಸಿಕೊಂಡು ಗಿಡವಾಗಿ ಬದಲಾವಣೆ ಆಗುತ್ತದೆ. ಭೂಮಿ ಮೇಲಕ್ಕೆ ಬೆಳೆದ ಭಾಗದಲ್ಲಿ ಚಿಕ್ಕ ಚಿಕ್ಕ ಎಲೆಗಳು ತಯಾರಾಗುತ್ತವೆ. ಭೂಮಿಯೊಳಗೆ ಹೋಗಿರುವ ಬೇರಿನ ಭಾಗಗಳಲ್ಲಿ ಚಿಕ್ಕ ಚಿಕ್ಕ ಬೇರುಗಳು ತಯಾರಾಗುತ್ತವೆ. ಈ ವಿಧವಾಗಿ ತಯಾರಾದ ಗಿಡಕ್ಕೂ ಸಹ ಪ್ರಾಣವಿಲ್ಲ. ಅಲ್ಲಿಯವರೆಗೂ ಬೀಜದಲ್ಲಿನ ಪೋಷಕ ಪದಾರ್ಥಗಳಿಂದಲೇ ಬದಲಾವಣೆ ಹೊಂದಿದ ರಾಸಾಯನಿಕ ಕ್ರಿಯೆ ಎಂದು ತಿಳಿಯಬೇಕು.

ಸಸಿಗೆ ಎಲೆಗಳು ಬಂದು ವಿಕಾಸಗೊಳ್ಳುವವರೆಗೂ ಅದರಲ್ಲಿ ಪ್ರಾಣವಿಲ್ಲವೆಂದು ಹೇಳಬಹುದು. ಮೊದಲ ಶ್ವಾಸದಿಂದಲೇ ಜೀವಾತ್ಮ ಪ್ರವೇಶಿಸುತ್ತದೆಂಬ ಸಿದ್ಧಾಂತದ ಪ್ರಕಾರ ಗಿಡಕ್ಕೆ ಮೊದಲ ಶ್ವಾಸ ನಡೆಯುವವರೆಗೂ ಪ್ರಾಣಬರುವುದಿಲ್ಲ. ಮೊಳಕೆ ಹೊಡೆದ ಸಸಿ ಎಲೆಗಳಲ್ಲಿ ಪತ್ರರಂಧ್ರಗಳು ತಯಾರಾದಾಗ ಜೀವಿ ಪ್ರವೇಶಿಸುವುದಕ್ಕೆ ಯೋಗ್ಯತೆ ಹೊಂದಿದ ಗಿಡವಾಗಿರುತ್ತದೆ. ಗಿಡದ ಎಲೆಗಳು, ಕಾಂಡ ಪೂರ್ತಿ ತಯಾರಾದ ನಂತರ, ಎಲೆಗಳಲ್ಲಿ ಪತ್ರರಂಧ್ರಗಳು ಏರ್ಪಟ್ಟ ನಂತರ, ಮೊದಲ ಶ್ವಾಸದಿಂದ ಜೀವಿ ಗಿಡದಲ್ಲಿ ಪ್ರವೇಶಿಸುತ್ತದೆ. ಎಲೆಗಳ ಕೆಳಗಿರುವ ಪತ್ರರಂಧ್ರಗಳ ಮೂಲಕ ಸಸಿ ಶ್ವಾಸ ತೆಗೆದುಕೊಳ್ಳುತ್ತ ದೆಂದು ತಿಳಿದುಕೊಳ್ಳಿ. ಪತ್ರರಂಧ್ರಗಳಲ್ಲಿ ಯಾವಾಗ ಶ್ವಾಸ ಪ್ರವೇಶಿಸುತ್ತದೋ ಆಗ ಜೀವಿಯು

ಗಿಡದಲ್ಲಿ ಪ್ರವೇಶಿಸಿದಂತೆ ಲೆಕ್ಕಿಸಲ್ಪಡುತ್ತಿದೆ. ಅಂಡಜಗಳಿಗೂ, ಪಿಂಡಜಗಳಿಗೂ ಪ್ರಾಣಬಂದ ನಂತರ ಅವುಗಳಿಗೆ ಪ್ರಾಣಬಂದಂತೆ ನಾವು ಸುಲಭವಾಗಿ ಗುರುತಿಸುತ್ತೇವೆ. ಆದರೆ ಮೊಳಕೆಗೆ ಪ್ರಾಣಬಂದರೂ ಶ್ವಾಸ ಯಾವಾಗ ಪ್ರವೇಶಿಸಿರುವುದು ಯಾರು ಕಂಡುಕೊಳ್ಳುವುದಿಲ್ಲ. ಮೊಳಕೆ ಬಂದ ಬೀಜಗಳಿಗೆ ಪ್ರಾಣಬಂದ ಕೂಡಲೇ ಗಾಳಿಯಿಂದ ಎಲೆಗಳ ಮೂಲಕ ಶ್ವಾಸಿಸುತ್ತಾ, ಭೂಮಿಯಿಂದ ಬೇರುಗಳ ಮೂಲಕ ಪೋಷಕ ಪದಾರ್ಥಗಳನ್ನು ತೆಗೆದುಕೊಳ್ಳುತ್ತಾ, ಎಲೆಗಳ ಮೇಲ್ಭಾಗದಲ್ಲಿ ಸೂರ್ಯರಶ್ಮಿಯಿಂದ ಹಿಟ್ಟಿನ ಪದಾರ್ಥವನ್ನು ತಯಾರುಮಾಡಿಕೊಳ್ಳುತ್ತಾ, ಆಹಾರವನ್ನು ಸಂಪಾದಿಸಿಕೊಳ್ಳುತ್ತಾ, ಜೀವನ ಕಾರ್ಯವನ್ನು ಸಾಗಿಸುತ್ತದೆ.

ಸ್ತ್ರೀಗೆ ಗರ್ಭಸ್ರಾವ ನಡೆದಂತೆ, ಮೊಟ್ಟೆಗಳು ಕೆಟ್ಟಮೊಟ್ಟೆಯಾಗಿ ಕೆಟ್ಟುಹೋದಂತೆ ಬೀಜಗಳೂ ಸಹ ಕೆಟ್ಟುಹೋಗುತ್ತವೆ. ಹೆಚ್ಚಾಗಿ ಶಾಖ ತಗುಲುವುದರಿಂದ, ಬೀಜದಲ್ಲಿನ ತೇವ ಒಣಗಿಹೋಗುವುದರಿಂದ ಪದಾರ್ಥಗಳು ಕೆಟ್ಟುಹೋಗಿ ಬೀಜಗಳು ಮೊಳಕೆಬರದಂತೆ ಹೋಗುತ್ತವೆ. ಹೊಟ್ಟು ತೆಗೆದುಹಾಕಿದ ಬೀಜಗಳು, ಹುಳುಕಾದ ಬೀಜಗಳು, ಚಿರಕಾಲ ಕಳೆದ ಬೀಜಗಳು ಮೊಳಕೆಬರುವುದಿಲ್ಲ. ಬೀಜದಲ್ಲಿ ಪದಾರ್ಥಗಳು ಅನುಕೂಲವಾಗಿ ಇಲ್ಲದಿರುವುದರಿಂದ ಪುರುಷಭಾಗವಾದ ಮೊನೆ ಮೊಳಕೆಬರುವುದಿಲ್ಲ.

ಭೂಮಿ ಮೇಲಿರುವ ಸಮಸ್ತ ಬೀಜಗಳಿಗೆ ಜನ್ಮ ಮೇಲೆ ಹೇಳಿದ ವಿಧವಾಗಿ ಮೊದಲ ಶ್ವಾಸದಿಂದಲೇ ಉಂಟಾಗುತ್ತದೆ ಎಂದು ತಿಳಿದುಕೊಳ್ಳಿ. ಸಮುದ್ರದಲ್ಲಿನ ಜೀವರಾಶಿಗಳು ನೀರನ್ನು ಮೊದಲ ಶ್ವಾಸವಾಗಿ ತೆಗೆದುಕೊಳ್ಳುತ್ತವೆ. ಈ ವಿಧವಾಗಿ ಜೀವರಾಶಿಗಳೆಲ್ಲವೂ ಹೊಸ ಶರೀರ ಧರಿಸುತ್ತಿವೆ. ಜೀವಾತ್ಮದೊಂದಿಗೆ ಆತ್ಮ ಇದೆಯಾದ್ದರಿಂದ ಆತ್ಮವೂ ಸಹ ಜೀವಾತ್ಮದೊಂದಿಗೆ ಹೊಸ ಶರೀರವನ್ನು ಸೇರುತ್ತಿದೆ ಎಂದು ತಿಳಿಯಬೇಕು. ಹೊಸ ಶರೀರವೇನೋ, ಆತ್ಮ ಅದನ್ನು ಯಾವಾಗ ಸೇರುತ್ತಿದೆಯೋ ತಿಳಿದಿದೆ ಅಲ್ಲವೆ! ಆತ್ಮ ಇನ್ನೂ ಎಂತಹದೆಂದರೆ ಕೆಳಗಿನ ಶ್ಲೋಕದಲ್ಲಿ ನೋಡಿರಿ.

**ಗಮನಿಕೆ : 'ವಾಸಾಂಸಿ ಜೀರ್ಣಾನಿ'** ಎನ್ನುವ ಭಗವದ್ಗೀತೆ ಶ್ಲೋಕಕ್ಕೆ ನಾವು ಹೇಳಿದ ವಿವರವು ಹೊಚ್ಚಹೊಸದು ಆದ್ದರಿಂದ ಇದರ ವಿಷಯವಾಗಿ ಚೆನ್ನಾಗಿ ಯೋಚಿಸಿ ಅರ್ಥ ಮಾಡಿಕೊಳ್ಳುತ್ತೀರೆಂದು ಕೋರುತ್ತಿದ್ದೇವೆ. ಆದರೂ ಇದರಲ್ಲಿ ಎಷ್ಟೋ ಅನುಮಾನಗಳು ಉತ್ಪನ್ನವಾಗಿ ಇದು ಸತ್ಯವಾ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಅಂತಹ ಅನುಮಾನಗಳು

ಹೋಗುವುದಕ್ಕೆ ಕೆಲವು ವಾಸ್ತವ ಸಂಘಟನೆಗಳನ್ನು ತಿಳಿಸುತ್ತಿದ್ದೇವೆ. ಸುಮಾರು ಇಪ್ಪತ್ತೈದು ವರ್ಷಗಳ ಕೆಳಗೆ ಈನಾಡು ದಿನಪತ್ರಿಕೆಯಲ್ಲಿ ಟೂಕೀಗಾ ಎಂಬ ಶೀರ್ಷಿಕೆ ಕೆಳಗೆ **'ಗಡುಗ್ಗಾಯಿ'** ಎನ್ನುವ ಹೆಸರಿಂದ ಪ್ರಚಾರವಾಗಿದೆ. ಅದು ಏನೆಂದರೆ! ಇಂಗ್ಲೇಂಡಿನ ದೊಡ್ಡ ಆಸ್ಪತ್ರೆಯಲ್ಲಿ ಒಬ್ಬ ಸ್ತ್ರೀಗೆ ಪ್ರಸವ ನಡೆದಾಗ, ಹುಟ್ಟಿದ ಹೆಣ್ಣು ಶಿಶುವಿಗೆ ಗಂಟೆ ಸಮಯವಾದರೂ ಚಲನೆ ಬರದಿದ್ದಲ್ಲಿ, ಅಲ್ಲಿರುವ ಡಾಕ್ಟರ್ ಪರೀಕ್ಷಿಸಿ ಆ ಶಿಶುವು ಗರ್ಭದಲ್ಲಿಯೇ ಸತ್ತುಹೋಗಿದೆ ಎಂದು ಹೇಳಿದ್ದಾರೆ. ನಂತರ ಆ ಶಿಶುವಿಗೆ ಅಜ್ಜಿಯಾದ ಮುದುಕಿಬಂದು ಶಿಶುವನ್ನು ಕುರಿತು ಕೇಳಿದಳು. ಆಗ ಆಕೆಗೆ ಶಿಶುವಿನ ತಾಯಿ ಪಕ್ಕದಲ್ಲಿರುವವರು ಶಿಶುವು ಗರ್ಭದಲ್ಲಿಯೇ ಸತ್ತುಹೋಗಿದೆ ಎಂದು, ಅದನ್ನು ಶವದ ಕೋಣೆಯಲ್ಲಿ ಇಟ್ಟಿದ್ದಾರೆಂದು ಹೇಳಿದ್ದಾರೆ. ಆ ಮುದುಕಿ ಸತ್ತುಹೋದ ಶಿಶುವಿನ ಮುಖವನ್ನಾದರೂ ನೋಡಿಬರುತ್ತೇನೆಂದು ಶವಗಳ ಕೋಣೆಯಲ್ಲಿ ತೊಟ್ಟಿಲಲ್ಲಿಟ್ಟು ಬಟ್ಟೆ ಹೊದ್ದಿಸಿದ ಶಿಶುವಿನ ಹತ್ತಿರಕ್ಕೆ ಹೋಗಿ ಮುಖದ ಮೇಲಿನ ಬಟ್ಟೆ ತೆಗೆದು ನೋಡಿದಾಗ, ಶಿಶುವು ಬದುಕಿರುವಂತೆ ಆಕೆಗೆ ತಿಳಿದು ಎತ್ತಿಕೊಂಡು ಬಂದು, ಕಿರುಚುತ್ತಿರುವ ಆ ಶಿಶುವನ್ನು ಎಲ್ಲರಿಗೂ ತೋರಿಸಿ ತಾಯಿ ಹತ್ತಿರಕ್ಕೆ ಸೇರಿಸಿದಳು. ಆ ವಿಷಯ ತಿಳಿದ ಡಾಕ್ಟರ್ ಬಂದು ಶಿಶುವನ್ನು ಪರೀಕ್ಷಿಸಿ ನೋಡಿ ಸಪ್ಪೆಮೋರೆ ಹಾಕಿಕೊಂಡಿದ್ದಾರೆ. ನಂತರ ಅವರ ಸಂರಕ್ಷಣೆಯಲ್ಲಿಯೇ ತಿಂಗಳು ಆ ಶಿಶುವನ್ನು ಇಟ್ಟುಕೊಂಡು ನಂತರ ಡಿಶ್ಚಾರ್ಜ್ ಮಾಡಿ ಕಳಿಸಿದರು.

ಇಂತಹ ಸಂಘಟನೆ ತಿರುಪತಿ ಗೌಸ್ ಆಸ್ಪತ್ರೆಯಲ್ಲಿಯೂ ಸಹ ನಡೆದಿದೆ. ಅಲ್ಲಿ ಸರಿಯಾಗಿ ಗಮನ ಹರಿಸದ ಲೇಡಿಡಾಕ್ಟರ್ ನಾನು ಎಲ್ಲಿ ಗಮನ ಹರಿಸಿಲ್ಲವೆಂದು, ಎಲ್ಲ ಪರೀಕ್ಷೆಗಳು ಮಾಡಿದ ನಂತರ ಶಿಶುವಿಗೆ ಪ್ರಾಣವಿಲ್ಲವೆಂದು ನಿರ್ಣಯಿಸಿದ್ದೇನೆ ಅಲ್ಲವೆ! ಶಿಶುವು ಗಂಟೆ ನಂತರ ಹೇಗೆ ಬದುಕಿದೆ ಎಂದು ಯಾವುದೋ ಎಲ್ಲೋ ತಪ್ಪುಮಾಡಿದ್ದೇನೆಂದುಕೊಂಡಳು. ಆಕೆ ನಮ್ಮ **'ಜನನ ಮರಣ ಸಿದ್ಧಾಂತ'** ಎನ್ನುವ ಪುಸ್ತಕ ಓದಿ ನಂತರ ನನ್ನ ಹತ್ತಿರ ಬಂದು ತಾನು ಎಲ್ಲಿ ತಪ್ಪಾಗಿದ್ದೇನೋ ತಿಳಿದುಹೋಗಿದೆ ಎಂದು, ಈ ವಿಷಯ ನಮ್ಮ ಓದುಗಳಲ್ಲಿ ಎಲ್ಲಿ ಇಲ್ಲವೆಂದು, ಆದ್ದರಿಂದಲೇ ತಪ್ಪು ನಡೆದಿದೆ ಎಂದು ಒಪ್ಪಿಕೊಂಡಳು. ಆಗ ನಾನು ಹೀಗೆ ಪ್ರಶ್ನಿಸಿದ್ದೇನೆ. **"ಚಲನೆಗಳು ಇಲ್ಲದಿರುವಾಗ ಶಿಶುವು ಯಾವ ಸ್ಥಿತಿಯಲ್ಲಿದೆ ಎಂದುಕೊಳ್ಳುತ್ತೀರಾ?"** ಅದಕ್ಕೆ ಆಕೆ ಉತ್ತರ **'ಅದು ಮೂರ್ಛಸ್ಥಿತಿಯಲ್ಲಿದೆ ಎಂದುಕೊಳ್ಳುತ್ತೇವೆ. ಆಗ ಕಾಲುಗಳು ಹಿಡಿದುಕೊಂಡು ತಲೆಕೆಳಗಾಗಿ ನೇತಾಡಬಿಟ್ಟು ಬೆನ್ನು ಮೇಲೆ ತಟ್ಟುತ್ತೇವೆ. ಆಗಲೂ ಚಲನೆ ಬಾರದಿದ್ದರೆ**

**ಎರಡು ವಿಧದ ಇಂಜೆಕ್ಷನ್‌ಗಳು ಬಳಸುತ್ತೇವೆ. ಅಲ್ಲಿಗೂ ಚಲನೆ ಬಾರದ ಪಕ್ಷದಲ್ಲಿ ಆ ಶಿಶುವು ಗರ್ಭದಲ್ಲಿ ಮರಣಿಸಿದಂತೆ ನಿರ್ಣಯಿಸುತ್ತೇವೆ.'** ಎಂದಳು ಆಗ ನಾನು ಶ್ವಾಸ ಆಡುತ್ತಾ ತಿಳುವಳಿಕೆ ತಪ್ಪಿದ್ದರೆ ಅದನ್ನು ಮೂರ್ಛೆ ಎನ್ನಬಹುದು, ಶ್ವಾಸ ಆಡದಂತೆ ತಿಳುವಳಿಕೆ ತಪ್ಪಿದ್ದರೆ ಅದನ್ನು ಮೂರ್ಛೆ ಎನ್ನಬಾರದಲ್ಲವೆ! ಚಲನೆಗಳಿಲ್ಲದ ಶರೀರದಲ್ಲಿ ಶ್ವಾಸ ಆಡುತ್ತಿದೆಯೋ ಇಲ್ಲವೋ ಮೊದಲು ಪರಿಶೀಲಿಸಿದಲ್ಲಿ ನಿಮಗೆ ತಿಳಿಯುತ್ತದೆ ಎಂದೆನು. ಹೀಗೆ ಎಷ್ಟೋ ನಿದರ್ಶನಗಳನ್ನು ಜನನ ಮರಣ ಸಿದ್ಧಾಂತಕ್ಕೆ ಅನುಕೂಲವಾಗಿ ನೀವು ನೋಡಬಹುದು.

## 1). ಶಿಶುವು ಬದುಕಿದ್ದರು ಮರಣಿಸಿದ್ದಾನೆಂದು ಹೇಳಿದ ಡಾಕ್ಟರ್‌ಗಳು

(ಈನಾಡು, ಹೈದರಾಬಾದ್) ಸೀತಾಫಲ್‌ಮಂಡಿ, ನವಂಬರ್ 30, 2001 (ನ್ಯೂಸ್‌ಟುಡೇ)

ನವಮಾಸಗಳ ಕನಸಿನ ಬೆಳೆಯಾದ ತನ್ನ ಕೂಸು ಸ್ವಲ್ಪ ಸಮಯಕ್ಕೆ ಭೂಮಿ ಮೇಲೆ ಬೀಳುತ್ತದೆಂದು ಆ ತಾಯಿ ಸಡಗರಪಟ್ಟಿದ್ದಾಳೆ. ಇಷ್ಟು ದಿನ ಹೊಟ್ಟೆಯಲ್ಲಿದ್ದು ಕಚುಗುಳಿ ಇಟ್ಟ ಮಗು ಸ್ವಲ್ಪಹೊತ್ತಿನಲ್ಲಿ ಕೈಯ್ಯಲ್ಲಿ ಇರುತ್ತಾನೆಂದು ಆ ತಾಯಿ ಕಂಡ ಕನಸುಗಳು ಎಷ್ಟೋ, ಕೊನೆಗೆ ಆ ಸಮಯ ಬಂದೇ ಬಂದಿದೆ. ಹುಟ್ಟಿದ ತಕ್ಷಣ ಮಗು ಮೃತಹೊಂದಿದ್ದಾನೆಂದು ಡಾಕ್ಟರ್ ಹೇಳಿದಾಗ ಆಕೆಯ ಹೃದಯ ನಿಂತುಹೋಗಿದೆ. ಮಗು ಶವವನ್ನು ಡಾಕ್ಟರ್ ಒಂದು ಚೀಲದಲ್ಲಿ ಹಾಕಿಕೊಟ್ಟು ಅವರ ಸ್ವಾಧೀನಪಡಿಸಿದಂತೆ ಅವರಹತ್ತಿರ ಸಹಿ ಮಾಡಿಸಿ ಕೊಂಡು ಕೈ ಕೊಡವಿಕೊಂಡನು. ಅಲ್ಲಿಗೆ ಕಥೆ ಮುಗಿಯುವುದೇ. ಆದರೆ ಆ ಮಗುವಿನ ತಂದೆ ಬರುವುದರಲ್ಲಿ ನಡೆದ ಸ್ವಲ್ಪ ಸಮಯದ ಆಲಸ್ಯವು ಇಡೀ ಕಥೆಯನ್ನೇ ಮತ್ತೊಂದು ಕಡೆಗೆ ತಿರುಗಿಸಿದೆ. ಶಿಶುವಿನ ತಂದೆಗೋಸ್ಕರ ಎಲ್ಲರೂ ಎದುರು ನೋಡುತ್ತಿರುವಾಗ ಚೀಲದಲ್ಲಿ ಕದಲಿದಂತಾಗಿದೆ. ಇದು ಅದ್ಭುತನಾ! ಡಾಕ್ಟರ್‌ಗಳ ನಿರ್ಲಕ್ಷ್ಯವಾ! ಇದೇನು ಯಾವುದೋ ಮಾರುಮೂಲೆ ಹಳ್ಳಿಯಲ್ಲಿ ನಡೆದಿರುವುದಲ್ಲ. ರಾಷ್ಟ್ರದಲ್ಲಿ ಪ್ರಖ್ಯಾತಿಹೊಂದಿದ ಗಾಂಧಿ ಆಸ್ಪತ್ರೆಯಲ್ಲಿ ನಡೆದ ಸಂಘಟನೆ ಇದು. ವಿವರಗಳಿಗೆ ಹೋದರೆ.. ಗೂಡೂರಿನಲ್ಲಿರುವ ಪ್ರಕಾಶ್ (25), ರೇಣುಕಳಿಗೆ (20) ವರ್ಷ ಇವರಿಗೆ ಒಂದು ವರ್ಷದ ಕೆಳಗೆ ಮದುವೆಯಾಗಿದೆ. ರೇಣುಕ ಗರ್ಭವತಿಯಾದ ಮೇಲೆ, ಮೊದಲ ಹೆರಿಗೆ ಆಗಿರುವುದರಿಂದ ಖರ್ಚಿಗೆ, ಶ್ರಮಕ್ಕೆ ಎದರದೆ ಪ್ರತಿಸಾರಿ ಗಾಂಧಿ ಆಸ್ಪತ್ರೆಗೆ ಬಂದು ಪರೀಕ್ಷೆಗಳು ಮಾಡಿಸಿಕೊಳ್ಳುತ್ತಿದ್ದರು. ಪ್ರಸವ ಸಮಯ ಹತ್ತಿರಬಂದಿರುವುದರಿಂದ ಗುರುವಾರ ಸಾಯಂಕಾಲ ಗೂಡೂರಿನಿಂದ ಬಂದು ಗಾಂಧಿ ಆಸ್ಪತ್ರೆಯಲ್ಲಿಯೇ ಅಡ್ಮಿಟ್ ಆಗಿದ್ದಾರೆ. ಸಾಯಂಕಾಲ ಏಳು ಗಂಟೆಗೆ ರೇಣುಕ ಗಂಡು ಮಗುವಿಗೆ ಜನ್ಮಕೊಟ್ಟಿದ್ದಾಳೆ.

ಡಾಕ್ಟರ್‌ಗಳು ಪರೀಕ್ಷಿಸಿ ಮಗು ಬಲಹೀನವಾಗಿ ಹುಟ್ಟುವುದರಿಂದ ಸತ್ತುಹೋಗಿದ್ದಾನೆಂದು ಹೇಳಿದ್ದಾರೆ. ಆದ್ದರಿಂದ ರೇಣುಕ ಶೋಕ ದೇವತೆ ಆಗಿದ್ದಾಳೆ. ಆಕೆ ತಾಯಿ ವೀರಮ್ಮಗೆ ಸತ್ತುಹೋಗಿದ್ದಾನೆಂದು ಹೇಳಿ ಮಗುವನ್ನು ಒಂದು ಗೋಣಿ ಚೀಲದಲ್ಲಿ ಹಾಕಿ ಆಸ್ಪತ್ರೆ ಸಿಬ್ಬಂದಿಗೆ ಕೊಟ್ಟಿದ್ದಾರೆ. ಚೀಲ ಕೊಟ್ಟಿರುವಂತೆ ಆಕೆಯಿಂದ ಸಹಿ ಮಾಡಿಸಿಕೊಂಡಿದ್ದಾರೆ. ರೇಣುಕ ಗಂಡ ಆ ಸಮಯದಲ್ಲಿ ಹೊರಗೆ ಹೋಗಿದ್ದಾನೆ. ವೀರಮ್ಮ ರೇಣುಕಳನ್ನು ಸಮಾಧಾನಪಡಿಸುತ್ತಾ ಮಗು ಶವವನ್ನು ಇಟ್ಟುಕೊಂಡು ಕುಳಿತಿದ್ದಾಳೆ. ಅಳಿಯನಿಗೋಸ್ಕರ ಎದುರು ನೋಡುತ್ತಿದ್ದಾಳೆ. ಗಂಟೆ ಸಮಯ ಕಳೆದುಹೋಗಿದೆ. ಅಷ್ಟರಲ್ಲಿ ಚೀಲದಲ್ಲಿ ಚಲನೆಗಳು ಪ್ರಾರಂಭವಾಗಿವೆ. ಪಕ್ಕದಲ್ಲಿಯೇ ಇರುವ ಮಹಿಳೆಯರು ಆ ವಿಷಯ ಗಮನಿಸಿ ವೀರಮ್ಮಗೆ ಹೇಳಿದರು. ಚೀಲ ಬಿಚ್ಚಿ ನೋಡಿದಾಗ ಮಗು ಕದಲುತ್ತಿದೆ. ಆಗ ವೀರಮ್ಮ, ರೇಣುಕಳಾ ಸಂತೋಷಕ್ಕೆ ಅವಧಿಗಳಿಲ್ಲ. ಅಷ್ಟರಲ್ಲಿಯೇ ಮತ್ತೆ ಕದಲಿಕೆಗಳು ನಿಂತುಹೋಗಿವೆ ಈ ವಿಷಯವನ್ನು ಡಾಕ್ಟರ್‌ಗಳಿಗೆ ಹೇಳಿದರೆ ಅವರು ವೀರಮ್ಮನನ್ನು ಹೆದರಿಸಿ ಕಳುಸಿದರು. ಮತ್ತೆ ಸ್ವಲ್ಪ ಸಮಯಕ್ಕೆ ಮಗು ಅಳುವುದು ಹೆಚ್ಚಾಯಿತು. ಆಗಲಾದರೂ ಡಾಕ್ಟರ್‌ಗಳಿಗೆ ತಿಳಿವಳಿಕೆ ಬರಲಿಲ್ಲ. ತಕ್ಷಣ ಮಗುವನ್ನು ಪ್ರೀಮೆಚ್ಯೂರ್ ಯೂನಿಟ್‌ಗೆ ತೆರಳಿಸಿದರು. ಪ್ರಸ್ತುತ ಮಗು ಆ ಯೂನಿಟ್‌ನಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾನೆ. ಅಳಿಯ ಬರುವುದು ಆಲಸ್ಯವಾಗದೆ ಹೋಗಿದ್ದರೆ ಏನು ನಡೆಯುತ್ತಿತ್ತೋ ತಿಳಿದುಕೊಂಡರೆ ಭಯಂಕರವಾಗಿದೆ ಎಂದು ವೀರಮ್ಮ ಶೋಕಿಸುತ್ತಾ ಹೇಳಿದಳು. ಆ ಸ್ವಲ್ಪ ಸಮಯ ನರಕಯಾತನೆ ಅನುಭವಿಸಿದ್ದೇವೆಂದು ರೇಣುಕ, ವೀರಮ್ಮ ಹೇಳಿದರು. ಮಗು ಬದುಕಲಿಲ್ಲವೆಂದು ತಿಳಿದು ಆತ್ಮಹತ್ಯೆ ಮಾಡಿಕೊಳ್ಳಬೇಕೆಂದುಕೊಂಡಿದ್ದೆ ಎಂದು ರೇಣುಕ ಕಣ್ಣೀರು ಹಾಕಿದ್ದಾಳೆ. ಒಂದು ವೇಳೆ ಅದೇ ನಡೆದಿದ್ದರೆ ಎರಡು ತುಂಬಿದ ಪ್ರಾಣಗಳು ಬರೀ ಪುಣ್ಯಕ್ಕೆ ಬಲಿಯಾಗುತ್ತಿದ್ದವು. ಆಗ ಆ ಪಾಪವು ಯಾರದೋ ಡಾಕ್ಟರ್‌ಗಳು ಆತ್ಮ ವಿಮರ್ಶೆ ಮಾಡಿಕೊಳ್ಳಬೇಕು.

## 2) ಪ್ರಾಣ ಬಾರದ ಮೊದಲೆ ಬಂದಿದೆ, ಹೋಗಿದೆ ಎಂದು ಹೇಳಿದ ಡಾಕ್ಟರ್‌ಗಳು

ತಂದೆ ಹೆಸರು : ಇ. ರಾಮ್‌ಮೋಹನ್ ಗೌಡ,
ತಾಯಿ ಹೆಸರು : ಇ. ವಾಸವಿ
ಹಾಸ್ಪಿಟಲ್ : ಗಂಗ ಹಾಸ್ಪಿಟಲ್
ತಾರೀಖು : ಜೂಲೈ. 22, 2004
ಟೈಮ್ : 6.30 A.M

ಗರ್ಭವತಿಯಾಗಿರುವ ಶ್ರೀಮತಿ ವಾಸವಿಯವರು ಗಂಗ ಹಾಸ್ಪಿಟಲ್ (ದಿಲ್‌ಸುಖ್ ನಗರ್, ಚೈತನ್ಯಪುರಿ)ಯಲ್ಲಿ ಲೇಡಿ ಡಾಕ್ಟರ್ ಹತ್ತಿರ ಪರೀಕ್ಷೆ ಮಾಡಿಸಿಕೊಂಡಿದ್ದಾಳೆ, ಗರ್ಭಸ್ಥ ಶಿಶುವು ಆರೋಗ್ಯವಾಗಿಯೇ ಇದೆಯೆಂದು ಆಕೆಯ ಗಂಡ ರಾಮಮೋಹನ್ ಗೌಡ್ರಿಗೆ ಡಾಕ್ಟರ್ ತಿಳಿಸಿದ್ದಾರೆ. ನಂತರ ಕೆಲವು ದಿನಗಳಿಗೆ ತಿಂಗಳುಗಳು ತುಂಬಿ ಗರ್ಭವತಿಯಾದ ವಾಸವಿಯವರಿಗೆ ನೋವುಗಳು ಪ್ರಾರಂಭವಾಗಿವೆ. ಡೆಲಿವರಿ ಆಗುತ್ತದೆಂದು ಗಂಗ ಹಾಸ್ಪಿಟಲ್‌ಗೆ ಹೋಗಿ ಡಾಕ್ಟರ್‌ನನ್ನು ಬೇಟಿಯಾದರು. ಗರ್ಭದಲ್ಲಿ ಶಿಶುವು ಚಲನೆಗಳು ಚೆನ್ನಾಗಿಯೇ ಇವೆಯೆಂದು, ಶಿಶುವು ಚೆನ್ನಾಗಿಯೇ ಇದೆ ಎಂದು ಹೇಳಿದ ಡಾಕ್ಟರ್‌ಗಳ ಮಾತುಗಳು ಕೇಳಿ ರಾಮಮೋಹನ್ ಗೌಡ್ ಸಂತೋಷವಾಗಿದ್ದಾರೆ. ಸ್ವಲ್ಪ ಸಮಯಕ್ಕೆ ವಾಸವಿಯವರು ಪ್ರಸವಿಸುವುದು ನಡೆದಿದೆ. ಪ್ರಸವಿಸಿದ 15 ನಿಮಿಷಗಳ ನಂತರ ತಂದೆ ರಾಮಮೋಹನ್ ಗೌಡಿಗೆ ಶಿಶುವನ್ನು ತೋರಿಸಿದ್ದಾರೆ. ಆಗ ಶಿಶುವಿಗೆ ಕದಲಿಕೆಯಾಗಲಿ, ಶ್ವಾಸವು ಆಡಿದಂತಾಗಲಿ ಕಾಣಿಸಲಿಲ್ಲ. ಆ ವಿಷಯವಾಗಿ ಲೇಡಿ ಡಾಕ್ಟರ್‌ನನ್ನು ಕೇಳಿದಾಗ ಶಿಶುವು ಹಾರ್ಟ್ ಸಮಸ್ಯೆಯಿಂದ ಹುಟ್ಟಿದೆ ಎಂದು, ಸ್ವಲ್ಪ ಸ್ವಲ್ಪ ಶ್ವಾಸ ತೆಗೆದುಕೊಳ್ಳುತ್ತಿದೆ ಎಂದು, ಆದ್ದರಿಂದ ಮೇಲಕ್ಕೆ ಕಾಣಿಸಲಿಲ್ಲವೆಂದು ಹೇಳಿದಳು. ಆಗ ರಾಮಮೋಹನ್ ಗೌಡ ಶಿಶುವು ಸ್ವಲ್ಪವೂ ಸಹ ಕದಲಲಿಲ್ಲ, ಕಿರುಚಲಿಲ್ಲ ಅಲ್ಲವೇ ಎಂದು ಕೇಳಿದನು. ಅದಕ್ಕೆ ಸಮಾಧಾನವಾಗಿ ಹಾರ್ಟ್ ಪ್ರಾಬ್ಲಮ್ ಇರುವ ಶಿಶುವಿಗೆ ಹಾಗೆಯೇ ಇರುತ್ತದೆಂದು, ಭವಿಷತ್ತಿನಲ್ಲಿ ಶಿಶುವು ದೊಡ್ಡದಾದರೂ ಇಂತಹ ಪರಿಸ್ಥಿತಿಯೇ ಇರುತ್ತದೆಂದು, ಇಂತಹ ಶಿಶುವಿನಿಂದ ತಂದೆ ತಾಯಿಗಳಿಗೆ ಬಹಳ ಕಷ್ಟವಾಗಿರುತ್ತದೆಂದು, ಎಲ್ಲ ಸೌಕರ್ಯಗಳು ಶಿಶುವಿಗೆ ಮಾಡಬೇಕಾಗಿರುತ್ತದೆ ಎಂದು ಹೇಳಿರುವುದು ನಡೆದಿದೆ. ಆ ಮಾತಿಗೆ ಶಿಶುವಿನ ಮೇಲೆ ತಂದೆಗೆ ಸ್ವಲ್ಪ ಬೇಸರ ಉಂಟಾಗಿದೆ. ಆಗಲೂ ಸುಮ್ಮನಿರದೆ ಗರ್ಭವತಿ ಆದಾಗಿನಿಂದ ನಿಮ್ಮ ಹತ್ತಿರಕ್ಕೆ ಕರೆದುಕೊಂಡು ಬಂದು ಪರೀಕ್ಷೆಗಳು ಮಾಡಿಸಿದ್ದೇವೆ ಅಲ್ಲವೆ! ಆಗ ಹೊಟ್ಟೆಯಲ್ಲಿ ಶಿಶುವು ಆರೋಗ್ಯವಾಗಿ ಚೆನ್ನಾಗಿದೆ ಎಂದು ಹೇಳಿದ್ದೀರಲ್ಲ! ಎಂದು ಕೇಳಿದನು. ಎಲ್ಲ ಸಮಸ್ಯೆಗಳು ಪರೀಕ್ಷೆಗಳಿಂದ ತಿಳಿಯುವುದಿಲ್ಲ ಎಂದು ಹೇಳಿ I.C.U ಗೆ ಶಿಶುವನ್ನು ಕಳಿಸುತ್ತಿದ್ದೇವೆಂದು, ಒಂದು ವೇಳೆ ಶಿಶುವು ಬದುಕಬಹುದು ಇಲ್ಲವೇ ಸತ್ತುಹೋಗಬಹುದೆಂದು ಬೇರೆ ಹಾಸ್ಪಿಟಲ್‌ಗೆ ಫೋನ್ ಮಾಡಿ ವ್ಯಾನ್ ಕರೆಸಿ ಶಿಶುವೊಂದರ ಮೂಗಿಗೆ ಆಕ್ಸಿಜನ್ ಇಟ್ಟು ಅಲ್ಲಿಂದ ಕಳಿಸಿದಳು. ಇದೆಲ್ಲವೂ ನಡೆಯುವುದಕ್ಕೆ ಸುಮಾರು 45 ನಿಮಿಷಗಳು ಬೇಕಾಗಿದೆ. ಶಿಶುವಿನ ಮೇಲೆ ಆಸೆಬಿಟ್ಟ ರಾಮಮೋಹನ, ತನ್ನ ಹೆಂಡತಿ ಆರೋಗ್ಯವಾಗಿದ್ದರೆ ಸಾಕೆಂದು ಹೆಂಡತಿಗೆ ಶಿಶುವಿನ ವಿಷಯ ಸ್ವಲ್ಪವೂ ತಿಳಿಸದೆ ಪಕ್ಕದಕೋಣೆಯಲ್ಲಿ ಪರೀಕ್ಷೆಗೋಸ್ಕರ ಡಾಕ್ಟರ್‌ಗಳು ಇಟ್ಟುಕೊಂಡಿದ್ದಾರೆಂದು ಹೇಳಿ

ಸುಳ್ಳುಹೇಳಿದನು. ನಂತರ ಅರ್ಧಗಂಟೆಗೆ ನಿಮ್ಮ ಶಿಶುವು ಸತ್ತುಹೋಗಿದೆ ಎಂದು ಡಾಕ್ಟರ್ ಹೇಳುವುದು ನಡೆದಿದೆ. ಆ ವಿಷಯ ತಾಯಿಗೆ ತಿಳಿದರೆ ಷಾಕ್‌ಗೆ ಗುರಿ ಆಗುತ್ತಾಳೆಂದು ಗಂಡ ಯಾವ ಕಾರಣಕ್ಕೂ ಹೆಂಡತಿಗೆ ತಿಳಿಯದಂತೆ ಸುಮಾರು 20 ದಿನಗಳು ಕಳೆದಿದ್ದಾನೆ.

ಇಲ್ಲಿ ನಡೆದ ಅಸಲು ವಿಷಯ ಏನೆಂದರೆ 15 ನಿಮಿಷಗಳ ನಂತರವೂ ಸಹ ಕದಲದ, ಕಿರುಚದ ಶಿಶುವನ್ನು ನೋಡಿ ಡಾಕ್ಟರ್‌ಗೆ ಏನು ಅರ್ಥವಾಗದೆ, ಶ್ವಾಸವೇ ಇಲ್ಲದ ಶಿಶುವಿಗೆ ಸ್ವಲ್ಪ ಸ್ವಲ್ಪ ಹೊರಗೆ ಕಾಣಿಸದ ವಿಧದಲ್ಲಿ ಆಡುತ್ತಿದೆ ಎಂದು ಹೇಳುವುದು ಮೊದಲ ತಪ್ಪು. ಆ ತಪ್ಪನ್ನು ಸಮರ್ಥಿಸಿಕೊಳ್ಳುವುದಕ್ಕೆ ಗುಂಡಿಗೆ (ಹಾರ್ಟ್) ನಿಶ್ಶಕ್ತಿಯಾಗಿರುವ ಶಿಶುವು ಹೀಗೆಯೇ ಇರುತ್ತದೆಂದು, ದೊಡ್ಡದಾದ ನಂತರವೂ ಸಹ ಕದಲದೆ ಮೆದಲದೆ ಇರುತ್ತದೆಂದು ಹೇಳುವುದು ಎರಡನೆ ತಪ್ಪು. ಶ್ವಾಸವೇ ಇಲ್ಲದ ಶಿಶುವಿಗೆ ಆಕ್ಸಿಜನ್ ಇಟ್ಟು ಬೇರೆ ಹಾಸ್ಪಿಟಲ್‌ನಲ್ಲಿ ಐ.ಸಿ.ಯು ಗೆ ಕಳುಹಿಸಿ ಶಿಶುವು ಸತ್ತುಹೋಗಿದೆ ಎಂದು ಅವರ ಮೂಲಕ ಹೇಳಿಸುವುದು ಮೂರನೆ ತಪ್ಪು. ಯಾವಾಗಲೋ ಒಂದುಸಲ ಕೆಲವು ಶಿಶುಗಳಿಗೆ ಮಾತ್ರ, ಪ್ರಾಣ ಆಲಸ್ಯವಾಗಿ ಬರುತ್ತದೆಂದು ಡಾಕ್ಟರ್‌ಗಳಿಗೆ ತಿಳಿಯದೆಹೋಗಿರುವುದು ಎಲ್ಲದಕ್ಕಿಂತ ದೊಡ್ಡ ತಪ್ಪು.

ಅರ್ಧಗಂಟೆಗಾಗಲಿ, ಗಂಟೆಗಾಗಲಿ, ಎರಡು ಮೂರು ಗಂಟೆಗಳಿಗಾಗಲಿ, ಅದಕ್ಕಿಂತ ಹೆಚ್ಚು ಸಮಯಕ್ಕಾಗಲಿ, ಶಿಶುವಿಗೆ ಪ್ರಾಣಬಂದೇ ಬರುತ್ತದೆಂಬ ಸತ್ಯ ತಿಳಿಯದಿರುವುದರಿಂದ, ಗಂಗ ಹಾಸ್ಪಿಟಲ್‌ನಲ್ಲಿನ ಶಿಶುವಿಗೆ ಪ್ರಾಣಬಾರದ ಮುಂಚೆಯೇ ಸ್ವಲ್ಪ ಶ್ವಾಸವಿದೆ ಎಂದು ನಂತರ ಹೋಗಿದೆ ಎಂದು ಹೇಳುವುದು ನಡೆದಿದೆ. ಈ ಸಂಘಟನೆಯಲ್ಲಿ ಎಷ್ಟೋ ಆಸೆಗಳಿಂದ, ಊಹೆಗಳಿಂದ ತಮ್ಮ ಮಗುವನ್ನು ನೋಡಿಕೊಳ್ಳುತ್ತೇವೆಂದುಕೊಂಡ ತಾಯಿತಂದೆಯರಿಗೆ ಮಗುವನ್ನು ದೂರ ಮಾಡಿದಂತಾಗಿದೆ. ಜೀವನದ ಪ್ರಥಮಾಂಕದಲ್ಲಿಯೇ ಶಿಶುಗಳನ್ನು ಡಾಕ್ಟರ್‌ಗಳು ತಮಗೆ ತಿಳಿಯದೆ ಪರೋಕ್ಷ ಶಿಶು ಹತ್ಯೆಗಳು ಮಾಡುತ್ತಿದ್ದಾರೆ. ಹತ್ಯೆಗಳು ಅನಾಗರಿಕವೆಂದು ಹತ್ಯೆ ಮಾಡಿದವರನ್ನು ಶಿಕ್ಷಿಸುವ ನ್ಯಾಯವ್ಯವಸ್ಥೆ ತಾಯಿತಂದೆಯರಿಗೆ ದುಃಖವನ್ನು ಉಂಟುಮಾಡುತ್ತಿರುವ ಪರೋಕ್ಷ ಹತ್ಯೆಗಳನ್ನು ನಿಲ್ಲಿಸುತ್ತದೆ ಎಂದು, ಶಿಶುವಿಗೆ ಪ್ರಾಣವು ಯಾವಾಗಬರುತ್ತದೋ ತಿಳಿಯದ ಲೋಪಭರಿತವಾದ ವೈದ್ಯ ಓದುಗಳನ್ನು, ಲೋಪರಹಿತವಾಗಿ ಬದಲಾಯಿಸುವುದಕ್ಕೆ ಆದೇಶಗಳನ್ನು ಹೊರಡಿಸಿ, ಎಷ್ಟೋಜನ ಶಿಶುಗಳನ್ನು ರಕ್ಷಿಸಿ ಪುಣ್ಯ ಕಟ್ಟುಕೊಳ್ಳಿ ಎಂದು ಕೋರುತ್ತಿದ್ದೇವೆ.

### 3). ಶಿಶುವಿಗೆ ಪ್ರಾಣ ಬಾರದೇ ಸತ್ತುಹೋಗಿದೆಯೆಂದು ಹೇಳಿದ ಡಾಕ್ಟರ್‌ಗಳು

ತಂದೆ ಹೆಸರು : ಮಲ್ಲೇಶ್
ತಾಯಿ ಹೆಸರು : ರಜಿತ
ಹಾಸ್ಪಿಟಲ್ : ವಿಜಯ ನರ್ಸಿಂಗ್‌ಹೋಮ್, (ಕರ್ಮನ್‌ಗಾಟ್)
ತಾರೀಖು : ಆಗಸ್ಟು26, 2004.
ಡಾಕ್ಟರ್‌ಗಳು : ಸತ್ಯನಾರಾಯಣ ಮತ್ತು ಒಬ್ಬ ಗೈನಕಾಲಜಿಸ್ಟು

ಕೂಲಿನಾಲಿ ಮಾಡಿಕೊಂಡು ಬದುಕುವ ಬಡ ದಂಪತಿಗಳ ಕುಟುಂಬವು ಮಲ್ಲೇಶ್ ಅವರದು. ಹೆಂಡತಿ ಗರ್ಭವತಿ ಹೆರಿಗೆ ಆಗುವ ಸಮಯದಲ್ಲಿ ಆಕೆಗೆ ನೋವು ಬಂದಿದೆ. ತಕ್ಷಣ ಹತ್ತಿರದಲ್ಲಿರುವ ಗಾಯಿತ್ರಿ ನಗರ್‌ರೋಡ್ ನಂ. 19 ರಲ್ಲಿರುವ ವಿಜಯ ನರ್ಸಿಂಗ್‌ಹೋಮ್‌ಗೆ ಕರೆದುಕೊಂಡು ಹೋಗಿದ್ದಾರೆ. ಪ್ರಸವವಾಗುತ್ತಲೇ ಆ ಗಂಡು ಮಗುವನ್ನು ಡಾಕ್ಟರ್‌ಗಳು ಪರೀಕ್ಷಿಸಿ ಶಿಶುವಿಗೆ ಪ್ರಾಣವಿಲ್ಲವೆಂದು ಹೇಳಿದ್ದಾರೆ. ಸತ್ತು ಹೋಗಿದೆ ಎಂದು ಹೇಳಿ ಶಿಶುವನ್ನು ತೆಗೆದುಕೊಂಡು ಹೋಗಲು ಡಾಕ್ಟರ್‌ಗಳು ಹೇಳಿದಾಗ, ಆ ಸಮಯದಲ್ಲಿ ಶಿಶುವಿನ ತಂದೆ ಇಲ್ಲದಿರುವುದರಿಂದ, ಸುಮಾರು ಒಂದುವರೆ ಗಂಟೆ ನಂತರ ಶಿಶುವಿನ ತಂದೆ ಮಲ್ಲೇಶ್ ಮತ್ತಿತರರು ನರ್ಸಿಂಗ್‌ಹೋಮ್‌ಗೆ ಬಂದು, ಶಿಶುವು ಸತ್ತುಹೋಗಿದೆ ಎಂದು ಡಾಕ್ಟರ್‌ಗಳು ಹೇಳಿದ ಸಮಾಧಾನ ಕೇಳಿ ದುಃಖಪಟ್ಟಿದ್ದಾರೆ.

ಪ್ರಾಣವಿಲ್ಲದ ಹಸುಕಂದನನ್ನು ಹೂತಿಡಬೇಕೆಂದುಕೊಂಡರು. ಅಂದುಕೊಂಡ ತಕ್ಷಣ ಕುಣಿ ತೋಡುವುದಕ್ಕೆ ಶಿಶುವಿನ ತಂದೆಗೆ ಸಂಬಂಧಿಸಿದವರು ಹೋದರು. ಹಾಸ್ಪಿಟಲ್‌ನಿಂದ ಆ ಹಸುಕಂದನ ಶವವನ್ನು ಸ್ಮಶಾನಕ್ಕೆ ತರಬೇಕೆಂದುಕೊಂಡಾಗ, ರಕ್ತದ ಕಲೆಗಳು ಆರದ ಹಸುಕಂದನನ್ನು ತಂದೆ ಕೊನೆಯದಾಗಿ ತನ್ನ ಹಸ್ತಗಳಿಂದ ತೆಗೆದು ಕೊಂಡನು. ತನ್ನ ಕೈಯೊಳಗೆ ತೆಗೆದುಕೊಂಡ ಶಿಶುವನ್ನು ನೋಡಿ ಮಲ್ಲೇಶ್ ಸಂತೋಷದಿಂದ 'ನನ್ನ ಮಗ ಬದುಕೇ ಇದ್ದಾನೆ' ಎಂದು ಜೋರಾಗಿ ಕೂಗಿದನು. ಈ ಹಠಾತ್ ಪರಿಣಾಮಕ್ಕೆ ಅಲ್ಲಿರುವವರು ಆಶ್ಚರ್ಯಹೋಗಿದ್ದಾರೆ. ನನ್ನ ಮಗ ಶ್ವಾಸ ತೆಗೆದುಕೊಳ್ಳುತ್ತಿದ್ದಾನೆ ಎಂದು ಮಲ್ಲೇಶ್ ಹೇಳಿದನು. ಅಲ್ಲಿಯವರೆಗೂ ಶಿಶುವೊಂದರ ಹೊಕ್ಕಳ ನಾಳವನ್ನು ಬೇರೆ ಮಾಡಿರಲಿಲ್ಲ. ಶಿಶುವು ಸತ್ತುಹೋಗಿದೆ ಎಂದು ಹಾಗೆ ಏಕೆ ಹೇಳಿದ್ದೀರಾ ಎಂದು ಡಾಕ್ಟರ್‌ನನ್ನು ಕೇಳಿದಾಗ, ಡಾಕ್ಟರ್ ಸತ್ಯನಾರಾಯಣ ಸಮಾಧಾನ ಹೇಳುತ್ತಾ ನನ್ನ ಜೊತೆ ಗೈನಕಾಲಜಿಸ್ಟು ಸಹ ಪರೀಕ್ಷಿಸಿದ್ದಾರೆ **ಏನೋ ಫೀಟಲ್ ಹಾರ್ಟ್** ಲೋಪವೆಂದು

ಹೇಳಿದ್ದಾರೆ ಎಂದನು. ಶಿಶುವಿನ ಹೊಕ್ಕಳು ತೆಗೆದ ಕೂಡಲೇ ಓವೈಸೀ ಹಾಸ್ಪಿಟಲ್‌ಗೆ ತೆಗೆದುಕೊಂಡು ಹೋಗೆಂದು ಡಾಕ್ಟರ್ ಹೇಳಿದರು. ತಕ್ಷಣ ಅವರು ಓವೈಸೀ ಹಾಸ್ಪಿಟಲ್‌ಗೆ ತೆಗೆದುಕೊಂಡು ಹೋಗಿ ಕೆಲವು ಪರೀಕ್ಷೆಗಳು ಮಾಡಿಸಿಕೊಂಡು ನಂತರ ಶಿಶುವು ಅರೋಗ್ಯವಾಗಿಯೇ ಇದೆಯೆಂದು ತಿಳಿದುಕೊಂಡ ದಂಪತಿಗಳು ಸಂತೋಷಿಸಿದ್ದಾರೆ.

ತಂದೆ ಕೈಯಲ್ಲಿ ಪ್ರಾಣ ತಂದುಕೊಂಡ ಆ ಶಿಶುವು ಕೆಲವು ನಿಮಿಷಗಳು ಕಣ್ಣು ತೆರೆಯದಿದ್ದರೆ ಕುಣಿಯ ಪಾಲಾಗಿ ಹೋಗುತ್ತಿದ್ದನು. ದಂಪತಿಗಳು ದುಃಖದಿಂದ ಅಳುತ್ತಿದ್ದರು. ಪ್ರಾಣ ಇರುವಾಗಲೇ ಇಲ್ಲವೆಂದು ಏಕೆ ಹೇಳಿದ್ದೀರೆಂದು ದಂಪತಿಗಳು ಸಂಬಂಧಿಕರು ಸ್ಥಾನಿಕ ಹಿರಿಯರು, ಅಲ್ಲಿನ ವಿಜಯ ನರ್ಸಿಂಗ್‌ಹೋಮ್ ಡಾಕ್ಟರ್‌ನನ್ನು ನಿಲ್ಲಿಸಿ ಕೇಳಿದಾಗ ಡಾಕ್ಟರ್ ಏನೋ ಸಮಾಧಾನ ಹೇಳಿ ಕಳುಹಿಸಿದರು.

ಈ ವಿಷಯ ಎರಡು ಮೂರು ದಿನಗಳಿಗೆ. E. TV ಅವರಿಗೂ ಸಹ ತಿಳಿದಿದೆ. E. TV ವಿಲೇಖರಿ ರೆಹಮಾನ್ ಸ್ಥಾನಿಕ ವಿಜಯ ನರ್ಸಿಂಗ್ ಹೋಮ್‌ಗೆ ಹೋಗಿ ಚರ್ಚೆ ಮಾಡಿದಾಗ ಡಾಕ್ಟರ್ ಅವರು ಮೊದಲು ಬುಕಾಯಿಸಿ ನಂತರ ತನ್ನ ತಪ್ಪೇನು ಇಲ್ಲವೆಂದು ಗೈನಕಾಲಜಿಸ್ಟ್ ಹತ್ತಿರ ಪರೀಕ್ಷಿಸಿದ್ದೇನೆಂದು ಹೇಳಿದನು. ಈ ಸಂಘಟನೆ E. TV ನ್ಯೂಸ್‌ನಲ್ಲಿ ಆಗಸ್ಟು 29ನೆ ತಾರೀಖು ಪ್ರಸಾರ ಮಾಡಿದ್ದರು.

## 4). 12 ಗಂಟೆಗಳ ನಂತರ ಸ್ಮಶಾನದಲ್ಲಿ ಬದುಕಿದ ಶಿಶುವು

| | |
|---|---|
| ತಾಯಿ ಹೆಸರು | : ಸುಮತಿ |
| ಹಾಸ್ಪಿಟಲ್ | : ಗಾಯಿತ್ರಿ ಕ್ಲಿನಿಕ್ (ಕಲ್ವಕುರ್ತಿ). |
| ತಾರೀಖು | : 5–10–2004 |
| ಡಾಕ್ಟರ್‌ಗಳು | : ಡಾ॥ ಮುವ್ವಾ ರಾಮರಾವು ಮತ್ತು ಡಾ॥ ಹಿಮಬಿಂದು. |

ಎಷ್ಟೋ ಪರಿಶೋಧನೆಗಳು ಮಾಡಿ ಭೌತಿಕ ವಿಷಯಗಳೆಲ್ಲವನ್ನು ತಿಳಿದುಕೊಂಡಿದ್ದೇ ವೆಂದುಕೊಂಡ ಶಾಸ್ತ್ರಜ್ಞರಿಗೆ, ಇನ್ನೂ ತಿಳಿಯದ ವಿಷಯಗಳೆಷ್ಟೋ ಇವೆ. ನಮಗೆ ತಿಳಿಯದಿರುವುದು ಇಲ್ಲವೆನ್ನುತ್ತಾ, ತಮಗೆ ತಿಳಿದಿರುವುದೇ ಸತ್ಯವೆಂದುಕೊಳ್ಳುವ ಭೌತಿಕ ಶಾಸ್ತ್ರಜ್ಞರು ಇನ್ನೂ ಪರಿಶೋಧಿಸಿ ತಿಳಿದುಕೊಳ್ಳಬೇಕಾಗಿರುವುದು ಎಷ್ಟೋ ಇದೆಯೆಂದು ಅಣಕಿಸುವ ವಿಷಯಗಳು ಎಷ್ಟೆಷ್ಟೋ ಇವೆ. ಅದರಲ್ಲಿ ಒಂದು ವಿಷಯವನ್ನು

ಸಹ ಪರಿಶೀಲಿಸಿ ನೋಡದೆ ಉನ್ನತ ವಿದ್ಯಾವಂತರೆಂದು ಮೇಲೆ ಬಣ್ಣ ಬಳಿದುಕೊಳ್ಳುವುದು ಸಮಾಜದ್ರೋಹವೆಂದು ತಿಳಿಯುವಂತೆ, ಎಷ್ಟೋ ಸಂಘಟನೆಗಳು ಇವೆ. ಒಂದು ಮೇಕೆ ಎರಡು ಮರಿಗಳನ್ನು ಹಾಕಿದ ನಂತರ, ಅವುಗಳಿಗೆ ಪ್ರಾಣವಿಲ್ಲವೆಂದು ಪಕ್ಕದಲ್ಲಿ ಬಿಸಾಡಿದ ನಂತರ, ಮೂರು ಗಂಟೆಗಳಿಗೆ ಆ ಎರಡು ಮರಿಗಳಿಗೆ ಒಂದರ ನಂತರ ಒಂದು ಪ್ರಾಣ ಬಂದಿರುವುದು ವಿಚಿತ್ರ ಸಂಘಟನೆ, ಆದರೂ ಅವು ಜಂತುಗಳಾದ್ದರಿಂದ ಅವುಗಳ ಬಗ್ಗೆ ಯಾರು ತಲೆ ಕೆಡಿಸಿಕೊಳ್ಳುವುದಿಲ್ಲ. ಹಾಗೆಂದು ಮನುಷ್ಯರ ವಿಷಯದಲ್ಲಿ ಅದೇ ವಿಧವಾಗಿ ನಡೆದರೂ ಗಮನ ಕೊಡದೆ ಹೋಗುವುದನ್ನು ಏನನ್ನಬಹುದೋ ಅರ್ಥವಾಗುತ್ತಿಲ್ಲ. ನಮ್ಮ ಪರಿಶೋಧನೆಗಳ ಫಲಿತವು ಮಾನವ ಸಮಾಜದ ನಾಗರಿಕತೆಯ ಕಡೆ ಪ್ರಯಾಣಿಸುವುದಕ್ಕೆ ಆಗಲಿ ಅನಾಗರಿಕತೆ ಕಡೆ ಹೋಗಬಾರದು. ಮಾನವನ ಜೀವನಕ್ಕೆ ಉಪಯೋಗವಾಗಬೇಕಾದ ವಿಜ್ಞಾನ (ಸೈನ್ಸು) ಪ್ರಥಮಾಂಕವಾದ ಬಾಲ್ಯದಲ್ಲಿಯೇ ಮಾನವನನ್ನು ಹತಮಾಡುವುದು ವಿಚಿತ್ರವಲ್ಲವೆ! ಒಂದು ಆಂಧ್ರರಾಜ್ಯದಲ್ಲಿಯೇ ವರ್ಷಕ್ಕೆ ಕೆಲವು ನೂರಾರು ಸಂಖ್ಯೆಗಳಲ್ಲಿ, ಶಿಶುದಶೆಯಲ್ಲಿಯೇ ಮಾನವಜಾತಿ ಪರೋಕ್ಷ ಹತ್ಯೆಗೆ ಗುರಿ ಆಗುತ್ತದೆ ಎಂದು ಹೇಳುವುದಕ್ಕೆ ಎಷ್ಟೋ ಉದಾಹರಣೆಗಳು ಇವೆ. ಅವುಗಳಲ್ಲಿ ಮಹಾಬೂಬ್‌ನಗರ್ ಜಿಲ್ಲೆ, ಕಲ್ವಕುರ್ತಿಯಲ್ಲಿನ ಒಂದು ಪ್ರವೇಟ್ ಆಸ್ಪತ್ರೆಯಲ್ಲಿ ನಡೆದ ಸಂಘಟನೆಯನ್ನು ವಿವರಿಸಿಕೊಳ್ಳೋಣ.

"ಜಡ್ಚರ್ಲ ಹೋಬಳಿ ನಜುರುಲ್ಲಾಬಾದ್ ಗ್ರಾಮಕ್ಕೆ ಸೇರಿದ ಸುಮತಿ, ಹೆರಿಗೆ ನೋವುಗಳಿಂದ 2004 ಅಕ್ಟೋಬರ್ 5ನೇ ತಾರೀಖು ಮಂಗಳವಾರ ಕಲ್ವಕುರ್ತಿ ಪ್ರವೇಟ್ ಆಸ್ಪತ್ರೆಯಲ್ಲಿ ಸೇರುವುದು ನಡೆದಿದೆ. ಸಾಯಂಕಾಲ 5 ಗಂಟೆಗಳಿಗೆ ಆಕೆಗೆ ಸಿಜೆರಿಯನ್ ಆಪರೇಷನ್ ಮೂಲಕ ಹೆಣ್ಣು ಶಿಶುವನ್ನು ಹೊರಗೆ ತೆಗೆದ ಡಾಕ್ಟರ್‌ಗಳು, ಶಿಶುವನ್ನು ಸ್ವಲ್ಪ ಸಮಯ ಸರಿಯಾಗಿ ಪರೀಕ್ಷಿಸಿ ಮರಣಿಸಿದಂತೆ ಧೃಡೀಕರಿಸಿದ್ದಾರೆ. ಮರಣಿಸಿದ ಶಿಶು ಹುಟ್ಟಿದೆ ಎಂದು ಹೇಳಿದ ಡಾಕ್ಟರ್‌ಗಳ ಮಾತಿಗೆ ಸ್ವಲ್ಪ ದುಃಖಪಟ್ಟ ತಂದೆತಾಯಿಗಳು ಶಿಶುವನ್ನು ಮನೆಗೆ ತೆಗೆದುಕೊಂಡು ಹೋಗಿದ್ದಾರೆ. ಶಿಶುವು ಹುಟ್ಟಿದ ಮಂಗಳವಾರ ಕಳೆದುಹೋಗಿ ಬುಧುವಾರ ಹಸುಕಂದನನ್ನು ಖನನ ಮಾಡುವುದಕ್ಕೆ ಸ್ಮಶಾನಕ್ಕೆ ತೆಗೆದುಕೊಂಡು ಹೋಗಿದ್ದಾರೆ. ಕುಣಿಯಲ್ಲಿ ಶಿಶುವನ್ನು ಮಲಗಿಸಿ ಮೇಲೆ ಮಣ್ಣು ಹಾಕುವಾಗ ಶಿಶುವು ಕದಲಿ ಅಳುವುದಕ್ಕೆ ಪ್ರಾರಂಭಿಸಿದೆ. ಆಶ್ಚರ್ಯಪಟ್ಟ ತಂದೆ ಮೊದಲಾದವರು ಮಗು ಬದುಕಿದೆ ಎಂದು ಗ್ರಹಿಸಿ ಮನೆಗೆ ತಂದುಕೊಂಡಿದ್ದಾರೆ. ಎಲ್ಲ ವಿಧದಲ್ಲಿ ಮಗು

ಆರೋಗ್ಯವಾಗಿದೆ. ಎಲ್ಲ ಪರೀಕ್ಷೆಗಳು ಮಾಡಿದ ನಂತರವೂ ಸಹ ಮರಣಿಸಿದ ಶಿಶುವು ಹುಟ್ಟಿದೆ ಎಂದು ಡಾಕ್ಟರ್‌ಗಳು ಹೇಳುವುದರಿಂದ ಆ ಕುಟುಂಬವು ಪಟ್ಟಿರುವ ಆವೇದನೆ ಆಗ್ರಹವಾಗಿ ಬದಲಾಗಿದೆ. ಆಸ್ಪತ್ರೆ ಮೇಲೆ ದಾಳಿಮಾಡಿ ಬೀಗ ಹಾಕುವುದಕ್ಕೆ ಪ್ರಯತ್ನಿಸಿದರು. ಶಿಶುವು ಮರಣಿಸಿದಂತೆ ಧೃಡೀಕರಿಸಿದ ಡಾಕ್ಟರ್‌ಗಳು ಪರಾರಿಯಾಗಿಹೋಗಿದ್ದಾರೆ.

ಇದು ನಡೆದ ಸಂಘಟನೆಯಾಗಿದ್ದು ಇದರಲ್ಲಿ ಡಾಕ್ಟರರಿಗೆ ತಿಳಿಯದ ವಿಷಯ ಇದೆಯೆಂದು ಸ್ಪಷ್ಟವಾಗಿ ಕಾಣಿಸುತ್ತಿದೆ. ಶಿಶುವು ಹೊರಬಿದ್ದ ನಂತರವೇ ಪ್ರಾಣ ಬರುತ್ತದೆಂಬ ವಿಷಯವು ಜಗತ್ತಿಗೆ ತಿಳಿಯದ ಸತ್ಯ. ನಂತರ ಎರಡನೇ ದಿನ ಪ್ರಾಣಬಂದ ವಿಷಯ ಅರ್ಥವಾಗದೆ, ತಮ್ಮದೆ ತಪ್ಪೆಂದುಕೊಂಡ ಡಾಕ್ಟರ್‌ಗಳು ಓಡಿಹೋಗುವುದು ನಡೆದಿದೆ. ಶಿಶುವಿಗೆ ಮೊದಲು ಪ್ರಾಣ ಇಲ್ಲದ ಮಾತು ವಾಸ್ತವವೇ, ಆದರೂ ಆ ವಿಷಯ ತಿಳಿಯದ ಡಾಕ್ಟರ್‌ಗಳು ನಮ್ಮದೆ ತಪ್ಪೆಂದುಕೊಳ್ಳುವುದು ಅವರ ಓದುಗಳಿಗೆ ಅವಮಾನ. ಈ ಒಂದು ವಿಷಯದಿಂದಲೇ ಡಾಕ್ಟರ್‌ಗಳಿಗೆ ತಿಳಿಯದ ವಿಷಯ ಎಷ್ಟೋ ಇದೆಯೆಂದು ತಿಳಿದರು ಸಹ, ನಾವು ಕಳೆದ ಮೂವತ್ತು ವರ್ಷಗಳಿಂದ ಹೇಳುತ್ತಿದ್ದರೂ ನಮಗೆ ತಿಳಿಯದಿರುವುದು ನಿಮಗೆ ಗೊತ್ತಾ ಎಂದು ಮೂರ್ಖರಂತೆ ಮಾತನಾಡುವ ಅವರನ್ನು ಏನನ್ನಬೇಕೋ ನೀವೆ ಯೋಚಿಸಿರಿ.

ಡಾಕ್ಟರ್‌ಗಳು ಶಿಶುವು ಮರಣಿಸಿದೆ ಎಂದು ಹೇಳಿದ ತಕ್ಷಣ ಶಿಶುವನ್ನು ತಂದೆತಾಯಿಗಳು ಬಿಟ್ಟು ಹೋಗಿದ್ದರೆ, ಅಥವಾ ಶಿಶುವನ್ನು ಬಿಸಾಡಿದ್ದರೆ, ಅಥವಾ ತಕ್ಷಣ ಭೂಮಿಯಲ್ಲಿ ಹೂತಿಟ್ಟರೆ, ಆ ಶಿಶುವನ್ನು ಪರೋಕ್ಷವಾಗಿ ಹತ್ಯೆ ಮಾಡಿದಂತೆ ಅಲ್ಲವೆ! ಅದಕ್ಕೆ ಡಾಕ್ಟರ್‌ಗಳೇ ಹೊಣೆ ಅಲ್ಲವೆ! ಡಾಕ್ಟರ್‌ಗಳನ್ನು ತಯಾರು ಮಾಡಿದ ಮೆಡಿಕಲ್ ಬೋರ್ಡ್ ಈ ವಿಷಯಗಳಿಗೆಲ್ಲಾ ಜವಾಬ್ದಾರಿವಹಿಸಿ ಸಮಾಧಾನ ಹೇಳಬೇಕು".

ತನ್ನ ಹುಟ್ಟನ್ನು ತಾನೇ ತಿಳಿಯದ ಮನುಷ್ಯ, ತನ್ನ ಸಂತತಿ ಹುಟ್ಟುವುದರಲ್ಲಿಯೂ ಸಹ ಅದರ ವಿಷಯ ತಿಳಿಯದಂತಿದ್ದಾನೆ. ಎಷ್ಟೋಜನ ತಂದೆತಾಯಿಯರು ತಮ್ಮ ಶಿಶುಗಳಿಗೆ ಪ್ರಾಣ ಬಾರದ ಮೊದಲೆ ಗರ್ಭದಲ್ಲಿಯೇ ಸತ್ತು ಹೋಗಿದೆ ಎಂದು ಸಂಶಯ ಪಡುತ್ತಿದ್ದಾರೆ. ಹುಟ್ಟಿದ ನಂತರ ಕದಲದ ಶಿಶುವನ್ನು ಸತ್ತುಹೋಗಿದೆ ಎಂದು ಡಾಕ್ಟರ್‌ಗಳು ಹೇಳುವುದರಿಂದ ಪ್ರಾಣವೇ ಬಾರದ ಶಿಶುವನ್ನು ಸತ್ತುಹೋಗಿದೆ ಎಂದು ಹೂತವರು ಕೆಲವರಿರುವಾಗ, ಆ ಶ್ರಮವೂ ಸಹ ಇಲ್ಲದಂತೆ ನಿರ್ಜನ ಪ್ರದೇಶದಲ್ಲಿಯೊ, ಮುಳ್ಳಿನಗಿಡದಲ್ಲಿಯೊ, ಕೊಳಚೆ ನೀರಿನಲ್ಲಿಯೊ ಬಿಸಾಡಿದವರೂ ಸಹ ಬಹಳ ಜನ

ಇದ್ದಾರೆ. ಇಂತಹ ಸಂಘಟನೆಗಳು ಎಷ್ಟೋ ಸಾವಿರಾರು ಸಂಖ್ಯೆಯಲ್ಲಿ ನಡೆದಿರುವವು ಇವೆ. ಅವುಗಳಲ್ಲಿ ಉದಾಹರಣೆಗೆ ಅನಂತಪುರಂ ಆಂಧ್ರಜ್ಯೋತಿ ವಾರ್ತಾಪತ್ರಿಕೆಯಲ್ಲಿ ಸೋಮವಾರ, 13ನೇ ತಾರೀಖು, ಸೆಪ್ಟಂಬರ್ 2004 ನೇ ಅನಂತಪುರಂ ಜಿಲ್ಲೆ ಸ್ಪೆಷಲ್ ಧರ್ಮವರಂ ಜೋನ್‌ನಲ್ಲಿ ಪ್ರಚುರಿತವಾದ ವಾರ್ತೆ ಈ ವಿಧವಾಗಿ ಇದೆ.

## 5) ಅನಾಥ ಹಸುಕಂದನನ್ನು ಅಕ್ಕರೆಯಿಂದ ಸೇರಿಸಿಕೊಂಡ ದಂಪತಿಗಳು

ಧರ್ಮವರಂ,ಸೆಪ್ಟೆಂಬರ್, 12, 2004 (ಆನ್‌ಲೈನ್)

ಒಬ್ಬ ತಾಯಿ ಎತ್ತುಬಿಸಾಡಿದ ಹಸುಕಂದನನ್ನು ಅಕ್ಕರೆಯಿಂದ ಸೇರಿಸಿ ಕೊಂಡ ದಂಪತಿಗಳ ಸಂಘಟನೆ ಇದು. ಅನಂತಪುರಂ ಜಿಲ್ಲೆ, ಧರ್ಮವರಂ ಪಟ್ಟಣದಲ್ಲಿನ ಗೂಡ್ಸುಷೆಡ್ಡು ಕೊಟ್ಟಾಲಗೆ ಹೋಗುವ ರಹದಾರಿಯಲ್ಲಿ ರೈಲ್ವೆಗೇಟ್ ಹತ್ತಿರ, ಲೋಕವು ತಿಳಿಯದ ಆಗಲೇ ಹುಟ್ಟಿದ ಒಂದು ಹಸುಕಂದನನ್ನು ಯಾರೋ ಬಿಸಾಡಿರುವುದರಿಂದ, ವಿಷಯ ತಿಳಿದುಕೊಂಡ ಪೊಲೀಸರು ಅಲ್ಲಿಗೆ ಹೋಗಿ, ಆ ಹಸುಕಂದ ಪ್ರಾಣದಿಂದ ಇರುವುದು ನೋಡಿ ಸರ್ಕಾರಿ ಆಸ್ಪತ್ರೆಗೆ ತೆಗೆದುಕೊಂಡುಹೋಗಿದ್ದಾರೆ. ಹಸುಕಂದ ಮುಳ್ಳಿನ ಪೊದೆಯಲ್ಲಿ ಕಿರುಚುತ್ತಿದ್ದರೂ ಯಾರೂ ಇಲ್ಲದ ಪರಿಸ್ಥಿತಿಯಲ್ಲಿ ಸಿ,ಐ ವಿಕ್ಟರ್, ಎಸ್,ಐ ಶ್ರೀನಿವಾಸಲು, ಎ.ಎಸ್,ಐ ಭೀಮಪ್ಪ ಮುಳ್ಳಿನಪೊದೆಯಲ್ಲಿನ ಹಸುಕಂದನನ್ನು ಹೊರಗೆ ತೆಗೆದಿದ್ದಾರೆ. ಕೂಡಲೇ ಸರ್ಕಾರಿ ಆಸ್ಪತ್ರೆಗೆ ತೆರಳಿಸಿದಾಗ ವೈದ್ಯರು ಚಿಕಿತ್ಸೆಗಳು ನಿರ್ವಹಿಸಿದ್ದಾರೆ. ಆ ಹಸುಕಂದನ ವಯಸ್ಸು ಕೇವಲ ಕೆಲವು ಗಂಟೆಗಳೇ ಎಂದು ವೈದ್ಯರು ತಿಳಿಸಿದ್ದಾರೆ. ಆ ಮಗುವನ್ನು ಅಕ್ಕರೆಯಿಂದ ಸೇರಿಸಿಕೊಳ್ಳುವುದಕ್ಕೆ ಹಲವಾರು ದಂಪತಿಗಳು ಪೋಟಿಬಿದ್ದು, ಕೊನೆಗೆ ಎಲ್ಲ ವಿವರಗಳು ತಿಳಿದುಕೊಂಡು ಕಂದನನ್ನು ಪೋಷಿಸುವ ಆರ್ಥಿಕ ಸಾಮರ್ಥ್ಯವಿದ್ದು ಸಂತಾನವಿಲ್ಲದ ದಂಪತಿಗಳಿಗೆ ವಶಮಾಡುವುದರಿಂದ, ಆ ಕಂದನಿಗೆ ನ್ಯಾಯ ಮಾಡಿದವರಾಗುತ್ತೇವೆಂದು ಸಿ,ಐ ವಿಕ್ಟರ್, ಎಸ್, ಐ ಶ್ರೀನಿವಾಸರು ಭಾವಿಸಿದ್ದಾರೆ. ಇದರಿಂದ ಗುಂತಕಲ್ಲಿಗೆ ಸೇರಿದ ವಿ. ದೇವದಾನಮು, ಸರೋಜ ಎನ್ನುವ ದಂಪತಿಗಳಿಗೆ ಆ ಹಸುಕಂದನನ್ನು ವಶಮಾಡಿದ್ದಾರೆ. ಅವರಿಗೆ ಸಂತಾನವಿಲ್ಲದಿರುವುದರಿಂದ ಆ ಕಂದನನ್ನು ತಮ್ಮ ಮಗುವಂತೆ ನೋಡಿಕೊಳ್ಳುತ್ತೇವೆಂದು ಹೇಳಿ ಪೊಲೀಸರಿಗೆ ವಿಜ್ಞಪ್ತಿ ಮಾಡಿದರು. ದೇವದಾನಮು ಗುಂತಕಲ್ಲು ಪಟ್ಟಣಕ್ಕೆ ಸೇರಿದ ವ್ಯಕ್ತಿಯಾದ್ದರಿಂದ, ಕಲ್ಲೂರು ಎ, ಪಿ. ಟ್ರಾನ್ಸ್‌ಕೋನಲ್ಲಿ ಲೈನ್‌ಮೆನ್‌ನಾಗಿ ಉದ್ಯೋಗ ಮಾಡುತ್ತಿದ್ದಾನೆ. ಇದರಿಂದ ಸಿ,ಐ ವಿಕ್ಟರ್ ಅವರಿಗೆ ಹಸುಕಂದನನ್ನು ಕೊಟ್ಟು ದಂಪತಿಗಳ ವಿವರಗಳನ್ನು ತೆಗೆದುಕೊಂಡನು.

ಇದೇನೋ ಅಕ್ರಮ ಸಂಬಂಧದಿಂದ ಪ್ರಸವಿಸಿದ ಶಿಶುವನ್ನು ಬಿಸಾಡಿದ್ದಾರೆಂದು ಬಹಳ ಜನರು ಅಂದುಕೊಳ್ಳುವುದಕ್ಕೆ ಅವಕಾಶ ಇದೆ. ಅಂತಹದ್ದೇನು ಇಲ್ಲ. ಅಕ್ರಮ ಸಂಬಂಧದಿಂದ ಗರ್ಭಬಂದರೆ ಅಬಾರ್ಷನ್ ಮಾಡುವುದಕ್ಕೆ ರೆಡಿಯಾಗಿ ಎಷ್ಟೋಜನ ಡಾಕ್ಟರ್‌ಗಳಿರುವ ಈ ನವೀನ ಕಾಲದಲ್ಲಿ, ಎಲ್ಲರಿಗೂ ಕಾಣಿಸುವಂತೆ ಒಂಭತ್ತು ತಿಂಗಳು ಹೊಟ್ಟೆಯನ್ನು ಬೆಳೆಸಿಕೊಳ್ಳುವವರು ಯಾರು ಇಲ್ಲ. ಪ್ರಸವಿಸುವವರು ಅಷ್ಟಕ್ಕೂ ಇಲ್ಲ. ಆದ್ದರಿಂದ ಶಿಶುವನ್ನು ಬಿಸಾಡಿದ ಕೇಸುಗಳೆಲ್ಲ ಸತ್ತುಹೋಗಿವೆ ಎಂದು ತಿಳಿದು, ಬಿಸಾಡಿರುತ್ತಾರೆಂದು ತಿಳಿಯುತ್ತಿದೆ. ಬಿಸಾಡಿದ ನಂತರ ಶಿಶುವು ಸುರಕ್ಷಿತವಾಗಿದ್ದು ಪ್ರಾಣ ಬಂದರೆ, ಯಾರೋ ಒಬ್ಬರು ನೋಡಿ ತಂದು ಸಾಕಿಕೊಂಡವರೂ ಸಹ ಎಷ್ಟೋಜನ ಇದ್ದಾರೆ. ಯಾರು ನೋಡದೆ ಹೋದರೆ, ನಾಯಿಗಳ ಕಣ್ಣುಬಿದ್ದರೇನೋ ಆ ಶಿಶುವು ಹತವಾಗಿಹೋದಂತೆ.

ಸಮಾಜದಲ್ಲಿ ಇಂತಹ ಪರೋಕ್ಷ ಶಿಶುಹತ್ಯೆಗಳು ಹೆಚ್ಚಾಗಿ ನಡೆಯುತ್ತಿವೆ. ನಾವು ಕಳೆದ ಮೂವತ್ತು ವರ್ಷಗಳಿಂದ ನಾವು ಹೇಳುತ್ತಿದ್ದರೂ, ನಮ್ಮನ್ನು ಅವಹೇಳನೆ ಮಾಡುವವರೇ ಹೊರತು ಸತ್ಯವನ್ನು ಗ್ರಹಿಸುವವರು ಇಲ್ಲ. ಆದಿಯಲ್ಲಿಯೇ ಹತವಾಗಿಹೋಗುವವರನ್ನು ಕಾಪಾಡುವುದಕ್ಕೆ ಈ ಪರೋಕ್ಷ ಹತ್ಯೆಗಳನ್ನು ನಿವಾರಿಸುವುದಕ್ಕೆ ನ್ಯಾಯಸ್ಥಾನಗಳು ನ್ಯಾಯಾಧೀಶರು ಮುಂದಕ್ಕೆ ಬರಬೇಕೆಂದು ಕೋರುತ್ತಿದ್ದೇವೆ.

## ಜನನ ಸಿದ್ಧಾಂತಕ್ಕೆ ಮತ್ತೊಂದು ಉದಾಹರಣೆ ನೀವು ನೋಡಬಹುದು.

### 6). ಅಮ್ಮಾ ನಾನು ಬದುಕೇ ಇದ್ದೇನೆ।

**ಬದುಕಿರುವ ಮಗು ಸತ್ತುಹೋಗಿದ್ದಾನೆಂದು ಬಟ್ಟೆಯಲ್ಲಿ ಸುತ್ತಿಹಾಕಿದ ವೈದ್ಯರು!**

ಸೆಪ್ಟೆಂಬರ್, 21,2005 (ನ್ಯೂಸ್‌ಟುಡೆ, ಸುಲ್ತಾನ್‌ಬಜಾರ್) ಕೋಠಿ, ಹೈದರಾಬಾದ್.

ಆಗಲೇ ಕಣ್ಣು ತೆರದ ಹಸುಕಂದ, ಅಮ್ಮನ ಮಡಿಲ ಬೆಚ್ಚನೆಯೇನೊ ತಿಳಿದಿಲ್ಲ. ಅಮ್ಮನ ಹಾಲಿನ ರುಚಿ ನೋಡಲಿಲ್ಲ. ಎಷ್ಟೋ ಬಣ್ಣಗಳು, ಅಂದಗಳು ನೋಡಬೇಕಾಗಿದೆ. ಆದರೆ ನಿರ್ಧಯರಾದ ವೈದ್ಯರು ನೀನು ಬದುಕಿಲ್ಲ ಎಂದಿದ್ದಾರೆ, ಮೃತ ಶಿಶುವು ಎಂದಿದ್ದಾರೆ. ಬಟ್ಟೆಯಲ್ಲಿ ಸುತ್ತಿ ಒಂದು ಮೂಲೆಗೆ ಬಿಸಾಡಿದ್ದಾರೆ. ಮಗು ಹುಟ್ಟಿದೆ ಎಂದು ತಿಳಿದು ಮಧುರಾನುಭೂತಿಯಿಂದಿರುವ ಆ ಮಾತೃಮೂರ್ತಿಗೆ ತನ್ನ ಕರುಳುಬಂಧ ಏನಾಗಿದೆಯೋ

ತಿಳಿದಿಲ್ಲ. ಸಂಬಂಧಿಕರು ಹೊರಗೆ ಹೋಗುವಷ್ಟರಲ್ಲಿ ಬದುಕಿರುವ ಆ ಮಗುವನ್ನು ಮೃತಶಿಶುವಾಗಿ ಮುದ್ರೆಹಾಕಿ ಪಕ್ಕಕ್ಕೆ ಇಟ್ಟಿದ್ದಾರೆ. ನಿರ್ಲಕ್ಷ್ಯಂ.. ನಿರ್ಲಜ್ಜಂ..ಅನಾಗರಿಕಂ.. ಈ ಪದಗಳಿಗೆ ಮೀರಿ ನಿಘಂಟಿನಲ್ಲಿ ಯಾವುದಾದರೂ ದೊಡ್ಡ ಪದವಿದ್ದರೆ... ಅದನ್ನು ಸುಲ್ತಾನ್‌ಬಜಾರ್ ಪ್ರಸೂತಿ ಆಸ್ಪತ್ರೆ ಸಿಬ್ಬಂದಿಗೆ ಅನ್ವಯಿಸಬೇಕು. ಮಂಗಳವಾರದಂದು ಸಾರ್ವಜನಿಕ (ಅ)ಧರ್ಮಾ ಆಸ್ಪತ್ರೆಯಲ್ಲಿ ನಡೆದ ಸಂಘಟನೆ ನೆನಸಿಕೊಂಡರೆನೇ ಮೈ ನಡುಗುತ್ತದೆ. ಮಾನವೀಯತೆಯನ್ನು ಪ್ರಶ್ನಿಸುತ್ತದೆ. ವೈದ್ಯಲೋಕಕ್ಕೆ ಅಳಿಯದ ಮಚ್ಚೆಯಾಗಿ ಉಳಿಯುತ್ತದೆ.

ಜೀಡಿಮೆಟ್ಲ ಸಮೀಪದಲ್ಲಿನ ಸೂರಾರಂ ಗ್ರಾಮಕ್ಕೆ ಸೇರಿದ ಸುರೇಶ್ ಯಾದವ್, ರೇವತಿ (27) ದಂಪತಿಗಳು. ಇವರಿಗೆ ಒಂದು ಪಾಪು. ಗತ ಜೀವನದಲ್ಲಿ ರೇವತಿಗೆ ಎರಡು ಬಾರಿ ಅಬಾರ್ಷನ್ ಆಗಿದೆ. ಆಕೆ ಮತ್ತೆ ಗರ್ಭಧರಿಸಿರುವುದರಿಂದ ಕುಟುಂಬಸ್ತರು ಸುಲ್ತಾನ್‌ಬಜಾರ್‌ನಲ್ಲಿ ಸರ್ಕಾರಿ ಪ್ರಸೂತಿ ವೈದ್ಯಶಾಲೆಯಲ್ಲಿ ಕೆಲವು ದಿನಗಳಿಂದ ಚಿಕಿತ್ಸೆ ಮಾಡಿಸುತ್ತಿದ್ದಾರೆ. ಏಳು ತಿಂಗಳ ಗರ್ಭವತಿ ಆದ ರೇವತಿಗೆ ಹೈ ಬಿ.ಪಿ. ಇರುವುದರಿಂದ, ಪ್ರಸವ ಸಮಯದಲ್ಲಿ ತೊಂದರೆಗಳ ಜೊತೆಗೆ ಹುಟ್ಟುವ ಮಗು ಬಲಹೀನವಾಗಿ ಜನ್ಮಿಸುವುದು, 'ಅಥವಾ ಶಿಶುವು ಮರಣಿಸುವ ಅವಕಾಶಗಳಿವೆ ಎಂದು, ಆಸ್ಪತ್ರೆ ಸೂಪರಿಂಟೆಂಡೆಂಟ್ ಆಕೆಯ ಕುಟುಂಬದವರಿಗೆ ವಾರದಮುಂಚೆಯೇ ಸೂಚಿಸಿದ್ದಾರೆ. ರೇವತಿ ಈ ತಿಂಗಳು 8ರಂದು ಸುಲ್ತಾನ್‌ಬಜಾರ್ ಸರ್ಕಾರಿ ಆಸ್ಪತ್ರೆಯಲ್ಲಿ ಸೇರಿದ್ದಾಳೆ. ಆದರೆ ಆಕೆಗೆ ಸೋಮವಾರ ಸಾಯಂಕಾಲ ಹೆರಿಗೆ ನೋವಿಗೋಸ್ಕರ ಇಂಜಕ್ಷನ್ ಕೊಡುವುದರಿಂದ, ರಾತ್ರಿ ಒಂದು ಗಂಟೆ ಸಮಯದಲ್ಲಿ ನೋವು ಪ್ರಾರಂಭವಾಗಿದೆ. ಡ್ಯೂಟಿ ಮೆಡಿಕಲ್ ಆಫೀಸರ್ (DMO) ಸಂಧ್ಯಾದೀಕ್ಷಿತ್‌ಗೆ ಆ ಸಮಾಚಾರ ಕಳುಹಿಸಿದರು. ಮಂಗಳವಾರ ಬೆಳಗಿನಜಾವ 3 ಗಂಟೆ 45 ನಿಮಿಷಗಳ ಸಮಯದಲ್ಲಿ ರೇವತಿಗೆ ಸಾಧಾರಣ ಪ್ರಸವ ನಡೆದು ಒಂದು ಗಂಡು ಮಗುವಿಗೆ ಜನ್ಮಕೊಟ್ಟಿದ್ದಾಳೆ. ಪ್ರಸವ ಸಮಯದಲ್ಲಿ ರೇವತಿ ತಾಯಿ ಯಾದಮ್ಮ ಪ್ರಸವಮಾಡುವ ವಾರ್ಡಿನತ್ತಿರ ಇರುವಾಗ, ಆಕೆಯ ಗಂಡ ಸುರೇಶ್ ಔಷಧಿಗೋಸ್ಕರ ಹೊರಗೆ ಹೋಗಿದ್ದಾನೆ. ಆದರೆ ರೇವತಿಯನ್ನು ತಕ್ಷಣ ಆಪರೇಷನ್ ಥಿಯೇಟರ್‌ಗೆ ಕಳುಸಿದ್ದಾರೆ. ಆರು ಗಂಟೆಯ ಸಮಯದಲ್ಲಿ ಅಲ್ಲಿ ಕೆಲಸ ಮಾಡುವ ಆಯಾಬಂದು ಹುಟ್ಟಿದ ಶಿಶು ಮರಣಿಸಿದ್ದಾನೆಂದು ಒಂದು ಬಟ್ಟೆ ತೆಗೆದುಕೊಂಡು ಬರಬೇಕೆಂದು ಹೇಳಿದಳು. ಇದರಿಂದ ರೇವತಿ ತಾಯಿ ಯಾದಮ್ಮ ಬಟ್ಟೆ ತೆಗೆದುಕೊಂಡು ಬಂದು ಕೊಟ್ಟಳು. ಶಿಶುವನ್ನು ಬಟ್ಟೆಯಲ್ಲಿ ಸುತ್ತಿ ಒಂದು ಪ್ಲಾಸ್ಟಿಕ್‌ಕವರ್‌ನಲ್ಲಿಟ್ಟು ಪಕ್ಕಕ್ಕೆ ಇಟ್ಟಿದ್ದಾರೆ. ಹಣ ಕೊಟ್ಟರೆ ಇಲ್ಲೇ ಇರುವ ಒಬ್ಬ ವ್ಯಕ್ತಿ ಮೃತಶಿಶುವನ್ನು ತೆಗೆದುಕೊಂಡು ಹೋಗಿ ಹೂತಿಟ್ಟು

ಬರುತ್ತಾನೆಂದು ಸಲಹೆಯೂ ಸಹ ಕೊಟ್ಟಿದ್ದಾರೆ. ಆದರೆ ರೇವತಿ ಪರಿಸ್ಥಿತಿ ಆಂದೋಳನ ಕರವಾಗಿ ಇರುವುದರಿಂದ, ಆಕೆಯ ಅತ್ತೆ ಮಾವ ಬರುವವರೆಗೂ ಇರಲು ಹೇಳಿರುವುದರಿಂದ, ಸಿಬ್ಬಂದಿ ಶಿಶುವನ್ನು ಅಲ್ಲೇ ಪಕ್ಕಕ್ಕೆ ಇಟ್ಟಿದ್ದಾರೆ. ಮಧ್ಯಾಹ್ನ 3 ಗಂಟೆ 30 ನಿಮಿಷಗಳ ಸಮಯದಲ್ಲಿ ರೇವತಿ ಮಾವ ಶಿವಯ್ಯ, ಮತ್ತೆ ಕೆಲವರು ಸಂಬಂಧಿಕರು ಬಂದು ಮೃತಶಿಶುವನ್ನು ಕೊಡಬೇಕೆಂದು ಕೋರಿರುವುದರಿಂದ, ಪಕ್ಕಕ್ಕೆ ಇಟ್ಟಿರುವ ಶಿಶುವಿರುವ ಕವರ್‌ನ್ನು ಅವರಿಗೆ ಸೇರಿಸಿದರು. ಇದರಿಂದ ಅವರು ಆಸ್ಪತ್ರೆ ಆವರಣದಲ್ಲಿರುವ ಸಂದರ್ಶಕರ ಕೊಠಡಿ ಹತ್ತಿರಕ್ಕೆ ಹೋಗಿ, ಒಂದುಸಲ ಯಾರ ಹೋಲಿಕೆಯೋ ಮುಖ ನೋಡೋಣವೆಂದು ಕವರ್‌ನಲ್ಲಿರುವ ಶಿಶುವನ್ನು ಹೊರಗೆ ತೆಗೆದರು. ಅಷ್ಟೇ ಶಿಶುವು ಉಸಿರು ಎಳೆದುಕೊಳ್ಳುತ್ತಾ ಕಾಲು ಕೈಗಳು ಆಡಿಸುತ್ತಿರುವುದು ಕಾಣಿಸಿದೆ. ಕೂಡಲೇ ಡ್ಯೂಟಿಯಲ್ಲಿರುವ ಡಾಕ್ಟರ್ ರಾಜೇಶ್ವರಿಯವರ ಬಳಿಗೆ ತೆಗೆದುಕೊಂಡು ಹೋದರು, ಶಿಶುವು ಉಸಿರಿನಿಂದ ಇದ್ದಾನೆಂದು ತಕ್ಷಣ ನೀಲೋಫರ್ ಆಸ್ಪತ್ರೆಗೆ ತೆರಳಿಸಬೇಕೆಂದು ಸೂಚಿಸಿದ್ದಾರೆ. ಪ್ರಾಣದಿಂದಿರುವ ಶಿಶುವು ಮರಣಿಸಿದ್ದಾನೆಂದು ಹೇಳಿ ತಮ್ಮ ನಿರ್ಲಕ್ಷ್ಯವನ್ನು ತೋರಿಸಿಕೊಂಡ ವೈದ್ಯರು, 12 ಗಂಟೆಗಳ ನಂತರ ಶಿಶುವು ಪ್ರಾಣದಿಂದ ಇದ್ದಾನೆಂಬ ವಿಷಯ ತಿಳಿದರು ತಮಗೆ ತಕ್ಕ ವಿಧದಲ್ಲಿ ಸ್ಪಂದಿಸಲಿಲ್ಲ. ಪ್ರಸ್ತುತ ಆ ಶಿಶುವು ನೀಲೋಫರ್ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾನೆ. ಸಂಚಲನ ಸೃಷ್ಟಿಸಿದ ಈ ಸಂಘಟನೆ ಸರ್ಕಾರಿ ಆಸ್ಪತ್ರೆಗಳ ವೈಖರಿಯನ್ನು ಮತ್ತೊಂದು ಸಲ ತೆರೆಯ ಮೇಲೆ ತಂದಿದೆ.

**ಹೀಗೆ ಎಷ್ಟೋ ನಿದರ್ಶನಗಳನ್ನು ಜನನ ಸಿದ್ಧಾಂತಕ್ಕೆ ಅನುಕೂಲವಾಗಿ ನೀವು ನೋಡಬಹುದು.**

**ಈ ವಿಷಯದಲ್ಲಿ ನಾನು ನಿಮಗೆ ಕೆಲವು ಪ್ರಶ್ನೆಗಳು ಕೊಡುತ್ತಿದ್ದೇನೆ. ಇವುಗಳಿಗೆ ನೀವು ಉತ್ತರ ಹೇಳುತ್ತೀರೇನೋ ನೋಡಿರಿ.**

1. ಹಿಂದಿನ ಜನ್ಮದ ಜ್ಞಾಪಕಬಂದು ಹೇಳಿದವರನ್ನಾದರೂ ನಾವು ಭೂಮಿ ಮೇಲೆ ನೋಡಬಹುದು. ಆದರೆ ಗರ್ಭಸ್ಥ ಸ್ಥಿತಿಯನ್ನು ಕುರಿತು ಹೇಳಿದವರಿದ್ದಾರಾ? ಅಸಲಿಗೆ ನಿಮಗೆ ಆ ಜ್ಞಾಪಕ ಇದೆಯಾ?

2. ಜ್ಯೋತಿಷ್ಯ ಶಾಸ್ತ್ರರೀತಿ ತಾಯಿ ಗರ್ಭದಿಂದ ಹೊರಬಿದ್ದ ನಂತರವೇ ಲೆಕ್ಕಮಾಡಿ ದಶಾ ಶೇಷವನ್ನು ತಿಳಿಸುತ್ತಿದ್ದಾರೆ. ದಶಗಳು ತಾಯಿ ಗರ್ಭದಲ್ಲಿ ಸೇರಿದಾಗಿನಿಂದ ಏಕೆ ಲೆಕ್ಕಿಸುವುದಿಲ್ಲ? ದಶಾ ಭುಕ್ತಿಯನ್ನು ಗತಜನ್ಮ ಭುಕ್ತಿ ಎಂದು ಬರೆಯುತ್ತಿದ್ದಾರೆ ಏಕೆ?

(ಗರ್ಭಭುಕ್ತಿ ಎಂದು ಕೆಲವರನ್ನುತ್ತಾರೆ. ಗರ್ಭದಲ್ಲಿ ವರ್ಷಗಳ ಪರ್ಯಂತ ಇರುವುದಿಲ್ಲ ಆದ್ದರಿಂದ ಗರ್ಭಭುಕ್ತಿ ಎನ್ನಬಾರದು ಗತ ಜನ್ಮ ಭುಕ್ತಿ ಎನ್ನಬೇಕು,)

3. ತಾಯಿ ಗರ್ಭದಿಂದ ಹೊರಬಿದ್ದ ಶಿಶುವಿಗೆ ಕೆಲವು ನಿಮಿಷಗಳು, ಕೆಲವು ಗಂಟೆಗಳ ಕಾಲ ಶ್ವಾಸ, ರಕ್ತಪ್ರಸರಣೆ, ಕದಲಿಕೆ, ಚೈತನ್ಯ ಏಕೆ ಇಲ್ಲ.?

4. ದಾದಿಯರು ಕೆಲವರು ಮಾವಿಯಲ್ಲಿ ಪ್ರಾಣವಿದೆ, ಶಿಶುವಿನೊಳಗೆ ಬರಬೇಕೆಂದು ಎನ್ನುತ್ತಿರುತ್ತಾರೆ. ಅಸಲಿಗೆ ಗರ್ಭದಲ್ಲಿ ಪ್ರಾಣಬಂದಿರುವುದು ಮಾವಿಗಾ, ಶಿಶುವಿಗಾ?

5. ಕೆಲವು ಆಸ್ಪತ್ರೆಗಳಲ್ಲಿ ಪ್ರಸವಿಸಲ್ಪಟ್ಟ ಶಿಶುಗಳು ಸತ್ತುಹೋಗಿದ್ದಾರೆಂದು ಡಾಕ್ಟರ್‌ಗಳು ನಿರ್ಧಾರ ಮಾಡಿದ ಸ್ವಲ್ಪ ಸಮಯಕ್ಕೆ ಹೇಗೆ ಪ್ರಾಣ ಪಡೆಯುತ್ತಿವೆ?

6. ಗರ್ಭಸ್ಥ ಶಿಶುವಿಗೆ ಪ್ರಾಣ ಇಲ್ಲದೇ ಬೆಳೆಯುವುದಿಲ್ಲವೆಂದು, ಶಿಶುವು ತಾಯಿ ಶರೀರದಲ್ಲಿ ಮರಣಿಸಿದರೆ ತಾಯಿಗೆ ಅಪಾಯ ಎನ್ನುತ್ತಾರೆ. ಗರ್ಭ ನಿಂತಾಗಲಿಂದ ಪ್ರಾಣ ಬಾರದ ಆರು ತಿಂಗಳಕಾಲ ಹೇಗೆ ಬೆಳೆಯಲ್ಪಟ್ಟಿದೆ. ಆ ಆರು ತಿಂಗಳ ಕಾಲದಲ್ಲಿ ಶಿಶುವಿಗೆ ಪ್ರಾಣ ಇಲ್ಲದಂತಾದರೆ ತಾಯಿಗೆ ಏಕೆ ಅಪಾಯ ನಡೆಯಲಿಲ್ಲ?

7. ಯೋಗಶಾಸ್ತ್ರವಾದ ಗೀತೆಯಲ್ಲಿ ಜೀವಾತ್ಮ ಶರೀರ ಹೊಂದಿದಾಗಿನಿಂದ ಬಾಲ್ಯ, ಯೌವ್ವನ, ಕೌಮಾರ್ಯ, ವೃದ್ಧಾಪ್ಯ ಮತ್ತು ಮರಣಾವಸ್ಥೆಗಳು ಎಂದಿದ್ದಾರಾಗಲಿ ಗರ್ಭಾವಸ್ಥೆ ಎಂದು ಹೇಳಲಿಲ್ಲ ಏಕೆ?

8. ಗೀತೆಯಲ್ಲಿ ಹಳೆ ಶರೀರವನ್ನು ಬಿಟ್ಟು ಹೊಸ ಶರೀರವನ್ನು ಜೀವಾತ್ಮ ಧರಿಸುತ್ತಿದ್ದಾನೆ ಎಂದಿದ್ದಾನೆ. ಹೊಸದೆಂದರೆ ಪೂರ್ತಿ ತಯಾರಾಗಿರುವುದಾ? ಅಥವಾ ಆರು ತಿಂಗಳಿಗೆ ಅಸಂಪೂರ್ಣವಾಗಿರುವುದಾ?

9. ಭಗ(ಯೋನಿ)ದಿಂದ ಪ್ರಾಣದಿಂದ ಹುಟ್ಟಿದಾಗ ಎಲ್ಲರೂ ಭಗವಂತರೇ ಆಗುತ್ತಾರಲ್ಲವೆ! ಹಾಗೆ ಎಲ್ಲರೂ ಭಗವಂತರಾಗಿ ಏಕಿಲ್ಲ?

ಇಲ್ಲಿ ನಾವು ಸ್ವಲ್ಪ ಹೇಳುವ ಉತ್ತರ ಏನೆಂದರೆ ನಮ್ಮ ಶರೀರದ ಪಂಚಭೂತ ಗಳಲ್ಲೊಂದಾದ ವಾಯು (ಗಾಳಿ) ಇದೆ. ಅದು ಐದು ಭಾಗಗಳಾಗಿದೆ. ವಾಯುವನ್ನು ಪ್ರಾಣ ಎನ್ನಬಹುದು. ಆದ್ದರಿಂದಲೇ ಪಂಚವಾಯುಗಳನ್ನು ಪಂಚಪ್ರಾಣಗಳೆಂದಿದ್ದಾರೆ. ನಮ್ಮ ಮೂಗಿನ ರಂದ್ರದಲ್ಲಿ ಗಾಳಿ ಇದ್ದಾಗಲೇ ಪ್ರಾಣ ಇದೆಯೆಂದು, ಗಾಳಿ ಇಲ್ಲದಿರುವಾಗ

ಪ್ರಾಣವಿಲ್ಲವೆಂದು ಹೇಳುವುದೂ ಸಹ ಅಭ್ಯಾಸವಾಗಿದೆ. ಶರೀರದಲ್ಲಿ ಪ್ರಾಣ ಇದ್ದಾಗಲೇ ಜೀವಾತ್ಮನೂ ಸಹ ಇರುತ್ತಾನೆ. ಪ್ರಾಣ ಇಲ್ಲದಿರುವಾಗ ಜೀವಾತ್ಮ ಇರುವುದಿಲ್ಲ, ಮೂಗಿನ ರಂಧ್ರಗಳಲ್ಲಿ ಶ್ವಾಸ ಆಡದವರೆಗೂ ಶಿಶುವಿಗೆ ಪ್ರಾಣ ಇಲ್ಲವೆಂದು ಗ್ರಹಿಸಬೇಕು. ತಾಯಿ ಗರ್ಭದಲ್ಲಿ ಮಾವಿ ಎಂಬ ಚೀಲದಲ್ಲಿ ಭ್ರೂಣದಲ್ಲಿರುವ ನೀರು ಎನ್ನುವ ದ್ರವದಲ್ಲಿ ಶಿಶುವು ಮುಳುಗಿರುತ್ತದೆ. ಆದ್ದರಿಂದ ಶ್ವಾಸ ಆಡುವುದಕ್ಕೆ ಅವಕಾಶವೇ ಇಲ್ಲ. ಜೀವಾತ್ಮ ಅಸಲಿಗೆ ಇಲ್ಲ. ಜನನವನ್ನು ಕುರಿತು ನಾವು ಕೇಳಿದ ಪ್ರಶ್ನೆಗಳಿಗೆ ಉತ್ತರಗಳು ನೀವು ಹುಡುಕಿರಿ. ಸತ್ಯಾ ಸತ್ಯಗಳು ನಿಮಗೆ ಅರ್ಥವಾಗುತ್ತದೆ.

**(1) ಶ್ಲೋ॥ 23 : ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ।**
**ನ ಚೈನಂ ಕ್ಲೇದಯಂ ತ್ಯಾಪೋ ನ ಶೋಷಯತಿ ಮಾರುತಃ॥**
**(ಜೀವಾತ್ಮ)**

**ಭಾವಾರ್ಥ :** ಜೀವಾತ್ಮ ಕತ್ತಿಗೆ ಖಂಡಿಸಲ್ಪಡುವುದಿಲ್ಲ, ಅಗ್ನಿಗೆ ಸುಡುವುದಿಲ್ಲ, ನೀರಿಗೆ ತೋಯುವುದಿಲ್ಲ, ಹಾಗೆ ಗಾಳಿಗೆ ತಳ್ಳಲ್ಪಡುವುದಿಲ್ಲ.

**ವಿವರ :** ಮೂರು ಆತ್ಮಗಳಲ್ಲಿ ಮೊದಲನೆಯದಾದ ಜೀವಾತ್ಮಕ್ಕೆ ಹೇಳಲಾದ ಈ ಶ್ಲೋಕದಲ್ಲಿ ಅಗ್ನಿಗೂ, ಗಾಳಿಗೂ, ನೀರಿಗೂ, ಹಾಗೆ ಕತ್ತಿಗೆ ಸಿಗದಿರುವುದು ಜೀವಾತ್ಮ ಎಂದಿದ್ದಾರೆ. ಜೀವಾತ್ಮ ಶರೀರದೊಳಗೆ ಎಲ್ಲೋ ಮಾರುಮೂಲೆಯಲ್ಲಿದೆ. ಆದ್ದರಿಂದ ಹೊರಗೆ ಪ್ರಕೃತಿಯಲ್ಲಿನ  ಭಾಗಗಳಾದ ಅಗ್ನಿ, ನೀರು, ಗಾಳಿ, ಭೂಮಿ ಜೀವಾತ್ಮವನ್ನು ಏನು ಮಾಡಲಾರವು. ಆಯುಧಗಳಿದಂಲೂ ಸಹ ಕತ್ತರಿಸುವುದಕ್ಕೆ ಸಾಧ್ಯವಿಲ್ಲ. ಆಯುಧಗಳಾಗಲಿ, ಅಗ್ನಿ, ನೀರು, ಗಾಳಿ, ಭೂಮಿಯಾಗಲಿ ಹೊರಗಿನ ಶರೀರವನ್ನೇ ತಾಕುತ್ತದೆ. ಹೊರಗಿನ ಶರೀರವನ್ನೇ ಅಗ್ನಿ ಸುಡುತ್ತದೆ, ಕತ್ತಿನಿಂದ ಇರಿಯಬಹುದು. ಆದರೆ ಒಳಗಿರುವ ಜೀವಾತ್ಮವನ್ನು ತಾಕುವುದಿಲ್ಲ. ಶತ್ರುದುರ್ಭೇದ್ಯವಾದ ಕೋಟೆಯಲ್ಲಿ ರಾಜನಿದ್ದಂತೆ ಜೀವಾತ್ಮ ಇದ್ದಾನೆ. ಎಷ್ಟು ಜನ ಶತ್ರುಗಳು ಬಂದರೂ ಕೋಟೆ ಹೊರಗಿನಿಂದ ತಮ್ಮ ಸೈನಿಕರೊಂದಿಗೆ ಯುದ್ಧ ಮಾಡಬೇಕಾಗಿದ್ದೆ. ಒಂದು ವೇಳೆ ಕೋಟೆಯಲ್ಲಿನ ಸೈನಿಕರು ಸೋಲಿನ ಪಾಲಾಗಿ, ಕೋಟೆ ಗೋಡೆಗಳು ಬಿದ್ದುಹೋಗಿ, ಶತ್ರುಗಳು ಕೋಟೆಯೊಳಗೆ ಪ್ರವೇಶಿಸುವ ಅವಕಾಶ ಬಂದರೆ, ಕೋಟೆಯಲ್ಲಿನ ರಾಜ ರಹಸ್ಯಮಾರ್ಗದ ಮೂಲಕ ಹೊರಗೆ ಹೋಗುತ್ತಾನೆ. ಶತ್ರುಗಳಿಗೆ ಸಿಗುವುದಿಲ್ಲ. ಪ್ರತಿ ಕೋಟೆಗೂ ರಹಸ್ಯ ದ್ವಾರಗಳಿದ್ದು ಅಪಾಯಕಾಲದಲ್ಲಿ

ರಾಜ ಓಡಿಹೋಗುವುದಕ್ಕೆ ಸಾಧ್ಯವಾಗುವಂತೆ ಮಾಡಿರುತ್ತಾರೆ. ಹಾಗೆ ಜೀವಾತ್ಮನೂ ಸಹ ಕೋಟೆಯಲ್ಲಿನ ರಾಜನಂತೆ ಇದ್ದು ಶರೀರಕ್ಕೆ ಅಪಾಯಕಾಲದಲ್ಲಿ ಹೇಗೆ ಹೋಗುತ್ತಿರುವುದು ಯಾರಿಗೂ ತಿಳಿದಿಲ್ಲ, ಕಣ್ಣಿಗೆ ಕಾಣಿಸದಂತೆ ಶರೀರದಿಂದ ಹೊರಗೆ ಹೋಗುತ್ತದೆ. ಇದರಿಂದ ಕೋಟೆಯಲ್ಲಿನ ರಾಜನನ್ನು ಯಾರು ಹೇಗೆ ಸಾಯಿಸುವುದಿಲ್ಲವೋ, ಶರೀರದಲ್ಲಿನ ಜೀವಾತ್ಮವನ್ನೂ ಸಹ ಯಾರೂ ಸಾಯಿಸಲಾರರು ಎಂದು ತಿಳಿಯುತ್ತಿದೆ. ಈ ವಿಧವಾಗಿಯೇ ಯೋಚಿಸಿದರೆ ಹೊರಗಿನ ಪ್ರಪಂಚದಲ್ಲಿನ ಅಗ್ನಿ, ನೀರು, ಗಾಳಿ, ಜೀವಾತ್ಮನನ್ನು ತಾಕುವುದಿಲ್ಲವೆಂದು ಅವು ಮುಟ್ಟುವುದಕ್ಕೆ ಸಾಧ್ಯವಿರುವುದು ಶರೀರ ಮಾತ್ರವೆಂದು ತಿಳಿಯುತ್ತಿದೆ.

**(1) ಶ್ಲೋ॥ 24 :ಅಚ್ಛೇದ್ಯೋಽ ಯಮದಾಹ್ಯೋ ಯಮಕ್ಲೇದ್ಯೋ ಶೋಷ್ಯ ಏವಚ।**
**ನಿತ್ಯಃ ಸರ್ವಗತಃ ಸ್ಥಾಣು ರಚಲೋಽ ಯಂ ಸನಾತನಃ ॥**
**(ಪರಮಾತ್ಮ)**

**ಭಾವಾರ್ಥ**: ನಿತ್ಯ ಇರುವವನು, ಸರ್ವಜಗತ್ತೆಲ್ಲವೂ ವ್ಯಾಪಿಸಿರುವವನು, ನಿಶ್ಚಲವಾಗಿರುವವನು, ಚಲನೆ ಇಲ್ಲದವನಾದ ಸನಾತನನಾದ ಪರಮಾತ್ಮ ಛೇದಿಸಲ್ಪಡುವುದಿಲ್ಲ, ಸುಡುವುದಿಲ್ಲ, ತೋಯುವುದಿಲ್ಲ, ತಳ್ಳಲ್ಪಡುವುದಿಲ್ಲ.

**ವಿವರ :** ಕೆಲವರು ಇಲ್ಲೊಂದು ಪ್ರಶ್ನೆಯನ್ನು ಜಾಣ್ಮೆಯಿಂದ ನನ್ನನ್ನು ಕೇಳಬಹುದು. ಏನ್ನಯ್ಯಾ! ಮೇಲಿನ ಶ್ಲೋಕದಲ್ಲಿ ಹೇಳಿದ ವಿಷಯವನ್ನೇ ಕೆಳಗೆ ಹೇಳಲಾಗಿದೆಯಲ್ಲ! ಅದೇನೋ ಜೀವಾತ್ಮಕ್ಕೆ ಎಂದು ಹೇಳಿದ್ದೀಯಾ. ಇದೇನೋ ಪರಮಾತ್ಮನಿಗೆ ಎಂದು ಹೇಳಿದ್ದೀಯ. ಒಂದೇ ವಿಷಯ ಇಲ್ಲಿ ಪರಮಾತ್ಮನಿಗಾಗಿರುವುದು ಅಲ್ಲಿ ಜೀವಾತ್ಮನಿಗೆ ಏಕಾಗಿದೆ? ಎಂದು ಕೇಳಬಹುದು. ಇದಕ್ಕೆ ನಮ್ಮ ಸಮಾಧಾನ ಏನೆಂದರೆ? ಮೇಲಿನ ಶ್ಲೋಕದಲ್ಲಿ ಹೇಳಿದ ವಿಷಯವೇ ಕೆಳಗಿನ ಶ್ಲೋಕದಲ್ಲಿ ಹೇಳಬೇಕಾದ ಅವಶ್ಯಕತೆ ಇಲ್ಲ ಅಲ್ಲವೆ! ಮೇಲೆ ಹೇಳಿರುವುದೇ ಕೆಳಗೆ ಹೇಳುವುದರಲ್ಲಿ ಕೆಳಗಿನ ಶ್ಲೋಕಕ್ಕೆ ಪ್ರತ್ಯೇಕತೆ ಇದೆಯೆಂದು ತಿಳಿಯುತ್ತಿದೆ. **ಮೇಲೆ ಹೇಳಿದಾಗ ಆಯುಧಗಳಿಂದ ಛೇದಿಸಲ್ಪಡುವುದಿಲ್ಲ ಎಂದು ಹೇಳಿ, ಕೆಳಗೆ ಛೇದಿಸಲ್ಪಡುವುದು ಅಲ್ಲ ಎಂದಿದ್ದಾರೆ**. ಮೇಲಿನ ವಿಷಯ ಕೆಳಗಿನ ವಿಷಯ ಒಂದೇ ಆದರೂ ಎರಡನೇ ಬಾರಿ ಹೇಳುವುದರಲ್ಲಿ ಆಂತರಾರ್ಥವು ಬೇರೆಯೆಂದು ಯೋಚನೆಗೆ ಬಾರದೆ ಇರುವುದಿಲ್ಲ. ಆ ಯೋಚನೆಯಿಂದ ಮೇಲಿನ ಶ್ಲೋಕವನ್ನು,

ಕೆಳಗಿನ ಶ್ಲೋಕವನ್ನು ಪರಿಶೀಲಿಸಿ ನೋಡಿದರು ಮೇಲಿನ ಶ್ಲೋಕದಲ್ಲಿ ಆಯುಧಗಳಿಂದ ಕತ್ತರಿಸುವುದಿಲ್ಲ, ಅಗ್ನಿಗೆ ಸುಡುವುದಿಲ್ಲ, ನೀರಿನಿಂದ ತೋಯುವುದಿಲ್ಲ, ಗಾಳಿಗೆ ತಳ್ಳಲ್ಪಡುವುದಿಲ್ಲ ಎಂದು ಮಾತ್ರವೇ ಹೇಳಿದ್ದಾರೆ ಕೆಳಗಿನ ಶ್ಲೋಕದಲ್ಲಿ ಈ ಆತ್ಮ ಕತ್ತರಿಸುವುದಿಲ್ಲ, ಸುಡುವುದಿಲ್ಲ, ತೋಯುವುದಿಲ್ಲ, ತಳ್ಳಲ್ಪಡುವುದಿಲ್ಲ ಎಂದು ಹೇಳಿ ವಿಶೇಷವಾಗಿ ಈ ಆತ್ಮ ನಿತ್ಯವೂ, ಸರ್ವವು ವ್ಯಾಪಿಸಿರುವವನು, ಚಲನೆ ಇಲ್ಲದವನು, ಸನಾತನನು ಎಂದೂ ಸಹ ಹೇಳಿದ್ದಾರೆ. ಸರ್ವವ್ಯಾಪಿ, ಸನಾತನನು ಪರಮಾತ್ಮನೇ ಆದ್ದರಿಂದ ಈ ಕೆಳಗಿನ ಶ್ಲೋಕ ಪರಮಾತ್ಮನಿಗೆ ಹೇಳಿದ್ದಾರೆಂದು ತಿಳಿಯುತ್ತಿದೆ. ಮೇಲಿನ ಶ್ಲೋಕ ಜೀವಾತ್ಮಕ್ಕಿರುವ ವಿಧಾನ ಮಾತ್ರವೇ ಹೇಳಿದ್ದಾರೆ. ಆದ್ದರಿಂದ ಅದು ಜೀವಾತ್ಮನಿಗೆ ಮಾತ್ರವೇ ಎಂದು ತಿಳಿಯುತ್ತಿದೆ.

ಹೇಳಿದ ವಿಷಯ ಜೀವಾತ್ಮನಿಗೂ ಪರಮಾತ್ಮನಿಗೂ ಎರಡಕ್ಕೂ ಅನ್ವಯಿಸುವುದು. ಎರಡು ಆತ್ಮಗಳಿಗೂ ಅನ್ವಯಿಸುವ ವಿಷಯ ಎರಡು ಶ್ಲೋಕಗಳಲ್ಲಿ ಹೇಳಿರುವಾಗ ಯಾವ ಶ್ಲೋಕ ಯಾರಿಗೆಂಬ ಅನುಮಾನ ಬಾರದೇ ಇರುವುದಿಲ್ಲ. ಇಲ್ಲಿ ಕೆಳಗಿನ ಶ್ಲೋಕ ಪ್ರತ್ಯೇಕಿಸಿ ಪರಮಾತ್ಮನಿಗೆ ಹೇಳುವುದರಿಂದ ಮೇಲಿನ ಶ್ಲೋಕ ಜೀವಿಗೆ ಎಂದು ಸುಲಭವಾಗಿ ತಿಳಿದುಹೋಗುತ್ತದೆ. ಈ ಸಾರಾಂಶವನ್ನನುಸರಿಸಿ ಜೀವಾತ್ಮ ಪರಮಾತ್ಮಗಳೆರಡು ಹೊರಗಿನ ಪ್ರಕೃತಿಗಾಗಲಿ, ಆಯುಧಗಳಿಗಾಗಲಿ ಸಿಗುವವಲ್ಲ. ಸಿಗುವುದು ಮಧ್ಯದಲ್ಲಿರುವ ಆತ್ಮ ಮಾತ್ರವೇ ಎಂದು ತಿಳಿಯುತ್ತಿದೆ.

**(1) ಶ್ಲೋ॥ 25 : ಅವ್ಯಕ್ತೋಽಯ ಮಚಿನ್ತ್ಯೋಽಯ ಮವಿಕಾರ್ಯೋಽಯ ಮುಚ್ಯತೇ।**
**ತಸ್ಮಾದೇವಂ ವಿದಿತ್ವೈನಂ ನಾನುಶೋಚಿತು ಮರ್ಹಸಿ ॥**

**(ಆತ್ಮ)**

**ಭಾವಾರ್ಥ :** ಆತ್ಮವನ್ನು ತಿಳಿಸುವುದಕ್ಕೆ, ಚಿಂತಿಸಿ ತಿಳಿದುಕೊಳ್ಳುವುದಕ್ಕೆ ಸಾಧ್ಯವಾಗುವುದಿಲ್ಲ. ಆತ್ಮವನ್ನು ಯಾವ ವಿಕಾರಗಳು ಅಂಟುವುದಿಲ್ಲ, ಆದ್ದರಿಂದ ಅದಕ್ಕೋಸ್ಕರ ದುಃಖಿಸಬಾರದು.

**ವಿವರ :–** ನಮ್ಮ ಶರೀರದಲ್ಲಿ ನಮ್ಮೊಂದಿಗೆ ನಿವಾಸಿಸುತ್ತಿರುವ ಆತ್ಮವನ್ನು ಯಾರಾದರೂ ತಿಳಿದುಕೊಂಡರೂ ಅದನ್ನು ಹೊರಗೆ ಹೇಳಲಾರರು. ಅದನ್ನು ವ್ಯಕ್ತಪಡಿಸಿ ಹೇಳುವುದಕ್ಕೆ ಮಾತ್ರ ಕೈಲಾಗುವುದಿಲ್ಲ. ಏಕೆಂದರೆ! ಹೀಗಿರುತ್ತದೆಂದು ಅದಕ್ಕೆ ಹೋಲಿಸಿ ಹೇಳುವುದಕ್ಕೆ

ಪ್ರಪಂಚದಲ್ಲಿ ಆತ್ಮವನ್ನು ಹೋಲಿರುವುದು ಯಾವುದು ಇಲ್ಲ. ಆದ್ದರಿಂದ ತನ್ನಲ್ಲಿರುವ ಆತ್ಮವನ್ನು ತಿಳಿದುಕೊಂಡವರು, ಅದರ ಅನುಭೂತಿಯನ್ನು ಹೊರಗೆ ಹೇಳಲಾರದೇ ಹೋಗುತ್ತಿದ್ದಾರೆ. ಮನಸ್ಸಿನಿಂದ ಯೋಚಿಸಿ ತಿಳಿದುಕೊಳ್ಳುವುದಕ್ಕೂ ಸಹ ಸಾಧ್ಯವಾಗುವುದಿಲ್ಲ. ಏಕೆಂದರೆ! ಮನಸ್ಸಿಗೆ ಯೋಚನೆ ಬರುತ್ತಿರುವವರೆಗೂ ಆತ್ಮ ತಿಳಿಯುವುದಿಲ್ಲ. ಮನೋ ಯೋಚನೆಗಳು ಸ್ಥಂಭಿಸಿದಾಗಲೇ ಆತ್ಮ ತಿಳಿಯುತ್ತದೆ. ಆದ್ದರಿಂದ 'ಮಚಿಂತೊಯ' ಎಂದು ಚಿಂತೆಗಳಿಗೆ ಸಿಗದವನೆಂದು ತಿಳಿಸಿದ್ದಾರೆ. ಒಂದು ವೇಳೆ ಮನಸ್ಸು ಪ್ರಪಂಚ ವಿಷಯಗಳನ್ನು ಯೋಚಿಸಿದರೆ ಆತ್ಮ ತಿಳಿಯದೆ ಹೋಗಬಹುದು. ಹಾಗಲ್ಲದೆ ಮನೋಚಿಂತನೆ ಆತ್ಮದ ಮೇಲೆ ಇಟ್ಟುಕೊಂಡರೆ ಆತ್ಮ ಏಕೆ ತಿಳಿಯುವುದಿಲ್ಲವೆಂದು ಕೆಲವರು ಕೇಳಬಹುದು. ಅವರ ಮಾತಿನ ಪ್ರಕಾರ ನಮ್ಮ ಮನಸ್ಸು ಪ್ರಪಂಚ ವಿಷಯಗಳ ಮೇಲೆ ಇಲ್ಲದಂತೆ ಮಾಡಿಕೊಂಡು ಆತ್ಮದ ಮೇಲೆ ಇಟ್ಟರೆ ಆತ್ಮ ತಿಳಿಯುತ್ತದೆ. ಆದರೆ ನಮ್ಮ ಮನಸ್ಸು ಅದರ ಮೇಲೆ ಇಡುವುದಕ್ಕೆ ಆತ್ಮ ಇಂತಹದೆಂದು ಮೊದಲೆ ತಿಳಿದಿರಬೇಕಲ್ಲವೆ! ಆತ್ಮ ತಿಳಿಯದಿರುವಾಗಲೇ ಅಲ್ಲವೆ ಅದನ್ನು ತಿಳಿದುಕೊಳ್ಳಬೇಕೆಂದು ಪ್ರಯತ್ನಿಸುವುದು. ಆದ್ದರಿಂದ ತಿಳಿಯದವನು ಮನೋಚಿಂತನೆಯಿಂದ ತಿಳಿಯಲಾರನು. ಚಿಂತನೆಯಿಂದ ತಿಳಿಯುವುದು ಪ್ರಪಂಚವೇ ಹೊರತು ಆತ್ಮವಲ್ಲ. ಅಷ್ಟೇ ಅಲ್ಲದೆ ಆತ್ಮವನ್ನು ಯಾವ ವಿಕಾರಗಳು ಅಂಟುವುದಿಲ್ಲ. ಗುಣಗಳಿಂದ ಉಂಟಾಗುವ ಭಾವನೆಗಳನ್ನು ವಿಕಾರಗಳೆನ್ನುತ್ತಾರೆ. ಗುಣಗಳಿಂದಲೇ ಉಂಟಾಗುವ ಒಳ್ಳೆಯ ಕೆಟ್ಟ ಭಾವನೆಗಳು ಅನುಭೂತಿಗಳು ಆತ್ಮಕ್ಕೆ ಅಂಟುವುದಿಲ್ಲ. ಅಂತಹ ಆತ್ಮಕ್ಕೆ ಏನಾದರೂ ಬಾಧೆ ಉಂಟಾಗುತ್ತದೇನೋ ಎಂದು, ಅದನ್ನು ಕುರಿತು ನೀನಾಗಲಿ, ಯಾರಾಗಲಿ, ದುಃಖ ಪಡಬೇಕಾಗಿರುವುದಿಲ್ಲ.

ಒಂದು ವೇಳೆ ನಾನು ಆತ್ಮವನ್ನು ಕುರಿತು ದುಃಖ ಪಡುತ್ತಿಲ್ಲ. ಜೀವಾತ್ಮನನ್ನು ಕುರಿತು ದುಃಖಪಡುತ್ತಿದ್ದೇನೆಂದುಕೊಂಡರು ಆ ಜೀವಿಯನ್ನು ಕುರಿತು ಭಗವಂತನು ಹೀಗೆ ಹೇಳುತ್ತಿದ್ದಾನೆ.

**(1) ಶ್ಲೋ॥ 26 : ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಂ।**
**ತಥಾಪಿ ತ್ವಂ ಮಹಾಬಾಹೋ! ನೈವಂ ಶೋಚಿತು ಮರ್ಹಸಿ ॥**
**(ಜೀವಾತ್ಮ)**

**ಭಾವಾರ್ಥ :** ಹಾಗಲ್ಲದೆ ಅವನು ನಿತ್ಯವು ಹುಟ್ಟಿ ನಿತ್ಯವು ಸಾಯುತ್ತಾನೆಂದು ತಿಳಿದಿರುವೆ, ಆ ವಿಧದವನಿಗೋಸ್ಕರ ನೀನು ಏಕೆ ದುಃಖಪಡಬೇಕು.

**ವಿವರ :–** ಆತ್ಮಗೋಸ್ಕರ ಅಲ್ಲ ನಾನು ದುಃಖಿಸುವುದು, ಪ್ರತಿ ನಿತ್ಯವು ಹುಟ್ಟುತ್ತಿರುವ ಮತ್ತು ಮರಣಿಸುತ್ತಿರುವ ಜೀವಾತ್ಮಗಳನ್ನು ಕುರಿತು ನಾನು ದುಃಖಿಸುತ್ತಿದ್ದೇನೆಂದುಕೊಂಡರು, ಜೀವಾತ್ಮ ಒಂದು ಕಡೆ ಹುಟ್ಟಿ ಮತ್ತೊಂದು ಕಡೆ ಮರಣಿಸುತ್ತಿದ್ದಾನೆ. ಆ ವಿಧವಾಗಿಯಾದರು ಅವನು ಎಲ್ಲಿಗೂ ಹೋಗದಂತೆ ನಾವು ಇರುತ್ತಿರುವ ಭೂಮಿ ಮೇಲೆಯೇ ಜೀವಿಸುತ್ತಿದ್ದಾನೆ ಅಲ್ಲವೆ! ಅವನು ಇಲ್ಲದಂತೆ ಹೋದರೆ ಅಲ್ಲವೇ ಅವನಿಗೋಸ್ಕರ ಅಳಬೇಕು. ಒಂದುವೇಳೆ ಅವನು ಇಲ್ಲವೆಂದು ಅಲ್ಲ, ನಮ್ಮ ಹತ್ತಿರವಿದ್ದು ಇದಕ್ಕಿದ್ದಂತೆ ಶರೀರ ಬಿಟ್ಟು ಬೇರೆ ಶರೀರ ಧರಿಸಿ ಮತ್ತೊಂದು ಕಡೆ ಧನಿಕನ ಮನೆಯಲ್ಲಿ ಹುಟ್ಟಿದರೂ, ಅವನು ಸುಖವಾಗಿ ಇದ್ದರೂ, ನನ್ನ ಹತ್ತಿರದಿಂದ ಹೋಗಿದ್ದಾನಲ್ಲವೆ! ಇನ್ನು ಅವನ ವಿಷಯ ನನಗೆ ತಿಳಿಯದಲ್ಲವೆ! ಎಂದು ದುಃಖ ಬರುತ್ತಿದೆಯೆಂದರು ಅದನ್ನು ಕುರಿತು ಕೆಳಗಿನ ಶ್ಲೋಕದಲ್ಲಿ ಭಗವಂತನು ಹೀಗೆ ಹೇಳುತ್ತಿದ್ದಾನೆ.

**(1) ಶ್ಲೋ॥ 27 : ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ ।**
**ತಸ್ಮಾದ ಪರಿಹಾರ್ಯೇऽರ್ಥೇ ನ ತ್ವಂ ಶೋಚಿತು ಮರ್ಹಸಿ ॥**
**(ಜೀವಾತ್ಮ)**

**ಭಾವಾರ್ಥ** : ಹುಟ್ಟುವುದು ಎಂದಿಗಾದರೂ ಸಾಯುವುದಕ್ಕೋಸ್ಕರವೆ, ಸಾಯುವುದು ಮತ್ತೆ ಪುನರ್ಜನ್ಮಕ್ಕೆ, ಆದ್ದರಿಂದ ಅನಿವಾರ್ಯವಾದ ಈ ಸಂಗತಿಯನ್ನು ಕುರಿತು ದುಃಖಿಸಬಾರದು.

**ವಿವರ :–** ಒಂದು ಕಡೆ ಜನ್ಮಿಸಿದವನು ಕೆಲವು ದಿನಗಳಿಗೆ ಮರಣಿಸಬೇಕಾಗಿದ್ದೆ, ಹಾಗೆ ಮರಣಿಸಿದವನು ಧನಿಕನ ಮನೆಯಲ್ಲಾಗಲಿ, ಬಡವನ ಮನೆಯಲ್ಲಾಗಲಿ ತಪ್ಪದೇ ಎಲ್ಲೋ ಒಂದು ಕಡೆ ಹುಟ್ಟಬೇಕಾಗಿದೆ. ಹಾಗೆ ಏಕೆ ಒಂದು ಕಡೆ ಸತ್ತು ಮತ್ತೊಂದು ಕಡೆ ಹುಟ್ಟಬೇಕು? ಮೊದಲು ಹುಟ್ಟಿದವನು ಹುಟ್ಟಿದ ಸ್ಥಳದಲ್ಲಿಯೇ ಇದ್ದರೆ ಅವನನ್ನು ಕಳೆದುಕೊಂಡಿದ್ದೇವೆಂಬ ದುಃಖ ನಮಗೆ ಇರುವುದಿಲ್ಲ ಅಲ್ಲವೆ! ಒಬ್ಬ ವ್ಯಕ್ತಿ ಮರಣದಿಂದ ಮತ್ತೊಬ್ಬ ವ್ಯಕ್ತಿ ವಿಯೋಗ ದುಃಖ ಅನುಭವಿಸಬೇಕಾಗಿ ಬರುತ್ತದೆ ಅಲ್ಲವೆ! ಹಾಗೆ ಏಕೆ ಜನ್ಮಗಳ ಬದಲಾವಣೆಯಾಗಬೇಕು, ಎಂದು ಯೋಚಿಸಿದರು ಜನನ ಮರಣ ಪದ್ಧತಿ ಇಲ್ಲದಂತಾದರೆ ಈ ಪ್ರಪಂಚ ನಾಟಕವೇ ಸಾಗದಂತೆ ಸೂತ್ರಧಾರಿ ಯಾರೋ, ಪಾತ್ರಧಾರಿ ಯಾರೋ, ತಿಳಿಯದಂತೆ ಹೋಗುತ್ತದೆ. ದೇವರು ಏರ್ಪಡಿಸಿದ ಕರ್ಮವೆಂಬ ಕಾನೂನನ್ನು ಆಚರಿಸುವುದಕ್ಕೆ ಪ್ರಕೃತಿ ಎಂಬ ವ್ಯವಸ್ಥೆಯನ್ನು ದೇವರು ನಿರ್ಮಿಸಿದ್ದಾನೆ. ಪ್ರಕೃತಿ ಎನ್ನುವ ವ್ಯವಸ್ಥೆಯಲ್ಲಿ ಗುಣಗಳು, ಇಂದ್ರಿಯಗಳು, ಅವುಗಳ ಬದಲಾವಣೆಗಳು ಎಷ್ಟೋ ರೂಪಿಸಿ,

ಕೊನೆಗೆ ಶರೀರ ಮರಣಿಸುವುದು ಪುನಃ ಇನ್ನೊಂದು ಶರೀರವನ್ನು ಹೊಂದುವ ಪದ್ಧತಿಯೂ ಸಹ ರೂಪಿಸಲಾಗಿದೆ. ಆ ಪದ್ಧತಿ ಪ್ರಕಾರ ಎಲ್ಲವೂ ಯಾಂತ್ರಿಕವಾಗಿ ನಡೆಯುತ್ತಿವೆ. ದೇವರು ಮಾನವನಾಗಿ ಬಂದರೂ ಪ್ರಕೃತಿಯನ್ನು ಅನುಸರಿಸಿ ನಡೆಯಬೇಕಾಗಿದ್ದೆ. ಆತನೂ ಸಹ ಆ ಪದ್ಧತಿಯನ್ನು ಅತಿಕ್ರಮಿಸಿ ನಡೆದುಕೊಳ್ಳುವುದಕ್ಕೆ ಸಾಧ್ಯವಿಲ್ಲದಂತೆ ಆತನೇ ಗಟ್ಟಿ ಭದ್ರತೆ ಮಾಡಿ ಇಟ್ಟಿದ್ದಾನೆ. ಆದ್ದರಿಂದ ಜೀವಾತ್ಮಗಳ ಸಾವು ಹುಟ್ಟುಗಳು ಅನಿವಾರ್ಯ ವಾದವು, ಅದನ್ನು ಯಾರು ಅತಿಕ್ರಮಿಸಲಾರರು. ಆದ್ದರಿಂದ ಜೀವಾತ್ಮಗಳ ಸಾವಿನ ಬಗ್ಗೆ ದುಃಖಪಡುವುದು ವ್ಯರ್ಥವಾದ ಕೆಲಸ.

ಹುಟ್ಟಿದ ನಂತರ ಮರಣಿಸದಂತೆ ಇರುವುದು ಅನಿವಾರ್ಯವಾದುದೆಂದು ತಿಳಿದರೂ, ಮರಣಿಸಿದವನನ್ನು ಕುರಿತು ಸ್ವಲ್ಪವಾದರೂ ದುಃಖ ಇರುತ್ತದೆ. ಆ ದುಃಖವೂ ಸಹ ಇಲ್ಲದಂತೆ ಹೋಗಬೇಕೆಂದರೆ ಅವನು ಎಲ್ಲಿ ಹುಟ್ಟಿದ್ದಾನೆಂದು ತಿಳಿದರು, ನಮ್ಮವನು ಇಂತಹ ಕಡೆ ಇದ್ದಾನೆ ಎಂದು ದುಃಖ ಇಲ್ಲದಂತೆ ಹೋಗುತ್ತದಲ್ಲವೆ ಎಂದು ಕೆಲವರು ಕೇಳಬಹುದು. ಹಾಗೆ ತಿಳಿದರೂ ದುಃಖ ಇರುವುದಲ್ಲದೆ, ಇನ್ನೂ ದುಃಖ ಅಧಿಕವಾಗುವುದಕ್ಕೆ ಅವಕಾಶ ಇರುತ್ತದೆ. ಏಕೆಂದರೆ! ಒಬ್ಬ ಧನಿಕನು ಬಂದು ಮತ್ತೊಂದು ಕಡೆ ದರಿದ್ರನ ಮನೆಯಲ್ಲಿ ಹುಟ್ಟಿದ್ದಾನೆಂದುಕೊಳ್ಳೋಣ. ಅದು ತಿಳಿದ ಧನಿಕನ ಕುಟುಂಬಿಕರು ನಮ್ಮವನು ಇನ್ನೊಂದು ಕಡೆ ಹುಟ್ಟಿದ್ದಾನೇಳು ಎಂದು ದುಃಖಪಡದಂತೆ ಇರುವುದಿಲ್ಲ. ಅವನು ದರಿದ್ರನ ಮನೆಯಲ್ಲಿ ಹುಟ್ಟಿದ್ದಾನೆ ಅಲ್ಲವೆ! ಅವನು ಏನು ಸುಖ ಅನುಭವಿಸುತ್ತಾನೆಂದು ಇನ್ನೂ ಹೆಚ್ಚಾಗಿ ದುಃಖಪಡುತ್ತಾರೆ. ಎಲ್ಲಿ ಹುಟ್ಟಿದ್ದಾನೆಂದು ತಿಳಿಯದೆ ಇರುವುದರಿಂದ ಮರಣಿಸಿದ ದಿನ ಮಾರನೇದಿನ ಅತ್ತು ಸುಮ್ಮನಿದ್ದು ಮರೆತುಹೋಗುತ್ತಾರೆ. ಆದರೆ ಅವನು ಎಲ್ಲಿ ಹುಟ್ಟಿರುವುದು ತಿಳಿದರೆ ಅವನನ್ನು ಕುರಿತು ನೀವು ಮರಣಿಸುವವರೆಗೂ ಅಳಬೇಕಾಗಿ ಬರುತ್ತದೆ. ಆದ್ದರಿಂದ ಮತ್ತೆ ಬರುವ ಜನ್ಮ ವಿಷಯ ಯಾರಿಗೂ ತಿಳಿಯದಿರು ವಂತೆ, ಕರ್ಮ ಕಾನೂನನ್ನು ರೂಪಿಸಿ ಪ್ರಕೃತಿಯನ್ನು ಪರಮಾತ್ಮ ನಿರ್ಮಿಸಿದ್ದಾನೆ. ಇದರ ವಿಷಯವಾಗಿ ಕೆಳಗಿನ ಶ್ಲೋಕದಲ್ಲಿ ಹೀಗೆ ಇದೆ.

**(1) ಶ್ಲೋ॥ 28 : ಅವ್ಯಕ್ತಾ ದೀನಿ ಭೂತಾನಿ ವ್ಯಕ್ತ ಮಧ್ಯಾನಿ ಭಾರತ।**
**ಅವ್ಯಕ್ತ ನಿಧನಾನ್ಯೇವ ತತ್ರ ಕಾ ಪರಿದೇವನಾ॥**

**(ಜೀವಾತ್ಮ)**

**ಭಾವಾರ್ಥ :** ಜೀವ ಸಂಭವಗಳೆಲ್ಲಾ ತಿಳಿಯುವುದಿಲ್ಲ. ಹಾಗೆ ಅವನ ಮರಣಗಳೂ ಸಹ

ತಿಳಿಯುವುದಿಲ್ಲ. ಆದರೆ ಹುಟ್ಟು ಸಾವುಗಳ ಮಧ್ಯದಲ್ಲಿರುವ ಜೀವನ ಮಾತ್ರ ತಿಳಿಯುತ್ತದೆ. ಅಂತಹ ಜೀವಿಗೋಸ್ಕರ ನೀನು ಶೋಕಿಸಬಾರದು.

**ವಿವರ :–** ಹುಟ್ಟುತ್ತಿರುವ ಜೀವಾತ್ಮಗಳು ಎಲ್ಲಿಂದ ಬಂದು ಹುಟ್ಟುತ್ತಿವೆಯೋ ಯಾರಿಗೂ ತಿಳಿಯದು. ಹುಟ್ಟಿದ ಜೀವಾತ್ಮ ಸ್ವಲ್ಪಕಾಲ ಶರೀರದಲ್ಲಿ ಇದ್ದು ಸತ್ತುಹೋದಾಗ ಎಲ್ಲಿಗೆ ಹೋಗುತ್ತಿದೆ, ಅದು ಪುನಃ ಎಲ್ಲಿ ಶರೀರ ಧರಿಸುತ್ತಿರುವುದು ತಿಳಿಯುವುದಿಲ್ಲ. ಎಲ್ಲಿಂದ ಬರುತ್ತಿರುವುದು ಎಲ್ಲಿಗೆ ಹೋಗುತ್ತಿರುವುದು ತಿಳಿಯದಿರುವುದರಿಂದ, ಮರಣಿಸಿದ ವ್ಯಕ್ತಿಯ ಜೀವನದಲ್ಲಿರುವ ಸಂಬಂಧಗಳೆಲ್ಲ ಬದುಕಿರುವವರು ಕಳೆದುಕೊಳ್ಳಬೇಕಾಗಿಬರುತ್ತದೆ. ಉದಾಹರಣೆಗೆ ಗಂಡ ಸತ್ತುಹೋದಾಗ ಬದುಕಿರುವ ಹೆಂಡತಿ ಆತನ ಜೀವನ ಸಂಬಂಧಗಳೆಲ್ಲವೂ ಕಳೆದುಕೊಂಡಿರುವುದಾಗಿ, ಆತನ ಜೀವನ ಸಂಬಂಧಕ್ಕೆ ಗುರುತುಗಳಾದ ತಾಳಿ, ಕಾಲುಂಗುರಗಳನ್ನೂ ಸಹ ತೆಗೆದುಹಾಕುತ್ತಾಳೆ. ಅದೇ ತನ್ನ ಗಂಡ ಸತ್ತು ಎಲ್ಲಿಗೆ ಹೋಗಿರುವುದು, ಎಲ್ಲಿರುವುದು ತಿಳಿದರೆ ಮಾತ್ರ ಯಾವ ಹೆಂಡತಿ ತನ್ನ ತಾಳಿಯನ್ನು ತೆಗೆದುಹಾಕುವುದಿಲ್ಲ. ಅಲ್ಲಿ ಇನ್ನೊಬ್ಬರನ್ನು ಮದುವೆ ಮಾಡಿಕೊಳ್ಳುವುದಕ್ಕೆ ಬಿಡುವುದಿಲ್ಲ. ಹುಟ್ಟಿದವನು ಇಂತಹ ಕಡೆಯಿಂದ ಬಂದು ಹುಟ್ಟಿದ್ದಾನೆಂದು ತಿಳಿದರು ತೊಂದರೆ ಇದೆ. ಏಕೆಂದರೆ ಒಬ್ಬ ಕಡಿಮೆ ಕುಲದವನು ಉನ್ನತ ಕುಲದಲ್ಲಿ ಹುಟ್ಟಿದ್ದಾನೆ ಎಂದುಕೊಳ್ಳೋಣ. ಅವನು ಇಂತಹವನೆಂದು, ಎಲ್ಲಿಂದ ಬಂದು ಹುಟ್ಟಿರುವುದು ಪ್ರಸವ ನಡೆದ ಮನೆಯಲ್ಲಿ ತಿಳಿದರೆ ಅವನು ಇಂತಹ ರೌಡಿಯೆಂದೋ, ಅಥವಾ ನೀಚ ಕುಲಸ್ಥನೆಂದೋ, ಅವರು ದುಃಖಪಡುತ್ತಾ ಅವರಿಗೆ ಹುಟ್ಟಿದರೂ, ಅವರ ಸಂತತಿಯಾಗಿ ನೋಡಿಕೊಳ್ಳದೆ ಇರುವುದಕ್ಕೆ ಅವಕಾಶವಿದೆ.

ಒಂದು ವೇಳೆ ಸತ್ತವನಿಗೆ ಜ್ಞಾಪಕವಿದ್ದು, ನಾನು ಇಂತಹ ಕಡೆ ಮರಣಿಸಿ ಇಲ್ಲಿ ಹುಟ್ಟಿದ್ದೇನೆಂದು ತಿಳಿಯುವುದರಿಂದ, ನನಗೆ ಇವರಾ ತಂದೆ ತಾಯಿ ಎಂದು ಅಸಹ್ಯಪಡುವುದಕ್ಕೆ ಅವಕಾಶಗಳೂ ಸಹ ಇವೆ. ಕರ್ಮ ಸಿದ್ಧಾಂತಕ್ಕೆ ಹಾನಿ ಸಂಭವಿಸಿ ಪ್ರಪಂಚ ಮಾನವ ವ್ಯವಸ್ಥೆ ಮುಂದಕ್ಕೆ ಸಾಗುವುದಿಲ್ಲ. ಆದ್ದರಿಂದ ಪ್ರತಿ ಜೀವರಾಶಿಗೂ ಹುಟ್ಟು ಮರಣವೊಂದರ ಹಿಂದಿನ ರಹಸ್ಯವು ತಿಳಿಯದಂತೆ ಇರುವುದಕ್ಕೆ ಪ್ರಕೃತಿಯಿಂದ ತಿದ್ದಲ್ಪಟ್ಟಿದೆ. ಆದ್ದರಿಂದ ಒಂದು ಜನ್ಮ ಜ್ಞಾಪಕ ಆ ಜನ್ಮದೊಂದಿಗೆ ಹೋಗುತ್ತಿರುವುದರಿಂದ, ಹೊರಗಿನವರಿಗಾಗಲಿ ತನಗಾಗಲಿ ಹುಟ್ಟುವುದಕ್ಕಿಂತ ಮುನ್ನ, ಮರಣದ ಹಿಂದೆ, ತಿಳಿಯದ ಸಾವು ಹುಟ್ಟುಗಳ ಮಧ್ಯದಲ್ಲಿರುವ ಜೀವನ ಮಾತ್ರವೇ ತಿಳಿಯುತ್ತಿದೆ. ಮುಂದೆ ಹಿಂದೆ ಸಂಬಂಧವಿಲ್ಲದೆ ಮಧ್ಯೆ ಮಾತ್ರ ತಿಳಿಯುವ ಜೀವನಗಳ ಅನುಭೂತಿಗಳನ್ನು ತಿಳಿದು, ಸಾಟಿ ಜೀವಿಗಳಿಗೋಸ್ಕರ ನೀನು ದುಃಖಿಸಬಾರದು ಎಂದಿದ್ದಾರೆ.

**1) ಶ್ಲೋ॥ 29 : ಆಶ್ಚರ್ಯವತ್ ಪಶ್ಯತಿ ಕಶ್ಚಿದೇನಮ್ಆಶ್ಚರ್ಯವದ್ವದತಿ ತಥೈವಚಾನ್ಯಃ।**
**ಆಶ್ಚರ್ಯ ವಚ್ಚೈನ ಮನ್ಯಃ ಶೃಣೋತಿ ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್ ॥**
**(ಜೀವಾತ್ಮ)**

**ಭಾವಾರ್ಥ :** ಮಧ್ಯೆ ಜೀವನದಲ್ಲಿ ನಡೆಯುವ ಕೆಲಸಗಳನ್ನು ಒಬ್ಬನು ಆಶ್ಚರ್ಯವಾಗಿ ನೋಡುತ್ತಿದ್ದಾನೆ. ಆ ಕೆಲಸಗಳನ್ನು ಇನ್ನೊಬ್ಬನು ಆಶ್ಚರ್ಯದಿಂದ ಕೇಳುತ್ತಿದ್ದಾನೆ. ಮತ್ತೊಬ್ಬನು ವಿಚಿತ್ರವಾಗಿ ಹೇಳಿಕೊಳ್ಳುತ್ತಿದ್ದಾನೆ. ಆದರೆ ಜೀವಾತ್ಮ ನಿಜಸ್ಥಿತಿಯನ್ನು ಕುರಿತು ಯಾರು ತಿಳಿದಿಲ್ಲ.

**ವಿವರ :–** ಹುಟ್ಟುವ ಮುನ್ನ, ಸಾವಿನ ಹಿಂದಿರುವ ವಿಷಯ ತಿಳಿಯದೆ, ಮಧ್ಯ ಜೀವನ ಮಾತ್ರ ತಿಳಿಯುವ ಮಾನವರು ಇನ್ನೊಬ್ಬರ ಜೀವನವನ್ನು ಕುರಿತು ಆಶ್ಚರ್ಯವಾಗಿ ನೋಡುತ್ತಿದ್ದಾರೆ. ಆಶ್ಚರ್ಯವಾಗಿ ಕೇಳುತ್ತಿದ್ದಾರೆ. ಹಾಗೆ ವಿಚಿತ್ರವಾಗಿ ಹೇಳಿಕೊಳ್ಳುತ್ತಿದ್ದಾರೆ. ಆದರೆ ವಿಚಿತ್ರಗಳು ನಿಷ್ಠೂರಗಳಿರುವ ಜೀವನದ ಹಿಂದಿರುವ ಜೀವಿಯನ್ನು ಮಾತ್ರ ಗುರುತಿಸಲಾರದೆ ಹೋಗುತ್ತಿದ್ದಾರೆ. ಗುರುತಿಸಲಾರದ ಜೀವಿಯನ್ನು ಸಾಯಿಸಲಾರರೆಂದು ಕೆಳಗಿನ ಶ್ಲೋಕದಲ್ಲಿ ಹೇಳುತ್ತಿದ್ದಾರೆ ನೋಡಿ.

**<u>ಮುಖ್ಯ ಗಮನಿಕೆ:</u>** ಬರೆಯಲಾದ ಭಗವದ್ಗೀತೆಗಳೆಲ್ಲವುಗಳಲ್ಲಿ ಬಹಳ ಜನ ಹಿರಿಯರು ಇಲ್ಲಿಯವರೆಗೂ ಹೇಳಿರುವ ಎಲ್ಲಾ ಶ್ಲೋಕಗಳಲ್ಲಿಯೂ ಆತ್ಮವನ್ನು ಕುರಿತು ವರ್ಣಿಸಿ ಹೇಳಿದ್ದಾರೆ. ಹಾಗೆಯೇ ಮೇಲಿನ ಶ್ಲೋಕಗಳಲ್ಲಿನ ಭಾವನೆಗಳಿಗೂ ಸಹ ಆತ್ಮವನ್ನು ಕುರಿತು ಹೇಳಿದ್ದಾರೆ. ಇದರಿಂದ ಭಗವದ್ಗೀತೆ ಭಾವವೇ ತಪ್ಪುದಾರಿ ಹಿಡಿದುಹೋಗಿದೆ ಎಂದು ನಾವು ಹೇಳುತ್ತಿದ್ದೇವೆ. ಜೀವಾತ್ಮ ಆತ್ಮಗಳ ವಿವರ ತಿಳಿಯದಿರುವಾಗ ಬೆಳ್ಳಗಿರುವುದೆಲ್ಲ ಅನ್ನ ಮತ್ತು ಸುಣ್ಣ ಎರಡು ಒಂದೇ ಅಲ್ಲವೆ! ಎನ್ನುವಂತೆ ಇರುತ್ತದೆ. ಅಕ್ಕಿ ಬೆಂದರೆ ಅನ್ನ, ಸುಣ್ಣದ ಕಲ್ಲು ಬೆಂದರೆ ಸುಣ್ಣವಾಗಿ ಬದಲಾಗಿ ಬೆಳ್ಳಗಿದ್ದರೂ ಅವುಗಳ ರುಚಿಯಲ್ಲಿ ಎಷ್ಟೋ ವ್ಯತ್ಯಾಸವಿದ್ದಂತೆ, ಆತ್ಮ ಜೀವಾತ್ಮಗಳು ಎರಡು ಶರೀರದಲ್ಲೇ ನಿವಾಸಿಸಿದರೂ ಅವುಗಳ ಬೆಲೆಯು ಬೇರೆ ಬೇರೆಯಾಗಿ ಇವೆ. ದೇಹಿ ಎಂದರೆ ದೇಹದಲ್ಲಿ ನಿವಾಸಿಸುವುದೇ ಎಂದು ಅರ್ಥ. ಆತ್ಮ ಜೀವಾತ್ಮ ಎರಡು ದೇಹದಲ್ಲಿ ವಾಸಿಸುವವೇ, ಆದ ಕಾರಣ ದೇಹಿ ಎಂಬ ಪದವು ಎರಡಕ್ಕೂ ಅನ್ವಯಿಸುತ್ತದೆ. ಆದ್ದರಿಂದ ಆತ್ಮ ಅನುಭವವನ್ನು, ಜೀವಿಯ ಇರುವಿಕೆಯನ್ನು ತಿಳಿದವರಾದರೆ ಮಾತ್ರ ಅವುಗಳನ್ನು ಸಂದರ್ಭಾನುಸಾರವಾಗಿ ಗುರುತಿಸುತ್ತಾರೆ. ವಾಚಾ ವೇದಾಂತ ತಿಳಿದು ವೇಗವಾಗಿ ಮಾತನಾಡಿದ ಮಾತ್ರಕ್ಕೆ ಅನುಭವ

ಬರುವುದಿಲ್ಲ. ಆದ್ದರಿಂದ ಅನುಭವದಲ್ಲಿ ಜೀವಾತ್ಮ ಆತ್ಮಗಳು ಬೇರೆ ಎಂದು ಗ್ರಹಿಸಬೇಕು. ಜೀವಾತ್ಮನಿಗೆ ಹೇಳಿದ ಶ್ಲೋಕವನ್ನು ಆತ್ಮಕ್ಕೆ ಹೇಳಿದಂತೆ ವಿವರವು ಹೇಳುತ್ತಾ, ಒಬ್ಬನು ಆತ್ಮವನ್ನು ಆಶ್ಚರ್ಯವಾಗಿ ನೋಡುತ್ತಿದ್ದಾನೆಂದು ಬಹಳ ಜನರು ಬರೆದಿದ್ದಾರೆ. ಹಾಗೆಯೇ ಕೇಳುತ್ತಿದ್ದಾನೆಂದು, ಹೇಳುತ್ತಿದ್ದಾನೆಂದೂ ಸಹ ಬರೆದಿದ್ದಾರೆ. ಅವರ ಮಾತಿನ ಪ್ರಕಾರ ಹೋದರು ಆತ್ಮ ವಿಷಯಗಳನ್ನು ಬಾಯಿಂದ ಹೇಳಿಕೊಳ್ಳಬಹುದು, ಕಿವಿಗಳಿಂದ ಕೇಳಬಹುದಾಗಲಿ ಕಣ್ಣಿನಿಂದ ನೋಡುವುದಕ್ಕೆ ಸಾಧ್ಯವಾಗುವುದಿಲ್ಲ. ಆತ್ಮ ದೃಶ್ಯ ರೂಪವಲ್ಲ ಅದನ್ನು ಹೇಗೆ ಆಶ್ಚರ್ಯವಾಗಿ ನೋಡಬಹುದೆಂದು ತಿಳಿಸಿದ್ದಾರೆ? ನಾವು ತಿಳಿಸುವ ಗೀತೆ ಸತ್ಯವಾದುದು ಆಗಿರಬೇಕೆಂಬ ಭಾವನೆಯಿಂದ, ಪಕ್ಕದ ಭಾವನೆಗಳಿಗೆ ಹೋಗಿ ಅನರ್ಥವಾಗಿ ಹೋದವುಗಳನ್ನು, ಸರಿಯಾದ ಭಾವನೆಯಲ್ಲಿ ಬರೆಯುವುದಕ್ಕೆ ಕೆಲವು ಕಡೆ ಅವುಗಳನ್ನು ವಿಮರ್ಶಿಸಿ ತಿಳಿಸಬೇಕಾಗಿಬಂದಿದೆ. ಆದರೆ ಯಾರನ್ನು ವೈಯಕ್ತಿಕ ವಿಮರ್ಶೆ ಮಾಡಲಿಲ್ಲವೆಂದು ಮನವಿ ಮಾಡುತ್ತಿದ್ದೇವೆ. ಸತ್ಯಕ್ಕೆ ಎಲ್ಲರೂ ಬೆಲೆ ಕೊಡುತ್ತಾರೆಂದು ತಿಳಿಯುತ್ತಿದ್ದೇವೆ.

**(1) ಶ್ಲೋ॥ 30 : ದೇಹೀ ನಿತ್ಯಮವಧ್ಯೋ ಽಯಂ ದೇಹೇ ಸರ್ವಸ್ಯ ಭಾರತ !**
**ತಸ್ಮಾತ್ ಸರ್ವಾಣಿ ಭೂತಾನಿ ನ ತ್ವಂ ಶೋಚಿತು ಮರ್ಹಸಿ ॥**
**(ಜೀವಾತ್ಮ)**

**ಭಾವಾರ್ಥ :** ಸರ್ವದೇಹಗಳಲ್ಲಿಯೂ ವಾಸಿಸುವ ಜೀವಾತ್ಮಗಳು ಎಂದಿಗೂ ಸಾಯಲ್ಪಡುವವಲ್ಲ. ಆದ್ದರಿಂದ ಎಲ್ಲ ಜೀವರಾಶಿಗಳನ್ನು ಕುರಿತು ನೀನು ದುಃಖಪಡಬೇಕಾದ ಅವಶ್ಯಕತೆಯಿಲ್ಲ.

**ವಿವರ :–** ಜೀವಾತ್ಮವಾಗಲಿ, ಆತ್ಮವಾಗಲಿ ದೇಹದಲ್ಲಿಯೇ ವಾಸಿಸುವುದರಿಂದ **"ದೇಹಿ"** ಎಂಬ ಹೆಸರು ಎರಡಕ್ಕೂ ಬಂದಿದೆ. **"ದೇಹೇ ಸರ್ವಸ್ಯ"** ಎನ್ನುವುದರಿಂದ ಎಲ್ಲಾ ದೇಹಗಳಲ್ಲಿಯೂ **"ದೇಹೀ ನಿತ್ಯಮವಧ್ಯೋಯಂ"** ಸಾಯಲ್ಪಡದ ಜೀವಾತ್ಮವಾಗಿರುವುದು ಎಂದು ತಿಳಿದುಕೊಳ್ಳಬೇಕು **'ಅವದ್ಯೋಯಃ'** ಎನ್ನುವುದರಲ್ಲಿ ಮರಣಿಸುವುದಿಲ್ಲ ಅಂದಾಗ ಅದು ಜೀವಾತ್ಮ ಎಂದು ತಿಳಿಯಲಾಗುತ್ತದೆ. ಭೂತಾನಿ ಎಂದರೆ ಜೀವರಾಶಿಗಳಿಗಾಗಿ ನೀನು ದುಃಖಪಡಬೇಕಾಗಿಲ್ಲವೆಂದು ಶ್ರೀಕೃಷ್ಣನು ತಿಳಿಸಿದ್ದಾನೆ.

ಇಲ್ಲಿಯವರೆಗೂ ಈ ಅಧ್ಯಾಯದಲ್ಲಿ 12ನೇ ಶ್ಲೋಕದಿಂದ ಪ್ರಾರಂಭವಾಗಿ 30ನೇ ಶ್ಲೋಕದವರೆಗೂ ಎಂದರೆ ಒಟ್ಟು 19 ಶ್ಲೋಕಗಳು ಜೀವಾತ್ಮನನ್ನು, ಆತ್ಮನನ್ನು,

ಪರಮಾತ್ಮಗಳನ್ನು ಕುರಿತೇ ಹೇಳಲಾಗಿದೆ. ಈ 19 ಶ್ಲೋಕಗಳಲ್ಲಿ ಜೀವಾತ್ಮನನ್ನು, ಆತ್ಮನನ್ನು, ಪರಮಾತ್ಮನನ್ನು ಮೂವರನ್ನು ಸೇರಿಸಿ ಹೇಳುವುದರಲ್ಲಿ **'ದೇಹೀ'** ಎನ್ನುವ ಒಂದು ಪದವನ್ನು ಮಾತ್ರವೇ ಉಪಯೋಗಿಸಿದ್ದಾರೆ. ಎಲ್ಲವನ್ನು ದೇಹೀ ಎನ್ನುವುದರಿಂದ, ಮೂವರ ಪುರುಷರ ವಿವರ ಪುರುಷೋತ್ತಮಪ್ರಾಪ್ತಿ ಯೋಗವೆಂಬ ಅಧ್ಯಾಯದವರೆಗೂ ಬಿಡಿಸಿ ಹೇಳದಿರುವುದರಿಂದ, ಯಾವ ಶ್ಲೋಕ ಯಾವ ಆತ್ಮಕ್ಕೆ ಹೇಳಿದೆ ಎಂಬ ವಿವರ ಇಲ್ಲದಂತೆ ಭಗವದ್ಗೀತೆ ಬರೆದಿರುವುದರಿಂದ, ಓದುವವರಿಗೆ ಆತ್ಮಗಳೊಂದರ ವಿವರಣಾ ಜ್ಞಾನ ತಿಳಿಯದಂತೆಹೋಗಿದೆ. ಎಲ್ಲರಂತೆ ನಾವು ಬರೆಯದೆ ಈ ಆತ್ಮಗಳ ವಿವರ ತಿಳಿಸುವುದಕ್ಕೆ ಒಂದು ಕಾರಣ ಇದೆ. ಅದೇನೆಂದರೆ! ಒಂದು ದಿನ ಒಬ್ಬ ಜಿಜ್ಞಾಸಿ ಒಬ್ಬ ಗುರುವಿನ ಹತ್ತಿರ ಪ್ರಶ್ನೆ ಹಾಕುವುದು ನಡೆದಿದೆ. ಆ ಪ್ರಶ್ನೆ ಏನೆಂದರೆ? ಭಗವದ್ಗೀತೆಯಲ್ಲಿ ಸಾಂಖ್ಯಯೋಗದಲ್ಲಿ 20ನೇ ಶ್ಲೋಕದಲ್ಲಿ ಒಂದುಕಡೆ **'ನಜಾಯತೇ'** ಹುಟ್ಟುವುದೇ ಇಲ್ಲವೆಂದು, ಒಂದು ಕಡೆ 27ನೇ ಶ್ಲೋಕದಲ್ಲಿ **'ಧ್ರುವಂ ಜನ್ಮ ಮೃತಸ್ಯಚ'** ಹುಟ್ಟಬೇಕಾಗಿದ್ದೇ ಎಂದು ಹೇಳುವುದರಲ್ಲಿ ಅರ್ಥವೇನು? ಎರಡು ಮಾತುಗಳು ಒಂದೇ ಆತ್ಮಕ್ಕೆ ಅನ್ವಯಿಸುತ್ತಿದೆಯಾ? ಎಂದು ಕೇಳಿದನು. ಈ ಪ್ರಶ್ನೆಗೆ ಆ ಗುರುಗಳು ಭಗವದ್ಗೀತೆಯಲ್ಲಿ ಏನು ಬರೆದಿದೆಯೋ ಅದೇ ಓದಿಕೋ ಎಂದು ಹೇಳಿದನು. ಅದು ಓದಿದರೂ ಸಹ ಅರ್ಥವಾಗದೇ ಕೇಳುತ್ತಿದ್ದೇನೆಂದು ಭಕ್ತನು ಎಂದನು, ಅದಕ್ಕೆ ಗುರುಗಳು ಸಮಾಧಾನ ಹೇಳಲಾರದೆಹೋಗುವುದು ನಡೆದಿದೆ. ಅದೆಲ್ಲವೂ ಪಕ್ಕದಲ್ಲಿದ್ದು ಗಮನಿಸಿದ ನಾವು ಸಮಾಧಾನವಿಲ್ಲದ ಭಗವದ್ಗೀತೆ ಇರಬಾರದೆಂದುಕೊಂಡಿದ್ದೇವೆ. ಆ ಸಂಘಟನೆಯೇ ಈ ದಿನದ ನಮ್ಮ ರಚನೆಯಲ್ಲಿನ ಸರಿಯಾದ ಸಮಾಧಾನ ಕೊಡುವಂತೆ ಪ್ರೇರಣೆಯನ್ನುಂಟು ಮಾಡಿದೆ. ಇಲ್ಲಿಯವರೆಗೂ ಎಷ್ಟು ಭಗವದ್ಗೀತೆಗಳು ಪರಿಶೀಲಿಸಿ ನೋಡಿದರೂ ಯಾವುದರಲ್ಲಿಯೂ ಮೂರು ಆತ್ಮಗಳ ವಿವರಣೆ ಇಲ್ಲದಂತೆ ಹೋಗುವುದು ನಮ್ಮ ದುರದೃಷ್ಟಕರ. ಸಂಸ್ಕೃತ ಪಂಡಿತರು, ಸ್ವಾಮಿಗಳು, ಗುರುಗಳು ಎಷ್ಟೋ ಜನರಿಂದ ಬರೆಯಲ್ಪಟ್ಟ ಭಗವದ್ಗೀತೆ ಗಳಲ್ಲಿ ಪ್ರಶ್ನೆಗಳು ಹುಟ್ಟುವುದು ಉತ್ತರಗಳು ಸಿಗದಂತೆ ಇರುವುದು ನಮ್ಮ ದುರದೃಷ್ಟಕರ. ಈಗಲಾದರೂ ಆ ಜಿಜ್ಞಾಸಿ ಕೇಳುವ ಪ್ರಶ್ನೆಗೆ ಉತ್ತರ ದೊರೆಯುವುದು ನಮ್ಮ ಅದೃಷ್ಟವೆಂದು ತಿಳಿದುಕೊಳ್ಳೋಣ. 30 ವಿಧಗಳಾಗಿ ಮೂರು ಆತ್ಮಗಳ ವಿವರವನ್ನು ಕ್ರಮವಾಗಿ ಮೂರು ಭಾಗಗಳಲ್ಲಿ ಬರೆದಿರುವುದನ್ನು ನಂತರ ಪುಟದಲ್ಲಿ ಪರಿಶೀಲಿಸಿ ಓದಿ ಜೀವಾತ್ಮ ಆತ್ಮ ಪರಮಾತ್ಮಗಳ ವಿವರವನ್ನು ಚೆನ್ನಾಗಿ ಅರ್ಥಮಾಡಿಕೊಳ್ಳುತ್ತಿರೆಂದು ಆಶಿಸುತ್ತೇವೆ.

| ಜೀವಾತ್ಮ | ಆತ್ಮ | ಪರಮಾತ್ಮ |
|---|---|---|
| 01. ನಾಶ ಆಗುವುದು | ನಾಶವಿಲ್ಲದ್ದು | ನಾಶ ವಿಲ್ಲದ್ದು |
| 02. ಮರಣ ಇರುವುದು | ಮರಣ ಇರುವುದು | ಮರಣ ಇಲ್ಲದಿರುವುದು |
| 03. ಅಗ್ನಿಗೆ ಸುಡುವುದಿಲ್ಲ ಕತ್ತಿಗೆ ಕತ್ತರಿಸುವುದಿಲ್ಲ ನೀರಿಗೆ ತೋಯುವುದಿಲ್ಲ | ಅಗ್ನಿಗೆ ಸುಡುವುದು ಕತ್ತಿಗೆಕತ್ತರಿಸಲ್ಪಡುತ್ತದೆ ನೀರಿಗೆ ತೋಯುತ್ತದೆ | ಅಗ್ನಿಗೆಸುಡುವುದಿಲ್ಲ ಕತ್ತಿಗೆಕತ್ತರಿಸುವುದಿಲ್ಲ ನೀರಿಗೆ ತೋಯುವುದಿಲ್ಲ |
| 04. ಜ್ಞಾನದೃಷ್ಟಿಗೆ ತಿಳಿಯುತ್ತದೆ | ಜ್ಞಾನದೃಷ್ಟಿಗೆ ತಿಳಿಯುತ್ತದೆ | ಜ್ಞಾನದೃಷ್ಟಿಗೂ ಸಹತಿಳಿಯುವುದಿಲ್ಲ |
| 05. ಒಂದು ಶರೀರದೊಳಗೆ ಒಂದುಕಡೆ ಇರುತ್ತದೆ. | ಶರೀರಗಳೊಳಗೆ ಎಲ್ಲಕಡೆಇರುತ್ತದೆ. | ಎಲ್ಲಾಶರೀರಗಳ ಒಳಗೂ ಹೊರಗೂ ಸಹ ಇರುತ್ತದೆ. |
| 06. ಶರೀರದಹೊರಗೆ ಇಲ್ಲ. | ಶರೀರದಹೊರಗೆ ಇಲ್ಲ | ಶರೀರದ ಹೊರಗೂ ಸಹ ಇದೆ. |
| 07. ಆಕಾರವಿದೆ. | ಆಕಾರವಿದೆ. | ಆಕಾರ ಇಲ್ಲ. |
| 08. ಹೆಸರು ಇದೆ. | ಹೆಸರು ಇದೆ. | ಹೆಸರು ಇಲ್ಲದಿರುವುದು. |
| 09. ಜೀವಿಗಳಸಂಖ್ಯೆ ಅನೇಕ. | ಜೀವಿಗಳಸಂಖ್ಯೆಯನ್ನು ಅನುಸರಿಸಿ ಆತ್ಮ ಗಳಿರುತ್ತವೆ. | ಇದು ಏಕವಾದದ್ದು |
| 10.ಕರ್ಮವನ್ನನುಭವಿಸುವುದು | ಕರ್ಮವನ್ನನುಭವಿಸುವುದಿಲ್ಲ. | ಕರ್ಮನನುಭವಿಸುವುದಿಲ್ಲ. |
| 11. ಶಕ್ತಿಇಲ್ಲದವನು | ಶಕ್ತಿಇರುವವನು | ಶಕ್ತಿಯೇ ತಾನಾಗಿ ಇರುವವನು. |
| 12. ಖೈದಿ. | ಸಾಕ್ಷಿ | ಜೀವಾತ್ಮಆತ್ಮಗೂ ವಿಭಿನ್ನವಾಗಿದ್ದು ಸಾಕ್ಷಿಯಲ್ಲ ದವನು. |
| 13. ಗುಣವಿಕಾರಗಳಿವೆ. | ಗುಣವಿಕಾರಗಳಿಲ್ಲ. | ಗುಣವಿಕಾರಗಳು ಇಲ್ಲ. |
| 14. ವಿಭೂತಿ ರೇಖೆಗಳಲ್ಲಿ ಕೆಳಗಿನದು. | ವಿಭೂತಿರೇಖೆಗಳಲ್ಲಿ ಮಧ್ಯದ್ದು. | ವಿಭೂತಿರೇಖೆಗಳಲ್ಲಿ ಮೇಲಿರುವುದು. |
| 15. ಆರಾಧಿಸುವವನು. | ಆರಾಧಿಸಲ್ಪಡುವವನು. | ಆರಾಧನೆಗಳಿಗೆ ಸಿಗುವವನಲ್ಲ. |

| | | |
|---|---|---|
| 16. ಸೃಷ್ಟಿಸಲ್ಪಟ್ಟವನು. | ಸೃಷ್ಟಿಸಲ್ಪಟ್ಟವನು. | ಸೃಷ್ಟಿಸಿದವನು. |
| 17. ಜೀವಾತ್ಮ. | ಆತ್ಮ. | ದೇವರು. |
| 18. ಪ್ರಳಯದ ನಂತರ ಇಲ್ಲದವನು. | ಪ್ರಳಯದನಂತರ ಇಲ್ಲದವನು. | ಪ್ರಳಯದನಂತರ ಸಹ ಇರುವವನು. |
| 19. ಪ್ರಕೃತಿ ಮಾತೆ ಆಗುತ್ತದೆ. | ಪ್ರಕೃತಿ ಸೋದರ ನಾಗುತ್ತಾನೆ. | ಪ್ರಕೃತಿ ಹೆಂಡತಿ ಆಗುತ್ತಾಳೆ. |
| 20. ಆತ್ಮನಲ್ಲಿ ಬೆರೆಯುವವನು | ಜೀವಾತ್ಮವನ್ನು ಪರಮಾತ್ಮನಲ್ಲಿ ಬೆ ರೆಸುವಮಧ್ಯವರ್ತಿ | ಜೀವಾತ್ಮವನ್ನು ಬೆರೆಸಿಕೊಳ್ಳುವವನು. |
| 21. ಶೂನ್ಯದಲ್ಲಿ ಇಲ್ಲದಿರುವುದು. | ಶೂನ್ಯದಲ್ಲಿ ಇಲ್ಲದಿರುವುದು. | ಶೂನ್ಯದಲ್ಲಿ ಇರುವುದು. |
| 22. ಜಗತ್ತಿನಲ್ಲಿ ಒಂದುಕಡೆ ಶರೀರದಲ್ಲಿರುವವನು | ಜಗತ್ತಿನಲ್ಲಿ ಶರೀರಗಳಲ್ಲಿ ಶರೀರವೆಲ್ಲಾ ಇರುವವನು. | ವಿಶ್ವವೆಲ್ಲಇರುವವನು. |
| 23. ಬದುಕಿರುವಾಗ ಜೀವಾತ್ಮ ಆತ್ಮವನ್ನು ತಿಳಿದುಕೊಳ್ಳಬಹುದು. | ಬದುಕಿರುವಾಗ ಆತ್ಮಜೀವಾತ್ಮವನ್ನು ಬೆರೆಸಿಕೊಳ್ಳಬಹುದು. | ಬದುಕಿರುವ ಯಾರು ತಿಳಿದುಕೊಳ್ಳದಿರುವುದು. |
| 24. ಜೀವಿಯನ್ನುಪೂಜೆ ಯಿಂದಆರಾಧಿಸಬಹುದು | ಆತ್ಮವನ್ನುಯೋಗದಿಂದ ಆರಾಧಿಸಬಹುದು | ಯಾವ ವಿಧಪೂಜೆ, ಯಾವ ಯೋಗದಿಂದ ಆರಾಧಿಸಲಾರೆವು. |
| 25. ಕರ್ಮಆಧೀನದೊಳಗಿರುವವನು | ಕರ್ಮವನ್ನನುಸರಿಸುವವನು. | ಕರ್ಮಸಂಬಂಧ ಇಲ್ಲದವನು. |
| 26. ಕರ್ಮ ಕಟ್ಟೆಗೆಗಳನ್ನು ಹೊರುವವನು. | ಕರ್ಮಕಟ್ಟೆಗೆಗಳನ್ನು ಸುಡುವವನು. | ಅಗ್ನಿಯಾಗಿರುವವನು. |
| 27. ಕ್ಷರನು. | ಅಕ್ಷರನು. | ಪುರುಷೋತ್ತಮನು. |
| 28. ಕುರುಡನು. | ದೃಷ್ಟಿ ಇರುವವನು. | ದೃಷ್ಟಿರೂಪ ಇಲ್ಲದವನು. |
| 29. ವ್ಯಕ್ತನು. | ವ್ಯಕ್ತನು. | ಅವ್ಯಕ್ತನು. |
| 30. ಕರ್ಮಬದ್ಧನು. | ಜೀವಬದ್ಧನು. | ಅಬದ್ಧನು. |

ಜೀವನದಲ್ಲಿ ಜೀವಾತ್ಮನಾದವನು ಜ್ಞಾನದ ಪ್ರಕಾರ ಆರಾಧಿಸಬೇಕಾಗಿರುವುದು ಆತ್ಮವನ್ನೇ. ಈ ವಿಷಯ ತಿಳಿಸುವ ನಿಮಿತ್ತ ಈಶ್ವರಲಿಂಗದ ಮೇಲೆ ವಿಭೂತಿ ರೇಖೆಗಳಲ್ಲಾಗಲಿ, ಹಣೆಯ ಮೇಲೆ ಧರಿಸುವ ವಿಭೂತಿರೇಖೆಗಳಲ್ಲಾಗಲಿ, ಮಧ್ಯದಲ್ಲಿರುವ ರೇಖೆಯ ಮೇಲೆ ಬೊಟ್ಟಿಟ್ಟು ಗುರುತಿಸಿದ್ದಾರೆ. ಯೋಗಮಾಡುವುದರಿಂದ ತಿಳಿಯುವುದು ಶರೀರದಲ್ಲಿ ಎರಡನೇ ಆತ್ಮ. ಎಷ್ಟುಕಾಲ ಯೋಗದಿಂದ ಆತ್ಮವನ್ನು ಸೇರಿದರೆ, ಅಷ್ಟುಕಾಲ ಜ್ಞಾನಾಗ್ನಿ ಲಭಿಸಿ ಕರ್ಮಸುಟ್ಟುಹೋಗುತ್ತದೆ. ಬ್ರಹ್ಮಯೋಗ ವಿಧಾನದಲ್ಲಿ ಜೀವಾತ್ಮಕ್ಕೆ ಆತ್ಮವೇ ದೇವರು. ಜೀವಿಗೆ ಮೂರನೇ ಆತ್ಮವಾದ ಪರಮಾತ್ಮನೊಂದಿಗೆ ಯಾವ ಸಂಬಂಧ ಇರುವುದಿಲ್ಲ. ಆಧ್ಯಾತ್ಮಿಕದ ಪ್ರಕಾರ ದೇವಾಲಯ ಪದ್ಧತಿಗಳಾಗಲಿ, ಸಂದೇಶಗಳಾಗಲಿ, ಆರಾಧನೆ ವಿವರಗಳಾಗಲಿ, ಯೋಗಪದ್ಧತಿಗಳಾಗಲಿ ಎಲ್ಲ ಆತ್ಮವನ್ನು ಸೂಚಿಸುವವೇ ಎಂದು ತಿಳಿಯಬೇಕು. ಭಕ್ತರು ಧರಿಸುವ ನಾಮಗಳಾಗಲಿ, ಬೊಟ್ಟಾಗಲಿ, ಹಾಗೇ ಮಾಡುವ ಪೂಜೆ ವಿಧಾನದ ಅರ್ಥವಾಗಲಿ, ಎಲ್ಲವೂ ಎರಡನೆಯದಾದ ಆತ್ಮವನ್ನು ತಿಳಿದುಕೊಳ್ಳುವಂತೆ ನಿರ್ಮಿಸಲ್ಪಟ್ಟಿರುವವೇ ಎಂದು ತಿಳಿಯಬೇಕು. ಎಷ್ಟೋ ಆರಾಧನೆಗಳು, ಆಚರಣೆಗಳು, ಅರ್ಥಗಳೆಲ್ಲವೂ ನಮ್ಮ ದೇಹದಲ್ಲಿರುವ ಆತ್ಮಗೋಸ್ಕರವೇ. ಹಿರಿಯರು ತತ್ವರೂಪದಲ್ಲಿ ಹಾಡುಗಳಾಗಿ, ಪದ್ಯಗಳಾಗಿ ಹೇಳಿರುವ ಜ್ಞಾನವನ್ನೂ ಸಹ ಆತ್ಮವನ್ನು ಕುರಿತು ಹೇಳಿರುವುದೇ ಎಂದು ತಿಳಿಯಬೇಕು. ಪರಮಾತ್ಮವೊಂದರ ವಿವರ ಸ್ವಲ್ಪವೂ ಯಾರಿಗೂ ತಿಳಿದಿಲ್ಲ. ಯಾವ ಶಾಸ್ತ್ರಗಳು ತಿಳಿಸಲಾರವು. ಬದುಕಿರುವ ಯಾರಿಗೂ ಪರಮಾತ್ಮ ತಿಳಿಯುವುದಿಲ್ಲ. ಆದ್ದರಿಂದ ನಾವು ಎಷ್ಟು ಹೇಳಿಕೊಂಡರು ಎರಡನೆಯದಾದ ಆತ್ಮಕ್ಕೆ ಎಂದು ತಿಳಿಯಬೇಕು.

ಇಲ್ಲಿಯವರೆಗೂ ಜೀವಾತ್ಮ, ಆತ್ಮಗಳ ಸಾವು ಹುಟ್ಟುಗಳ ಸಮಸ್ಯೆ ತಿಳಿಸಿದ ಭಗವಂತನು ಇಲ್ಲಿಗೆ ಆ ವಿಷಯವನ್ನು ಬಿಟ್ಟು ಕರ್ಮವಿಷಯಗಳನ್ನು ತಿಳಿಸುವ ಸಲುವಾಗಿ **'ಸುಖದುಃಖೇ ಸಮೇಕೃತ್ವಾ'** ಎನ್ನುವ ಶ್ಲೋಕ ಪ್ರಾರಂಭಮಾಡಿದ್ದಾನೆ. ಆದರೆ ಭಗವದ್ಗೀತೆಯಲ್ಲಿ ಆ ಶ್ಲೋಕದ ಹಿಂದೆಯೇ ಕಾಣಿಸದಂತೆ ಏಳು ಶ್ಲೋಕಗಳ ನಂತರ ಕಾಣಿಸುತ್ತಿದೆ. ಮಧ್ಯದಲ್ಲಿ ಏಳು ಶ್ಲೋಕಗಳು ಬಂದುಸೇರಿವೆ. ಅವಕಾಶಕ್ಕಾಗಿ ಎದುರು ನೋಡುತ್ತಿರುವ ಕೆಲವರು ಹಿರಿಯರು, ನಮ್ಮದೂ ಸಹ ಸ್ವಲ್ಪ ಇರಬೇಕೆಂದು ಅವರ ಸ್ವಬುದ್ಧಿಯನ್ನು ಉಪಯೋಗಿಸಿ, ಸಂಸ್ಕೃತ ಪಾಂಡಿತ್ಯ ಇರುವವರಾದ್ದರಿಂದ ಶ್ಲೋಕಗಳ ಮಧ್ಯದಲ್ಲಿ ಸೇರಿಸಿದ್ದಾರೆ. ಎಂದೋ ಅವು ಬೆರೆತು ಹೋಗಿರುವುದರಿಂದ ಅವುಗಳನ್ನು ಯಾರು ಗುರುತಿಸಲಾರದೆ ಹೋಗಿದ್ದಾರೆ. ನಾವು ಇದಕ್ಕೂ ಮೊದಲು ತಿಳಿಸಿದ ನಾಲ್ಕು ಸೂತ್ರಗಳ ಪ್ರಕಾರ ನೋಡಿದರೆ, ಈ ಏಳು

ಶ್ಲೋಕಗಳು ಶಾಸ್ತ್ರಬದ್ದವು ಅಲ್ಲವೆಂದು ತಿಳಿಯುತ್ತಿದೆ. ಆದ್ದರಿಂದ ಇವು ಕಲ್ಪಿತಗಳೆಂದು ತಿಳಿದುಹೋಗಿವೆ. ಶಾಸ್ತ್ರಬದ್ದವು ಅಲ್ಲದಿರುವುವೆಂದು ಹೇಗೆ ನಿರ್ಣಯಿಸಿದ್ದಾರೆಂದು ಕೆಲವರು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ಶಾಸ್ತ್ರವು ಎಂದಿಗೂ ಖಂಡಿಸಲ್ಪಡುವುದಿಲ್ಲ. ಈ ಶ್ಲೋಕಗಳಲ್ಲಿ ಯುದ್ಧ ಮಾಡುವುದು ಸ್ವಧರ್ಮವೆಂದು ತಿಳಿಸಲಾಗಿದೆ. ಕರ್ಮಯೋಗ 35ನೇ ಶ್ಲೋಕದಲ್ಲಿ ನೋಡಿದರು ಸ್ವಧರ್ಮವೆಂಬುವುದು ಸ್ವಂತವಾದ ಆತ್ಮಧರ್ಮವೆಂದು, ಪರಧರ್ಮವೆಂಬುವುದು ಆತ್ಮಗಿಂತ ಬೇರೆಯಾದ ಪ್ರಕೃತಿ ಧರ್ಮವೆಂದು ತಿಳಿಯುತ್ತಿದೆ. ಯುದ್ಧ ಮಾಡುವುದು ಪ್ರಕೃತಿ ವಿಷಯ ಆತ್ಮವಿಷಯವಲ್ಲ. ಆದ ಕಾರಣ ಯುದ್ಧ ಸ್ವಧರ್ಮ ಅಲ್ಲ, ಆತ್ಮಾಚರಣೆ ಸ್ವಧರ್ಮವಾಗುತ್ತದೆ. ಕುಲಗಳು ಜಾತಿಗಳನ್ನನುಸರಿಸಿ ಸ್ವಧರ್ಮಗಳನ್ನು ನಿರ್ಣಯಿಸಿದರೆ ಅಸಲು ಆತ್ಮಜ್ಞಾನಕ್ಕೆ ಹಾನಿ ಸಂಭವಿಸುತ್ತದೆ. ಅವುಗಳ ವಿಷಯ ಬರುವ ಅಧ್ಯಾಯ ಶ್ಲೋಕಗಳಲ್ಲಿ ಪ್ರಸ್ತಾವಿಸುತ್ತೇನೆ. ಅಸಲು **ಗೀತೆಯಲ್ಲಿ ಬ್ರಾಹ್ಮಣ, ವೈಶ್ಯ, ಕ್ಷತ್ರಿಯ, ಶೂದ್ರ ಎನ್ನುವ ನಾಲ್ಕುವರ್ಣಗಳ ಪ್ರಸಕ್ತಿಯೇ ಇಲ್ಲ**. ಆದ್ದರಿಂದ ಕ್ಷತ್ರಿಯರೆಂದು ಹೆಸರಿಟ್ಟು ಹೇಳಿದ ಶ್ಲೋಕಗಳು ಕಲ್ಪಿತಗಳೆಂದು ಅವುಗಳಲ್ಲಿ ಆತ್ಮ ಜ್ಞಾನಪರವಾದ ವಿಷಯಗಳು ಸ್ವಲ್ಪವೂ ಇಲ್ಲವೆಂದು ಗ್ರಹಿಸಬೇಕು. ಪುಣ್ಯವನ್ನು ಅನುಸರಿಸಿ ಸ್ವರ್ಗವೆಂಬುವುದು ಇರುತ್ತದೆ. ಆದರೆ ಯುದ್ಧವನ್ನು ಅನುಸರಿಸಿ ಸ್ವರ್ಗವಿರುತ್ತದೆ ಎಂಬುವುದು ಶಾಸ್ತ್ರಬದ್ಧವಲ್ಲ. ಅದು ಕರ್ಮಸಿದ್ಧಾಂತಕ್ಕೆ ವಿರುದ್ಧವಾದುದು. ಆದ್ದರಿಂದ ಈ ಏಳು ಶ್ಲೋಕಗಳು ಕಲ್ಪಿತಗಳೆಂದು, ಹೇಳುವುದಲ್ಲದೆ, ಇಂತಹ ಕಲ್ಪಿತ ಶ್ಲೋಕಗಳು ಗೀತೆಯಲ್ಲಿ ಅಲ್ಲಲ್ಲಿ ಇವೆಯೆಂದು, ಅವುಗಳಲ್ಲಿನ ದೋಷವು ತಿಳಿಸಿ, ಅಶಾಸ್ತ್ರೀಯವಾದ ಅವುಗಳನ್ನು ತೊಲಗಿಸಿ, ಸ್ವಚ್ಚವಾದ ದೈವವಾಕ್ಕನ್ನು ಮಾತ್ರವೇ ನಿಮಗೆ ತಿಳಿಸುತ್ತೇವೆ.

ಕ್ರಮವಾಗಿ ಕೆಳಗೆ ಕೊಡುವ ಏಳು ಶ್ಲೋಕಗಳು ಕಲ್ಪಿತಗಳೆಂದು ತಿಳಿಯುವಂತೆ ಅವುಗಳ ಪಕ್ಕದಲ್ಲಿ **(x)** ಮಾರ್ಕ್ ಗುರುತಿಸಿದ್ದೇವೆ. ಅವುಗಳ ವಿವರವೂ ಸಹ ಬರೆಯಲಿಲ್ಲ.

**1) ಶ್ಲೋ॥ 31 :** **ಸ್ವಧರ್ಮಮಾಪಿ ಚಾಪೇಕ್ಷ್ಯನವಿಕಂಪಿತು ಮರ್ಹಸಿ ।**
**ಧರ್ಮ್ಯಾದ್ದಿ ಯುದ್ದಾಚ್ಛ್ರೇಽ ಯೋನ್ಯತ್ ಕ್ಷತ್ರಿಯಸ್ಯ ನ ವಿಧ್ಯತೇ॥ (x)**

**1) ಶ್ಲೋ॥ 32 :** **ಯದೃಚ್ಛಯಾ ಚೋಪಪನ್ನಂ ಸ್ವರ್ಗ ದ್ವಾರಾ ಮಪಾವೃತಮ್ ।**
**ಸುಖಿನಃ ಕ್ಷತ್ರಿಯಾಃ ಪಾರ್ಥ! ಲಭುತೇ ಯುದ್ದ ಮೀ ದೃಶಮ್॥ (x)**

**1) ಶ್ಲೋ॥ 33 :** **ಅಥ ಚೇತ್ತ್ವಂ ಧರ್ಮ್ಯಮಿಮಂ ಸಂಗ್ರಾಮಂ ನ ಕರಿಷ್ಯಸಿ, ।**
**ತತಸ್ಸ್ವಧರ್ಮಂ ಕೀರ್ತಿಂಚ ಹಿತ್ವಾ ಪಾಪಮವಾಪ್ಸ್ಯಸಿ ॥ (x)**

**1)ಶ್ಲೋ ॥ 34 : ಅಕೀರ್ತಿಂ ಚಾಪಿ ಭೂತಾನಿ ಕಥ ಇಷ್ಯಂತಿ ತೇವ್ಯಯಾಮ್ ।**
**ಸಂಭಾವಿತಸ್ಯ ಚಾಕೀರ್ತಿ ರ್ಮರಣಾದತಿರಿಚ್ಯತೇ. ॥ (X)**

**1) ಶ್ಲೋ ॥ 35 : ಭಯಾದ್ರಣಾದುಪರತಂ ಮನ್ಯಂತೇತ್ವಾಂ ಮಹಾರಥಾಃ ।**
**ಯೇಷಾಂ ಚತ್ವಂ ಬಹುಮತೋ ಭೂತ್ವಾ ಯಾಸ್ಯಸಿಲಾಘುವಮ್ ॥ (X)**

**1) ಶ್ಲೋ ॥ 36 : ಅವಾಚ್ಚವಾದಾಂಶ್ಚ ಬಹೂನ್ವದಿಷ್ಯಂತಿ ತವಾಹಿತಾಃ ।**
**ನಿನ್ದನ್ತ ಸ್ತವ ಸಾಮರ್ಥ್ಯಂ ತತೋ ದುಃಖ ತರಂ ಸ್ನುಕಿಮ್ ॥ (X)**

**1)ಶ್ಲೋ ॥ 37 : ಹತೋ ವಾ ಪ್ರಾಪ್ಸ್ಯಸೇ ಸ್ವರ್ಗಂ ಜಿತ್ವಾವಾ ಭೋಕ್ಷ್ಯಸೇ ಮಹೀಂ ।**
**ತಸ್ಮಾದು ತ್ತಿಷ್ಟ ಕೌಂತೇಯ! ಯುದ್ದಾಯಂ ಕೃತಿನಿಶ್ಚಯಃ ॥ (X)**

**(1) ಶ್ಲೋ॥ 38 : ಸುಖದುಃಖೇ ಸಮೇಕೃತ್ವಾ ಲಾಭಾಲಾಭೌ ಜಯಾಜಯೌ ।**
**ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪ ಮವಾಪ್ಸ್ಯಸಿ ॥**
**(ಕರ್ಮಯೋಗ)**

**ಭಾವಾರ್ಥ :** ಕಷ್ಟಸುಖಗಳು, ಲಾಭನಷ್ಟಗಳು, ಜಯಾಪಜಯಗಳನ್ನು ಸಮವಾಗಿ ತಿಳಿದು ಯುದ್ಧಮಾಡು. ಹಾಗೆ ಮಾಡುವುದರಿಂದ ಪಾಪ ಕರ್ಮಗಳನ್ನು ಹೊಂದುವುದಿಲ್ಲ.

**ವಿವರ :–** ಮೊದಲು ಅರ್ಜುನನು ಯುದ್ಧ ಮಾಡದೆ ಹೋಗುವುದಕ್ಕೆ ಮುಖ್ಯವಾಗಿ ಎರಡು ಕಾರಣಗಳು ಕಾಣುತ್ತಿವೆ. ಮೊದಲ ಕಾರಣ ತನ್ನವರನ್ನು ಸಾಯಿಸುವುದಿಲ್ಲ ಎಂಬ ಮೋಹಗುಣ. ಎರಡನೆಯದು ಸಾಯಿಸಿದರೆ ಪಾಪಬರುತ್ತದೆಂಬ ಪಾಪಬೀತಿ. ಮೊದಲನೆಯದಾದ ಮೋಹಗುಣ ತನ್ನವರೆಂಬ ಭಾವನೆ ಉಂಟುಮಾಡಿ, ಇವರೆಲ್ಲ ಸತ್ತುಹೋದರೆ ಇವರನ್ನು ಇಲ್ಲದಂತೆ ಮಾಡಿದವನಾಗುತ್ತೇನಲ್ಲವೆ! ಹಾಗಾಗದೆ ಅವರೆಲ್ಲರಿರಬೇಕೆಂದು, ಅವರನ್ನು ತಾನೇನು ಮಾಡಬಾರದೆಂಬ ಭಾವನೆ ಉಂಟುಮಾಡಿದೆ. ಅಷ್ಟೇ ಅಲ್ಲದೆ ಸಾಯಿಸಿದರೆ ವಿಪರೀತವಾದ ಪಾಪ ಬರುತ್ತದೆಂಬ ಭಾವನೆಯೂ ಸಹ ಹುಟ್ಟಿಸಿದೆ, ಅರ್ಜುನನಿಂದ ಮುಖ್ಯವಾಗಿ ಹೊರಬಿದ್ದ ಸಾವಿನ ಸಮಸ್ಯಗೆ ಶ್ರೀ ಕೃಷ್ಣನು ವಿವರಿಸಿ ಸಾವು ಎಂದರೆ ಏನು! ಸಾಯುವುದ್ಯಾರು? ಮರಣಿಸಿದವರು ಏನಾಗುತ್ತಾರೆ? ಎನ್ನುವ ಮೊದಲಾದ ವಿಷಯಗಳನ್ನು ಇಲ್ಲಿಯವರೆಗೂ ತಿಳಿಸಿದ್ದಾನೆ. ಈಗ ಈ ಶ್ಲೋಕದಿಂದ ಪಾಪಪುಣ್ಯ ವಿಷಯಗಳನ್ನು ತಿಳಿಸುವುದಕ್ಕೆ ಪ್ರಾರಂಭಿಸಿದ್ದಾನೆ. ಭಗವದ್ಗೀತೆಯಲ್ಲಿ ಸಾವು ಹುಟ್ಟುಗಳ ವಿಷಯಗಳು ಸ್ವಲ್ಪ ಇರುವಾಗ, ಪಾಪಪುಣ್ಯ ವಿವರವೇ ಹೆಚ್ಚಾಗಿ ತಿಳಿಸ ಲಾಗಿದೆ. ಯುದ್ಧದಲ್ಲಿ ತನ್ನ ಸಂಬಂಧಿಕರನ್ನು ಸಾಯಿಸಿ ಹಿಂಸಿಸುವುದರಿಂದ ಪಾಪ

ಬರುತ್ತದೆಂಬ ಅರ್ಜುನನ ಮಾತಿಗೆ ಮೊದಲ ಉತ್ತರವಾಗಿ ಈ ಶ್ಲೋಕ ವಿವರ ಹೀಗೆ ಇದೆ ಓದಿರಿ.

ಹಿಂಸೆಯಿಂದ ಕೂಡಿಕೊಂಡ ಯುದ್ಧಕಾರ್ಯದಲ್ಲಿ ಕಾಣಿಸದ ಪಾಪವೇ ಅಲ್ಲದೆ ಸುಖ ದುಃಖಗಳೂ ಸಹ ಇರುತ್ತವೆ. ದೊಡ್ಡ ಶತ್ರುವನ್ನು ಸುಲಭವಾಗಿ ಸಾಯಿಸಿದಾಗ ಸಂತೋಷ ಉಂಟಾಗುತ್ತದೆ. ಅಥವಾ ಎದುಗಿರುವ ಶತ್ರುವಿನಿಂದ ಒದೆತಿಂದಾಗ ದುಃಖವೂ ಸಹ ಉಂಟಾಗುತ್ತದೆ. ಅಷ್ಟೇ ಅಲ್ಲದೆ ಲಾಭ ಅಥವಾ ನಷ್ಟ ಇರುತ್ತದೆ. ಕೊನೆಯದಾಗಿ ಎದುರಾಳಿಗಳು ಗೆದ್ದು ನಾವು ಸೋಲುವುದೋ ಅಥವಾ ನಾವು ಗೆದ್ದು ಎದುರಾಳಿಗಳು ಸೋತುಹೋಗುವುದೆಂಬ ಜಯಾಪಜಯಗಳು ಎನ್ನುವ ಮೂರು ಒಂದೇ ಯುದ್ಧ ಕಾರ್ಯದಿಂದ ಏರ್ಪಡುತ್ತಿವೆ. ಯುದ್ಧ ಮಾಡುವವನು ತನ್ನ ಮನಸ್ಸನ್ನು ಮಾಡುತ್ತಿರುವ ಕಾರ್ಯವಾದ ಯುದ್ಧದ ಮೇಲೆ ಮಾತ್ರ ಇಟ್ಟು ಆ ಕಾರ್ಯವನ್ನು ಹೇಗೆ ನಿರ್ವಹಿಸಬೇಕೋ ಹಾಗೆಯೇ ಮಾಡಬೇಕು. ಯುದ್ಧ ಮಾಡುವುದರಲ್ಲಿ ಎಷ್ಟು ಎಚ್ಚರಿಕೆಗಳು ಎಷ್ಟು ವಿಧಾನಗಳು ಇವೆಯೋ, ಆ ಯುದ್ಧ ಯಾವ ನೈಪುಣ್ಯತೆಯಿಂದ ಮಾಡಬೇಕೋ, ಅವುಗಳನ್ನು ಮಾತ್ರವೇ ತನ್ನ ಮನಸ್ಸಿನಲ್ಲಿ ಇಟ್ಟುಕೊಂಡು ಯುದ್ಧ ಮಾಡುವುದರಿಂದ, ಅದರ ಹಿಂದೆ ಬರುವ ಪಾಪವು ಸ್ವಲ್ಪವೂ ಅವನಿಗೆ ಅಂಟುವುದಿಲ್ಲ. ಒಂದು ವೇಳೆ ಯುದ್ಧ ಮಾಡುತ್ತಾ, ಯುದ್ಧ ನಾನು ಮಾಡುತ್ತಿದ್ದೇನೆಂದು, ಆ ಯುದ್ಧದಲ್ಲಿ ಕಷ್ಟಸುಖಗಳು ಉಂಟಾಗುತ್ತವೆಂದು, ಆ ಯುದ್ಧದಲ್ಲಿ ಲಾಭ ನಷ್ಟಗಳು ಇರುತ್ತವೆಂದು, ಹಾಗೇ ಜಯಾಪಜಯಗಳು ಇರುತ್ತವೆಂಬ ಯೋಚನೆಯಿದ್ದು, ಅದರಲ್ಲಿ ಸುಖವನ್ನು ಲಾಭವನ್ನು ಜಯವನ್ನು ಬೇಕೆಂಬ ಆಕಾಂಕ್ಷೆ ಗಾಢವಾಗಿ ಇಟ್ಟುಕೊಂಡಾಗಲಿ, ಅಥವಾ ನಷ್ಟ ಕಷ್ಟ ಅಪಜಯವು ಬೇಕೆಂಬ ಆಕಾಂಕ್ಷೆ ಇಟ್ಟುಕೊಂಡಾಗಲಿ, ಯುದ್ಧ ಮಾಡುವುದರಿಂದ ತಪ್ಪದೇ ಕರ್ಮವೆಂಬ ಪಾಪ ಪುಣ್ಯಗಳು ಬರುತ್ತವೆ.

ಒಂದೇ ಕಾರ್ಯವಾದ ಯುದ್ಧವನ್ನು ಮಾಡುವುದರಲ್ಲಿಯೇ ಪಾಪ ಬರುವುದು ಅಥವಾ ಬಾರದಂತೆ ಹೋಗುವುದೆಂಬ ಎರಡು ಪದ್ಧತಿಗಳು ಇವೆ. ಒಂದೇ ಕಾರ್ಯ ಮಾಡುವುದರಲ್ಲಿ ಪಾಪ ಅಂಟುವುದು ಅಥವಾ ಅಂಟದಂತೆ ಹೋಗುವುದೆಂಬ ಎರಡು ವಿಧಾನಗಳಿರುವುದು ಆಶ್ಚರ್ಯಕರ ವಿಷಯವಾದರೂ ಅದು ಪೂರ್ತಿ ಶಾಸ್ತ್ರಬದ್ಧವಾದ ಸತ್ಯ. ಯಾರಾದರು ಕರ್ಮಸಿದ್ಧಾಂತವನ್ನು ತಿಳಿಸುವ ಈ ಮೊದಲ ಶ್ಲೋಕವೊಂದರ ಅರ್ಥ ಅವಗಾಹನೆ ಮಾಡಿಕೊಳ್ಳುವುದರಲ್ಲಿಯೇ, ಇತ್ತ ಜ್ಞಾನದೊಳಗೋ ಅತ್ತ

ಅಜ್ಞಾನದೊಳಗೋ ಹೆಜ್ಜೆ ಹಾಕುವುದು ನಡೆಯುತ್ತದೆ. ಭಗವದ್ಗೀತೆಯೊಂದರ ಮೂಲ ಉದ್ದೇಶ ಅರ್ಥವಾಗದಿದ್ದರೆ ಅಜ್ಞಾನದೊಳಗೆ, ಅರ್ಥವಾದರೆ ಜ್ಞಾನದೊಳಗೆ ಮಾರ್ಗ ಏರ್ಪಡುತ್ತದೆ. ಭಗವಂತನ ಭಾವನೆ ಅರ್ಥವಾಗದೆ ಅಜ್ಞಾನ ಮಾರ್ಗದೊಳಗೆ ಹೆಜ್ಜೆ ಹಾಕುವ ಅವಕಾಶ ಹೆಚ್ಚಾಗಿ ಈ ಶ್ಲೋಕದಲ್ಲಿರುವುದರಿಂದ, ಜಾಗ್ರತೆಯಾಗಿ ಅರ್ಥ ಮಾಡಿಕೊಂಡು ಇದರ ಬಗ್ಗೆ ಪೂರ್ತಿವಿವರ ಉಳಿದ ಗೀತೆಯಲ್ಲಿ ಶೋಧಿ ಸಬೇಕಾಗಿರುತ್ತದೆ. ಅಷ್ಟೇ ಅಲ್ಲದೆ ಹಿಂಸೆಯಿಂದ ಕೂಡಿಕೊಂಡ ಯುದ್ಧ ಮಾಡುವುದರಿಂದ ಪಾಪ ಬರುವುದಿಲ್ಲವೆಂಬ ಮಾತಿನಿಂದ ಆಶ್ಚರ್ಯಪಡದೆ, ಪಾಪ ಬಾರದಂತಿರುವುದಕ್ಕೆ ಇರುವ ಕಾರಣ ಏನು? ಎಂದು ಪೂರ್ತಿ ವಿವರ ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸಬೇಕು. ಹಾಗೆ ಹುಡುಕದೆ ಈಗಾದರೆ ಪಾಪ ಬರುತ್ತದೆ, ಹಾಗಾದರೆ ಪಾಪ ಬರುವುದಿಲ್ಲ ಎನ್ನುವುದೇನು ಎಂದು ಪ್ರಶ್ನಿಸಿಕೊಂಡು ಕುಳಿತುಕೊಂಡವರಿಗೆ, ಗೀತೆಯನ್ನು ಬೋಧಿಸುವ ಶ್ರೀಕೃಷ್ಣನ ಜೀವನವೂ ಸಹ ಪಾಪದ ಕೆಲಸಗಳಿಂದ ಕೂಡಿಕೊಂಡಿರುವು ದಾಗಿಯೆ ಕಾಣಿಸುತ್ತದೆ. ಹಾಗೆ ಆಗದೆ ಗೀತಾ ಸಂದೇಶದ ಜ್ಞಾನಮಾರ್ಗ ಬೇಕೆಂದರೆ ಗೀತೆಯನ್ನು ಪೂರ್ತಿಯಾಗಿ ಪರಿಶೀಲಿಸಿ ನೋಡಬೇಕು. ಅರ್ಥವಾಗದ ಒಂದು ಮಾತಿನಿಂದಲೇ ತಮ್ಮ ಪೂರ್ತಿ ನಿರ್ಣಯವನ್ನು ತೆಗೆದುಕೊಳ್ಳ ಬಾರದೆಂದು ಕೋರುತ್ತಿದ್ದೇವೆ.

ಇಲ್ಲಿಯವರೆಗೂ ಸಾವುಹುಟ್ಟುಗಳ ವಿಷಯ ತಿಳಿಸುತ್ತಾ ಜೀವಾತ್ಮ ಆತ್ಮಗಳ ವಿವರವು ತಿಳಿಸಿದ ಭಗವಂತನು, ಈ ಶ್ಲೋಕದಿಂದ ಪಾಪಪುಣ್ಯ ವಿಷಯಗಳು ವಿವರಿಸುತ್ತಾ ಕರ್ಮಯೋಗವನ್ನು ತಿಳಿಸುವುದು ಪ್ರಾರಂಭಿಸಿದ್ದಾನೆ. ಇಲ್ಲಿಂದ ಬರುವ ಶ್ಲೋಕಗಳಲ್ಲಿ ಎರಡು ಯೋಗಗಳೊಂದರ ವಿವರ ವಿವರಿಸಲ್ಪಡುತ್ತದೆ. ಎರಡು ಯೋಗಗಳಲ್ಲಿ ಒಂದು ಕರ್ಮಯೋಗ **(ರಾಜಯೋಗ)**, ಎರಡು ಬ್ರಹ್ಮಯೋಗ **(ಜ್ಞಾನಯೋಗ)**. ಪಾಪಪುಣ್ಯ ಬಂಧನಗಳಿಗೆ ಸಂಬಂಧಿಸಿದ ವಿಷಯಗಳೆಲ್ಲವೂ ಈ ಎರಡು ಯೋಗಗಳಲ್ಲಿಯೇ ಒಳಪಟ್ಟಿವೆ. ಆದ್ದರಿಂದ ಅವುಗಳ ವಿವರ ತಿಳಿಸುವ ಶ್ಲೋಕಗಳ ಪಕ್ಕದಲ್ಲಿ ಆಯಾ ಯೋಗಗಳ ಹೆಸರು ಬ್ರಾಕೇಟ್‌ನಲ್ಲಿ ಗರುತಿಸಲ್ಪಟ್ಟಿರುವುದು ಗಮನಿಸಬೇಕು. ಇಲ್ಲಿಂದ ಕರ್ಮಯೋಗ ವಿವರ ಪ್ರಾರಂಭವಾಗುತ್ತಿದೆ ಎಂದು ತಿಳಿಸುತ್ತಾ, ಈ ಕೆಳಗಿನ ಶ್ಲೋಕ ಹೇಳಲಾಗಿದೆಯೆಂದು ಗ್ರಹಿಸಬೇಕು.

**(1) ಶ್ಲೋ॥ 39 : ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇತ್ವಿಮಾಂಶೃಣು।**
**ಬುದ್ಧ್ಯಾ ಯುಕ್ತೋ ಯಯಾ ಪಾರ್ಥ! ಕರ್ಮಬಂಧಂ ಪ್ರಹಾಸ್ಯಸಿ॥**
**(ಕರ್ಮಯೋಗ)**

**ಭಾವಾರ್ಥ :** ಇಲ್ಲಿಯವರೆಗೂ ಶರೀರಗಳಲ್ಲಿ ಆತ್ಮಗಳ ವಿವರ ಇರುವ ಜ್ಞಾನವು ತಿಳಿಸಿದ್ದೇನೆ. ಇಲ್ಲಿಂದ ಕರ್ಮಬಂಧಗಳು ಉಂಟಾಗದ ಜ್ಞಾನವು ತಿಳಿಸುತ್ತೇನೆ ಕೇಳು.

**ವಿವರ :–** ಈ ಶ್ಲೋಕಕ್ಕಿಂತ ಮೊದಲು ಕರ್ಮಯೋಗಕ್ಕೆ ಸಂಬಂಧಿಸಿದ ಶ್ಲೋಕವು ಹೇಳಿ, ಅದು ಗುರುತಿಸಿದ್ದಾರೋ ಇಲ್ಲವೋ ಎಂದು ತಿಳಿದು, ಈಗ ಹೇಳುವುದು ಕರ್ಮವನ್ನು ನಾಶಮಾಡುವ ಕರ್ಮಯೋಗವೆಂದು ಎಚ್ಚರಿಕೆ ಮಾಡುತ್ತಾ ಈ ಶ್ಲೋಕ ಹೇಳಿದ್ದಾನೆ. ಈ ಮಾತಿನಿಂದ ಪ್ರತಿಯೊಬ್ಬರು ಇದಕ್ಕೂ ಮುನ್ನ ಕೇಳಿರುವುದು ಶರೀರ ಆತ್ಮಗಳ ಸಂಬಂಧ ಸಾಂಖ್ಯ ವಿವರವೆಂದು ಸುಲಭವಾಗಿ ತಿಳಿದುಕೊಳ್ಳುತ್ತಾರೆ. ಆತ್ಮಗಳು ಬೇರೆ ಎಂದು, ಯೋಗಗಳು ಬೇರೆಯೆಂದು ತಿಳಿದುಕೊಳ್ಳುವಂತೆ ಈ ಶ್ಲೋಕದ ಮುಖ್ಯ ಉದ್ದೇಶ. ಪ್ರಾರಂಭಿಸಿರುವುದು ಕರ್ಮಯೋಗ ವಿವರವಾದ್ದರಿಂದ, ಆ ಕರ್ಮಯೋಗವನ್ನು ಕುರಿತು ಭಗವಂತನು ಈ ವಿಧವಾಗಿ ಹೇಳುತ್ತಿದ್ದಾನೆ.

**(1) ಶ್ಲೋ॥ 40 : ನೇಹಾಭಿಕ್ರಮ ನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ।**
**ಸ್ವಲ್ಪ ಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್॥**
**(ಕರ್ಮಯೋಗ)**

**ಭಾವಾರ್ಥ:** ಕರ್ಮಯೋಗವನ್ನು ಆರಂಭಿಸಿ ಬಿಡುವುದರಿಂದ ಯಾವ ದೋಷವು ಇಲ್ಲ. ಸ್ವಲ್ಪ ಆಚರಿಸಿದರೂ ದೊಡ್ಡ ಕರ್ಮಭಯದಿಂದ ಕಾಪಾಡುತ್ತದೆ.

**ವಿವರ :** ಕರ್ಮಯೋಗವನ್ನು ಆರಂಭಿಸಿದ ನಂತರ ಬಿಡುವುದರಿಂದ ಏನಾದರು ದೋಷ ಉಂಟಾಗುತ್ತದೆಂಬುವುದು ಏನೂ ಇಲ್ಲ. ಪಾಪಪುಣ್ಯ ಬಂಧಗಳಿಂದ ತಪ್ಪಿಸಿಕೊಳ್ಳುವುದಕ್ಕೆ ಕರ್ಮಯೋಗವೇ ಸಾಧನೆ. ಕರ್ಮಯೋಗ ಸ್ವಲ್ಪಕಾಲ ಆಚರಿಸಿದರೂ ಆ ಕಾಲದಲ್ಲಿ ಉಂಟಾಗುವ ಭಯಂಕರ ಕರ್ಮಬಂಧಗಳಿಂದ ಕಾಪಾಡುತ್ತಾನೆ. ಆಚರಿಸಿದ ಕರ್ಮಯೋಗ ಕಡಿಮೆಯಾದರೂ ಆ ಸಮಯದಲ್ಲಿ ದೊಡ್ಡ ಕರ್ಮವನ್ನು ತೆಗೆದುಹಾಕುತ್ತದೆ. ಇನ್ನೂ ಯೋಗ ವಿಷಯ ಅರ್ಥವಾಗದವರು, ಯೋಗವೆಂದರೆ ಏನೋ ತಿಳಿಯದವರು ಹೇಗಿರುತ್ತಾರೆ ಎಂದರೆ!

**(1) ಶ್ಲೋ॥ 41 : ವ್ಯವಸಾಯಾತ್ಮಿಕಾ ಬುದ್ಧಿ ರೇಕೇಹ ಕುರುನನ್ದನ !**
**ಬಹುಶಾಖಾ ಹ್ಯನನ್ತಾಶ್ಚ ಬುದ್ಧಯೋಽವ್ಯವಸಾಯಿನಾಮ್॥**
**(ಪ್ರಕೃತಿ)**

**ಭಾವಾರ್ಥ :** ಯೋಗದಲ್ಲಿ ಬುದ್ಧಿ ಇರುವವರು ಒಂದೇ ನಿಶ್ಚಯದಿಂದ ಇರುತ್ತಾರೆ. ಬೇರೆ ಅಭಿಪ್ರಾಯಗಳು ಉಂಟಾಗುವವರಿಗೆ ಬುದ್ಧಿ ಶಾಕೋಪ ಶಾಖೆಗಳಾಗಿರುತ್ತದೆ.

**ವಿವರ :** ಜ್ಞಾನವೆಂದರೆ ಏನೆಂದು, ಯೋಗವೆಂದರೆ ಏನೆಂದು, ಆತ್ಮ ಜೀವಾತ್ಮಗಳೆಂದರೆ ಏನೆಂದು ತಿಳಿದು ಪರಮಾತ್ಮ ಸನ್ನಿಧಿ (ಮೋಕ್ಷ) ಹೊಂದಬೇಕೆಂದುಕೊಂಡವರಿಗೆ ಅವರ ನಿರ್ಣಯವನ್ನು ಕೆಡಿಸುವುದಕ್ಕೆ ಎಷ್ಟು ಆತಂಕಗಳು ಏರ್ಪಟ್ಟರೂ, ಅವರು ಆ ಮಾರ್ಗವನ್ನು ಬಿಡುವುದಿಲ್ಲ. ದೈವವೊಂದರ ಬೆಲೆ ತಿಳಿದು ಪರಮಾತ್ಮನನ್ನು ಸೇರಬೇಕೆಂದುಕೊಂಡವರು ತಮಗೆ ಪ್ರಿಯಾತಿಪ್ರಿಯವಾದವರನ್ನೂ ಸಹ ಬಿಡುವುದಕ್ಕೆ ಇಷ್ಟಪಡುತ್ತಾರೆ, ಆದರೆ ತಮ್ಮ ಮಾರ್ಗವನ್ನು ಬಿಡುವುದಕ್ಕೆ ಇಷ್ಟಪಡುವುದಿಲ್ಲ. ಪ್ರಾಪಂಚಿಕ ವಿಷಯಗಳಲ್ಲಿ ಮುಳಿಗಿದವರಿಗೆ ಜ್ಞಾನಮಾರ್ಗವನ್ನು ಆಶ್ರಯಿಸಿದವರ ದೃಢತ್ವ ಅರ್ಥವಾಗದಿರಲು, ತಮ್ಮನ್ನು ಮತಿಹೀನರಾಗಿ ಲೆಕ್ಕಿಸಿದರು ಅವರು ದುಃಖಪಡದೆ ಇತರರಲ್ಲಿ ಎಷ್ಟು ಅಜ್ಞಾನ ಇರುವುದು ಕಾಣಿಸುತ್ತಿರುವಾಗ, ಅವರು ಆ ಅಜ್ಞಾನದಲ್ಲಿ ಬೀಳದಂತೆ ಜಾಗ್ರತೆಬೀಳುತ್ತಾ, ಜ್ಞಾನಮಾರ್ಗದಲ್ಲಿ ಒಂದೇ ದೃಢತ್ವಹೊಂದಿರುತ್ತಾರೆ. ಇನ್ನೂ ಜ್ಞಾನವೆಂದರೆ ಏನೋ ಅದರ ವಾಸನೆಯೂ ಸಹ ತಿಳಿಯದವರು ಅವರ ಮನೋ ನಿರ್ಣಯವನ್ನು ನಿಜದೈವದ ಮೇಲೆ ಇಲ್ಲದಂತೆ, ಪ್ರಪಂಚ ಸಂಬಂಧವಾಗಿ ಅನೇಕ ವಿಷಯಗಳಲ್ಲಿ ಅನೇಕ ವಿಧಗಳಲ್ಲಿ ಲಗ್ನವಾಗಿರುತ್ತಾರೆ. ಇನ್ನೂ ಕೆಲವರು ಹೇಗಿರುತ್ತಾರೆಂದರೆ!

**(1) ಶ್ಲೋ॥ 42 : ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದನ್ತ್ಯವಿಪಶ್ಚಿತಃ ।**
**ವೇದವಾದರತಾಃ ಪಾರ್ಥ! ನಾನ್ಯ ದಸ್ತೀತಿ ವಾದಿನಃ ॥**

**(ಪ್ರಕೃತಿ)**

**ಭಾವಾರ್ಥ :** ವೇದಗಳಲ್ಲಿನ ವಿಷಯಗಳನ್ನು ಪುಷ್ಪಗಳಲ್ಲಿನ ಜೇನಿನಂತೆ ಸಿಹಿಯಾದ ಮಾತುಗಳ ರೂಪಗಳಲ್ಲಿ ಹೇಳಿಕೊಳ್ಳುತ್ತಾರೆ. ಅಜ್ಞಾನಿಗಳಾದರೂ ಜ್ಞಾನಿಗಳಂತೆ ಇದ್ದು ಪ್ರಜೆಗಳಿಗೆ ಲಾಭ ಬರುವ ಕೆಲಸಗಳನ್ನು, ಸುಖ ಉಂಟಾಗುವ ಕೆಲಸಗಳನ್ನು ಬೋಧಿಸುತ್ತಿರುತ್ತಾರೆ.

**ವಿವರ :** ಈ ದಿನ ಕೆಲವರು ಗುರುಗಳು ಎನಿಸಿಕೊಂಡವರು, ಸ್ವಾಮಿಗಳು ಎನಿಸಿಕೊಂಡವರು, ತಮ್ಮ ತಮ್ಮ ಉಪನ್ಯಾಸಗಳಲ್ಲಿ ಎಷ್ಟೋ ಮಾತುಗಳಲ್ಲಿ ಹೊಂದಾಣಿಕೆಯಿಂದ, ಕೇಳುವವರಿಗೆ ಇಂಪಾಗಿ ಕಾಣಿಸುವಂತೆ ವೇದಗಳಲ್ಲಿನ ವಿಷಯಗಳನ್ನೇ ಆಸಕ್ತಿಯಾಗಿ ಹೇಳುತ್ತಿರುತ್ತಾರೆ. ಆತ್ಮ ಪರಮಾತ್ಮಗಳ ವಿಷಯಗಳನ್ನು ಬಿಟ್ಟು ಮಾನವರ ಕೋರಿಕೆಗಳು ನೆರವೇರುವಂತೆ,

ಸುಖಗಳು ಉಂಟಾಗುವಂತೆ, ಕಷ್ಟಗಳು ಹೋಗುವಂತೆ, ಅನೇಕ ವಿಧಗಳಾಗಿ ಬೋಧಿಸಿ ಅವುಗಳೇ ನಿಜವಾದ ಜ್ಞಾನ ಮಾರ್ಗವೆಂದೂ ಸಹ ಹೇಳುತ್ತಿರುತ್ತಾರೆ. ಅವು ಹೇಗಿರುತ್ತವೆ ಎಂದರೆ ಕೆಳಗಿನ ಶ್ಲೋಕದಲ್ಲಿ ನೋಡಿರಿ

**(1) ಶ್ಲೋ॥ 43 : ಕಾಮಾತ್ಮಾನಃ ಸ್ವರ್ಗಪರಾ ಜನ್ಮ ಕರ್ಮಫಲಪ್ರದಾಮ್ ।**
**ಕ್ರಿಯಾವಿಶೇಷ ಬಹುಳಾಂ ಭೋಗೈಶ್ವರ್ಯಗತಿಂ ಪ್ರತಿ ॥**

**(ಪ್ರಕೃತಿ)**

**ಭಾವಾರ್ಥ:** ಸುಖಗಳನ್ನುಂಟುಮಾಡುವ ಅವರ ಮಾತುಗಳು ಜನ್ಮ ಕರ್ಮ ಫಲಗಳು ಹೊಂದುವ ಅನೇಕ ಕ್ರಿಯೆಗಳನ್ನು ಪ್ರೇರೆಪಿಸುವವಾಗಿರುತ್ತವೆ. ಅಂತಹ ಕೆಲಸಗಳು ಮಾಡುವುದರಿಂದ ಇಹಲೋಕ ಸುಖಗಳು ಭೋಗಗಳು ಬರುತ್ತಿರುತ್ತವೆ.

**ವಿವರ :** ಕೆಲವರು ವೇದ ವಿಷಯಗಳನ್ನೇ ಬೋಧನೆಮಾಡುತ್ತಾ, ಆ ಬೋಧನೆಯಲ್ಲಿ ವ್ರತಕ್ರತುಗಳು ಯಜ್ಞಯಾಗಗಳ ವಿಷಯಗಳನ್ನು ತಿಳಿಸುತ್ತಾ, ಇಂತಹ ವೇದಗಳಲ್ಲಿ ತಿಳಿಸಿದಂತೆ ಯಜ್ಞಮಾಡುವುದರಿಂದ ಇಂತಹ ಫಲಿತ ಉಂಟಾಗುತ್ತದೆಂದು, ಇಂತಹ ವ್ರತ ಮಾಡುವುದರಿಂದ ಬಂದಿರುವ ಕಷ್ಟಗಳು ಹೋಗಿ ಸುಖಗಳು ಉಂಟಾಗುತ್ತವೆಂದು ಬೋಧಿಸಿ, ಮನುಜರನ್ನು ಆ ಕೆಲಸಗಳು ಮಾಡುವುದಕ್ಕೆ ಸಿದ್ಧರಾಗುವಂತೆ ಮಾಡುತ್ತಾರೆ. ಹಾಗೆ ಮಾಡುವುದರಿಂದ ಇಹಲೋಕ ಸೌಖ್ಯಗಳು ಪ್ರಾಪ್ತಿಸುತ್ತವೆ. ಮತ್ತು ಆ ಕೆಲಸಗಳು ಮಾಡುವುದರಿಂದ ನಮಗೆ ತಿಳಿಯದೇ ಕರ್ಮವೂ ಸಹ ಬಂದು ಜನ್ಮಗಳಿಗೆ ಕಾರಣವಾಗುತ್ತದೆ. ಅಂತಹ ಕೆಲಸಗಳಿಂದ ಕರ್ಮಗಳು ಉಂಟಾಗುತ್ತವೆ ಆಗಲಿ ದೈವಸನ್ನಿಧಿಯಾದ ಮೋಕ್ಷಪ್ರಾಪ್ತಿ ಹೊಂದುವುದಿಲ್ಲ. ಯಾವುದು ಒಳ್ಳೆಯದೆಂದು ತಿಳಿಯದೆ ಸಹಜವಾಗಿ ಪ್ರಪಂಚ ಸುಖಗಳನ್ನೇ ಆಕಾಂಕ್ಷಿಸುವ ಪ್ರಜೆಗಳಿಗೆ, ಆ ಸುಖಗಳನ್ನೇ ಕುರಿತು ಹೇಳಿ ಅದಕ್ಕೆ ಅಗತ್ಯವಾದ ಕೆಲಸಗಳನ್ನೇ ಮಾಡುವಂತೆ ಬೋಧಿಸುವವರಿಗೂ ಸಹ ಕರ್ಮಉಂಟಾಗಿ ಜನ್ಮಗಳು ಉಂಟಾಗುತ್ತವೆಂದು, ಮೇಲಿನ ಶ್ಲೋಕದ ವಿವರವಾದರೆ, ಅಂತಹ ಬೋಧನೆಗಳು ಕೇಳಿದ ಪ್ರಜೆಗಳನ್ನು ಕುರಿತು ಭಗವಂತನು ಈ ವಿಧವಾಗಿ ಕೆಳಗಿನ ಶ್ಲೋಕದಲ್ಲಿ ಹೇಳುತ್ತಿದ್ದಾನೆ.

**(1) ಶ್ಲೋ॥ 44 : ಭೋಗೈಶ್ವರ್ಯ ಪ್ರಸಕ್ತಾನಾಂ ತಯಾ ಪಹೃತಚೇತಸಾಮ್ ।**
**ವ್ಯವಸಾಯಾತ್ಮಿಕಾ ಬುದ್ಧಿ ಸ್ಸಮಾಧೌ ನ ವಿಧೀಯತೇ ॥**

**(ಪ್ರಕೃತಿ)**

**ಭಾವಾರ್ಥ :** ಕೋರಿಕೆಗಳಿಂದ ಆಕರ್ಷಿಸಿದ ಮನಸ್ಸು ಇರುವವರು ಅಂತಹ ಸುಖಗಳನ್ನೇ ಆಶ್ರಯಿಸುತ್ತಾರೆ. ಅವರ ಮನಸ್ಸಿಗೆ ಆತ್ಮ ವಿಜ್ಞಾನದಾಯಕವಾದಂತಹ ಜ್ಞಾನವು ಎಂದಿಗೂ ಇಷ್ಟವಾಗುವುದಿಲ್ಲ.

**ವಿವರ :** ಮಾನವರಿಗೆ ಕೋರಿಕೆಗಳಿರುವುದು, ಕಷ್ಟಗಳು ಇಲ್ಲದಂತೆಹೋಗಿ ಸುಖಗಳು ಉಂಟಾಗಲೆಂದು ಆಸೆ ಇರುವುದು ಸಹಜವೇ. ಸಹಜವಾಗಿ ಅಂತಹ ಮನಸ್ಸು ಇರುವವರಿಗೆ ಅವರ ಕೆಲಸಗಳು ನೆರವೇರುವಂತೆ, ಇಂತಹ ಶ್ಲೋಕವು ಇಷ್ಟುಸಲ ಓದಿದರೆ ಈ ಕೋರಿಕೆ ನೆರವೇರುತ್ತದೆಂದು, ಈ ಮಂತ್ರದಿಂದ ಈ ಕೋರಿಕೆ, ಇಂತಹ ವ್ರತದಿಂದ ಇಂತಹ ಕಷ್ಟ ಹೋಗುತ್ತದೆಂಬ ಸ್ವಾಮಿಗಳ ಮಾತುಗಳು ಚೆನ್ನಾಗಿ ಕಾಣಿಸಿದಾಗ, ಅಂತಹವರನ್ನೇ ಹೆಚ್ಚಾಗಿ ಜನರು ಆಶ್ರಯಿಸಿ ಅಂತಹ ಕೆಲಸಗಳನ್ನೇ ಮಾಡುತ್ತಾರೆ. ಆ ಕೆಲಸಗಳು ಮಾಡುವುದರಿಂದ ಅನೇಕ ಜೀವನ ಸುಖಗಳಲ್ಲಿಯೇ ಅವರ ಮನಸ್ಸು ಸಿಲುಕಿಕೊಂಡು, ಒಂದಕ್ಕೊಂದು ಸಂಬಂಧವಿಲ್ಲದ ಭಿನ್ನವಾದ ಕೆಲಸಗಳು ಮಾಡುತ್ತಾ, ಪ್ರಕೃತಿ ಸುಖಗಳಿಗೆ ಅತೀತವಾದ ಮತ್ತು ಜಪ, ತಪ, ವ್ರತಕ್ರತುಗಳಿಗೆ ತಿಳಿಯದ ಆತ್ಮ ಪರಮಾತ್ಮನನ್ನು ಕುರಿತು ತಿಳಿದುಕೊಳ್ಳಲಾರರು. ಆತ್ಮಜ್ಞಾನ ವಿಷಯಗಳು ಎಷ್ಟುಮಾತ್ರ ಅವರಿಗೆ ಇಷ್ಟವಾಗುವುದಿಲ್ಲ, ಅರ್ಥವಾಗುವುದಿಲ್ಲ.

**1) ಶ್ಲೋ॥ 45 : ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ! ।**
**ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ॥**
**(ಬ್ರಹ್ಮಯೋಗ, ಕರ್ಮಯೋಗ)**

**ಭಾವಾರ್ಥ :** ಮೂರು ಗುಣಗಳ ವಿಷಯಗಳೇ ವೇದಗಳು. ವೇದ ಭೂಯಿಷ್ಟವಾದ ಆ ಮೂರು ಗುಣಗಳನ್ನು ಪೂರ್ತಿಯಾಗಿ ಬಿಟ್ಟುಬಿಡು. ಸುಖದುಃಖಗಳು, ಲಾಭನಷ್ಟಗಳು ಮೊದಲಾದ ದ್ವಂದ್ವಗಳನ್ನು ಬಿಟ್ಟಂತೆ ಯೋಗಕ್ಷೇಮ ಎನ್ನುವುದನ್ನೂ ಸಹ ಬಿಟ್ಟು ನಿತ್ಯವಾದ ದೈವವನ್ನು ಸೇರು.

**ವಿವರ :** ಮೊದಲ ಶ್ಲೋಕದಲ್ಲಿ ಹೇಳಿದಂತೆ ಭೋಗೈಶ್ವರ್ಯಗಳನ್ನು ಆಶ್ರಯಿಸದೆ ದೈವವನ್ನು ತಿಳಿದುಕೋ ಎಂದು ಹಿತವು ಹೇಳುತ್ತಾ ಭಗವಂತನು ಹೀಗೆ ಹೇಳಿದ್ದಾನೆ. ಪ್ರತಿ ಮನುಷ್ಯನಿಗೂ ತಲೆಯಲ್ಲಿ ಎಷ್ಟೋ ಗುಣಗಳು ಉದ್ಭವಿಸುತ್ತಿರುತ್ತವೆ. ಆ ಗುಣಸಂಕಲ್ಪಗಳಿಂದಲೇ ಮಾನವರೆಲ್ಲರೂ ಅನೇಕ ಕಾರ್ಯಗಳು ಮಾಡುತ್ತಿದ್ದಾರೆ. ಅನೇಕ ಕಾರ್ಯಗಳಿಗೆ

ಕಾರಣವಾದ ತಲೆಯಲ್ಲಿನ ಗುಣಗಳನ್ನು ವಿವರಿಸಿ ನೋಡಿದರೆ ಮೂರು ವಿಧಗಳಾಗಿವೆ, **1) ತಾಮಸ 2) ರಾಜಸ 3) ಸಾತ್ವಿಕ,** ಈ ಮೂರು ಗುಣಗಳನ್ನೇ ಭಗವಂತನು ಮಾಯೆ ಎಂದು ವಿಜ್ಞಾನಯೋಗದಲ್ಲಿ ಹೇಳಿದ್ದಾನೆ. ಮಾಯರೂಪವಾದ ಗುಣಗಳ ವಿಷಯಗಳೇ ವೇದಗಳಲ್ಲಿವೆ. ಆದ್ದರಿಂದ ವೇದಗಳಲ್ಲಿನ ಕಾರ್ಯಾಚರಣೆಗಳಾದ ಯಜ್ಞಯಾಗಾದಿಗಳು, ವ್ರತಕ್ರತುಗಳು ಮೊದಲಾದ ಎಲ್ಲಾ ಬಿಟ್ಟು ಯಾವ ಗುಣಸಂಕಲ್ಪ ಇಲ್ಲದಂತೆ ಎಂದರೆ ತಲೆಯಲ್ಲಿ ಯಾವ ಸಣ್ಣ ಯೋಚನೆಯೂ ಸಹ ಬಾರದಂತೆ ಮಾಡಿಕೊಂಡು, ಬ್ರಹ್ಮಯೋಗವಾಚರಿಸಿ ದೈವವನ್ನು ತಿಳಿಯಿರಿ.

ಹಾಗೆ ಬ್ರಹ್ಮಯೋಗ ಸಾಧ್ಯವಾಗದೆ ಹೋದರೂ ದ್ವಂದ್ವಗಳಾದ ಲಾಭನಷ್ಟಗಳು, ಸುಖದುಃಖಗಳು ಬಿಟ್ಟು ಕರ್ಮಯೋಗವಾಚರಿಸಿ ದೈವವನ್ನು ಸೇರು. ಈ ಶ್ಲೋಕದಲ್ಲಿ ಮತ್ತು 44ನೇ ಶ್ಲೋಕದಲ್ಲಿ ಹೇಳಿದಂತೆ ಭೋಗೈಶ್ವರ್ಯಗಳನ್ನು ಆಸೆಪಟ್ಟು, ಅವುಗಳಿಗೆ ಸಂಬಂಧಿಸಿದ ವ್ರತಕ್ರತುಗಳು ಮಾದಲಾದ ಕೆಲಸಗಳು ಮಾಡದೆ ದೇವರನ್ನು ಸೇರುವ ಎರಡೇ ಎರಡು ಮಾರ್ಗಗಳಾದ ಬ್ರಹ್ಮಯೋಗ, ಕರ್ಮಯೋಗವನ್ನು ಆಶ್ರಯಿಸೆಂದು ಹಿತವು ಹೇಳಲಾಗಿದೆ. ಇದರಲ್ಲಿ ನಮ್ಮ ಮನವಿಯಾಗಿ ಹೇಳುವುದೇನೆಂದರೆ, ಇಲ್ಲಿಯವರೆಗೂ ಆಧ್ಯಾತ್ಮಿಕದಲ್ಲಿ ಅತಿರಥ ಮಹಾರಥರಾದ ಸ್ವಾಮಿಗಳೆಷ್ಟೋ ಜನ ಗೀತೆಯನ್ನು ಕುರಿತು ಬರೆದಿದ್ದಾರೆ. ಅದರಲ್ಲಿ ಈ ಶ್ಲೋಕದಲ್ಲಿ ಮೊದಲ ವಾಕ್ಯವು ಬ್ರಹ್ಮಯೋಗಕ್ಕೆ ಸಂಬಂಧಿಸಿರುವುದೆಂದು, ಎರಡನೇ ವಾಕ್ಯವು ಕರ್ಮಯೋಗಕ್ಕೆ ಸಂಬಂಧಿಸಿರುವುದೆಂದು ಗುರುತಿಸಿ ಬರೆಯಲಾರದೆ ಹೋಗಿದ್ದಾರೆ. ಆದ್ದರಿಂದ ನಾವು ಈಗ ಹೇಳಿದ ವಿವರವನ್ನು ತಪ್ಪಾಗಿ ತಿಳಿಯಬಾರದೆಂದು, ಯೋಚಿಸಿದರೆ **ಗುಣ ಸಂಕಲ್ಪಗಳಿಲ್ಲದ್ದು ಬ್ರಹ್ಮಯೋಗವೆಂದು, ಸುಖದುಃಖ, ಲಾಭನಷ್ಟ, ಯೋಗಕ್ಷೇಮಗಳ ಧ್ಯಾಸವಿಲ್ಲದೆ ಕೆಲಸ ಮಾಡುವುದು ಕರ್ಮಯೋಗವೆಂದು ಅವುಗಳ ಮೂಲಕ ದೈವವನ್ನು ತಿಳಿಯೆಂದು ಭಗವಂತನು ಹೇಳಿದಂತೆ ಸುಲಭವಾಗಿ ಅರ್ಥವಾಗುತ್ತದೆ**. 44ನೇ ಶ್ಲೋಕದಲ್ಲಿ ಭೋಗೈಶ್ವರ್ಯಗಳನ್ನು ಕುರಿತು ಹೇಳಿ 45ನೇ ಶ್ಲೋಕದಲ್ಲಿ ಅವುಗಳಿಗೆ ಸಂಬಂಧವಿಲ್ಲದ ಮಾರ್ಗವನ್ನು ಸೂಚಿಸಿದ್ದಾನೆಂದು ತಿಳಿಯಬೇಕು. ಇದು ದೈವವಿಷಯ ಆದಕಾರಣ ಅರ್ಥಶೂನ್ಯವು, ಭಾವಶೂನ್ಯವು ಆಗದಂತೆ ಭಗವಂತನು ಯಾವ ಭಾವವನ್ನು ತಿಳಿಸಿದ್ದಾನೋ, ಆ ಭಾವನೆಯನ್ನೇ ನಾವು ಹೊಂದಿಸುತ್ತಿದ್ದೇವೆಂದು ತಿಳಿಸುತ್ತಿದ್ದೇವೆ.

**(1) ಶ್ಲೋ॥ 46 : ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲು ತೋದಕೇ ।**
**ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥**
**(ಕರ್ಮಯೋಗ)**

**ಭಾವಾರ್ಥ :** ಬಾವಿತುಂಬ ಇರುವ ನೀರು ಯಾವ ವಿಧವಾಗಿ ನಿತ್ಯವು ಕುಡಿಯುವುದಕ್ಕೆ ಸ್ನಾನ ಮಾಡುವುದಕ್ಕೆ ಉಪಯೋಗಪಡುತ್ತಿದೆಯೋ, ಆ ವಿಧವಾಗಿಯೇ ಸರ್ವವೇದ ಗಳಿಂದಲೂ ಸಹ ನಮಗೆ ನಿತ್ಯವು ಉಪಯೋಗವು ಇದೆಯೆಂದು ಬ್ರಹ್ಮಜ್ಞಾನಿಯಾದವನಿಗೆ ತಿಳಿಯುತ್ತದೆ.

**ವಿವರ :** ನಮಗೆ ನಿತ್ಯವು ಸ್ನಾನ ಮಾಡುವುದಕ್ಕೆ ಕುಡಿಯುವುದಕ್ಕೆ ಉಪಯೋಗುಪಡುವ ನೀರು ಬಾವಿಯಲ್ಲಾಗಲಿ ಅಥವಾ ಕೆರೆಯಲ್ಲಾಗಲಿ ಪೂರ್ತಿಯಾಗಿ ತುಂಬಿ ಸಮೃದ್ಧಿಯಾಗಿ ಇದ್ದರೂ ಆ ನೀರೆಲ್ಲವೂ ಒಂದೇ ಬಾರಿ ಉಪಯೋಗಪಡುವುದಿಲ್ಲ. ಅದರಿಂದ ನಿತ್ಯವು ಸ್ವಲ್ಪ ಸ್ವಲ್ಪವಾಗಿ ನೀರನ್ನು ನಾವು ಉಪಯೋಗಿಸಿಕೊಳ್ಳುತ್ತೇವೆ. ಹಾಗೆಯೇ ನಮ್ಮ ಶಿರಸ್ಸೆಂಬ ಬಾವಿಯಲ್ಲಿ ಗುಣಗಳೆಂಬ ನೀರು ತುಂಬಿ ಸಮೃದ್ದಿಯಾಗಿದೆ. ಬಾವಿಯಲ್ಲಿನ ನೀರು ಉಪಯೋಗವಾಗುವಂತೆ ನಮ್ಮ ತಲೆಯಲ್ಲಿನ ಗುಣಗಳೆಲ್ಲವೂ ಒಂದೇ ಬಾರಿ ಯಾವ ಮನುಷ್ಯನಿಗೂ ಉಪಯೋಗಪಡದೆ ನಿತ್ಯವು ಕೆಲವು ಗುಣಗಳು ಮಾತ್ರ ಉಪಯೋಗ ಆಗುತ್ತಿವೆ. ಒಂದೇಬಾರಿಗೆ ಭಾವಿಯಲ್ಲಿನ ನೀರೆಲ್ಲವೂ ಹೇಗೆ ಉಪಯೋಗ ಆಗುವುದಿಲ್ಲವೋ, ಹಾಗೆ ತಲೆಯಲ್ಲಿನ ಗುಣಗಳೆಲ್ಲವೂ ಒಂದೇಬಾರಿ ಯಾವ ಮನುಷ್ಯನಿಗೂ ಉಪಯೋಗಪಡುವುದಿಲ್ಲ. ನಿತ್ಯ ಜೀವನದಲ್ಲಿ ಮಾನವನು ಕೆಲಸಗಳು ಮಾಡುವುದಕ್ಕೆ ಗುಣಗಳೇ ಅಗತ್ಯ. ಅವು ಶಿರಸ್ಸಿನಲ್ಲಿ ಗುಣಚಕ್ರದಲ್ಲಿ 36 ಗುಣಗಳಾಗಿದ್ದು, ಒಂದೊಂದು ಗುಣಕ್ಕೆ ಅನೇಕ ಉಪಗುಣಗಳು ಇದ್ದು ಬಹಳ ದೊಡ್ಡ ಸಂಖ್ಯೆಯಾಗಿವೆ. ಆ ಒಟ್ಟು ಗುಣಗಳೆಲ್ಲವೂ ಮನುಷ್ಯನಿಗೆ ನಿತ್ಯವೂ ಒಂದೇ ವಿಧವಾಗಿ ಉಪಯೋಗಪಡದೆ ಒಂದುದಿನ ಸ್ವಲ್ಪ, ಮತ್ತೊಂದು ದಿನ ಹೆಚ್ಚಾಗಿ, ಇನ್ನೊಂದು ದಿನ ಬಹಳ ಸ್ವಲ್ಪ ಉಪಯೋಗ ಪಡುತ್ತದೆ. ಉದಾಹರಣೆಗೆ ಒಬ್ಬ ಮನುಷ್ಯ ಸ್ನಾನಮಾಡಿ ಬಟ್ಟೆತೊಳೆದ ದಿನ ಸ್ವಲ್ಪ ನೀರು ಅಧಿಕವಾಗಿ ಖರ್ಚಾಗುತ್ತವೆ. ಸ್ನಾನಮಾಡದ ದಿನ, ಬಟ್ಟೆಗಳು ತೊಳೆಯದ ದಿನ, ನೀರಿನ ಖರ್ಚು ಸ್ವಲ್ಪ ಕಡಿಮೆಯಾಗುತ್ತದೆ. ಹಾಗೆ ಮನುಷ್ಯನಿಗೂ ಸಹ ತೀವ್ರಯೋಚನೆ ಮಾಡಿದ ದಿನದಂದು ಹೆಚ್ಚಾಗಿ ಗುಣಗಳು, ಯೋಚನೆ ಮಾಡದೆ ವಿರಾಮವಾಗಿ ನಿದ್ರೆಯಲ್ಲಿ ಕಳೆದ ದಿನದಂದು ಗುಣಗಳು ಕಡಿಮೆಯಾಗಿ, ಹಾಗೆ ಇತರರೊಂದಿಗೆ ಮಾತನಾಡಿದ ದಿನದಂದು ಸ್ವಲ್ಪ ಹೆಚ್ಚಾಗಿ, ಸೌಮ್ಯವಾಗಿರುವ ದಿನದಂದು ಕಡಿಮೆಯಾಗಿ ಗುಣಗಳು ಉಪಯೋಗ

ಪಡುತ್ತಿವೆ. ಪ್ರತಿ ಮಾನವನಿಗೂ ತಲೆಯಲ್ಲಿನ ಗುಣಗಳ ಉಪಯೋಗವು ನಿತ್ಯವು ಹೆಚ್ಚು ಕಡಿಮೆಯಾಗಿ ನಡೆಯುತ್ತಿದೆಯೆಂಬ ವಿಷಯವು ಬ್ರಹ್ಮಜ್ಞಾನ ತಿಳಿದವರಿಗೆ ಚೆನ್ನಾಗಿ ತಿಳಿಯುತ್ತದೆ. ಬ್ರಹ್ಮಜ್ಞಾನ ತಿಳಿಯದವರಿಗೆ ಬಾವಿಯಲ್ಲಿನ ನೀರಿನಂತೆ ಗುಣಗಳು ಉಪಯೋಗಪಡುತ್ತಿವೆ ಎಂಬ ಮಾತು ತಿಳಿದಿಲ್ಲ. ನಿತ್ಯವು ಗುಣಗಳ ಪ್ರಭಾವವು ತಮ್ಮಲ್ಲಿದ್ದರು, ಅವುಗಳನ್ನು ಗುರುತಿಸಲಾರದೆ, ಯೋಚನೆ ಮಾಡುವುದು ಸಹ ತಾವೇ ಎಂದು ತಿಳಿಯುತ್ತಿರುತ್ತಾರೆ.

ವೇದಗಳು ಎಂದರೆ ತ್ರಿಗುಣಗಳೆಂದು 45ನೇ ಶ್ಲೋಕದಲ್ಲಿ ಭಗವಂತನು ಹೇಳಿದ್ದಾನೆ, ಆದ್ದರಿಂದ 46ನೇ ಶ್ಲೋಕದಲ್ಲಿಯೂ ಸಹ ವೇದಗಳಿರುವ ಕಡೆ ಗುಣಗಳೆಂದೇ ಭಾವಿಸಬೇಕು. ಹಾಗಲ್ಲದೆ ಅನ್ಯದಾ ಬೇರೆ ಭಾವವನ್ನು ಉಪಯೋಗಿಸಿದರೆ ಭಗವಂತನ ಮಾತನ್ನೇ ತಿರಸ್ಕರಿಸಿದಂತಾಗುತ್ತದೆ.

**1) ಶ್ಲೋ॥ 47 : ಕರ್ಮಣ್ಯೇ ವಾಧಿಕಾರಸ್ತೇ ಮಾ ಫಲೇಷು ಕದಾಚನ ।**
**ಮಾ ಕರ್ಮಫಲ ಹೇತುರ್ಭೂ ಮಾರ್ತೇ ಸಜ್ಞೋಸ್ತ್ವ ಕರ್ಮಣಿ ॥**
**(ಕರ್ಮಯೋಗ)**

**ಭಾವಾರ್ಥ :** ಕರ್ಮ ಸಂಪಾದಿಸುವುದರಲ್ಲಿಯೇ ನಿನಗೆ ಅಧಿಕಾರವಿದೆ. ಕರ್ಮಫಲಗಳಲ್ಲಿ ಆಸೆ ಪಡಬೇಡ. ಕರ್ಮದ ಪಾಪಪುಣ್ಯ ಫಲಗಳಾದ ಕಷ್ಟಸುಖಗಳಿಗೆ ಕಾರಣನು ಆಗಬೇಡ. ಹಾಗೆ ಕರ್ಮಬರುತ್ತದೆಂದು ಅದಕ್ಕೆ ಸಂಬಂಧಿಸಿದ ಕೆಲಸಗಳು ಬಿಡಬೇಡ.

**ವಿವರ :** ಮೊದಲ ಶ್ಲೋಕದಲ್ಲಿ ಪ್ರತಿ ಮನುಷ್ಯನಿಗೂ ಗುಣಗಳಿಂದ ಯೋಚನೆಗಳು ಬರುತ್ತಿವೆ ಎಂದು, ಅವುಗಳಿಂದ ಕೆಲಸಗಳು ನಡೆಯುತ್ತಿವೆಂದು ತಿಳಿದುಕೊಂಡಿದ್ದೇವೆ. ಗುಣಗಳಿಂದ ನಡೆಯುವ ಕಾರ್ಯಗಳಲ್ಲಿ ಕರ್ಮ ಎನ್ನುವುದು ಒಂದಿದೆ. ಅದನ್ನೇ ಪಾಪಪುಣ್ಯಗಳೆನ್ನುತ್ತೇವೆ. ಅಗ್ನಿಗೆ ಹೊಗೆ ಅನುಸಂಧಾನವಾದಂತೆ ಕಾರ್ಯಗಳಿಗೆ ಕರ್ಮ, ಕರ್ಮಕ್ಕೆ ಕಾರ್ಯಗಳು ಅನುಬಂಧವಾಗಿವೆ. ಅಂದರೆ ಕೆಲಸಗಳಿಗೆ ಪಾಪಪುಣ್ಯಗಳು ಬರುವುದು, ಬಂದಿರುವ ಪಾಪ ಪುಣ್ಯಗಳನ್ನನುಸರಿಸಿ ಮತ್ತೆ ಕೆಲಸಗಳು ನಡೆಯುವುದು ಪ್ರತಿ ಜೀವರಾಶಿಗೂ ಪ್ರಕೃತಿ ಸಿದ್ಧವಾದುದು. ಪ್ರಕೃತಿ ಸಿದ್ಧವಾಗಿ ಮಾನವನು ಗತ ಜನ್ಮಗಳ ಪಾಪಪುಣ್ಯಗಳ ಪ್ರಾರಬ್ಧಕರ್ಮವನ್ನು ಅನುಭವಿಸುತ್ತಾ, ಈ ಜನ್ಮದಲ್ಲಿ ಕಾರ್ಯಗಳು ಮಾಡುತ್ತಿದ್ದಾನೆ. ಆ ಕಾರ್ಯಗಳಲ್ಲಿ ಅನುಬಂಧವಾದ ಕರ್ಮವನ್ನು ತಾನು ಮಾಡಿದ್ದೇ

ನೆಂದುಕೊಂಡು ಮತ್ತೆ ಕರ್ಮವನ್ನು ಮೂಟೆಕಟ್ಟಿಕೊಳ್ಳುತ್ತಿದ್ದಾನೆ. ನಂತರ ಜನ್ಮದಲ್ಲಿ ಅದನ್ನು ಅನುಭವಿಸಬೇಕಾಗಿಬರುತ್ತಿದೆ. ಇದು ಪ್ರಕೃತಿ ಸಿದ್ಧವಾದ ಪದ್ಧತಿಯಾದರೆ, ಅದಕ್ಕೆ ವಿರುದ್ಧವಾದ ಪರಮಾತ್ಮ ಪದ್ಧತಿಯೂ ಸಹ ಒಂದಿದೆ. ಅದು ಏನೆಂದರೆ! ಗತಜನ್ಮದಲ್ಲಿ ತನಗೆ ಅಂಟಿಕೊಂಡಿರುವ ಕರ್ಮ ಕಾರ್ಯಾಚರಣೆಯಾದಾಗ, ಆ ಕಾರ್ಯಾಚರಣೆಯಲ್ಲಿ ಅನುಸಂಧಾನವಾಗಿ ಬರುವ ಹೊಸ ಪಾಪಪುಣ್ಯಗಳನ್ನು (ಕರ್ಮವನ್ನು), ತನಗೆ ಯಾವ ಸಂಬಂಧವಿಲ್ಲದಂತೆ ಮಾಡಿಕೊಳ್ಳುವುದು, ಎಂದರೆ ಹೊಸ ಕರ್ಮವನ್ನು ತನಗೆ ಬಾರದಂತೆ ಮಾಡಿಕೊಳ್ಳುವುದು ಹೊಸಕರ್ಮ ಇಲ್ಲದಿದ್ದರೆ ಹೊಸದಾಗಿ ಬರುವ ಕಾರ್ಯಗಳು ಇರುವುದಿಲ್ಲ. ಆದ್ದರಿಂದ ಜೀವಾತ್ಮ ಹೊಸದಾಗಿ ಹುಟ್ಟಿ ಹೊಸ ಕೆಲಸಗಳು ಅನುಭವಿಸಬೇಕಾಗಿರುವುದು ಇಲ್ಲ. ಕಾರ್ಯಾಚರಣೆಯಲ್ಲಿರುವ ಕಾರ್ಯಗಳ ಮೂಲಕ ಹೊಸಕರ್ಮ ಅಂಟದಂತೆ ಮಾಡಿಕೊಂಡು, ಹೊಸ ಕಾರ್ಯಗಳನ್ನು ಕಾರ್ಯಾ ಚರಣೆಯಾಗದಂತೆ ತಪ್ಪಿಸಿಕೊಳ್ಳುವುದೇ ಪರಮಾತ್ಮ ಸಿದ್ಧವಾದ ಕೆಲಸ. ಪ್ರಕೃತಿ ಸಿದ್ಧವಾದ ಪದ್ಧತಿ ಅಂದರೆ **'ಪ್ರಕೃತಿಯನ್ನೇ ಸೇರುವ ಪದ್ಧತಿ'** ಎಂದು ಪರಮಾತ್ಮ ಸಿದ್ಧವಾದ ಪದ್ಧತಿ ಎಂದರೆ **"ಪರಮಾತ್ಮನನ್ನೇ ಸೇರುವ ಪದ್ಧತಿ"** ಎಂದು ಅರ್ಥಮಾಡಿ ಕೊಳ್ಳಬೇಕು.

ಭಗವಂತನು ಇಂತಹ ಎರಡು ಪದ್ಧತಿಗಳು ಇವೆಯೆಂದು ತಿಳಿಸುತ್ತಾ ಕರ್ಮವನ್ನು ಪ್ರಕೃತಿ ಸಿದ್ಧವಾಗಿ ಸಂಪಾದಿಸಿಕೊಳ್ಳಬಹುದು, ಅಥವಾ ಪರಮಾತ್ಮ ಸಿದ್ಧವಾಗಿ ಅದನ್ನು ಇಲ್ಲದಂತೆಯೂ ಸಹ ಮಾಡಿಕೊಳ್ಳಬಹುದು. ಈ ಎರಡು ಪದ್ಧತಿಗಳಲ್ಲಿ ಯಾವುದಾದರೂ ಒಂದನ್ನು ಆಚರಿಸಿ ಕರ್ಮವನ್ನು ಸಂಪಾದಿಸಿಕೊಳ್ಳುವುದರಲ್ಲಿಯೊ, ಅಥವಾ ಸಂಪಾದಿಸಿಕೊಳ್ಳದಂತೆ ಮಾಡಿಕೊಳ್ಳುವುದರಲ್ಲಿಯೊ, ಮಾನವನಿಗೆ ಅಧಿಕಾರವಿದೆ ಎಂದು ತಿಳಿಸಿದ್ದಾನೆ. **"ಕರ್ಮಣ್ಯೇ ವಾಧಿಕಾರಸ್ತೇ"** ಎಂದರೆ ಕರ್ಮವನ್ನು ಸಂಪಾದಿಸುವುದು, ಸಂಪಾದಿಸದೆ ಇರುವುದರಲ್ಲಿ ನಿನಗೆ ಅಧಿಕಾರ ಇದೆಯೆಂದು ತಿಳಿಯುತ್ತಿದೆ. ಹಾಗೆಯೇ ಕರ್ಮಫಲಗಳಾದ ಸುಖದುಃಖಗಳನ್ನು ಅನುಭವಿಸುವುದರಲ್ಲಿ ಯಾರಿಗೂ ಅಧಿಕಾರ ಇಲ್ಲ. ಕರ್ಮ ಒಂದುಬಾರಿ ಸಂಪಾದಿಸಿದಂತಾದರೆ ಅದು ಕಾರ್ಯರೂಪವಾಗಿ ಕಷ್ಟಸುಖಗಳಾಗಿ ಅನುಭವಕ್ಕೆ ಬರುತ್ತವೆ. ಸಂಪಾದಿಸಲ್ಪಟ್ಟಿರುವ ಕರ್ಮದಿಂದ ಉಂಟಾಗುವ ಕಷ್ಟಸುಖಗಳನ್ನು ಯಾರು ನಿವಾರಿಸಲಾರರು. ವಿಷ್ಣು, ಈಶ್ವರ, ಬ್ರಹ್ಮಾದಿ ದೇವತೆಗಳು ಸಹ ಅನುಭವಿಸಬೇಕಾಗಿರುತ್ತದೆ. ಆದ್ದರಿಂದ ಕರ್ಮಫಲವಾದ ಕಾರ್ಯಗಳಲ್ಲಿ ಯಾರಿಗೂ ಯಾವ ಆಧಿಕಾರವು ಇಲ್ಲ. ಅವು ಹೇಗೆ ಇದ್ದರೆ ಹಾಗೆ ಮಾಡಬೇಕಾಗಿರುತ್ತದೆ, ಮತ್ತು ಹಾಗೆ ಅನುಭವಿಸಬೇಕಾಗಿರುತ್ತದೆ.

ಅಸಲು ಕರ್ಮ ವಿಷಯವೇ ಹೀಗಿದೆ, ಆದ ಕಾರಣ ಕರ್ಮಫಲಗಳ ಮೇಲೆ ಆಸೆಪಟ್ಟು ಅವುಗಳಿಗೆ ಕಾರಣ ಭೂತನೆಂದುಕೊಂಡು ಹೊಸಕರ್ಮಗಳು ತಂದುಕೊಳ್ಳ ಬಾರದು. ಹಾಗೆಯೇ ಕೆಲಸಗಳು ಮಾಡಿದರೆ ಕರ್ಮಗಳು ಬರುತ್ತವೆಂದು ಆ ಕರ್ಮಗಳು ಬಾರದಂತೆ ಇರುವುದಕ್ಕೆ ಕೆಲಸಗಳು ಬಿಡಬೇಕೆಂದುಕೊಳ್ಳಬಾರದು. ಏಕೆಂದರೆ ಮೊದಲ ಕರ್ಮಾಚರಣೆಯೇ ನಂತರ ಮಾಡುವ ಕಾರ್ಯಗಳು, ಆದ್ದರಿಂದ ಕಾರ್ಯಗಳು ನೀನು ಮಾಡಬಾರದೆಂದುಕೊಳ್ಳುವುದು ತಪ್ಪು. ಯಾರು ಏನೆಂದುಕೊಂಡರು ಕರ್ಮದ ಪ್ರಕಾರ ನಡೆಯಬೇಕಾಗಿರುವವು ನಡೆದೆ ನಡೆಯುತ್ತವೆ. ಆದರೆ ನಿನಗೆ ಕರ್ಮ ಸಂಪಾದಿಸುವುದರಲ್ಲಿ ಮಾತ್ರವೇ ಅಧಿಕಾರವಿದೆ ಎಂದು, ಕೆಲಸಗಳು ಮಾಡುವುದರಲ್ಲಾಗಲಿ, ಅನುಭವಿಸುವು ದರಲ್ಲಾಗಲಿ ಅಧಿಕಾರ ಇಲ್ಲವೆಂದು ತಿಳಿಯಬೇಕು. ಇತರರು ಬರೆದಿರುವ ಗೀತೆಗಳಲ್ಲಿ ಈ ಶ್ಲೋಕಭಾವವು ಪೂರ್ತಿ ತಪ್ಪಾಗಿದೆ. **(ಕೆಲಸಗಳು ಮಾಡುವುದರಲ್ಲಿ ಅಧಿಕಾರ ಇದೆ, ಫಲಿತದ ಮೇಲೆಯೇ ಇಲ್ಲವೆಂದು ಬರೆದಿದ್ದಾರೆ. ಕೆಲಸಗಳು ಮಾಡುವುದರಲ್ಲಿ ಅಧಿಕಾರ ಇಲ್ಲ, ಫಲಿತದ ಮೇಲೆಯೇ ಇದೆಯೆಂದು ನಾವು ಬರೆದಿದ್ದೇವೆ.)**ಕೆಲಸದ ಮೇಲೆ ಅಧಿಕಾರ ಇಲ್ಲವೆಂದು, ನಿನ್ನ ಇಷ್ಟವಿದ್ದರೂ ಇಲ್ಲದಿದ್ದರೂ ಬಲವಂತವಾಗಿ ನಿನ್ನ ಕೈಯಿಂದ ಕೆಲಸ ಮಾಡಿಸಲ್ಪಡುತ್ತದೆಂದು ನೀನು ನಿನ್ನ ಕರ್ಮರೀತ್ಯ ಯುದ್ಧ ಮಾಡಬೇಕಾಗಿರುತ್ತದೆಂದು, ನಿನಗೆ ಇಷ್ಟವಿಲ್ಲದಿದ್ದರೂ ನಿನ್ನಿಂದ ಕರ್ಮ ಮಾಡಿಸಿ ತೀರುತ್ತದೆಂದು ಭಗವಂತನು ಹೇಳುವುದು ನಡೆದಿದೆ. ಇದನ್ನನುಸರಿಸಿ ಕೆಲಸದಮೇಲೆ ಅಧಿಕಾರ ಇಲ್ಲವೆನ್ನುವುದು ಸ್ಪಷ್ಟವಾಗಿ ತಿಳಿಯುತ್ತಿದೆ. ಆದ್ದರಿಂದ ನಾವು ಬರೆದಿರುವ ಭಾವನೆಯೇ ಈ ಶ್ಲೋಕಕ್ಕೆ ಸರಿಯಾದುದೆಂದು ಜ್ಞಾಪಕ ಮಾಡುತ್ತಿದ್ದೇವೆ. ಕೆಲಸಗಳು ಮಾಡುವುದರಲ್ಲಿ ಯಾರಿಗೂ ಅಧಿಕಾರ ಇಲ್ಲದಿರುವುದರಿಂದ, ಕೆಲಸಗಳು ಮಾಡುತ್ತಾ ಅವುಗಳಿಂದ ಉಂಟಾಗುವ ಕರ್ಮದಿಂದ ತಪ್ಪಿಸಿಕೊಳ್ಳುವುದಕ್ಕೆ ಕೆಳಗಿನ ಶ್ಲೋಕದಲ್ಲಿ ಹೀಗೆ ಹೇಳಿದ್ದಾನೆ.

**(1) ಶ್ಲೋ॥ 48 : ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾಧನಂಜಯ !।**
**ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ ॥**
**(ಕರ್ಮಯೋಗ)**

**ಭಾವಾರ್ಥ** : ಮಾಡುವ ಕೆಲಸಗಳಲ್ಲಿ ಉಂಟಾಗುವ ಲಾಭನಷ್ಟಗಳಲ್ಲಿ ಧ್ಯಾಸವಿಲ್ಲದೆ, ಒಳ್ಳೆಯ ಕೆಟ್ಟ ಕೆಲಸಗಳಲ್ಲಿ ಸಮಬುದ್ಧಿ ಇರುವವನಾಗಿ, ಕಾರ್ಯಗಳನ್ನು ಆಚರಿಸಿದವನು ಯೋಗನಿಷ್ಟೆ ಆಚರಿಸಿದವನಾಗುತ್ತಾನೆ. ಈ ವಿಧವಾಗಿಯೇ ನೀವು ಕಾರ್ಯಗಳು ಮಾಡಿರಿ.

**ವಿವರ** : ನಡೆಯುವ ಕೆಲಸಗಳಲ್ಲಿರುವ ಲಾಭನಷ್ಟಗಳನ್ನು ಸಮವಾಗಿ ನೋಡುವುದರಿಂದ ಅದನ್ನು ಯೋಗವೆನ್ನುತ್ತೇವೆ. ಅದೇ ಕರ್ಮಯೋಗವಾಗುತ್ತದೆ. ಲಾಭನಷ್ಟಗಳನ್ನು ಸಮವಾಗಿ ನೋಡುವುದರಿಂದ ಕರ್ಮಯೋಗವಾದರೆ, ಎಲ್ಲರೂ ಸುಲಭವಾಗಿ ಆಚರಿಸಬಹುದೆಂದು ತಿಳಿಯುವುದಕ್ಕೆ ಅವಕಾಶವಿದೆ. ಆದರೆ ಹಾಗೆ ಮಾಡುವುದು ಅಂದುಕೊಂಡಷ್ಟು ಸುಲಭವಲ್ಲ. ಏಕೆಂದರೆ ಕಾರ್ಯಗಳಿಗೆ ಸಂಬಂಧಿಸಿದ ಪೂರ್ತಿವಿವರವೆಲ್ಲವೂ ತಿಳಿದಾಗಲೇ ಲಾಭನಷ್ಟಗಳ ಮೇಲೆ ಧ್ಯಾಸವಿಲ್ಲದೆ ಕೆಲಸಗಳು ಮಾಡುತ್ತಾರೆ. ಹಾಗಲ್ಲದೆ ಕಾರ್ಯಗಳು ಯಾವ ಕಾರಣದಿಂದ ನಡೆಯುತ್ತಿವೆಯೋ, ಯಾವ ಕಾರಣದಿಂದ ಹೊಸಕರ್ಮ ಬಂದು ಸೇರುತ್ತಿದೆಯೋ, ವಾಸ್ತವಕ್ಕೆ ಕಾರ್ಯಾಚರಣೆ ಯೋಗವಾಗುವುದಕ್ಕೆ ಮುಖ್ಯವಾದ ವಿವರವೇನೋ ತಿಳಿಯದೆ, ಲಾಭನಷ್ಟಗಳು ಸಮವಾಗಿ ತೋಚದೆ ಅವುಗಳಿಗೆ ಸಂಬಂಧಿಸಿದ ಸುಖದುಃಖಗಳು ಉಂಟಾಗುತ್ತವೆ. ಆದ್ದರಿಂದ **'ಸಂಗಮ್ ತ್ಯಕ್ತ್ವಾ'** ಎಂದು ಶ್ಲೋಕದಲ್ಲಿ ಹೇಳಲಾಗಿದೆ. **'ಸಂಗಮ್'** ಎನ್ನುವ ಪದಕ್ಕೆ ಈ ಶ್ಲೋಕದಲ್ಲಿ ಮುಖ್ಯವಾದ ಅರ್ಥವಿದೆ ಎಂದು ಗ್ರಹಿಸಬೇಕು. **'ಸಂಗಮ್ ತ್ಯಕ್ತ್ವಾ'** ಎಂದರೆ ಬೆರೆತು ಹೋಗದೆ ಅಥವಾ ಸೇರಿಹೋಗದೆ ಎಂದು ಅರ್ಥ. ಇಲ್ಲಿ ಯೋಚಿಸಬೇಕಾಗಿರುವುದು ಯಾವುದರೊಂದಿಗೆ ಬೆರೆತುಹೋಗ ಬಾರದು? ಯಾವುದರೊಂದಿಗೆ ಕೂಡಿಹೋಗಬಾರದು? ಯಾರು ಯಾರೊಂದಿಗೆ ಸೇರಬಾರದು? ಎನ್ನುವ ಪ್ರಶ್ನೆಗಳಿಗೆ ಉತ್ತರ ಬೇಕು. ಅದಕ್ಕೆ ಸರಿಯಾದ ಉತ್ತರ ಗೀತೆಯಲ್ಲಿ ಬರುವ ಶ್ಲೋಕಗಳಲ್ಲಿ ಪೂರ್ತಿಯಾ ಇದೆ. ಆದರೂ ಈಗ ಸಂದರ್ಭಾನುಸಾರವಾಗಿ ಆ ಉತ್ತರ ಹೇಳಿಕೊಳ್ಳುತ್ತಿದ್ದೇವೆ. ನಮ್ಮ ಶರೀರದಲ್ಲಿನ 25 ಭಾಗಗಳಲ್ಲಿ ಅಹಂಕಾರ ಎನ್ನುವ ಒಂದು ಭಾಗದೊಂದಿಗೆ ಸೇರದಂತೆ  ಕರ್ಮಗಳು ಆಚರಿಸಿದರು ಹೊಸ ಕರ್ಮಗಳು ಬರುವುದಿಲ್ಲ. ಹಾಗೆ ಹೊಸ ಕರ್ಮಗಳು ಬಾರದಂತೆ ಹೋಗುವುದೇ ಕರ್ಮಯೋಗ ಎನ್ನುತ್ತೇವೆ. ಶರೀರದಲ್ಲಿನ 25 ಭಾಗಗಳಲ್ಲಿ ಒಂದಾದ ಅಹಂಕಾರದೊಂದಿಗೆ ಯಾರು ಸೇರಬಾರದು ಎನ್ನುವ ಪ್ರಶ್ನೆಗೆ ಉತ್ತರ ಹುಡುಕಿದಾಗ ತಿಳಿಯುವುದೇನೆಂದರೆ! ಎಲ್ಲವನ್ನೂ ಅನುಭವಿಸುವುದಕ್ಕೆ 25 ಭಾಗಗಳಲ್ಲಿ ತಾನು ಒಂದು ಭಾಗವಾಗಿರುವ ಜೀವಾತ್ಮ, ಅಹಂಕಾರದೊಂದಿಗೆ ಸೇರಬಾರದು. ಹಾಗೆ ಸೇರದೆ ಮಾಡುವ ಕೆಲಸಗಳನ್ನೇ ಕರ್ಮಯೋಗ ಎನ್ನುತ್ತೇವೆ. ಆದ್ದರಿಂದಲೇ **'ಪಸಂಗ ಮ್ತ್ಯಕ್ತ್ವಾ' "ಕುರುಕರ್ಮಾಣಿ" "ಯೋಗಸ್ಥಃ"** ಎಂದಿದ್ದಾನೆ. ಸಂಗಮ್ತ್ಯಕ್ತ್ವಾ ಅಹಂಕಾರದೊಂದಿಗೆ ಸೇರದಂತೆ, ಕುರುಕರ್ಮಾಣಿ– ಕರ್ಮ ಜಾರಿ ಮಾಡಿದದ ಕಾರ್ಯಗಳು ಮಾಡಬೇಕು. ಯೋಗಸ್ಥಃ ಯೋಗದಲ್ಲಿರುವವನು ಆಗುತ್ತೀಯ.

(1) **ಶ್ಲೋ॥ 49 : ದೂರೇಣ ಹ್ಯಪರಂ ಕರ್ಮ ಬುದ್ಧಿಯೋಗಾದ್ಧನಂಜಯ !।**
**ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ ॥**
**(ಕರ್ಮಯೋಗ)**

**ಭಾವಾರ್ಥ :** ಕರ್ಮನಾಶ ಮಾಡುವ ಕರ್ಮಯೋಗಕ್ಕಿಂತ, ನೀಚಸ್ಥಿತಿಯನ್ನು ಉಂಟು ಮಾಡುವ ಕರ್ಮ ಬಹಳ ಭೇದವಾದುದು. ನೀನು ನೀಚಸ್ಥಿತಿಯನ್ನು ಉಂಟುಮಾಡುವ ಕರ್ಮವನ್ನು ಬಿಟ್ಟು, ಉನ್ನತ ಸ್ಥಿತಿಯನ್ನು ಉಂಟುಮಾಡುವ ಕರ್ಮಯೋಗವನ್ನೇ ಆಶ್ರಯಿಸು.

**ವಿವರ :** ಕರ್ಮಯೋಗ ಎಂಬುವುದು ಜನ್ಮ ಬಂಧನಗಳಿಂದ ಜೀವಾತ್ಮನನ್ನು ಕಾಪಾಡಿ ಉನ್ನತವಾದ ದೈವತ್ವವನ್ನು ಸೇರಿಸುತ್ತದೆ. ಕರ್ಮ ಎನ್ನುವುದು ಜನ್ಮ ಬಂಧಗಳನ್ನು ಉಂಟುಮಾಡಿ, ಜೀವಾತ್ಮವನ್ನು ಜನ್ಮಗಳ ಪಾಲುಮಾಡಿ ತಗ್ಗು ಸ್ಥಿತಿಗೆ ಕಳಿಸುತ್ತದೆ. ಆದ್ದರಿಂದ ಫಲಿತಗಳಲ್ಲಿ ಕರ್ಮಕ್ಕೆ, ಕರ್ಮಯೋಗಕ್ಕೆ ಬಹಳ ದೂರಭೇದವಿದೆ ಎಂದು ಹೇಳುಬಹುದು ಆದುದರಿಂದ ನೀನು ಜನ್ಮಗಳನ್ನು, ನೀಚಸ್ಥಿತಿಯನ್ನು ಉಂಟುಮಾಡುವ ಕರ್ಮವನ್ನು ಬಿಟ್ಟು, ಉನ್ನತ ಸ್ಥಿತಿಯಾದ ದೈವವನ್ನು ಸೇರಿಸುವ ಕರ್ಮಯೋಗವನ್ನೇ ಶರಣುಬೇಡಿರೆಂದು ಹೇಳಿ ನಂತರ ಕೆಳಗಿನ ಶ್ಲೋಕದಲ್ಲಿಯೂ ಸಹ ಆ ಮಾತನ್ನೇ ಬಲಪಡಿಸುವಂತೆ ಹೇಳುತ್ತಿದ್ದಾನೆ.

**(1) ಶ್ಲೋ॥ 50 : ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ ।**
**ತಸ್ಮಾದ್ ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಮ್ ॥**
**(ಕರ್ಮಯೋಗ)**

**ಭಾವಾರ್ಥ :** ಕರ್ಮಯೋಗವನ್ನು ಆಚರಿಸಿದವನು ಕರ್ಮವಾದ ಪಾಪಪುಣ್ಯಗಳನ್ನು ನಾಶಮಾಡುತ್ತಿದ್ದಾನೆ. ಆದ್ದರಿಂದ ನೀನೂ ಸಹ ಕಾರ್ಯಗಳನ್ನು ಮಾಡುತ್ತಾ ಆ ಕೆಲಸಗಳಲ್ಲಿಯೇ ತಲ್ಲೀನನಾದರು ಪಾಪಪುಣ್ಯಗಳನ್ನು ಹೊಂದದ ಸ್ಥಿತಿಯನ್ನು ತಿಳಿದುಕೊ. ಅದೇ ಕರ್ಮಯೋಗ.

**ವಿವರ :** ಪರಮಾತ್ಮನಲ್ಲಿ ಐಕ್ಯವಾಗುವುದಕ್ಕೆ ಗೀತೆಯಲ್ಲಿ ಸೂಚಿಸಿದ ಎರಡು ಯೋಗಗಳಲ್ಲಿ ಒಂದಾದ ಕರ್ಮಯೋಗವೆಂದರೆ ಏನೆಂದು, ಎಷ್ಟು ನಿಷ್ಠೆಯಿಂದ ಕೂಡಿಕೊಂಡಿರುತ್ತದೆಂದು, ಎಂತಹ ಸಾಧನೆ ಮಾಡಬೇಕಾಗಿರುತ್ತದೋ ಎಂದು ಯೋಚಿಸಬೇಕಾದ ಅವಶ್ಯಕತೆ

ಇಲ್ಲ. ಎಲ್ಲರೂ ಅಂದುಕೊಳ್ಳುವಂತೆ ಕರ್ಮಯೋಗದಲ್ಲಿ ಯಾವ ಸಾಧನೆಗಳು ಯಾವ ನಿಷ್ಠೆಗಳು ಇಲ್ಲ. ಇರುವುದೆಲ್ಲ ಒಂದೇ ಪದ್ಧತಿ. ನಿನ್ನ ಮೂಖಾಂತರ ನಡೆಯುವ ಯಾವ ಕೆಲಸವಾದರು ಪರವಾಗಿಲ್ಲ, ಆದರೆ ಆ ಕೆಲಸಗಳು ಮಾಡುವುದರಲ್ಲಿ ಕರ್ಮ ಯೋಗ ಕುಶಲತೆ ತಿಳಿದಿರಬೇಕು. ಎಲ್ಲಾ ಕೆಲಸಗಳು ಮಾಡುತ್ತಾ ಕಾರ್ಯಗಳಲ್ಲಿ ವ್ಯತ್ಯಾಸವನ್ನು ಬಿಟ್ಟು, ಕರ್ಮದ ಪ್ರಕಾರ ಸಂಭವಿಸುವ ಒಳ್ಳೆಯ ಕೆಟ್ಟ ಕಾರ್ಯಗಳನ್ನು ಆಚರಿಸುತ್ತಾ, ಅಹಮ್‌ನನ್ನು ಹೊಂದದಿದ್ದರು ಕಾರ್ಯದಲ್ಲಿನ ಕರ್ಮ ಅಂಟುವುದಿಲ್ಲ. ಅದೇ ಕರ್ಮದಿಂದ ತಪ್ಪಿಸಿಕೊಳ್ಳುವ ಪ್ರಾವೀಣ್ಯತೆ ಅದನ್ನೇ **'ಕರ್ಮಸುಕೌಶಲಂ'** ಎಂದು ಗೀತೆಯಲ್ಲಿ ಹೇಳಿದ್ದಾರೆ. ಯಾವ ನಿಯಮಗಳು ಇಲ್ಲದ ಕರ್ಮಯೋಗವು ಎಲ್ಲಾ ಕೆಲಸಗಳು ಆಚರಿಸುತ್ತಾ ಕರ್ಮವಂಟದೆ ಹೋಗುವುದೆ, ಆದ್ದರಿಂದ ಯೋಗವಾಚರಿಸುವವನು ಸುಕೃತ ದುಷ್ಕೃತಗಳಾದ ಪಾಪಪುಣ್ಯಗಳನ್ನು ನಶಿಸುವಂತೆ ಮಾಡಿಕೊಳ್ಳುತ್ತಾನೆ. ಎಂದರೆ ಒಳ್ಳೆಯದು ಮಾಡುವುದರಿಂದ ಸಂಭವಿಸುವ ಸುಕೃತವಾದ ಪುಣ್ಯವನ್ನು, ಹಾಗೆ ಕೆಟ್ಟ ಕೆಲಸ ಮಾಡುವುದರಿಂದ ಸಂಭವಿಸುವ ದುಷ್ಕೃತವಾದ ಪಾಪವನ್ನು ಅಂಟದಂತೆ ಮಾಡಿಕೊಳ್ಳುತ್ತಾನೆ. ಅದೇ ಕರ್ಮಯೋಗ ಒಂದರ ಪ್ರಾವೀಣ್ಯತೆ ಎಂದು ತಿಳಿಯಬೇಕು.

**<u>ಮುಖ್ಯ ಗಮನಿಕೆ :</u>** ಕೆಟ್ಟಕೆಲಸಗಳನ್ನು ಬಿಟ್ಟು ಒಳ್ಳೆಯ ಕೆಲಸಗಳನ್ನು ಮಾಡಿರೆಂದು ಎಲ್ಲರೂ ಬೋಧಿಸುವುದು ನಮಗೆ ತಿಳಿದಿರುವುದೇ. ಆದರೆ ಗೀತೆಯಲ್ಲಿ ಗತ ಜನ್ಮಗಳ ಕರ್ಮದ ಪ್ರಕಾರ ಒಳ್ಳೆಯ ಕೆಟ್ಟ ಕೆಲಸಗಳು ನಡೆಯುತ್ತಿರುತ್ತವೆಂದು, ಯಾರ ಇಷ್ಟದ ಪ್ರಕಾರ ಅವು ನಡೆಯುವುದಿಲ್ಲ ಎಂದು ಹೇಳಿದ್ದಾನೆ. ಆದ್ದರಿಂದ ನಡೆಯುವ ಕೆಲಸಗಳಲ್ಲಿನ ಹೊಸ ಕರ್ಮವನ್ನು ಬಾರದಂತೆ ಮಾಡಿಕೊ ಎಂದಿದ್ದಾನೆ. ಹಾಗಲ್ಲದೆ ಕೆಟ್ಟಕೆಲಸಗಳೆಂದು, ಒಳ್ಳೆಯ ಕೆಲಸಗಳೆಂದು ವ್ಯತ್ಯಾಸವನ್ನು ಕುರಿತು ಹೇಳಲಿಲ್ಲ. ಕರ್ಮಯೋಗದಲ್ಲಿ ಕರ್ಮಪ್ರಕಾರ ನಮ್ಮಲ್ಲಿ ಬಲವಂತವಾಗಿ ನಡೆಯುವ ಎಲ್ಲಾ ಕೆಲಸಗಳನ್ನು ಸಮವಾಗಿ ತಿಳಿದು, ಅವುಗಳಿಂದ ಬರುವ ಹೊಸಕರ್ಮವನ್ನು ಬಾರದಂತೆ ಮಾಡಿಕೊಳ್ಳುವುದರಿಂದ, ಮತ್ತೆ ತನ್ನಿಂದ ಅಂತಹ ಕೆಲಸಗಳು ನಡೆಯದಂತೆ ಹೋಗುತ್ತವೆಂದು ಬೋಧಿಸಿದ್ದಾನೆ. ಕರ್ಮ ನಿರ್ಮಿತವಾದ ಕಾರ್ಯಗಳನ್ನು ಯಾರು ಬಿಡಲಾರರು. ಆದರೆ ಆ ಕಾರ್ಯಗಳು ನಡೆಯದಂತೆ ಹೋಗಬೇಕೆಂದರೂ ಆ ಕೆಲಸಗಳಿಗೆ ಕಾರಣವಾದ (ಬೀಜವಾದ) ಕರ್ಮವನ್ನೇ ಇಲ್ಲದಂತೆ ಮಾಡಿಕೊಳ್ಳಬೇಕು. ಅದನ್ನೇ ಕರ್ಮಯೋಗ ಎನ್ನುತ್ತೇವೆ.

**(1) ಶ್ಲೋ॥ 51 : ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ ।**
**ಜನ್ಮಬಂಧ ವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಮ್ ॥**

**(ಕರ್ಮಯೋಗ)**

**ಭಾವಾರ್ಥ :** ಜ್ಞಾನಪರರು ಕರ್ಮ ಫಲಗಳನ್ನು ಬಿಟ್ಟು, ಜನ್ಮ ಬಂಧಗಳನ್ನು ಬಿಟ್ಟು ಮೋಕ್ಷವನ್ನು ಹೊಂದುತ್ತಿದ್ದಾರೆ.

**ವಿವರ :** ಕರ್ಮಯೋಗವಾಚರಿಸುವ ಜ್ಞಾನಿಗಳು ಪ್ರಾರಬ್ಧಕರ್ಮದಿಂದ ಬರುವ ಕಷ್ಟಸುಖಗಳು ಲಾಭನಷ್ಟಗಳ ಫಲಗಳನ್ನು ಬಿಟ್ಟು, ಕರ್ಮದ ಪ್ರಕಾರ ಯಾವ ಕಾರ್ಯಬಂದರೂ ಅದನ್ನು ಆಚರಿಸಿ, ಅದರಿಂದ ಬರುವ ಹೊಸ ಆಗಾಮಿಕ ಕರ್ಮವನ್ನು ಬಾರದಂತೆ ಮಾಡಿಕೊಂಡು, ಜನ್ಮ ಬಂಧನಗಳನ್ನು ಉಂಟುಮಾಡುವ ಸಂಚಿತಕರ್ಮವನ್ನು ಬಿಟ್ಟು ನಾಶರಹಿತವಾದ, ಪರಮಾತ್ಮ ಸ್ವರೂಪವಾದ ಮೋಕ್ಷವನ್ನು ಹೊಂದುತ್ತಿದ್ದಾರೆ.

**(ಒಂದು ಜನ್ಮದಲ್ಲಿ ಹುಟ್ಟಿದಾಗಿನಿಂದ ಮರಣಿಸುವವರೆಗೂ ಆಚರಣೆಗೆ ಬರುವ ಕರ್ಮವನ್ನು ಪ್ರಾರಬ್ಧಕರ್ಮವೆಂದು, ಹುಟ್ಟಿದಾಗಿನಿಂದ ಮರಣಿಸುವವರೆಗೂ ಹೊಸದಾಗಿ ಬರುವ ಕರ್ಮವನ್ನು ಆಗಾಮಿಕಕರ್ಮವೆಂದು, ಜನ್ಮಬಂಧನಗಳನ್ನು ಉಂಟುಮಾಡುವ ಕರ್ಮ ನೆಲೆಯನ್ನು ಸಂಚಿತಕರ್ಮವೆಂದು ತಿಳಿಯಬೇಕು.)**

ಈ ಶ್ಲೋಕದಲ್ಲಿ ಪ್ರಾರಬ್ಧವನ್ನು ಆಚರಿಸುತ್ತಾ, ಹೊಸದಾಗಿ ಬರುವ ಕರ್ಮವಾದ ಆಗಾಮಿಕಕರ್ಮವನ್ನು ಬಾರದಂತೆ ಮಾಡಿಕೊಂಡು, ಮತ್ತೆ ಜನ್ಮವಿಲ್ಲದ ವಿಧವಾಗಿ ಸಂಚಿತಕರ್ಮವನ್ನು ಅಸಲಿಗೆ ಇಲ್ಲದಂತೆ ಮಾಡಿ, ಮೋಕ್ಷವನ್ನು ಹೊಂದಿರೆಂದು ಮುಖ್ಯವಾಗಿ ತಿಳಿಸಿದ್ದಾನೆ. ಈ ಶ್ಲೋಕದಲ್ಲಿ ಪೂರ್ತಿ ಹುಡುಕಿದರೂ **"ಕರ್ಮಜಂ"** ಎಂದರೆ ಪ್ರಾರಬ್ಧಕರ್ಮವೆಂದು, **"ಜನ್ಮಬಂಧಂ"** ಎಂದರೆ ಆಗಾಮಿಕ ಕರ್ಮವೆಂದು ತಿಳಿಯುತ್ತದೆ. ಆದರೆ ಸಂಚಿತಕರ್ಮ ಇಲ್ಲವೇ ಯೆಂದು ಕೆಲವರಿಗೆ ಅನುಮಾನ ಬರಬಹುದು. ಅದಕ್ಕೆ ಸಮಾಧಾನವು ಹಳೆಯದು ಪ್ರಾರಬ್ಧರೂಪವಾಗಿ ಮುಗಿಯುತ್ತಾ ಹೊಸದಾದ ಆಗಾಮಿಕರ್ಮ ಬಾರದಂತೆಹೋದರೆ, ನೆಲೆಸಿರುವ ಸಂಚಿತವೇ ಪೂರ್ತಿ ಇಲ್ಲದಂತೆ ಹೋಗುತ್ತದೆಂದು ತಿಳಿಯಬೇಕು. ಸಂಚಿತ ಇಲ್ಲದಂತೆ ಹೋದಾಗಲೇ ಅದರಿಂದ ಬರುವ ಪ್ರಾರಬ್ಧ ಇರುವುದಿಲ್ಲ. ಆಗ ಹುಟ್ಟಬೇಕಾದ ಅವಶ್ಯಕತೆಯೂ ಇಲ್ಲ. ಆಗಲೇ ಮೋಕ್ಷವೆನ್ನುವ ದೈವಪಥವನ್ನು ಸೇರಿಕೊಳ್ಳುತ್ತೇವೆ.

**(1) ಶ್ಲೋ॥ 52 : ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿ ತರಿಷ್ಯತಿ।**
**ತದಾ ಗನ್ತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ ॥**
**(ಕರ್ಮಯೋಗ, ಬ್ರಹ್ಮಯೋಗ)**

**ಭಾವಾರ್ಥ :** ಯಾವಾಗಾದರೆ ಮೋಹಗುಣವೆನ್ನುವ ಕಲ್ಮಷವನ್ನು ದಾಟುತ್ತೀಯೋ, ಆಗಲೇ ನೀನು ಇಲ್ಲಿಯವರೆಗೂ ಕೇಳಿದ, ಕೇಳಬೇಕಾದ ವಿಷಯಗಳಿಗಾಗಿ ವೈರಾಗ್ಯ ಹೊಂದಬಲ್ಲೆ.

**ವಿವರ :** ನಮ್ಮ ಶರೀರದಲ್ಲಿ 12 ಗುಣಗಳಿದ್ದರು ಮುಖ್ಯವಾಗಿ ಆರು ಗುಣಗಳು ಮಾತ್ರವೆ ಹೆಸರುವಾಸಿಯಾಗಿವೆ. ಅದರಲ್ಲಿ ಆಗ ಅರ್ಜುನನಿಗೆ ಆವರಿಸಿ ಬಾಣಗಳು ಕೆಳಗೆ ಹಾಕುವಂತೆ ಮಾಡಿರುವುದು ಮೋಹಗುಣವು. ನನ್ನದು ನನ್ನವರು ಎಂದು, **'ನಾ'** ಎಂದು ಪ್ರೇರೆಪಿಸುವುದು ಮೋಹಗುಣ. ಆ ಗುಣವನ್ನು ಬಿಟ್ಟು ನನ್ನದು ನನ್ನವರು ಎನ್ನುವ ವಿಷಯ ಮರೆತು ಹೋದರೆ ಮಾತ್ರ, ಇಲ್ಲಿಯವರೆಗೂ ಹೇಳಿದ ಕರ್ಮಯೋಗ ವಿವರವು, ಇನ್ನೂ ಹೇಳುವ ಬ್ರಹ್ಮಯೋಗ ವಿವರದ ಮೇಲೆ ಆಸಕ್ತಿ ಬರುತ್ತದೆ. ಹಾಗೆ ಆಸಕ್ತಿ ಬಂದಾಗ ವೇದಗಳೆನ್ನುವ ಗುಣಗಳಿಂದ ಹೊರಬೀಳುತ್ತೀಯಾ. ಇಲ್ಲಿ **ನಿರ್ವೇದಂ** ಎಂಬ ಪದವನ್ನು ಮರೆಯಬಾರದು.

ಜ್ಞಾನ ತಿಳಿದುಕೊಳ್ಳದಂತೆ ಆತಂಕಪಡಿಸುವವರು ನಿನ್ನವರೇ. ಆದ್ದರಿಂದ ನನ್ನವರೆಂಬ ಮೋಹಗುಣವನ್ನು ಬಿಟ್ಟು ಅದಕ್ಕೆ ವಿರುದ್ಧವಾದ ವೈರಾಗ್ಯವನ್ನು ಹೊಂದಿ ಶ್ರದ್ಧೆಯಿಂದ ಕೇಳಿದರಾಗಲಿ ಜ್ಞಾನವು ಅರ್ಥವಾಗುವುದಿಲ್ಲವೆಂದು, ಜ್ಞಾನ ಅರ್ಥವಾದ ನಂತರವೇ ಯೋಗವನ್ನು ಹೊಂದುವುದಕ್ಕೆ ಅವಕಾಶ ಇದೆಯೆಂದು ಹೇಳಿದ್ದಾನೆ. ಗೀತೆ ಮೊದಲನೆದಾಗಿ ಹೇಳಿರುವುದು ಆತ್ಮ ಜೀವಾತ್ಮಗಳ ವಿವರವು, ನಂತರ ಹೇಳಿರುವುದು ಕರ್ಮಯೋಗ. ಇನ್ನೂ ಹೇಳುವ ವಿಷಯ ಬ್ರಹ್ಮಯೋಗ.

**(1) ಶ್ಲೋ॥ 53 : ಶ್ರುತಿ ವಿಪ್ರತಿ ಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ ।**
**ಸಮಾಧಾ ವಚಲಾ ಬುದ್ಧಿಸ್ತದಾ ಯೋಗ ಮವಾಪ್ಸ್ಯಸಿ ॥**
**(ಬ್ರಹ್ಮಯೋಗ)**

**ಭಾವಾರ್ಥ :** ವಿವಿಧ ಶ್ರುತಿಗಳಿಂದ ಚಂಚಲವಾದ ನಿನ್ನ ಬುದ್ಧಿ ಚಲಿಸದಿರುವುದಾಗಿ ಸ್ಥಿರವಾದ ಸಮಾಧಿಯಲ್ಲಿ ನಿಂತುಕೊಂಡಾಗ ನೀನು ಯೋಗಹೊಂದಿದವನಾಗುತ್ತೀಯಾ.

**ವಿವರ :** ಗೀತೆಯಲ್ಲಿ ಮೂರು ಆತ್ಮಗಳನ್ನು ಕುರಿತು ಹೇಳುವುದರಲ್ಲಿ ಆತ್ಮವೆಂಬ ಪದವನ್ನು, ಹಾಗೆ ಎರಡು ಯೋಗಗಳನ್ನು ಕುರಿತು ಹೇಳುವುದರಲ್ಲಿಯೂ ಸಹ ಯೋಗ ಎಂಬ ಪದವನ್ನು ಬಳಸಿದ್ದಾರೆ. ಆದ್ದರಿಂದ ಆತ್ಮ ಎಂದಾಗ ಯಾವ ಆತ್ಮ ಎನ್ನುವ ವಿಷಯ, ಯೋಗ ಎಂದಾಗ ಯಾವ ಯೋಗ ಎನ್ನುವ ವಿಷಯವು ಶ್ರದ್ಧೆಯಿಂದ ಪರಿಶೀಲಿಸಿ

ನೋಡಬೇಕಾಗಿದೆ. ಈಗ ಮೇಲಿನ ಶ್ಲೋಕದಲ್ಲಿ ಯೋಗ ಎಂದಿದ್ದಾರೆ ಆದ್ದರಿಂದ ಬ್ರಹ್ಮಯೋಗವನ್ನು ಕುರಿತು ಹೇಳಿದ್ದಾನೆಂದು ತಿಳಿಯಬೇಕು. ಏನು ಹೇಳಿದ್ದಾನೆಂದರೆ!

ಅನೇಕ ವಿಧದ ಜ್ಞಾನವನ್ನು ಕುರಿತು ಕೇಳಿ ಚಂಚಲವಾದ ನಿನ್ನ ಬುದ್ಧಿ ಮಾತ್ರ ಚಲಿಸದಿರುವುದಾಗಿ, ಸ್ಥಿರವಾಗಿ ಎಲ್ಲಾ ಜೀವರಾಶಿಗಳಲ್ಲಿ ಸಮವಾಗಿರುವ ಆತ್ಮನಲ್ಲಿ ಯಾವಾಗ ಲಗ್ನವಾಗುತ್ತದೊ, ಆಗಲೇ ಬ್ರಹ್ಮ ಯೋಗವನ್ನು ಹೊಂದಿದವನಾಗುತ್ತೀಯಾ. ಸರ್ವಜೀವರಾಶಿಗಳಲ್ಲಿ ಸಮವಾಗಿ ನಿವಾಸಿಸುವ ಆತ್ಮನಲ್ಲಿ ಬುದ್ಧಿ ಲಗ್ನವಾಗುವುದನ್ನು **'ಸಮಾಧಿ'** ಎಂದು ತಿಳಿಯಬೇಕು. ಈ ಶ್ಲೋಕಕ್ಕಿಂತ ಮೊದಲು ಎಲ್ಲಾ ವಿಷಯಗಳಲ್ಲಿ ಇದ್ದು, ಎಲ್ಲಾ ಕೆಲಸಗಳು ಮಾಡುತ್ತಾ ಕರ್ಮ ಅಂಟದ ಕರ್ಮಯೋಗವನ್ನು ಕೇಳಿದ ಅರ್ಜುನನು, ಈ ಶ್ಲೋಕದಲ್ಲಿ ಶರೀರದಲ್ಲಿನ ಯಾವ ಭಾಗವು ಯಾವ ಕೆಲಸ ಮಾಡದೇ ಬುದ್ಧಿಯೂ ಸಹ ಸ್ಥಂಭಿಸಿಹೋದಾಗ ಬ್ರಹ್ಮಯೋಗವಾಗುತ್ತದೆಂಬ ಮಾತು ಕೇಳಿ, ಆಶ್ಚರ್ಯಚಕಿತನಾಗಿ ಮೊದಲ ಬಾರಿಗೆ ಬಾಯಿಬಿಟ್ಟು ಬ್ರಹ್ಮಯೋಗ ಒಂದರ ವಿವರವನ್ನು ಕುರಿತು ಹೀಗೆ ಕೇಳಿದ್ದಾನೆ.

**ಅರ್ಜುನನು ಹೀಗೆ ಕೇಳಿದನು :–**

**(1) ಶ್ಲೋ॥ 54 : ಸ್ಥಿತ ಪ್ರಜ್ಞಸ್ಯ ಕಾ ಭಾಷಾ? ಸಮಾಧಿಸ್ಥಸ್ಯ ಕೇಶವ!**
**ಸ್ಥಿತಧೀಃ ಕಿಂ ಪ್ರಭಾಷೇತ ? ಕಿಮಾಸೀತ? ವ್ರಜೇತ ಕಿಮ್ ?**
**(ಬ್ರಹ್ಮಯೋಗ)**

**ಭಾವಾರ್ಥ** : ಓ ಕೃಷ್ಣಾ! ಬುದ್ಧಿ ನಿಂತುಹೋಗಿ ಸಮಾಧಿ ಸ್ಥಿತಿಯಲ್ಲಿ ಇರುವವನು ಯಾವ ಭಾಷೆಯಲ್ಲಿ ಮಾತನಾಡುತ್ತಾನೆ? ಏನು ಮಾತನಾಡುತ್ತಾನೆ? ಯಾವ ವಿಧವಾಗಿ ಕುಳಿತುಕೊಳ್ಳುತ್ತಾನೆ? ಏನು ಆಚರಿಸುತ್ತಾನೆ.?

**ವಿವರ :** ಪ್ರಜ್ಞೆ ಸ್ಥಿರವಾದವನು ಎಂದರೆ ಬುದ್ಧಿ ನಿಂತುಹೋದವನು ಯಾವ ಭಾಷೆ ಮಾತನಾಡುತ್ತಾನೆ? ಸಾಮಾನ್ಯವಾಗಿ ನಾವು ಬಾಯಿ ಕದಲಿಸಿ ಮಾತನಾಡುವ ಭಾಷೆಯಲ್ಲದೆ ಮೂಗನಾಗಿ ಮಾತನಾಡುವ ಭಾಷೆ ಯಾವುದಾದರೂ ಇದೆಯಾ? ಹಾಗೆ ಯಾವುದಾದರೂ ಭಾಷೆ ಪ್ರತ್ಯೇಕಿಸಿದ್ದರೆ ಬುದ್ಧಿ ಯಾವ ಕೆಲಸವು ಮಾಡದಿರುವಾಗ ಆತನು ಯಾವ ವಿಧವಾಗಿ ಮಾತನಾಡುತ್ತಾನೆ? ಬುದ್ಧಿ ಕೆಲಸ ಮಾಡದಿರುವವನು ಯಾವ ವಿಧವಾಗಿ ಕುಳಿತುಕೊಳ್ಳುತ್ತಾನೆ? ಒಟ್ಟಾರೆ ಬುದ್ಧಿ ಕೆಲಸಮಾಡದ ಆತನ ಪ್ರವರ್ತನೆ ಹೇಗಿರುತ್ತದೆ?

ವಿವರವೆಲ್ಲಾ ತಿಳಿಸಬೇಕೆಂದು ಅರ್ಜುನನು ಕೇಳಿದಾಗ, ಬುದ್ಧಿ ನಿಶ್ಚಲತೆ ಹೊಂದಿದವನನ್ನು ಕುರಿತು ಭಗವಂತನು ಹೀಗೆ ಹೇಳಿದ್ದಾನೆ.

**ಶ್ರೀ ಭಗವಂತನು ಹೀಗೆ ಹೇಳಿದನು :–**

**(1) ಶ್ಲೋ॥ 55 : ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ! ಮನೋ ಗತಾನ್।**
**ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞ ಸ್ತದೋಚ್ಯತೇ ॥**

**(ಬ್ರಹ್ಮಯೋಗ)**

**ಭಾವಾರ್ಥ :** ಎಂದಾದರೆ ಸರ್ವ ಆಸೆಗಳು ಮತ್ತು ಮನೋಗತಗಳಾದವೆಲ್ಲ ಪ್ರಯತ್ನಪೂರ್ವಕ ವಾಗಿ ಬಿಟ್ಟು ಆತ್ಮನಲ್ಲೇ ಜೀವಾತ್ಮ ತೃಪ್ತಿಹೊಂದುತ್ತಿದೆಯೋ ಆಗಲೇ ಅವನನ್ನು ಸ್ಥಿತ ಪ್ರಜ್ಞನೆಂದು ಹೇಳಬಹುದು.

**ವಿವರ :** ಇಲ್ಲಿ **"ಮನೋಗತಾನ್"** ಎನ್ನುವುದು ವಿಶೇಷ ಪದ. ಮನಸ್ಸಿನಲ್ಲಿ ಲಗ್ನವಾಗಿರುವ ಎಂದರೆ ಮನಸ್ಸಿನಲ್ಲಿ ಅಡಗಿರುವ ನಡೆದ ವಿಷಯಗಳೆಲ್ಲಾ ಎಂದು ಅರ್ಥ. ಇದಕ್ಕೂ ಮುಂಚೆ ನೋಡಿರುವವು, ಕೇಳಿರುವವು, ತಿಂದಿರುವವು, ವಾಸನೆ ನೋಡಿರುವ ವಿಷಯಗಳು ಯಾವಾದರೂ ಮನೋಗತಗಳೇ. ಅವು ಯಾವುವು ಮನಸ್ಸಿಗೆ ಜ್ಞಾಪಕ ಬಾರದಂತೆಹೋಗಿ ಮತ್ತು ಭವಿಷ್ಯತ್ತಿನ ಬಗ್ಗೆ ಆಸೆಗಳು ಜ್ಞಾಪಕ ಬಾರದಂತೆ ಹೋದಾಗ, ಆ ಶರೀರದಲ್ಲಿನ ಜೀವಾತ್ಮ ಆ ಶರೀರದಲ್ಲಿಯೇ ಇರುವ ಆತ್ಮದೊಂದಿಗೆ ಸೇರಿಹೋಗುತ್ತದೆ. ಬ್ರಹ್ಮಯೋಗ ಆಚರಿಸುವುದಕ್ಕೆ ಮೂಲ ಕಾರಣವಾದುದು ಮನಸ್ಸು. ಮನಸ್ಸು ಶರೀರ ದೊಳಗಿನ ಅವಯವಗಳಿಗೂ ಹೊರಗಿನ ಅವಯವಗಳಿಗೂ ಮಧ್ಯವರ್ತಿಯಂತೆ ಇದೆ. ಅದು ಸ್ಥಂಭಿಸಿದಾಗಲೇ ಒಳಗಿನ ಬುದ್ಧಿ ಮತ್ತು ಅದಕ್ಕೆ ಸಂಬಂಧಿಸಿದ ಗುಣಗಳು ಕೆಲಸ ಮಾಡುವುದಿಲ್ಲ. ಹಾಗೆ ಒಳಗಿನಿಂದ ಮನಸ್ಸಿನ ಮೂಖಾಂತರ ಬರುವ ಆಜ್ಞೆಗಳು ನಿಂತುಹೋಗುವುದರಿಂದ ಹೊರಗಿನ ಅವಯವಗಳು ಕೆಲಸ ಮಾಡುವುದಿಲ್ಲ. ಅಂತಹ ಸ್ಥಿತಿಯನ್ನು ಹೊಂದಿದವನನ್ನು ಸ್ಥಿತಪ್ರಜ್ಞನೆಂದು ಕರೆಯತ್ತಾರೆ. ಇನ್ನೂ ಸ್ಥಿತಪ್ರಜ್ಞನು ಹೇಗಿರುತ್ತಾನೆಂದರೆ.

**(1) ಶ್ಲೋ॥ 56 : ದುಃಖೇ ಷ್ವನುದ್ವಿಗ್ನ ಮನಾಃ ಸುಖೇಷು ವಿಗತಸ್ಪೃಹಃ ।**
**ವೀತರಾಗ ಭಯಕ್ರೋಧಃ ಸ್ಥಿತ ಧೀರ್ಮುನಿರುಚ್ಯತೇ ॥**

**(ಬ್ರಹ್ಮಯೋಗ)**

**ಭಾವಾರ್ಥ :** ದುಃಖದಲ್ಲಿ ಬಾಧೆಬೀಳದವನನ್ನು, ಸುಖಗಳಲ್ಲಿ ಸಂತೋಷ ಪಡದವನನ್ನು, ಮತ್ತು ಪ್ರೇಮ, ಕೋಪ, ಭಯವಿಲ್ಲದವನನ್ನು ಮೌನ ವಹಿಸಿದ ಬುದ್ಧಿ ಇರುವವನು ಎನ್ನುತ್ತಾರೆ.

**ವಿವರ :** ಬ್ರಹ್ಮಯೋಗ ಆಚರಿಸುವವನನ ಶರೀರದಲ್ಲಿ ಯಾವ ಅವಯವಗಳು ಕೆಲಸಮಾಡದೆ ಸ್ಥಂಭಿಸಿರುತ್ತವೆ. ಅವಯವಗಳು ಕದಲಿ ಕೆಲಸಮಾಡುವುದಕ್ಕೆ ಗುಣಗಳ ಪ್ರಕಾರ ಬುದ್ಧಿ ಯೋಚಿಸಿದರೆ, ನಡೆದ ನಿರ್ಣಯವನ್ನು ಮನಸ್ಸಿನ ಮೂಖಾಂತರ ಕೆಲಸಗಳಾಗಿ ನಡೆಯುವಂತೆ, ಶರೀರ ಯಂತ್ರಾಂಗವು ಪ್ರತಿ ಜೀವರಾಶಿಯಲ್ಲಿರುತ್ತದೆ. ಬುದ್ಧಿ ಸ್ಥಂಬಿಸಿದವನ ಶರೀರದಲ್ಲಿ ಯಾವ ಯೋಚನೆಗಳು ನಡೆಯುವುದಿಲ್ಲ. ಯೋಚನೆಗಳ ಪ್ರಕಾರ ಕೆಲಸಗಳು ನಿರ್ಣಯಿಸಲ್ಪಡುವುದಿಲ್ಲ. ಮನಸ್ಸು ಪೂರ್ತಿಯಾಗಿ ತನ್ನ ಕೆಲಸವನ್ನು ನಿಲ್ಲಿಸಿರುತ್ತದೆ. ಆದ್ದರಿಂದ ಅವಯವಗಳಿಗೆ ಎಂತಹ ಆದೇಶಗಳು ಬರುವುದಿಲ್ಲ. ಆದ್ದರಿಂದ ಕೆಲಸ ಮಾಡುವ ಅವಯವಗಳು ಯಾವ ಕೆಲಸವನ್ನು ನಿರ್ವಹಿಸದೆ ಸ್ಥಂಭಿಸಿರುತ್ತವೆ. ಇನ್ನು ಜ್ಞಾನೇಂದ್ರಿಯಗಳಾದ ಕಣ್ಣು, ಮೂಗು, ಕಿವಿ, ನಾಲಿಗೆ, ಚರ್ಮ ಅವುಗಳ ಕೆಲಸವನ್ನು ಅವು ಮಾಡಿ ಅವವುಗಳ ವಿಷಯಜ್ಞಾನವನ್ನು ತಿಳಿಸುವ ಸ್ಥಿತಿಯಲ್ಲಿದ್ದರೂ, ಮನಸ್ಸು ಅವುಗಳನ್ನು ಗ್ರಹಿಸದಿರುವುದರಿಂದ, ಆ ವಿಷಯಜ್ಞಾನವು ಶರೀರದಲ್ಲಿನ ಜೀವಾತ್ಮಕ್ಕು, ಬುದ್ಧಿಗು ಸೇರುವುದಿಲ್ಲ. ಆದಕಾರಣ ಅವನು ಯಾವ ವಿಷಯಕ್ಕೂ ದುಃಖಪಡುವುದಿಲ್ಲ. ಹಾಗೆ ಹೊರಗೆ ನಡೆಯುವ ಸುಖಗಳೂ ಸಹ ತಿಳಿಯುವುದಿಲ್ಲ. ಆದ್ದರಿಂದ ಸುಖಗಳಿಗೆ ಪರವಶನಾಗುವುದಿಲ್ಲ. ಅವನಿಗೆ ಹೊರಗಿನ ಸಮಾಚಾರ ಒದಗಿಸುವ ಮನಸ್ಸು ಇಲ್ಲದ ಕಾರಣವಾಗಿ ಭಯ, ಪ್ರೇಮ, ಕೋಪ ಯಾವು ಇರುವುದಿಲ್ಲ. ಮನಸ್ಸು ಮೌನ ವಹಿಸಿರುತ್ತದೆ ಆದ್ದರಿಂದ ಅಂತವನನ್ನು **'ಮುನಿ'** ಎನ್ನುತ್ತಿದ್ದೇವೆ. ಇನ್ನೂ ಅಂತವನು ಹೇಗೆ ಇರುತ್ತಾನೆಂದರೆ!

**(1) ಶ್ಲೋ॥ 57 : ಯಃಸರ್ವತ್ರಾ ನಭಿ ಸ್ನೇಹಸ್ತತ್ತ ತ್ಪ್ರಾಪ್ಯ ಶುಭಾಶುಭಮ್।**
**ನಾಭಿನಂದತಿ ನ ದ್ವೇಷ್ಠಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥**

**(ಬ್ರಹ್ಮಯೋಗ)**

**ಭಾವಾರ್ಥ:** ಯಾರಾದರೆ ಎಲ್ಲದರಲ್ಲಿಯೂ ಸಂಬಂಧವಿಲ್ಲದೆ, ಶುಭಾಶುಭಗಳಲ್ಲಿ ಮನೋಧ್ಯಾಸ ಯಾವುದು ಇಲ್ಲದಂತೆ, ಸುಖದುಃಖಗಳು ಅನುಭವಿಸದಂತೆ ಇರುತ್ತಾನೋ, ಅಂತಹವನ ಪ್ರಜ್ಞೆ ದೊಡ್ಡದು.

**ವಿವರ :** ಶರೀರದಲ್ಲಿನ ಮನಸ್ಸಿಗೆ ಒಟ್ಟು 12 ಮಂದಿ ಸ್ನೇಹಿತರಿದ್ದಾರೆ. ಅವರ್ಯಾರೆಂದರೆ ಒಳಗಿರುವ ಬುದ್ಧಿ, ಚಿತ್ತ ಹೊರಗಿರುವ ಜ್ಞಾನೇಂದ್ರಿಯಗಳಾದ ಕಣ್ಣು, ಮೂಗು, ಕಿವಿ, ನಾಲಿಗೆ, ಚರ್ಮ ಮತ್ತು ಕರ್ಮೇಂದ್ರಿಯಗಳಾದ ಕಾಲು, ಕೈ, ಬಾಯಿ, ಗುದ, ಗುಹ್ಯ. **"ಸರ್ವಾತ್ರಾನಭಿಸ್ನೇಹ"** ಎಂದರೆ ಯಾವಾಗಲೂ ಸ್ನೇಹ ಸಂಬಂಧ ಹೊಂದಿರುವುದೆಂದು ಅರ್ಥ. ಯಾವಾಗಲೂ ಹೊರಗಿನ ಪ್ರಪಂಚದಲ್ಲಿನ ಮನುಷ್ಯರೊಂದಿಗೆ ಯಾವ ಮಾನವನಿಗೂ ಸ್ನೇಹ ಇರುವುದಿಲ್ಲ. ಆದ್ದರಿಂದ ಹೊರಗಿನ ಮನುಷ್ಯರ ಸ್ನೇಹ ಅಂದುಕೊಳ್ಳಬಾರದು. ಯಾವಾಗಲೂ ಸ್ನೇಹ ಹೊಂದಿರುವುದು ಮನಸ್ಸು ಒಂದೇ ಅದು ಹೇಗೆ ಸ್ನೇಹ ಹೊಂದಿದೆ ಎಂದರೆ! ಕೆಳಗಿರುವ ಚಿತ್ರದಲ್ಲಿ ನೋಡಿ.




ಹೊರಗಿನ ಜ್ಞಾನೇಂದ್ರಿಯಗಳಾದ ಕಣ್ಣು, ಮೂಗು, ಕಿವಿ, ನಾಲಿಗೆ, ಚರ್ಮ ಅವವುಗಳ ವಿಷಯಗಳನ್ನು ಮನಸ್ಸಿಗೆ ಸರ್ವತ್ರ ಸೇರಿಸುವುದರಿಂದ ಈ ಹೊರಗಿನ ಐದು ಇಂದ್ರಿಯಗಳಿಂದ ಮನಸ್ಸು ಎಡಬಿಡದ ಸ್ನೇಹ ಹೊಂದಿದೆ. ಮತ್ತು ಹೊರಗಿನ ಇಂದ್ರಿಯಗಳು ತಿಳಿಸಿದ ಸಮಾಚಾರವನ್ನು ಮನಸ್ಸು ಒಳಗಿನ ಬುದ್ಧಿಗೆ ತಿಳಿಸುತ್ತಾ ಬುದ್ಧಿಯಜೊತೆಯೂ, ಬುದ್ಧಿ ಯೋಚಿಸಿದ ವಿಷಯಗಳನ್ನು ನಿರ್ಣಯಿಸಿ ಹೊರಗಿನ ಕರ್ಮೇಂದ್ರಿಯಗಳಿಗೆ ತಿಳಿಸೆಂದು ಚಿತ್ತ ಮನಸ್ಸಿಗೆ ತಿಳಿಸುತ್ತಿರುವುದರಿಂದ ಚಿತ್ತದೊಂದಿಗೆ ಸರ್ವತ್ರ ಸ್ನೇಹವಿದೆ. ಸರ್ವತ್ರ ಸ್ನೇಹ ಸಂಬಂಧವು ಒಂದು ಮನಸ್ಸಿಗೆ ಹೊರತುಪಡಿಸಿ ಮತ್ತೆ ಯಾವ ಇತರೆ ಅವುಗಳಿಗೆ ಇಲ್ಲ.

ಒಳಗಿರುವ ಬುದ್ಧಿ, ಚಿತ್ತ ಹೊರಗಿರುವ ಕಣ್ಣು, ಮೂಗು, ಕಿವಿ, ನಾಲಿಗೆ, ಚರ್ಮಗಳ ಜೊತೆ ಮನಸ್ಸು ಸ್ನೇಹಸಂಬಂಧವನ್ನು ಯಾವಾಗಾದರೆ ಬಿಟ್ಟುಹಾಕುತ್ತದೊ

ಅದು ನಿದ್ರೆಯಾಗುತ್ತದೆ. ನಿದ್ರೆಯಲ್ಲಿ ಮನಸ್ಸು ತನ್ನ ಮೇಲೆ ಜ್ಞಾಪಕವನ್ನು ಕಳೆದುಕೊಳ್ಳುತ್ತದೆ. ಹಾಗಲ್ಲದೆ ಮಾಡಿಕೊಳ್ಳುವುದನ್ನು ಬ್ರಹ್ಮಯೋಗ ಎನ್ನುತ್ತೇವೆ. ಮನಸ್ಸು ತನ್ನನ್ನು ತಾನು ಮರೆಯದೆ ಸರ್ವತ್ರ ಹೊಂದಿದ 12 ಇಂದ್ರಿಯಗಳ ಸ್ನೇಹವನ್ನು ಎಷ್ಟು ಸಮಯ ಇಲ್ಲದಂತೆ ಇರುತ್ತದೋ ಅಷ್ಟು ಸಮಯ ಬ್ರಹ್ಮಯೋಗವಾಗುತ್ತದೆ. ಹೊರಗಿನ ವಿಷಯ ಒಳಗೆ ಒಳಗಿನ ವಿಷಯ ಹೊರಗೆ ಚಲಿಸದೆ ಹೋಗುವುದರಿಂದ ಬ್ರಹ್ಮಯೋಗದಲ್ಲಿ ಮಾನವ ಶರೀರವು ನಿದ್ರೆಯಂತೆ ಸ್ಥಂಭಿಸಿರುತ್ತದೆ. ಆದ್ದರಿಂದ ಹೊರಗೆ ಉಂಟಾಗುವ ಶುಭಾಶುಭಗಳು, ಪ್ರೇಮ ಅಸೂಯೆಗಳು ಅಂತಹವನಿಗೆ ಇರುವುದಿಲ್ಲ, ಅವನನ್ನೆ ನಿಜವಾದ ಬ್ರಹ್ಮಯೋಗಿ ಎನ್ನುತ್ತೇವೆ.

**ಯಾವ ಇಂದ್ರಿಯಕ್ಕೆ, ಯಾವ ಇಂದ್ರಿಯಗಳೊಂದಿಗೆ ಸ್ನೇಹ ಇರುವುದು ಕೆಳಗಿರುವ ಪಟ್ಟಿಯಲ್ಲಿ ನೋಡಿ.**

| | | | |
|---|---|---|---|
| 1. | ಜೀವಾತ್ಮಕ್ಕೆ | : | ಅಹಮ್, ಬುದ್ಧಿ (2) |
| 2. | ಮನಸ್ಸಿಗೆ | : | ಐದುಕರ್ಮೇಂದ್ರಿಯಗಳು, ಐದು ಜ್ಞಾನೇಂದ್ರಿಗಳು, ಬುದ್ದಿ, ಚಿತ್ತ, (12) |
| 3. | ಬುದ್ಧಿಗೆ | : | ಮನಸ್ಸು, ಚಿತ್ತ, ಜೀವಾತ್ಮ (3) |
| 4. | ಚಿತ್ತಕ್ಕೆ | : | ಬುದ್ಧಿ, ಮನಸ್ಸು, ಅಹಮ್ (3) |
| 5. | ಅಹಮ್‌ಗೆ | : | ಜೀವಾತ್ಮ, ಚಿತ್ತ (2) |
| 6. | ಕಣ್ಣಿಗೆ | : | ಮನಸ್ಸು (1) |
| 7. | ಮೂಗಿಗೆ | : | ಮನಸ್ಸು (1) |
| 8. | ಕಿವಿಗೆ | : | ಮನಸ್ಸು (1) |
| 9. | ನಾಲಿಗೆ | : | ಮನಸ್ಸು (1) |
| 10. | ಚರ್ಮಕ್ಕೆ | : | ಮನಸ್ಸು (1) |
| 11. | ಕೈಗಳಿಗೆ | : | ಮನಸ್ಸು (1) |
| 12. | ಕಾಲುಗಳಿಗೆ | : | ಮನಸ್ಸು (1) |

| | | | |
|---|---|---|---|
| 13. | ಬಾಯಿಗೆ | : | ಮನಸ್ಸು (1) |
| 14. | ಗುದಕ್ಕೆ | : | ಮನಸ್ಸು (1) |
| 15. | ಗುಹ್ಯಕ್ಕೆ | : | ಮನಸ್ಸು (1) |

ಮನಸ್ಸಿಗೆ ಯಾವಾಗಲೂ ಇಂದ್ರಿಯಗಳಿಂದ ಹೊಂದಿರುವ ಸ್ನೇಹವನ್ನು ಯಾವ ವಿಧವಾಗಿ ಇಲ್ಲದಂತೆ ಮಾಡಿಕ್ಕೊಬೇಕೊ, ಉದಾಹರಣೆಯಾಗಿ ಭಗವಂತನು ಕೆಳಗಿನ ಶ್ಲೋಕದಲ್ಲಿ ಈ ವಿಧವಾಗಿ ಹೇಳುತ್ತಿದ್ದಾನೆ.

**(1) ಶ್ಲೋ॥ 58 : ಯದಾ ಸಂಹರತೇ ಚಾಯಂ ಕೂರ್ಮೋ೯ಽಜ್ಞಾನೀವ ಸರ್ವ ಶಃ ।**
**ಇಂದ್ರಿಯಾಣೇಂದ್ರಿ ಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥**
**(ಬ್ರಹ್ಮಯೋಗ)**

**ಭಾವಾರ್ಥ :** ಆಮೆಯು ತನ್ನ ಅವಯವಗಳನ್ನು ಹೇಗೆ ಚಿಪ್ಪಿನೊಳಗೆ ಮುದುಡಿಕೊಳ್ಳುತ್ತದೊ ಅದೇ ವಿಧವಾಗಿ ಮನಸ್ಸನ್ನು ಇಂದ್ರಿಯಗಳಿಂದ ಮರಳಿಸಬೇಕು.

**ವಿವರ :** ಆಮೆ ಇರುವ ಜಾಗದಲ್ಲಿಯೇ ಇದ್ದು ಹೊರಗಿರುವ ತನ್ನ ನಾಲ್ಕು ಕಾಲುಗಳನ್ನು ಮತ್ತು ತಲೆಯನ್ನು ಬೆನ್ನು ಚಿಪ್ಪಿನೊಳಗೆ ಮುದುಡಿಕೊಂಡು, ಹೊರಗಿನ ಸಂಬಂಧ ಅಂದರೆ ಹೊರಗೆ ಕಾಣಿಸದಂತೆ ಮಾಡಿಕೊಳ್ಳುತ್ತಿದೆ. ಆ ವಿಧವಾಗಿಯೇ ಮನುಷ್ಯ ತನ್ನ ಶರೀರವನ್ನು ಕದಲಿಸದಂತೆ ಹೊರಗಿನ ಇಂದ್ರಿಯಗಳಾದ ಜ್ಞಾನೇಂದ್ರಿಯಗಳಿಂದ ಮನಸ್ಸು ಒಂದರ ಸಂಬಂಧ ಇಲ್ಲದಂತೆ ಮಾಡಿಕೊಳ್ಳಬೇಕು. ಹಾಗೆ ಮಾಡಿಕೊಳ್ಳುವುದೇ ಬ್ರಹ್ಮಯೋಗದಲ್ಲಿನ ಕೆಲಸ.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾಗಿರುವುದು ಏನೆಂದರೆ! ಆಮೆ ಚಲಿಸುವಾಗ ಚಿಪ್ಪಿನಕೆಳಗೆ ಅವಯವಗಳನ್ನು ಮುದುಡಿಕೊಳ್ಳುವುದಿಲ್ಲ. ಮುದುಡಿಕೊಂಡರೆ ಮುಂದಕ್ಕೆ ಚಲಿಸುವುದಿಲ್ಲ. ಆಮೆ ಚಲಿಸದಿರುವಾಗಲೇ ತನ್ನ ಕಾಲುಗಳು ತಲೆಯನ್ನು ಮುದಿಡಿಕೊಳ್ಳುವಂತೆ, ಮನುಷ್ಯನೂ ಸಹ ಒಂದು ಕಡೆ ಸ್ಥಿರವಾಗಿ ಕುಳಿತುಕೊಂಡಾಗಲೇ ತನ್ನ ಮನಸ್ಸನ್ನು ಇಂದ್ರಿಯಗಳ ಸಂಬಂಧವನ್ನು ಇಲ್ಲದಂತೆ ಮಾಡಿಕೊಳ್ಳುತ್ತಾನೆ. ಕಾಲುಗಳನ್ನು ಮುದಿಡಿಕೊಂಡು ಆಮೆ ಹೇಗೆ ಮುಂದಕ್ಕೆ ಹೋಗುವುದಿಲ್ಲವೋ, ಹಾಗೆಯೇ ಮನುಷ್ಯನ ಮನೋಧ್ಯಾಸವನ್ನು ಇಂದ್ರಿಯಗಳಿಂದ ಮರಳಿಸಿಕೊಂಡು ಯಾವ ಸಣ್ಣ ಕಾರ್ಯವನ್ನಾದರೂ ಮಾಡಲಾರನು. ಕೆಲವರು ಕೆಲಸಗಳು ಮಾಡುತ್ತಾ ಮನಸ್ಸನ್ನು ಮರಳಿಸಿಕೊಳ್ಳಬೇಕೆಂದು

ಹೇಳುತ್ತಿರುತ್ತಾರೆ. ಅದು ಶುದ್ಧ ಅಸತ್ಯವೆಂದು ತಿಳಿಯಬೇಕು. ಬ್ರಹ್ಮಯೋಗವೆನ್ನುವ ಮನೋನಿಶ್ಚಲತೆಯನ್ನು ಹೊಂದಿದವನು ಬಾಹ್ಯ ಸಂಬಂಧವಾದ ಎಲ್ಲಾ ಇಂದ್ರಿಯ ಚಲನೆಗಳು ಇಲ್ಲದವನಾಗಿರುತ್ತಾನೆ.

**(1) ಶ್ಲೋ॥ 59 : ವಿಷಯಾ ವಿನಿವರ್ತನ್ತೇ ನಿರಾಹಾರಸ್ಯ ದೇಹಿನಃ ।**
**ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥**
**(ಬ್ರಹ್ಮಯೋಗ)**

**ಭಾವಾರ್ಥ :** ಬ್ರಹ್ಮಯೋಗವನ್ನಾಚರಿಸುವ ಯೋಗಿ ಇಂದ್ರಿಯಗಳಿಗೆ ಆಹಾರವಾದಂತಹ ವಿಷಯಗಳಲ್ಲಿ ಮನೋಧ್ಯಾಸ ಇಲ್ಲದಂತೆ ಮಾಡಿಕೊಂಡರೂ, ಅವನ ತಲೆಯಲ್ಲಿನ ವಿಷಯಗಳ ಮೇಲೆ ಆಸೆ ಎಂಬ ಗುಣವು ಬಿಡದಂತೆ ಇರುತ್ತದೆ. ಆ ಆಸೆಯು ಸ್ವಲ್ಪಕಾಲ ಆತ್ಮವನ್ನು ದರ್ಶಿಸುವುದರಿಂದ ನಶಿಸಿಹೋಗುತ್ತದೆ.

**ವಿವರ :** ಒಬ್ಬ ರೋಗಿ ಪಥ್ಯವಿದ್ದು ಒಂದು ರುಚಿಯಾದ ಪದಾರ್ಥವು ತಿನ್ನದಿದ್ದರೂ ಆ ಪದಾರ್ಥದ ಮೇಲೆ ಆಸೆ ಇರುವಂತೆ, ಯೋಗಿ ವಿಷಯಗಳನ್ನು ಅನುಭವಿಸದೆ ಪಥ್ಯವಾದ ಬ್ರಹ್ಮಯೋಗವು ಆಚರಿಸಿದರೂ, ಅವನ ತಲೆಯಲ್ಲಿ ವಿಷಯಾಸಕ್ತಿ ಇರುವ ಆಸೆ ಎಂಬ ಗುಣವು ಅಡಗಿದ್ದು, ಆಗಾಗ ವಿಷಯಗಳ ಮೇಲೆ ಆಸಕ್ತಿಯನ್ನುಂಟುಮಾಡುತ್ತಾ, ಮನಸ್ಸನ್ನು ಚಲಿಸುವಂತೆ ಮಾಡಿ ಯೋಗಭಂಗವು ಉಂಟುಮಾಡುತ್ತಿರುತ್ತದೆ. ಆದ ಕಾರಣ ಬ್ರಹ್ಮಯೋಗಿ ಒಂದು ಗಂಟೆಕಾಲ ಯೋಗಸಾಧನೆಯಲ್ಲಿ ಕಳೆದರೆ, ಕೆಲವು ನಿಮಿಷಗಳ ಕಾಲವಾದರು ಮನಸ್ಸು ಚಲಿಸಿ ಯೋಗಭಂಗವು ನಡೆಯುತ್ತಿರುತ್ತದೆ. ಈ ವಿಧವಾಗಿ ನಡೆಯುತ್ತಿದ್ದರೂ ಬ್ರಹ್ಮಯೋಗವನ್ನು ಆಚರಿಸುವವನಿಗೆ ಸ್ವಲ್ಪ ಕಾಲಕ್ಕೆ ಅಂತಹ ಮನೋಚಂಚಲವಾದ ಕೋರಿಕೆಗಳು ಸಹ ಬಾರದಂತೆ ಹೋಗುತ್ತವೆ.

ಬ್ರಹ್ಮಯೋಗವಾಚರಿಸುವ ಯಾವ ಯೋಗಿಗಾದರು ಮನೋಚಂಚಲವು ಯೋಗ ಸಮಯದಲ್ಲಿ ಉಂಟಾಗುವುದು ಸಹಜ. ಅದನ್ನು ಕುರಿತು ಕೆಳಗಿನ ಶ್ಲೋಕದಲ್ಲಿ ಈ ವಿಧವಾಗಿ ಹೇಳುತ್ತಿದ್ದಾನೆ.

**(1) ಶ್ಲೋ॥ 60 : ಯತತೋ ಹ್ಯಪಿ ಕೌನ್ತೇಯ! ಪುರುಷಸ್ಯ ವಿಪಶ್ಚಿತಃ ।**
**ಇಂದ್ರಿಯಾಣಿ ಪ್ರಮಾಥೀನಿ ಹರನ್ತಿ ಪ್ರಸಭಂ ಮನಃ ॥**
**(ಬ್ರಹ್ಮಯೋಗ)**

**ಭಾವಾರ್ಥ :** ಜ್ಞಾನಿಯಾದವನು ಯೋಗ ಸಮಯದಲ್ಲಿ ಮನಸ್ಸು ಚಲಿಸದಂತೆ ಇರುವುದಕ್ಕೆ ಎಷ್ಟು ಪ್ರಯತ್ನ ಮಾಡುತ್ತಿದ್ದರೂ, ಯೋಗಭ್ರಷ್ಟತೆ ಎಂಬ ಪ್ರಮಾದ ಉಂಟಾಗುವಂತೆ ಇಂದ್ರಿಯಗಳು ಅವನ ಮನಸ್ಸನ್ನು ಚಲಿಸುವಂತೆ ಮಾಡುತ್ತಿವೆ.

**ವಿವರ :** ಬ್ರಹ್ಮಯೋಗವನ್ನಾಚರಿಸುವವನು ಎಂತಹ ಜ್ಞಾನಿಯಾದರೂ, ಆತನು ಯೋಗ ಮಾಡುವ ಸಮಯದಲ್ಲಿ ಹೊರಗಿನ ಜ್ಞಾನೇಂದ್ರಿಯಗಳು ಐದು, ಅವವುಗಳ ವಿಷಯವನ್ನು ಮನಸ್ಸಿಗೆ ತಿಳಿಸುವ ಸಾಮರ್ಥ್ಯವು ಹೊಂದಿ, ಮನಸ್ಸನ್ನು ಏಕಾಗ್ರತೆಯಾಗಿ ಇಲ್ಲದಂತೆ ವಿಷಯ ಸಂಬಂಧವನ್ನು ಉಂಟಾಗುವಂತೆ ಮಾಡುತ್ತವೆ. ಬ್ರಹ್ಮಯೋಗವನ್ನು ಆಚರಿಸುವುದಕ್ಕೆ ಆಸೀನನಾದ ಪ್ರತಿ ಯೋಗಿಯೊಂದರ ಶರೀರದಲ್ಲಿನ ಜ್ಞಾನೇಂದ್ರಿಯಗಳು ಶತ್ರುಗಳಂತೆ ಕೆಲಸಮಾಡಿ, ಅವನ ಯೋಗವನ್ನು ವಿಘ್ನಪಡಿಸುತ್ತಿವೆ. ಇಂದ್ರನು ಪುರಾಣಗಳಲ್ಲಿ ಅಗ್ನಿ, ವರುಣ, ವಾಯು ಮೊದಲಾದವರನ್ನು ಕಳುಹಿಸಿ ತಪಸ್ಸು ಮಾಡುವವರನ್ನು ವಿಘ್ನಪಡಿಸಿದಂತೆ, ನಿಜ ಜೀವನದಲ್ಲಿ ಯೋಗವಾಚರಿಸುವವರಿಗೆ ಅಗ್ನಿ, ನೀರು, ವಾಯು, ಭೂಮಿಯಿಂದ ತಯಾರಾದ ಇಂದ್ರಿಯಗಳ ಮೂಲಕ ಯೋಗವು ಭಂಗವಾಗುವಂತೆ ಪ್ರಕೃತಿ ಮಾಡುತ್ತಿದೆ.

**<u>ಗಮನಿಕೆ :</u>** ಜ್ಞಾನ ಜಿಜ್ಞಾಸರಾದ ಪಾಠಕರಿಗೆ ತಿಳಿಸುವುದು ಏನೆಂದರೆ! ಪಂಡಿತರಾಗಿರುವವರು. ಮೇಧಾವಿಗಳು ಶ್ಲೋಕ ಭಾವವು ಓದಿ ವಿವರಣೆ ಓದಿದರು ಪರವಾಗಿಲ್ಲ. ಹಾಗಲ್ಲದೆ ನಮಗೆ ಸಂಸ್ಕೃತವು ಅರ್ಥವಾಗುವುದಿಲ್ಲ, ನಮಗೆ ಗೀತೆಯಲ್ಲಿನ ಜ್ಞಾನವು ಮಾತ್ರವೇ ಅವಶ್ಯ. ಭಾವ, ವಿವರ ಒಂದು ಚಿಕ್ಕದು ಒಂದು ದೊಡ್ಡದು ಏನು ನಮಗೆ ಅರ್ಥವಾಗುತ್ತಿಲ್ಲ ಎಂದುಕೊಳ್ಳುವವರಿಗೆ ಸುಲಭವಾಗಿ ಗೀತೆಯೊಂದರ ಜ್ಞಾನವು ಅರ್ಥವಾಗ ಬೇಕೆಂದರೆ ಶ್ಲೋಕದ ಭಾವ ಬಿಟ್ಟು ಕೇವಲ ವಿವರವನ್ನು ಮಾತ್ರವೇ ಓದುತ್ತಾ ಹೋಗಿ. ಹಾಗೆ ವಿವರವನ್ನು ಮಾತ್ರ ಓದುವುದರಿಂದ ಗೀತೆಯಲ್ಲಿನ ಜ್ಞಾನವು ಸುಲಭವಾಗಿ ಅರ್ಥವಾಗುತ್ತದೆಂದು ನಮ್ಮ ನಂಬಿಕೆ. ನೀವು ಯಾವುದು ಓದಿದರೂ ಆ ವಿವರವು ಯಾವ ವಿಷಯವನ್ನು ಕುರಿತು ಹೇಳಿರುವುದು ಸೂಚನೆಯಾಗಿ ಶ್ಲೋಕದ ಪಕ್ಕದಲ್ಲಿ ಬ್ರಾಕೇಟ್‌ನಲ್ಲಿ ಸೂಚಿಸಿರುವುದನ್ನು ತಪ್ಪದೆ ನೋಡಿರಿ.

**(1) ಶ್ಲೋ॥ 61 : ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ ।**

**ವಶೇ ಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥**

**(ಬ್ರಹ್ಮಯೋಗ)**

**ಭಾವಾರ್ಥ:** ಇಂದ್ರಿಯಗಳನ್ನೆಲ್ಲ ನಿಗ್ರಹಿಸಿಕೊಂಡು ಮನಸ್ಸನ್ನು ನನ್ನಲ್ಲಿ ಯಾರು ಇಡುತ್ತಾರೊ ಇಂದ್ರಿಯಗಳು ಯಾರಿಗೆ ಸ್ವಾಧೀನವಾಗಿರುತ್ತವೋ ಅಂತಹವನ ಪ್ರಜ್ಞೆ ಸ್ಥಿರವಾದುದು.

**ವಿವರ :** ಹೊರಗಿನ ಜ್ಞಾನೇಂದ್ರಿಯಗಳು ಅವವುಗಳ ಸಮಾಚಾರವನ್ನು ಮನಸ್ಸಿಗೆ ತಿಳಿಸಿದರೂ, ಮನಸ್ಸು ಅವುಗಳನ್ನು ಸ್ವೀಕರಿಸದ ಸ್ಥಿತಿಯಲ್ಲಿರುವಾಗ ಜ್ಞಾನೇಂದ್ರಿಯಗಳು ಏನು ಮಾಡಲಾರವು. ಮನಸ್ಸಿನೊಂದರ ಧ್ಯಾಸವನ್ನು ಜ್ಞಾನೇಂದ್ರಿಯಗಳ ಮೇಲೆ ಇಲ್ಲದಂತೆ ಮಾಡಿದರೆ ಅದರ ಧ್ಯಾಸ ಆತ್ಮದ ಮೇಲೆ ಏರ್ಪಡುತ್ತದೆ. ಜ್ಞಾನೇಂದ್ರಿಯಗಳ ವಿಷಯ ಧ್ಯಾಸ ಮನಸ್ಸಿಗೆ ಇಲ್ಲದಿರುವಾಗ ಕರ್ಮೇಂದ್ರಿಯಗಳಿಗೆ ಮನಸ್ಸಿನ ಮೂಖಾಂತರ ಯಾವ ಕೆಲಸವು ಆದೇಶಿಸಲ್ಪಡುವುದಿಲ್ಲ. ಆದ ಕಾರಣ ಕರ್ಮೇಂದ್ರಿಯಗಳು ವಶೀಕರಣ ಮಂತ್ರ ಪ್ರಯೋಗಿಸಿದಂತೆ ಕದಲದೆ ನಿಂತುಹೋಗಿರುತ್ತವೆ. ಅಂತಹ ಸ್ಥಿತಿಯನ್ನು ಹೊಂದಿರುವ ವನನ್ನೇ ನಿಶ್ಚಲ ಮನಸ್ಸಿರುವವನೆಂದು ಹೇಳಬಹುದು.

**(1) ಶ್ಲೋ॥ 62 : ಧ್ಯಾಯತೋ ವಿಷಯಾನ್ ಪುಂಸಸ್ಸಂಗ ಸ್ತೇಷೂಪಜಾಯತೇ ।**
**ಸಂಗಾತ್ ಸಂಜಾಯತೇ ಕಾಮಃ ಕಾಮಾತ್ಕ್ರೋಧೋಽಭಿಜಾಯತೇ ॥**
**(ಪ್ರಕೃತಿ)**

**ಭಾವಾರ್ಥ :** ವಿಷಯಗಳ ಧ್ಯಾಸದಲ್ಲಿ ಅವುಗಳ ಸಂಗಮ ಮಾನವನಿಗೆ ಏರ್ಪಡುತ್ತಿದೆ. ಅಂತಹ ಸಂಗಮದಿಂದ ಮಾನವನಿಗೆ ಕೋರಿಕೆ ಹುಟ್ಟುತ್ತಿದೆ. ಅದರಿಂದ ಕ್ರೋಧವು ಹುಟ್ಟುತ್ತಿದೆ.

**ವಿವರ :** ಜ್ಞಾನೇಂದ್ರಿಯಗಳಾದ ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮವೊಂದರ ವಿಷಯಗಳ ಮೇಲೆ ಮನಸ್ಸಿಗೆ ಧ್ಯಾಸ ಉಂಟಾಗುವುದರಿಂದ, ಅವನ ತಲೆಯಲ್ಲಿನ ಗುಣಗಳ ಗುಂಪಿನೊಳಗೆ ಆ ವಿಷಯವು ಹೋಗಿ ಸೇರುತ್ತಿದೆ. ಜ್ಞಾನೇಂದ್ರಿಯಗಳಿಂದ ಬರುವ ವಿಷಯವು ಗುಣಗಳ ಗುಂಪಿನಲ್ಲಿ ಬೆರೆಯುವುದರಿಂದ, ಆ ವಿಷಯವನ್ನನುಸರಿಸಿ ಮೊದಲ ಗುಣಗಳ ಗುಂಪಿನಿಂದ ಕೋರಿಕೆ ಏರ್ಪಡುತ್ತಿದೆ. ಆ ಕೋರಿಕೆ ನೆರವೇರದೆ ಹೋದರೆ ಅದರಿಂದಲೇ ಕೋಪ ಗುಣಸಂಗಮದಿಂದ ಬರುತ್ತಿದೆ. ಇನ್ನೂ ಆ ಗುಣಗಳು ಉಂಟಾಗುವುದು ಹೇಗಿರುತ್ತದೆಂದರೆ!

**(1) ಶ್ಲೋ॥ 63 : ಕ್ರೋಧಾದ್ ಭವತಿ ಸಮ್ಮೋಹ ಸ್ಸಮ್ಮೋಹಾತ್ ಸ್ಮೃತಿವಿಭ್ರಮಃ ।**
**ಸ್ಮೃತಿ ಭ್ರಂಶಾ ದ್ಬುದ್ಧಿನಾಶೋ ಬುದ್ಧಿ ನಾಶಾತ್ಪ್ರಣಶ್ಯತಿ ॥**
**(ಪ್ರಕೃತಿ)**

**ಭಾವಾರ್ಥ :** ಕ್ರೋಧದಿಂದ ಸಮ್ಮೋಹ ಉಂಟಾಗುತ್ತದೆ. ಸಮ್ಮೋಹದಿಂದ ಸ್ಮೃತಿ ಭ್ರಮಿಸುವುದು, ಸ್ಮೃತಿ ಭ್ರಮಿಸುವುದರಿಂದ ಬುದ್ಧಿನಾಶ, ಬುದ್ಧಿನಾಶದಿಂದ ಭ್ರಷ್ಟತ್ವ ಹೊಂದುವುದು ಉಂಟಾಗುತ್ತದೆ.

**ವಿವರ :** ಗುಣಚಕ್ರದಲ್ಲಿರುವ ಗುಣಗಳೊಳಗೆ ಮನಸ್ಸಿನ ಮೂಲಕ ವಿಷಯವು ಹೋಗಿ ಸೇರಿದ ಕೂಡಲೇ ಅದರಲ್ಲಿನ ಗುಣಗಳು ಕದಲುವುದಕ್ಕೆ ಪ್ರಾರಂಭವಾಗುತ್ತವೆ. ಮೊದಲನೆಯದು ಕೋರಿಕೆ, ಎರಡನೆಯದು ಕೋಪ ಹಾಗೆ ಇತರ ಲೋಭ, ಮೋಹ, ಮಧ, ಮತ್ಸರಗಳೆನ್ನುವ ಗುಣಗಳು ಉಂಟಾಗುತ್ತಿರುತ್ತವೆ. ವಿಷಯಕ್ಕೆ ತಕ್ಕಂತೆ ಗುಣ ಬಂದ ತಕ್ಷಣ ಇತರ ಗುಣವನ್ನು ಆಲೋಚಿಸುವುದು ಬಿಟ್ಟು ಆ ಬಂದಿರುವ ಗುಣದಲ್ಲಿಯೇ ಸಮ್ಮೋಹನನಾಗಿ ನಿಲ್ಲುತ್ತಾನೆ. ಸ್ವಲ್ಪ ಸಮಯಕ್ಕೆ ಆ ಗುಣವನ್ನು ಯೋಚಿಸುವ ಜ್ಞಾಪಕವೂ ಸಹ ಇಲ್ಲದಂತೆ ಚಿತ್ತ ನಿರ್ಣಯಿಸುತ್ತದೆ. ಯೋಚಿಸುವ ಜ್ಞಾಪಕವೂ ಸಹ ಇಲ್ಲದಿರುವುದರಿಂದ ಬುದ್ಧಿಯೊಂದರ ಕೆಲಸ ಏನು ಇಲ್ಲದಂತೆ ಹೋಗುತ್ತದೆ. ಬುದ್ಧಿಯ ಕೆಲಸ ಇಲ್ಲದಂತಿರುವು ದರಿಂದ ಮಾನವನು ವಿಚಕ್ಷಣಾ ರಹಿತನಾಗಿ ಕರ್ಮದ ಪ್ರಕಾರ ಕೆಲಸಗಳು ಮಾಡುತ್ತಾ ಕರ್ಮಬದ್ಧನಾಗುತ್ತಿದ್ದಾನೆ.

ಒಂದು ವಿಷಯವು ಜ್ಞಾನೇಂದ್ರಿಯಗಳ ಮೂಲಕ ಒಳಗೆಹೋದಾಗ, ಮನಸ್ಸಿನ ಮೂಲಕ ಬುದ್ಧಿಗೆ ಸೇರುತ್ತದೆ, ಬುದ್ಧಿ ಗುಣಗಳ ಮೂಲಕ ಯೋಚಿಸುತ್ತದೆ. ಬುದ್ಧಿ ಯೋಚಿಸಿದ ವಿಷಯವನ್ನೇ ಕರ್ಮಪ್ರಕಾರ ಚಿತ್ತದಿಂದ ನಿರ್ಣಯಿಸಲ್ಪಡುತ್ತಿದೆ. ಮೇಲಿನ ಎರಡು ಶ್ಲೋಕಗಳು ಸಾಧಾರಣ ಮಾನವನಲ್ಲಿ ನಡೆಯುವ ವಿವರವನ್ನು ತಿಳಿಸಿರುವವು. ಯೋಗಿಯಾಗಿ ಬದಲಾಗುವವನ ವಿಷಯ ಕೆಳಗಿನ ಶ್ಲೋಕದಲ್ಲಿ ಹೀಗೆ ಇದೆ.

**(1) ಶ್ಲೋ॥ 64 : ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ ।**
**ಆತ್ಮವಶ್ಯೈ ರ್ವಿಧೇಯಾತ್ಮಾ ಪ್ರಸಾದ ಮಧಿಗಚ್ಛತಿ ॥**

**(ಬ್ರಹ್ಮಯೋಗ)**

**ಭಾವಾರ್ಥ :** ರಾಗದ್ವೇಷಗಳನ್ನು ಬಿಟ್ಟು ಹಾಗೆ ಇಂದ್ರಿಯ ವಿಷಯಗಳನ್ನು ಬಿಟ್ಟು ಸ್ವಾಧೀನಪಟ್ಟ ಮನಸ್ಸು ಇರುವವನು ಯಾವಾಗಾದರೆ ಆಗಲೇ ಪ್ರಸನ್ನತೆಯನ್ನು ಹೊಂದುತ್ತಾನೆ.

**ವಿವರ :** ಒಳಗಿನಿಂದ ಬರುವ ಪ್ರೇಮ ಅಸೂಯೆ ಎನ್ನುವ ಎರಡು ವಿಧದ ಗುಣಗಳನ್ನು ಬಿಟ್ಟು, ಹೊರಗಿನಿಂದ ಬರುವ ಇಂದ್ರಿಯ ವಿಷಯಗಳನ್ನು ಬಿಟ್ಟು, ಯಾವ ಧ್ಯಾಸಗಳಿಲ್ಲದೆ ವಶವಾದ ಮನಸ್ಸು ಇರುವವನಿಗೆ ಆತ್ಮ ದರ್ಶನವಾಗುವುದು.

ಇಲ್ಲಿ ರಾಗದ್ವೇಷಗಳು (ಪ್ರೇಮ ಅಸೂಯೆಗಳು) ಎನ್ನುವ ಮಾತು ಬಂದಿದೆ. ಆದುದರಿಂದ ಗುಣಗಳ ಬಗ್ಗೆ ಪೂರ್ತಿಯಾಗಿ ತಿಳಿಯಬೇಕಾಗಿದೆ. ನಮ್ಮ ಶರೀರದಲ್ಲಿ ಷಟ್‌ವರ್ಗಗಳೆಂಬ ಆರುಗುಣಗಳ ಗುಂಪು ಹೆಸರುವಾಸಿಯಾಗಿವೆ. ಅವುಗಳೇ **1) ಕಾಮ 2) ಕ್ರೋಧ 3) ಲೋಭ 4) ಮೋಹ 5) ಮಧ 6) ಮತ್ಸರವೆಂಬ** ಗುಣಗಳು. ಇವು ಆರು ಕೆಟ್ಟದನ್ನು ಸೂಚಿಸುವ ಗುಣಗಳು. ಈ ಗುಣಗಳು ಇರುವವರನ್ನು ಅಸುರರೆಂದು, ಈ ಗುಣಗಳಿಗಿಂತ ವಿರುದ್ಧ ಗುಣಗಳು ಇರುವವರನ್ನು ದೇವತೆಗಳೆಂದು ಗೀತೆಯಲ್ಲಿ ನಂತರ ಅಧ್ಯಾಯಗಳಲ್ಲಿ ತಿಳಿಸಲಾಗಿದೆ. ಕೆಟ್ಟದನ್ನು(ಪಾಪವನ್ನು) ಉಂಟುಮಾಡುವ ಕಾಮ, ಕ್ರೋಧ, ಲೋಭ, ಮೋಹ, ಮಧ, ಮತ್ಸರಗಳೆಂಬ ಗುಣಗಳನ್ನು ಎಲ್ಲರಿಗೂ ತಿಳಿಯುವಂತೆ ದೊಡ್ಡವರು ಹೆಚ್ಚಾಗಿ ಪ್ರಚಾರ ಮಾಡಿದ್ದಾರೆ. ಏಕೆಂದರೆ ಅವು ತಿಳಿದಿದ್ದರೆ ಅವುಗಳಲ್ಲಿ ಎಚ್ಚರಿಕೆಯಿಂದ ಇರುತ್ತಾರೆಂಬ ಭಾವದಿಂದ ಎಲ್ಲರಿಗೂ ತಿಳಿಯುವಂತೆ ಮಾಡಿದ್ದಾರೆ. ಇನ್ನು ಒಳ್ಳೆಯದನ್ನು (ಪುಣ್ಯ)ಉಂಟುಮಾಡುವ ಆರು ಗುಣಗಳಿವೆ. ಅವು ಮೊದಲ ಆರು ಗುಣಗಳಿಗೆ ವಿರುದ್ಧವಾದವು. ಯಾವುದಕ್ಕೆ ಯಾವುದು ವಿರುದ್ಧವಾದುದು ಕೆಳಗೆ ತಿಳಿದುಕೊಳ್ಳೋಣ.

| | |
|---|---|
| **1) ಕಾಮ X ದಾನ** | **2) ಕ್ರೋಧ X ದಯೆ** |
| **3) ಲೋಭ X ಔಧಾರ್ಯ** | **4) ಮೋಹ X ವೈರಾಗ್ಯ** |
| **5) ಮಧ X ವಿನಯ** | **6) ಮತ್ಸರ X ಪ್ರೇಮ** |

ಹೀಗಿರುವ ಒಳ್ಳೆಯ, ಕೆಟ್ಟ ಗುಣಗಳಲ್ಲಿ ಯಾವ ಗುಣವು ಇಲ್ಲದಂತೆ ಹೋಗುವುದು ಬ್ರಹ್ಮಯೋಗವಾಗುತ್ತದೆ. ದ್ವೇಷ, ಪ್ರೇಮ ಎಂದು ಎರಡು ಗುಣಗಳು ಹೇಳುವುದರಲ್ಲಿ ಒಳ್ಳೆಯದು ಕೆಟ್ಟದು ಎನ್ನುವ ಎರಡು ವಿಧಗಳ ಗುಣಗಳು ಬಿಟ್ಟು, ಹಾಗೆ ಹೊರಗಿನ ಇಂದ್ರಿಯಗಳ ವಿಷಯಗಳು ಬಿಟ್ಟವನು ಬ್ರಹ್ಮಯೋಗಿಯಾಗುತ್ತಾನೆ. ಅವನಿಗೇ ಆತ್ಮದರ್ಶನವಾಗುತ್ತದೆಂದು ಈ ಶ್ಲೋಕದಲ್ಲಿ ತಿಳಿಸಲಾಗಿದೆ. ಅಂತಹವನಿಗೆ ಇನ್ನೂ ಹೇಗೆ ಇರುವುದು ಕೆಳಗೆ ಶ್ಲೋಕದಲ್ಲಿ ತಿಳಿಸಲಾಗಿದೆ.

**(1) ಶ್ಲೋ॥ 65 : ಪ್ರಸಾದೇ ಸರ್ವದುಃಖಾನಾಂ ಹಾನಿ ರಸ್ಯೋಪಜಾಯತೇ ।**
**ಪ್ರಸನ್ನ ಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತೇ ॥**
**(ಬ್ರಹ್ಮಯೋಗ)**

**ಭಾವಾರ್ಥ:** ಆತ್ಮದರ್ಶನ ಹೊಂದಿದಾಗಲೇ ಸರ್ವದುಃಖಗಳಿಗೆ ಹಾನಿ ಏರ್ಪಡುತ್ತದೆ. ಬುದ್ಧಿ ಸುಸ್ಥಿರತೆ ಹೊಂದುತ್ತದೆ. ಮನಸ್ಸು ನಿರ್ಮಲತ್ವವನ್ನು ಹೊಂದುತ್ತದೆ.

**ವಿವರ :** ಬ್ರಹ್ಮಯೋಗದಲ್ಲಿ ಮನಸ್ಸು ಒಳಗಿನ ಗುಣಗಳ, ಹೊರಗಿನ ಇಂದ್ರಿಯಗಳ ಧ್ಯಾಸ ಇಲ್ಲದಂತೆ ಹೋದಾಗ ಆತ್ಮದರ್ಶನವಾಗುತ್ತದೆ. ಒಂದುಬಾರಿ ಆತ್ಮದರ್ಶನ ಹೊಂದಿದವನಿಗೆ ನಂತರ ಎಷ್ಟು ದುಃಖಗಳು ತಟಸ್ಥಿಸಿದರೂ ಅವನು ಅವುಗಳನ್ನು ಲೆಕ್ಕಮಾಡುವುದಿಲ್ಲ. ಆತ್ಮಾನುಭೂತಿ ಮುಂದೆ ಯಾವ ದುಃಖವು ಕಾಣಿಸುವುದಿಲ್ಲ. ಒಂದುಬಾರಿ ಆತ್ಮದರ್ಶನ ಹೊಂದಿದವನಿಗೆ ಮನಸ್ಸೂ ಸಹ ಮೊದಲಿನಂತೆ ಚಲಿಸದೆ ನಿಲ್ಲುವುದಕ್ಕೆ ಅನುಕೂಲವಾಗಿರುತ್ತದೆ, ಬುದ್ಧಿಯು ಸ್ಥಿರಪಡುತ್ತದೆ. ಇಂತಹ ಸ್ಥಿತಿ ಹೊಂದದ ಮನುಷ್ಯನಿಗೆ ಹೇಗೆ ಇರುತ್ತದೆಂದರೆ ಕೆಳಗಿನ ಶ್ಲೋಕದಲ್ಲಿ ಹೀಗೆ ಹೇಳಲಾಗಿದೆ.

**(1) ಶ್ಲೋ॥ 66 : ನಾಸ್ತಿ ಬುದ್ದಿ ರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ ।**
**ನ ಚಾ ಭಾವಯತ ಶ್ಯಾನ್ತಿ ರಶಾನ್ತಸ್ಯ ಕುತ ಸ್ಸುಖಮ್ ॥**

**(ಬ್ರಹ್ಮಯೋಗ)**

**ಭಾವಾರ್ಥ :** ಯೋಗಿಹೀನನಿಗೆ ಬುದ್ಧಿ ಸ್ಥಿರವಾಗಿರುವುದಿಲ್ಲ. ದೈವಭಾವನೆ ಆತನಿಗೆ ಉಂಟಾಗುವುದಿಲ್ಲ. ದೈವಭಾವನೆ ಇಲ್ಲದವನಿಗೆ ಶಾಂತಿಯಿಲ್ಲ. ಶಾಂತಿ ಇಲ್ಲದವನಿಗೆ ಸುಖವಿರುವುದಿಲ್ಲ.

**ವಿವರ :** ಮನಸ್ಸು ಸ್ಥಿರವಾಗಿಲ್ಲದವನಿಗೆ ಬುದ್ಧಿಯೂ ಸಹ ಸ್ಥಿರವಾಗಿರುವುದಿಲ್ಲ. ಏಕೆಂದರೆ ಮನಸ್ಸು ತಿಳಿಸುವ ವಿಷಯಗಳನ್ನು ಆಲೋಚಿಸಬೇಕಾದ ಕೆಲಸ ಬುದ್ಧಿಗಿದೆ. ಆದ ಕಾರಣ ಮನಸ್ಸು ಸ್ಥಿರವಾಗುವವರೆಗೂ ಬುದ್ಧಿ ಸ್ಥಿರವಾಗುವುದಿಲ್ಲ. ಯಾವಾಗಲೂ ಹೊರಗಿನ ವಿಷಯಗಳನ್ನೇ ಯೋಚಿಸುವ ಬುದ್ಧಿಗೆ ದೈವಭಾವನೆ ಮೇಲೆ ಧ್ಯಾಸವಿರುವುದಿಲ್ಲ. ದೈವಭಾವನೆ ಇಲ್ಲದವನು ರಾಜಕೀಯ ವ್ಯಕ್ತಿಯಾಗಲಿ, ಉನ್ನತ ಉದ್ಯೋಗಿಯಾಗಲಿ, ದೊಡ್ಡ ಜಮೀನುದಾರನಾಗಲಿ ಅವನಿಗೆ ಎಲ್ಲಾ ಇದ್ದರೂ ಮನಃಶಾಂತಿ ಇರುವುದಿಲ್ಲ. ಶಾಂತಿ ಇಲ್ಲದವನು ಸುಖಗಳ ಮಧ್ಯದಲ್ಲಿದ್ದರು ಸುಖವೇನೋ ಅವನಿಗೆ ತಿಳಿಯುವುದಿಲ್ಲ. ಒಳಗೆ ಏನೋ ತೀರದ ಲೋಪದಿಂದ ಅಸಂತೃಪ್ತಿಯಿಂದ ಬಾಧೆಪಡುತ್ತಿರುತ್ತಾನೆ.

**(1) ಶ್ಲೋ॥ 67 : ಇಂದ್ರಿಯಾಣಾಂ ಹಿಚರತಾಂ ಯಸ್ಮನೋಽನುವಿದೇಯತೇ ।**
**ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವ ಮಿವಾಂಭಸಿ ॥**

**(ಪ್ರಕೃತಿ)**

**ಭಾವಾರ್ಥ:** ಯಾವ ಮನುಷ್ಯನ ಮನಸ್ಸು ಇಂದ್ರಿಯಗಳ ಹಿಂದೆ ತಿರುಗುತ್ತಿದೆಯೋ ಅವನ ಬುದ್ಧಿಯೂ ಗಾಳಿಯಿಂದ ದೋಣಿ ಚಲಿಸಿದಂತೆ ಚಲಿಸುತ್ತಿರುತ್ತದೆ.

**ವಿವರ :** ಶರೀರವು ಒಂದು ಯಂತ್ರವಿದ್ದಹಾಗೆ. ಯಂತ್ರಗಳಲ್ಲಿ ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ಅನುಬಂಧವಿದ್ದಂತೆ, ಶರೀರ ಹೊರಗಿನ ಇಂದ್ರಿಯಗಳಾದ ಜ್ಞಾನೇಂದ್ರಿಯಗಳಿಗೂ ಒಳಗಿನ ಮನಸ್ಸಿಗೂ ಸಂಬಂಧವಿದೆ. ಮನಸ್ಸು ಹೊರಗಿನ ಜ್ಞಾನೇಂದ್ರಿಯ ವಿಷಯಗಳನ್ನು ಗ್ರಹಿಸಬಹುದು. ಅಥವಾ ಗ್ರಹಿಸದಂತೆಹೋಗಬಹುದು. **ಮೋಟಾರ್‌ಗಾಡಿಗಳ ಗೇರ್‌ಬಾಕ್ಸ್‌ನೊಳಗಿನ ಸಿಸ್ಟಮ್‌ನಂತೆ ಮನಸ್ಸಿದೆ.** ಇತ್ತ ಒಳಗಿನ ವಿಷಯಗಳೊಂದಿಗೆಯೂ ಸಂಬಂಧಪಡೆಯಬಹುದು, ಅತ್ತ ಹೊರಗಿನ ವಿಷಯಗಳೊಂದಿಗೆಯೂ ಸಂಬಂಧಪಡಬಹುದು. ಯಾವ ಇಲ್ಲದೆ ಸುಮ್ಮನೆಯೂ ಇರಬಹುದು. ಮೋಟಾರ್ ಗಾಡಿಗಳ ಗೇರ್‌ಬಾಕ್ಸ್‌ನಲ್ಲಿನ 'ಮೆಯಿನ್ರಾಡ್' ಇತ್ತ ಮುಂದಕ್ಕೆ ನಡೆಯುವ ಚಕ್ರದೊಂದಿಗೂ ಅತ್ತ ಹಿಂದಕ್ಕೆ ನಡೆಯುವ ಚಕ್ರದೊಂದಿಗೂ ಸಂಬಂಧ ಪಟ್ಟಿರಬಹುದು. ಯಾವಕಡೆಯೂ ಇಲ್ಲದೆ ನ್ಯೂಟ್ರಲ್‌ನಂತೆ ಯಾವ ಚಕ್ರದೊಂದಿಗೂ ಸಂಬಂಧವಿಲ್ಲದೆ ಇರಬಹುದು. ಹಾಗೆಯೇ ಮನಸ್ಸು ಇತ್ತ ಹೊರಗೂ ಅತ್ತ ಒಳಗೂ ಸಂಬಂಧಹೊಂದಿದೆ, ಹೊರಗಿನ ಸಂಬಂಧಹೊಂದಿ ಹೊರಗಿನ ವಿಷಯಗಳನ್ನು ಗ್ರಹಿಸಿ ತಕ್ಷಣ ಒಳಗಿನ ಸಂಬಂಧಹೊಂದಿ ಒಳಗಿನ ಬುದ್ಧಿಗೆ ತಿಳಿಸುತ್ತಿದೆ. ಒಳಗೆ ಬಂದಿರುವ ವಿಷಯಗಳನ್ನು ಬುದ್ಧಿ ಯೋಚಿಸುವುದು ಅದರ ಸಹಜ ಕರ್ತವ್ಯ. ಮನಸ್ಸು ತಿಳಿಸಿದಂತೆಲ್ಲ ಬುದ್ಧಿ ಯೋಚಿಸಬೇಕಾಗಿದೆ. ಆದ ಕಾರಣ ಗಾಳಿಯಿಂದ ದೋಣಿ ಚಲಿಸಿದಂತೆ ಮನೋ ವಿಷಯಗಳಿಂದ ಬುದ್ಧಿ ಚಲಿಸುತ್ತಿದೆ. ಈ ಯಂತ್ರಾಂಗವೆಲ್ಲವೂ ಸಹಜವಾಗಿ ಪ್ರಕೃತಿಯಲ್ಲಿನ ಮಾನವನಲ್ಲಿ ನಡೆಯುತ್ತಿರುತ್ತದೆ. ಮಾನವನು ಪ್ರಯತ್ನಿಸಿ ಬ್ರಹ್ಮಯೋಗಿಯಾಗಿ ಹೇಗೆ ಬದಲಾಗಬೇಕೆಂದರೆ ಕೆಳಗಿನ ಶ್ಲೋಕವನ್ನು ನೋಡಿರಿ.

**(1) ಶ್ಲೋ॥ 68 : ತಸ್ಮಾದ್ಯಸ್ಯ ಮಹಾಬಾಹೋ ! ನಿಗೃಹೀತಾನಿ ಸರ್ವಶಃ ।**
**ಇಂದ್ರಿಯಾಣೇಂದ್ರಿಯಾರ್ಥೇಭ್ಯ ಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥**
**(ಬ್ರಹ್ಮಯೋಗ)**

**ಭಾವಾರ್ಥ :** ಯಾರು ಇಂದ್ರಿಯಗಳೊಂದರ ಸರ್ವ ವಿಷಯಗಳನ್ನು ನಿಗ್ರಹಿಸುತ್ತಿದ್ದಾರೋ ಅಂಥವರ ಪ್ರಜ್ಞೆ ಸ್ಥಿರವಾಗಿ ನಿಂತಿರುವುದಾಗಿರುತ್ತದೆ.

**ವಿವರ :** ಯಾರ ಮನಸ್ಸು ಐದು ಜ್ಞಾನೇಂದ್ರಿಯಗಳಾದ ಕಣ್ಣು, ಮೂಗು, ಕಿವಿ, ನಾಲಿಗೆ, ಚರ್ಮವೊಂದರ ಸರ್ವ ವಿಷಯಗಳನ್ನು ಬಿಟ್ಟು ಯಾವಕಡೆಯೂ ಅಲ್ಲದೆ ಸ್ಥಿರ ವಾಗಿರುತ್ತದೋ, ಆಗ ಹೊರಗಿನ ವಿಷಯಗಳು ಸೇರದಿರುವುದರಿಂದ ಬುದ್ಧಿಯಾವ ಗುಣದಿಂದ ಯೋಚಿಸದೆ ನಿಂತುಹೋಗುತ್ತದೆ. ಅಂತಹ ಸ್ಥಿತಿಯನ್ನೇ ಬ್ರಹ್ಮಯೋಗವೆನ್ನುತ್ತೇವೆ. ಬ್ರಹ್ಮಯೋಗವನ್ನು ಕುರಿತು ಇನ್ನು ಹೇಳುವುದೇನೆಂದರೆ! ಕೆಳಗಿನ ಶ್ಲೋಕದಲ್ಲಿ ನೋಡಿರಿ.

**(1) ಶ್ಲೋ॥ 69 : ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ।**
**ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥**
**(ಬ್ರಹ್ಮಯೋಗ, ಪ್ರಕೃತಿ)**

**ಭಾವಾರ್ಥ :** ಸರ್ವ ಜೀವರಾಶಿಗಳಿಗೂ ರಾತ್ರಿಯಂತೆ ನಿದ್ರೆಹೋಗುವ ಅಜಾಗ್ರತೆ ಏಕಿದೆಯೋ ಅದರಲ್ಲೇ ಬ್ರಹ್ಮಯೋಗಿ ಜಾಗ್ರತೆ ಹೊಂದಿರುತ್ತಾನೆ. ಯಾವುದಾದರೆ ಬ್ರಹ್ಮಯೋಗಿಗೆ ರಾತ್ರಿಯಂತೆ ಸ್ಥಂಭಿಸಿರುತ್ತದೋ ಅದರಲ್ಲೇ ಸರ್ವಜೀವ ರಾಶಿಗಳು ಜಾಗ್ರತೆಯಾಗಿವೆ.

**ವಿವರ :** ಸರ್ವಜೀವರಾಶಿಗಳು( ಮಾನವರೆಲ್ಲರು) ಪ್ರಪಂಚ ವಿಷಯಗಳಲ್ಲಿ ಉದಯದಿಂದ ಲಗ್ನವಾಗಿ ಅವರವರ ಉದ್ಯೋಗಗಳಲ್ಲಿಯೊ, ಅವರವರ ವ್ಯಾಪಾರಗಳಲ್ಲಿಯೊ ಬಹುಜಾಗ್ರತೆಯಾಗಿ ಎಲ್ಲಿಯೂ ಯಾವ ನಷ್ಟವು ಬರಬಾರದೆಂಬ ಭಾವನೆಯಿಂದ ಇದ್ದು, ಪೂರ್ತಿ ಎಚ್ಚರಿಕೆಯಿಂದ ಅವರ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದಾರೆ. ಪ್ರಪಂಚ ವಿಷಯಗಳಲ್ಲಿ ಜಾಗ್ರತೆ ಯಾಗಿರುವ ಪ್ರಜೆಗಳು ಆತ್ಮಜ್ಞಾನ ವಿಷಯಗಳಲ್ಲಿ ಪೂರ್ತಿ ನಿದ್ರಾವಸ್ಥೆಯಲ್ಲಿದ್ದಾರೆ. ಆತ್ಮ ವಿಷಯವು ಕತ್ತಲಿನಿಂದ ಕೂಡಿಕೊಂಡ ರಾತ್ರಿಯಂತೆ ಅವರಿಗೆ ಇದೆ. ಆತ್ಮಜ್ಞಾನ ಎಂದರೆ ಏನೋ ಅರ್ಥವಾಗದ ಅಂಧಕಾರದಲ್ಲಿ ಅವರು ನಿಂತುಹೋಗಿದ್ದಾರೆ. ಸಾಮಾನ್ಯ ಪ್ರಜೆಗಳು ಆ ವಿಧವಾಗಿರುವಾಗ, ಆತ್ಮದರ್ಶನ ಕೋರುವ ಬ್ರಹ್ಮಯೋಗಿಗಳು ಮಾತ್ರ ಪ್ರಜೆಗಳು ಯಾವ ಆತ್ಮ ವಿಷಯಗಳಲ್ಲಿ ಅಜಾಗ್ರತೆ ಹೊಂದಿ ಅಂಧಕಾರದಲ್ಲಿ ಇದ್ದಾರೋ, ಆ ಆತ್ಮ ವಿಷಯಗಳಲ್ಲಿ ಪೂರ್ತಿ ಜ್ಞಾಪಕದಿಂದ ಆತ್ಮಜ್ಞಾನ ಗ್ರಹಿಸುವುದರಲ್ಲಿ ಜಾಗ್ರತೆ ಹೊಂದಿದ್ದಾರೆ. ಆ ವಿಧವಾಗಿಯೇ ಸರ್ವರು ಯಾವ ಪ್ರಪಂಚ ವಿಷಯಗಳಲ್ಲಿ ಶ್ರದ್ಧೆಹೊಂದಿ ಜಾಗ್ರತೆಯಾಗಿ ಅನ್ವಯಿಸುತ್ತಿದ್ದಾರೋ, ಆ ಪ್ರಪಂಚ ವಿಷಯಗಳಲ್ಲಿ ಬ್ರಹ್ಮಯೋಗಿಗಳು ಅಜಾಗ್ರತೆ ಹೊಂದಿದ್ದಾರೆ. ಆದ್ದರಿಂದ ಈ ಶ್ಲೋಕದಲ್ಲಿ ಅಜ್ಞಾನಿಗಳಿಗೆ ಕತ್ತಲಾಗಿರುವುದು ಜ್ಞಾನಿಗಳಿಗೆ ಹಗಲೆಂದು, ಅಜ್ಞಾನಿಗಳಿಗೆ ಹಗಲಾಗಿರುವುದು ಜ್ಞಾನಿಗಳಿಗೆ ಕತ್ತಲೆಂದು ತಿಳಿಯಬೇಕು.

**(1) ಶ್ಲೋ॥ 70: ಅಪೂರ್ಯಮಾಣ ಮಚಲಪ್ರತಿಷ್ಠಂ ಸಮುದ್ರಮಾಪಃ ಪ್ರವಿಶನ್ತಿಯದ್ವ ತ್ ।**
**ತದ್ವತ್ಕಾ ಮಾಯಂ ಪ್ರವಿಶನ್ತಿ ಸರ್ವೇ ಸಶಾ ನ್ತಿಮಾಪ್ನೋತಿ ನ ಕಾಮಕಾಮೀ॥**
**(ಬ್ರಹ್ಮಯೋಗ)**

**ಭಾವಾರ್ಥ :** ತುಂಬಿ ನಿಬಿಡೀಕೃತವಾಗಿರುವ ಸಮುದ್ರದಲ್ಲಿ ನದಿಗಳ ನೀರು ಎಷ್ಟು ಸೇರಿದರೂ ಉಕ್ಕಿ ಹರಿಯದಂತೆ, ಬ್ರಹ್ಮಯೋಗ ನಿಷ್ಟೆಯಲ್ಲಿರುವವನಿಗೆ ಎಷ್ಟು ಕೋರಿಕೆಗಳಿದ್ದರೂ ಅವುಗಳ ಪ್ರಭಾವವೇನು ಇಲ್ಲದಂತಾಗುತ್ತದೆ. ಬ್ರಹ್ಮಯೋಗಿ ಅಲ್ಲದೇ ಕೋರಿಕೆಗಳು ಕೋರುವವನಿಗೆ ಎಂದಿಗೂ ಆತ್ಮದರ್ಶನ ಲಭಿಸುವುದಿಲ್ಲ, ಶಾಂತಿಬರುವುದಿಲ್ಲ.

**ವಿವರ:–** ಸಮುದ್ರವು ಎಂದಿಗೂ ಒಂದೇ ವಿಸ್ತೀರ್ಣ ಹೊಂದಿರುವುದಾಗಿದ್ದು, ತನ್ನೊಳಗೆ ಎಷ್ಟು ನದಿ ಪ್ರವಾಹಗಳು ಬಂದು ಸೇರುತ್ತಿದ್ದರು ಉಕ್ಕಿ ಹರಿಯದಂತೆ ಮೊದಲಿನಂತೆ ಇರುತ್ತದೆ. ಹಾಗೆ ಬ್ರಹ್ಮಯೋಗಿ ಆದವನು ಸಮುದ್ರಕ್ಕೆ ಸಮಾನವಾಗಿದ್ದಾನೆ. ಬ್ರಹ್ಮಯೋಗ ವೆನ್ನುವ ಒಂದೇ ಪರಿಧಿಯಲ್ಲಿರುವ ಯೋಗಿಗೆ ಹೊರಗಿನಿಂದ ಎಷ್ಟೋ ಕೋರಿಕೆಗಳ ಸಂಬಂಧಿತ ವಿಷಯಗಳು ಜ್ಞಾನೇಂದ್ರಿಯಗಳೆನ್ನುವ ಐದು ನದಿಗಳ ಮೂಲಕ ಬಂದರೂ ಚಲಿಸದಂತಿರುತ್ತಾನೆ. ಆಗ ಅವನ ಮನಸ್ಸು ಆತ್ಮನಲ್ಲಿ ಲಗ್ನವಾಗಿದೆ ಆದ್ದರಿಂದ ಆ ವಿಷಯಗಳ ಒತ್ತಡ ಅವನನ್ನು ಏನು ಮಾಡದೆ ಹೋಗಿದೆ. ಹಾಗಲ್ಲದೆ ವಿಷಯ ಒತ್ತಡಕ್ಕೆ ಮನಸ್ಸು ಚಲಿಸುವುದಾದರೆ ಅವನಿಗೆ ಒಳಗಿನ ಗುಣಗಳಲ್ಲಿ ಮೊದಲನೆಯದಾದ ದೊಡ್ಡದಾದ ಕಾಮ(ಆಸೆ) ಎನ್ನುವ ಗುಣವು ತಪ್ಪದೆ ಯೋಗಭ್ರಷ್ಟನನ್ನಾಗಿ ಮಾಡುತ್ತದೆ. ಕೋರಿಕೆಗಳು ಇರುವವನು, ಗುಣಗಳು ಕೆಲಸಮಾಡುವವನು ಆತ್ಮವನ್ನು ದರ್ಶಿಸಲಾರನು. ಆದ್ದರಿಂದ ಬ್ರಹ್ಮಯೋಗಿ ಹೇಗೆ ಇರಬೇಕೆಂದರೆ.

**(1) ಶ್ಲೋ॥ 71 : ವಿಹಾಯ ಕಾಮಾನ್ಯ ಸ್ಸರ್ವಾನ್ ಪುಮಾಂಶ್ಚರತಿನಿಸ್ಪೃಹಃ ।**
**ನಿರ್ಮಮೊ ನಿರಹಂಕಾರ ಸ್ಸ ಶಾನ್ತಿ ಮಧಿಗಚ್ಛತಿ॥**
**(ಬ್ರಹ್ಮಯೋಗ, ಕರ್ಮಯೋಗ)**

**ಭಾವಾರ್ಥ :** ಸರ್ವಕೋರಿಕೆಗಳನ್ನು ಬಿಟ್ಟು ಅವುಗಳ ಧ್ಯಾಸ(ಗಮನ) ಇಲ್ಲದವನು, ಹಾಗೆ ಮೋಹ, ಅಹಂಕಾರ ಇಲ್ಲದವನು ತಪ್ಪದೆ ಶಾಂತಿಯನ್ನು ಹೊಂದುತ್ತಾನೆ.

**ವಿವರ :** ಈ ಶ್ಲೋಕವು ಇತ್ತ ಬ್ರಹ್ಮಯೋಗಿಗಳಿಗೂ, ಅತ್ತ ಕರ್ಮಯೋಗಿಗಳಿಗೂ ಇಬ್ಬರಿಗೂ ಸಹ ಹೇಳಿರುವುದಾಗಿ ತಿಳಿಯಬೇಕು. ಈ ಎರಡು ಯೋಗಗಳನ್ನು ಕುರಿತು ಈ ಅಧ್ಯಾಯದಲ್ಲಿ

ತಿಳಿಸಿದ್ದಾರೆ. **ವಿಷಯಧ್ಯಾಸಗಳು ಇಲ್ಲದೆ ಮನಸ್ಸನ್ನು ಸ್ಥಿರಪಡಿಸುವುದು ಬ್ರಹ್ಮಯೋಗವೆಂದು, ಹಾಗೆ ವಿಷಯಧ್ಯಾಸಗಳು ಹೊಂದಿ ಕಾರ್ಯಾಚರಣೆ ಮಾಡುತ್ತಾ ಅಹಂಕಾರವನ್ನು ಅಡಗಿಸಿಕೊಳ್ಳವುದು ಕರ್ಮಯೋಗವೆಂದು ವಿವರಿಸಲ್ಪಟ್ಟಿದೆ.** ಈಗ ಈ ಶ್ಲೋಕದಲ್ಲಿ ಯಾರ ಮನಸ್ಸು ಎಲ್ಲಾ ಕೋರಿಕೆಗಳನ್ನು ಬಿಟ್ಟು ಅವುಗಳ ಧ್ಯಾಸಕ್ಕೆ ಯಾವಮಾತ್ರ ಹೋಗದಂತೆ ಇರುತ್ತಾನೋ ಅವನನ್ನು ಬ್ರಹ್ಮಯೋಗಿಯೆಂದೂ, ಹಾಗೆ ಅಹಂಕಾರ ಯಾರಿಗೆ ಇಲ್ಲದಂತೆ ಇರುತ್ತದೋ ಅವನನ್ನು ಕರ್ಮಯೋಗಿಯೆಂದು ತಿಳಿಸುತ್ತಾ ಇವುಗಳಲ್ಲಿ ಯಾವ ಯೋಗ ಆಚರಿಸಿದವನಿಗಾದರೂ ಮೋಕ್ಷ ಹೊಂದುವ ಅವಕಾಶ ಇದೆಯೆಂದು ತಿಳಿಸಲಾಗಿದೆ. ಇನ್ನು ಈ ಅಧ್ಯಾಯದಲ್ಲಿ ಕೊನೆಯದಾಗಿ ಹೇಳುವುದು ಏನೆಂದರೆ!

**(1) ಶ್ಲೋ॥ 72 : ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ! ನೈನಾಂ ಪ್ರಾಪ್ಯ ವಿಮುಹ್ಯತಿ ।**
**ಸ್ಥಿತ್ವಾಽಸ್ಯಾ ಮಂತಕಾಲೇಪಿ ಬ್ರಹ್ಮ ನಿರ್ವಾಣ ಮೃಚ್ಛತಿ ॥**
**(ಬ್ರಹ್ಮಯೋಗ, ಕರ್ಮಯೋಗ)**

**ಭಾವಾರ್ಥ :** ಇದು ದೈವವನ್ನು ಹೊಂದುವ ಸ್ಥಿತಿ. ಈ ಸ್ಥಿತಿ ಹೊಂದಿದವನು ನನ್ನದು ನನ್ನವರು ಎನ್ನುವ ಮೋಹವನ್ನು ಹೊಂದುವುದಿಲ್ಲ. ಈ ಸ್ಥಿತಿ ಹೊಂದಿದವನು ಮರಣಕಾಲದಲ್ಲಿ ಮೋಕ್ಷವನ್ನು ಹೊಂದುತ್ತಾನೆ.

**ವಿವರ :** ಇಲ್ಲಿಯವರೆಗೂ ಹೇಳಿದ ಎರಡು ಯೋಗಗಳು ಮೂರನೇ ಪುರುಷನಾದ ಪರಮಾತ್ಮನನ್ನು ಹೊಂದುವ ಮಾರ್ಗಗಳು. ಈ ಎರಡು ಯೋಗಗಳನ್ನು ಆಚರಿಸಿದವನಿಗೆ ನನ್ನದು ಎನ್ನುವ ಮೋಹಗುಣವು ಬರುವುದಿಲ್ಲ. ಈ ಯೋಗಗಳು ಪೂರ್ತಿ ಆಚರಿಸಿದವನು ಮರಣಕಾಲದಲ್ಲಿ ಶರೀರವನ್ನು ಬಿಟ್ಟು ಯಾವ ಜನ್ಮಹೊಂದದೆ ಪರಮಾತ್ಮನನ್ನು ಸೇರುತ್ತಾನೆ. ಇಲ್ಲಿಗೆ ಭಗವದ್ಗೀತೆಯಲ್ಲಿ ಸಾಂಖ್ಯಯೋಗ ಎನ್ನುವ ಅಧ್ಯಾಯವು ಮುಕ್ತಾಯವಾಗಿದೆ. ಈ ಅಧ್ಯಾಯದಲ್ಲಿ ಭಗವಂತನು ಹೇಳಿದ ಶ್ಲೋಕಗಳು ಒಟ್ಟು 54 ಆಗಿದ್ದು, ಅರ್ಜುನನು ಕೇಳಿದ ಶ್ಲೋಕವು ಬ್ರಹ್ಮಯೋಗವನ್ನು ಕುರಿತು ಕೇಳಿರುವುದಾಗಿದ್ದು, ಭಗವಂತನು ಹೇಳಿದ ಶ್ಲೋಕಗಳಲ್ಲಿ 13 ಜೀವಾತ್ಮಕ್ಕೆ ಸಂಬಂಧಿಸಿರುವವು, ಆತ್ಮ ಸಂಬಂಧಿತವಾದುವು 2 ಶ್ಲೋಕಗಳು, ಪರಮಾತ್ಮ 4, ಆತ್ಮ ಪರಮಾತ್ಮ 1 ಶ್ಲೋಕವಿದೆ. ಕರ್ಮಯೋಗವನ್ನು ಕುರಿತು ಇರುವವು 9 ಶ್ಲೋಕಗಳು, ಬ್ರಹ್ಮಯೋಗವನ್ನು ಕುರಿತು ಇರುವವು 13, ಹಾಗೆ ಬ್ರಹ್ಮಯೋಗ ಕರ್ಮಯೋಗ ಬೆರೆತಿರುವವು 4 ಶ್ಲೋಕಗಳು. ಪ್ರಕೃತಿಯಲ್ಲಿನ ಸಹಜತ್ವವನ್ನು ಬೋಧಿಸುವವು 8 ಶ್ಲೋಕಗಳು ಬ್ರಹ್ಮಯೋಗವನ್ನು ಪ್ರಕೃತಿಯನ್ನು ಸೇರಿಸಿ ಹೇಳಿರುವವು ಒಂದು ಶ್ಲೋಕ.

ಒಟ್ಟು ಈ ಅಧ್ಯಾಯದಲ್ಲಿ 55 ಶ್ಲೋಕಗಳು. 7 ಶ್ಲೋಕಗಳು ಕಲ್ಪಿತಗಳೆಂದು ತೆಗೆದುಹಾಕಲಾಗಿದೆ ಮತ್ತು 10 ಶ್ಲೋಕಗಳು ಅರ್ಜುನನು ದುಃಖಪಟ್ಟಿರುವವಾಗಿ ಲೆಕ್ಕಿಸಿ, ಭಗವಂತನು ಹೇಳಿರುವವು ಅಲ್ಲವೆಂದು ತೆಗೆದುಹಾಕಲಾಗಿದೆ.

**ಶ್ಲೋಕಗಳೊಂದರ ವಿವರದ ಪಟ್ಟಿ ಹೀಗಿದೆ :–**

| | | |
|---|---|---|
| 1. ಜೀವಾತ್ಮವನ್ನು ಕುರಿತು ಇರುವವು | – | 12 |
| 2. ಆತ್ಮವನ್ನು ಕುರಿತು ಇರುವವು | – | 2 |
| 3. ಆತ್ಮ ಪರಮಾತ್ಮಗಳನ್ನು ಕುರಿತು ಇರುವವು | – | 1 |
| 4. ಪರಮಾತ್ಮನನ್ನು ಕುರಿತು ಇರುವವು | – | 4 |
| 5. ಕರ್ಮಯೋಗವನ್ನು ಕುರಿತು ಇರುವವು | – | 9 |
| 6. ಬ್ರಹ್ಮಯೋಗವನ್ನು ಕುರಿತು ಇರುವವು | – | 14 |
| 7. ಕರ್ಮಯೋಗ ಮತ್ತು ಬ್ರಹ್ಮಯೋಗ ಎರಡು ಸೇರಿ ಇರುವವು | – | 4 |
| 8. ಪ್ರಕೃತಿಯಲ್ಲಿನ ಮನುಷ್ಯರನ್ನು ಕುರಿತು ಇರುವವು | – | 7 |
| 9. ಬ್ರಹ್ಮಯೋಗವು ಮತ್ತು ಪ್ರಕೃತಿ | – | 1 |
| 10. ಪ್ರಕೃತಿ ಮತ್ತು ಪರಮಾತ್ಮನ ಕುರಿತು ಇರುವುದು | – | 1 |
| **ಒಟ್ಟು** | – | **55** |
| ಬರೆಯದೆ ಬಿಟ್ಟಿರುವವು | – | 10 |
| ತೆಗೆದುಹಾಕಿರುವ ಕಲ್ಪಿತ ಶ್ಲೋಕಗಳು | – | 7 |
| ಸಾಂಖ್ಯಯೋಗ ಶ್ಲೋಕಗಳು ಒಟ್ಟು | – | 72 |

ಭಾವ, ವಿವರ ಬದಲಾವಣೆ ಮಾಡಿ ಬರೆದ ಶ್ಲೋಕಗಳು – 11, 19, 22, 23, 24, 45, 47.

### ಎರಡನೆಯ ಅಧ್ಯಾಯ

# ಕರ್ಮಯೋಗ

**ಅರ್ಜುನನು ಹೀಗೆ ಕೇಳಿದನು :–**

**(2) ಶ್ಲೋ॥ 1: ಜ್ಯಾಯಸೀ ಚೇತ್ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ !।**
**ತತ್ಕಿಂ ಕರ್ಮಣಿ ಘೋರೇಮಾಂ ನಿಯೊಜಯಸಿ ಕೇಶವ ! ॥**

**(ಕರ್ಮ, ಬ್ರಹ್ಮಯೋಗಗಳು)**

**ಭಾವಾರ್ಥ :** ಪಾಪಪುಣ್ಯ ಕರ್ಮಗಳಾಗುವ ಕೆಲಸಗಳು ಮಾಡುವುದಕ್ಕಿಂತ ಬ್ರಹ್ಮಯೋಗವೇ ಶ್ರೇಷ್ಟವಾದುದೆಂದು ನಿನ್ನ ಅಭಿಪ್ರಾಯವಾದರೆ, ಭಯಂಕರವಾದ ಕರ್ಮಗಳು ಉಂಟಾಗುವ ಕೆಲಸಗಳನ್ನೇ ಮಾಡೆಂದು ನನ್ನನ್ನು ಏಕೆ ನಿಯಮಿಸುತ್ತಿದ್ದೀಯಾ.

**ವಿವರ :** ಸಾಂಖ್ಯಯೋಗವೆಂಬ ಮೊದಲ ಅಧ್ಯಾಯದಲ್ಲಿ ಮೊದಲು ಕರ್ಮಯೋಗವನ್ನು ಕುರಿತು ಹೇಳುವುದು, ನಂತರ ಕೊನೆಯಲ್ಲಿ ಬ್ರಹ್ಮಯೋಗವನ್ನು ಕುರಿತು ಹೇಳುವುದು ನಡೆದಿದೆ. ಮೊದಲು ಕರ್ಮಯೋಗವನ್ನು ಕೇಳಿದ ಅರ್ಜುನನು ನಂತರ ಕೇಳಿದ ಬ್ರಹ್ಮಯೋಗವೇ ಚೆನ್ನಾಗಿದೆ ಎಂದು ತಿಳಿದುಕೊಳ್ಳುತ್ತಿದ್ದಾನೆ. ಶ್ರೀಕೃಷ್ಣನು ಇಂತಹ ಯೋಗವು ಒಳ್ಳೆಯದೆಂದಾಗಲಿ, ಉತ್ತಮವಾದುದೆಂದಾಗಲಿ, ಹೇಳದಿದ್ದರೂ ಅರ್ಜುನನು ತನ್ನ ಭಾವನೆಯಲ್ಲಿ ಕೆಲಸಗಳು ಮಾಡುವ ಯೋಗಕ್ಕಿಂತ ಕೆಲಸಗಳು ಮಾಡದಿರುವ ಯೋಗವೇ ಉತ್ತಮವಾದುದೆಂದುಕೊಳ್ಳುವುದರಿಂದ, ಮುಖ್ಯವಾಗಿ ಶ್ರೀಕೃಷ್ಣನು ಹೇಳಿದಷ್ಟು ವಿವರವಾಗಿ ಕರ್ಮಯೋಗ ಅರ್ಥವಾಗದೆ ಇರುವುದರಿಂದ, ಮತ್ತು ಬ್ರಹ್ಮಯೋಗವೇ ಚೆನ್ನಾಗಿದೆಯೆಂದು ಕೊಳ್ಳುವುದರಿಂದ, ಯಾವ ಕೆಲಸಗಳು ಮಾಡದೆ ಸುಮ್ಮನಿರುವುದೇ ಒಳ್ಳೆಯದಾದಾಗ ಪಾಪ ಸಂಭವಿಸುವ ಯುದ್ಧವನ್ನು ಮಾಡುವುದಕ್ಕೆ ನನ್ನನ್ನು ಏಕೆ ನಿಯಮಿಸಿದ್ದೀಯಾ ಎಂದನು. ಅರ್ಜುನನಿಗೆ ಕರ್ಮಯೋಗ ವಿಧಾನ ಅರ್ಥವಾಗಲಿಲ್ಲ ಎಂಬುವುದಕ್ಕೆ ನಿದರ್ಶನವಾಗಿ ಕೆಳಗಿನ ಶ್ಲೋಕದಲ್ಲಿ ಹೇಳಲಾಗಿದೆ.

**(2) ಶ್ಲೋ॥ 2 : ವ್ಯಾಮಿಶ್ರೇಣೇವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ ।**
**ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಮ್ ॥**

**(ಕರ್ಮ, ಬ್ರಹ್ಮಯೋಗಗಳು)**

**ಭಾವಾರ್ಥ :** ಮಿಶ್ರವಾಕ್ಯಗಳನ್ನು ಹೇಳಿ ನನ್ನ ಬುದ್ಧಿಯನ್ನು ಭ್ರಾಂತಿಗೊಳಿಸುವುದಕ್ಕಿಂತ ಮೋಹಗುಣದಲ್ಲಿ ಸಿಲುಕಿಕೊಳ್ಳದಂತೆ ಯಾವುದು ಮಾಡುವುದು ಒಳ್ಳೆಯದೋ ಅದನ್ನೇ ನಿರ್ಧರಿಸಿ ಹೇಳೆಂದನು.

**ವಿವರ** : ಮೊದಲು ಕರ್ಮಯೋಗವನ್ನು ಹೇಳಿ ನಂತರ ಬ್ರಹ್ಮಯೋಗವನ್ನು ಹೇಳಿದಾಗ ಅರ್ಜುನನಿಗೆ ಅರ್ಥವಾಗಲಿಲ್ಲ. ಯೋಗ ವಿಷಯಗಳು ಮೊದಲನೆ ಬಾರಿ ಕೇಳುವುದರಿಂದ, ಸ್ವಲ್ಪ ಬ್ರಹ್ಮಯೋಗ ಅರ್ಥವಾದರೂ, ಕರ್ಮಯೋಗ ಅರ್ಥವಾಗದೆ ಹೋಗಿದೆ. ಇದು ಒಬ್ಬ ಅರ್ಜುನನಿಗೆ ಅಲ್ಲ. ಮೊದಲು ಯಾರಿಗಾದರೂ ಕರ್ಮಯೋಗ ಅರ್ಥ ಆಗುವುದಿಲ್ಲವೆಂದೇ ಹೇಳಬಹುದು. ಇನ್ನೂ ಯೋಚಿಸಿ ನೋಡಿದರೂ ಕರ್ಮಯೋಗ ಎಂದರೆ ಏನೊ, ಅದರ ಅಸಲು ಸ್ವರೂಪವೇನೋ, ಭಗವದ್ಗೀತೆಯನ್ನು ಬೋಧಿಸುವವರಿಗೂ ಸಹ ಪೂರ್ತಿ ಅರ್ಥವಾಗಲಿಲ್ಲ. ಅವರು ಭಗವದ್ಗೀತೆಯನ್ನು ವಿವರಿಸಿ ಹೇಳಿದಾಗ ಕರ್ಮಯೋಗವನ್ನು ಕುರಿತು ಅಸಲು ವಿಷಯವನ್ನು ಹೇಳಲಾರದೆ ಹೋಗುತ್ತಿದ್ದಾರೆ, ಅವರು ಆಚರಿಸಲಾರದೆ ಹೋಗುತ್ತಿದ್ದಾರೆ. ಇನ್ನು ಬೋಧಕರೆಲ್ಲರೂ ಬ್ರಹ್ಮಯೋಗವನ್ನು ಕುರಿತು ಚೆನ್ನಾಗಿ ಹೇಳುತ್ತಿದ್ದಾರೆ. ಮತ್ತು ಕೈಲಾದಷ್ಟು ಆಚರಿಸುತ್ತಿದ್ದಾರೆ. ಬೋಧಕರೆಲ್ಲರನ್ನು ಕದಲಿಸಿ ನೋಡಿದಾಗ ಅವರಲ್ಲಿ ಕರ್ಮಯೋಗಕ್ಕೆ ವಿರುದ್ಧವಾದ ಧೋರಣೆ ಕಾಣಿಸುತ್ತಿದೆ. ಆದ್ದರಿಂದ ಕರ್ಮಯೋಗವೊಂದರ ಅಸಲು ಸಿದ್ಧಾಂತವು ಬಹಳ ಜನರಿಗೆ ತಿಳಿದಿಲ್ಲವೆಂದೇ ಹೇಳಬಹುದು.

ಪ್ರತಿದಿನ ಆಧ್ಯಾತ್ಮಿಕ ವಿಷಯಗಳಲ್ಲಿಯೇ ಮುಳುಗಿ ತೇಲುವವರಿಗೆ ಅರ್ಥವಾಗದೆ, ಕರ್ಮಯೋಗಕ್ಕೆ ವಿರುದ್ಧವಾದ ಪದ್ಧತಿಯಲ್ಲಿ ಒಳ್ಳೆಯ ಕೆಟ್ಟ ಕೆಲಸಗಳನ್ನು ವಿಭಜನೆ ಮಾಡುತ್ತಿರುವಾಗ, ಕೆಲವು ಕೆಲಸಗಳು ಬಿಟ್ಟು ಕೆಲವು ಮಾಡಿರೆಂದು ಹೇಳುವಾಗ, ಒಂದುಬಾರಿ ಕೇಳಿಸಿಕೊಂಡ ಅರ್ಜುನನಿಗೆ ಅರ್ಥವಾಗುವುದು ಕಷ್ಟ ಅಲ್ಲವೆ! ಆದ್ದರಿಂದಲೇ ಅರ್ಜುನನು ಅರ್ಥವಾಗದ ಸ್ಥಿತಿಯಲ್ಲಿ ಕರ್ಮ ಬ್ರಹ್ಮಯೋಗ ವಿಭಜನೆಯ ವಿವರವನ್ನು ತಿಳಿಯದೆ, ಶ್ರೀಕೃಷ್ಣನು ಹೇಳಿದ ಮಾತುಗಳನ್ನು ಮಿಶ್ರವಾಕ್ಯಗಳೆಂದಿದ್ದಾನೆ. ನಿನ್ನೊಂದರ ಮಿಶ್ರವಾಕ್ಯಗಳು ಕೇಳುವುದರಿಂದ ನನ್ನ ಬುದ್ಧಿಗೆ ಯಾವುದು ಅರ್ಥವಾಗದೆ ಮೊದಲಿನಂತೆ ನನ್ನದು ನನ್ನವರು ಎನ್ನುವ ಮೋಹಗುಣದಲ್ಲಿಯೇ ಸಿಲುಕಿಕೊಳ್ಳುತ್ತೇನೆ. ಹಾಗಾಗದಂತೆ ನಾನು ಏನು ಮಾಡಬೇಕೊ ವಿವರಿಸಿ ಹೇಳು ಎಂದನು.

ಆಗ ಭಗವಂತನಾದ ಶ್ರೀಕೃಷ್ಣನು ಮುಖ್ಯವಾಗಿ ಎರಡು ಯೋಗಗಳನ್ನು ಕುರಿತು ಹೇಳಿ, ಅರ್ಜುನನಿಗೆ ಯಾವ ಯೋಗವು ಅಗತ್ಯವೋ ಸಹ ವಿವರಿಸಿ ಹೇಳಿದ್ದಾನೆ. **ಮಾನವನು ಎಚ್ಚರದಿಂದ ಇದ್ದು ಮಾಡುವ ಯಾವ ಕಾರ್ಯವಾದರೂ, ಕನಸಾದರೂ, ಯುದ್ಧವಾದರೂ, ದೈವಭಕ್ತಿಯಾದ ಯೋಗವಾಗಿರಬೇಕು**. ಅರ್ಜುನನು ಆಗ ಮಾಡಬೇಕಾಗಿರುವುದು, ಆತನಿಗೆ ಅಗತ್ಯವಾಗಿರುವುದು ಎರಡಾಗಿ ವಿಭಜಿಸಿದ ಯೋಗಗಳಲ್ಲಿ ಕರ್ಮಯೋಗವೇ ಮುಖ್ಯ.

ಆದ್ದರಿಂದ ಕರ್ಮಯೋಗವನ್ನೇ ಗೀತೆಯಲ್ಲಿ ಅನೇಕ ವಿಧಗಳಾಗಿ ಅರ್ಥವಾಗುವಂತೆ ಹೇಳಿದ್ದಾನೆ. ಭೂಮಿ ಮೇಲೆ ಯಾರಾದರೂ ಯೋಗ ಇಲ್ಲವೆ, ಯೋಗವೆಂದರೆ ಏನೋ ತಿಳಿಯದೇ ಬದುಕುವವನು ಯಾವಾಗಲೂ ವಿಯೋಗದಿಂದಲೇ ಬದುಕುತ್ತಿದ್ದಾನೆಂದು ತಿಳಿಯುತ್ತಿದೆ. ಯೋಗವೆಂದರೆ ಕೂಡಿಕೆ ಎಂದು ಅರ್ಥ, ವಿಯೋಗ ಎಂದರೆ ಬೇರೆಯಾಗುವುದೆಂದು ಅರ್ಥ. ರಾಮನು ಸೀತೆಯೊಂದಿಗೆ ಸೇರಿ ಅರಣ್ಯದಲ್ಲಿರುವಾಗ ರಾಜ್ಯಸುಖಗಳಿಗೆ ದೂರವಾಗಿದ್ದರೂ ದುಃಖಪಡದೆ ಸಂತೋಷವಾಗಿದ್ದಾನೆ. ಸೀತೆ ಬಿಟ್ಟು ಹೋದ ನಂತರ ರಾಜ್ಯಸುಖಗಳು ಇದ್ದರೂ ಬಹಳ ವಿಯೋಗ ದುಃಖವನ್ನು ಅನುಭವಿಸಿದ್ದಾನೆ. ಹಾಗೆಯೇ ಮಾನವನು ದೈವತ್ವವನ್ನು ಬಿಟ್ಟುಹೋದವನಿಗೆ ಪ್ರಪಂಚದಲ್ಲಿ ಎಷ್ಟೋ ಧನ, ಎಷ್ಟೋ ಗೌರವ, ಎಷ್ಟೋ ಮರ್ಯಾದೆ ಇದ್ದರೂ, ಎಷ್ಟೊ ಸುಖಗಳು ಇದ್ದರೂ ಏನೊ ಕಡಿಮೆಯಾದಂತೆ ಅಸಂತೃಪ್ತಿಯಿಂದಲೇ ಬದುಕುತ್ತಿದ್ದಾನೆ, ದೈವತ್ವದೊಂದಿಗೆ ಯೋಗ ವಿಲ್ಲದೆ ವಿಯೋಗಹೊಂದಿ ಬದುಕುವ ಯಾವ ಜೀವಾತ್ಮಗಾದರು ಅಸಂತೃಪ್ತಿಯ ಜೀವನ ಹೊರತು ಏನೂ ಇಲ್ಲ. ಆದ್ದರಿಂದ ಭಗವಂತನಾದ ಶ್ರೀಕೃಷ್ಣನು ಯೋಗವನ್ನು ಕುರಿತು ಅರ್ಜುನನನ್ನು ಅಡ್ಡ ಇಟ್ಟುಕೊಂಡು ಸರ್ವರಿಗೂ ಅರ್ಥವಾಗುವಂತೆ, ಮಾನವನು ಈ ಎಲ್ಲೆಯ(ಹದ್ದಿನ) ಲ್ಲಿದ್ದರೆ ಯೋಗ, ಈ ಎಲ್ಲೆ ದಾಟಿದರೆ ವಿಯೋಗ ಹೊಂದುತ್ತಾನೆಂದು ಆ ಎಲ್ಲೆ ಏನೆಂಬುವುದನ್ನು ತಿಳಿಸಿದ್ದಾನೆ. ಆ ಮಾತುಗಳ ಹದ್ದನ್ನೇ **'ಗೀತೆ'** ಎನ್ನುತ್ತಿದ್ದೇವೆ.

ಭಗವಂತನು ಸಾಂಖ್ಯಯೋಗದಲ್ಲಿ ಸೂಚನೆಯಾಗಿ ಹೇಳಿದ ಕರ್ಮ, ಬ್ರಹ್ಮಯೋಗಗಳನ್ನು ಕುರಿತು ವಿವರವಾಗಿ ಈ ಅಧ್ಯಾಯದಿಂದ ಹೇಳುವುದು ಆರಂಭ ಮಾಡಿದ್ದಾನೆ. ಈ ಅಧ್ಯಾಯದಲ್ಲಿ ಭಗವಂತನು ಹೇಳಿದ ಮೊದಲ ಶ್ಲೋಕವನ್ನು ಕೆಳಗೆ ನೋಡಿರಿ.

**ಶ್ರೀ ಭಗವಂತನು ಹೀಗೆ ಹೇಳಿದನು :–**

**2) ಶ್ಲೋ॥ 3 : ಲೋಕೇಽಸ್ಮಿನ್ ದ್ವಿವಿಧಾನಿಷ್ಠಾ ಪುರಾಪ್ರೋಕ್ತಾ ಮಯಾಽನಘ ।**
**ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಮ್ ॥**
**(ಕರ್ಮ, ಬ್ರಹ್ಮಯೋಗಗಳು)**

**ಭಾವಾರ್ಥ :** ಮನುಜರು ಆಚರಿಸುವುದಕ್ಕೆ ಎರಡು ವಿಧಗಳಾದ ಯೋಗ ನಿಷ್ಟೆಗಳು ಇವೆಯೆಂದು ಮೊದಲೇ ತಿಳಿಸಿದ್ದೇನೆ. ಸಾಂಖ್ಯವನ್ನು ತಿಳಿದವರು ಜ್ಞಾನಯೋಗವನ್ನು, ಕಾರ್ಯವಿವರವನ್ನು ತಿಳಿದವರು ಕರ್ಮಯೋಗವನ್ನು ಆಚರಿಸುತ್ತಾರೆ.

**ವಿವರ :** ಪರಮಾತ್ಮ, ಆತ್ಮ, ಜೀವಾತ್ಮ, ಶರೀರ ಎನ್ನುವವು ಬೇರೆ ಬೇರೆಯಾಗಿವೆ ಎಂದು ತಿಳಿದವರು ಸಾಂಖ್ಯರು. ಅವರು ಆತ್ಮವನ್ನು ಅನುಭವಿಸಿದರೆ ಕೊನೆಗೆ ಪರಮಾತ್ಮನನ್ನು ಸೇರಬಹುದೆಂಬ ಮಾರ್ಗವು ತಿಳಿದವರು. ಜೀವಾತ್ಮ, ಆತ್ಮದ ಸುಖವನ್ನು ಪಡೆಯಬೇಕೆಂದರೆ ಶರೀರ ಕೆಲಸಗಳೆಲ್ಲವನ್ನು ಸ್ತಂಭಿಸಿ ಒಳಗಿರುವ ಮನಸ್ಸಿನ ಮೂಲಕ ಆತ್ಮವನ್ನು ಅನುಭವಿಸಬೇಕು. ಸಾಂಖ್ಯವನ್ನು ತಿಳಿದವರು ಪ್ರತಿಯೊಂದು ಮನಸ್ಸಿನ ಮೂಲಕವೇ ಅನುಭವಿಸುತ್ತಿದ್ದೇವೆ ಎಂದು ತಿಳಿದವರಾಗಿ, ಆ ಮನಸ್ಸನ್ನು ಹೊರಗಿನ ಸುಖಗಳಿಂದ ಬಿಡಿಸುತ್ತಾರೆ. ಆತ್ಮ ಜೀವಾತ್ಮಗಳ ಭೇದ ತಿಳಿದ ಸಾಂಖ್ಯರು ಮನಸ್ಸಿನ ಮೂಲಕ ಆತ್ಮ ಸುಖವನ್ನು ಅನುಭವಿಸುತ್ತಾರೆ. ಆದ್ದರಿಂದ ಸಾಂಖ್ಯ ಯೋಗಿಗಳು ಮನಸ್ಸನ್ನು ಸ್ವಾಧೀನಪಡಿಸಿಕೊಂಡು, ಶರೀರವನ್ನು ಸ್ತಂಭಿಸಿ, ಹೊರಗಿನ ವಿಷಯಗಳಿಂದ ಮನಸ್ಸನ್ನು ಮರಳಿಸುವ ಸಾಧನೆ ಹೊಂದಿರುತ್ತಾರೆ. ಆ ಸಾಧನೆಯನ್ನೇ **'ಜ್ಞಾನಯೋಗ ಅಥವಾ ಬ್ರಹ್ಮಯೋಗ'** ಎಂದು ಕರೆಯುತ್ತೇವೆ. ಮನಸ್ಸು ಆತ್ಮದ ಮೇಲೆ ಲಗ್ನವಾಗಿರುವುದೇ ಜ್ಞಾನಯೋಗವೆಂದು ತಿಳಿಯಬೇಕು.

ಕರ್ಮಯೋಗ ತಿಳಿದವರು ಯಾರೆಂದರೆ ಶರೀರ ಯಂತ್ರಾಂಗವೆಲ್ಲವೂ ತಿಳಿದವರಾಗಿ ಕರ್ಮದಿಂದ ಗುಣಗಳು, ಗುಣಗಳಿಂದ ಯೋಚನೆಗಳು, ಯೋಚನೆಗಳಿಂದ ಕಾರ್ಯಗಳು, ಕಾರ್ಯಗಳಿಂದ ಕರ್ಮ ಉಂಟಾಗುತ್ತದೆಂದು ತಿಳಿದು ಮತ್ತು ಕಾರ್ಯಗಳು ನಡೆಯುತ್ತಿದ್ದರೂ ಕರ್ಮ ಉಂಟಾಗದಂತೆ ಮಾಡುವವನನ್ನು ಕರ್ಮಯೋಗ ತಿಳಿದವನು ಎನ್ನುತ್ತೇವೆ. ಕಾರ್ಯಗಳಿಂದ ಕರ್ಮ ಉಂಟಾಗದಂತೆ ಮಾಡುವ ಪದ್ಧತಿಯನ್ನೇ **'ಕರ್ಮಯೋಗ ಅಥವಾ ರಾಜಯೋಗ'** ಎನ್ನುತ್ತೇವೆ. ಕರ್ಮಯೋಗ ಆಚರಿಸುವವನು ಶರೀರವನ್ನು ಕಾರ್ಯಗಳಿಗೆ ಬಿಟ್ಟು, ಶರೀರದ ಮೂಲಕ ಕೆಲಸಗಳು ಮಾಡುತ್ತಾ ಕೆಲಸಗಳಿಂದ

ಉಂಟಾಗುವ ಪಾಪಪುಣ್ಯಕರ್ಮವನ್ನು ಜ್ಞಾನಾಗ್ನಿ ಮೂಲಕ ಸುಟ್ಟುಹಾಕುತ್ತಿರುತ್ತದೆ. ಕರ್ಮವನ್ನು ಸುಡುವ ಅಗ್ನಿಯ ಹೆಸರು ಜ್ಞಾನಾಗ್ನಿ ಎನ್ನುತ್ತೇವೆ. **'ಜ್ಞಾನಾಗ್ನಿ'** ಉಂಟಾಗಿ ಕರ್ಮ ಸುಟ್ಟುಹೋಗಬೇಕೆಂದರೆ ಶರೀರ ಯಂತ್ರಾಂಗದಲ್ಲಿನ **'ಅಹಮ್'**ನ ಕೆಲಸವನ್ನು ನಿಯಂತ್ರಿಸಬೇಕು. ಕಾರ್ಯ ನಡೆಯುತ್ತಿರುವಾಗ ಅಹಂಕಾರದ ಮೇಲೆ ಲಗ್ನವಾಗಿರುವುದನ್ನೇ ಕರ್ಮಯೋಗ ಎನ್ನುತ್ತೇವೆ.

**ಬ್ರಹ್ಮಯೋಗ :–** ಜೀವಾತ್ಮ ಮನಸ್ಸಿನೊಂದಿಗೆ ಲಗ್ನವಾಗಿರುವುದೇ ಬ್ರಹ್ಮಯೋಗ ಅಥವಾ ಜ್ಞಾನಯೋಗ. ಮನಸ್ಸು ಹೊರಗಿನ ವಿಷಯಗಳ ಮೇಲೆ ಹೋಗದಂತೆ ಬುದ್ಧಿ ಮನಸ್ಸನ್ನು ಬಂಧಿಸುತ್ತದೆ. ಹೊರಗಿನ ವಿಷಯಧ್ಯಾಸ ಯಾವಾಗಾದರೆ ಇಲ್ಲದಹಾಗೆ ಹೋಗುತ್ತದೋ ಆಗ ಮನಸ್ಸಿಗೆ ಆತ್ಮಧ್ಯಾಸ ಉಂಟಾಗುತ್ತದೆ. ಆಗಲೇ ಆತ್ಮಸುಖವನ್ನು ಮನಸ್ಸಿನ ಮೂಲಕ ಜೀವಾತ್ಮ ತಿಳಿಯುತ್ತಿದ್ದಾನೆ. ಬ್ರಹ್ಮಯೋಗದಲ್ಲಿ ಮುಖ್ಯವಾದ ಪಾತ್ರ ಮನಸ್ಸಿನದು. ಯಾರ ಮನಸ್ಸು ಜೀವಾತ್ಮನೊಂದಿಗೆ ಏಕೀಭವಿಸುತ್ತಿದೆಯೋ ಅವನು ಬ್ರಹ್ಮಯೋಗಿ, ಯಾರ ಮನಸ್ಸು ಆತ್ಮ ಅನುಭೂತಿಯನ್ನು ಜೀವಾತ್ಮನಿಗೆ ಸೇರಿಸುತ್ತಿದೆಯೋ ಅವನೇ ಬ್ರಹ್ಮಯೋಗಿ, ಯಾವಾಗಾದರೆ ಜೀವಾತ್ಮನ ಮನಸ್ಸು ಏಕವಾಗಿದ್ದು ಬ್ರಹ್ಮಯೋಗವಾಗಿದೆಯೋ ಆಗಲೇ ಯೋಗಿಗೆ ತಿಳಿಯದೆಯೇ **'ಜ್ಞಾನಾಗ್ನಿ'** ಅವನಲ್ಲಿ ಪ್ರಜ್ವಲಿಸುತ್ತದೆ. ಆ ಜ್ಞಾನಾಗ್ನಿ ಅವನ ಲ್ಲಿರುವ ಸಂಚಿತಕರ್ಮವನ್ನು ಸುಟ್ಟುಹಾಕುತ್ತಿದೆ. ಮನಸ್ಸು ಹೊರಗಿನ ವಿಷಯಗಳ ಮೇಲೆ ಲಗ್ನವಾದಾಗ ಜೀವಾತ್ಮ ಮನಸ್ಸಿನೊಂದಿಗೆ ಲಗ್ನವಾಗಿ ಹೊರಗಿನ ವಿಷಯಗಳನ್ನು ಅನುಭವಿಸುತ್ತಿದೆ ಅಲ್ಲವೆ! ಅದೂ ಸಹ ಯೋಗವಲ್ಲವೆ ಎಂದು ಕೆಲವರಿಗೆ ಪ್ರಶ್ನೆಬರಬಹುದು. ಅದಕ್ಕೆ ನಮ್ಮ ಉತ್ತರ ಜೀವಾತ್ಮ ಮನಸ್ಸಿನೊಂದಿಗೆ ಲಗ್ನವಾಗಿ ಹೊರಗಿನ ವಿಷಯಗಳನ್ನು ಅನುಭವಿಸುವುದೂ ಸಹ ಯೋಗವೇ. ಆದರೆ ಅದು ಜ್ಯೋತಿಷ್ಯ ಶಾಸ್ತ್ರದಲ್ಲಿ ಹೇಳುವ ಯೋಗಗಳಾಗುತ್ತವೆ. ಜ್ಯೋತಿಷ್ಯಶಾಸ್ತ್ರದಲ್ಲಿ ಹೇಳುವ ಯೋಗಗಳು ಅನೇಕ ಹೆಸರುಗಳನ್ನು ಹೊಂದಿವೆ ಎಂದು ತಿಳಿಯಬೇಕು. ಉದಾಹರಣೆಗೆ ಬುಧಾರ್ಕಯೋಗ, ಗಜಕೇಸರಿಯೋಗ, ಚಂದ್ರಮಂಗಳ ಯೋಗ ಮೊದಲಾದವು ಎಷ್ಟೋ ಇವೆ. ಆ ಯೋಗಗಳೆಲ್ಲವೂ ಹೊರಗಿನ ವಿಷಯಸುಖಗಳಿಗೆ ಸಂಬಂಧಿಸಿರುವವೇ. ಹೊರಗಿನ ವಿಷಯ ಯೋಗಗಳು ಜ್ಯೋತಿಷ್ಯಶಾಸ್ತ್ರಕ್ಕೆ ಸಂಬಂಧಿಸಿರುವವು. ಒಳಗಿನ ವಿಷಯ ಯೋಗಗಳು ಯೋಗಶಾಸ್ತ್ರಕ್ಕೆ ಸಂಬಂಧಿಸಿರುವವು. ಹೊರಗಿನ ಯೋಗಗಳು ಜ್ಞಾನಾಗ್ನಿ ನಿರ್ಮಿತ ಯೋಗಗಳಲ್ಲ. ಆದ್ದರಿಂದ ಯೋಗಶಾಸ್ತ್ರದಲ್ಲಿ ಆಧ್ಯಾತ್ಮಿಕ ವಿಷಯವನ್ನು ಕೇವಲ ಒಳಗಿನ ಕೂಡುವಿಕೆಯನ್ನು ಯೋಗವೆನ್ನುತ್ತೇವೆ. ಅದರಲ್ಲಿ ಮನಸ್ಸಿನೊಂದಿಗೆ ಜೀವಾತ್ಮವನ್ನು ಸೇರಿಸಿ ಹೊರಗಿನ

ವಿಷಯಗಳಿಂದ ಮರಳಿಸುವುದನ್ನು ಬ್ರಹ್ಮಯೋಗ ಎನ್ನುತ್ತಿದ್ದೇವೆ. ಈ ಯೋಗದಲ್ಲಿ ಬಾಹ್ಯ ಸ್ಪರ್ಶಾಧಿಗಳಲ್ಲಿ ಮನಸ್ಸಿಗೆ ಸಂಬಂಧವಿಲ್ಲ. ಜೀವಾತ್ಮ ಹೊರಗಿನ ಸುಖಗಳನ್ನು ಅನುಭವಿಸುವುದಿಲ್ಲ.

**ಕರ್ಮಯೋಗ** : ಜೀವಾತ್ಮ ಅಹಂಕಾರದಿಂದ ಲಗ್ನವಾಗಿರುವುದನ್ನೇ ಕರ್ಮಯೋಗ ಅಥವಾ ರಾಜಯೋಗ ಎನ್ನುತ್ತೇವೆ. ಕರ್ಮಯೋಗದಲ್ಲಿ ಅಹಂಕಾರ ಹೊರಗಿನ ಕೆಲಸಗಳ ಮೇಲೆ ಹೋಗದಂತೆ ಬುದ್ಧಿ ಅಹಂಕಾರವನ್ನು ಬಂಧಿಸುತ್ತದೆ. ಹೊರಗಿನ ಕಾರ್ಯಧ್ಯಾಸ ಅಹಂಕಾರಕ್ಕೆ ಯಾವಾಗ ಇಲ್ಲದೆ ಹೋಗುತ್ತದೋ ಆಗ ಬುದ್ಧಿ ಅಹಂಕಾರವನ್ನು ಅಡಗಿಸಿರುತ್ತದೆ. ಆಗಲೇ ಕಾರ್ಯಗಳು ತಾನು ಮಾಡಲಿಲ್ಲವೆಂದು, ಕರ್ಮರೀತ್ಯಾ ಕಾರ್ಯಗಳು ರೂಪಾಂತರ ಆಗುತ್ತಿವೆ ಎಂದು, ಜೀವಾತ್ಮ ತಿಳಿಯುತ್ತಿದ್ದಾನೆ. ಕರ್ಮ ಯೋಗದಲ್ಲಿ ಮುಖ್ಯಪಾತ್ರ ಅಹಂ ವಹಿಸುತ್ತಿದೆ. ಯಾರ ಅಹಮ್ ಕರ್ಮವನ್ನು ಜೀವಾತ್ಮಕ್ಕೆ ಸೇರಿಸಲಾರದೆ ಹೋಗುತ್ತಿದೆಯೋ ಅವನೇ ಕರ್ಮಯೋಗಿ. ಯಾವಾಗಾದರೆ ಜೀವಾತ್ಮ ಹೊರಗಿನ ಧ್ಯಾಸವಿಲ್ಲದೆ ಅಹಮ್‌ನೊಂದಿಗೆ ಸೇರಿ ಕರ್ಮಯೋಗವಾಗಿದೆಯೋ ಆಗಲೇ ಕರ್ಮಯೋಗಿಗೆ ತಿಳಿಯದೆಯೇ 'ಜ್ಞಾನಾಗ್ನಿ' ಪ್ರಜ್ವಲಿಸಿ ಆಗ ನಡೆಯುತ್ತಿರುವ ಕಾರ್ಯಗಳಲ್ಲಿ ಹುಟ್ಟಿಬಂದಿರುವ ಕರ್ಮವನ್ನು (ಆಗಾಮಿಕಕರ್ಮ) ಸುಟ್ಟುಹಾಕುತ್ತದೆ. ಕರ್ಮಯೋಗದಲ್ಲಿ ಯೋಗಿ ಎಲ್ಲಾ ಕೆಲಸಗಳು ಮಾಡುತ್ತಾ ಅಜ್ಞಾನಿಯಂತೆ ಕಾಣಿಸುತ್ತಾನೆ. ಒಳಗಿನ ಅಹಮ್‌ನನ್ನು ಅಣಗಿಸಿ ಹೊರಗಿನ ಕಾರ್ಯಸಂಬಂಧ ಇಲ್ಲದಂತೆ ಮಾಡುವುದೇ ಯೋಗ. ಆದ್ದರಿಂದ ಕರ್ಮಯೋಗವನ್ನು ಹೊರಗೆ ಯಾರು ಗುರ್ತಿಸಲಾರರು.

ಈ ವಿಧವಾದ ಎರಡು ಯೋಗಗಳೇ ಪರಮಾತ್ಮನಲ್ಲಿ ಐಕ್ಯವಾಗುವುದಕ್ಕೆ ಮುಖ್ಯ ಮಾರ್ಗಗಳಾಗಿವೆ. ಪರಮಾತ್ಮನಲ್ಲಿ ಸೇರುವುದಕ್ಕೆ ಕರ್ಮ ಎಷ್ಟುಮಾತ್ರ ಇಲ್ಲದಂತೆ ಹೋಗಬೇಕು. ಕರ್ಮಶೇಷ ಇರುವವರೆಗೂ ಲಭಿಸದ ಪರಮಪದ, ಕರ್ಮಶೇಷ ಇಲ್ಲದಂತೆ ಮುಗಿದುಹೋದಾಗಲೇ ಲಭಿಸುತ್ತದೆ. ಆದ್ದರಿಂದ ಭಗವಂತನು ಜ್ಞಾನಾಗ್ನಿ ತಯಾರಾಗುವ ಎರಡು ಯೋಗಗಳನ್ನು ನಮಗೆ ಬೋಧಿಸಿದ್ದಾನೆ. ಒಂದು ಯೋಗದಲ್ಲಿ ಸಂಚಿತಕರ್ಮ ಮತ್ತೊಂದು ಯೋಗದಲ್ಲಿ ಆಗಾಮಿಕಕರ್ಮ ಹೋಗುವಂತೆ ಯೋಗಗಳನ್ನು ನಿರ್ಮಿಸಿದ್ದಾನೆ. ಹುಟ್ಟಿದಾಗಿನಿಂದ ಮರಣಿಸುವವರೆಗೂ ಹೊಸದಾಗಿ ಬರುವ ಕರ್ಮವನ್ನು ಆಗಾಮಿಕ ಕರ್ಮ ಎನ್ನುತ್ತೇವೆ. ಆಚರಣೆಗೆ ಬಂದಿರುವ ಕರ್ಮ ಪ್ರಾರಬ್ಧವಾಗಿದ್ದು, ಉಳಿದ ನೆಲೆಯನ್ನು ಸಂಚಿತಕರ್ಮ ಎನ್ನುತ್ತೇವೆ. ಬ್ರಹ್ಮಯೋಗದಲ್ಲಿ ಸಂಚಿತಕರ್ಮ ಕ್ರಮವಾಗಿ ಜ್ಞಾನಾಗ್ನಿಯಿಂದ ಸುಟ್ಟುಹೋಗುತ್ತದೆ. ಕರ್ಮಯೋಗದಲ್ಲಿ ಆಗಾಮಿಕ ಕರ್ಮ ಸುಟ್ಟುಹೋಗುತ್ತದೆ. ಪ್ರಾರಬ್ಧ

ಕರ್ಮ ಸುಟ್ಟುಹೋಗುವುದು ಯಾವ ಯೋಗದಲ್ಲಿ ಇಲ್ಲ. ಒಬ್ಬ ಯೋಗಿಗೆ ತನ್ನಲ್ಲಿ ಪ್ರಕಾಶಿಸಿದ ಜ್ಞಾನಾಗ್ನಿ ಕರ್ಮನಾಶ ಮಾಡಿದಾಗ ಉಳಿದ ಅಗ್ನಿ ತನ್ನ ಶಿರೋಭಾಗದಲ್ಲಿ ನೆಲೆಸಿರುತ್ತದೆ. ಅಂತಹ ನೆಲೆಸಿರುವ ಅಗ್ನಿಯನ್ನು ಒಬ್ಬ ಯೋಗಿ ಇನ್ನೊಬ್ಬನಿಗೆ ದಾನ ಮಾಡಿದರು ಅದು ಕೇವಲ ಪ್ರಾರಬ್ಧದವನ್ನೇ ಸುಟ್ಟು ಹಾಕುತ್ತದೆ. ಈ ವಿಧಾನವಲ್ಲದೆ ಪ್ರಾರಬ್ಧ ಸುಟ್ಟುಹೋಗುವುದಕ್ಕೆ ಯಾವ ಯೋಗವು ಇಲ್ಲವೆಂದು ತಿಳಿಯಬೇಕು.

ಇರುವವು ಕರ್ಮಯೋಗ, ಬ್ರಹ್ಮಯೋಗಗಳೆಂಬ ಎರಡೇ ಪದ್ಧತಿಗಳು. ಆದುದರಿಂದ ಮೇಲಿನ ಶ್ಲೋಕದಲ್ಲಿ **'ದ್ವಿವಿಧಾ ನಿಷ್ಠಾ'** ಎಂದು ಭಗವಂತನು ಮೊದಲೇ ಹೇಳಿದ್ದಾನೆ. ಆ ಎರಡು ನಿಷ್ಠೆಗಳ ಹೆಸರುಗಳು ಸ್ಪಷ್ಟವಾಗಿ ಹೇಳುತ್ತಾ **'ಜ್ಞಾನ ಯೋಗೇನ' 'ಕರ್ಮಯೋಗೇನ'** ಎಂದಿದ್ದಾನೆ. ಇನ್ನು ಕೆಳಗಿನ ಶ್ಲೋಕಗಳಲ್ಲಿ ಈ ಎರಡು ಯೋಗಗಳನ್ನು ಕುರಿತು ಏನು ಹೇಳುತ್ತಿದ್ದಾನೋ ನೋಡೋಣ.

**(2) ಶ್ಲೋ॥ 4 : ನ ಕರ್ಮಾಣಾ ಮನಾರಮ್ಭಾನ್ ನೈಷ್ಕರ್ಮ್ಯಂ ಪುರುಷೋಶ್ನುತೇ ।**
**ನ ಚ ಸನ್ನ್ಯ ಸನಾದೇವ ಸಿದ್ಧಿಂ ಸಮಧಿಗಚ್ಛತಿ ॥**

**(ಪ್ರಕೃತಿ)**

**ಭಾವಾರ್ಥ:** ಕರ್ಮ ಪ್ರಾರಂಭಿಸದೆ ಇರುವ ಮಾತ್ರಕ್ಕೆ ಮತ್ತು ಮಾಡುತ್ತಿರುವ ಕರ್ಮಗಳನ್ನು ಬಿಡುವುದರಿಂದಲೂ ಮೋಕ್ಷ ಲಭಿಸುವುದಿಲ್ಲ.

**ವಿವರ** : ಕರ್ಮಗಳನ್ನು ಪ್ರಾರಂಭಿಸುವುದು ಎಂದರೆ ಪಾಪಪುಣ್ಯಗಳನ್ನು ಕಾರ್ಯರೂಪವಾಗಿ ಮಾಡುವುದಕ್ಕೆ ಉಪಕ್ರಮಿಸುವುದೆಂದು ಅರ್ಥ. ಹಾಗೇ ಮಾಡುವ ಕರ್ಮಗಳನ್ನು ಬಿಡುವುದೆಂದರು ಕರ್ಮ ಕಾರ್ಯರೂಪವಾಗಿ ಮಾನವನಲ್ಲಿ ನಡೆಯುತ್ತಿರುವಾಗ ಬಿಡುವುದೆಂದು ತಿಳಿಯಬೇಕು. ಕಾರ್ಯಗಳೆಲ್ಲವೂ ಪಾಪಪುಣ್ಯ ಮಿಶ್ರಿತಗಳೆಂದು ತಿಳಿದು ಇವುಗಳನ್ನು ಮಾಡುವುದರಿಂದ ಪಾಪ ಬರುತ್ತದೆಂದು, ಮಾಡದಿರುವುದರಿಂದ ಪಾಪ ಬರುವುದಿಲ್ಲ ಅಲ್ಲವೆ! ಎಂದು ಆ ಕೆಲಸಗಳನ್ನು ಮಾಡದಿದ್ದರೂ, ಮತ್ತು ಕೆಲಸಗಳು ಮಾಡುತ್ತಾ ಈ ಕೆಲಸಗಳು ಮಾಡುವುದರಿಂದ ಪಾಪ ಬರುತ್ತಿದೆ ಎಂದು ತಿಳಿದು, ಹಾಗೆ ಕರ್ಮಬಾರದಂತೆ ಇರುವುದಕ್ಕೆ ಆ ಕೆಲಸಗಳನ್ನು ಮಾಡದೇ ಇರುವುದು ಒಳ್ಳೆಯದೆಂದು ತಿಳಿಯುವವರನ್ನು ತಿಳಿಯದವರೆಂದೇ ಹೇಳಬಹುದು. ಏಕೆಂದರೆ! ಕೆಲಸಗಳು ಮಾಡದಷ್ಟು ಮಾತ್ರಕ್ಕೆ, ಮಾಡುತ್ತಿರುವ ಕೆಲಸಗಳು ಬಿಟ್ಟ ಮಾತ್ರಕ್ಕೆ ಮೋಕ್ಷ ಲಭಿಸುವುದಿಲ್ಲ. ಉದಾಹರಣೆಗೆ ಮದುವೆ ಮಾಡಿಕೊಳ್ಳುವುದರಿಂದ ಅನೇಕ ಕರ್ಮಗಳು ಬರುತ್ತವೆಂದು ಮದುವೆ

ಮಾಡಿಕೊಳ್ಳದೇ ಇರುವವರು ಕೆಲವರು, ಮತ್ತು ವಿವಾಹ ನಡೆದು ಕೆಲವು ದಿನಗಳು ಹೆಂಡತಿಯ ಜೊತೆ ಸಂಸಾರ ಮಾಡಿ ನಂತರ ಈ ಸಂಸಾರ ಮಾಡುವುದರಿಂದ ಕರ್ಮಗಳು ಉಂಟಾಗುತ್ತಿವೆ ಎಂದು, ಕರ್ಮಗಳು ಬಾರದಂತಿರಲು ಹೆಂಡತಿಯನ್ನು ಸಂಸಾರವನ್ನು ಬಿಡಬೇಕೆಂದು ತಿಳಿದು ಬಿಡುವವರು ಕೆಲವರಿದ್ದಾರೆ.

ಆ ವಿಧವಾಗಿ ಕೆಲವರು ಕೆಲಸಗಳು ಮಾಡದಹಾಗೆ ಇರುತ್ತಾರೆ. ಮತ್ತು ಒಂದುವೇಳೆ ಮಾಡುತ್ತಿದ್ದರು ಜ್ಞಾನವೆಂದುಕೊಂಡು ಎಷ್ಟೋಜನ ಮದುವೆ ಮಾಡಿಕೊಳ್ಳದೆ ಬ್ರಹ್ಮಚಾರಿಗಳಾಗಿ ನಿಂತುಹೋದವರು ಇದ್ದಾರೆ. ಅಂತಹವರನ್ನು ದೊಡ್ಡ ಜ್ಞಾನಿಗಳಾಗಿ ದೈವಜ್ಞರಾಗಿ ಬಹಳ ಮಂದಿ ಭಾವಿಸುತ್ತಿರುವುದು ತಿಳಿದ ವಿಷಯವೇ. ಆದರೆ ಭಗವದ್ಗೀತೆಯಲ್ಲಿ ಭಗವಂತನು ಅದರಿಂದ ಮೋಕ್ಷ ಲಭಿಸುವುದಿಲ್ಲ ಎನ್ನುತ್ತಿದ್ದಾನೆಂದರೆ ಅದು ಸರಿಯಾದ ಜ್ಞಾನ ಪದ್ಧತಿ ಜ್ಞಾನ ಅಲ್ಲವೆಂದೇ ತಿಳಿಯುತ್ತಿದೆ. ಇನ್ನೂ ಎಷ್ಟೋಜನ ಹೆಂಡತಿ ಮಕ್ಕಳ ಜೊತೆ ಸಂಸಾರ ಮಾಡುತ್ತಾ ಮದುವೆ ಇಲ್ಲದ ಬ್ರಹ್ಮಚಾರಿಗಳನ್ನು ನೋಡಿ, ಅವರು ಕರ್ಮ ಅಂಟದ ಸ್ಥಿತಿಯಲ್ಲಿ ಒಳ್ಳೆಯ ಜ್ಞಾನದಲ್ಲಿದ್ದಾರೆ ಎಂದು ತಿಳಿದು, ಅಂತಹವರ ಮಾರ್ಗವನ್ನೇ ಅನುಸರಿಸಿದರೆ ಕರ್ಮಗಳು ಬರುವುದಿಲ್ಲವೆಂದು, ಅದಕ್ಕಿಂತ ಮೀರಿದ ಜ್ಞಾನವಿಲ್ಲವೆಂದು ತಿಳಿದು, ನಿಧಾನವಾಗಿ ಹೆಂಡತಿಮಕ್ಕಳನ್ನು ಬಿಟ್ಟು ಸನ್ಯಾಸವನ್ನು ಸ್ವೀಕರಿಸಿದವರನ್ನೂ ಸಹ ನೋಡುತ್ತಿದ್ದೇವೆ. ಹಾಗೆ ಸನ್ಯಾಸಿಸುವುದರಿಂದಲೂ ಸಿದ್ಧಿ ಲಭಿಸುವುದಿಲ್ಲ ಎನ್ನುವ ದೇವರ ವಾಕ್ಯದ ಪ್ರಕಾರ ಅದು ಸರಿಯಾದ ಪದ್ಧತಿ ಅಲ್ಲವೆಂದು ತಿಳಿಯುತ್ತಿದೆ. ಇದರಿಂದ ಒಂದು ವಿವಾಹವೇ ಅಲ್ಲ ಸರ್ವಕಾರ್ಯಗಳಲ್ಲಿ ಕರ್ಮಬರುತ್ತದೆ ಎಂದು ಮಾಡದಂತಿರುವುದು, ಮಾಡುತ್ತಿರುವುದನ್ನು ಬಿಡುವುದು ಪದ್ಧತಿ ಅಲ್ಲವೆಂಬುದು ಜ್ಞಾನಸೂತ್ರವೆಂದು ತಿಳಿಯಬೇಕು. ಏಕೆಂದರೆ! ಕೆಳಗಿನ ಶ್ಲೋಕವನ್ನು ನೋಡಿರಿ.

**(2) ಶ್ಲೋ॥ 5 : ನಹಿಕಶ್ಚಿತ್ ಕ್ಷಣ ಮಪಿ ಜಾತು ತಿಷ್ಠತ್ಯ ಕರ್ಮಕೃತ್ ।**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿ ಜೈರ್ಗುಣೈಃ ॥**

**(ಪ್ರಕೃತಿ)**

**ಭಾವಾರ್ಥ:** ಯಾರೇ ಆಗಲಿ ಎಂತಹ ಕರ್ಮವನ್ನಾದರೂ ಆಚರಿಸದೆ ಒಂದು ಕ್ಷಣವಾದರು ಸುಮ್ಮನಿರುವುದಿಲ್ಲ. ಪ್ರಕೃತಿ ಜನಿತವಾದ ಗುಣಗಳಿಗೆ ಸಿಕ್ಕಿದವರಾಗಿ, ಕರ್ಮಗಳ ವಶರಾಗಿ ಕೆಲಸಗಳು ಮಾಡುತ್ತಿರುತ್ತಾರೆ.

**ವಿವರ :** ಪ್ರಕೃತಿಯಿಂದ ಹುಟ್ಟಿರುವವು ಗುಣಗಳು. ಅವು ಸಜೀವವಾಗಿರುವ ಎಲ್ಲರ

ಶರೀರಗಳಲ್ಲಿ ಒಂದೇ ವಿಧವಾಗಿವೆ. ಆ ಗುಣಗಳ ಮಧ್ಯದಲ್ಲಿಯೇ ಜೀವಾತ್ಮ ನಿವಾಸ ಮಾಡುತ್ತಿದ್ದಾನೆ. ಮೂರು ವಿಧಗಳ ಗುಣಭಾಗಗಳಲ್ಲಿ ಯಾವುದೋ ಒಂದು ಭಾಗದಲ್ಲಿ ವಾಸಿಸುತ್ತಾ ಆ ಭಾಗಗಳಲ್ಲಿನ ಗುಣಗಳಲ್ಲಿ ಬದ್ಧನಾಗಿದ್ದಾನೆ. ಗುಣಗಳಿಂದಲೇ ಯೋಚನೆಗಳು, ಯೋಚನೆಗಳಿಂದಲೇ ಕಾರ್ಯಗಳು ಎನ್ನುವ ವರಸೆ ಪ್ರಕಾರ ನಡೆಯುತ್ತಿವೆ. ಯಾವ ಕಾರ್ಯ ನಡೆಯುವುದಕ್ಕೆ, ಯಾವ ಗುಣ ಕೆಲಸಮಾಡಬೇಕೋ, ಆ ಗುಣವನ್ನು ಪ್ರಾರಬ್ಧಕರ್ಮ ಪ್ರೇರೇಪಿಸಿ ಕೊನೆಗೆ ಕೆಲಸವನ್ನು ಮಾಡಿಸುತ್ತಿದೆ. ಪ್ರತಿ ಜೀವಾತ್ಮ ಶರೀರದಲ್ಲಿ ಕರ್ಮವಶದಿಂದ ಗುಣಗಳಲ್ಲಿ ಬಂಧಿಸಲ್ಪಟ್ಟು, ಕರ್ಮಪ್ರೇರಣೆಯ ಪ್ರಕಾರ ಕಾರ್ಯಗಳು ಮಾಡುತ್ತಿದ್ದಾನೆ. ಪ್ರಾರಬ್ಧಕರ್ಮ ಗುಣವಾಗಿ, ಗುಣವು ಯೋಚನೆಯಾಗಿ, ಯೋಚನೆಯು ಕಾರ್ಯವಾಗುತ್ತಿದೆ. ಇದು ಅನಿವಾರ್ಯದ ಕಾರ್ಯ.

ಪ್ರತಿ ಮಾನವನು ಎಚ್ಚರಿಕೆಯಲ್ಲಿರುವ ಪ್ರತಿಕ್ಷಣವು ಯಾವುದೋ ಒಂದು ಪ್ರಾರಬ್ಧಕರ್ಮ ನಡೆಯುತ್ತಲೇ ಇದೆ. ಯಾವುದೋ ಒಂದು ಯೋಚನೆ ಬರುತ್ತಲೇ ಇದೆ. **ಪ್ರತಿಕ್ಷಣ ಕರ್ಮವನ್ನು ಅನುಸರಿಸಿ ಯೋಚನೆಗಳು ಬಾರದ ಮಾನವನು ಭೂಮಿ ಮೇಲೆ ಇಲ್ಲವೆಂದೇ ಹೇಳಬಹುದು**. ಬಂದಿರುವ ಯೋಚನೆಗಳೆಲ್ಲಾ ಕಾರ್ಯ ರೂಪವಾಗುವುದಿಲ್ಲ. ಯಾವುವು ಕಾರ್ಯರೂಪವಾಗಬೇಕೋ ಅವುಗಳೇ ಕಾರ್ಯ ರೂಪವಾಗುತ್ತವೆ. ಉಳಿದಿರುವವು ಯೋಚನೆಗಳವರೆಗೆ ಇರುತ್ತವೆ. ಎತ್ತ ತಿರುಗಿದರು ಯಾವ ಕ್ಷಣವು ಪ್ರಾರಬ್ಧವಿಲ್ಲದ್ದು ಇರುವುದಿಲ್ಲ. ಪ್ರತಿಕ್ಷಣ ಪ್ರಾರಬ್ಧಕರ್ಮ ಆಡಿಸುತ್ತಲೇ ಇದೆ.

ಮಾನವನ ನಿರ್ಣಯದ ಪ್ರಕಾರ ಯಾವ ಕಾರ್ಯಗಳು ನಡೆಯುವುದಿಲ್ಲ. ನಡೆಯುವ ಕೆಲಸಗಳೆಲ್ಲವೂ ಪ್ರಾರಬ್ಧ ಪ್ರಕಾರವೇ ನಡೆಯುತ್ತವೆ. ಅದರಿಂದಲೇ **ಮನುಷ್ಯ ಒಂದು ಅಂದುಕೊಂಡರೆ ನಡೆಯುವುದು ಮತ್ತೊಂದು ಇರುತ್ತದೆ**. ಬ್ರಹ್ಮಚರ್ಯ ಆಚರಿಸಿ ಹೆಂಗಸರ ಬಗ್ಗೆ ಜಾಗ್ರತೆಯಾಗಿರಬೇಕೆಂದುಕೊಳ್ಳುವವರೂ ಸಹ, ಸ್ವಪ್ನಾವಸ್ಥೆಯಲ್ಲಾದರೂ ತಮ್ಮ ಬ್ರಹ್ಮಚರ್ಯವನ್ನು ಬಿಡುವುದೋ, ಅಥವಾ ಎಚ್ಚರಿಕೆಯಲ್ಲಿರುವಾಗಲೋ ಯಾವುದೋ ಒಂದು ಸಮಯದಲ್ಲಿ ತಮ್ಮ ನಿಷ್ಠೆಯನ್ನು ಕಳೆದುಕೊಳ್ಳುವುದೋ ನಡೆಯುತ್ತಿದೆ. ಕೆಲವರು ಮದುವೆ ಮಾಡಿಕೊಂಡು ಹೆಂಡತಿಯ ಜೊತೆ ಸಂಸಾರ ಮಾಡಬೇಕೆಂದುಕೊಂಡರು ಜೀವನದಲ್ಲಿ ಮದುವೆಯೆ ಆಗದಿರುವುದು ಗಮನಿಸಬಹುದು. ಅವೆಲ್ಲವೂ ಪರಿಶೀಲಿಸಿ ನೋಡಿದರು ಯಾರು ಸ್ವತಂತ್ರರಾಗಿ ಅವರ ಇಷ್ಟದ ಪ್ರಕಾರ ಇರುವುದಿಲ್ಲವೆಂದು, ಎಲ್ಲರೂ ಸ್ವತಂತ್ರ ಇಲ್ಲದವರಾಗಿ ಕರ್ಮದ ಕೈಯಲ್ಲಿ ಆಡಿಸಲ್ಪಡುತ್ತಿದ್ದಾರೆಂದು ತಿಳಿಯುತ್ತಿದೆ. ಪ್ರತಿಯೊಬ್ಬರು ಪ್ರತಿಯೊಂದು ಸಮಯದಲ್ಲಿ ಕರ್ಮತಂತ್ರರಾಗಿ ಯಾವುದೋ ಒಂದು ಕೆಲಸ ಮಾಡುತ್ತಿದ್ದಾರೆ.

**(2) ಶ್ಲೋ॥ 6 : ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ ।**
**ಇಂದ್ರಿಯಾರ್ಥಾನ್ ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥**
**(ಬ್ರಹ್ಮಯೋಗ, ಜೀವಾತ್ಮ)**

**ಭಾವಾರ್ಥ** : ಕರ್ಮೇಂದ್ರಿಯಗಳ ಕೆಲಸಗಳನ್ನು ನಿಗ್ರಹಿಸಿ, ಜ್ಞಾನೇಂದ್ರಿಯಗಳ ವಿಷಯಗಳನ್ನು ಸ್ಮರಿಸುವವನನ್ನು ಮೂಢಾತ್ಮನೆಂದು ಕರೆಯುತ್ತಾರೆ.

**ವಿವರ :** ಮನಸ್ಸಿನ ಆದೇಶಾನುಸಾರ ಕೆಲಸಗಳು ಮಾತ್ರ ಮಾಡುವ ಕರ್ಮೇಂದ್ರಿಯಗಳೆನ್ನುವ ಕಾರ್ಯೇಂದ್ರಿಯಗಳಾದ ಕಾಲು, ಕೈಗಳು, ಬಾಯಿ, ಮತ್ತು ಗುಪ್ತವಾಗಿರುವ ಎರಡು ಒಟ್ಟು ಐದನ್ನು ಕದಲದಂತೆ ಮಾಡಿ, ದೊಡ್ಡ ಬ್ರಹ್ಮಯೋಗ ಆಚರಿಸುವವನಂತೆ ಮೇಲ್ನೋಟಕ್ಕೆ ಕಾಣಿಸುತ್ತಾ, ಒಳಗೆ ಮನಸ್ಸಿನಲ್ಲಿ ಜ್ಞಾನೇಂದ್ರಿಯಗಳಾದ ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮದ ವಿಷಯಗಳನ್ನು ಜ್ಞಾಪಕ ತಂದುಕೊಂಡು, ಅವುಗಳನ್ನು ಯೋಚಿಸುತ್ತಾ ಕುಳಿತುಕೊಳ್ಳುವವನ ಸಾಧನೆ ಯೋಗಸಾಧನೆ ಅನಿಸುವುದಿಲ್ಲ. ಮೇಲಿನ ಇಂದ್ರಿಯಗಳು ನಿಗ್ರಹಿಸಿದರೂ ಒಳಗಿನ ವಿಷಯಗಳು ಯೋಚಿಸುವವನ ಆಚಾರವನ್ನು ಮೂಢಾಚಾರ ಎನ್ನುತ್ತಾರೆ.

**ಉದಾಹರಣೆಗೆ :** ಒಬ್ಬ ವ್ಯಕ್ತಿ ಯೋಗ ಮಾಡುತ್ತಿದ್ದೇನೆಂದುಕೊಂಡು ಒಂದು ಮಂತ್ರವನ್ನು ಮನಸ್ಸಿನಲ್ಲಿ ಉಚ್ಚರಿಸುತ್ತಾ ಕದಲದೆ ಕುಳಿತುಕೊಂಡಿದ್ದಾನೆಂದುಕೊಳ್ಳೋಣ. ಆತನ ಹೊರಗಿನ ಇಂದ್ರಿಯಗಳು ಕೆಲಸ ಮಾಡದಿದ್ದರೂ ಒಳಗಿನ ಮನಸ್ಸಿಗೆ ಜ್ಞಾನೇಂದ್ರಿಯವಾದ ಕಿವಿ ಕೇಳಿದ ವಿಷಯವನ್ನು ಜ್ಞಾಫಕವಾಗಿ ಸ್ಮರಿಸುತ್ತಿದ್ದಾನೆ. ಆದ್ದರಿಂದ ಆತನ ಆಚಾರವು ಸರಿಯಾದುದು ಅಲ್ಲವೆಂದು, ಅಂತಹವನನ್ನು ಅಜ್ಞಾನಿ ಅಥವಾ ಮೂಢಾತ್ಮನೆಂದು ಭಗವಂತನು ತಿಳಿಸುತ್ತಿದ್ದಾನೆ. ಹಾಗೆ ಕದಲದೇ ಕುಳಿತುಕೊಂಡು ನಾವು ಪ್ರಪಂಚ ವಿಷಯಗಳನ್ನು ಸ್ಮರಿಸಲಿಲ್ಲ ಅಲ್ಲವೆ! ದೈವಸಂಬಂಧವಾದ ಮಂತ್ರವನ್ನೋ ನಾಮವನ್ನೋ ಉಚ್ಚರಿಸುತ್ತಿದ್ದೇವಲ್ಲವೆ!! ಪ್ರಪಂಚ ಸಂಬಂಧ ವಿಷಯವಾದರೆ ಒಳ್ಳೆಯದಲ್ಲದೆ ಹೋಗಬಹುದು. ಆದರೆ ಮಂತ್ರವನ್ನು ಸ್ಮರಿಸುವುದೂ ಸಹ ಒಳ್ಳೆಯದು ಅಲ್ಲವಾ! ಎನ್ನುವ ಸಂದೇಹವು ಕೆಲವರಿಗೆ ಬರಬಹುದು. ಅದಕ್ಕೆ ಉತ್ತರ ಏನೆಂದರೆ! ಮಂತ್ರವನ್ನು ಸ್ಮರಿಸುವಾಗ ನಮ್ಮದು ಸರಿಯಾದ ಆಚರಣೆ ಎಂದುಕೊಂಡು ತಪ್ಪಾಗಿ ಅರ್ಥೈಸಿಕೊಳ್ಳುವ ಅವಕಾಶವಿದೆ, ಆದ್ದರಿಂದ ಭಗವಂತನು ಈ ವಿಷಯವನ್ನು ಪ್ರತ್ಯೇಕಿಸಿ ಇಲ್ಲಿ ಹೇಳಬೇಕಾಗಿ ಬಂದಿದೆ. ಇಂದ್ರಿಯಾರ್ಥ ವಿಷಯಗಳಿರುವಾಗ ನಾವು ಮನಸ್ಸಿನಲ್ಲಿ ಸ್ಮರಿಸುವ ಮಂತ್ರವೂ ಸಹ ಒಂದು ದಿನ ಕಿವಿಯು ಕೇಳುವುದರ ಮೂಲಕ ಮನಸ್ಸಿಗೆ ಸೇರಿದೆ ಎಂದು ಹೇಳಬಹುದು.

ಆದುದರಿಂದ ಅದು ದೈವ ಸಂಬಂಧ ಮಂತ್ರವಾದರು ಅಥವಾ ಪ್ರಪಂಚ ವಿಷಯವಾದರು ಅದನ್ನು ಕಿವಿ ಮೂಲಕ ಬಂದಿರುವ ವಿಷಯವೇ ಎಂದು ಹೇಳಬಹುದು. ಆ ವಿಧವಾಗಿ ಇಂದ್ರಿಯಗಳ ಮೂಲಕ ಬಂದಿರುವ ವಿಷಯಗಳು ಯಾವುದಾದರೂ ಇಂದ್ರಿಯಾರ್ಥ ವಿಷಯಗಳೇ ಆಗುತ್ತವೆ. ಬ್ರಹ್ಮಯೋಗವೆನ್ನುವುದು ಯಾವ ಇಂದ್ರಿಯ ವಿಷಯಕ್ಕೆ ಸಂಬಂಧವಿಲ್ಲದಿರುವುದು. ಆದ್ದರಿಂದ ಕದಲದೆ ಕುಳಿತುಕೊಂಡು ಯಾವ ವಿಷಯವನ್ನು ಸ್ಮರಿಸಿದರು ಅದು ಸರಿಯಾದ ಆಚರಣೆ ಅಲ್ಲವೆಂದು, ಅದನ್ನು ಬ್ರಹ್ಮಯೋಗ ಎನ್ನುವುದಿಲ್ಲವೆಂದು ತಿಳಿಸುತ್ತಾ ಕದಲದೆ ಮನಸ್ಸಿನಲ್ಲಿ ದೈವಮಂತ್ರವನ್ನು ಸ್ಮರಿಸುವುದಕ್ಕಿಂತ ಕದಲುತ್ತಾ ಪ್ರಪಂಚ ವಿಷಯಗಳನ್ನು ಆಚರಿಸುವ ಕರ್ಮಯೋಗವೇ ಒಳ್ಳೆಯದೆಂದು ಕೆಳಗಿನ ಶ್ಲೋಕದಲ್ಲಿ ಹೇಳುತ್ತಿದ್ದಾನೆ.

**(2) ಶ್ಲೋ॥ 7 : ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ ।**
**ಕರ್ಮೇಂದ್ರಿಯೈಃ ಕರ್ಮಯೋಗ ಮಸಕ್ತಃ ಸ ವಿಶಿಷ್ಯತೇ ॥**
**(ಕರ್ಮಯೋಗ)**

**ಭಾವಾರ್ಥ:** ಯಾರು ಜ್ಞಾನೇಂದ್ರಿಯಗಳಿಂದ ಮನಸ್ಸನ್ನು ನಿಯಂತ್ರಿಸಿ, ಕರ್ಮೇಂದ್ರಿಯಗಳಿಂದ ಕೆಲಸ ಮಾಡುತ್ತಿದ್ದಾನೋ, ಅವನನ್ನು ಕರ್ಮಯೋಗಿ ಎನ್ನುತ್ತಾರೆ. ಅಂತಹವನು ಎಲ್ಲರಿಗಿಂತ ಉತ್ತಮನು.

**ವಿವರ :** ಪ್ರಪಂಚದಲ್ಲಿ ಯಾವ ಕೆಲಸ ನಡೆಯಬೇಕೆಂದರೂ ಜ್ಞಾನೇಂದ್ರಿಯಗಳು ಮತ್ತು ಕರ್ಮೇಂದ್ರಿಯಗಳ ಪ್ರಮೇಯವು ತಪ್ಪದೇ ಇರಬೇಕಾದ್ದೆ. ಉದಾಹರಣೆಗೆ ಒಂದು ರೇಡಿಯೋ ಮೆಕಾನಿಕ್ ರೇಡಿಯೋವನ್ನು ರಿಪೇರಿ ಮಾಡಬೇಕೆಂದುಕೊಳ್ಳುತ್ತಾನೆ. ಆಗ ಕೇವಲ ಕರ್ಮೇಂದ್ರಿಯಗಳಾದ ಕೈಗಳು ಒಂದೇ ಅಲ್ಲದೆ ಜ್ಞಾನೇಂದ್ರಿಯಗಳಾದ ಕಣ್ಣುಗಳೂ ಸಹ ಮುಖ್ಯಪಾತ್ರವಹಿಸುತ್ತವೆ. ಜ್ಞಾನೇಂದ್ರಿಯಗಳು ಕದಲದಂತಿವೆ, ಕರ್ಮೇಂದ್ರಿಯಗಳು ಕದಲಿ ಕೆಲಸ ಮಾಡುತ್ತಿವೆ. ಆದ್ದರಿಂದ ಒಂದು ಕೆಲಸ ನಡೆಯಬೇಕೆಂದರೆ ಕರ್ಮೇಂದ್ರಿಯಗಳು ಪ್ರತ್ಯಕ್ಷವಾಗಿ ಜ್ಞಾನೇಂದ್ರಿಯಗಳು ಪರೋಕ್ಷವಾಗಿ ಅಗತ್ಯ.

ಒಂದು ಕಾರ್ಯದಲ್ಲಿ ಜ್ಞಾನ ಕರ್ಮೇಂದ್ರಿಯಗಳಿಗಿಂತ ಮುಖ್ಯಪಾತ್ರ ವಹಿಸುವುದು ಅಂತರಂಗದಲ್ಲಿರುವ ಮನಸ್ಸು. ಒಳಗಿರುವ ಮನಸ್ಸಿನ ವಿಧಾನವನ್ನನುಸರಿಸಿ ಮಾಡುತ್ತಿರುವ ಕೆಲಸ ಕರ್ಮಯೋಗವಾದರೆ ಪಾಪಪುಣ್ಯವೆಂಬ ಕರ್ಮ ಎಷ್ಟು ಮಾತ್ರವು ಕೆಲಸ ಮಾಡುವವನಿಗೆ ಅಂಟುವುದಿಲ್ಲ. ಕರ್ಮಯೋಗ ಅಲ್ಲದಿದ್ದರೆ ಪ್ರಸ್ತುತ ಕೆಲಸದಲ್ಲಿನ ಪಾಪ ಅಥವಾ ಪುಣ್ಯಗಳು ತಪ್ಪದೇ ಮಾಡುವವನಿಗೆ ಅಂಟುತ್ತವೆ.

ಮೇಲಿನ ಶ್ಲೋಕದಲ್ಲಿ ಭಗವಂತನು ಜ್ಞಾನೇಂದ್ರಿಯಗಳಿಂದ ಮನಸ್ಸನ್ನು ನಿಯಮಿಸಿ ಕರ್ಮೇಂದ್ರಿಯಗಳಿಂದ ಕರ್ಮಯೋಗವನ್ನು ಆಚರಿಸುವವನು ವಿಶಿಷ್ಟತೆ ಹೊಂದಿರುವವನೆಂದು ಹೇಳಿದ್ದಾನೆ. ಪ್ರತಿ ಮನುಷ್ಯ ಪ್ರತಿದಿನ ಯಾವುದೋ ಒಂದು ಕೆಲಸ ಮಾಡುತ್ತಿರುವಾಗ ಯಾರದು ಯೋಗವಾಗಿ, ಯಾರದು ಭೋಗವಾಗಿ ಬದಲಾಗುತ್ತಿದೆ ಎಂದು ತಿಳಿಯಬೇಕೆಂದರೆ ಅದು ಸಾಧ್ಯವಾಗದ ಕೆಲಸ. ಏಕೆಂದರೆ ಕರ್ಮಯೋಗ ಅಂತರ್ಗತ ಮನಸ್ಸಿಗೆ ಸಂಬಂಧಿಸಿದ ವಿಷಯ, ಮತ್ತೊಬ್ಬನ ಮನಸ್ಸು ಕಾಣಿಸುವುದಿಲ್ಲ. ಆದುದರಿಂದ ಎದುರಿಗೆ ಇರುವವನನ್ನು ಗುರುತಿಸುವುದು ಕಷ್ಟ. ಆದ್ದರಿಂದ ತನಗೆ ತಾನು ಆಚರಿಸುವವನಿಗೆ ಮಾತ್ರ ತನ್ನದು ಕರ್ಮಯೋಗ ಆಗಿರುವುದು ಇಲ್ಲದಿರುವುದು ತಿಳಿಯಬಹುದು. ಈಗ ಉದಾಹರಣೆಗೆ ಒಂದು ಕೆಲಸವನ್ನು ವಿವರಿಸಿಕೊಳ್ಳೋಣ. ಒಬ್ಬ ಮೆಕಾನಿಕ್ ರೇಡಿಯೋವನ್ನು ರಿಪೇರಿ ಮಾಡುತ್ತಿರುವಾಗ ಕಣ್ಣಿನಿಂದ ನೋಡುತ್ತಾ ಕೈಯಿಂದ ಮಾಡುತ್ತಾ ಇದ್ದಾನೆ. ಆ ಸಮಯದಲ್ಲಿ ಆ ಮೆಕಾನಿಕ್ ಮನಸ್ಸಿನಿಂದ ತಾನು ಮಾಡುತ್ತಿರುವ ಕೆಲಸದ ಫಲಿತದ ಮೇಲೆ ಯೋಚಿಸಿದರು ಮತ್ತು ನಾನು ಈ ಕೆಲಸವನ್ನು ಮಾಡುತ್ತಿದ್ದೇನೆ, ಇದು ಮೆಕಾನಿಕ್ ಕೆಲಸ, ನಾನು ಮೆಕಾನಿಕ್, ಇತರರಿಗೆ ಕೈಲಾಗದಿರುವುದನ್ನು ಸಹಿತವು ನಾನು ಮಾಡುತ್ತೇನೆ, ನಾನು ನಿಪುಣನು ಎನ್ನುವ ಮೊದಲಾದ ಅಹಮ್‌ವೊಂದರ ಯೋಚನೆಗಳು ಬಂದ ಪಕ್ಷದಲ್ಲಿ ಅವನಿಗೆ ಆ ಕೆಲಸದಲ್ಲಿರುವ ಪಾಪಪುಣ್ಯಗಳು ಯಾವುವು ಇವೆಯೋ ಅವು ಬಂದು ಸೇರುತ್ತವೆ. ಹಾಗಲ್ಲದೆ ಕೆಲಸ ಮಾಡುವವನು ನಾನು ಎಂಬ ಅಹಮ್‌ನ ಧ್ಯಾಸ ಇಲ್ಲದಂತೆ, ಆ ಕೆಲಸದ ಮೇಲೇ ಧ್ಯಾಸವಿಟ್ಟು ಮಾಡಿದವನಿಗೆ ಯಾವ ಕರ್ಮ ಅಂಟುವುದಿಲ್ಲ. ಅಂತಹದನ್ನೇ ಕರ್ಮಯೋಗ ಎನ್ನುತ್ತಾರೆ.

ಈ ದಿನ ಒಬ್ಬ ಚಿಕ್ಕ ಉದ್ಯೋಗ ಮಾಡುವವನು ಸಹಿತವು ನಾನು ಇಂತಹವನೆಂಬ ಅಹಂಕಾರದಿಂದ ಮಾಡುತ್ತಿದ್ದಾನೆ. ಒಬ್ಬ ಮನುಷ್ಯನಿಗೆ ಪೋಲೀಸ್ ಡಿಪಾರ್ಟ್‌ಮೆಂಟಿನಲ್ಲಿ ಜವಾನ್ ಕೆಲಸ ಬಂದರೆ, ನಾನು ಪೋಲೀಸ್ ಎನ್ನುವ ಅಹಮ್‌ನನ್ನು ತನ್ನ ಶರೀರವೆಲ್ಲಾ ತುಂಬಿಕೊಂಡು, ನಾನೊಬ್ಬ ಮನುಷ್ಯನೆಂಬ ಮಾತು ಮರತೆಹೋಗುತ್ತಿದ್ದಾನೆ. ಹಾಗೆ ಮೇಲಿನ ಅಧಿಕಾರಿಗಳಾದರೆ ನಾನು ಇಂತಹವನೆಂದು ಭಾವಿಸಿಕೊಳ್ಳುತ್ತಿದ್ದಾರೆ. ಯಾರೂ ತಾನು ಬೇರೆ ತನ್ನ ವೃತ್ತಿ ಬೇರೆಯೆಂದುಕೊಳ್ಳುವುದಿಲ್ಲ. ವೃತ್ತಿಯಿಂದ ನಾನು ದೊಡ್ಡವನೆಂದು ಸಾಟಿ ಮನುಷ್ಯರಿಗಿಂತ ದೊಡ್ಡದಾಗಿ ತಿಳಿದಾಗ ಆತನು ಮಾಡುವ ಕೆಲಸ ಅಹಂಕಾರ ತುಂಬಿರುವುದಾಗುತ್ತದೆ. ಆದ್ದರಿಂದ ಅಂತಹ ಕೆಲಸಗಳೆಲ್ಲವೂ ಕರ್ಮಯುಕ್ತಗಳೇ ಆಗಲಿ ಕರ್ಮಯೋಗಗಳು ಅಲ್ಲ. ಕರ್ಮಯೋಗಕ್ಕೆ ಮುಖ್ಯವಾಗಿ ಅಹಂಕಾರ ಇರಬಾರದೆಂಬುದಾಗಿದೆ.

ಈಗ ಒಬ್ಬ ವ್ಯಕ್ತಿಗೆ ಅನುಮಾನ ಬರಬಹುದು ಅದು ಏನೆಂದರೆ! ನಾನು ಮಾಡುವ ಉದ್ಯೋಗ ಇತರರನ್ನು ದಂಡಿಸಿ ಶಿಕ್ಷಿಸುವುದೆಂದು, ಇತರರನ್ನು ಹೊಡೆಯುವಾಗ ಪಾಪಬರುವುದು ನಿಜ, ಕರ್ಮಯೋಗ ಜ್ಞಾನ ಎಂದರೇನೊ ನನಗೆ ತಿಳಿಯದಿರುವಾಗ, ನಾನು ಮಾಡುವುದೆಲ್ಲ ಪಾಪವಾದಾಗ, ಆ ಕೆಲಸ ಮಾಡುವುದಕ್ಕಿಂತ ಬೇರೆ ಕೆಲಸ ಮಾಡುವುದು ಒಳ್ಳೆಯದಲ್ಲವೆ! ಈ ಉದ್ಯೋಗಕ್ಕೆ ರಾಜೀನಾಮೆ ಕೊಟ್ಟು ಬೇರೆ ಕೆಲಸ ಮಾಡಿಕೊಳ್ಳುತ್ತೇನೆಂದುಕೊಳ್ಳಬಹುದು. ಹೀಗೆ ಎಷ್ಟೋ ಜನರಿಗೆ ಅವರು ಮಾಡುತ್ತಿರುವ ಕೆಲಸಗಳ ಮೇಲೆ ಅವರಿಗೆ ಏಹ್ಯಾ ಭಾವ ಉಂಟಾಗಿ ಈ ಕೆಲಸ ಬಿಡಬೇಕೆಂದುಕೊಳ್ಳಬಹುದು. ಅದೆಲ್ಲದಕ್ಕೂ ಭಗವಂತನು ಕೆಳಗಿನ ಶ್ಲೋಕದಲ್ಲಿ ಸಮಾಧಾನ ಕೊಡುತ್ತಿದ್ದಾನೆ ನೋಡಿರಿ.

**(2) ಶ್ಲೋ॥ 8 : ನಿಯತಂ ಕುರು ಕರ್ಮತ್ವಂ ಕರ್ಮ ಜ್ಯಾಯೋ ಹ್ಯಕರ್ಮಣಃ ।**
**ಶರೀರಯಾತ್ರಾಪಿ ಚ ತೇ ನ ಪ್ರಸಿದ್ಧ್ಯೇ ದಕರ್ಮಣಃ ॥**
**(ಬ್ರಹ್ಮಯೋಗ)**

**ಭಾವಾರ್ಥ :** ನೀನು ಮಾಡುವ ನಿಯಮಿತ ಕೆಲಸಗಳನ್ನು ಬಿಡುವುದಕ್ಕಿಂತ ಆಚರಿಸುವುದು ಮೇಲು, ಮಾಡುವ ಕೆಲಸಗಳನ್ನು ಬಿಟ್ಟು ದೇಹಯಾತ್ರೆಯನ್ನು ಮಾಡಲಾರೆ.

**ವಿವರ :** ಮನುಷ್ಯನ ಜೀವನದಲ್ಲಿ ಒಬ್ಬೊಬ್ಬರು ಒಂದೊಂದು ವಿಧವಾದ ಕೆಲಸಗಳು ಮಾಡುತ್ತಿರುತ್ತಾರೆ. ಒಬ್ಬನು ಬಸ್ ಕಂಡಕ್ಟರ್ ಕೆಲಸಮಾಡಿ ಬದುಕಿದರೆ, ಮತ್ತೊಬ್ಬನು ಬಸ್‌ನ್ನು ನಡೆಸಿ ಬದುಕುತ್ತಿದ್ದಾನೆ. ಹಾಗೆ ಒಬ್ಬನು ಪೊಲೀಸ್ ಕೆಲಸಮಾಡಿ ಬದುಕುತ್ತಿದ್ದರೆ, ಮತ್ತೊಬ್ಬನು ಕಳ್ಳತನ ಮಾಡಿ ಬದುಕುತ್ತಿದ್ದಾನೆ. ಒಬ್ಬನು ವ್ಯವಸಾಯ ಮಾಡಿದರೆ, ಮತ್ತೊಬ್ಬನು ರಾಜಕೀಯದಿಂದ ಬದುಕುತ್ತಿದ್ದಾನೆ. ಒಬ್ಬನು ಬಟ್ಟೆನೇಯ್ದು ಬದುಕುತ್ತಿದ್ದರೆ, ಮತ್ತೊಬ್ಬನು ಬಟ್ಟೆ ಹೊಗೆದು ಬದುಕುತ್ತಿದ್ದಾನೆ. ಒಬ್ಬನು ನಾಟಕವಾಡಿ ಬದುಕುತ್ತಿದ್ದರೆ, ಮತ್ತೊಬ್ಬನು ಆಡಿಸಿ ಬದುಕುತ್ತಿದ್ದಾನೆ. ಹೀಗೆ ಯಾವುದೊ ಒಂದು ಕೆಲಸಮಾಡಿ ಅದರಿಂದ ಬಂದಿರುವ ಹಣದಿಂದ ಹಸಿವಿಗೆ ಬೇಕಾದ ಆಹಾರವನ್ನು ಸಮಕೂಡಿಸಿಕೊಳ್ಳುತ್ತಿದ್ದಾರೆ. ಯಾರು ಏನು ಮಾಡಿದರು **"ಕೋಟಿವಿದ್ಯೆಗಳು ಕೂಳಿಗೋಸ್ಕರವೆ"** ಎಂಬುವುದು ನಗ್ನ ಸತ್ಯ. ಆರೋಗ್ಯವಾಗಿರುವುದಕ್ಕೆ ಶರೀರಕ್ಕೆ ಬೇಕಾದ ಆಹಾರವನ್ನು ಕೊಟ್ಟು ಪೋಷಿಸುವುದನ್ನು ಶರೀರಯಾತ್ರೆಯನ್ನು ಸಾಗಿಸಿದಂತೆ ಎಂದು ತಿಳಿಯಿರಿ.

ಶರೀರಯಾತ್ರೆ ಸಾಗಿಸುವುದಕ್ಕೆ ಮಾನವನು ಎಷ್ಟೋ ಲೆಕ್ಕವಿಲ್ಲದಷ್ಟು ಕೆಲಸಗಳು ಮಾಡುವುದು ನಮಗೆ ತಿಳಿದಿರುವುದೆ. ಆ ವಿಧವಾಗಿ ಎಷ್ಟೋ ಜನರಿಗೆ ಎಷ್ಟೋ ವಿಧಗಳಾದ

ಕೆಲಸಗಳು ಅವರ ಕರ್ಮಾನುಸಾರವಾಗಿ ನಿಯಮಿತವಾಗಿವೆ. ಆಲೋಚಿಸಿ ನೋಡಿದರು ಕೆಲವರ ಕೆಲಸಗಳು ಒಳ್ಳೆಯವಾಗಿ ಪುಣ್ಯವನ್ನು ಸಂಪಾದಿಸಿಡುವವಾಗಿವೆ. ಕೆಲವರವು ಕೆಟ್ಟ ಕೆಲಸಗಳಾಗಿ ಪಾಪವನ್ನು ಸಂಪಾದಿಸಿಡುವವಾಗಿವೆ. ಅವು ಯಾವುವಾದರು ಅವರಿಗೆ **ನಿಯತಕರ್ಮ**ದಿಂದ ನಡೆಯುವ ಕಾರ್ಯಗಳು. ಎಂದರೆ ಅವರವರ ಪ್ರಾರಬ್ಧಾನು ಸಾರವಾಗಿರುವ ಕೆಲಸಗಳೆಂದು ತಿಳಿಯಬೇಕು. ಈ ಜನ್ಮದಲ್ಲಿ ಯಾವ ಕೆಲಸಗಳು ಮಾಡಬೇಕೋ ಹಿಂದಿನ ಜನ್ಮಗಳ ಕರ್ಮಪ್ರಕಾರ ನಿಯಮಿಸಲಾಗಿರುತ್ತದೆ. ಆದ್ದರಿಂದ ಪ್ರಾರಬ್ಧಾನುಸಾರವಾಗಿರುವ ಕರ್ಮವನ್ನು ನಿಯತಕರ್ಮ ಎನ್ನುತ್ತಿದ್ದೇವೆ.

ಬ್ರಹ್ಮಯೋಗ ಆಚರಿಸಬೇಕೆಂದು ಪ್ರಾರಬ್ಧದ ಪ್ರಕಾರ ನಡೆದುಕೊಳ್ಳದೆ, ಮಾಡುವ ಕೆಲಸಗಳನ್ನು ಬಿಟ್ಟು ಸಾಧನೆಗೆ ಕುಳಿತುಕೊಂಡರೆ, ಶರೀರಕ್ಕೆ ಬೇಕಾದ ಆಹಾರವನ್ನು ಸಮಗೂಡಿಸಲಾರರು, ಶರೀರಯಾತ್ರೆ ನಡೆಯುವುದಿಲ್ಲ. ಶರೀರಪೋಷಣೆ ಮಾಡುವವರು ಬೇರೆ ಇದ್ದರೂ ಅವರು ಬ್ರಹ್ಮಯೋಗವನ್ನು ಮಾಡಿದರು ಪರವಾಗಿಲ್ಲ, ಆದರೆ ಶರೀರಪೋಷಣೆ ನಿಮಿತ್ತ ಕೆಲಸ ಮಾಡುವವರಿಗೆ ಬ್ರಹ್ಮಯೋಗ ಸಾಧನೆ ಸಾಧ್ಯವಾಗುವುದಿಲ್ಲ. ಧೃಡವಾಗಿ ಕುಳಿತುಕೊಂಡರೆ ಅವನ ಶರೀರ ಪೋಷಣೆ ನಡೆಯುವುದಿಲ್ಲ. ಆದ್ದರಿಂದ ಶರೀರಯಾತ್ರೆಗೋಸ್ಕರ ನಿಯಮಿಸಲಾದ ಕಾರ್ಯಗಳು ಮಾಡುವವರಿಗೆಲ್ಲ ತಕ್ಕ ವಿಧದಲ್ಲಿ ಕೆಳಗಿನ ಶ್ಲೋಕದಲ್ಲಿ ಹೇಳಲಾಗಿದೆ.

**(2) ಶ್ಲೋ॥ 9 : ಯಜ್ಞಾರ್ಥಾತ್ ಕರ್ಮಣೋಽನ್ಯತ್ರಲೋಕೋಽಯಂಕರ್ಮಬಂಧನಃ ।**
**ತದರ್ಥಂ ಕರ್ಮ ಕೌಂತೇಯ! ಮುಕ್ತ ಸಂಗಃ ಸಮಾಚರ ॥**
**(ಕರ್ಮಯೋಗ)**

**ಭಾವಾರ್ಥ** : ಯಜ್ಞಸಂಬಂಧ ಇಲ್ಲದಂತೆ ಕರ್ಮಗಳು ಆಚರಿಸುವುದರಿಂದ ಮಾನವನಿಗೆ ಮತ್ತೆ ಕರ್ಮಬಂಧನಗಳು ಉಂಟಾಗುತ್ತವೆ. ಆದ್ದರಿಂದ ಅರ್ಜುನಾ! ಕರ್ಮಗಳಲ್ಲಿ ಬಂಧಿಸಲ್ಪಡದೆ ಕಾರ್ಯಗಳು ಮಾಡು.

**ವಿವರ :** ಇದು ಕರ್ಮಯೋಗದಲ್ಲಿ ಅತ್ಯಂತ ಕ್ಲಿಷ್ಟಕರವಾದ ಶ್ಲೋಕ. ಇಲ್ಲಿ **"ಯಜ್ಞಾರ್ಥ"** ಎನ್ನುವ ಹೊಸಪದ ಬಂದಿದೆ. ಯಜ್ಞ ಎನ್ನುವ ಪದಕ್ಕೆ ಅರ್ಥ ಮುಖ್ಯವಾಗಿ ತಿಳಿಯಬೇಕಾಗಿದೆ. ಯಜ್ಞ ಎನ್ನುವ ಪದ ಎಲ್ಲರಿಗೂ ಬಹಳ ಸುಪರಿಚಿತವಾದರೂ, ಯಜ್ಞ ಎಂದರೆ ಎಲ್ಲರಿಗೂ ತಿಳಿದಿರುವುದೆ ಅಲ್ಲವೆ!! ಎಂದುಕೊಂಡರೂ, ಪರಮಾತ್ಮನ ಭಾವದ ಪ್ರಕಾರ ಇಲ್ಲಿಯವರೆಗೂ ಆ ಭಾವಕ್ಕೆ ನಾವು ದೂರವಾಗಿದ್ದೇವೆ ಎಂದು

ಹೇಳಬಹುದು. ಏಕೆಂದರೆ! ಒಂದುಕಡೆ ಅಗ್ನಿಕುಂಡ ಏರ್ಪಡಿಸಿ ಅದರಲ್ಲಿ ಕೆಲವು ಸಮಿಧೆಗಳನ್ನು ಸುಟ್ಟು ಹಾಕುವುದನ್ನು ಯಜ್ಞವೆಂದು ಎಲ್ಲರೂ ಅಂದುಕೊಳ್ಳುತ್ತಿದ್ದೇವೆ. ಅದು ಕೇವಲ ಯಜ್ಞಕ್ಕೆ ಗುರ್ತಾಗಲಿ, ವಾಸ್ತವಯಜ್ಞ ಅಲ್ಲವೆಂದು ತಿಳಿಯಬೇಕು. ಯಜ್ಞದ ವಿಷಯ ತಿಳಿಯುವುದಕ್ಕೆ ಕೃತಯುಗದಲ್ಲಿನ ಮೊದಲ ಕಾಲಕ್ಕೆ ಹೋಗೋಣ.

ಕೃತಯುಗದಲ್ಲಿ ಮನುಷ್ಯರ ನಡುವೆ ವಾಸಿಸುವುದಕ್ಕೆ ಇಷ್ಟಪಡದ ಗುರುಗಳು ಎಲ್ಲರೂ ಅರಣ್ಯದಲ್ಲಿ ವಾಸಿಸುತ್ತಿದ್ದರು. ಆ ಯುಗದಲ್ಲಿ ಗುರುಗಳಿಗೆ ಬಹಳ ಗೌರವ ಇರುತ್ತಿತ್ತು. ರಾಜರು ಸಹಿತ ಗುರುಗಳ ಹತ್ತಿರ ಹೋಗಿ ಆತ್ಮಜ್ಞಾನ ತಿಳಿದುಕೊಳ್ಳುತ್ತಿದ್ದರು. ಆ ಪದ್ಧತಿ ಪ್ರಕಾರವೇ ಒಬ್ಬ ದೊಡ್ಡರಾಜನು ಗುರು ಹತ್ತಿರಕ್ಕೆ ಹೋಗಿ ಜ್ಞಾನಾಸಕ್ತನಾಗಿ ಬಂದಂತೆ ತಿಳಿಸಿ ಜ್ಞಾನಕ್ಕೋಸ್ಕರ ಅರ್ಥಿಸಿದ್ದಾನೆ. ಆ ಗುರು ಬಹಳ ಮಿತಭಾಷಿ, ಹೇಳಬೇಕಾದ ಜ್ಞಾನ ಸರಿಯಾಗಿ ಒಂದೆರಡು ಮಾತುಗಳಲ್ಲಿ ಹೇಳಿ ಮೌನವಾಗಿರುತ್ತಿದ್ದನು. ಪ್ರತಿದಿನ ಎಲ್ಲರೊಂದಿಗೆ ಮಾತನಾಡುವವನಲ್ಲ. ರಾಜನು ಕೆಲವು ದಿನಗಳು ಅಲ್ಲಿಯೇ ಇದ್ದ ನಂತರ ಒಂದುದಿನ ಸಾಯಂಕಾಲ ರಾಜನನ್ನು ನೋಡಿ **'ನೀನು ಯಜ್ಞವನ್ನು ಮಾಡಬೇಕು'** ಎಂದನಂತೆ. ಆ ಮಾತುಕೇಳಿದ ರಾಜನು ಯಜ್ಞ ಎಂದರೆ ಏನೋ ತಿಳಿಯದೆ ಅರ್ಥವಾಗದ ಮುಖವಿಟ್ಟು ಅದು ಏನೋ ನನಗೆ ತಿಳಿದಿಲ್ಲ ಎಂದನು. ಆಗ ಗುರುಗಳು ಯಜ್ಞವನ್ನು ಕುರಿತು ತಿಳಿಸುವುದಕ್ಕೆ ಯೋಚಿಸಿ ಲೋಹಗಳಲ್ಲಿ ಚಿನ್ನ ಕಬ್ಬಿಣ, ವಸ್ತ್ರಗಳಲ್ಲಿ ರೇಷ್ಮೆವಸ್ತ್ರ ನೂಲಿನವಸ್ತ್ರ, ಎಣ್ಣೆಗಳಲ್ಲಿ ತುಪ್ಪ ಬೇವಿನಎಣ್ಣೆ, ಕಟ್ಟಿಗೆಗಳಲ್ಲಿ ಗಂಧದ ಚಕ್ಕೆ, ತುಂಬೆಚಕ್ಕೆ, ಔಷಧಿಗಳಲ್ಲಿ ಅರಳಿಕಡ್ಡಿಗಳು, ಉತ್ತರೇಣಿ, ಧಾನ್ಯಗಳಲ್ಲಿ ಅಕ್ಕಿ, ಎಳ್ಳು, ಹೀಗೆ ಒಂದಕ್ಕೊಂದು ವಿರುದ್ಧವಾದವು, ಹೆಚ್ಚುಕಡಿಮೆ ಇರುವವು, ಒಂದಕ್ಕೊಂದು ಪ್ರತ್ಯೇಕತೆ ಇರುವವಾದ ಅನೇಕ ವಸ್ತುಗಳನ್ನು ತೆಗೆದುಕೊಂಡು ಬಾ ಎಂದು ಅಜ್ಞಾಪಿಸಿದನು. ಆ ಕಾಲದಲ್ಲಿರುವ ಗುರುಗಳೆಲ್ಲರಲ್ಲಿ ದೊಡ್ಡವನೆನಿಸಿಕೊಂಡ ಆ ಗುರು ಹೇಳಿದ ತಕ್ಷಣ ರಾಜನು ಸ್ವತಃ ತಾನೇ ಹೊರಟು, ಗುರುಗಳ ಅಜ್ಞೆ ಮೇರೆಗೆ ಸಮಸ್ತ ವಸ್ತುಗಳನ್ನು ಸಮಕೂಡಿಸಿಕೊಂಡು ಆನೆಗಳ ಮೇಲೆ ಏರಿಕೊಂಡು ತಂದನು. ಆ ವಿಧವಾಗಿ ಗುರುಗಳು ಹೇಳುವುದು ರಾಜನು ತರುವುದು ಆ ಕಾಲದಲ್ಲಿ ಎಲ್ಲರಿಗೂ ಹೊಸ ಕೆಲಸವಾಗಿ ಕಾಣಿಸಿದೆ. ಬಹಳ ಜನರು ಗುರುಗಳು ಸಹ ಏನು ಮಾಡುತ್ತಿದ್ದಾರೋ ನೋಡಬೇಕೆಂದುಕೊಂಡರು.

ಗುರುಗಳು ಒಂದು ಅಗ್ನಿಕುಂಡವನ್ನು ತಯಾರುಮಾಡಿಸಿ, ಉರಿಯುತ್ತಿರುವ ಅಗ್ನಿಯಲ್ಲಿ ತಂದಿರುವ ವಸ್ತುಗಳೆಲ್ಲವನ್ನು ಹಾಕಿ ಸ್ವಾಹಃ ಮಾಡೆಂದನು. ಆಗ ಆ ರಾಜನು ಒಂದೊಂದು ವಸ್ತುವನ್ನು ತೆಗೆದುಹಾಕುತ್ತಾ ಅದರ ಹೆಸರು ಹೇಳಿ ಸ್ವಾಹಃ ಹೇಳುವುದು ಪ್ರಾರಂಭಿಸಿದನು. ಸ್ವಾಹಃ ಎಂದರೆ ಮುಗಿದುಹೋಗಿದೆ ಎಂದು ಅರ್ಥ. ಆ ಉದ್ದೇಶದಿಂದಲೇ

ತಂದಿರುವ ಚಿನ್ನ ಮುಗಿದುಹೋಗುತ್ತಲೇ ಸುವರ್ಣ ಸ್ವಾಹಃ ಅಂದನು. ಹಾಗೆ ತಂದಿರುವ ವಸ್ತುಗಳೆಲ್ಲವೂ ಹಾಕುತ್ತಾ ಯಾವವಸ್ತು ಮುಗಿದುಹೋದರೆ ಆ ವಸ್ತುವಿನ ಹೆಸರು ಹೇಳಿ ಸ್ವಾಹಃ ಎನ್ನುತ್ತಾ ತಂದಿರುವ ವಸ್ತುಗಳೆಲ್ಲವನ್ನು ಮುಗಿಸಿದನು. ಆ ಕೆಲಸವನ್ನು ಏಕೆ ತನ್ನಿಂದ ಮಾಡಿಸಿದ್ದಾನೋ ರಾಜನಿಗೆ ಏನೂ ಅರ್ಥವಾಗಲಿಲ್ಲ. ಹಾಗೆ ರಾಜನಿಂದ ಮಾಡಿಸುವುದು ಉಳಿದ ಗುರುಗಳು ಬಹಳ ಜನರು ತಿಳಿದುಕೊಂಡು, ಆ ರಾತ್ರಿಗೆ ರಾಜನ ಹತ್ತಿರ ಹೋಗಿ ಹಾಗೆ ಏಕೆ ಮಾಡಿಸಿದ್ದಾರೆಂದು ಕೇಳಿದರು. ಅದಕ್ಕೆ ರಾಜನು ಯಜ್ಞ ಮಾಡೆಂದು ಗುರುಗಳು ಹೇಳಿದ್ದಾರೆಂದು, ಯಜ್ಞ ಎಂದರೆ ಏನೋ ತನಗು ತಿಳಿದಿಲ್ಲವೆಂದು ಗುರುಗಳಿಗೆ ಹೇಳಿದಾಗ, ಅದನ್ನು ತಿಳಿಸುವುದಕ್ಕೆ ಅನೇಕ ವಿಧವಾದ ವಸ್ತುಗಳನ್ನು ಗುರುಗಳು ತನ್ನಿಂದ ತರಿಸಿ ಅಗ್ನಿಕುಂಡದಲ್ಲಿ ಹಾಕಿಸಿ ಸ್ವಾಹಃ ಮಾಡಿಸಿದ್ದಾನೆಂದು ತಿಳಿಸಿದ್ದಾನೆ.

ರಾಜನ ಮಾತು ಕೇಳಿ ಉಳಿದ ಗುರುಗಳೆಲ್ಲರೂ ಹೀಗೆಂದುಕೊಂಡಿದ್ದಾರೆ. ರಾಜನು ತನ್ನ ರಾಜ್ಯವನ್ನು ಸುಖಸೌಖ್ಯವಾಗಿ ಇರುವುದಕ್ಕೆ ಗುರುಗಳನ್ನು ಕೇಳಿರುತ್ತಾನೆಂದು, ಅದಕ್ಕೆ ಗುರುಗಳು ಯಾರಿಗೂ ತಿಳಿಯದ ದೊಡ್ಡ ಕಾರ್ಯವನ್ನು ಮಾಡಿಸಿದ್ದಾನೆಂದು, ಹಾಗೆ ಮಾಡಿದ ಕಾರ್ಯವನ್ನು ರಾಜನ ಮಾತುಗಳಿಂದ ಯಜ್ಞವೆಂದು ತಿಳಿದಿದೆ ಎಂದು, ಆ ಯಜ್ಞದಿಂದ ರಾಜನು ತಂದಿರುವ ವಸ್ತುಗಳೆಲ್ಲವೂ ಅಗ್ನಿ ದೇವರ ಮೂಲಕ ಉಳಿದ ದೇವತೆಗಳಿಗೂ ವರುಣ ದೇವರಿಗೂ ಸೇರಿರುತ್ತವೆಂದು, ಆ ವಸ್ತುಗಳು ತೆಗೆದುಕೊಂಡ ವರುಣನು ಮಳೆಯನ್ನು ಸಕಾಲದಲ್ಲಿ ಸುರಿಸುತ್ತಾನೆಂದು, ಅದರಿಂದ ರಾಜನ ರಾಜ್ಯವು ಬರಗಾಲ ಇಲ್ಲದಂತೆ ಸುಖವಾಗಿರುತ್ತದೆ ಎಂದು, ರಾಜನ ರಾಜ್ಯಕ್ಕೋಸ್ಕರವೇ ಯಜ್ಞವೆಂಬ ಹೆಸರಿನಿಂದ ಈ ಕೆಲಸವನ್ನು ಮಾಡಿದ್ದಾರೆಂದು, ತಾವೂ ಸಹ ಹಾಗೆ ಮಾಡಿದರೆ ಮಳೆ ಬರುತ್ತದೆ ಎಂದುಕೊಂಡು ಅವರವರ ರಾಜರ ಹತ್ತಿರಕ್ಕೆ ಹೋಗಿ, ಪ್ರಜೆಗಳು ಸುಖವಾಗಿರುವುದಕ್ಕೆ, ಮಳೆ ಸುರಿದು ಬೆಳೆಗಳು ಚೆನ್ನಾಗಿ ಬೆಳೆಯುವುದಕ್ಕೆ, ಯಜ್ಞ ಮಾಡುತ್ತೇವೆಂದು ಅದಕ್ಕೆ ಇಷ್ಟು ಖರ್ಚು ಇಷ್ಟು ವಸ್ತುಗಳು ಬೇಕೆಂದು ಕೇಳಿ ತೆಗೆದುಕೊಂಡು, ಗುರುಗಳು ರಾಜನ ಕೈಯಿಂದ ಮಾಡಿಸಿದಂತೆ ಮಾಡಲು ಪ್ರಾರಂಭಮಾಡಿದರು. ಹಾಗೆ ಪೂರ್ವದಲ್ಲಿ ಯಜ್ಞಗಳನ್ನು ರಾಜರು ಮಾಡುತ್ತಿದ್ದರು. ಸಹನೆಯಿಲ್ಲದ ರಾಜರು ಎಲ್ಲಾ ಕೊಟ್ಟು ಗುರುಗಳಿಂದಲೇ ಮಾಡಿಸುತ್ತಿದ್ದರು. ಹೀಗೆ ಕಾಲಕ್ರಮೇಣ ಯಜ್ಞಗಳು ಎನ್ನುವ ಹೆಸರಿರುವ ಕಾರ್ಯಗಳು ನಡೆಯುತ್ತಾ ಬಂದಿವೆ. ಇಂದಿಗೂ ಅಲ್ಲಲ್ಲಿ ಇವೆ. ಈಗಲೂ ಮಾಡಿಸುವವರು ಅಗ್ನಿಕುಂಡದ ಮುಂದೆ ಕುಳಿತುಕೊಂಡು ವಸ್ತುಗಳು ಹಾಕುವುದು ಇದೆ. ಹಾಗೆ ಸಹನೆ ಇಲ್ಲದಿದ್ದರೆ ಹಣ ಕೊಟ್ಟರೆ ಮಾಡುವ ಯಜ್ಞಗಳು ಇವೆ.

ವಿಶೇಷ ಏನೆಂದರೆ **ಗುಡಿಯಲ್ಲಿನ ಪ್ರತಿಮೆ ನಿಜವಾಗಲೂ ದೇವರು ಅಲ್ಲವೆಂದು ಅದು ಕೇವಲ ದೇವರ ಗುರ್ತೆಂದು** ಬಹಳ ಜನರಿಗೆ ಇಂದು ತಿಳಿಯದಿರುವಂತೆ, ಕೃತಯುಗದಲ್ಲಿ ಗುರು ರಾಜನಿಂದ ಮಾಡಿಸಿದ ದಹನಕಾರ್ಯ ನಿಜವಾಗಲು ಯಜ್ಞ ಅಲ್ಲವೆಂದು, ಅದು ಕೇವಲ ಯಜ್ಞದ ಗುರ್ತೆಂದು ತಿಳಿಯದಂತಾಗಿದೆ. ದಹನಕಾರ್ಯವನ್ನೇ ನಿಜವಾಗಲೂ ಯಜ್ಞ ಎಂದುಕೊಂಡಿದ್ದಾರೆ. ಅಂದಿನಿಂದ ಇಂದಿನವರೆಗೂ ಅದನ್ನು ಯಜ್ಞವೆಂದೇ ಕರೆಯುತ್ತಿದ್ದಾರೆ. **ಪೂರ್ವವು ತಿರುಪತಿಯಲ್ಲಿ ಗುಣರಹಿತ ಭಾವವನ್ನು ವ್ಯಕ್ತ ಪಡಿಸುವುದಕ್ಕೆ ಒಬ್ಬ ಭಕ್ತನು ತಲೆ ಬೋಳಿಸಿಕೊಂಡಾಗ** ಆ ದಿನ ಅದನ್ನು ನೋಡಿದವರು ಅಂದಿನಿಂದ ಇಂದಿನವರೆಗೂ ಕೋರಿಕೆಯ ನಿಮಿತ್ತ ತಲೆ ಬೋಳು ಮಾಡಿಸಿಕೊಳ್ಳುತ್ತಿದ್ದಾರೊ ಹಾಗೆ ಭಾವಪೂರಿತ ಕಾರ್ಯವೂ ಸಹ ಭಾವ ರಹಿತವಾಗಿ ಕೋರಿಕೆಗಳ ನಿಮಿತ್ತವಾದ ಕಾರ್ಯವಾಗಿ ಯಜ್ಞವೆನಿಸಿಕೊಳ್ಳುತ್ತಾ ಇದೆ.

ಆ ದಿನ ಗುರುಗಳು ರಾಜನಿಗೆ ಆ ದಹನ ಕಾರ್ಯವನ್ನು ಕುರಿತು ಮಾರನೆದಿನ ಏನು ಹೇಳಿದ್ದಾನೋ, ಉಳಿದವರಿಗೆ ತಿಳಿಯದ ಕಾರಣ ಗುಣಗಳ ರೂಪದಲ್ಲಿರುವ ಮಾಯೆ ತಪ್ಪಾದ ಊಹೆಯನ್ನು ಕೊಟ್ಟು, ಅಸಲು ಮಾರ್ಗದಿಂದ ತಪ್ಪಿಸಿದೆ ಎಂದು ಹೇಳಬಹುದು. ಅಗ್ನಿಗೆ ಸಮಿಧೆಗಳನ್ನು (ವಸ್ತುಗಳನ್ನು) ಅರ್ಪಿಸಿದ ರಾಜನಿಗೂ ಸಹ ಮಾಡಿದ ಕಾರ್ಯವನ್ನು ಕುರಿತು ತಿಳಿಯದೇ ನನಗೂ ಮೋಕ್ಷ ಬೇಕೆಂದುಕೊಂಡಿದ್ದೇನೆ, ಗುರುಗಳು ಯಜ್ಞ ಮಾಡೆಂದಿದ್ದಾರೆ. ನನಗೆ ತಿಳಿದಿಲ್ಲವೆಂದರೂ ನನ್ನಿಂದ ಮಾಡಿಸಿದ್ದಾನೆ. ಇದರಿಂದ ಮೋಕ್ಷ ಸಾಧ್ಯವೆ! ಇದರಲ್ಲಿ ಯಾವುದೋ ನನಗೆ ತಿಳಿಯದ ರಹಸ್ಯವಿದೆ ಎಂದು ತಿಳಿದು ಅದು ಏನೆಂದು ತೀವ್ರವಾಗಿ ಯೋಚಿಸುತ್ತಿರುವ ಸಮಯದಲ್ಲಿ ಮಾರನೆದಿನ ಗುರುಗಳು ಕರೆದು 'ರಾಜಾ ನಾನು ಬಹಳಜನರಂತೆ ಹೆಚ್ಚಾಗಿ ಮಾತನಾಡುವವನಲ್ಲ, ನೇರವಾಗಿ ಸಮಾಧಾನ ಹೇಳುವವನು. ಆದ್ದರಿಂದ ನೀನು ಕೇಳಿರುವುದಕ್ಕೆ ಸರಿಯಾದ ಸಮಾಧಾನ ಕೊಟ್ಟಿದ್ದೇನೆ. ನೀನು ಮೋಕ್ಷದ ಬಗ್ಗೆ ಕೇಳಿದ್ದೀಯಾ. ನಾನು ಯಜ್ಞ ಮಾಡೆಂದಿದ್ದೇನೆ. ನೀನು ಗೊತ್ತಿಲ್ಲವೆಂದಿದ್ದೀಯ, ಅದನ್ನು ತಿಳಿಸುವ ನಿಮಿತ್ತ ಯಜ್ಞಕ್ಕೆ ಉದಾಹರಣೆಯಾಗಿ ಒಂದು ದಹನ ಕಾರ್ಯ ಮಾಡಿಸಿದ್ದೇನೆ. ತಕ್ಷಣ ಅದರ ಬಗ್ಗೆ ನಿನಗೆ ಹೇಳಲಿಲ್ಲ. ಹಾಗೆ ಹೇಳದಿರುವುದರಿಂದ ಅದರ ಮೇಲೆ ನಿನಗೆ ಶ್ರದ್ಧೆ ಹೆಚ್ಚಾಗಿ ತಿಳಿದುಕೊಳ್ಳಬೇಕೆಂಬ ಆತುರ ಹೆಚ್ಚಾಗಬೇಕೆಂದು ಹೇಳಲಿಲ್ಲ. ಹಾಗೆ ಶ್ರದ್ಧೆ ಹೆಚ್ಚಾದಾಗಲೇ ತಿಳಿಸುವ ವಿಷಯ ಚೆನ್ನಾಗಿ ಗ್ರಹಿಸಲ್ಪಡುತ್ತದೆ. ದಹನಕಾರ್ಯ ಯಜ್ಞಕ್ಕೆ ಉದಾಹರಣೆ ಎಂದು ಹೇಳಿದ್ದೇನೆ ಅಲ್ಲವೆ! ಆ ಉದಾಹರಣೆಯನ್ನು ವಿವರವಾಗಿ ಹೇಳುತ್ತೇನೆ ಕೇಳು.

ಮೋಕ್ಷ ಎಂದರೆ ಬಿಡುಗಡೆ ಎಂದು ಅರ್ಥ. ಯಾವುದರಿಂದ ಬಿಡುಗಡೆ ಆಗಬೇಕು? ಯಾವುದು ಬಂಧನವಾಗಿದೆ ಎಂದು ಯೋಚಿಸಿದರೆ, ಪಾಪ ಮತ್ತು ಪುಣ್ಯ ಎನ್ನುವ ಕಾರ್ಯಫಲಿತಗಳು ಕರ್ಮರೂಪದಲ್ಲಿ ಜೀವಾತ್ಮನನ್ನು ಬಂಧಿಸಿ ಜನ್ಮಗಳ ಪಾಲು ಮಾಡುತ್ತಿವೆ. ಪಾಪ ಪುಣ್ಯ ಕಣ್ಣಿಗೆ ಕಾಣಿಸದ ಕರ್ಮರೂಪಗಳು. ಅವು ಒಂದಕ್ಕೊಂದು ವಿರುದ್ಧವಾಗಿದ್ದು ಒಂದು ಒಳ್ಳೆಯದು ಒಂದು ಕೆಟ್ಟದ್ದು, ಒಂದು ಸುಖ ಒಂದು ದುಃಖವನ್ನು ಉಂಟು ಮಾಡುತ್ತಿರುತ್ತವೆ. ಈ ವಿಧವಾಗಿರುವ ವಿಭೇದಗಳಾದ ಪಾಪಪುಣ್ಯಗಳಿಗೆ ಉದಾಹರಣೆಯಾಗಿ ಸಿಹಿಯಾದ ಅತಿ ಮಧುರ ಕಡ್ಡಿಗಳು, ಕಹಿಯಾದ ಬೇವಿನ ಕಡ್ಡಿಗಳು, ತುಪ್ಪ, ಬೇವಿನಎಣ್ಣೆ ಗಂಧದ ಚೆಕ್ಕೆಗಳು, ತುಂಬೆಚೆಕ್ಕೆಗಳು, ಒಂದಕ್ಕೊಂದು ವಿರುದ್ಧ ಹೊಂದಿರುವ ಸಮಿಧೆಗಳನ್ನು ತರಿಸಿದ್ದೇನೆ. ತಂದಿರುವ ವಸ್ತು ಸಮುದಾಯಗಳೆಲ್ಲ ಪಾಪ ಪುಣ್ಯಗಳಿಗೆ ಸಮಾನವೆಂದು ಗುರ್ತಿಸು.

ಪಾಪಪುಣ್ಯಗಳು ಇರುವವರೆಗೂ ಮೋಕ್ಷ ಬರುವುದಿಲ್ಲ. ಯಾವಾಗಾದರೆ ಪಾಪಪುಣ್ಯ ಬಂಧನಗಳು ಕಿತ್ತು ಹೋಗುತ್ತವೊ ಆಗಲೇ ಮೋಕ್ಷ. ಆದ್ದರಿಂದ ಪಾಪಪುಣ್ಯಗಳು. ಇಲ್ಲದಂತೆ ಮಾಡಬೇಕು. **ಪಾಪಪುಣ್ಯಗಳನ್ನು ಇಲ್ಲದಂತೆ ಮಾಡುವುದು ಒಂದೇ ಒಂದು ಜ್ಞಾನಶಕ್ತಿ, ಅದನ್ನು ಜ್ಞಾನಾಗ್ನಿ ಎಂದೂ ಸಹ ಕರೆಯುತ್ತೇವೆ.** ಜ್ಞಾನಾಗ್ನಿಯಲ್ಲಿ ಪಾಪಪುಣ್ಯಗಳು ಯಾವಾಗ ದಹಿಸಲ್ಪಟ್ಟು ಇಲ್ಲದಂತೆ ಹೋಗುತ್ತವೊ ಆಗಲೇ ಮೋಕ್ಷ ಪ್ರಾಪ್ತಿಸುತ್ತದೆ. ಆದ್ದರಿಂದಲೇ ಮೋಕ್ಷಕಾಮಿಯಾದ ನೀನು ಯಜ್ಞ ಮಾಡಬೇಕು ಎಂದಿದ್ದೇನೆ. ಇರುವ ಪಾಪಪುಣ್ಯಗಳನ್ನು ಇಲ್ಲದಂತೆ ಮಾಡುವುದೆ ನಿಜವಾದ ಯಜ್ಞ. ಯಜ್ಞ ಎಂದರೆ **"ನಾಶ"** ಎಂದು ನಿಜವಾದ ಅರ್ಥ. ಈಗ ಮಾಡಿರುವುದು ಯಜ್ಞಕ್ಕೆ ಉದಾಹರಣೆ, ಆದರೆ ಯಜ್ಞ ಅಲ್ಲವೆಂದು ತಿಳಿಯಬೇಕು. ಶರೀರ ಅಂತರಂಗದಲ್ಲಿ ಪಾಪಪುಣ್ಯಗಳನ್ನು ಜ್ಞಾನಾಗ್ನಿಯಿಂದ ದಹಿಸುವುದನ್ನು ಕುರಿತು ತಿಳಿಯುವಂತೆ, ಹೊರಗಿನ ಸಮಿಧೆಗಳನ್ನು(ವಸ್ತುಗಳನ್ನು) ಅಗ್ನಿಯಲ್ಲಿ ಸುಟ್ಟು ತೋರಿಸಿದ್ದೇನೆ. ಪಾಪಪುಣ್ಯಗಳು ಹೇಗೆ ಬರುತ್ತವೋ, ಅವುಗಳನ್ನು ಯಜ್ಞ ಹೇಗೆ ಮಾಡಬೇಕೋ, ವಿವರವಾಗಿ ಹೇಳುತ್ತೇನೆ ಕೇಳು.

ನಿತ್ಯ ನಾವು ಮಾಡುವ ಕೆಲಸಗಳಲ್ಲಿ ಕೆಲವು ಒಳ್ಳೆಯವು, ಕೆಲವು ಕೆಟ್ಟ ಕೆಲಸಗಳು ತಪ್ಪದೇ ಇರುತ್ತವೆ. **ಒಳ್ಳೆಯ ಕೆಟ್ಟ ಕಾರ್ಯಗಳಲ್ಲಿನ ಕಾಣಿಸದ ಫಲಿತಗಳು ಪಾಪಪುಣ್ಯಗಳು. ಕೆಲಸಗಳು ಮಾಡುವಾಗ ಬರುವ ಪಾಪಪುಣ್ಯಗಳನ್ನು ಜ್ಞಾನಾಗ್ನಿ ಮೂಲಕ ಇಲ್ಲದಂತೆ ಮಾಡದೆ ಹೋದರೆ, ಎಂದರೆ ಯಜ್ಞ ಮಾಡದೆಹೋದರೆ, ಅವು ಕರ್ಮ ಬಂಧನಗಳಾಗಿ ಕುಳಿತುಕೊಳ್ಳುತ್ತವೆ.** ಆದ್ದರಿಂದ ನೀನು ಈಗಿನಿಂದ ಯಾವ ಕೆಲಸ ಮಾಡಿದರು ಅಹಂಕಾರ ರಹಿತನಾಗಿ, ಕರ್ಮಗಳು ಅಂಟದಂತೆ, ಪ್ರತಿ ಕರ್ಮವನ್ನು ಯಜ್ಞ ಮಾಡಬೇಕು" ಎಂದನು.

ಈ ವಿಧವಾಗಿ ಆ ಗುರುಗಳು ಯಜ್ಞದ ನಿಜವಾದ ರಹಸ್ಯ ಹೇಳಿ ಬಾಹ್ಯಯಜ್ಞಗಳು ನಿಜವಾದ ಯಜ್ಞಗಳು ಅಲ್ಲವೆಂದು, ಅವು ಕೇವಲ ಯಜ್ಞಕ್ಕೆ ಉದಾಹರಣೆ ಮಾತ್ರವೇ ಎಂದು, ಅಂತರಂಗದಲ್ಲಿ ಕರ್ಮ ನಾಶವೇ ನಿಜವಾದ ಯಜ್ಞವೆಂದು ಅರ್ಥವಾಗುವಂತೆ ಮಾಡಿದ್ದಾನೆ. ಅಂದಿನ ಭಾವಪೂರಿತ ದಹನವೆ, ಇಂದು ನಿಜವಾದ ಯಜ್ಞವಾಗಿ ತಿಳಿಯುತ್ತಿರುವುದು ಬಹಳ ತಪ್ಪೆಂದು ತಿಳಿಯುತ್ತಿದೆ. ಭಗವಂತನು ಶ್ಲೋಕದಲ್ಲಿ **'ಯಜ್ಞಾರ್ಥಾತ್ ಕರ್ಮಣೋನ್ಯತ್ರ ಲೋಕೋಯಂ ಕರ್ಮ ಬಂಧನಃ"** ಎಂದಿದ್ದಾನೆ ಯಜ್ಞವಲ್ಲದ ಕರ್ಮ ಲೋಕದಲ್ಲಿ ಬಂಧನವಾಗುತ್ತದೆಂದು ಅದರ ಅರ್ಥ. ಕೆಲಸದಲ್ಲಿ ಬರುವ ಕರ್ಮ ಯಜ್ಞ ಆಗಬೇಕೆಂದು ಯಾರು ಅಂದುಕೊಳ್ಳುತ್ತಿಲ್ಲ. ಯಜ್ಞ ಎಂದರೆ ನಾಶವೆಂದು ತಿಳಿಯದ ಪೀಠಾಧಿಪತಿಗಳು, ಹೆಸರು ವಾಸಿಯಾದ ಗುರುಗಳು ವಸ್ತುದಹನ ಕಾರ್ಯವೇ ಯಜ್ಞವಾಗಿ ಬೋಧಿಸುತ್ತಿದ್ದಾರೆ. ಕರ್ಮದಹನ ಕಾರ್ಯವನ್ನು ಕುರಿತು ಭಗವಂತನು ತಿಳಿಸಿದ್ದಾನೆಂದು ಗುರುಗಳು ಹೇಳಲಾರದೆ ಹೋಗಿರುವುದರಿಂದ, ದೇವತೆಗಳ ಮೆಚ್ಚುಗೆ ಪಡೆಯಬೇಕೆಂದುಕೊಂಡವರು, ಕೋರಿಕೆಗಳು ಇರುವ ಮೊದಲಾದವರೆಲ್ಲ ವಿಪರೀತವಾಗಿ ಹಣ ಖರ್ಚುಮಾಡಿ ಬಾಹ್ಯವಸ್ತು ಯಜ್ಞಗಳು ಮಾಡುತ್ತಿದ್ದಾರೆ. ಆದರೆ ಶರೀರದೊಳಗೆ ಕರ್ಮಯಜ್ಞ ಮಾಡಲಾರದೆ ಹೋಗುತ್ತಿದ್ದಾರೆ.

ಭಗವದ್ಗೀತೆಯಲ್ಲಿ ಭಗವಂತನು ಹೇಳಿದ ಯಜ್ಞವೊಂದರ ಭಾವ ಅರ್ಥವಾಗದಂತೆ ಮಾಡುವುದಕ್ಕೆ ಮಾಯೆ ಕೆಲವರಲ್ಲಿ ಸೇರಿಕೊಂಡು ಒಳಗಿನ ಯಜ್ಞಗಳನ್ನು ನಿರ್ವೀರ್ಯ ಮಾಡುವುದಕ್ಕೆ, ಬಾಹ್ಯ ಯಜ್ಞಗಳನ್ನು ಸಮರ್ಥಿಸುವುದಕ್ಕೆ, ನಾವು ಮಾಡುವ ಬಾಹ್ಯಯಜ್ಞಗಳು ತಪ್ಪು ಅಲ್ಲವೆಂದು ಎಂದಿಗಾದರು ವಾದಿಸುವುದಕ್ಕೆ ಅನುವಾಗಿ, ಭಗವದ್ಗೀತೆಯಲ್ಲಿಯೇ ಬಾಹ್ಯಯಜ್ಞಗಳನ್ನು ಕುರಿತು ಭಗವಂತನೇ ಹೇಳಿದಂತೆ ಶ್ಲೋಕಗಳನ್ನು ಎಣೆದು, ಯಜ್ಞ ಎಂಬ ಹೆಸರು ಕೇಳಿಸಿದರೂ ಈ ಶ್ಲೋಕದ ಕೆಳಗೆ ಅವುಗಳನ್ನು ಜೋಡಿಸಿದ್ದಾರೆ. ಹಾಗೆ ಜೋಡಿಸಿದ ಶ್ಲೋಕಗಳೆ ಈಗ ಕ್ರಮವಾಗಿ ಏಳು ಇವೆ. ಶಾಸ್ತ್ರರೀತ್ಯ ಇವು ಭಗವದ್ಗೀತೆಯಲ್ಲಿ ಭಗವಂತನು ಹೇಳದಿದ್ದರೂ, ಅವು ಶಾಸ್ತ್ರಬದ್ಧ ಅಲ್ಲದಿದ್ದರು, ಇಲ್ಲಿಯವರೆಗೂ ಅವು ಭಗವಂತನು ಹೇಳಿದ ಶ್ಲೋಕಗಳಾಗಿಯೇ ಗುರುಗಳೆಲ್ಲರೂ ಹೇಳುವುದರಿಂದಲೂ, ಪ್ರಜೆಗಳೆಲ್ಲರೂ ಅವುಗಳನ್ನು ನಂಬುವುದು ನಡೆದಿದೆ. ಭಗವಂತನು ಹೇಳಿರುವುದು ಕರ್ಮಯೋಗಕ್ಕೆ ಸಂಬಂಧಿಸಿದ ಯಜ್ಞವಾಗಿರುವಾಗ, ಕರ್ಮಗಳು ಸುಡುವುದಕ್ಕಾಗಿರುವಾಗ, ಮೋಕ್ಷ ಹೊಂದುವುದಕ್ಕಾಗಿರುವಾಗ, ಅದಕ್ಕೆ ವಿರುದ್ಧವಾಗಿ ವಸ್ತುಗಳನ್ನು ಸುಟ್ಟು ದೇವತೆಗಳಿಗೆ ಕೊಡುವುದು, ಅದಕ್ಕೆ ಬದುಲು ಅವರು ನಮಗೆ ಮಳೆ ಸುರಿಸುವುದು, ಒಬ್ಬರಿಗೊಬ್ಬರು ಸಹಾಯ ಮಾಡಿಕೊಳ್ಳುವುದೇನೆಂದು ಯಾರೂ ಪ್ರಶ್ನಿಸಿಕೊಳ್ಳದೇ ಹೋಗಿದ್ದಾರೆ.

ಗೀತೆಯಲ್ಲಿ ಪರಮಾತ್ಮನು ಯಾವ ದೇವತೆಗಳನ್ನು ಕುರಿತು ಹೇಳಲಿಲ್ಲ. ಅವರ ಪ್ರೀತಿಗೋಸ್ಕರ ಯಜ್ಞಗಳು ಮಾಡಿರೆಂದೂ ಸಹ ಹೇಳಲಿಲ್ಲ. **ದೇವತೆಗಳನ್ನು ಆರಾಧಿಸಿದರೆ ದೇವತೆಗಳೊಳಗೆ ಹೋಗುತ್ತೀಯಾ, ನನ್ನ ಹತ್ತಿರಕ್ಕೆ ಬರಲಾರೆ ಎಂದೂ ಸಹ ಅಲ್ಲಲ್ಲಿ ಎಚ್ಚರಿಸಿದ್ದಾನೆ. ನನ್ನನ್ನೇ ಆರಾಧಿಸಿದರೆ, ನನ್ನನ್ನೇ ಹೊಂದುತ್ತೀಯಾ ಎಂದು ಹಿತವನ್ನೂ ಸಹ ಹೇಳಿದ್ದಾನೆ.** ಇಲ್ಲಿ ಕ್ರಮವಾಗಿರುವ ಏಳು ಶ್ಲೋಕಗಳು ದೇವತೆಗಳಿಗೆ ಸಂಬಂಧಿಸಿರುವವು. ಆದ್ದರಿಂದ ದೇವರು ಹೇಳಲಿಲ್ಲವೆಂದು, ಯಾರೋ ಕಲ್ಪಿಸಿ ಅದರಲ್ಲಿ ಸೇರಿಸಿದ್ದಾರೆಂದು, ಯೋಚಿಸುವ ಪ್ರತಿಯೊಬ್ಬರಿಗೂ ಅರ್ಥವಾಗುತ್ತದೆ. ಭಗವಂತನು ಕರ್ಮಯೋಗದ ವಿವರವನ್ನು ಹೇಳುವ ಸಮಯದಲ್ಲಿ, ಯಜ್ಞವೆಂಬ ಮಾತು ಮೇಲಿನ ಶ್ಲೋಕದಲ್ಲಿ ಹೇಳಿದ ತಕ್ಷಣ, ಕೆಲವರು ಈಗ ಅವಕಾಶ ಸಿಕ್ಕಿದೆಯೆಂದು ಏಳು ಶ್ಲೋಕಗಳನ್ನು ಸೇರಿಸಿದ್ದಾರೆ. **"ಯಜ್ಞಾರ್ಥಾ"** ಎನ್ನುವ ಮೇಲಿನ ಶ್ಲೋಕ ಕರ್ಮಯೋಗಕ್ಕೆ ಸಂಬಂಧಿಸಿರುವುದಾಗಿದ್ದು, ತಕ್ಷಣ ಬ್ರಹ್ಮಯೋಗಕ್ಕೆ ಸಂಬಂಧಿಸಿದ **'ಯಸ್ತ್ವಾತ್ಮರತಿ'** ಎನ್ನುವ ಶ್ಲೋಕವನ್ನು ಹೇಳಿರುವಾಗ, ಇವುಗಳಿಗೆ ಮಧ್ಯದಲ್ಲಿರುವ **"ಯಜ್ಞಾರ್ಥ"** ಎನ್ನುವ ಕರ್ಮಯೋಗ ಶ್ಲೋಕಕ್ಕೂ, **'ಯಸ್ತ್ವಾತ್ಮರತಿ'** ಎನ್ನುವ ಬ್ರಹ್ಮಯೋಗ ಶ್ಲೋಕಕ್ಕೂ ಮಧ್ಯದಲ್ಲಿ ಯಾವ ಯೋಗ ಅಲ್ಲದಿರುವವು, ಯಾವ ಆತ್ಮಕ್ಕೂ ಸಂಬಂಧ ಇಲ್ಲದವು ಏಳು ಕಲ್ಪಿತ ಶ್ಲೋಕಗಳು ಸೇರಿಸಲಾಗಿದೆ. ಈ ಕೆಲಸ ಯಾವಾಗ ಯಾರು ಮಾಡಿದ್ದಾರೋ ಆಗಲಿ, ಇಲ್ಲಿಯವರೆಗೂ ಅವುಗಳನ್ನು ಗುರುತಿಸದೆ ಹೋಗುವುದು ದೊಡ್ಡ ತಪ್ಪೆಂದು ಹೇಳುತ್ತಿದ್ದೇವೆ. ಆ ಕಲ್ಪಿತ ಅಶಾಸ್ತ್ರೀಯ ಶ್ಲೋಕಗಳು ಕ್ರಮವಾಗಿ ಹೀಗಿವೆ.

**2) ಶ್ಲೋ 10 : ಸಹಯಜ್ಞಃ ಪ್ರಜಾಃಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।**
**ಅನೇನ ಪ್ರಸವಿಷ್ಯಧ್ವಮೇಷವೋಸ್ತ್ವಿಷಕಾಮಧುಕ್ ॥**

**(ಅಶಾಸ್ತ್ರಿಯ)**

**2) ಶ್ಲೋ 11 : ದೇವಾನ್ ಭಾವಯತಾನೇನ ತೇ ದೇವಾ ಭಾವಯಂತುವಃ ।**
**ಪರಸ್ಪರಂ ಭಾವಯಂತ ಶ್ರೇಯಃ ಪರಮಾವಪ್ಸ್ಯಥ ॥**

**(ಅಶಾಸ್ತ್ರೀಯ)**

**2) ಶ್ಲೋ 12 : ಇಷ್ಟಾನ್ ಭೋಗನ್ ಹಿಚೋದೇವಾ ದಾಸ್ಯಂತೇಯಜ್ಞಭಾವಿತಾಃ ।**
**ತೈರ್ದತ್ತಾನಪ್ರದಾಯೈಭ್ಯೋ ಯೋಭುಜ್ತ್ಕೇ ಸ್ತೇವ ಏವ ಸಃ ॥**

**(ಅಶಾಸ್ತ್ರೀಯ)**

**2) ಶ್ಲೋ 13 : ಯಜ್ಞಾಃಶಿಷ್ಟಾಶಿನಸ್ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।**
**ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ॥**
**(ಅಶಾಸ್ತ್ರೀಯ)**

**2) ಶ್ಲೋ ॥ 14 : ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನ ಸಂಭವಃ ।**
**ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥**
**(ಅಶಾಸ್ತ್ರೀಯ)**

**2) ಶ್ಲೋ ॥ 15 : ಕರ್ಮಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಂ ।**
**ತಸ್ಮಾ ತ್ವರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್ ॥**
**(ಅಶಾಸ್ತ್ರೀಯ)**

**2) ಶ್ಲೋ॥ 16 : ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ॥**
**ಅಘಾಯುರಿಂದ್ರಿಯಾರಾಮೋಘಂ ಪಾರ್ಥ! ಸಜೀವತಿ ॥**
**(ಅಶಾಸ್ತ್ರೀಯ)**

ಈ ಏಳು ಶ್ಲೋಕಗಳಲ್ಲಿ ಹೇಳಿದ ವಿಷಯ ಮೂರನೆ ಅಧ್ಯಾಯವಾದ ಜ್ಞಾನಯೋಗದಲ್ಲಿರುವ 33ನೇ ಶ್ಲೋಕದಲ್ಲಿ ಹೇಳಿರುವ ಭಾವಕ್ಕೂ, ಹಾಗೆ ಏಳನೇ ಅಧ್ಯಾಯವಾದ ಅಕ್ಷರ ಪರಬ್ರಹ್ಮ ಯೋಗದಲ್ಲಿರುವ 4ನೇ ಶ್ಲೋಕದಲ್ಲಿ ಹೇಳಿರುವ ಭಾವಕ್ಕೂ ಪೂರ್ತಿ ವಿರುದ್ಧವಾಗಿದೆ. ಇರುವವು ದ್ರವ್ಯ ಜ್ಞಾನಯಜ್ಞಗಳು ಎರಡೇ ಎಂದು, ಅದರಲ್ಲಿ ಜ್ಞಾನಯಜ್ಞ ಶ್ರೇಷ್ಠವಾದುದೆಂದು. ಅದು ಕರ್ಮವನ್ನು ಮಾತ್ರವೇ ಸುಡುತ್ತದೆಂದು ಹೇಳಲಾದ ಜ್ಞಾನಯೋಗದಲ್ಲಿನ 33ನೇ ಶ್ಲೋಕದ ಭಾವಕ್ಕೆ, ಹಾಗೆಯೇ ಅಕ್ಷರ ಪರಬ್ರಹ್ಮ ಯೋಗದಲ್ಲಿ 4ನೇ ಶ್ಲೋಕದಲ್ಲಿ ನಾನು ಆತ್ಮವಾಗಿದ್ದು ದೇಹದಲ್ಲಿ ನಡೆಯುವ ಎರಡು ವಿಧಗಳ ಯಜ್ಞಗಳಿಗೂ ಅಧಿಪತಿಯಾಗಿದ್ದೇನೆಂಬ ದೇವರ ಭಾವನೆಗೆ, ಮೇಲಿನ ಏಳು ಶ್ಲೋಕಗಳು ಪೂರ್ತಿ ವಿರುದ್ಧವಾಗಿವೆ. ಇಷ್ಟಕಾಮಗಳನ್ನು ತೀರಿಸಿಕೊಳ್ಳುವುದಕ್ಕೆ ಯಜ್ಞಗಳು ಮಾಡಿರೆಂದು ಏಳು ಶ್ಲೋಕಗಳಲ್ಲಿ ಹೇಳುವುದು, ಮಾನವನ ಕೋರಿಕೆಗಳನ್ನು ಬಲಪಡಿಸುವುದಲ್ಲದೆ, ಅವುಗಳಿಂದ ತಪ್ಪಿಸುವುದು ಎಷ್ಟು ಮಾತ್ರವಲ್ಲ. ದೇವತೆಗಳಿಗೆ ಯಜ್ಞಗಳು ಮಾಡುವುದರಿಂದ ಅವರು ನಿಮಗೆ ವೃದ್ಧಿಮಾಡುತ್ತಾರೆಂದು, ಹೀಗೆ ಒಬ್ಬರಿಗೊಬ್ಬರು ಅಭಿವೃದ್ಧಿ ಮಾಡಿಕೊಳ್ಳಿರೆಂದು ಮೇಲೆ 11ನೇ ಶ್ಲೋಕದಲ್ಲಿ ಹೇಳಿರುವುದು, ದೇವತೆಗಳು ಮನುಷ್ಯರು ಒಬ್ಬರಿಗೊಬ್ಬರು ವಸ್ತು ಬದಲಾವಣೆ ವ್ಯಾಪಾರ ಮಾಡಿಕೊಳ್ಳಿರೆಂದು ಹೇಳಿದಂತಿದೆ. ಅಷ್ಟೇ ಅಲ್ಲದೆ 12ನೇ ಶ್ಲೋಕದಲ್ಲಿ ಯಜ್ಞ ಪೂಜೆಗಳು ಸ್ವೀಕರಿಸಿದ ದೇವತೆಗಳು

ನಿಮಗೆ ಸರ್ವಭೋಗಗಳು ಕೊಡುತ್ತಿರುತ್ತಾರೆ. ಅವರ ಸ್ವತ್ತು ಮತ್ತೆ ಯಜ್ಞವನ್ನು ಮಾಡಿ ಅವರಿಗೆ ಕೊಡದೆಹೋದರೆ, ಬೆಳೆದ ಬೆಳೆಗಳು ನೀವೇ ತಿಂದರೆ, ಕಳ್ಳತನ ಮಾಡಿದಂತೆ ಎಂದು ಹೇಳುವುದು ಮತ್ತಷ್ಟು ವಿಚಿತ್ರವಾಗಿದೆ. ಇದು ಹೇಗಿದೆ ಎಂದರೆ! ನಾನು ಅವನ ಮದುವೆಯಲ್ಲಿ ಉಡುಗೊರೆ ಕೊಟ್ಟಿದ್ದೇನೆ, ಅವನು ನನ್ನ ಮದುವೆಗೆ ಉಡುಗೊರೆ ತಿರುಗಿಸಿ ಕೊಡಲಿಲ್ಲ ಎನ್ನುವಂತಿದೆ. ಭಗವಾನನು ಧರ್ಮಸಂಸ್ಥಾಪನೆಗೆ ಬಂದು ತನ್ನ ಧರ್ಮಗಳನ್ನು ತಿಳಿಸುತ್ತಿರುವಾಗ, ತನ್ನ ಮಾತುಗಳಿಗೆ ವಿರುದ್ಧವಾದ ಇಂತಹ ಬೆಲೆ ಇಲ್ಲದ ಮಾತುಗಳು ಹೇಳುತ್ತಾನಾ! ಈ ಏಳು ಶ್ಲೋಕಗಳಲ್ಲಿ ಬದುಕು ಬಾಳ್ವೆಗೆ ಸಂಬಂಧಿಸಿದ ಪ್ರಪಂಚ ಧರ್ಮವೇ ಹೊರತು, ಮೋಕ್ಷಕ್ಕೆ ಕೆಲಸ ಬರುವಂತಹ ಪರಮಾತ್ಮ ಧರ್ಮಗಳು ಎಷ್ಟು ಮಾತ್ರವೂ ಇಲ್ಲವೆಂದು ಓದುವವರು ಗ್ರಹಿಸಬೇಕೆಂದು ಕೋರುತ್ತಿದ್ದೇವೆ.

ಇಲ್ಲಿ ಬಹಳ ಜನರಿಗೆ ಯಜ್ಞಗಳ ಮೇಲೆ ತಮಗಿರುವ ಭಾವಕ್ಕೂ, ಈಗ ಇಲ್ಲಿ ನಾವು ಹೇಳುವ ಭಾವಕ್ಕೂ ವ್ಯತ್ಯಾಸ ಏರ್ಪಟ್ಟು, ನಮ್ಮ ಮಾತುಗಳು ಸ್ವಲ್ಪ ಬಾಧೆ ಉಂಟುಮಾಡುವವೇ ಆದರೂ, ನಾವು ಹೇಳುವುದು ಸತ್ಯವಾದ್ದರಿಂದ ಹೇಳುವುದು ತಪ್ಪಲಿಲ್ಲ. ಅಂತಹವರು ಯಾರಾದರೂ ಇದ್ದರೆ ಸ್ವಲ್ಪ ವಿವರಣಾತ್ಮಕ ಯೋಚನೆ ಮಾಡಬೇಕೆಂದು ಕೋರುತ್ತಿದ್ದೇವೆ. ಇದರಲ್ಲಿ ದೊಡ್ಡ ದೊಡ್ಡ ಗುರುಗಳೇ ತಪ್ಪಾಗಿ ತಿಳಿದು, ಅದೇ ಕೆಲಸವಾಗಿ ಅದೇ ಮುಖ್ಯವಾದ ಆರಾಧನೆ ಎಂದು ತಿಳಿದು, ಅಗ್ನಿಕುಂಡಗಳು ಮಾಡಿ ಸುಟ್ಟು ಖರ್ಚುಮಾಡುತ್ತಿದ್ದರೆ, ಉಳಿದವರೂ ಸಹ ಹಿರಿಯರ ದಾರಿಯಲ್ಲಿ ನಡೆಯಬೇಕೆಂದುಕೊಂಡಿದ್ದಾರೆ ಹೊರತು ನಾವು ಮಾಡುತ್ತಿರುವುದು ಏನೆಂದು ಯೋಚಿಸುತ್ತಿಲ್ಲ. ಬಾಹ್ಯವಾಗಿ ಮಾಡುವ ಯಜ್ಞಗಳಲ್ಲಿಯೂ ಸಹ ಇರುವ ವಸ್ತುಗಳನ್ನು ಇಲ್ಲದಂತೆ ಮಾಡುವುದು ಪ್ರತ್ಯಕ್ಷವಾಗಿ ಕಾಣಿಸುತ್ತಿದೆ ಅಲ್ಲವೆ! ಆಗ ಅದು ನಾಶವೆಂದು ಏಕೆ ಅರ್ಥವಾಗಲಿಲ್ಲ? ನೀರಿನಲ್ಲಿ ಈಜಿ ಹೊರಬೀಳಬಹುದು, ಗಾಳಿಯಲ್ಲಿ ತೇಲಿಹೋಗಬಹುದು, ಭೂಮಿ ಆಳದಲ್ಲಿಯೂ ಸಹ ಬದುಕಬಹುದು, ಆದರೆ ಅಗ್ನಿಯಲ್ಲಿ ಸರ್ವರು ನಾಶವಾಗದೆ ತಪ್ಪುವುದಿಲ್ಲ. ಒಂದು ಅರಣ್ಯಕ್ಕೆ ಬೆಂಕಿ ಬಿದ್ದರೆ ಅದರಲ್ಲಿನ ಯಾವ ಜೀವರಾಶಿಯಾದರು ಮರಣಿಸದೆ ತಪ್ಪುವುದಿಲ್ಲ. ಆ ಅಗ್ನಿಯಿಂದ ಮಾಡುವ ಯಜ್ಞವು ನಾಶವೆಂದು ಅರ್ಥತಿಳಿಸುತ್ತಾ, ಜ್ಞಾನಾಗ್ನಿಯಿಂದ ಕರ್ಮವನ್ನು ಸುಟ್ಟುಕೊಳ್ಳಿರಿ ಎಂದು, ಮೋಕ್ಷ ಹೊಂದಿರೆಂದು, ಸಂದೇಶಕೊಡುವ **ಅಗ್ನಿಕುಂಡವನ್ನು ಯಜ್ಞದ ನಮೂನೆಯೆಂದು** ತಿಳಿಯದೆ ಯಜ್ಞವೇ ಎಂದುಕೊಳ್ಳುವುದು ಬಹಳ ದೊಡ್ಡ ತಪ್ಪು. ಅಗ್ನಿಕುಂಡಗಳು ಮಾಡಿಸಿ ಅವುಗಳನ್ನು ಯಜ್ಞಗಳೆಂದು ಕೆಲವರಂದುಕೊಂಡರೆ, ಗೀತೆಯನ್ನು

ಬೋಧಿಸುವ ಬೋಧಕರು ಆ ಬೋಧನೆಗೆ **"ಗೀತಾಯಜ್ಞ"** ಎಂದು ಹೆಸರು ಇಡುವುದು ಇನ್ನೂ ತಪ್ಪು. ಉದಾಹರಣೆಗೆ 72ನೇ ಗೀತಾಯಜ್ಞ, 73ನೇ ಗೀತಾಯಜ್ಞ ಎಂದು ಕ್ರಮವಾಗಿ ಹೆಸರಿಟ್ಟು ಹೇಳುವುದು ನಡೆಯುತ್ತಿದೆ. ನಿಜಾರ್ಥದ ಪ್ರಕಾರ, ಪರಮಾತ್ಮ ಗೀತೆಯಲ್ಲಿ ತಿಳಿಸಿರುವ ಉದ್ದೇಶದ ಪ್ರಕಾರ ಗೀತೆಯನ್ನು 72ಸಲ ಸುಡುತ್ತಿದ್ದೇವೆ, 73ನೇ ಸಲ ಸುಡುತ್ತಿದ್ದೇವೆಂದು ಅರ್ಥ. ಎಂದರೆ ಗೀತೆಯನ್ನು ಉದ್ಧರಿಸಬೇಕೆಂದು ಬೋಧಿಸುವುದು ಒಳ್ಳೆಯದೆ, ಆದರೆ ಎಷ್ಟುಸಲ ಬೋಧಿಸಿರುವುದು ಬೋಧಿಸುವ ಸಂಖ್ಯೆ ಇಟ್ಟು ಅದರ ಪಕ್ಕದಲ್ಲಿ ಯಜ್ಞವೆಂದು ಹೆಸರಿಡುವುದು ಸರಿಯಿಲ್ಲವೆಂದು. ಹೇಳಿದ್ದೇನಲ್ಲ ಅದರ ನಿಜವಾದ ಅರ್ಥದ ಪ್ರಕಾರ ಯಜ್ಞ ಎಂದರೆ ಇರುವುದನ್ನು ಇಲ್ಲದಂತೆ ಮಾಡುವುದೆ ಎಂದು. ಅದರ ಪ್ರಕಾರ ಗೀತೆಯನ್ನು ಇಲ್ಲದಂತೆ ಮಾಡಿದಂತಾಗುತ್ತದೆ.

ಜ್ಞಾನಯೋಗವಾದ ಮೂರನೇ ಅಧ್ಯಾಯದಲ್ಲಿ ಯಜ್ಞಗಳು ಎರಡು ವಿಧಗಳೆಂದು ಭಗವಂತನು ಹೇಳಿದಾಗಲೂ ಸಹ ಯಜ್ಞಗಳನ್ನು ಕುರಿತು ಕಲ್ಪಿತ ಶ್ಲೋಕಗಳನ್ನು ಜೋಡಿಸಡಿಸಲಾಗಿದೆ. ವಿಶೇಷ ಏನೆಂದರೆ ಅಲ್ಲಿ ಕೇವಲ ಅಗ್ನಿಯಿಂದ ಮಾಡುವವು ಹೇಳದೆ, ಭಜನೆಗಳು ಮೊದಲುಗೊಂಡು ತಪಸ್ಸುಗಳವರೆಗೂ ಯಜ್ಞಗಳೆಂದು ಹೇಳುವುದು ನಡೆದಿದೆ. ಇನ್ನೂ ಇಲ್ಲಿ ಯಜ್ಞ ಎಂಬ ಹೆಸರು ಬಂದ ನಂತರ ಕಲ್ಪಿಸಿ ಹೇಳಿದಾಗ, ಅಲ್ಲಿ ಯಜ್ಞವೆಂಬ ಶ್ಲೋಕಕ್ಕೆ ಮೊದಲೆ ಕಲ್ಪಿಸಿಹೇಳಿದ್ದಾರೆ. ಹೀಗೆ ಮನುಷ್ಯರು ಕಲ್ಪಿಸಿದ ಈ ಕಲ್ಪಿತ ಯಜ್ಞಗಳನ್ನು ಬಿಟ್ಟು ಭಗವಂತನು ಹೇಳಿದ **'ಯಜ್ಞಾರ್ಥಾ'** ಎನ್ನುವ ಶ್ಲೋಕವನ್ನು ನಂತರ ಇರುವ ಅನುಬಂಧ ಶ್ಲೋಕವನ್ನು ನೋಡೋಣ.

**2) ಶ್ಲೋ॥ 17 : ಯಸ್ತ್ವಾತ್ಮರತಿರೇವ ಸ್ಯಾದಾತ್ಮ ತೃಪ್ತಶ್ಚ ಮಾನವಃ ।**
**ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥**

**(ಬ್ರಹ್ಮಯೋಗ)**

**ಭಾವಾರ್ಥ** : ಆತ್ಮನಲ್ಲೇ ಲಗ್ನವಾಗುತ್ತಾ, ಆತ್ಮದೊಂದಿಗೆ ತೃಪ್ತಿಹೊಂದಿ, ಆತ್ಮದೊಂದಿಗೆ ಸಂತೋಷ ಹೊಂದುವವನಿಗೆ ಯಾವ ಕಾರ್ಯ ಇಲ್ಲ.

**ವಿವರ** : ಕೆಲಸಗಳು ಮಾಡುತ್ತಾ ಯಜ್ಞ ಸಂಬಂಧವಾಗಿ ಕಾರ್ಯಗಳು ಮಾಡಿದರೂ ಕರ್ಮಗಳು ಅಂಟುವುದಿಲ್ಲವೆಂದು, ಇಲ್ಲದ ಪಕ್ಷದಲ್ಲಿ ಕರ್ಮಬಂಧನಗಳು ಏರ್ಪಡುತ್ತವೆಂದು ತಿಳಿದುಕೊಂಡಿದ್ದೇವೆ. ಅದನ್ನೇ ಕರ್ಮಯೋಗವೆಂದು ಕರೆಯುತ್ತಿದ್ದೇವೆ. ಇರುವ ಎರಡು ಯೋಗಗಳಲ್ಲಿ ಎರಡನೆಯದು ಬ್ರಹ್ಮಯೋಗ. ಬ್ರಹ್ಮಯೋಗದಲ್ಲಿ ಮಾನವನು ಯಾವ

ಕೆಲಸ ಮಾಡದಂತೆ ಆತ್ಮದಲ್ಲಿ ಲಗ್ನವಾಗಿರುತ್ತಾನೆ. ಅಂತಹ ಬ್ರಹ್ಮಯೋಗಿ ಆತ್ಮದಲ್ಲಿ ಲಗ್ನವಾಗಿದ್ದು ಅದರಲ್ಲಿಯೇ ತೃಪ್ತಿ, ಅದರಲ್ಲಿಯೇ ಸಂತೋಷ ಹೊಂದುತ್ತಿರುತ್ತಾನೆ. ಆದ್ದರಿಂದ ಅಂತಹವನಿಗೆ ಹೊರಗಿನ ಕೆಲಸಗಳೊಂದಿಗೆ ಸಂಬಂಧವಿಲ್ಲ. ಆತ್ಮವನ್ನು ಹೊಂದಿದ ಬ್ರಹ್ಮಯೋಗಿಗೆ ಹೊರಗಿನ ಪ್ರಪಂಚ ಕಾರ್ಯಗಳೊಂದಿಗೆ ಕೆಲಸವಿಲ್ಲ.

ಈ ಬ್ರಹ್ಮಯೋಗ ವಿವಾಹಿತರಿಗೆ ಮತ್ತು ಕೆಲವರ ಜೀವನಕ್ಕೆ ಆಧಾರವಾಗಿರುವವನಿಗೆ ಸಲ್ಲದು. ಏಕೆಂದರೆ ಆತನು ಇತರರಿಗೋಸ್ಕರ ಕೆಲಸ ಮಾಡಬೇಕಾಗಿದೆ. ಯಾವ ಕೆಲಸವಿಲ್ಲದವನಿಗೆ ಬ್ರಹ್ಮಯೋಗ ಅನುಕೂಲವಾಗಿದೆ. ಹಾಗಲ್ಲದೆ ಕೆಲಸ ಮಾಡಬೇಕಾಗಿರುವವನಿಗೆ ಕರ್ಮಯೋಗ ವಿನಃ ಬೇರೆ ದಾರಿಯಿಲ್ಲ.

**(2) ಶ್ಲೋ॥ 18 : ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹಕಶ್ಚನ ।**
**ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥ ವ್ಯಪಾಶ್ರಯಃ॥**

**(ಬ್ರಹ್ಮಯೋಗ)**

**ಭಾವಾರ್ಥ**: ಅಂತವನು ಕೆಲಸ ಮಾಡದಿರುವುದರಿಂದ ಲಾಭವೂ ಇಲ್ಲ. ಮತ್ತು ನಷ್ಟವೂ ಇಲ್ಲ. ಆತನು ಯಾವ ಪ್ರಯೋಜನೆಗಾದರೂ ಯಾರನ್ನು ಆಶ್ರಯಿಸಬೇಕಾದ ಕೆಲಸವಿಲ್ಲ.

**ವಿವರ** : ಬ್ರಹ್ಮಯೋಗಿ ಯಾವ ಕೆಲಸ ಮಾಡದವನಾಗಿ ಆತ್ಮದಲ್ಲೇ ಲಗ್ನವಾಗಿರುವುದರಿಂದ ಅವನಿಗೆ ಲಾಭನಷ್ಟ ವ್ಯತ್ಯಾಸ ಇಲ್ಲ. ಬಾಹ್ಯ ಸ್ಪರ್ಶವಿಲ್ಲದ ಆತನಿಗೆ ಬೇಕಾಗಿರುವುದು ಏನು ಇಲ್ಲ. ಆತನು ಯಾವ ಪ್ರಯೋಜನೆಗಳಿಗೋಸ್ಕರ ಯಾರನ್ನುಆಶ್ರಯಿಸಬೇಕಾಗಿರುವುದು ಇಲ್ಲ. ಬ್ರಹ್ಮಯೋಗದಲ್ಲಿ ಒಳಗಿನ ಆತ್ಮ ಹೊರತು ಹೊರಗಿನ ಪ್ರಪಂಚ ತಿಳಿಯುವುದಿಲ್ಲ. ಆದ್ದರಿಂದ ಅಂತಹವನಿಗೆ ಹೊರಗಿನ ಪ್ರಪಂಚದ ಲಾಭನಷ್ಟಗಳಾಗಲಿ, ವ್ಯರ್ಥ ಪ್ರಯೋಜನೆಗಳಾಗಲಿ, ಸುಖ ದುಃಖಗಳಾಗಲಿ, ಪ್ರೇಮ, ಅಸೂಯಗಳಾಗಲಿ ಇಲ್ಲವೆಂದು ತಿಳಿಯಬೇಕು. ಕರ್ಮಯೋಗಿಯ ವಿಧಾನ ಬ್ರಹ್ಮಯೋಗಿಯ ವಿಧಾನ ಬಹಳ ಬೇರೆಯಾಗಿವೆ. ಆದ್ದರಿಂದ ಕರ್ಮಯೋಗವನ್ನು ಮಾಡುವವರು ಕೆಲಸಗಳು ಮಾಡಬೇಕು. ಆ ಕೆಲಸಗಳು ಕರ್ಮಸಂಗ ವಿನಿರ್ಮುಕ್ತವಾಗಿರಬೇಕೆಂದು ಕೆಳಗಿನ ಶ್ಲೋಕದಲ್ಲಿ ಹೇಳುತ್ತಿದ್ದಾನೆ ನೋಡಿರಿ.

**(2) ಶ್ಲೋ॥ 19 : ತಸ್ಮಾದಸಕ್ತ ಸ್ಸತತಂ ಕಾರ್ಯಂ ಕರ್ಮ ಸಮಾಚರ ।**
**ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ ॥**

**(ಕರ್ಮಯೋಗಿ)**

**ಭಾವಾರ್ಥ :** ಆದ್ದರಿಂದ ಮಾಡುತ್ತಿರುವ ಕಾರ್ಯದ ಫಲಿತಾಂಶದ ಮೇಲೆ ಆಸಕ್ತಿಯಿಲ್ಲದವನಾಗಿ, ಕರ್ಮ ಪ್ರಕಾರ ಕಾರ್ಯಗಳು ಮಾಡು. ಹಾಗೆ ಮಾಡುವುದರಿಂದ ಪರಮವನ್ನು ಹೊಂದಬಹುದು.

**ವಿವರ:** ನೀನು ಹೊರಗಿನ ಪ್ರಪಂಚ ಸಂಬಂಧವನ್ನು ಹೆಚ್ಚಾಗಿ ಹೊಂದಿದ್ದೀಯಾ. ಆದ್ದರಿಂದ ಈ ಕಾರ್ಯವನ್ನು ನಾನು ಮಾಡುತ್ತಿದ್ದೇನೆಂದು, ನಾನು ಮಾಡುವುದರಿಂದ ಈ ಕಾರ್ಯ ನಡೆಯುತ್ತಿದೆ ಎಂದು, ಈ ಕಾರ್ಯನಡೆಯುವುದರಿಂದ ಈ ಫಲಿತವು ಬರುತ್ತಿದೆ ಎಂದು, ಅಥವಾ ಈ ಕಾರ್ಯದ ಪರ್ಯವಸಾನ ಇಂತಹದೆಂದು ಅದರ ಮೇಲೆ ಧ್ಯಾಸವಿಡದೆ ಮಾಡು. ಉದಾಹರಣೆಗೆ ಒಂದು ಹೊಲದಲ್ಲಿ ಹತ್ತಿಯ ಪೈರಿಗೆ ಹುಳದ ಔಷಧಿ(ಕೀಟನಾಶಕ) ಸಿಂಪಡಿಸುತ್ತಿದ್ದೇವೆಂದುಕೊಳ್ಳಿ. ಆಗ ಔಷಧಿ ಸಿಂಪಡಿಸುವುದು ನನ್ನ ಕೆಲಸವೆಂದುಕೊಂಡು ಮಾಡುವುದರಲ್ಲಿ ತಪ್ಪಿಲ್ಲ. ಆದರೆ ಔಷಧಿ ಸಿಂಪಡಿಸಿ ಎಷ್ಟೋ ಸಾವಿರ ಹುಳಗಳನ್ನು ಸಾಯಿಸುತ್ತಿದ್ದೇನೆಂದುಕೊಳ್ಳಬಾರದು. ನೀನು ಔಷಧಿ ಸಿಂಪಡಿಸಿರುವುದರಿಂದ ಹುಳಗಳು ಸತ್ತುಹೋಗುವುದು ನಿಜವೇ ಆದರೆ ಅದನ್ನು ನೀನು ಯೋಚಿಸಬಾರದು. ಔಷಧಿ ಸಿಂಪಡಿಸುವುದು ಕಾರ್ಯ, ಹುಳಗಳು ಸತ್ತುಹೋಗುವುದು ಕಾರ್ಯವೊಂದರ ಫಲಿತ, ಕಾರ್ಯದ ಮೇಲೆ ಲಗ್ನವಾದರೂ ಪರವಾಗಿಲ್ಲ. ಆದರೆ ಕಾರ್ಯಫಲಿತದ ಮೇಲೆ ಲಗ್ನ ಆಗಬಾರದು. ಒಂದು ವೇಳೆ ಕಾರ್ಯ ಫಲಿತಕ್ಕೆ ನಾನೇ ಕಾರಣವೆಂದು ತಿಳಿದಪಕ್ಷದಲ್ಲಿ, ಆ ಹುಳಗಳನ್ನು ಸಾಯಿಸಿದ ಪಾಪ ತಪ್ಪದೆ ಅಂಟಿಕೊಳ್ಳುತ್ತದೆ. ಅದನ್ನು ನಂತರ ಜನ್ಮವೆತ್ತಿ ಅನುಭವಿಸಬೇಕಾಗಿರುತ್ತದೆ. ಕಾರ್ಯ ಮಾಡುವುದಕ್ಕೆ ಮಾತ್ರವೆ ನಾನು ನಿಯಮಿತನೆಂದು ತಿಳಿದು ಫಲಿತದ ಮೇಲೆ 'ನಾನು' ಎನ್ನುವ ಅಹಂಕಾರ ಭಾವವನ್ನು ಇಟ್ಟುಕೊಳ್ಳದೆ ಮಾಡಿದ ಕಾರ್ಯಗಳಲ್ಲಿ ಕರ್ಮ ಅಂಟುವುದಿಲ್ಲ. ಹಾಗೆ ಮಾಡುವವನು ಪರಮಾತ್ಮ ಪ್ರಾಪ್ತಿ ಹೊಂದುತ್ತಾನೆ.

ಇದು ನಿಜನಾ ಎಂದು ಅನುಮಾನ ಪಡಬೇಕಾದ ಕೆಲಸವಿಲ್ಲ. **ಕಾರ್ಯಗಳು ಮಾಡಿದರೂ ಕರ್ಮ ಅಂಟದೆ ಹೋಗುವುದನ್ನು ಕರ್ಮಯೋಗವೆನ್ನುತ್ತೇವೆ.** ಇದು ಈಗ ಹೊಸ ಮಾತು ಅಲ್ಲ. ಪೂರ್ವದಲ್ಲಿಯೂ ಸಹ ಎಷ್ಟೋಜನ ಈ ಪದ್ಧತಿಯ ಮೂಲಕ ದೈವಪ್ರಾಪ್ತಿ ಹೊಂದಿದ್ದಾರೆ. ಮುಖ್ಯವಾಗಿ ಸಂಸಾರದಲ್ಲಿದ್ದು, ಹೊರಗಿನ ಸಂಬಂಧವಿದ್ದು ಕೆಲಸಗಳು ಮಾಡುವವರು ತಪ್ಪದೆ ಆಚರಿಸಿಬೇಕಾದ ಪದ್ಧತಿ ಇದು. ಇದನ್ನು ಕುರಿತು ಭಗವಂತನು ಕೆಳಗಿನ ಶ್ಲೋಕದಲ್ಲಿ ಏನು ಹೇಳುತ್ತಿದ್ದಾನೋ ನೋಡಿರಿ.

**(2) ಶ್ಲೋ॥ 20 : ಕರ್ಮಣ್ಯೈವ ಹಿಸಂಸಿದ್ಧಿ ಮಾಸ್ಥಿತಾ ಜನಕಾದಯಃ ।**
**ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತು ಮರ್ಹಸಿ ॥**
**(ಕರ್ಮಯೋಗ )**

**ಭಾವಾರ್ಥ:** ಕರ್ಮಯೋಗವಾಚರಿಸಿ ಜನಕನು ಮೊದಲಾದವರು ಮೋಕ್ಷ ಹೊಂದಿದ್ದಾರೆ. ಲೋಕಸ್ತರು (ಮನುಷ್ಯರು) ತಿಳಿದುಕೊಳ್ಳುವುದಕ್ಕಾದರೂ ನೀನು ಈ ಪದ್ಧತಿಯನ್ನು ಆಚರಿಸು.

**ವಿವರ :** ಜನಕನು ಒಬ್ಬ ರಾಜನಾಗಿದ್ದು, ತನ್ನ ರಾಜ್ಯದಲ್ಲಿನ ಅನೇಕ ಸಮಸ್ಯೆಗಳಿಂದ ಅನೇಕ ಕೆಲಸಗಳಿಂದ ಆತನು ಸಂಬಂಧಪಟ್ಟಿದ್ದರು, ಕರ್ಮಯೋಗ ಪದ್ಧತಿ ಆಚರಿಸುವುದರಿಂದ ಮೋಕ್ಷ ಹೊಂದಿದ್ದಾನೆ. ಆದ್ದರಿಂದ ಕರ್ಮಯೋಗದ ಮೂಲಕ ಮೋಕ್ಷ ಹೊಂದಬಹುದೆಂದು ಇತರರು ತಿಳಿದುಕೊಳ್ಳುವಂತೆ, ನೀನು ಎಲ್ಲಾ ಕಾರ್ಯಗಳು ಮಾಡುತ್ತಾ ಕರ್ಮಯೋಗವನ್ನಾಚರಿಸು.

**(2) ಶ್ಲೋ॥ 21 : ಯದ್ಯದಾಚರತಿ ಶ್ರೇಷ್ಠ ಸ್ತತ್ತದೇವೇತರೋ ಜನಃ ।**
**ಸಯತ್ಪ್ರಮಾಣಂ ಕುರುತೇ ಲೋಕಸ್ತ ದನುವರ್ತತೇ ॥**
**(ಕರ್ಮಯೋಗ)**

**ಭಾವಾರ್ಥ:** ಶ್ರೇಷ್ಠನು ಯಾವುದನ್ನು ಆಚರಿಸುತ್ತಾನೋ ಅದನ್ನೇ ಇತರರು ಆಚರಿಸುತ್ತಾರೆ. ಆತನು ಯಾವ ಪ್ರಮಾಣವನ್ನು ತೋರಿಸುತ್ತಾನೋ ಅದನ್ನೇ ಇತರರು ಅನುಸರಿಸುತ್ತಾರೆ.

**ವಿವರ :** ಇಲ್ಲಿ ಶ್ರೇಷ್ಠರು ಎನ್ನುವ ಪದ ಬಂದಿದೆ. ಈಗಿನ ಕಾಲದಲ್ಲಿ ಮನುಷ್ಯರಲ್ಲಿ ಶ್ರೇಷ್ಠರು ಯಾರಾಗಿರುವುದು ತಿಳಿಯದಂತಾಗಿದೆ. ಪೂರ್ವ ಕಾಲದಲ್ಲಿ ಶ್ರೇಷ್ಠರನ್ನು ಗುರುತಿಸಿ ಅವರ ಪ್ರಕಾರ ಇತರರು ನಡೆದುಕೊಳ್ಳುತ್ತಿದ್ದರೆಂದು ಮೇಲಿನ ಶ್ಲೋಕದಲ್ಲಿ ಅರ್ಥವಾಗುತ್ತಿದೆ. ಜಗತ್ತಿನಲ್ಲಿ ಎಲ್ಲದಕ್ಕಿಂತ ಶ್ರೇಷ್ಠವಾದುದು ಒಂದೇ ಒಂದು ದೈವಜ್ಞಾನ. ದೈವಜ್ಞಾನಕ್ಕೆ ಸಮಾನವಾದುದಾಗಲಿ, ಅದಕ್ಕಿಂತ ಪವಿತ್ರವಾದುದಾಗಲಿ ಇಲ್ಲವೆಂದು ಪೂರ್ವವು ಹೇಳುತ್ತಿದ್ದರು. ಶ್ರೇಷ್ಠವಾದ ಜ್ಞಾನವನ್ನು ಯಾರು ತಿಳಿದುಕೊಂಡಿದ್ದರೂ ಅಂತಹವನನ್ನು ಶ್ರೇಷ್ಠ ಎನ್ನುತ್ತಿದ್ದರು. ಅಷ್ಟೇ ಅಲ್ಲದೆ ದೈವಜ್ಞಾನ ರಹಸ್ಯಗಳಿಗೆಲ್ಲಾ ರಹಸ್ಯವಾದುದು, ಆದ್ದರಿಂದ ಅಂತಹ ಗುಪ್ತವಾದ (ರಹಸ್ಯವಾದ) ಜ್ಞಾನ ತಿಳಿದವನನ್ನು ಗುಪ್ತ ಎನ್ನುತ್ತಿದ್ದರು. ಇವನು ದೈವಜ್ಞಾನ ತಿಳಿದವನೆಂದು ಇತರರಿಗೆ ತಿಳಿಯುವಂತೆ ಆಗಿನ ಕಾಲದಲ್ಲಿ ಗುರುಗಳು ಅವನ ಹೆಸರಿನ ಕೊನೆಯಲ್ಲಿ ಶ್ರೇಷ್ಠ ಎಂದೂ, ಇಲ್ಲದಿದ್ದರೆ ಗುಪ್ತ ಎಂದೂ ಗುರುತಿಸುವ

ಪದವನ್ನು ಇಡುತ್ತಿದ್ದರು. ಇದು ದ್ವಾಪರಯುಗದಲ್ಲಿನ ಮಾತು. ಕಲಿಯುಗದೊಳಗೆ ಬರುವಷ್ಟರಲ್ಲಿ ಕಾಲಕ್ರಮೇಣ ಶ್ರೇಷ್ಠ, ಗುಪ್ತ ಎನ್ನುವ ಪದಗಳು ಒಂದು ಕುಲದ ಕೊನೆಗೆ ಬಂದಿವೆ. ಕೇವಲ ಒಂದು ವೈಶ್ಯ ಕುಲದಲ್ಲಿಯೇ ಈ ಪದಗಳು ಹೆಸರಿನ ಕೊನೆಯಲ್ಲಿ ಇವೆ. ಗುಪ್ತ ಎನ್ನುವ ಪದ ಈಗಲೂ ಬದಲಾಗದಿದ್ದರೂ ಶ್ರೇಷ್ಠ ಎನ್ನುವ ಪದ ಸ್ವಲ್ಪ ಬದಲಾಗಿ ಶ್ರೇಷ್ಠಿ ಎಂದು ರೂಪಾಂತರ ಹೊಂದಿದೆ. ನೂರು ವರ್ಷಗಳ ಕೆಳಗೆ ಗುಪ್ತ, ಶ್ರೇಷ್ಠ ಎನ್ನುವ ಪದಗಳು ವೈಶ್ಯರ ಹೆಸರಿನ ಕೊನೆಯಲ್ಲಿ ಕಾಣಿಸುತ್ತಿದ್ದವು. ಪ್ರಸ್ತುತಕಾಲದಲ್ಲಿ ಶ್ರೇಷ್ಠಿ ಎನ್ನುವ ಪದ ಮತ್ತೆ ಸ್ವಲ್ಪ ಬದಲಾಗಿ "ಶೆಟ್ಟಿ" ಆಗಿದೆ. ಗುಪ್ತ, ಶ್ರೇಷ್ಠಿ ಎನ್ನುವ ಪದಗಳು ಕಲಿಯುಗದ ಮೊದಲ ಕಾಲದಲ್ಲಿಯೇ ವೈಶ್ಯಕುಲದಲ್ಲಿ ಸೇರಿಹೋದಂತೆ ಅರ್ಥವಾಗುತ್ತಿವೆ.

ಬ್ರಾಹ್ಮಣರು ಎಂದರೆ ಬ್ರಹ್ಮಜ್ಞಾನ ಇರುವವರೆಂದು, ವೈಶ್ಯರು ಎಂದರೆ ಯಜ್ಞಗಳು ಮಾಡುವವರೆಂದು ಪೂರ್ವದಲ್ಲಿ ಅರ್ಥವಿತ್ತು. ಪ್ರಸ್ತುತ ಕಾಲದಲ್ಲಿ ಆ ಅರ್ಥಗಳು ಬದಲಾಗಿವೆ. ವೈಶ್ಯರು ಎಂದರೆ ವ್ಯಾಪಾರ ಮಾಡುವವರೆಂಬ ಭಾವ ಬಂದಿದೆ. ಕೇವಲ ಕುಲವನ್ನು ನಿರ್ಣಯಿಸುವವಾಗಿ ಬ್ರಾಹ್ಮಣ, ವೈಶ್ಯ ಹೆಸರುಗಳು ಬದಲಾಗಿಹೋಗಿವೆ. ವೈಶ್ವಾನರನು ಎಂದರೆ ಅಗ್ನಿ ದೇವರೆಂದು, ಎಲ್ಲವನ್ನು ಭಸ್ಮ ಮಾಡುವವನೆಂದು, ಶರೀರದಲ್ಲಿ ದ್ರವ್ಯಗಳನ್ನು ಸುಡುವ ಜಠರಾಗ್ನಿ ಎಂದು, ದ್ರವ್ಯಗಳನ್ನು ಇಲ್ಲದಂತೆ ಮಾಡುವವನೆಂದು ಭಾವ ಇರುತ್ತಿತ್ತು. ಆ ಭಾವ ಕಾಲಕ್ರಮವಾಗಿ ಬದಲಾಗಿ, ದ್ರವ್ಯಗಳನ್ನು ವ್ಯಾಪಾರಮಾಡುವ ವನು ವೈಶ್ಯನು ಎನ್ನುವ ಭಾವ ಬಂದಿದೆ. ವೈಶ್ವಾನರ ಎನ್ನುವ ಪದದಿಂದ ವೈಶ್ಯರು ಎನ್ನುವ ಪದ ಹುಟ್ಟಿದೆ. ವೈಶ್ವಾನರನು ಹೊಟ್ಟೆಯಲ್ಲಿ ದ್ರವ್ಯ ಬರುತ್ತಿದ್ದರೆ ಸುಟ್ಟುಹಾಕುತ್ತಾ ಇಲ್ಲದಂತೆ ಮಾಡುವವನಾದರೆ, ಇಂದಿನ ವೈಶ್ಯರು ಅಂಗಡಿಗಳಲ್ಲಿ ದ್ರವ್ಯಗಳನ್ನು ವ್ಯಾಪಾರಮಾಡಿ ಇಲ್ಲದಂತೆ ಮಾಡುವವರಾಗಿ ಗುರುತು ಹೊಂದಿದ್ದಾರೆ. ಈ ವಿಧವಾಗಿ ಶ್ರೇಷ್ಠ ಎನ್ನುವ ಪದ ಶೆಟ್ಟಿಯಾಗಿ, ವೈಶ್ವಾನರರು ಎನ್ನುವಪದ ವೈಶ್ಯರಾಗಿ ರೂಪಾಂತರ ಹೊಂದಿದೆ.

ದೇವರು ಹೇಳಿದ ಶ್ರೇಷ್ಠರು ಯಾರಾಗಿರುವುದು ಗುರುತು ಇಲ್ಲದಂತೆ ಹೋಗಿದೆ. ಆದ್ದರಿಂದ ಯಾರನ್ನು ಆದರ್ಶವಾಗಿ ತೆಗೆದುಕೊಂಡು ಅವರನ್ನು ಅನುಸರಿಸಬೇಕೆಂದು ಸಂಶಯ ಏರ್ಪಟ್ಟಿದೆ. ಅದಕ್ಕೆ ಉತ್ತರವಾಗಿ ದೇವರು ಹೇಳಿದ ಸೂತ್ರವನ್ನೇ ಉಪಯೋಗಿಸಿಕೊಂಡು ನೋಡಬೇಕು. ಪವಿತ್ರವಾದ, ಶ್ರೇಷ್ಠವಾದ ಜ್ಞಾನ ಯಾರ ಹತ್ತಿರವಿದೆಯೋ ಅವರನ್ನೇ ಶ್ರೇಷ್ಠರು ಎಂದುಕೊಳ್ಳಬೇಕು. ಜ್ಞಾನವನ್ನು ತಿಳಿದ ಶ್ರೇಷ್ಠರಲ್ಲಿ ಶ್ರೇಷ್ಠನ್ಯಾರೋ ಯೋಚಿಸಿ ನೋಡಬೇಕು. ಶ್ರೇಷ್ಠರಿಗೆಲ್ಲಾ ಶ್ರೇಷ್ಠನು ನಿಜವಾಗಲೂ ಭಗವಂತನೇ

ಎಂದು ತಿಳಿದು ಭಗವಂತನು ಹೇಳಿದ ಮಾರ್ಗವನ್ನು ಅನುಸರಿಸಬೇಕು, ಅದೇ ಸರಿಯಾದ ಮಾರ್ಗ.

**(2) ಶ್ಲೋ॥ 22 : ನಮೇ ಪಾರ್ಥಾಽಸ್ತಿ ಕರ್ತವ್ಯಂ ತ್ರಿಷು ಲೋಕೇಷುಕಿಂಚನ ।**
**ನಾಽನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ॥**

**(ಕರ್ಮಯೋಗ)**

**ಭಾವಾರ್ಥ :** ನನಗೆ ಕರ್ತವ್ಯ ಎಂಬುವುದು ಇಲ್ಲ. ಮೂರುಲೋಕಗಳಲ್ಲಿ ನಾನು ಇಲ್ಲಿಯವರೆಗೂ ಹೊಂದಿರುವುದು ಇನ್ನೂ ಹೊಂದಬೇಕಾಗಿರುವುದು ಇಲ್ಲ. ಆದರೂ ನಾನು ಕರ್ಮಗಳನ್ನು ಆಚರಿಸುತ್ತಿದ್ದೇನೆ.

**ವಿವರ :** ಮೂರು ಲೋಕಗಳು ಎಂದರೆ ಮೂರು ಗುಣಗಳೆಂದು ತಿಳಿಯಬೇಕು. ಪ್ರತ್ಯೇಕಿಸಿ ಮೂರು ಲೋಕಗಳು ಎಲ್ಲಿಯೂ ಇಲ್ಲ. ಮೂರು ಗುಣಗಳ ಮೂಖಾಂತರ ಕೆಲಸಗಳು ಮಾಡಬೇಕಾದ ಅವಶ್ಯಕತೆ ನನಗೆ ಇಲ್ಲವೆಂದು ಶ್ರೀಕೃಷ್ಣನು ಮೇಲಿನ ಶ್ಲೋಕದಲ್ಲಿ ತಿಳಿಸಿದ್ದಾನೆ. ಹಾಗೆ ಮೂರು ಗುಣಗಳಿಂದ ನಾನು ಇಲ್ಲಿಯವರೆಗೂ ಹೊಂದದಿರುವುದು, ಹೊಂದ ಬೇಕಾಗಿರುವುದು ಇಲ್ಲ. ಆದರೂ ನಾನು ಮೂರು ಗುಣಗಳ ಮೂಲಕ ಕೆಲಸಗಳು ಮಾಡುತ್ತಿದ್ದೇನೆಂದೂ ಸಹ ತಿಳಿಸಿದ್ದಾನೆ. ಆ ವಿಧವಾಗಿ ಏಕೆ ಮಾಡುತ್ತಿದ್ದಾನೆಂದರೆ!

**(2) ಶ್ಲೋ॥ 23 : ಯದಿ ಹ್ಯಹಂ ನ ವರ್ತೇಯಂಜಾತು ಕರ್ಮಣ್ಯತನ್ದ್ರಿತಃ ।**
**ಮಮ ವರ್ತ್ಮಾನುವರ್ತನ್ತೇ ಮನುಷ್ಯಾಃ ಪಾರ್ಥ! ಸರ್ವಶಃ ॥**

**(ಕರ್ಮಯೋಗ)**

**ಭಾವಾರ್ಥ :** ಓ ಅರ್ಜುನಾ! ನಾನು ಯಾವಾಗಲಾದರೂ ಕೆಲಸಗಳಲ್ಲಿ ಅಜಾಗ್ರತೆಯಿಂದ ಮಾಡದ ಪಕ್ಷದಲ್ಲಿ, ಭೂಮಿ ಮೇಲೆ ಜನರೆಲ್ಲರೂ ಎಲ್ಲಾ ವಿಧಗಳಲ್ಲಿ ನನ್ನಂತೆ ಅವರೂ ಸಹ ಕೆಲಸಗಳು ಮಾಡದೆ ಸುಮ್ಮನಿರುತ್ತಾರೆ.

**ವಿವರ :** ಭಗವಂತನಾಗಿ ಹುಟ್ಟಿದ ಪರಮಾತ್ಮ ಕೆಲಸಗಳು ಮಾಡುವುದು ಏನೆಂದು ಆಶ್ಚರ್ಯವಾಗದೆ ಇರುವುದಿಲ್ಲ. ಮೇಲಾಗಿ ನಾನು ತಪ್ಪದೆ ಮಾಡಬೇಕೆನ್ನುತ್ತಿದ್ದಾನೆ. ಅದೂ ಮಾರ್ಗದರ್ಶಕತೆಗೆ ಎಂದಿದ್ದಾನೆ. ಮಾನವನ ಕರ್ತವ್ಯವನ್ನು ತಿಳಿಸುವುದಕ್ಕೆ ದೇವರು ಭಗವಂತನಾಗಿ ಹುಟ್ಟಿದ್ದಾನೆ. ಆದ್ದರಿಂದ ಅದು ಏನೋ ಆತನೇ ಮಾಡಿ ತೋರಿಸಬೇಕು. ಆತನು ಜಪತಪಗಳನ್ನಾಗಲಿ, ವ್ರತಕ್ರತುಗಳನ್ನಾಗಲಿ, ಹೀಗೆ ಮಾಡಿರೆಂದು ಏನನ್ನು ತೋರಿಸಲಿಲ್ಲ. ಆತನು ಮಾಡಿರುವುದೆಲ್ಲಾ ಸಾಧಾರಣ ಮಾನವನು ಮಾಡುವ ಕೆಲಸಗಳನ್ನೇ ಮಾಡಿದ್ದಾನೆ. ಹಾಗೆ ಮಾಡುವುದರಲ್ಲಿಯೇ ಕರ್ಮಯೋಗ ಇದೆಯೆಂದು ತಿಳಿಸಿದ್ದಾನೆ.

ಕೆಲಸಗಳು ಮಾಡುವುದರಲ್ಲಿಯೇ ಕರ್ಮಯೋಗ ಇದೆಯೆಂದು, ಕೆಲಸಗಳು ಮಾಡದೆಹೋದರೆ ಕರ್ಮಯೋಗವೆನ್ನುವುದೇ ಇಲ್ಲವೆಂದು, ಆದ್ದರಿಂದಲೇ ತಾನು ಯಾವಾಗಲೂ ಕೆಲಸಗಳು ಮಾಡಿ ಕರ್ಮಯೋಗವಾಚರಿಸಿ ತೋರಿಸಬೇಕೆಂದು, ಹಾಗೆ ಮಾಡದೆ ಹೋದರೆ ಉಳಿದವರು ಸಹ ಕರ್ಮಯೋಗವನ್ನು ಅನುಸರಿಸುವುದಿಲ್ಲ ಎಂದು ತಿಳಿಸಿದ್ದಾನೆ.

**2) ಶ್ಲೋ॥ 24 : ಉತ್ಸೀದೇಯು ರಿಮೇಲೋಕಾನ ಕುರ್ಯಾಂ ಕರ್ಮಚೇ ದಹಮ್।**
**ಸಂಕರಸ್ಯ ಚ ಕರ್ತಾ ಸ್ಯಾ ಮುಪಹನ್ಯಾಮಿಮಾಃ ಪ್ರಜಾಃ ॥**
**(ಕರ್ಮಯೋಗ)**

**ಭಾವಾರ್ಥ :** ನಾನು ಕೆಲಸಗಳು ಮಾಡದೆಹೋದರೆ ಜಗತ್ತಿನಲ್ಲಿ ಮನುಷ್ಯರೆಲ್ಲರೂ ಕೆಟ್ಟ ಮಾರ್ಗದಲ್ಲಿ ಹೋಗುತ್ತಾರೆ ಮತ್ತು ವರ್ಣಸಂಕರ ಏರ್ಪಡುತ್ತದೆ. ಪ್ರಜೆಗಳನ್ನೆಲ್ಲಾ ನಾನು ತಪ್ಪುದಾರಿ ಹಿಡಿಸಿದವನಾಗುತ್ತೇನೆ.

**ವಿವರ :** ದೇವರು ಮಾನವನಾಗಿ ಭೂಮಿ ಮೇಲೆ ಬಂದಾಗ ಸಾಮಾನ್ಯವಾಗಿ ಯಾರಿಗೂ ತಿಳಿಯದು. ಬಂದುಹೋದ ನಂತರ ಸ್ವಲ್ಪ ಕಾಲಕ್ಕೆ ಇಂತಹ ಮನುಷ್ಯ, ಇಂತಹ ಜ್ಞಾನವನ್ನು, ಧರ್ಮವನ್ನು ತಿಳಿಸಿದ್ದಾನೆ, ಆದ್ದರಿಂದ ಆತನು ದೇವರ ಅವತಾರವಾದ ಭಗವಂತನೆಂದು ತಿಳಿದುಕೊಳ್ಳುವುದಕ್ಕೆ ಸಾಧ್ಯವಿದೆ. ಹಾಗೆ ಇಂತಹ ಮನುಷ್ಯನನ್ನು ಭಗವಂತನನ್ನಾಗಿ ನಿರ್ಣಯಿಸಿಕೊಂಡ ನಂತರ ಆತನು ತನ್ನ ಜೀವನದಲ್ಲಿ ಏನು ಹೇಳಿದ್ದಾನೆ? ಏನು ಮಾಡಿದ್ದಾನೆ? ಎಂದು ಮುಖ್ಯವಾಗಿ ಗಮನಿಸೋಣ. ಹೇಳಿರುವುದು ಜ್ಞಾನ ರೂಪದಲ್ಲಿ, ಮಾಡಿರುವುದು ಚರಿತ್ರೆ ರೂಪದಲ್ಲಿರುತ್ತದೆ. ಭೂಮಿ ಮೇಲೆ ತಿಳಿದ ಹಿರಿಯರು ಇಂತವನು ಭಗವಂತನೆಂದು ತಿಳಿಸಿದ ನಂತರ ಆತನು ಹೇಳಿರುವುದನ್ನು ಕೆಲವರು ಮುಖ್ಯವಾಗಿ ನೋಡುತ್ತಾರೆ. ಕೆಲವರು ಮಾಡಿರುವುದನ್ನು ನೋಡುತ್ತಾರೆ. ಮತ್ತೆ ಕೆಲವರು ಎರಡನ್ನು ಗಮನಿಸುತ್ತಾರೆ. ಅಂತಹ ಮೂರು ವಿಧಗಳಲ್ಲಿ ಕೆಲವರಿಗೆ ಆತನು ಹೇಳಿರುವುದು ಇಷ್ಟವಾದರೂ, ಆತನು ಮಾಡಿರುವುದು ಇಷ್ಟವಾಗುವುದಿಲ್ಲ. ಕೆಲವರಿಗೇನೋ ಆತನು ಮಾಡಿರುವುದು ಇಷ್ಟವಾದರೂ, ಆತನು ಹೇಳಿರುವುದು ಇಷ್ಟವಾಗುವುದಿಲ್ಲ. ಮತ್ತೆ ಕೆಲವರಿಗೆ ಎರಡು ಇಷ್ಟವಾಗುವುದಿಲ್ಲ. ಹಾಗೆ ಭಗವಂತನು ಇಂತಹವನೆಂದು ಇತರರ ಮೂಲಕ ತಿಳಿದುಕೊಂಡರೂ ಹೇಳಿರುವುದೊ, ಮಾಡಿರುವುದೊ ಇಷ್ಟವಾಗದೆ, ಆತನು ಭಗವಂತನು ಅಲ್ಲವೆಂಬ ನಿರ್ಣಯಕ್ಕೆ ಬಹಳಜನರು ಬರುತ್ತಾರೆ. ಬಹಳ ಅಪರೂಪವಾಗಿ ಆತನು

ಹೇಳಿರುವುದು, ಮಾಡಿರುವುದು ಇಷ್ಟವಾದವರು ಇರುತ್ತಾರೆ. ಒಬ್ಬ ಮನುಷ್ಯ ಭಗವಂತನಾಗಿ ಗುರುತು ಬರುವುದೇ ಕಷ್ಟ. ಗುರುತು ಬಂದ ನಂತರ ಆತನು ಎಲ್ಲರಿಗೂ ಇಷ್ಟವಾಗುವುದು ಬಹಳ ಕಷ್ಟ. ಯಾರಿಗಾದರೂ ಒಬ್ಬನಿಗೆ ಬಹು ಅಪರೂಪವಾಗಿ ಎರಡು ವಿಧಗಳು ಇಷ್ಟವಾಗಿ, ಈತನು ದೇವರ ಅಂಶದಿಂದ ಹುಟ್ಟಿದ ಭಗವಂತನೆಂದು ತಿಳಿಯುತ್ತದೆ. ಹಾಗೆ ತಿಳಿದಾಗ ಆತನನ್ನು ಎಲ್ಲಾ ವಿಧಗಳ ಮಾರ್ಗದರ್ಶಕನಾಗಿ ತೆಗೆದುಕೊಂಡು ಹಾಗೆಯೆ ನಡೆದುಕೊಳ್ಳುವುದಕ್ಕೆ ಪ್ರಯತ್ನಿಸುತ್ತಾರೆ.

ಇಲ್ಲಿ ಶ್ರೀಕೃಷ್ಣನು ಎಲ್ಲಾ ವಿಧಗಳಲ್ಲಿ ಭಗವಂತನಾಗಿ ಕೆಲವರಿಗೆ ಗುರುತಿಸಲ್ಪಟ್ಟಿದ್ದಾನೆ. ಆದ್ದರಿಂದ ಆತನ ಬೋಧನೆಯನ್ನು, ಆತನ ಪ್ರವರ್ತನೆಯನ್ನು ಎಲ್ಲರೂ ಆದರ್ಶವಾಗಿ ತೆಗೆದುಕೊಳ್ಳುವುದಕ್ಕೆ ಅವಕಾಶವಿದೆ. ಶ್ರೇಷ್ಟರು ಏನನ್ನು ಆಚರಿಸಿದರೆ ಅದನ್ನೇ ಇತರರು ಆಚರಿಸುತ್ತಾರೆಂದು ಮೊದಲೆ ಹೇಳಿಕೊಂಡಿದ್ದೇವೆ. ಹಾಗೆ ಎಲ್ಲಾವಿಧಗಳ ಶ್ರೇಷ್ಠನು ಭಗವಂತನೆ, ಆದ್ದರಿಂದ ಆತನು ಕೆಲಸಗಳು ಮಾಡದೆಹೋದರೆ ಉಳಿದವರೂ ಸಹ ಆತನನ್ನು ಅನುಸರಿಸಿ ಕೆಲಸಗಳು ಮಾಡದಿರುವುದಕ್ಕೆ ಅವಕಾಶವಿದೆ. ಮನುಷ್ಯರ ಲೆಕ್ಕದಲ್ಲಿ ಲೋಕನೀತಿ ಪ್ರಕಾರ ನ್ಯಾಯ, ಅನ್ಯಾಯ ಎಂದು, ಮಾಡಬೇಕಾದ ಕೆಲಸಗಳು, ಮಾಡಬಾರದ ಕೆಲಸಗಳೆಂದು, ಒಳ್ಳೆಯ ಕಾರ್ಯಗಳು ಕೆಟ್ಟ ಕಾರ್ಯಗಳು ಎಂದು, ಪುಣ್ಯಬರುವ ಕೆಲಸಗಳು, ಪಾಪ ಬರುವ ಕೆಲಸಗಳು ಎಂದು ಎರಡು ಗುಂಪುಗಳು ಇರುತ್ತವೆ. ಇವುಗಳನ್ನನುಸರಿಸಿ ಮನುಷ್ಯರು ಕೆಲವು ಕೆಲಸಗಳು ಮಾಡಬೇಕೆಂದು, ಕೆಲವು ಕೆಲಸಗಳು ಮಾಡಬಾರದೆಂದೂ ಸಹ ನಿರ್ಣಯಿಸಿಕೊಂಡಿರುತ್ತಾರೆ. ಮಾಡಬೇಕಾಗಿರುವವು, ಮಾಡಬಾರದವು ಎನ್ನುವವು ಪ್ರಕೃತಿ ಧರ್ಮದ ಪ್ರಕಾರ ಇದ್ದರೆ, **ದೇವರ ಧರ್ಮದ ಪ್ರಕಾರ ಮಾಡಬೇಕಾದ ಪದ್ಧತಿ, ಮಾಡಬಾರದ ಪದ್ಧತಿ ಎನ್ನುವವು ಇವೆ.** ದೇವರ ಧರ್ಮಕ್ಕೂ, ಪ್ರಕೃತಿ ಧರ್ಮಕ್ಕೂ ಹೇಳಿಕೊಳ್ಳುವುದರಲ್ಲಿ ಕೇವಲ ಸ್ವಲ್ಪ ವ್ಯತ್ಯಾಸ ಮಾತ್ರ ಅನಿಸಿದರು ಆಚರಿಸುವುದರಲ್ಲಿ ಬಹಳ ಭಿನ್ನವಾಗಿರುತ್ತದೆ. ಕೃಷ್ಣನು ದೇವರ ಧರ್ಮದ ಪ್ರಕಾರ ಆಚರಿಸಿ ದ್ದಾನೆ. ಆತನ ಆಚರಣೆ ಪ್ರಕೃತಿ ಧರ್ಮದಲ್ಲಿರುವವರಿಗೆ ಬಹಳ ಭಿನ್ನವಾಗಿ ಕಾಣಿಸಿದೆ. ಆದ್ದರಿಂದ ಆತನನ್ನು, ಆತನ ಪ್ರವರ್ತನೆಯನ್ನು ಬಹಳ ಜನರು ಒಪ್ಪಿಕೊಳ್ಳುವುದಿಲ್ಲ. ಮಾಡಬೇಕಾಗಿರುವವು, ಮಾಡದಿರುವುವು ಮನುಷ್ಯರ ನಿಯಮವಾದರೆ, ಮಾಡಬೇಕಾದ ಪದ್ಧತಿ, ಮಾಡಬಾರದ ಪದ್ಧತಿ ಭಗವಂತನ ನಿಯಮವಾಗಿದೆ.

ಈ ಶ್ಲೋಕದಲ್ಲಿ **"ಸಂಕರಸ್ಯ"** ಎನ್ನುವ ಪದವನ್ನು ಬಳಸಲಾಗಿದೆ. ಸಂಕರ ಎಂದರೆ ಇರುವುದಿದ್ದಂತಿರದೇ ಇನ್ನೊಂದರೊಂದಿಗೆ ಬೆರೆತುಹೋಗಿ ಬೇರೆಯಾಗಿ

ಬದಲಾಗುವುದೆಂದು ಅರ್ಥ. ಉದಾಹರಣೆಗೆ ಕಪ್ಪುಬಣ್ಣವನ್ನು ಕೆಂಪುಬಣ್ಣದೊಂದಿಗೆ ಸೇರಿಸಿದರೆ ಕಪ್ಪುಬಣ್ಣ ಮೊದಲಿನ ತನ್ನ ಆಕಾರವನ್ನು ಕಳೆದುಕೊಂಡು ಮತ್ತೊಂದು ಬಣ್ಣವಾಗಿ ಬದಲಾಗುತ್ತದೆ. ಹಾಗೆಯೇ ದೇವರ ಧರ್ಮವಿದು ಎಂದು, ಮಾಡಬೇಕಾದ ಪದ್ಧತಿ ಇದು ಎಂದು, ತಾನು ಮಾಡಿ ತೋರಿಸದೆಹೋದರೆ ದೇವರ ಪದ್ಧತಿಯೊಳಗೆ ಮನುಷ್ಯರ ಪದ್ಧತಿ ಸೇರಿಹೋಗಿ ದೇವರ ಪದ್ಧತಿ ಮತ್ತೊಂದು ವಿಧವಾಗಿ ಬದಲಾಗುವುದಕ್ಕೆ ಅವಕಾಶವಿದೆ. ಹೇಗಾದರೆ ಕಪ್ಪುಬಣ್ಣ ಕೆಂಪುಬಣ್ಣದ ಜೊತೆ ಬೆರೆತಾಗ ಇತ್ತ ಕಪ್ಪುಅಲ್ಲದೇ ಅತ್ತ ಕೆಂಪು ಅಲ್ಲದೇ ಮಧ್ಯದಲ್ಲಿ ಅಡಿಕೆ ಬಣ್ಣ ಬಂದಂತೆ ಇತ್ತ ದೇವರ ಪದ್ಧತಿಯಲ್ಲದೇ, ಅತ್ತ ಮನುಷ್ಯರ ಪದ್ಧತಿಯಲ್ಲದೇ ಮತ್ತೊಂದು ಪದ್ಧತಿ ಏರ್ಪಡುತ್ತದೆ. ಈ ಕಾಲದಲ್ಲಿಯೂ ಸಹ ಅಂತಹ ಸಂಕರಪದ್ಧತಿ ಇದೆಯೆಂದು ಹೇಳಬಹುದು. ಹೇಗೆ ಎಂದರೆ! ಅಜ್ಞಾನ ಮನುಷ್ಯರ ಪದ್ಧತಿ ದೈವಜ್ಞಾನವೆಂಬ ಪದ್ಧತಿಯೊಂದಿಗೆ ಬೆರೆತುಹೋಗಿ ಆಸ್ತಿಕಪದ್ಧತಿ ಏರ್ಪಟ್ಟಿದೆ. ಇವರು ಅತ್ತ ಅಜ್ಞಾನಿಗಳಲ್ಲ, ಇತ್ತ ಜ್ಞಾನಿಗಳಲ್ಲ. ಎರಡಕ್ಕೂ ತಪ್ಪಿದವರಾಗಿ ಸಂಕರ ಪದ್ಧತಿಯಾಗಿ ಇದ್ದಾರೆ. ಅಜ್ಞಾನಿಗಳಾದರೆ ಒಳ್ಳೆಯ ಕೆಟ್ಟದಾದ ಪಾಪಪುಣ್ಯ ಕಾರ್ಯಗಳನ್ನೇ ಮಾಡುತ್ತಾರೆ. ಪೂರ್ತಿಜ್ಞಾನಿಗಳಾದರೆ ದೈವಪದ್ಧತಿ ಪ್ರಕಾರ ಕರ್ಮ, ಬ್ರಹ್ಮ, ಭಕ್ತಿ ಯೋಗಗಳನ್ನೇ ಮಾಡುತ್ತಿರುತ್ತಾರೆ. ಅತ್ತ ಇತ್ತ ಅಲ್ಲದ ಸಂಕರಕ್ರಿಯೆಗಳು ಇರುವವರು ಯಜ್ಞಗಳು, ದಾನಗಳು, ವೇದಾಧ್ಯಯನಗಳು, ತಪಸ್ಸುಗಳು ಮಾಡುತ್ತಿರುತ್ತಾರೆ. ಈ ಸಂಕರಪದ್ಧತಿ ಭೂಮಿ ಮೇಲೆ ಇಲ್ಲದಂತೆ ಮಾಡುವುದಕ್ಕೆ ಮೇಲಿನ ನಾಲ್ಕು ಕ್ರಿಯೆಗಳಿಂದ ದೇವರು ತಿಳಿಯುವುದಿಲ್ಲವೆಂದು ತನ್ನಬೋಧನೆ ಆದ ಗೀತೆಯಲ್ಲಿ ಭಗವಂತನು ಹೇಳಿದ್ದಾನೆ. ತನ್ನ ಬೋಧನೆಯಲ್ಲಿ ಹೇಳುವುದಲ್ಲದೇ ಅಸಲಾದ ದೇವರ ಪದ್ಧತಿಯನ್ನು ತಾನು ಆಚರಿಸಿ ತೋರಿಸಿದ್ದಾನೆ. ಹಾಗೆ ಆಚರಿಸಿ ತೋರಿಸದೆ ಹೋದರೆ ಮನುಷ್ಯರು ಮಾಡಬೇಕಾದ ಪದ್ಧತಿಯನ್ನು ಬಿಟ್ಟು, ಮಾಡಬಾರದ ಸಂಕರ ಪದ್ಧತಿಯೊಳಗೆ ಹೋಗುತ್ತಾರೆಂದು ಸಹ ತಿಳಿಸಿದ್ದಾನೆ. ಯಾವಾಗಲೊ ಅಪರೂಪವಾಗಿ ಭೂಮಿಯ ಮೇಲೆ ದೇವರ ಅಂಶ ಭಗವಂತನು ಬಂದು, ತಾನು ಸ್ವತಃ ಕೆಲಸಗಳು ಮಾಡಿ, ನೀವೂ ಸಹ ನನ್ನ ಪದ್ಧತಿ ಪ್ರಕಾರ ನಡೆದುಕೊಳ್ಳಿರೆಂದು ಹೇಳಿಹೋದರೆ! ಆತನು ಅಜ್ಞಾನಿಯಂತೆ ಪ್ರವರ್ತಿಸಿದ್ದಾನೆಂದು ಅನ್ನುವವರೂ ಸಹ ಇಲ್ಲದಂತೆ ಹೋಗಿಲ್ಲ. ಹಾಗೆ ಮಾತನಾಡಿದವರು ಅರ್ಥ ಮಾಡಿಕೊಳ್ಳುವಂತೆ ಕೆಳಗಿನ ಶ್ಲೋಕವಿದೆ ನೋಡಿರಿ.

**(2) ಶ್ಲೋ॥ 25 : ಸಕ್ತಾಃ ಕರ್ಮಣ್ಯ ವಿದ್ವಾಂಸೋ ಯಥಾ ಕುರ್ವನ್ತಿ ಭಾರತ !**
**ಕುರ್ಯಾದ್ವಿದ್ವಾಂಸ್ತಥಾ಻ಸಕ್ತ ಶ್ಚಿಕೀರ್ಷುರ್ಲೋಕ ಸಂಗ್ರಹಮ್ ॥**
**(ಕರ್ಮಯೋಗ)**

**ಭಾವಾರ್ಥ** : ಒಬ್ಬ ಅಜ್ಞಾನಿ ಎಲ್ಲಾ ವಿಧಗಳ ಕೆಲಸಗಳಲ್ಲಿ ಆಸಕ್ತಿಪರನಾಗಿ ಹೇಗೆ ಮಾಡುತ್ತಿದ್ದಾನೋ, ಜ್ಞಾನವೆಲ್ಲವೂ ತಿಳಿದ ಜ್ಞಾನಿಯೂ ಅಜ್ಞಾನಿಯಂತೆ ಕೆಲಸಗಳು ಮಾಡಬೇಕು. ಆದರೆ ಆ ಕೆಲಸಗಳು ಮಾಡುವುದರಲ್ಲಿ ಜ್ಞಾನಿಗೆ ಫಲಿತದ ಮೇಲೆ ಆಸಕ್ತಿ ಇರಬಾರದು.

**ವಿವರ :** ಅಜ್ಞಾನಿಗಳು ಕೆಲವು ಸಂದರ್ಭಗಳಲ್ಲಿ ಮಾತ್ರ ಒಳ್ಳೆಯ ಕೆಲಸಗಳು ಮಾಡುತ್ತಾ, ಅನೇಕ ಸಮಯಗಳಲ್ಲಿ ಕೆಟ್ಟ ಕೆಲಸಗಳು ಮಾಡುವುದು ಸಹಜ. ಅವರು ಯಾವ ಕೆಲಸಗಳು ಮಾಡುತ್ತಿದ್ದರೂ ಅಹಂಕಾರದಿಂದ ಕೂಡಿಕೊಂಡು ನಡೆದ ಕೆಲಸಕ್ಕೆ ತಾವೇ ಕಾರಣವೆಂಬ ಭಾವವನ್ನು ಹೊಂದಿ ಮಾಡುತ್ತಿರುತ್ತಾರೆ. ಅಂತಹ ಕೆಲಸಗಳು ಜ್ಞಾನ ತಿಳಿದವರು ಮಾಡಬಾರ ದೆಂದು, ಹಾಗೆ ಮಾಡಿದ ಪಕ್ಷದಲ್ಲಿ ಜ್ಞಾನಿಗಳಿಗೂ ಅಜ್ಞಾನಿಗಳಿಗೂ ಏನು ವ್ಯತ್ಯಾಸವೆಂದು, ಜ್ಞಾನ ತಿಳಿದಮಾತ್ರಕ್ಕೆ ಸರಿಹೋಗುವುದಿಲ್ಲ ಅದಕ್ಕೆ ತಕ್ಕ ಒಳ್ಳೆಯ ಆಚರಣೆ ಇರಬೇಕೆಂದು, ಸತ್‌ಪ್ರವರ್ತನೆ ಇಲ್ಲದಿರುವಾಗ ಜ್ಞಾನ ಇಲ್ಲದಂತೆ ಎಂದು, ಜ್ಞಾನ ತಿಳಿದವರು ಒಳ್ಳೆಯ ಕೆಲಸಗಳೇ ಮಾಡಬೇಕೆಂದು, ಕನಸಿನಲ್ಲಿಯೂ ಸಹ ಕೆಟ್ಟ ಕೆಲಸಗಳನ್ನು ಮಾಡಬಾರದೆಂದು, ಎಷ್ಟೋಜನ ದೊಡ್ಡವರು ಹೇಳುವ ಮಾತುಗಳೆಲ್ಲವನ್ನು ಇಲ್ಲಿ ಭಗವಂತನು ಹೊಡೆದು ಹಾಕುತ್ತಿದ್ದಾನೆ. ಒಳ್ಳೆಯ ಕೆಟ್ಟ ಕೆಲಸಗಳು ಮುಖ್ಯವಲ್ಲ. ಕರ್ಮ ಮುಖ್ಯ ಎನ್ನುತ್ತಿದ್ದಾನೆ. ಗತಜನ್ಮದಲ್ಲಿ ಮಾಡಿಕೊಂಡ ಕರ್ಮದ ಪ್ರಕಾರ ಯಾರಾದರೂ ಚಲಾವಣೆಯಾಗುತ್ತಾನೆ. ಒಂದುವೇಳೆ ಜ್ಞಾನ ತಿಳಿದರೂ, ಅವನ ಕರ್ಮ ಪ್ರಕಾರ ಕೆಲವು ಕೆಟ್ಟಕೆಲಸಗಳು ಅವನ ಮೂಲಕ ನಡೆಯಬೇಕೆಂದಿದ್ದರೆ ಯಾರೂ ತಡೆಯಲಾರರು. ಅಷ್ಟುಮಾತ್ರಕ್ಕೆ ಅವನನ್ನು ಅಜ್ಞಾನಿ ಎನ್ನುವುದು ಸರಿಯಲ್ಲವೆಂದು ತಿಳಿಸುತ್ತಿದ್ದಾನೆ.

ಕರ್ಮ ಸಿದ್ಧಾಂತ ತಿಳಿದ ಜ್ಞಾನಿ ತಾನು ಹೀಗೆ ಮಾಡಬೇಕೆಂದು, ತಾನು ಮಾಡುವುದರಿಂದಲೇ ಕೆಲಸಗಳು ನಡೆಯುತ್ತಿವೆಯೆಂದಾಗಲಿ ಅಂದುಕೊಳ್ಳುವುದಿಲ್ಲ. ಕರ್ಮದ ಪ್ರಕಾರ ತಾನು ಅಜ್ಞಾನಿಗಳಂತೆ ಕೆಲಸಗಳು ಮಾಡುತ್ತಾನೆ. ಆದರೆ ನಡೆದ ಕೆಲಸಕ್ಕೆ ತಾನು ಕಾರಣವೆಂದು ಎಂದಿಗೂ ತಿಳಿದುಕೊಳ್ಳುವುದಿಲ್ಲ. ತಾನು ಜ್ಞಾನಿ ಎಂದು, ಕೆಲಸಗಳಲ್ಲಿ ಎಂದರೆ ಆಚರಣೆಯಲ್ಲಿ ತಾನು ಅಜ್ಞಾನಿಗಿಂತ ಬೇರೆಯಾಗಿರಬೇಕೆಂದು, ಪ್ರತ್ಯೇಕವಾಗಿ ಕಾಣಿಸಬೇಕೆಂದುಕೊಳ್ಳುವುದಿಲ್ಲ. ಅಂತಹ ಕಾರ್ಯಾಚರಣೆ ಹೊಂದಿದವನನ್ನು ಜ್ಞಾನಿಯಾಗಿ ಯಾರು ಗುರುತಿಸಲಾರರು. ಕರ್ಮಯೋಗವು ಮೇಲಕ್ಕೆ ಕಾಣಿಸುವುದಿಲ್ಲ, ಆದ್ದರಿಂದ ಅಜ್ಞಾನಿಯಂತೆ ಜ್ಞಾನಿಯು ಕಾಣಿಸುತ್ತಾನೆ.

**(2) ಶ್ಲೋ॥ 26 : ನ ಬುದ್ಧಿಭೇದಂ ಜನಯೇ ದಜ್ಞಾನಾಂ ಕರ್ಮಸಂಗಿನಾಮ್ ।**
**ಜೋಷಯೇತ್ಸರ್ವ ಕರ್ಮಾಣಿ ವಿದ್ವಾನ್ ಯುಕ್ತ ಸ್ಸಮಾಚರನ್ ॥**
**(ಕರ್ಮಯೋಗ)**

**ಭಾವಾರ್ಥ:** ಜ್ಞಾನಿ ಕೆಲಸಗಳು ಮಾಡುವುದರಲ್ಲಿ ಅಜ್ಞಾನಿಗಳ ಬುದ್ಧಿಗೆ ಭೇದವನ್ನು ಉಂಟುಮಾಡಬಾರದು. ತಿಳಿದವನು ಎಲ್ಲಾ ಕೆಲಸಗಳು ಮಾಡುತ್ತಾ, ಇತರರಿಂದಲೂ ಸಹ ತನ್ನಂತೆ ಮಾಡಿಸಬೇಕು.

**ವಿವರ :** ಅಜ್ಞಾನಿಗಳಂತೆ ತಾನು ಕೆಲಸಗಳು ಮಾಡಬಾರದೆಂದು, ತಾನು ಜ್ಞಾನಿಯಾಗಿರುವುದಕ್ಕೆ ನನ್ನ ಆಚರಣೆ ಬೇರೆಯೆಂದು, ಜ್ಞಾನ ತಿಳಿದವರ ಕೆಲಸಗಳು ಎಲ್ಲರಂತೆ ಇರುವುದಿಲ್ಲ ಎನ್ನುವುದರಿಂದ, ಅಜ್ಞಾನಿಗಳಾದವರೂ ಜ್ಞಾನ ತಿಳಿದುಕೊಳ್ಳುವುದಕ್ಕೆ ಅವಕಾಶವೇ ಇಲ್ಲದಂತೆಹೋಗುತ್ತಿದೆ. ಉದಾಹರಣೆಗೆ ಒಬ್ಬ ಅಜ್ಞಾನಿ ಸ್ವಲ್ಪಕಾಲಕ್ಕೆ ತನ್ನಲ್ಲಿ ಸ್ವಲ್ಪ ಬದಲಾವಣೆ ಬಂದು ಜೀವನ ಶಾಶ್ವತವಲ್ಲವೆಂದು, ಈಗಿನಿಂದಾದರೂ ಸ್ವಲ್ಪ ಜ್ಞಾನ ತಿಳಿದುಕೊಳ್ಳಬೇಕೆಂದು ನಿಶ್ಚಯಿಸಿಕೊಂಡಿದ್ದಾನೆ. ಜ್ಞಾನ ತಿಳಿಯಬೇಕೆಂದರೆ ಆಧ್ಯಾತ್ಮಿಕ ಗ್ರಂಥಗಳಾದರು ಓದಬೇಕು ಅಥವಾ ದೊಡ್ಡ ಗುರುಗಳ ಹತ್ತಿರವಾದರು ಬೋಧನೆಗಳನ್ನು ಕೇಳಬೇಕು. ಆ ಪ್ರಯತ್ನದಲ್ಲಿ ಒಂದು ದಿನ ದೊಡ್ಡ ಸ್ವಾಮೀಜಿ ಬರೆದ ಆಧ್ಯಾತ್ಮಿಕ ಗ್ರಂಥವನ್ನು ತೆಗೆದು ಓದಿದ್ದಾನೆ. ಅದರಲ್ಲಿ ಒಳ್ಳೆಯ ಕೆಲಸಗಳು ಮಾಡುವುದು ಒಳ್ಳೆಯವರ ಲಕ್ಷ್ಯವೆಂದು, ಕೆಟ್ಟ ಕೆಲಸಗಳು ಮಾಡುವುದು ಕೆಟ್ಟವರ ಲಕ್ಷ್ಯವೆಂದು, ಅಜ್ಞಾನಿಗಳು ಜ್ಞಾನವನ್ನು ತಿಳಿದುಕೊಳ್ಳದೆ ಅವರಿಗೆ ಇಷ್ಟಬಂದ ಕೆಟ್ಟಕೆಲಸಗಳು ಮಾಡುತ್ತಾ ಪಾಪವನ್ನು ಹೊಂದುತ್ತಿದ್ದಾರೆಂದು, ಅವರು ತಪ್ಪದೆ ನರಕವನ್ನು ಅನುಭವಿಸಬೇಕೆಂದು, ಅಂತವರು ದೈವವನ್ನು ಎಂದಿಗೂ ತಿಳಿದುಕೊಳ್ಳುವುದಿಲ್ಲ ವೆಂದು, ಮೋಕ್ಷ ಎಂಬುವುದು ಅವರಿಗೆ ಸಿಗುವುದಿಲ್ಲವೆಂದು ಬರೆಯಲಾಗಿದೆ. ಅದನ್ನು ಓದಿದ ನಂತರ ಆತನು ತನ್ನ ಪ್ರವರ್ತನೆಯಲ್ಲಿ ಎಷ್ಟೋ ಬದಲಾವಣೆಗಳನ್ನು ತಂದುಕೊಂಡು, ಎಲ್ಲಾ ಒಳ್ಳೆಯ ಕೆಲಸಗಳೇ ಮಾಡಬೇಕೆಂದು ದೃಢಸಂಕಲ್ಪದಿಂದ ಪ್ರಯತ್ನಿಸುತ್ತಾನೆ. ಸ್ವಲ್ಪಕಾಲಕ್ಕೆ ಒಬ್ಬ ಗುರುವಿನ ಉಪನ್ಯಾಸ ಕೇಳುವುದಕ್ಕೆ ಅವಕಾಶ ದೊರೆತಿದೆ. ಆತನು ಎಷ್ಟೋ ಆಸಕ್ತಿಯಿಂದ ಜ್ಞಾನ ತಿಳಿದುಕೊಳ್ಳಬೇಕೆಂದು ಆ ಗುರುಗಳ ಹತ್ತಿರಕ್ಕೆ ಹೋಗಿ ಉಪನ್ಯಾಸವನ್ನು ಕೇಳುತ್ತಿದ್ದನು. ಅಲ್ಲಿನ ಗುರುಗಳು ಈ ವಿಧವಾಗಿ ಹೇಳುತ್ತಿದ್ದಾನೆ.

"ಮನುಷ್ಯ ಜ್ಞಾನಿಯೆನಿಸಿಕೊಳ್ಳಬೇಕೆಂದರೆ ಆಚರಣೆ ಮುಖ್ಯ. ಆತನು ಮಾಡುವ ಆಚರಣೆಯಿಂದ ಅವನು ಜ್ಞಾನಿಯೋ, ಅಜ್ಞಾನಿಯೋ ಎಂದು ನಿರ್ಣಯಿಸಲಾಗುತ್ತದೆ.

ಓದನ್ನು ಹೇಳುವವನನ್ನು ಟೀಚರ್ ಎನ್ನುತ್ತೇವೆ. ಭೂಮಿಯನ್ನು ಹೂಳುವವನನ್ನು ರೈತ ಎನ್ನುತ್ತೇವೆ. ಕತ್ತಿಯಿಂದ ಕೋಲುಗಳಿಂದ ಬೆದರಿಸುವವನನ್ನು ರೌಡಿ ಎನ್ನುತ್ತೇವೆ. ಹಾಗೆ ಸತ್‌ಪ್ರವರ್ತನೆ ಹೊಂದಿರುವವನನ್ನು ಜ್ಞಾನಿ ಎನ್ನುತ್ತೇವೆ. ಒಳ್ಳೆಯ ಕೆಲಸಗಳು ಮಾಡುತ್ತಾ ಕೆಟ್ಟಕೆಲಸ ಯಾವುದೊಂದು ಮಾಡದಿರುವವನೇ ನಿಜವಾದ ಜ್ಞಾನಿ. ದೊಡ್ಡ ಪಾತ್ರೆಯಲ್ಲಿನ ಪಾಯಸವಾದರು, ಒಂದು ಚಿಕ್ಕ ವಿಷಬಿಂದು ಅದರಲ್ಲಿ ಬಿದ್ದಮಾತ್ರಕ್ಕೆ ಅದು ಭುಜಿಸುವುದಕ್ಕೆ ಯೋಗ್ಯವಾಗದಿರುವಂತೆ, ಎಷ್ಟು ದೊಡ್ಡ ಜ್ಞಾನಿಯಾದರು ಒಂದು ಸಣ್ಣ ಕೆಟ್ಟ ಕಾರ್ಯದಿಂದ ತಾನು ಜ್ಞಾನಕ್ಕೆ ಯೋಗ್ಯನಾಗದಂತೆಹೋಗುತ್ತಾನೆ, ಜ್ಞಾನ ಭ್ರಷ್ಟನಾಗುತ್ತಾನೆ. ಅಂತವನು ಎರಡಕ್ಕೂ ಕೆಟ್ಟವನೆನಿಸಿಕೊಳ್ಳುತ್ತಾನೆ." ಆ ವಿಷಯವೆಲ್ಲವೂ ಕೇಳಿದ ಆತನು ಆಗಿನಿಂದ ಬಹಳ ಜಾಗ್ರತೆಯಾಗಿ ವ್ಯವಹರಿಸುತ್ತಾ, ಯಾವ ಕೆಟ್ಟಕಾರ್ಯವನ್ನು ಮಾಡದೆ ಆತನು ಒಳ್ಳೆಯ ಕೆಲಸಗಳೇ ಮಾಡುತ್ತಾ, ನಾನು ಜ್ಞಾನಿಯಾಗುತ್ತಿದ್ದೇನೆಂಬ ಸಂತೋಷದಿಂದ ಇದ್ದನು.

ಒಂದು ದಿನ ವಿಧಿವಶಾತ್ತು ತಪ್ಪದೆ ತಪ್ಪು ಮಾಡಬೇಕಾಗಿ ಬಂದಿದೆ. ತನಗಿಷ್ಟ ಇಲ್ಲದಿದ್ದರೂ ತಾನು ತಪ್ಪು ಮಾಡಿದವನಾಗಿ ಅದನ್ನು ಯೋಚಿಸತೊಡಗಿದನು. ಅಂಡೆವು ಪಾಯಸವಾದರು ಒಂದು ವಿಷದ ಹನಿಯಿಂದ ಆಹಾರ ಯೋಗ್ಯತೆಯನ್ನು ಕಳೆದುಕೊಂಡಂತೆ, ನಾನೂ ಈ ಒಂದು ಕೆಟ್ಟ ಕಾರ್ಯದಿಂದ ಜ್ಞಾನಕ್ಕೆ ಅನರ್ಹನೆಂದು ತಿಳಿದು, ನಾನು ಎಂದಿಗಾದರೂ ಭ್ರಷ್ಟನೆ ಆದ್ದರಿಂದ ಜ್ಞಾನಮಾರ್ಗ ನನಗೆ ಸರಿಹೋಗುವುದಿಲ್ಲ. ಅದು ಸನ್ಯಾಸಿಸಿ ಕಾಷಾಯಬಟ್ಟೆಗಳು ಹಾಕಿ ಯಾವ ಕಾರ್ಯಗಳು ಮಾಡದವರಿಗಾದರೆ ಸರಿಹೋಗುತ್ತದೆ, ನಮ್ಮಂತಹ ಸಂಸಾರಿಗಳಿಗೆ ಆಗದ ಕೆಲಸವೆಂದು ತಿಳಿದು, ಅಂದಿನಿಂದ ಜ್ಞಾನವೆಂಬ ಮಾತು ಬಿಟ್ಟು ಮೊದಲಿನಂತೆ ನಾನು ಅಜ್ಞಾನಿಯೇ ಅಂದುಕೊಂಡನು. ಜ್ಞಾನ ಎಂಬುವುದು ಆಚರಣೆಯಲ್ಲಿ ಇಲ್ಲವೆಂದು, ಅಂತರಂಗ ವಿಚಾರಣೆಯಲ್ಲಿದೆ ಎಂದು ತಿಳಿಯದೆ, ಜ್ಞಾನವೆಂದು ಹೆಸರಿಟ್ಟು ನೀತಿಯನ್ನು ಬೋಧಿಸುವ ಗುರುಗಳ ಮಾತುಗಳನ್ನು ಕೇಳಿ, ಅಸಲು ಜ್ಞಾನಮಾರ್ಗವೆಂದರೆ ಏನೋ ತಿಳಿಯದೆ, ಜ್ಞಾನಮಾರ್ಗವೊಂದರ ಪ್ರಯತ್ನದ ಮಾತನ್ನೆ ಬಿಟ್ಟು, ತನಗೆ ಜ್ಞಾನವೇ ಬೇಡವೆಂದುಕೊಂಡು, ಅದಕ್ಕೆ ತಕ್ಕವನು ಅಲ್ಲವೆಂದು ಆಲೋಚನೆ ಬರುವಂತೆ ಮಾಡಿದವರ್‍ಯಾರು? ಉಪನ್ಯಾಸ ಹೇಳಿದವರು, ಗ್ರಂಥಗಳು ಬರೆದವರು. ಆದ್ದರಿಂದಲೇ ಮೇಲಿನ ಶ್ಲೋಕದಲ್ಲಿ ಭಗವಂತನು ಜ್ಞಾನಿಯಾದವನು, ಅಜ್ಞಾನಿಗಳಾದವರ ಬುದ್ಧಿಗೆ ಕಳವಳ ಉಂಟುಮಾಡಬಾರದೆಂದಿದ್ದಾನೆ. ಒಳ್ಳೆಯ ಕೆಟ್ಟ ಕೆಲಸಗಳು ಮಿತವಾದ ಸಂಸಾರದಲ್ಲಿರದೆ ಸನ್ಯಾಸಿಸಿ ಕೆಲಸಗಳು

ಮಾಡದಂತಿರೆಂದು ಬೋಧಿಸುವುದಕ್ಕಿಂತ, ಕೆಲಸಗಳು ಮಾಡುವುದು ಒಳ್ಳೆಯದೆಂದು, ಆ ಕೆಲಸಗಳು ನಮ್ಮ ಇಷ್ಟಪ್ರಕಾರ ನಡೆಯದೆ ಕರ್ಮದ ಪ್ರಕಾರ ನಡೆಯುತ್ತವೆಂದು, ಅದಕ್ಕೆ ಅಜ್ಞಾನದಿಂದ ಜವಾಬ್ದಾರಿ ಎಂದುಕೊಳ್ಳುವುದು ತಪ್ಪೆಂದು ಬೋಧಿಸಿ, ತಾನು ಕೆಲಸಗಳು ಮಾಡುತ್ತಾ ಅದರಲ್ಲಿ ಕರ್ಮ ಅಂಟದಿರುವ ವಿಧಾನವನ್ನು ಬೋಧಿಸುತ್ತಾ, ಒಳ್ಳೆಯ ಕೆಟ್ಟ ಕೆಲಸಗಳ ತಾರತಮ್ಯಗಳು ನಮ್ಮಿಂದ ನಡೆಯುವವು ಅಲ್ಲವೆಂದು, ಅವು ಹಿಂದಿನ ಜನ್ಮಗಳ ಕರ್ಮದಿಂದ ನಿರ್ಣಯಿಸಲ್ಪಟ್ಟಿವೆ ಎಂದು, ಅವುಗಳನ್ನು ಸ್ವಲ್ಪವೂ ನಮ್ಮ ದೃಷ್ಟಿಯಲ್ಲಿ ಇಟ್ಟುಕೊಳ್ಳದೆ ಕರ್ಮರೀತ್ಯ ಕೆಲಸಗಳು ಮಾಡುತ್ತಿರುಯೆಂದು ಹೇಳುವುದೇ ತಿಳಿದವರ ಪದ್ಧತಿ.

ಈಗ ನಾವು ಹೇಳಿದ ಭಾವವನ್ನು ಬಹಳಜನರು ಒಪ್ಪಿಕೊಳ್ಳದೆ ಹೋಗಬಹುದು. ಒಳ್ಳೆಯ ಕೆಟ್ಟ ಕೆಲಸಗಳ ತಾರತಮ್ಯಗಳನ್ನು ಬಿಟ್ಟು ಸಹಜವಾಗಿ ಯಾರ ಕೆಲಸ ಅವರು ಮಾಡಿಕೊಂಡು ಹೋಗೆಂದು ಹೇಳುವುದು ಸಮಂಜಸವೆ! ಇದು ಜ್ಞಾನಪದ್ಧತಿಯೇ ಎಂದು ಕೇಳಬಹುದು. ಅದಕ್ಕೆ ನನ್ನ ಕಡೆಯಿಂದ ದೇವರ ಸಮಾಧಾನ ಕೆಳಗಿನ ಶ್ಲೋಕದಲ್ಲಿ ನೋಡಿರಿ.

**(2) ಶ್ಲೋ॥ 27 : ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।**
**ಅಹಂಕಾರ ವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ ॥**

**(ಪ್ರಕೃತಿ)**

**ಭಾವಾರ್ಥ :** ಪ್ರಕೃತಿ ನಿರ್ಮಾಣದ ಪ್ರಕಾರ ಕರ್ಮದಿಂದ ಉಂಟಾಗುವ ಗುಣ ಪ್ರೇರಣೆ ಮೂಲಕ ನಡೆಯುವ ಎಲ್ಲಾ ಕೆಲಸಗಳಿಗೂ, ಕರ್ತ ತಾನೇ ಎಂದು ಅಹಂಕಾರವಿರುವ ಅಜ್ಞಾನಿ ತಿಳಿಯುತ್ತಾನೆ.

**ವಿವರ :** ಪಂಚಭೂತಗಳಿಂದ ತಯಾರಾದ ಈ ಶರೀರದಲ್ಲಿ ಶಿರೋಭಾಗದಲ್ಲಿ ಕಣ್ಣಿಗೆ ಕಾಣಿಸದ ನಿರ್ಮಾಣವೊಂದಿದೆ. ಅದು ಎಲ್ಲರಿಗೂ ಮೂಲವಾದುದು. ಅದರಲ್ಲಿ ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳೆಂಬ ನಾಲ್ಕು ಚಕ್ರಾಕಾರ ಭಾಗಗಳು ಇವೆ. ಅದರಲ್ಲಿ ಕರ್ಮ ಗುಣಚಕ್ರಗಳು ಮಾನವನ ಬಗ್ಗೆ ಬಹಳ ಮುಖ್ಯವಾದವು. ಕರ್ಮಚಕ್ರದಲ್ಲಿ ಜೀವಾತ್ಮ ಗತದಲ್ಲಿ ಮಾಡಿಕೊಂಡ ಪಾಪಪುಣ್ಯಗಳೆಲ್ಲವೂ ನಮೂದಿಸಲಾಗಿರುತ್ತವೆ! ಅವುಗಳನ್ನೇ ಕರ್ಮ ಎನ್ನುತ್ತೇವೆ. ಆ ಕರ್ಮದ ಪ್ರಕಾರ ಕೆಳಗಿನ ಚಕ್ರದಲ್ಲಿ 3 ಭಾಗಗಳಲ್ಲಿನ ಗುಣಗಳು ಪ್ರೇರೆಪಿಸಲ್ಪಟ್ಟು, ಆ ಗುಣಗಳ ಪ್ರಕಾರ ಹೊರಗಿನ ಕಾರ್ಯಗಳು ನಡೆಯುತ್ತಿರುತ್ತವೆ. ಎಂದರೆ ಒಂದು ಕೆಲಸ ನಡೆಯುವುದಕ್ಕೆ ಕರ್ಮಚಕ್ರದಲ್ಲಿನ ಕರ್ಮಕಾರಣವಾದರೆ ಅದರಿಂದ

ಪ್ರೇರೇಪಿಸಲ್ಪಟ್ಟ ಗುಣಗಳ ಮೂಲಕ ಕಾರ್ಯ ಆಚರಣೆಗೆ ಬರುತ್ತಿದೆ. ಇದು ಕಾರ್ಯ ನಡೆಯುವುದಕ್ಕೆ ಶರೀರದಲ್ಲಿ ನೆಲೆಗೊಳಿಸಿದ ಸೂತ್ರಬದ್ಧ ನಿರ್ಮಾಣವಾಗಿದೆ. ಹೊರಗಿನ ಕಾರ್ಯ ಒಳ್ಳೆಯದಾ ಕೆಟ್ಟದ್ದಾ ಎನ್ನುವುದು ಒಳಗಿನ ಕರ್ಮದ ಪ್ರಕಾರ ಇರುತ್ತದೆ. ಒಳಗಿರುವ ಕರ್ಮದಲ್ಲಿನ ಪಾಪವು ಆಚರಣೆಗೆ ಬಂದಾಗ, ಜೀವಾತ್ಮ ಕಷ್ಟವನ್ನು ನಷ್ಟವನ್ನು ಅನುಭವಿಸುತ್ತಿದ್ದಾನೆ. ಅದೇ ವಿಧವಾಗಿ ಪುಣ್ಯವು ಆಚರಣೆಗೆ ಬಂದಾಗ, ಸುಖವು ಅನುಭವಕ್ಕೆ ಬರುತ್ತದೆ. ಹೀಗೆ ಪಾಪಪುಣ್ಯಗಳು ಆಚರಣೆಗೆ ಬಂದು ಜೀವಾತ್ಮ ಸುಖದುಃಖಗಳು ಅನುಭವಿಸಬೇಕಾದ ಪದ್ಧತಿ ಪ್ರತಿ ಜೀವರಾಶಿಗೆ ನಿರ್ಮಾಣವಾಗಿದೆ. ಇದು ದೇವರು ನಿರ್ಮಿಸಿದ ಪ್ರಕೃತಿಯ ಪದ್ಧತಿ. ದೈವನಿರ್ಮಿತವಾದ ಪ್ರಕೃತಿ ಶಾಸನಗಳಲ್ಲಿ ಕರ್ಮ, ಗುಣಗಳು, ಕಾರ್ಯಗಳೆನ್ನುವವು ಒಳಗೊಂಡಿವೆ. ಮಾನವನು ಕರ್ಮಾನುಸಾರ ಕಷ್ಟಸುಖಗಳು ಅನುಭವಿಸುವುದಕ್ಕೆ ಗುಣಗಳಿಂದ ಪ್ರೇರೇಪಿಸಲ್ಪಟ್ಟ ಕಾರ್ಯಗಳು ಮಾಡಬೇಕಾಗಿದೆ. ಹೊರಗೆ ಮಾನವನು ಒಂದು ಕೆಲಸವನ್ನು ಮಾಡುವುದಕ್ಕೆ ಪ್ರಕೃತಿ ನಿರ್ಮಿತವಾದ ಗುಣ ನಿರ್ಮಾಣ ಮೊದಲಾದವು ಮುಖ್ಯಕಾರಣವಾಗಿವೆ. ನಡೆಯುತ್ತಿರುವ ಕೆಲಸ ಒಳ್ಳೆಯದಾ ಕೆಟ್ಟದಾ ಎನ್ನುವುದು ಮುಖ್ಯವಲ್ಲ. ಅದಕ್ಕೆ ಕಾರಣವಾದ ಕರ್ಮ, ಗುಣಗಳು ಮುಖ್ಯ. ಹೊರಗೆ ನಡೆಯುವ ಕೆಲಸ ಯಾವುದಾದರೂ ಅದಕ್ಕೆ ಒಳಗಿನ ಕರ್ಮ, ಗುಣಗಳು ಸೂತ್ರಗಳಾಗಿವೆ. ಅವುಗಳಿಂದಲೇ ಎಲ್ಲಾ ಕೆಲಸಗಳು ನಡೆಯುತ್ತಿವೆಯೆಂದು ತಿಳಿಯದೇ ಎಲ್ಲದಕ್ಕೂ ನಾನೇ ಕಾರಣವೆಂದು, ನನ್ನಿಂದಲೇ ಎಲ್ಲಾ ಕೆಲಸಗಳು ನಡೆಯುತ್ತಿವೆ ಎಂದು, ಅಜ್ಞಾನದಿಂದ ತುಂಬಿಕೊಂಡು ಶರೀರದಲ್ಲಿ ಕೇವಲ ಒಂದು ಭಾಗವಾಗಿ, ಒಂದುಕಡೆ ಇರುವ ಜೀವಾತ್ಮ ಶರೀರ ಆಕಾರವೆಲ್ಲವೂ ನಾನೇ ಎಂಬ ಅಹಂಕಾರವನ್ನು ಹೊಂದುತ್ತಿದ್ದಾನೆ. ಆದ್ದರಿಂದ ಭಗವಂತನು ಪ್ರತ್ಯೇಕಿಸಿ ಈ ಶ್ಲೋಕವನ್ನು ಹೇಳುತ್ತಾ ಪ್ರಕೃತಿ ನಿರ್ಮಿತವಾದ ಕರ್ಮ ಗುಣಗಳ ಪ್ರಕಾರ ನಡೆಯುವ ಕೆಲಸಗಳಿಗೆ ನಾನೇ ಕರ್ತನೆಂದು ಅಹಂಕಾರ ಇರುವವನು ಅಂದುಕೊಳ್ಳುತ್ತಿದ್ದಾನೆಂದು ತಿಳಿಸಿದ್ದಾನೆ. ಅಂತಹವನಿಗೆ ಒಳ್ಳೆಯದು ಕೆಟ್ಟದ್ದು ಎನ್ನುವ ಭೇದವಿದೆ ಮತ್ತು ಪಾಪಪುಣ್ಯಗಳು ಇವೆಯೆಂದು ತಿಳಿಯಬೇಕು. ಜ್ಞಾನ ಹೊಂದಿದವರು ಏನು ತಿಳಿದು, ಹೇಗೆ ನಡೆದುಕೊಳ್ಳುತ್ತಾರೋ ಕೆಳಗಿನ ಶ್ಲೋಕದಲ್ಲಿ ನೋಡೋಣ.

**(2) ಶ್ಲೋ॥ 28 : ತತ್ತ್ವ ವಿತ್ತು ಮಹಾಬಾಹೋ! ಗುಣಕರ್ಮ ವಿಭಾಗಯೋಃ ।**
**ಗುಣಾಃ ಗುಣೇಷು ವರ್ತನ್ತ ಇತಿ ಮತ್ವಾನ ಸಜ್ಜತೇ ॥**

**(ಕರ್ಮಯೋಗ)**

**ಭಾವಾರ್ಥ :** ತತ್ತ್ವಜ್ಞಾನವನ್ನು ತಿಳಿದವರು, ಕರ್ಮ ಗುಣಗಳ ಭಾಗಗಳನ್ನು ತಿಳಿದವರಾಗಿ, ಗುಣಗಳಿಂದಲೇ ಕಾರ್ಯಗಳು ನಡೆಯುತ್ತಿವೆಂದು ತಿಳಿದಿರುತ್ತಾರೆ.

**ವಿವರ :** ಆತ್ಮಜ್ಞಾನ ತಿಳಿದವನಿಗೆ ಕರ್ಮಗಳೆಂದರೆ ಏನೋ, ಗುಣಗಳೆಂದರೆ ಏನೋ ಮುಖ್ಯವಾಗಿ ತಿಳಿದಿರಬೇಕು. ಕರ್ಮಗುಣಗಳ ವಿವರವನ್ನು ತಿಳಿಯದವನು ಆತ್ಮಜ್ಞಾನ ತಿಳಿಯದವನೆಂದೇ ಅರ್ಥ. ಆತ್ಮದ ವಿವರವನ್ನು ತಿಳಿಯಬೇಕೆಂದರೆ, ಆತ್ಮ ನಿವಾಸಿಸುವ ಶರೀರದ ವಿವರವನ್ನು ತಿಳಿದಿರಬೇಕು. ಶರೀರ ಒಂದು ಯಂತ್ರವಿದ್ದಂತೆ. ಶರೀರದಲ್ಲಿ ಒಂದಕ್ಕೊಂದು ಅನುಸಂಧಾನವಾದ ವಿಷಯಗಳು ಭಾಗಗಳು ಎಷ್ಟೋ ಇವೆ. ಶರೀರ ಯಂತ್ರಾಂಗದಲ್ಲಿ ಮುಖ್ಯವಾದವು ಕರ್ಮ, ಗುಣಗಳು. ಒಂದು ಇಂಜನ್ನಿನಲ್ಲಿ ಇಂಜನ್ನಿಗೆ ಇಂಧನವಾದ ಎಣ್ಣೆಯನ್ನು ಒದಗಿಸುವ ಕಾರ್ಭೋರೇಟರ್ ಮತ್ತು ಅದರ ಸ್ಪೀಡ್‌ನ್ನು ಕಂಟ್ರೋಲ್ ಮಾಡುವುದಕ್ಕೆ ಅಂದರೆ ಇಂಜನ್ ಸ್ಪೀಡ್‌ನ್ನು ಹೆಚ್ಚಿಸುವುದಕ್ಕು ತಗ್ಗಿಸುವುದಕ್ಕು ಇರುವ ಗವರ್ನರ್ ಎನ್ನುವ ಪರಿಕರಗಳು ಎಷ್ಟು ಮುಖ್ಯವೋ, ಶರೀರವೆಂಬ ಯಂತ್ರಕ್ಕೆ ಕರ್ಮ, ಗುಣಗಳು ಅಷ್ಟೇ ಮುಖ್ಯವೆಂದು ತಿಳಿಯಬೇಕು. ಇಂಜನಿನಲ್ಲಿನ ಗವರ್ನರ್, ಕಾರ್ಭೋರೇಟರ್ ಕೆಲಸಮಾಡಿದಾಗ ಇಂಜನ್ ಕೆಲಸಮಾಡುತ್ತದೆ. ಹಾಗೆಯೇ ಶರೀರದಲ್ಲಿನ ಕರ್ಮ, ಗುಣಗಳು ಕೆಲಸ ಮಾಡಿದಾಗಲೇ ಶರೀರ ಕೆಲಸ ಮಾಡುತ್ತಿದೆ. ಇಂಜನಿನಲ್ಲಿ ಕಾರ್ಭೋರೇಟರ್ ಬೇರೆ ಯೆಂದು, ಗವರ್ನರ್ ಬೇರೆಯೆಂದು, ಕದಲುವ ಭಾಗಗಳಾದ ಪಿಸ್ಟನ್‌ಗಳು, ಚಕ್ರಗಳು ಬೇರೆಯೆಂದು, ತಿಳಿದಾಗಲೇ ಯಾವುದರಿಂದ ಇಂಜನ್ ಚಲಿಸುತ್ತಿದೆ ಎಂದು ತಿಳಿಯುತ್ತದೆ. ಹಾಗೆ ಶರೀರದಲ್ಲಿ ಕರ್ಮ, ಗುಣಗಳು ಬೇರೆಯೆಂದು, ಶರೀರದಲ್ಲಿನ ಕದಲುವ ಅವಯವಗಳು ಬೇರೆಯೆಂದು, ತಿಳಿದಾಗಲೇ ಶರೀರವು ಯಾವ ಕಾರಣದಿಂದ ಕದಲುತ್ತಿದೆ ಎಂದು ತಿಳಿಯುತ್ತದೆ.

**ಒಬ್ಬ ಮೆಕಾನಿಕ್‌ಗೆ ಯಂತ್ರದ ಪೂರ್ತಿ ವಿವರ ತಿಳಿದಂತೆ, ಆತ್ಮ ಜ್ಞಾನ ತಿಳಿದವನಿಗೆ ಶರೀರದಲ್ಲಿನ ಕರ್ಮ ಗುಣಗಳೊಂದರ ವಿಭಾಗಗಳ ವಿವರ ಪೂರ್ತಿಯಾಗಿ ತಿಳಿದಿರುತ್ತದೆ.** ಅಂತಹವನು ಕರ್ಮದಿಂದ ಗುಣಗಳು ಪ್ರೇರೇಪಿಸಲ್ಪಡುತ್ತಿವೆಂದು, ಆ ಗುಣಗಳಿಂದ ಶರೀರದ ಮೂಲಕ ಸರ್ವ ಕಾರ್ಯಗಳು ನಡೆಯುತ್ತಿವೆಯೆಂದು, ಹೊರಗೆ ನಡೆಯುವ ಒಳ್ಳೆಯ ಕೆಟ್ಟ ಕಾರ್ಯಗಳಿಗೆ ಒಳಗಿರುವ ಕರ್ಮ, ಗುಣಗಳೇ ಕಾರಣವೆಂದು, ಜೀವಾತ್ಮನಾದ ತಾನು ಮಾತ್ರ ಯಾವ ಕಾರ್ಯಕ್ಕೂ ಕಾರಣ ಅಲ್ಲವೆಂದು, ಶರೀರದ ಮೂಲಕ ನಡೆಯುವ ಕೆಲಸಗಳಲ್ಲಿ ತಟಸ್ಥನಾಗಿರಬೇಕೆಂದು ತಿಳಿದು, ತಾನು ಕೆಲಸಗಳು ಮಾಡುತ್ತಿದ್ದರು ಅವುಗಳ ಮೇಲೆ ಆಸಕ್ತಿಯಿಲ್ಲದವನಾಗಿರುತ್ತಾನೆ. ಶರೀರದಲ್ಲಿ ನಾನು ಒಂದು ಭಾಗವಾದ ಜೀವಾತ್ಮವೆಂದುಕೊಂಡು, ಶರೀರದ ಆಕಾರ ನಾನು ಅಲ್ಲವೆಂದುಕೊಂಡು, ಅಹಂಕಾರ ಇಲ್ಲದಂತೆ ಕೆಲಸಗಳು ಮಾಡುತ್ತಿರುತ್ತಾನೆ.

**(2) ಶ್ಲೋ॥ 29 : ಪ್ರಕೃತೇರ್ಗುಣ ಸಂಮೂಢಾ ಸ್ಸಜ್ಜನ್ತೇ ಗುಣಕರ್ಮಸು ।**
**ತಾನಕೃತ್ಸ್ನ ವಿದೋ ಮಂದಾನ್ಕೃತ್ಸ್ನವಿನ್ನ ವಿಚಾಲಯೇತ್ ॥**

**(ಪ್ರಕೃತಿ)**

**ಭಾವಾರ್ಥ :** ಪ್ರಕೃತಿ ಜನಿತ ಗುಣಗಳಲ್ಲಿ ಸಿಲುಕಿಕೊಂಡಿರುವ ಮನುಷ್ಯರಿಗೆ ಆ ಗುಣಗಳ ಕಾರ್ಯಗಳಲ್ಲಿಯೇ ಕರ್ಮಗಳ ಪ್ರಕಾರ ಆಸಕ್ತಿ ಉಂಟುಮಾಡುತ್ತದೆ. ಜ್ಞಾನಿಗಳಾಗುವವರು ಅಂತಹ ಅಜ್ಞಾನಪರರನ್ನು ಬಲಪಡಿಸಲು ಪ್ರಯತ್ನಿಸಬಾರದು.

**ವಿವರ :** ಕರ್ಮಪ್ರೇರಣೆಯಿಂದ ಗುಣಗಳ ಪ್ರಕಾರ ಕಾರ್ಯಗಳು ಮಾಡುವುದಕ್ಕೆ ಸಮಸ್ತ ಮಾನವರ ಬಗ್ಗೆ ನಿರ್ಮಿಸಲ್ಪಟ್ಟ ಪ್ರಕೃತಿ ಧರ್ಮ. ಅಗ್ನಿಗೆ ಸುಡುವುದು ಧರ್ಮ, ಹಾಡಿಗೆ ರಾಗವು ಧರ್ಮ, ಹಾಗೆ ಮಾನವನಿಗೆ ಕರ್ಮದ ಪ್ರಕಾರ ಉಂಟಾಗುವ ಗುಣಗಳ ಕಾರ್ಯಗಳು ಮಾಡುವುದು ಧರ್ಮ. **ಮಾತಿಗೆ ಶಬ್ಧವನ್ನು ಹೇಗೆ ದೂರ ಮಾಡಲಾರೆವೋ, ಹಾಡಿಗೆ ರಾಗವನ್ನು ಹೇಗೆ ಇಲ್ಲದಂತೆ ಮಾಡಲಾರೆವೋ, ಹಾಗೆ ಕರ್ಮಬದ್ಧನಾದ ಮಾನವನನ್ನು ಆ ಕರ್ಮ ಪ್ರೇರಣೆಯಿಂದ ಉಂಟಾಗುವ ಗುಣಗಳ ಪ್ರಕಾರ ಕದಲದಂತೆ ಮಾಡಲಾರೆವು ಇದೇ ಗೀತೆಯಲ್ಲಿ ಭಗವಂತನು ತಿಳಿಸಿದ ಮುಖ್ಯವಾದ ಪ್ರಕೃತಿ ಧರ್ಮ**. ಈ ಧರ್ಮದ ಪ್ರಕಾರ ಜ್ಞಾನಿಯಾದರೂ ಅಜ್ಞಾನಿಯಾದರೂ ನಡೆಯದೆ ತಪ್ಪುವುದಿಲ್ಲ.

ಒಂದು ಜೀವನದಲ್ಲಿನ ಅನೇಕ ಸಂಘಟನೆಗಳನ್ನು ಹೊಂದಿದ ಚಲನಚಿತ್ರವನ್ನು ಮೂರು ಗಂಟೆಗಳಕಾಲ ನಾವು ನೋಡುತ್ತಿದ್ದೇವೆ. ಆ ಚಿತ್ರದಲ್ಲಿನ ಅನೇಕ ದುಃಖ ಸಂಘಟನೆಗಳನ್ನು, ಎಷ್ಟೋ ಹಾಸ್ಯ ಸಂಘಟನೆಗಳು, ಮತ್ತೆಷ್ಟೋ ಸಂತೋಷ ಸಂಘಟನೆಗಳು ಮೊದಲಾದ ಎಷ್ಟೋ ವಿಧಗಳಾದ ವಿಷಯಗಳು ನಡೆಯುವುದು ನೋಡುತ್ತಿದ್ದೇವೆ. ಇವೆಲ್ಲ ಬಿಳಿಯ ತೆರೆಯ ಮೇಲೆ ನೋಡುತ್ತಿದ್ದೇವೆ. ಬಿಳಿಯ ಬಟ್ಟೆಯ ಮೇಲೆ ಇಷ್ಟು ಸಂಘಟನೆಗಳು ಉಂಟಾಗುವುದಕ್ಕೆ ಪ್ರೋಜೆಕ್ಟರ್‌ನಲ್ಲಿನ ಫಿಲ್ಮುಕಾರಣ. ಚಿತ್ರದಲ್ಲಿನ ಸಂಘಟನೆಗಳೆಲ್ಲವೂ ಫಿಲ್ಮಿನಲ್ಲಿ ಸಣ್ಣದಾಗಿ ಚಿತ್ರಿಸಲ್ಪಟ್ಟಿದ್ದು, ಚಿತ್ರಿಸಲ್ಪಟ್ಟ ವರಸೆ ಪ್ರಕಾರ ತೆರೆಯ ಮೇಲೆ ಪ್ರೋಜೆಕ್ಟರ್ ಮೂಲಕ ದೊಡ್ಡದಾಗಿ ಕಾಣಿಸುತ್ತಿವೆ. ಚಿತ್ರಮಂದಿರದಲ್ಲಿ ಒಂದು ಚಿತ್ರವನ್ನು ನಾವು ನೋಡಬೇಕೆಂದರೆ ಅದಕ್ಕೆ ಅಗತ್ಯವಾದ ಮೊದಲನೆಯದು ಫಿಲ್ಮು, ಎರಡನೆಯದು ಪ್ರೋಜೆಕ್ಟರ್, ಮೂರನೆಯದು ಬಿಳಿಯ ಪರದೆ (ತೆರೆ) ಹಾಗೆ ಒಂದು ಕಾರ್ಯ ನಡೆಯಬೇಕೆಂದರೆ ಮೊದಲನೆಯದು ಕರ್ಮ, ಎರಡನೆಯದು ಗುಣಗಳು, ಮೂರನೆಯದು ಕರ್ಮೇಂದ್ರಿಯಗಳು.

ಯಾವ ವಿಧವಾಗಿ ಫಿಲ್ಮು ಇಲ್ಲದೆ ಚಿತ್ರವಿಲ್ಲವೋ, ಹಾಗೆ ಕರ್ಮಇಲ್ಲದೆ ಅಸಲು ಜೀವನವೇ ಇಲ್ಲ. ಫಿಲ್ಮ್ ಕಾರಣವಾಗಿ ಒಂದು ಚಿತ್ರ ಹೇಗೆ ನಡೆಯುತ್ತಿದೆಯೊ, ಹಾಗೆ ಕರ್ಮ ಕಾರಣವಾಗಿ ಒಂದು ಜೀವನ ನಡೆಯುತ್ತಿದೆ. ಫಿಲ್ಮಿನಲ್ಲಿ ಯಾವ ಸಂಘಟನೆಗಳು ಸಣ್ಣದಾಗಿ ಮುದ್ರಸಲ್ಪಟ್ಟಿವೆಯೋ, ಅವುಗಳೇ ಪರದೆ ಮೇಲೆ ಕಾಣಿಸುತ್ತವೆಂಬುವುದು ಜಗವೇ ತಿಳಿದ ಸತ್ಯ. ಆದರೆ ಕರ್ಮದಲ್ಲಿ ಏನು ರಿಕಾರ್ಡಾಗಿದೆಯೋ, ಅದೇ ಕರ್ಮೇಂದ್ರಿಯಗಳಾದ ಕಾಲು, ಕೈಗಳು, ಬಾಯಿ ಮೊದಲಾದವುಗಳ ಮೂಲಕ ನಡೆಯುತ್ತಿವೆ ಎನ್ನುವುದು ಜಗತ್ತಿಗೆ ತಿಳಿಯದ ಸತ್ಯ. ಸಿನಿಮಾ ಹಾಲ್, ಫಿಲ್ಮು, ಪ್ರೋಜೆಕ್ಟರ್, ಪರದೆ ನಮಗೆ ತಿಳಿಯುತ್ತದೆ. ಆದ್ದರಿಂದ ಹಾಲ್‌ನಲ್ಲಿ ಫಿಲ್ಮು ಯಾವುದಾದರೆ ಸಿನಿಮಾ ಅದೇ ಎಂದು ಎಲ್ಲರಿಗೂ ತಿಳಿಯುತ್ತಿದೆ. ಆದರೆ ಕರ್ಮ, ಗುಣಗಳು, ಶರೀರ, ಕರ್ಮೇಂದ್ರಿಗಳನ್ನು ಕುರಿತು ನಮಗೆ ತಿಳಿದಿಲ್ಲ. ಆದ್ದರಿಂದ ಶರೀರದಲ್ಲಿನ ಕರ್ಮ ಯಾವುದಾದರೆ ಅದೇ ಕಾರ್ಯ ನಡೆಯುತ್ತದೆಂದು ನಮಗೆ ತಿಳಿಯದೆಹೋಗಿದೆ. ನಮಗೆ ತಿಳಿದರು ತಿಳಿಯದೆಹೋದರು ಫಿಲ್ಮುನಲ್ಲಿನ ಗೊಂಬೆಯೆ ಪರದೆ ಮೇಲಕ್ಕೆ ಬಂದು ಆಡುವಂತೆ, ಕರ್ಮದೊಳಗಿರುವ ಸಂಘಟನೆಗಳೇ ಕರ್ಮೇಂದ್ರಿಯಗಳ ಮೂಲಕ ಕಾರ್ಯವಾಗಿ ನಡೆದೇನಡೆಯುತ್ತದೆ. ಈ ವಿಷಯ ಬಹಳ ಜನರಿಗೆ ತಿಳಿದಿಲ್ಲ. ಆದ್ದರಿಂದ ಅವರೆಲ್ಲರೂ ನಡೆಯುತ್ತಿರುವ ಕಾರ್ಯವನ್ನೇ ನೋಡುತ್ತಿದ್ದಾರೆ. ಆದರೆ ಹಿಂದಿರುವ ಕರ್ಮವನ್ನು ನೋಡಲಾರದೆ ಹೋಗುತ್ತಿದ್ದಾರೆ.

**(ಹಾಲ್‌ನಲ್ಲಿ ಚಿತ್ರಪದ್ಧತಿ)** **(ಶರೀರದಲ್ಲಿ ಜೀವನದ ಪದ್ಧತಿ)**







ಅನುಭೂತಿ ಹೊಂದುವವನು ಪ್ರೇಕ್ಷಕನು ಅನುಭೂತಿ ಹೊಂದುವವನು ಜೀವಾತ್ಮ

ಬಾಹ್ಯವಾಗಿ ನಡೆಯುವ ಕಾರ್ಯಗಳನ್ನು ಒಳ್ಳೆಯವು ಕೆಟ್ಟವು, ಎಂದು ಎರಡಾಗಿ ವಿಭಜಿಸಬಹುದು. ನಡೆಯುತ್ತಿರುವವು ಒಳ್ಳೆಯವಾದರು, ಕೆಟ್ಟವಾದರು ಅವುಗಳಿಗೆ ಒಳಗಿರುವ ಕರ್ಮವೇ ಕಾರಣ. ಫಿಲ್ಮುನಲ್ಲಿ ಇರುವುದೇ ಪರದೆ ಮೇಲೆ ಚಿತ್ರವಾದಂತೆ, ಕರ್ಮದಲ್ಲಿರುವುದೇ ಕರ್ಮೇಂದ್ರಿಯಗಳ ಮೇಲೆ ಕಾರ್ಯವಾಗುತ್ತಿದೆ. ಒಳಗಿರುವ ಕರ್ಮ ಒಳ್ಳೆಯದಾದರೆ ಒಳ್ಳೆಯ ಕಾರ್ಯಗಳು, ಕೆಟ್ಟದಾದರೆ ಕೆಟ್ಟಕಾರ್ಯಗಳು ಮಾನವರಲ್ಲಿ ನಡೆದೇನಡೆಯುತ್ತವೆ. ಈ ವಿಷಯವನ್ನು ತಿಳಿಯದವರು, ಒಬ್ಬ ಕಳ್ಳನನ್ನು ನೋಡಿ ನೀನು ಕೆಟ್ಟಕಾರ್ಯಗಳು ಮಾಡುತ್ತಿದ್ದೀಯಾ, ಆ ಕೆಲಸ ಮಾಡಬೇಡವೆಂದು ಹೇಳಿದರೂ, ಆತನು ಆಗ ಕಳ್ಳತನ ಮಾಡಬಾರದೆಂದು, ಅದರಿಂದ ಪಾಪ ಬರುತ್ತದೆಂದುಕೊಂಡರೂ, ಎರಡನೆ ಸಲ ನಡೆಯುವ ಕರ್ಮವಿದ್ದರೆ ತಪ್ಪದೇ ನಡೆದೆತೀರುತ್ತದೆ. ಹಾಗೆ ನಡೆದ ಕಾರ್ಯ ಎಂದರೆ ಕಳ್ಳತನವನ್ನು ಕುರಿತು ಆ ಕಳ್ಳ ನಾನು ಬೇಡವೆಂದುಕೊಂಡರೂ ಮತ್ತೆ ಮಾಡಿದ್ದೇನೆ ಇನ್ನು **"ನಾನು ಒಳ್ಳೆಯವನಾಗಿ ಬದಲಾಗುವುದಿಲ್ಲ"** ಎಂದು ಚಿಂತಿಸುವನು. ತಿಳಿದವನು ಕರ್ಮ ರಹಸ್ಯವನ್ನು ತಿಳಿಸದೆ ಒಳ್ಳೆಯ ಕೆಟ್ಟ ಭೇದವು ತೋರಿಸಿ ಅವನನ್ನು ಕಳವಳ ಪಡಿಸಬಾರದು. ಕರ್ಮ ಸಿದ್ಧಾಂತವನ್ನು, ದೇಹ ಧರ್ಮಗಳನ್ನು ತಿಳಿಸಿ, ಕರ್ಮಬದಲಾದರೆ ಕಾರ್ಯ ಬದಲಾಗುತ್ತದೆಂದು ತಿಳಿಸಿ, ಅವನಿಗೆ ಕರ್ಮ ಅಂಟದಂತೆ ತಿಳಿಸಬೇಕಾಗಲಿ, ಕಾರ್ಯವನ್ನು ಕುರಿತು ಚಿಂತಿಸುವಂತೆ ಮಾಡಬಾರದೆಂದು ಭಗವಂತನು ಮೇಲಿನ ಶ್ಲೋಕದಲ್ಲಿ ತಿಳಿಸಿದ್ದಾನೆ. ಆಗ ತಾನು ಮಾಡುತ್ತಿರುವುದು ಹತ್ಯೆಗಳು, ಅದರಿಂದ ಪಾಪಬರುತ್ತದೆಂದು, ತನ್ನ ಕೆಲಸ ಒಳ್ಳೆಯದಲ್ಲವೆಂದು ಚಿಂತಿಸಿದ ಅರ್ಜುನನಿಗೆ, ಕಾರ್ಯಚಿಂತೆ ಬಿಟ್ಟು ಕರ್ಮ ಅಂಟದಂತೆ ಯುದ್ಧ ಮಾಡೆಂದು ಕೆಳಗಿನ ಶ್ಲೋಕದಲ್ಲಿ ಭಗವಂತನು ಯಾವ ಉಪಾಯವನ್ನು ಹೇಳುತ್ತಿದ್ದಾನೋ ಪರಿಶೀಲಿಸಿ ನೋಡೋಣ.

**(2) ಶ್ಲೋ॥ 30 : ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮ ಚೇತಸಾ ।**
**ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತ ಜ್ವರಃ ॥**
**(ಕರ್ಮಯೋಗ)**

**ಭಾವಾರ್ಥ :** ಸರ್ವ ಕರ್ಮಗಳನ್ನು ನನ್ನಲ್ಲಿಯೇ ಸನ್ಯಸಿಸಿ, ಆಧ್ಯಾತ್ಮಿಕಚಿಂತನೆ ಮಾಡುತ್ತಾ, ರಾಜ್ಯಕಾಂಕ್ಷೆ, ನನ್ನವರೆಂಬ ಮೋಹವು ಮೊದಲಾದ ಗುಣಗಳನ್ನು ಇಲ್ಲದಂತೆ ಮಾಡಿಕೊಂಡು, ಉಂಟಾದ ತಾಪವನ್ನು ಬಿಟ್ಟು ಯುದ್ಧವನ್ನು ಮಾಡು.

**ವಿವರ :** ಇಲ್ಲಿ ಭಗವಂತನು ಸರ್ವ ಕರ್ಮಗಳೆಂದು ಹೇಳುವುದರಲ್ಲಿ ವಿಶೇಷವನ್ನು

ಪ್ರತಿಯೊಬ್ಬರು ಗ್ರಹಿಸಬೇಕು. ಪಾಪಬರುವ ಕೆಟ್ಟಕಾರ್ಯಗಳು, ಪುಣ್ಯವನ್ನು ತಂದಿಡುವ ಒಳ್ಳೆಯ ಕಾರ್ಯಗಳು ಎರಡನ್ನು ಸೇರಿಸಿ ಸರ್ವ ಕಾರ್ಯಗಳೆಂದು, ಅವುಗಳ ಫಲಿತವನ್ನು ಸರ್ವಕರ್ಮಗಳೆಂದು ಹೇಳುವುದು ನಡೆದಿದೆ. ಗತ ಜನ್ಮದಲ್ಲಿನ ಕರ್ಮ ಪ್ರಾರಬ್ಧವಾದಾಗ, ಅದರ ವರಸೆ ಕ್ರಮದಲ್ಲಿ ಯಾವ ಕಾರ್ಯ ನಡೆಯಬೇಕೋ ಆ ಕಾರ್ಯ ನಡೆದೇ ನಡೆಯುತ್ತದೆ. ನಡೆದ ಕಾರ್ಯಗಳಲ್ಲಿ ಜೀವಾತ್ಮ ಅಹಂಕಾರ ಭಾವವನ್ನು ಹೊಂದಿರುವುದರಿಂದ, ಮತ್ತೆ ಆ ಕಾರ್ಯ ಹೊಸ ಕರ್ಮವಾದ ಆಗಾಮಿಕವಾಗಿ ಬದಲಾಗಿ ತಲೆಗೇರುತ್ತದೆ. ಹಾಗೆ ಹೊಸಕರ್ಮ ನಮ್ಮ ತಲೆಗೇರಬಾರದೆಂದರೆ ಕರ್ಮ ಯೋಗವನ್ನು ಆಚರಿಸುವುದೊಂದೇ ಮಾರ್ಗ. ಅದು ಸುಲಭವಾಗಿ ಅರ್ಥವಾಗಬೇಕೆನ್ನುವುದಕ್ಕೆ ಭಗವಂತನು ಕರ್ಮಗಳನ್ನು ನನಗೆ ಬಿಟ್ಟು ಕಾರ್ಯಗಳು ಮಾಡೆಂದಿದ್ದಾನೆ. ಕಾರ್ಯವನ್ನು ಮಾಡುವುದರಲ್ಲಿ ಕಾರ್ಯದ ಮೇಲೆ ಆಸೆಯಾಗಲಿ, ನನ್ನದು, ನಾನು ಎನ್ನುವ ಮೋಹ ಇಲ್ಲದಂತೆ ಮಾಡೆಂದಿದ್ದಾನೆ. ಹಾಗೆ ಮಾಡುವುದು ಯುದ್ಧವಾದರೂ ಅದರಿಂದ ಕರ್ಮ ಅಂಟುವುದಿಲ್ಲವೆಂದಿದ್ದಾನೆ.

**(2) ಶ್ಲೋ॥ 31 : ಯೇಮೇ ಮತ ಮಿದಂ ನಿತ್ಯಮನು ತಿಷ್ಠನ್ತಿ ಮಾನವಾಃ ।**
**ಶ್ರದ್ಧಾವನ್ತೋಽ ನಸೂಯನ್ತೋ ಮುಚ್ಯನ್ತೇ ತೇಽಪಿ ಕರ್ಮಭಿಃ ॥**
**(ಕರ್ಮಯೋಗ, ಜೀವಾತ್ಮ)**

**ಭಾವಾರ್ಥ :** ಯಾರಾದರೆ ನಾನು ಹೇಳಿದ ಈ ನನ್ನ ಪದ್ಧತಿಯನ್ನು ಇಷ್ಟವಾದವರಾಗಿ ಪೂರ್ತಿ ಶ್ರದ್ದೆಹೊಂದಿ ಅಸೂಯೆ ಇಲ್ಲದವರಾಗಿ ಅನುಸರಿಸುತ್ತಾರೋ ಅವರಿಗೆ ಕರ್ಮ ಅಂಟುವುದಿಲ್ಲ ಎಂದಿದ್ದಾನೆ.

**ವಿವರ :** ಮೇಲೆ ನಡೆಯುವ ಕಾರ್ಯಗಳಿಗೆ ಒಳಗಿನ ಕರ್ಮ ಕಾರಣವೆಂದು ತಿಳಿದು, ಕಾರ್ಯಗಳನ್ನು ತಳ್ಳಿ ಹಾಕುವ ಪ್ರಯತ್ನ ಮಾಡಿದರೂ ಪ್ರಯೋಜನೆ ಇಲ್ಲವೆಂದು ತಿಳಿದು, ಕರ್ಮವನ್ನೇ ತಳ್ಳಿ ಹಾಕಬೇಕೆನ್ನುವ ನನ್ನ ಪದ್ಧತಿ ಇಷ್ಟಪಟ್ಟವರಾಗಿ, ನಾನು ಹೇಳಿದ ಜ್ಞಾನದ ಪ್ರಕಾರ ಶ್ರದ್ಧೆಹೊಂದಿ, ಒಳ್ಳೆಯ ಕೆಟ್ಟ ಕಾರ್ಯಗಳು ಪ್ರಾರಬ್ಧದ ಪ್ರಕಾರ ಬರುತ್ತವೆಂದು, ನಡೆಯುತ್ತಿರುವ ಕಾರ್ಯಗಳನ್ನು ಕುರಿತು ಯೋಚಿಸದೆ, ಬರುವ ಕರ್ಮ ಅಂಟದಂತೆ ಯಾರಾದರೆ ಪ್ರಪಂಚದಲ್ಲಿ ಕೆಲಸಗಳು ಮಾಡುತ್ತಾರೊ, ಅವರೇ ನಿಜವಾದ

ಕರ್ಮಯೋಗಿಗಳೆಂದು, ಅಂತಹವರಿಗೆ ಅವರು ಮಾಡುವ ಕೆಲಸಗಳಲ್ಲಿ ಬರುವ ಕರ್ಮ ಅಂಟುವುದಿಲ್ಲವೆಂದಿದ್ದಾನೆ.

**(2)ಶ್ಲೋ॥ 32 : ಯೇ ತ್ವೇತದಭ್ಯ ಸೂಯನ್ತೋ ನಾನುತಿಷ್ಠನ್ತಿ ಮೇ ಮತಮ್ ।**
**ಸರ್ವಜ್ಞಾನ ವಿಮೂಢಾಂ ಸ್ತಾನ್ ವಿದ್ಧಿ ನಷ್ಟಾನಚೇತಸಃ ॥**

**(ಕರ್ಮಯೋಗ, ಜೀವಾತ್ಮ)**

**ಭಾವಾರ್ಥ :** ಯಾರಾದರೆ ನನ್ನ ಪದ್ಧತಿ ಮೇಲೆ ಅಸೂಯೆ ಹೊಂದಿ ಅನುಸರಿಸುವುದಿಲ್ಲವೋ, ಅಂತಹವನು ನಾನು ಹೇಳಿದ ಎಲ್ಲಾ ಜ್ಞಾನಗಳಿಗೂ ಮೂಢನಾಗಿ ಜ್ಞಾನಮಾರ್ಗದಲ್ಲಿ ಪೂರ್ತಿ ನಷ್ಟ ಹೊಂದಿದವನಾಗುತ್ತಾನೆ.

**ವಿವರ :** ಸಹಜವಾಗಿ ಎಷ್ಟೋಜನ ಒಳ್ಳೆಯ ಕೆಟ್ಟ ಕಾರ್ಯಗಳ ಭೇದವು ಹೊಂದಿರುತ್ತಾರೆ. ಅವರಿಗೆ ಜ್ಞಾನ ತಿಳಿಯದಿರುವಾಗ, ಕಾರ್ಯಗಳು ಯಾವ ವಿಧವಾಗಿ ನಡೆಯುತ್ತಿವೆಯೋ ಅವುಗಳ ವಿಧಾನ ತಿಳಿಯದಿರುವಾಗ, ಕೆಟ್ಟದನ್ನು ಸಹಿಸಲಾರದಂತಿರುವುದು ಸಹಜವೇ. ಒಳ್ಳೆಯದನ್ನು ಕೆಟ್ಟದ್ದನ್ನು ಎರಡನ್ನು ಸಮಾನವಾಗಿ ತಿಳಿದು, ಏನು ನಡೆದರೂ ಕರ್ಮ ಅಂಟದ ವಿಧಾನ ಇದೆಯೆಂದಾಗ, ಎಷ್ಟೋಜನರಿಗೆ ಚೋದ್ಯವಾಗಿ ಕಾಣಿಸಿ ಆ ವಿಧಾನ ಇಷ್ಟವಾಗದೆ, ಆ ವಿಧಾನ ಹೇಳಿದವನ ಮೇಲೆಯೇ ಅಸೂಯೆ ಏರ್ಪಡಿಸಿಕೊಳ್ಳುವ ಅವಕಾಶವಿದೆ. ಅಂತಹವರಿಗೆ ಭಗವಂತನು ಹೇಳಿದ ಜ್ಞಾನ ಇಷ್ಟವಾಗದೆ ಪರಮಾತ್ಮ ಜ್ಞಾನಕ್ಕೆ ದೂರವಾಗುತ್ತಾರೆ. ಪ್ರಕೃತಿ ವಿಷಯಗಳೇ ಅವನಿಗೆ ಉತ್ತಮ ಜ್ಞಾನವಾಗಿ ಕಾಣಿಸುತ್ತಾ ಜ್ಞಾನಮಾರ್ಗದಲ್ಲಿ ಲಾಭ ಪಡೆಯುತ್ತಿದ್ದೇನೆಂದುಕೊಳ್ಳುವಂತೆ ಮಾಡಿ, ಜ್ಞಾನದಲ್ಲಿ ನಷ್ಟಹೋದವನಂತೆ ಮಾಡುತ್ತೇನೆ. ಅವನ ಮಾರ್ಗವೇ ಅವನಿಗೆ ದೊಡ್ಡದಾಗಿ ಕಾಣುವಂತೆ ಮಾಡುತ್ತೇನೆ. ನಿಜವಾಗಲು ಅವನು ಜ್ಞಾನಹೀನನಾಗಿ ಹೋಗುತ್ತಾನೆ.

**(2) ಶ್ಲೋ॥ 33 : ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾ ನವಾನಪಿ ।**
**ಪ್ರಕೃತಿಂ ಯಾನ್ತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ॥**

**(ಜೀವಾತ್ಮ)**

**ಭಾವಾರ್ಥ :** ಜ್ಞಾನಿಯಾದರೂ ತನ್ನೊಂದರ ಗತ ಜನ್ಮ ಸಂಸ್ಕಾರಗಳಿಗೆ ತಕ್ಕಂತೆ ನಡೆದುಕೊಳ್ಳುತ್ತಾನೆ. ಉಳಿದ ಜೀವರಾಶಿಗಳೂ ಸಹ ಅವು ಅವುಗಳ ಕರ್ಮಪ್ರಕಾರ ನಡೆಯುತ್ತಿವೆ, ಫಲಿತವನ್ನು ಪಡೆಯುತ್ತಿವೆ. ನಾನು ಹೀಗೆ ನಡೆಯಬಾರದೆಂಬ ನಿಗ್ರಹ ಯಾರಿಗೂ ಕೆಲಸಕ್ಕೆ ಬರುವುದಿಲ್ಲ.

**ವಿವರ** : ಚಲನಚಿತ್ರ ಪ್ರದರ್ಶನದಲ್ಲಿ ಫಿಲ್ಮು ಎಷ್ಟು ಮುಖ್ಯವೋ, ಜೀವನದಲ್ಲಿ ಕರ್ಮ ಅಷ್ಟೇ ಮುಖ್ಯವೆಂದು ಮೊದಲೆ ತಿಳಿದುಕೊಂಡಿದ್ದೇವೆ. ಫಿಲ್ಮ್‌ನನ್ನನುಸರಿಸಿ ಗೊಂಬೆ, ಸಂಘಟನೆಗಳು ಮೊದಲಾದವು ಚಿತ್ರದಲ್ಲಿರುತ್ತವೆ. ಫಿಲ್ಮುನನ್ನು ಬದಲಿಸಿದಂತೆ ಗೊಂಬೆಗಳನ್ನು ಬದಲಾವಣೆ ಮಾಡಬಹುದು ಎಂದುಕೊಂಡರೆ ಹೇಗೆ ಸಾಧ್ಯ ಆಗುವುದಿಲ್ಲವೋ, ಹಾಗೆ ಮಾನವನೊಳಗಿನ ಕರ್ಮ ಬದಲಿಸದೆ ಹೊರಗಿನ ಕಾರ್ಯಗಳನ್ನು ಬದಲಿಸಬೇಕೆಂದು ಕೊಂಡರೆ ಅದು ಸಾಧ್ಯವಾಗದ ಕೆಲಸ. ಧರ್ಮದ ಪ್ರಕಾರ ಪ್ರತಿ ಜೀವರಾಶಿ ಕರ್ಮಾನುಸಾರ ಚಲಿಸದೆ ತಪ್ಪುವುದಿಲ್ಲ. ವಿಷ್ಣು, ಈಶ್ವರ, ಬ್ರಹ್ಮ ಮೊದಲಾದವರು ದೇವತೆಗಳಾದರೂ ಕರ್ಮವನ್ನು ಅತಿಕ್ರಮಿಸಿ ನಡೆಯಲಾರರು. ಅವರೂ ಸಹ ಇರುವ ಕರ್ಮವನ್ನು ಅನುಭವಿಸದೆ ತಪ್ಪುವುದಿಲ್ಲ. ಮನುಷ್ಯ ಜ್ಞಾನಿಯಾದರೂ ತನ್ನ ಗತಜನ್ಮ ಕರ್ಮ ಪ್ರಾರಬ್ಧವಾಗಿ ಬಂದಾಗ ಅದು ಯಾವ ಕರ್ಮವಾದರೂ, ಅದರ ಪ್ರಕಾರ ಆತನು ನಡೆಯಬೇಕಾಗಿಬರುತ್ತದೆ. ಜ್ಞಾನಿಯಾದರೂ ತನ್ನ ಪ್ರವರ್ತನೆ ತನ್ನ ಕೈಯಲ್ಲಿರುವುದಿಲ್ಲ. ಆತನ ಪ್ರವರ್ತನೆ ಆತನೊಳಗೆ ನಿಕ್ಷಿಪ್ತವಾಗಿರುವ ಕರ್ಮವನ್ನನುಸರಿಸಿ ಇರುತ್ತದೆ. ದೊಡ್ಡ ಜ್ಞಾನವಂತನಾದರೂ ಆತನಿಂದ ಪ್ರಾರಬ್ಧ ಕರ್ಮರೀತ್ಯ ಒಂದೊಂದು ಸಲ ಕೆಟ್ಟಕಾರ್ಯ ವಾದರೂ ನಡೆಯಬಹುದು, ಅಥವಾ ಪ್ರತಿ ದಿನ ನೀಚ ವೃತ್ತಿಯಲ್ಲಾದರು ಆತನು ಬದುಕಬಹುದು. ಕರ್ಮರೀತ್ಯ ಹೊರಗೆ ನಡೆಯುವ ಕೆಲಸಗಳನ್ನನುಸರಿಸಿ ಜ್ಞಾನ ತಿಳಿಯದವರು ಆತನನ್ನು ನೀಚನೆಂದರೂ, ತಿಳಿದವರಲ್ಲಿ ಆತನು ದೊಡ್ಡ ಜ್ಞಾನಿಯೇ. ಭಗವಂತನು ಹೇಳಿದ ಈ ಪದ್ಧತಿಯೇ ಬಹಳ ಜನರಿಗೆ ಅರ್ಥವಾಗದೆ ಹೋಗಿದೆ. ಕರ್ಮವೊಂದರ ಪದ್ಧತಿ ತಿಳಿಯದವರು ಕಾರ್ಯಗಳನ್ನೇ ನೋಡುತ್ತಾ, ಎದುರುಗಿರುವವ ರನ್ನು ಕಡಿಮೆಯಾಗಿ ತಪ್ಪಾಗಿ ತಿಳಿಯುತ್ತಾರೆ. ಅಂತವರಿಗೆ ಭಗವದ್ಗೀತೆ ಪುಸ್ತಕದ ಅಹರ್ನಿಶೆಗಳು ಹತ್ತಿರವಿದ್ದರೂ, ಗೀತೆಯಲ್ಲಿನ ಭಾವ ಮಾತ್ರ ಬಹಳ ದೂರವಾಗಿರುತ್ತದೆಂದು ತಿಳಿಯಬೇಕು.

ಜ್ಞಾನಿಗಳಾದರೂ ತನ್ನ ಪೂರ್ವಜನ್ಮದ ಕರ್ಮಕ್ಕೆ ತಕ್ಕಂತೆ ನಡೆಯುವುದು ತಪ್ಪುವುದಿಲ್ಲವೆಂಬ ದೇವರ ಮಾತನ್ನು ಪ್ರತಿಯೊಬ್ಬರು ಗಮನಿಸಬೇಕು. ದೊಡ್ಡ ಜ್ಞಾನಿಗಳಾದ ಕರ್ಮಯೋಗಿಗಳೂ ಸಹ ಕರ್ಮಬಂಧನದ ಪ್ರಕಾರ ನಡೆಯುವುದು ತಪ್ಪದಿರುವಾಗ, ಸಾಮಾನ್ಯನು ಕರ್ಮದಿಂದ ತಪ್ಪಿಸಿಕೊಳ್ಳುತ್ತಾನಾ! ತನ್ನ ಧರ್ಮದ ಪ್ರಕಾರ ಕರ್ಮ ಯಾರನ್ನು ಬಿಡುವುದಿಲ್ಲ. ತನ್ನ ಲೀಸ್ಟಿನಲ್ಲಿ ಏನು ಇರುತ್ತದೋ ಅದರ ಪ್ರಕಾರವೇ ಪ್ರತಿಯೊಬ್ಬರನ್ನು ಆಡಿಸುತ್ತದೆ. ಆದ್ದರಿಂದ ಜ್ಞಾನಿಗಳಾದರು, ಸಾಮಾನ್ಯರಾದರು ಕರ್ಮದಪ್ರಕಾರ ಯಾವ ವೃತ್ತಿಯಲ್ಲಿ ನಡೆಯಬೇಕೊ, ಯಾವ ಸಮಯಕ್ಕೆ ಯಾವ ಕೆಲಸ ಮಾಡಬೇಕೋ ಅದನ್ನೇ

ಮಾಡಬೇಕಾಗಿರುತ್ತದೆ. ಹಾಗಲ್ಲದೆ ನಾನು ಈ ಕೆಲಸಗಳನ್ನು ಮಾತ್ರ ಮಾಡುತ್ತೇನೆ, ಆ ಕೆಲಸಗಳು ಮಾಡುವುದಿಲ್ಲವೆಂದುಕೊಳ್ಳುವುದು ಅವಿವೇಕ. ಅವನ ನಿಗ್ರಹ ಕರ್ಮದ ಮುಂದೆ ಏನು ಕೆಲಸಕ್ಕೆ ಬರುವುದಿಲ್ಲವೆಂದು ತಿಳಿಯಿರಿ. ಎಷ್ಟೋಜನ ಕೆಟ್ಟ ಕಾರ್ಯಗಳನ್ನು ಬಿಟ್ಟು ಒಳ್ಳೆಯ ಕಾರ್ಯಗಳನ್ನು ಮಾಡಿರೆಂದು ವೇದಿಕೆಗಳ ಮೇಲೆ ಹಿತವನ್ನು ಹೇಳುತ್ತಿರುತ್ತಾರೆ. ಆದರೆ ಆ ವಿಧವಾಗಿ ಹೇಳಿದವರೂ ಸಹ ಕೆಟ್ಟ ಕಾರ್ಯಗಳು ಮಾಡುವುದು ತಪ್ಪಲಿಲ್ಲ. ಕಾರಣ ಕರ್ಮವೆಂದು ತಿಳಿಯಬೇಕು. ಹೇಳುವವರಾಗಲಿ, ಹೇಳಿಸಿಕೊಳ್ಳುವವ ರಾಗಲಿ ಇರುವ ಕರ್ಮ ಪ್ರಕಾರ ನಡೆಯದೆ ತಪ್ಪುವುದಿಲ್ಲ. ಇದು ದೇವರ ಶಾಸನ, ಭಗವಂತನು ಹೇಳಿದ ಧರ್ಮ.

ಇಲ್ಲಿಯವರೆಗೂ ಹೇಳಿದ ವಿಧಾನಕ್ಕೆ ಪೂರ್ತಿ ಭಿನ್ನವಾಗಿರುವಂತೆ ಕೆಳಗಿನ ಶ್ಲೋಕ ಭ್ರಮಿಸುವಂತೆ ಮಾಡುತ್ತದೆ. ಇಂತಹ ಸಂದರ್ಭದಲ್ಲಿಯೇ ಮೆದುಳನ್ನು ಪೂರ್ತಿ ಉಪಯೋಗಿಸಿ ನೋಡಬೇಕು. ಅಷ್ಟು ಜಾಗ್ರತೆಯಾಗಿ ನೋಡಬೇಕಾಗಿರುವುದೇನೋ ಕೆಳಗೆ ನೋಡೋಣ.

**(2)ಶ್ಲೋ॥ 34 : ಇಂದ್ರಿಯ ಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ ।**
**ತಯೋರ್ನವಶ ಮಾಗಚ್ಛೇ ತ್ತೌ ಹ್ಯಸ್ಯ ಪರಿಪನ್ಥಿನೌ ॥**
**(ಬ್ರಹ್ಮಯೋಗ)**

**ಭಾವಾರ್ಥ**: ಪ್ರತಿ ಇಂದ್ರಿಯ ವಿಷಯದಲ್ಲಿ ರಾಗದ್ವೇಷಗಳು ಇವೆ. ಆ ರಾಗದ್ವೇಷಗಳಿಗೆ ಮನುಜರು ವಶವಾಗಬಾರದು. ಅವುಗಳನ್ನು ನಿಗ್ರಹಿಸಿಕೊಳ್ಳಬೇಕು. ಆ ರಾಗದ್ವೇಷಗಳು ಮನುಷ್ಯನಿಗೆ ಶತ್ರುಗಳಿದ್ದಂತೆ.

**ವಿವರ :** ಇಲ್ಲಿ ಹೇಳಿರುವ ಶ್ಲೋಕಕ್ಕಿಂತ ಮೊದಲ ಶ್ಲೋಕದಲ್ಲಿ ಮಾನವನ ನಿಗ್ರಹ ಪ್ರಯತ್ನ ಪ್ರಯೋಜನೆ ಇಲ್ಲ. ಕರ್ಮಪ್ರಕಾರ ಕಾರ್ಯಗಳು ನಡದೇ ನಡೆಯುತ್ತವೆಂದಿದ್ದೇವೆ. ಈಗ ಈ ಶ್ಲೋಕದಲ್ಲಿ ರಾಗದ್ವೇಷವೆನ್ನುವ ಗುಣಗಳಿಗೆ ವಶವಾಗಬಾರದೆಂದಾಗ ಆ ಗುಣಗಳ ಸಹವಾಸಕ್ಕೆ ನೀನು ಹೋಗಬೇಡವೆಂದು ಅರ್ಥ. ಅವು ಬಂದರೂ ಶತ್ರುಗಳಿಗೆ ದೂರವಾಗಿ ಇರುವಹಾಗೆ ದೂರವಾಗಿರಬೇಕೆಂದು ಅರ್ಥ. ಈ ಶ್ಲೋಕ ನಿಗ್ರಹಿಸಿಕೋ ಎಂದರೆ ಮೇಲಿನ ಶ್ಲೋಕ ನಿಗ್ರಹಿಸಿಕೊಳ್ಳಲಾರೆ ಎಂದು ಹೇಳುವುದು ನೋಡಿದರೆ, ಯಾರಿಗಾದರು ಹುಚ್ಚು ಹಿಡಿದಷ್ಟು ಕೆಲಸವಾಗುತ್ತದೆ. ಈ ಎರಡು ಶ್ಲೋಕಗಳಲ್ಲಿ ಭಗವಂತನು ವಾಸ್ತವವನ್ನೇ ಹೇಳಿದ್ದಾನಾಗಲಿ ಆತನು ಯಾವ ತಪ್ಪು ಹೇಳಲಿಲ್ಲ. ಏಕೆಂದರೆ! ಈ

ಎರಡು ಶ್ಲೋಕಗಳಲ್ಲಿಯೂ ವಿಧಾನಗಳು ಬೇರೆ ಇರುವುದು ಗ್ರಹಿಸಬೇಕಾಗಿದೆ. ಕಾರ್ಯಗಳಲ್ಲಿ ಯಾರು ನಿಗ್ರಹಿಸಿಕೊಳ್ಳುವುದಿಲ್ಲ ಎನ್ನುವುದು ವಾಸ್ತವ. ಆದರೆ ಕಾರ್ಯಗಳ ವಿಷಯ ಅಲ್ಲದೇ ಬ್ರಹ್ಮಯೋಗವನ್ನು ಆಚರಿಸಬೇಕೆಂದು ಪ್ರಯತ್ನಿಸುತ್ತಾ ಆಸನದ ಮೇಲೆ ಸುಮ್ಮನೆ ಕುಳಿತುಕೊಂಡವನಿಗೆ ಒಳ್ಳೆಯ ಕೆಟ್ಟ ಯೋಚನೆಗಳು ಬರುವುದು ಸಹಜ. ಆ ಸಂದರ್ಭದಲ್ಲಿ ಯೋಚನೆಗಳ ರೂಪದಲ್ಲಿ ಬರುವ ಗುಣಗಳನ್ನು ತಪ್ಪದೇ ನಿಗ್ರಹಿಸಬೇಕು. ಹಾಗೆ ನಿಗ್ರಹಿಸದ ಪಕ್ಷದಲ್ಲಿ ಅದು ಬ್ರಹ್ಮಯೋಗ ಆಗುವುದಿಲ್ಲ. ಶರೀರದಲ್ಲಿ ಯಾವೊಂದು ಗುಣವು ಕೆಲಸ ಮಾಡದಿರುವಾಗಲೇ ಬ್ರಹ್ಮಯೋಗವಾಗುತ್ತದೆ. ಬ್ರಹ್ಮಯೋಗದ ಭ್ರಷ್ಟತ್ವಕ್ಕೆ ಒಳಗಿನ ಗುಣಗಳೇ ಕಾರಣಗಳು. ಬ್ರಹ್ಮಯೋಗಿಗೆ ಮಾತ್ರ ರಾಗದ್ವೇಷಗಳು ಮೊದಲಾದ ಗುಣಗಳೆಲ್ಲವೂ ಪರಮ ಶತ್ರುಗಳಿಗೆ ಸಮಾನ. ಆದ್ದರಿಂದ ಬ್ರಹ್ಮಯೋಗ ಸಾಧಕನು ತಪ್ಪದೆ ಗುಣಗಳನ್ನು ನಿಗ್ರಹಿಸಿಕೊಳ್ಳಬೇಕು. ಈಗ ಕೆಲವರಿಗೊಂದು ಪ್ರಶ್ನೆ ಬರಬಹುದು. ಅದು ಏನೆಂದರೆ! **"ಕರ್ಮದ ಪ್ರಕಾರ ಗುಣಗಳು, ಗುಣಗಳ ಪ್ರಕಾರ ಕಾರ್ಯ ಎಂದಾಗ ಅವು ಶಾಸನವಾದಾಗ ನಾವು ನಿಗ್ರಹಿಸಿಕೊಳ್ಳಲಾರೆವೆಂದು ತೀರ್ಮಾನಿಸಿ ಹೇಳಿದಾಗ ಗುಣಗಳನ್ನು ನಿಗ್ರಹಿಸಿಕೋ ಎಂದು ಅವುಗಳಿಗೆ ವಶವಾಗಬಾರದು ಎನ್ನುವುದೇನು?"** ಎಂದು ಕೇಳಬಹುದು. ಅದಕ್ಕೆ ಸಮಾಧಾನ ಏನೆಂದರೆ! ನಿಗ್ರಹಿಸಿಕೊಳ್ಳಲಾರೆ ಎಂದು ಹೇಳಿರುವುದು ಅಜ್ಞಾನಿಗಳಿಗೆ, ಮತ್ತು ಅಜ್ಞಾನಿಗಳನ್ನು ಕಳವಳ ಇಡದಂತೆ ಅಜ್ಞಾನಿಗಳಂತೆ ಪ್ರವರ್ತಿಸಬೇಕೆಂದು ಹೇಳಿರುವುದು ಕರ್ಮಯೋಗಿಗಳಿಗೆ, ಅವರು ಪ್ರಪಂಚದಲ್ಲಿ ಕೆಲಸ ಮಾಡಲೇಬೇಕು. ಆದ್ದರಿಂದ ಒಳ್ಳೆಯ ಕೆಟ್ಟ ಕಾರ್ಯಗಳ ಕ್ರಮ ತಪ್ಪದೇ ಬರುತ್ತದೆ. ಕೆಲಸ ಮಾಡುವವರಿಗೆ ಹೇಳಿದ ಧರ್ಮವದು, ಕೆಲಸ ಮಾಡುವಾಗ ಒಳ್ಳೆಯದು ಮಾಡಬೇಕೆಂದು, ಕೆಟ್ಟದು ಮಾಡಬಾರದೆಂಬ ತನ್ನ ನಿರ್ಣಯ ನಿಲ್ಲುವುದಿಲ್ಲ. ಅದು ಕರ್ಮವನ್ನನುಸರಿಸಿ ಹಿಡಿದು ನಡೆಯುತ್ತಿರುತ್ತದೆ. ಯಾರು ಆ ವಿಧಾನವನ್ನು ಅತಿಕ್ರಮಿಸಲಾರನು. ಆದರೆ ಬ್ರಹ್ಮಯೋಗಿಗಳು ಯಾವ ಕರ್ಮವನ್ನು ಆಚರಿಸದವರು. ಅವರಲ್ಲಿ ಯಾವ ಅವಯವಗಳು, ಯಾವ ಗುಣವು ಕೆಲಸ ಮಾಡುವುದಿಲ್ಲ. ಬ್ರಹ್ಮಯೋಗದಲ್ಲಿ ಇರುವಷ್ಟು ಕಾಲ ಕರ್ಮ ಸ್ಥಂಭಿಸಿಹೋಗಿರುತ್ತದೆ. ಅಂತಹವನಿಗೆ ಬಾಹ್ಯ ಶಬ್ಧ, ಸ್ಪರ್ಶ, ರೂಪ, ರಸ, ಗಂಧಗಳಿಂದ ಸಂಬಂಧವಿಲ್ಲ. ಆದ್ದರಿಂದ ಕರ್ಮಯೋಗಿಗಳಾಗಲಿ, ಉಳಿದವರಾಗಲಿ ಕಾರ್ಯ ಬದ್ಧರಾದಂತೆ ಬ್ರಹ್ಮಯೋಗಿಗಳು ಆಗುವುದಿಲ್ಲ. ಕರ್ಮಯೋಗಿಗಳು ಕಾರ್ಯಗಳು ಮಾಡಬೇಕಾಗಿದೆ. ಜ್ಞಾನ ತಿಳಿದವರಿಗೆ ಕರ್ಮದ ಪ್ರಕಾರ ಕಾರ್ಯಗಳು ಯಾವಾದರೂ ಮಾಡಬೇಕಾಗಿದೆ ಆದ್ದರಿಂದ ಅವರು ನಿಗ್ರಹಿಸಿಕೊಳ್ಳುವುದೆನ್ನುವುದು ಆಗದ ಕೆಲಸ. ಬ್ರಹ್ಮಯೋಗಿಗಳು ಕರ್ಮವನ್ನೇ ಸ್ಥಂಭಿಸುವಂತೆ ಮಾಡುವವರು, ಆದ ಕಾರಣ ಗುಣಗಳನ್ನು

ತಪ್ಪದೆ ಬಿಡಬೇಕಾಗಿಬರುತ್ತದೆ. ಬ್ರಹ್ಮಯೋಗಿ ಗುಣಗಳನ್ನು ಸ್ಥಂಭಿಸಿ, ಅವುಗಳಿಗೆ ಅನುಸಂಧಾನವಾದ ಕರ್ಮವನ್ನು ಸ್ಥಂಭಿಸುವನು. ಆ ಪ್ರಯತ್ನವೇ ಬ್ರಹ್ಮಯೋಗ ಸಾಧನೆ. ಅಂತಹ ಸಾಧನೆಯಲ್ಲಿ ಗುಣಗಳು ಬ್ರಹ್ಮಯೋಗಿಗೆ ಶತ್ರುಗಳಂತಹವು. ಪ್ರಯತ್ನ ಮಾಡುತ್ತಾ ಅವುಗಳನ್ನು ಜಯಿಸಿದವನಿಗೆ ಬ್ರಹ್ಮಯೋಗ ಲಭ್ಯವಾಗುತ್ತದೆ. ಆ ಯೋಗದ ಸಮಯದಲ್ಲಿ ಕರ್ಮ ಸ್ಥಂಭಿಸಿರುತ್ತದೆ. ಆದ್ದರಿಂದ ಕಾರ್ಯಗಳು ಇಲ್ಲ, ಗುಣಗಳು ಇಲ್ಲವೆಂದು ತಿಳಿಯಬೇಕು. ಹಾಗಲ್ಲದೆ ಕರ್ಮ ಗುಣಗಳು ಎಲ್ಲಾ ಕೆಲಸಮಾಡುತ್ತಾ ಕಾರ್ಯಗಳು ಆಚರಿಸುವುದು ಕರ್ಮಯೋಗ. ಇದರಲ್ಲಿ ಜ್ಞಾನವನ್ನು ತಿಳಿದ ಕರ್ಮಯೋಗಿಗಳಿಗೆ, ತಿಳಿಯದ ಅಜ್ಞಾನಿಗಳಿಗೆ ಏನು ವ್ಯತ್ಯಾಸ ಇರುವುದಿಲ್ಲ. ಅವನಿಗೆ ಕರ್ಮರೀತ್ಯಾ ಗುಣಗಳು, ಗುಣಗಳ ರೀತ್ಯಾ ಕಾರ್ಯವೆಂಬ ಸೂತ್ರ ಅನ್ವಯಿಸುತ್ತದೆ. ಆದಕಾರಣ ಅವರು ಕಾರ್ಯಗಳನ್ನು ನಿಗ್ರಹಿಸಲಾರರೆಂದು ತಿಳಿಯಬೇಕು. ಕರ್ಮಯೋಗ ಬೇರೆಯೆಂದು, ಬ್ರಹ್ಮಯೋಗ ಬೇರೆಯೆಂದು, ತಿಳಿದಾಗಲೇ ನಿಗ್ರಹಿಸಲಾರದವರು ಬೇರೆಯೆಂದು, ನಿಗ್ರಹಿಸುವವರು ಬೇರೆಯೆಂದು ತಿಳಿಯುತ್ತದೆ. ಕೆಲಸಗಳು ಮಾಡುವವರು ನಿಗ್ರಹಿಸಲಾರರು. ಬ್ರಹ್ಮಯೋಗಿಗಳು ಮಾತ್ರ ನಿಗ್ರಹಿಸಬೇಕಾಗಿದೆ ಎಂದು ತಿಳಿಯುತ್ತಿದೆ.

**2) ಶ್ಲೋ॥ 35 : ಶ್ರೇಯಾನ್ ಸ್ವಧರ್ಮೋವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।**
**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥**
**(ಜೀವಿಯು, ಕರ್ಮಯೋಗ)**

**ಭಾವಾರ್ಥ** : ಅನುಷ್ಠಿತವಾಗುವ ಪರಧರ್ಮಕ್ಕಿಂತ ಗುಣವಿಲ್ಲದ ಸ್ವಧರ್ಮವೇ ಶ್ರೇಯಸ್ಕರ. ಪರಧರ್ಮದಲ್ಲಿರುವ ಭಯಕ್ಕಿಂತ ಸ್ವಧರ್ಮದಲ್ಲಿನ ಮರಣವೇ ಮೇಲು.

**ವಿವರ** : ಈ ಶ್ಲೋಕದಲ್ಲಿ ಮುಖ್ಯವಾಗಿ ತಿಳಿದುಕೊಳ್ಳಬೇಕಾಗಿರುವುದು ಪರಧರ್ಮ, ಸ್ವಧರ್ಮ. ಶಾಸ್ತ್ರಬದ್ಧವಾಗಿ ಸ್ವಧರ್ಮವೆಂದರೆ ಏನೆಂದು ತಿಳಿದರೆ ಅದರಹಿಂದೆ ಪರಧರ್ಮವೂ ಸಹ ತಿಳಿಯುತ್ತದೆ. ಅದಕ್ಕಿಂತ ಮೊದಲು ಧರ್ಮ ಎಂದರೆ ಏನೆಂದು ತಿಳಿಯಬೇಕು. ಧರ್ಮವನ್ನು ತಿಳಿದರೆ ಅದರ ನಂತರ ಸ್ವಧರ್ಮ ಯಾವುದು, ಪರಧರ್ಮ ಯಾವುದೆಂದು ಸುಲಭವಾಗಿ ತಿಳಿಯಬಹುದು. **"ಒಂದು ವಸ್ತುವು ಅಥವಾ ಪದಾರ್ಥ ಜೀವವಿರುವುದಾಗಲಿ, ಜೀವವಿಲ್ಲದಿರುವುದಾಗಲಿ ಅದಕ್ಕಿರುವ ಸೂಕ್ಷ್ಮ ಸಹಜತ್ವವನ್ನು ಧರ್ಮ"** ಎನ್ನುತ್ತೇವೆ. ಆ ಸಹಜತ್ವ ಮೊದಲು ದೈವತ್ವದಿಂದ ಲಭಿಸುವುದಾಗಿರುತ್ತದೆ. ಒಂದು ಪದಾರ್ಥಕ್ಕಿರುವ ಸಹಜತ್ವವನ್ನು ಅದಕ್ಕಿರುವ ಧರ್ಮ ಎನ್ನುತ್ತೇವೆ. ಇಲ್ಲಿ ನೀವು ನನ್ನನ್ನು ಒಂದು ಪ್ರಶ್ನೆ ಕೇಳಬಹುದು. ಅದು ಏನೆಂದರೆ! ಒಬ್ಬ ಮನುಷ್ಯ ಚಿಕ್ಕಂದಿನಿಂದ ಹೆಚ್ಚು

ಕೋಪ ಇರುವವನಾಗಿದ್ದಾನೆ. ದೊಡ್ಡವನಾದರೂ ಆತನು ಕೋಪಿಷ್ಟಿಯಾಗಿಯೇ ಇದ್ದಾನೆ. ಆತನಿಗೆ ಚಿಕ್ಕಂದಿನಿಂದ ಕೋಪ ಸಹಜವಾಗಿದೆ ಅಲ್ಲವೆ! ಆ ಮನುಷ್ಯನಿಗೆ ಕೋಪ ಧರ್ಮವೆ ಆಗುತ್ತದಾ?" ಅದಕ್ಕೆ ನಮ್ಮ ಸಮಾಧಾನ. ಮನುಷ್ಯ ಜಾತಿಗೆಲ್ಲವೂ ಯಾವುದಾದರೆ ಸಹಜವಾಗಿದೆಯೋ ಅದೇ ಧರ್ಮವಾಗುತ್ತದೆ. ಒಬ್ಬೊಬ್ಬ ಮನುಷ್ಯನಿಗೆ ಒಂದೊಂದು ಧರ್ಮ ಇರುವುದಿಲ್ಲ. ಇಲ್ಲಿ ಒಬ್ಬನೇ ಕೋಪಿಷ್ಟಿ ಆದುದರಿಂದ ಅದು ಧರ್ಮ ಅಲ್ಲ. ಉದಾಹರಣೆಗೆ ಒಂದು ನಿಂಬೆಹಣ್ಣು ಹುಳಿಯಾಗಿದೆ. ಎಲ್ಲಾ ನಿಂಬೆಹಣ್ಣುಗಳು ಹುಳಿಯಾಗಿಯೇ ಇವೆ. ನಿಂಬೆಹಣ್ಣಿನಲ್ಲಿನ ಹುಳಿಯೇ ಅದರ ಧರ್ಮವಾಗುತ್ತದೆ. ಈ ವಿಧವಾಗಿ ಒಂದು ಗಿಡಕ್ಕೆ ಒಂದು ಧರ್ಮವಿದ್ದರೆ ಆ ಜಾತಿ ಗಿಡಗಳಿಗೆಲ್ಲ ಅದೇ ಧರ್ಮವಿರಬೇಕು. ಆಗಲೇ ಅದು ಧರ್ಮವಾಗುತ್ತದೆ. ಒಂದು ಜಾತಿಯ ಗಿಡದ ಎಲೆಯಲ್ಲಿ ಚೇಳಿನ ವಿಷವನ್ನು ತೆಗೆಯುವ ಸಹಜತ್ವವಿದೆ. ಆ ಜಾತಿ ಗಿಡಗಳ ಪ್ರತಿ ಎಲೆಯಲ್ಲಿಯೂ ಅದೇ ಸಹಜತ್ವವಿದೆ. ಇಲ್ಲಿ ಆ ಗಿಡಕ್ಕಿರುವ ಸಹಜತ್ವವೇ ಅದರ ಧರ್ಮವಾಗುತ್ತದೆ. ಹಾಗಲ್ಲದೆ ಒಂದು ಗಿಡದಲ್ಲಿ ಆ ಶಕ್ತಿಯಿದ್ದು, ಅದೇ ಜಾತಿ ಬೇರೆ ಗಿಡಗಳಿಗೆ ಆ ಶಕ್ತಿ ಇಲ್ಲದಿದ್ದರೇ ಅದು ಧರ್ಮ ಎನ್ನಲ್ಪಡುವುದಿಲ್ಲ. ಒಬ್ಬ ಮನುಷ್ಯನಿಗಿರುವುದು ಧರ್ಮವಲ್ಲ. ಎಲ್ಲರಿಗೂ ಇರುವುದೇ ಧರ್ಮವಾಗುತ್ತದೆ. ಧರ್ಮ ಎನ್ನುವುದು ಹುಟ್ಟಿನಿಂದಲೇ ಬಂದಿರುವುದು. ಆದ್ದರಿಂದ ಅದನ್ನು ಸಹಜತ್ವ ಎಂದಿದ್ದೇವೆ. **'ಜ'** ಎಂದರೆ ಹುಟ್ಟುವುದು ಎಂದು ಅರ್ಥ. ಸಹಚರನು ಎಂದರೆ ಹಿಂದೆ ತಿರುಗುವವನೆಂದು ಅರ್ಥ. ಹಾಗೆ **'ಸಹಜ'** ಎಂದರೆ ಜೊತೆಯಾಗಿ ಹುಟ್ಟುವುದೆಂದು ಅರ್ಥ. ಇದರ ಪ್ರಕಾರ **'ಸಹಜತ್ವ'** ಎಂದರೆ ಹುಟ್ಟಿನಿಂದಲೇ ಬಂದಿರುವುದೆಂದು ಅರ್ಥ. ಒಂದು ಜಾತಿಗೆ ಒಂದೇ ವಿಧವಾಗಿ ಹುಟ್ಟಿದಾಗ ಬಂದಿರುವುದೇನೋ ಅದೇ ಧರ್ಮವಾಗುತ್ತದೆ. ಈಗ ಧರ್ಮವೆಂದರೆ ಏನು ಎನ್ನುವ ವಿಷಯವು ಸ್ವಲ್ಪ ಅವಗಾಹನೆಯಾಗಿದೆ ಎಂದುಕೊಳ್ಳುತ್ತೇವೆ. ಮೇಲಿನ ಶ್ಲೋಕದಲ್ಲಿ ಭಗವಂತನು ಧರ್ಮವನ್ನು ಎರಡಾಗಿ ವಿಭಜಿಸಿದ್ದಾನೆ. ಅವುಗಳಿಗೆ ಸ್ವಧರ್ಮ, ಪರಧರ್ಮ ಎಂದು ಹೆಸರು ಇಟ್ಟಿದ್ದಾನೆ.

ಪ್ರಕೃತಿ, ಪುರುಷನೆಂದು ಪ್ರಪಂಚವೆಲ್ಲಾ ಎರಡು ಭಾಗಗಳಾಗಿ ವಿಭಜಿಸಲ್ಪಟ್ಟಿದೆ. ಪ್ರಕೃತಿ ಎಂದರೆ ಪಂಚಭೂತಗಳು ಮತ್ತು ಅವುಗಳಿಂದ ಹುಟ್ಟಿದ ಸಮಸ್ತವು. ಪುರುಷನೆಂದರೆ ಪರಮಾತ್ಮ ಮತ್ತು ಅದರ ಅಂಶವಾದ ಜೀವಾತ್ಮ, ಆತ್ಮ. ಪರಮಾತ್ಮ, ಆತ್ಮ, ಜೀವಾತ್ಮ ಒಂದು ಭಾಗವಾಗಿದ್ದು, ಪರಮಾತ್ಮನಿಂದಲೇ ತಯಾರು ಮಾಡಲಾದ ಪ್ರಕೃತಿ, ಅದಕ್ಕೆ ಸಂಬಂಧವಾದ ಗುಣಗಳು, ಇಂದ್ರಿಯಗಳು ಮೊದಲಾದವೆಲ್ಲವೂ ಒಂದು ಭಾಗವಾಗಿವೆ.

ಒಟ್ಟು ಪ್ರಕೃತಿ ಅಂಶವಾದ ಅದಕ್ಕೆಲ್ಲವೂ ಒಂದು ಧರ್ಮ, ಪರಮಾತ್ಮ ಅಂಶವಾದ ಅದಕ್ಕೆಲ್ಲವೂ ಒಂದು ಧರ್ಮ ಇದೆಯೆಂದು ತಿಳಿಯುತ್ತಿದೆ. ಇದರಿಂದ ಪ್ರಕೃತಿ ಪರಮಾತ್ಮ ಧರ್ಮಗಳು ಬೇರೆ ಬೇರೆ ಎಂದು ಹೇಳದೇ ತಿಳಿಯುತ್ತಿದೆ.

ಈಗ ನಾವು ಪ್ರಕೃತಿಯಲ್ಲಿನ ಭಾಗವಾಗಿದ್ದೇವಾ ಅಥವಾ ಪುರುಷನಲ್ಲಿನ ಭಾಗವಾಗಿ ಇದ್ದೇವಾ ಎಂದು ಯೋಚಿಸಿದರೆ, ನಮ್ಮ ಶರೀರ ಮತ್ತು ಅದರಲ್ಲಿನ ಭಾಗಗಳೆಲ್ಲವೂ ಪ್ರಕೃತಿಗೆ ಸಂಬಂಧಿಸಿರುವವಾಗಿದ್ದು, ಅದರಲ್ಲಿ ಜೀವಾತ್ಮವಾಗಿರುವ ನಾವು ಪರಮಾತ್ಮಕ್ಕೆ ಸಂಬಂಧಿಸಿದ ಅಂಶ ಇರುವವರಾಗಿದ್ದೇವೆ. ಆದ್ದರಿಂದ ನಮ್ಮ ಶರೀರವು ಪ್ರಕೃತಿ ಧರ್ಮದಿಂದ ಕೂಡಿಕೊಂಡಿರುವಾಗ, ಅದರಲ್ಲಿನ ಜೀವಾತ್ಮವಾದ ನಾವು ಪರಮಾತ್ಮ ಧರ್ಮಕ್ಕೆ ಸಂಬಂಧಿಸಿರುವೆವು. **'ಸ್ವ' ಎಂದರೆ ನನ್ನದು, 'ಪರ' ಎಂದರೆ ನನಗಿಂತ ಬೇರೆಯಾದುದೆಂದು ಅರ್ಥ. ಸ್ವ, ಪರ ಧರ್ಮಗಳೆಂದರೆ ಜೀವಾತ್ಮ ಧರ್ಮ ಸ್ವಧರ್ಮವೆಂದು, ಪ್ರಕೃತಿ ಧರ್ಮ ಪರಧರ್ಮವೆಂದು ತಿಳಿಯಬೇಕು.** ಜೀವಾತ್ಮಗಳಿಗೆ ಆತ್ಮಧರ್ಮವೇ ಸ್ವಧರ್ಮವೆಂದು ತಿಳಿದ ನಂತರ ಪ್ರಕೃತಿ ಅಥವಾ ಶರೀರದ ಧರ್ಮವೆಲ್ಲವೂ ಪರಧರ್ಮವೆಂದು ಸುಲಭವಾಗಿ ತಿಳಿಯುತ್ತದೆ.

ಇಲ್ಲಿ ಅಸಲು ವಿಷಯಕ್ಕೆ ಬಂದರೆ ಮೇಲಿನ ಶ್ಲೋಕದಲ್ಲಿ ಸ್ವಧರ್ಮದಲ್ಲಿಯೂ, ಪರಧರ್ಮದಲ್ಲಿಯೂ ನಡೆಯುವ ಕೆಲಸಗಳಿವೆ ಎಂದು ತಿಳಿಯುತ್ತಿದೆ. ಆ ಶ್ಲೋಕದಲ್ಲಿಯೇ ಸ್ವಧರ್ಮ ಗುಣಗಳಿಲ್ಲದಿರುವುದೆಂದೂ ಸಹ ಹೇಳಿದ್ದಾರೆ. ಸ್ವಧರ್ಮಕ್ಕೆ ಪರಧರ್ಮವು ವಿರುದ್ಧವಾದುದು. ಆದ್ದರಿಂದ ಸ್ವಧರ್ಮವು ಗುಣಗಳು ಇಲ್ಲದಿರುವುದಾದರೆ, ಪರಧರ್ಮವು ಗುಣಗಳು ಇರುವುದಾಗಿದೆ ಎಂದು ತಿಳಿಯುತ್ತಿದೆ. ಇದರಿಂದ ಗುಣಗಳು ಇಲ್ಲದಂತೆ ಆಚರಿಸುವುದು ಸ್ವಧರ್ಮವೆಂದು, ಗುಣಗಳಿಂದ ಆಚರಿಸುವುದು ಪರಧರ್ಮವೆಂದು ಸುಲಭವಾಗಿ ತಿಳಿಯುತ್ತಿದೆ. ಈ ಎರಡರಲ್ಲಿ ಸ್ವಧರ್ಮವನ್ನು ಆಚರಿಸುವುದು ಜೀವಾತ್ಮವಾಗಿರುವ ನಿನಗೆ ಒಳ್ಳೆಯದೆಂದೂ ಸಹ ಹೇಳಿದ್ದಾನೆ, ನಾವೆಲ್ಲರೂ ಜೀವಿಗಳೇ. ಆದ್ದರಿಂದ ಸ್ವಧರ್ಮವೆಂಬುವುದು ಅಂದಿನ ಅರ್ಜುನನಿಗೆ ಅಲ್ಲ ನಮಗೂ ಸಹ ಅಗತ್ಯವೆಂದು ತಿಳಿಯುತ್ತಿದೆ. ಸ್ವಧರ್ಮವಾದ ನಮ್ಮೆಲ್ಲರ ಧರ್ಮವು ಶ್ರೇಯಸ್ಕರವಾದುದು.

ನಿಂಬೆಹಣ್ಣಿಗೆ ಸಹಜವಾಗಿರುವ ಧರ್ಮ ಹುಳಿ. ಹಾಗೆ ನಿಂಬೆಹಣ್ಣು ಹುಳಿಯಾಗಿರದೆ ಕಹಿಯಾಗಿಯೊ, ಸಪ್ಪೆಯಾಗಿಯೊ ಇದೆಯೆಂದುಕೊಳ್ಳೋಣ. ಆಗ ನಿಂಬೆಹಣ್ಣು ತನ್ನ ಸ್ವಧರ್ಮವನ್ನು ಕಳೆದುಕೊಂಡಿದೆಯೆಂದು, ಅಧರ್ಮವಾದ

ಪರಧರ್ಮದಲ್ಲಿದೆ ಎಂದುಕೊಳ್ಳಬಹುದು. ಹಾಗೆಯೇ ಒಬ್ಬ ಮನುಷ್ಯ ಸ್ವಧರ್ಮವನ್ನು ಹೊಂದಿರದೆ ಪರಧರ್ಮದಲ್ಲಿ ಇದ್ದಾನೆಂದುಕೊಳ್ಳಿ. ಆಗ ಅವನು ಅಧರ್ಮದಲ್ಲಿದ್ದಾನೆಂದು ಹೇಳಬಹುದು. ಭೂಮಿ ಮೇಲೆ ಬಹಳಮಟ್ಟಿಗೆ ಗಿಡಗಳು, ಹಣ್ಣುಗಳು ಪದಾರ್ಥಗಳು ತಮ್ಮ ಧರ್ಮವನ್ನು ಕಳೆದುಕೊಳ್ಳುವುದಿಲ್ಲ. ಆದರೆ ಮನುಷ್ಯರು ಬಹಳಮಟ್ಟಿಗೆ ನೂರಕ್ಕೆ ತೊಂಭತ್ತೊಂಭತ್ತು ಭಾಗ ಸ್ವಧರ್ಮವನ್ನು ಕಳೆದುಕೊಂಡು ಪರಧರ್ಮಪರರಾಗಿದ್ದಾರೆಂದು ಹೇಳಬಹುದು. ಆದ್ದರಿಂದಲೇ ಮೇಲಿನ ಶ್ಲೋಕದಲ್ಲಿ ಎಚ್ಚರಿಸುತ್ತಾ ಸ್ವಧರ್ಮ ಒಳ್ಳೆಯದೆಂದು ಹೇಳಬೇಕಾಗಿ ಬಂದಿದೆ.

ಇಲ್ಲಿ ಸ್ವಧರ್ಮ ಆಚರಣೆ ಏನು? ಪರಧರ್ಮ ಆಚರಣೆ ಏನು? ಎನ್ನುವ ಪ್ರಶ್ನೆಗಳು ಬಾರದೆ ಇರುವುದಿಲ್ಲ. ಅವುಗಳ ಉತ್ತರ ಕೆಳಗೆ ನೋಡೋಣ. ಸ್ವಧರ್ಮ ಪರಧರ್ಮ ಒಂದೇ ಶರೀರದಲ್ಲಿವೆ. ಜೀವನವನ್ನು ಶರೀರದಿಂದ ಪ್ರಾರಂಭಿಸಿದ ಪ್ರತಿ ಜೀವಾತ್ಮ ಮೊದಲು ಪರಧರ್ಮದಲ್ಲಿಯೇ ಇರುತ್ತಾನೆ. ಚಿಕ್ಕಂದಿನಿಂದ ಪ್ರತಿಯೊಬ್ಬರು ಪರಧರ್ಮವನ್ನೇ ಆಚರಿಸಬೇಕಾಗಿದೆ. ಮೊದಲು ಪರಧರ್ಮದಿಂದ ಪ್ರಾರಂಭವಾದ ಜೀವನ ಸ್ವಲ್ಪ ಕಾಲಕ್ಕೆ ಸ್ವಧರ್ಮದೊಳಗೆ ಬರಬೇಕಾಗಿದೆ. ಆದರೆ ಶೇಕಡ 99 ರಷ್ಟು ಮಾನವರು ಕೊನೆಯ ಮರಣದವರೆಗೂ ಸ್ವಧರ್ಮದೊಳಗೆ ಬರಲಾರದೆ ಪರಧರ್ಮದಲ್ಲಿಯೇ ಹೋಗುತ್ತಿದ್ದಾರೆ.

ಮೊದಲು ಪರಧರ್ಮದಿಂದ ಸ್ವಧರ್ಮಕ್ಕೆ ದಾರಿ ಇದೆ. ಏಕೆಂದರೆ ಪ್ರತಿಯೊಬ್ಬರು ಹೊಟ್ಟೆಗೋಸ್ಕರ ಯಾವುದೋ ಒಂದು ಕೆಲಸವನ್ನು ಆಚರಿಸಬೇಕಾಗಿರುತ್ತದೆ. ಆ ಕೆಲಸ ಶರೀರದಲ್ಲಿನ ಗುಣಗಳು, ಮನಸ್ಸು, ಜ್ಞಾನೇಂದ್ರಿಯಗಳು ಕೊನೆಗೆ ಕರ್ಮೇಂದ್ರಿಯಗಳ ಮೂಲಕ ನಡೆಯುತ್ತಿರುತ್ತದೆ. ಗುಣಗಳ ಕಾರ್ಯಗಳೆಲ್ಲವೂ ಪ್ರಕೃತಿಗೆ ಸಂಬಂಧಿಸಿರುವವು. ಅಂತಹದರಲ್ಲಿ ಪ್ರತಿ ಮನುಷ್ಯ ಬೆಳಿಗ್ಗೆಯಿಂದ ಕಾರ್ಯಗಳಲ್ಲಿಯೇ ಮುಳುಗಿರುತ್ತಾನೆ. ಆದ್ದರಿಂದ ಅವನು ಆತ್ಮಕ್ಕಿಂತ ಬೇರೆಯಾದ ಪರಧರ್ಮದಲ್ಲಿ ಇದ್ದಾನೆಂದು ಹೇಳಬಹುದು. ಆತ್ಮಜ್ಞಾನವನ್ನು ತಿಳಿದವನು ಅಂದರೆ ಸ್ವಧರ್ಮವನ್ನು ತಿಳಿದವನು ಗುಣಗಳೆಂಬ ಮನಸ್ಸಿನ ಮೂಲಕ ನಿಲ್ಲಿಸಿ ಕಾರ್ಯದ ಮೇಲೆ ಲಗ್ನವಾಗದೆ, ಆತ್ಮದ ಮೇಲೆಯೇ ಲಗ್ನವಾಗಿದ್ದಾನೆ ಎಂದುಕೊಳ್ಳೋಣ, ಆಗ ಅವನು ಸ್ವಧರ್ಮವನ್ನು ಆಚರಿಸಿದಂತಾಗುತ್ತದೆ. ಒಂದೇ ಶರೀರದಲ್ಲಿ ಎರಡು ಧರ್ಮಗಳಿರುವುದರಿಂದ, ಯಾವುದು ಸ್ವಧರ್ಮವೋ ಯಾವುದು ಪರಧರ್ಮವೋ ತಿಳಿಯದೆ ಹೋಗಿರುವುದರಿಂದ, ಮತ್ತು ಸ್ವಧರ್ಮದ ವಿವರವೇ ತಿಳಿಯದಿರುವುದರಿಂದ ಪರಧರ್ಮ ಚಿಕ್ಕಂದಿನಿಂದಲೇ ಅಭ್ಯಾಸವಾಗಿರುವುದರಿಂದ,

ಬಹಳಮಟ್ಟಿಗೆ ಬಹಳಜನರು ಪರಧರ್ಮದಲ್ಲಿ ಸುಲಭವಾಗಿ ಸಿಲುಕಿಕೊಂಡಿದ್ದಾರೆ. ಸ್ವಧರ್ಮದ ಬೆಲೆಯಾಗಲಿ, ಅದರ ಅವಶ್ಯಕತೆಯಾಗಲಿ ತಿಳಿಯದಿರುವುದರಿಂದ, ಅದನ್ನು ತಿಳಿದುಕೊಳ್ಳುವ ಸಮಯ ಸಹನೆ ಇಲ್ಲದಿರುವುದರಿಂದ, ಮತ್ತು ಅದರ ಬಗ್ಗೆ ತಿಳಿಸುವವರು ಇಲ್ಲದಿರುವುದ ರಿಂದ, ಎಷ್ಟೋ ಕಾರಣಗಳಿಂದ ತನ್ನ ಧರ್ಮವನ್ನು ತಾವೇ ಕಳೆದುಕೊಂಡವರಾಗಿದ್ದಾರೆ. ಚಿಕ್ಕ ವಯಸ್ಸಿನಿಂದಲೇ ಅಭ್ಯಾಸವಾಗಿರುವುದು ಪರಧರ್ಮವಾದಾಗ, ಈಗ ಕಷ್ಟಪಟ್ಟು ಕಲಿತುಕೊಳ್ಳಬೇಕಾಗಿರುವುದು ಸ್ವಧರ್ಮವನ್ನು. ತಾನ್ಯಾರು ಎನ್ನುವ ಪ್ರಶ್ನೆ ಬಾರದವರು ತನ್ನ ಧರ್ಮವನ್ನು ಕುರಿತು ಆಲೋಚಿಸುವುದಿಲ್ಲ.

ಸ್ವಧರ್ಮದಿಂದ ಲಾಭವೇನು? ಪರಧರ್ಮದಿಂದ ನಷ್ಟವೇನು? ಸ್ವಧರ್ಮವು ಏಕೆ ಶ್ರೇಯಸ್ಕರವಾದುದೆಂದು ಯೋಚಿಸಿದರೆ, ಮೇಲಿನ ಶ್ಲೋಕದಲ್ಲಿಯೇ **'ಪರಧರ್ಮೋ ಭಯಾವಹಃ'** ಎನ್ನುವ ಮಾತಿನಿಂದ ಪರಧರ್ಮವು ಭಯದಿಂದ ಕೂಡಿಕೊಂಡಿರುವುದೆಂದು, **'ಸ್ವಧರ್ಮೇನಿಧನಂ'** ಎನ್ನುವ ಮಾತಿನಿಂದ ಸ್ವಧರ್ಮದಲ್ಲಿ ಮರಣವಿದೆ ಎಂದು ತಿಳಿಯುತ್ತಿದೆ. ಇಲ್ಲಿ ಎಲ್ಲರೂ ತಪ್ಪಾಗಿ ತಿಳಿಯುವುದಕ್ಕೆ ಅವಕಾಶವಿದೆ. ಅದೇನೆಂದರೆ ಮರಣ, ಭಯ ಎನ್ನುವ ಎರಡರಲ್ಲಿ ಮರಣದಿಂದ ದೂರವಾಗಿರಬೇಕೆಂದು ಎಲ್ಲರೂ ಅಂದುಕೊಳ್ಳುವುದೆ ತಪ್ಪು. ಆತ್ಮಜ್ಞಾನ ತಿಳಿಯದವರು ತಪ್ಪಾಗಿ ಅರ್ಥೈಸಿಕೊಳ್ಳುವುದಕ್ಕಿಂತ, ತಿಳಿದವರು ತಪ್ಪಾಗಿ ಅರ್ಥೈಸಿಕೊಳ್ಳುವುದು ಮತ್ತಷ್ಟು ವಿಡ್ಡೂರ. ನಿಜಕ್ಕೆ ಯೋಚಿಸಿದರೆ ಈ ಶ್ಲೋಕದಲ್ಲಿಯೇ ಪರಧರ್ಮದಲ್ಲಿರುವ ಭಯಕ್ಕಿಂತ, ಸ್ವಧರ್ಮದಲ್ಲಿರುವ ಮರಣವೇ ಶ್ರೇಯಸ್ಕರವೆಂದಿದ್ದಾರೆ. ಅಂತಹದರಲ್ಲಿ ಭಗವಂತನು ಹೇಳಿದ ಮಾತಿಗೆ ವಿರುದ್ಧವಾಗಿ ಮನುಷ್ಯರು ಮರಣಕ್ಕಿಂತ ಭಯವೇ ಶ್ರೇಯಸ್ಕರವೆಂದು ತಿಳಿಯುವುದು ತಪ್ಪಲ್ಲವೆ!.

ಜ್ಯೋತಿಷ್ಯ ಶಾಸ್ತ್ರದಲ್ಲಿ ಒಟ್ಟು ನವ ಗ್ರಹಗಳಿವೆಯೆಂದು ಅವುಗಳಲ್ಲಿ ಏಳು ಕಾಣಿಸುವವೆಂದು, ಎರಡು ಮಾತ್ರ ಮಸಕಾಗಿ ಕಾಣಿಸುವ ಛಾಯಗ್ರಹಗಳೆಂದು, ಅವುಗಳೇ ರಾಹು, ಕೇತುಗಳೆಂದು, ಈ ಎರಡು ಗ್ರಹಗಳು ಏಳು ಗ್ರಹಗಳಿಗೆ ವಿರುದ್ಧದಿಕ್ಕಿನಲ್ಲಿ ತಿರುಗುತ್ತಿವೆ ಎಂದು, ಗುರು ಶನಿ ಭಾಗಗಳಾಗಿ ವಿಭಜಿಸಲಾದ ಸಪ್ತಗ್ರಹಗಳಿಗೆ ರಾಹು, ಕೇತುಗಳು ಅಧಿಪತಿಗಳೆಂದು, ಗುರು ಭಾಗಕ್ಕೆ ಕೇತು, ಶನಿ ಭಾಗಕ್ಕೆ ರಾಹು ಅಧಿಪತಿಗಳಾಗಿದ್ದಾರೆಂದು ದೊಡ್ಡವರು ತಿಳಿಸಿದಂತೆ ನಮ್ಮ ಶರೀರದಲ್ಲಿಯೂ ಒಂದೊಂದು ಗುಣಭಾಗದಲ್ಲಿ ಯೋಗಶಾಸ್ತ್ರ ರೀತ್ಯಾ ಕಾಣಿಸುವ 12 ಗುಣಗಳಿವೆ. ಹಾಗೆ ರಾಹು ಕೇತುಗಳಂತೆ ಛಾಯೆಯಾಗಿ ಕಾಣಿಸುವ ಎರಡು ಗುಣಗಳಿವೆ. ಅವುಗಳೇ **ಭಯ, ಧೈರ್ಯ. ಇವು ಅಲ್ಲದೇ ಮತ್ತೊಂದು ಮಾತ್ರ ಪ್ರತ್ಯೇಕತೆಹೊಂದಿ ಎರಡು ಕಡೆಯಲ್ಲಿಯೂ ಇರುವುದು**

**ಅದೇ ಶ್ರದ್ಧೆ**. 12 ಗುಣಗಳಲ್ಲಿ ಗುರು ಶನಿ ಪಾರ್ಟಿಗಳಂತೆ ಒಳ್ಳೆಯವು ಆರು, ಕೆಟ್ಟವು ಆರಾಗಿ ವಿಭಜಿಸಲ್ಪಟ್ಟು **ದೈವ, ಅಸುರ** ಗುಣಗಳೆಂದು ಹೆಸರು ಇಡಲಾಗಿದೆ. ಈ ವಿಧವಾಗಿ ನಮ್ಮ ಶರೀರದಲ್ಲಿನ ಒಂದು ಗುಣಭಾಗದಲ್ಲಿ 12+2+1=15 ಗುಣಗಳಿವೆ ಎಂದು ತಿಳಿಯುತ್ತಿದೆ. ಇದರಲ್ಲಿ **ಅಜ್ಞಾನ ಸಂಬಂಧವಾದುದು ಭಯ. ಜ್ಞಾನ ಸಂಬಂಧವಾದುದು ಧೈರ್ಯ**. ಶ್ರದ್ಧೆ ಎನ್ನುವುದು ಅಜ್ಞಾನ, ಜ್ಞಾನ ಎರಡಕ್ಕೂ ಸಮಾನವಾಗಿದೆ. ಗುಣಗಳು ಕೆಲಸ ಮಾಡುವಾಗ ಅಜ್ಞಾನವಶದಲ್ಲಿ ಭಯ ಉಂಟಾಗುತ್ತದೆ. **'ಪರಧರ್ಮೋ ಭಯಾವಹಃ'** ಎನ್ನುವ ಮಾತಿನ ಪ್ರಕಾರ ಶರೀರದಲ್ಲಿ ಗುಣಗಳು ಕೆಲಸ ಮಾಡುವವರೆಗೂ ಭಯ ಉಂಟಾಗುತ್ತಲೇ ಇರುತ್ತದೆ. ಇದರಿಂದ ಚಿಕ್ಕಂದಿನಿಂದ ಭಯ ಇದೆಯೆಂದು ತಿಳಿಯುತ್ತಿದೆ.

ಸಾಧಾರಣವಾಗಿ ಎಲ್ಲರೂ ಭಯಕ್ಕಿಂತ ಮರಣವೇ ದೊಡ್ಡದೆಂದು ಕೊಳ್ಳುತ್ತಾರೆ. ಮರಣ ಜೀವನದಲ್ಲಿ ಒಂದುಕ್ಷಣ ಮತ್ತು ಒಂದೇಬಾರಿ ಬರುತ್ತದೆ. ಭಯ ಜೀವನದಲ್ಲಿ ಎಷ್ಟೋ ಕಾಲವಿರುತ್ತದೆ ಮತ್ತು ಎಷ್ಟೋಸಲ ಇರುತ್ತದೆ. ಬಹಳಕಾಲ ಇರುವ ಭಯ ದೊಡ್ಡದಾ? ಒಂದು ಕ್ಷಣ ಕಾಲವಿರುವ ಮರಣ ದೊಡ್ಡದಾ? ಎಂದು ಯೋಚಿಸಿದರೆ ಬಹಳಕಾಲ ಇರುವ ಭಯವೇ ದೊಡ್ಡದಾಗುತ್ತದೆ. ಆದರೆ ಕ್ಷಣಕಾಲ ಇರುವ ಮರಣ ಹೇಗೆ ದೊಡ್ಡದಾಗುತ್ತದೆ? ಬಹಳಕಾಲ ಮಾನವನನ್ನು ಪೀಡಿಸುತ್ತಾ ಅನೇಕ ದುಃಖಗಳು ಉಂಟುಮಾಡುವ ಭಯವನ್ನು ದೊಡ್ಡದೆಂದುಕೊಳ್ಳದೆ ಒಂದು ಕ್ಷಣ ಒಂದು ಬಾರಿ ಬರುವ ಯಾವ ನೋವಿಲ್ಲದ ಮರಣ ದೊಡ್ಡದೆಂದುಕೊಳ್ಳುವುದು ಬಹಳ ತಪ್ಪಲ್ಲವೆ! ಆದ ಕಾರಣ ಮೇಲಿನ ಶ್ಲೋಕದಲ್ಲಿ ಭಗವಂತನು **'ಸ್ವಧರ್ಮೇನಿಧನಂ ಶ್ರೇಯಃ ಪರಧರ್ಮೋ ಭಯಾವಹಃ'** ಪರಧರ್ಮದಲ್ಲಿರುವ ಭಯಕ್ಕಿಂತ ಸ್ವಧರ್ಮದಲ್ಲಿರುವ ಮರಣವೇ ಮೇಲು ಎಂದಿದ್ದಾನೆ. ಜೀವನವೆಲ್ಲವೂ ಪೀಡಿಸಿ ಕೃಶಿಸುವಂತೆ ಮಾಡುವ ಭಯ ಪ್ರಕೃತಿ ಪರವಾದುದು, ಅಜ್ಞಾನವಶವಾದುದು. ಯಾವ ಸಮಸ್ಯೆಗಾದರು ಕರ್ಮವಿಧಿಯನ್ನು ತಿಳಿಸಿ ದುಃಖವಿಲ್ಲದಂತೆ ಮಾಡುವ ಧೈರ್ಯ ಜ್ಞಾನಪರವಾದುದು.

ಆತ್ಮಜ್ಞಾನವನ್ನು ಜೀರ್ಣಿಸಿಕೊಳ್ಳದ ಯಾರನ್ನಾದರೂ ಭಯ ಪೀಡಿಸುತ್ತಾ, ಮರಣವೇ ದೊಡ್ಡದೆನ್ನುವ ಭಾವವನ್ನುಂಟುಮಾಡಿ ಪರಧರ್ಮದಲ್ಲಿಯೇ ನಿಲ್ಲುವಂತೆ ಮಾಡುತ್ತದೆ. ಉದಾಹರಣೆಗೆ ಒಬ್ಬ ಗುರುವಿನ ಹತ್ತಿರ 12 ವರ್ಷಗಳು ಜ್ಞಾನ ತಿಳಿದುಕೊಂಡವರು ಕೆಲವರಿದ್ದಾರೆಂದುಕೊಳ್ಳೋಣ. ಗುರುವಿನ ಹತ್ತಿರ ಎಷ್ಟೋ ಜ್ಞಾನ ತಿಳಿದುಕೊಂಡರೂ ಅದನ್ನು ಆಚರಿಸದೆ ಹೋದರೆ ಅವರು ತಿಳಿಯದವರೊಂದಿಗೆ ಸಮಾನವೇ ಆಗುತ್ತಾರೆ. ಒಬ್ಬ ಗುರು ತನ್ನ ಶಿಷ್ಯರಾಗಿರುವವರನ್ನು ವಾಚಾ ಜ್ಞಾನದಲ್ಲಿಯೇ

ದೊಡ್ಡವರಲ್ಲದೆ, ಆಚರಣಾ ಜ್ಞಾನದಲ್ಲಿಯೂ ದೊಡ್ಡವರಾಗಿರಬೇಕೆಂದು ತಿಳಿದು, ಅವರು ಆಚರಣೆಯಲ್ಲಿ ಹೇಗಿರುತ್ತಾರೋ ಎಂದು ಕಾದು ನೋಡಿದನು. ಕರ್ಮದ ಪ್ರಕಾರ ಗುರುಗಳಿಗೆ ದೊಡ್ಡ ಸಮಸ್ಯೆಬಂದಿದೆ. ಆ ಸಮಸ್ಯೆಯಲ್ಲಿ ಪ್ರತ್ಯಕ್ಷವಾಗಿ ಎಲ್ಲರಿಗೂ ತಿಳಿದಂತೆ ಗುರುಗಳಿಗೆ ಎಷ್ಟೋ ಕಷ್ಟ ನಷ್ಟ ಬಂದಿದೆ. ಅಲ್ಲಿಯವರೆಗೂ ಗುರುಗಳನ್ನು ಎಷ್ಟೋ ಹೊಗಳುತ್ತಿರುವ ಕೆಲವರು ಗುರುಗಳ ಪರಿಸ್ಥಿತಿಯನ್ನು ನೋಡಿ, ಈತನ ಹತ್ತಿರಕ್ಕೆ ಬರುವುದರಿಂದ ನಮಗೂ ಸಹ ಕಷ್ಟ ನಷ್ಟ ಬರುವುದೆಂದು ತಿಳಿದು, ಗುರುಗಳ ಹತ್ತಿರಕ್ಕೆ ಬಾರದಂತೆ ಹೋಗಿದ್ದಾರೆ. ಇಲ್ಲಿ ಭಯವೆನ್ನುವುದೇ ಮುಖ್ಯವಾಗಿ ಅವರಲ್ಲಿ ಕೆಲಸ ಮಾಡಿದೆ ಎಂದು ತಿಳಿಯಬೇಕು. ಕಷ್ಟ ಬರುತ್ತದೆಂಬ ಭಯದಿಂದಲೋ, ಅಥವಾ ನಷ್ಟ ಬರುತ್ತದೆಂಬ ಭಯದಿಂದಲೋ, ಅವರು ಬಾರದಂತೆ ಹೋಗಿದ್ದಾರೆ. ಏನು ನಡೆದರು ಕರ್ಮದಿಂದಲೇ ನಡೆಯುತ್ತದೆಂದು, ಆ ನಿರ್ಣಯವನ್ನು ಯಾರು ಬದಲಾಯಿಸಿಕೊಳ್ಳಲಾರರೆಂಬ ಆತ್ಮಜ್ಞಾನವನ್ನು ಮರೆತು ಹೋಗಿದ್ದಾರೆ. ವಾಚಾಜ್ಞಾನ ಇರುವವರು ಆಚರಣೆ ಜ್ಞಾನ ಇಲ್ಲದವರಾಗಿದ್ದಾರೆ.

ಒಂದು ಅಡಿಗೆಯನ್ನು ಹೇಗೆ ಮಾಡಿದರೆ ರುಚಿಯಾಗಿರುತ್ತದೋ ತಿಳಿದುಕೊಂಡಿದ್ದೇವೆಂದುಕೊಳ್ಳೋಣ. ತಿಳಿದುಕೊಂಡ ಮಾತ್ರಕ್ಕೆ ಆ ಅಡಿಗೆ ರುಚಿಯನ್ನು ಅನುಭವಿಸಲಾರೆವು. ಆ ರುಚಿಯ ಅನುಭೂತಿಯೇನೋ ತಿಳಿಯುವುದಿಲ್ಲ. ಆ ರುಚಿ ಹೇಗಿರುತ್ತದೆಂಬ ಅನುಭವ ಹೇಗೆ ಮಾಡಿದರೆ ಅಡಿಗೆ ತಯಾರಾಗುತ್ತದೋ ಹಾಗೆ ಮಾಡಿದಾಗಲೆ ತಿಳಿಯುತ್ತದೆ. ಆ ವಿಧವಾಗಿಯೇ ಜ್ಞಾನವನ್ನು ಕೇಳಿ ತಿಳಿದುಕೊಂಡು ಬಹಳ ದೊಡ್ಡದೆಂದುಕೊಂಡ ಮಾತ್ರಕ್ಕೆ ಅದರ ದೊಡ್ಡತನವೇನೋ ನಿಜವಾಗಲು ನಮಗೆ ತಿಳಿಯುವುದಿಲ್ಲ. ಕೇಳಿ ತಿಳಿದುಕೊಂಡಿರುವುದನ್ನು ಆಚರಿಸಿದಾಗಲೇ ಅದರ ದೊಡ್ಡತನ ತಿಳಿಯುವುದು. ಗುರುವಿನ ಹತ್ತಿರ ಎಷ್ಟೋಕಾಲ ಜ್ಞಾನ ತಿಳಿದುಕೊಂಡು, ಯಾವ ಪ್ರಶ್ನೆಗಾದರು ಉತ್ತರ ಹೇಳುವ ಸಾಮರ್ಥ್ಯ ಇರುವವರೂ ಸಹ ಬಂದಿರುವ ಸಮಸ್ಯೆಗಳನ್ನು ಜ್ಞಾನದಿಂದ ಯೋಚಿಸದೆ ಹೋದರೆ ಅವರದು ಆಚರಣೆಜ್ಞಾನವಲ್ಲ. ಹಾಗೆಯೇ ಗುರುಗಳ ಹತ್ತಿರ ಜ್ಞಾನಿಗಳಾದವರು ಉತ್ತಮ ಜ್ಞಾನವನ್ನು ನಮ್ಮ ಗುರುಗಳು ತಿಳಿಸಿದ್ದಾರೆಂದು ಗುರುವನ್ನು ಹೊಗಳಿದರೂ, ಅವರ ಜ್ಞಾನವನ್ನು ಮಾತುಗಳವರೆಗೆ ಇಟ್ಟುಕೊಂಡಿದ್ದಾರೆ. ಪ್ರಪಂಚ ಸಮಸ್ಯೆಗಳ ಮೇಲೆ ಪ್ರಯೋಗಿಸಿ ನಿರ್ಣಯವನ್ನು ತೆಗೆದುಕೊಳ್ಳದೆ ಹೋಗಿದ್ದಾರೆ. ಗುರುಗಳಿಗೆ ಕಷ್ಟಬಂದು ಆತನು ಅನುಭವಿಸುತ್ತಿದ್ದರೆ, ಇವರಿಗೆ ಆ ಕಷ್ಟ ಇಲ್ಲದಿದ್ದರೂ ಅಂತದ್ದೇ ನಮಗೆ ಬರುತ್ತದೇನೋ ಎಂದು ಭಯದಿಂದ ಓಡಿಹೋಗಿದ್ದಾರೆ. ಹಾಗೆ ಕೆಲವು ಮಂದಿ ಹೋಗಿ ಇನ್ನು ಕೆಲವುಮಂದಿ ಉಳಿದಿರುತ್ತಿದ್ದರು. ಹೊರಗಿನ ಓದುಗಳಲ್ಲಿ

ಒಂದು ತರಗತಿ ಪಾಸಾಗಿ ಹೆಚ್ಚಿನ ಓದುಗಳಿಗೆ ಹೋಗುವುದಕ್ಕೆ ಮೂರುತಿಂಗಳ ಪರೀಕ್ಷೆ. ಆರುತಿಂಗಳ ಪರೀಕ್ಷೆ, ವರ್ಷದ ಪರೀಕ್ಷೆ ಇರುವಂತೆ, ಕೊನೆಗೆ ಆ ಉಳಿದ ಶಿಷ್ಯರಿಗೆ ವರ್ಷದ ಪರೀಕ್ಷೆಯಂತ ಸಮಸ್ಯೆ ಎದುರಾಗಿದೆ. ಆ ಸಮಸ್ಯೆಯಲ್ಲಿ ಗುರುಗಳಿಗೆ ಶತ್ರುಗಳಾಗಿರುವವರು ಗುರುಗಳನ್ನು ಸಾಯಿಸುವ ನಿರ್ಣಯಕ್ಕೆ ಬಂದಿದ್ದಾರೆ. ಒಂದು ತಿಂಗಳೊಳಗೆ ಯಾವಾಗ ಸಮಯ ದೊರೆತರೆ ಆಗ ಸಾಯಿಸುವುದಕ್ಕೆ ನಿರ್ಣಯ ಮಾಡಿಕೊಂಡು ಆ ಕೆಲಸದ ಮೇಲೆ ಕಾದಿದ್ದಾರೆ. ಆ ವಿಷಯವು ಉಳಿದ ಶಿಷ್ಯರಿಗೆ ತಿಳಿದಿದೆ. ನಂತರ ಗುರುಗಳಿಗೆ ತಿಳಿದಿದೆ. ಕರ್ಮ ಹೇಗಿದ್ದರೆ ಹಾಗೆ ನಡೆಯುತ್ತದೆಂದು ಆ ಸಮಸ್ಯೆಯನ್ನು ಸ್ವಲ್ಪವೂ ಗುರುಗಳು ಲೆಕ್ಕಮಾಡಲಿಲ್ಲ. ಇನ್ನು ಉಳಿದ ಶಿಷ್ಯರ ವಿಷಯಕ್ಕೆ ಬಂದರೆ ಅವರು ಈ ವಿಧವಾಗಿ ಆಲೋಚಿಸಿದ್ದಾರೆ. ಮೊದಲೇ ತಪ್ಪಿಸಿಕೊಂಡವರು ಎಷ್ಟೋ ತಿಳಿವಳಿಕೆಯುಳ್ಳವರು. ನಾವು ಆಗಲೇ ನಿಧಾನವಾಗಿ ಬಾರದಂತೆಹೋಗಿದ್ದರೆ ಚೆನ್ನಾಗಿತ್ತು. ನಾವು ತಿಳುವಳಿಕೆ ಇಲ್ಲದವರು ಇಲ್ಲಿದ್ದೇವೆ. ಇಲ್ಲಿರುವುದರಿಂದ ನಮಗೆ ಅಪಾಯವೆ. ಗುರುಗಳನ್ನು ಹೇಗೋ ಅವರು ಹತ್ತು ಇಪ್ಪತ್ತು ದಿನಗಳಲ್ಲಿ ಸಾಯಿಸುತ್ತಾರೆ. ಒಂದುವೇಳೆ ನಾವು ಈತನೊಂದಿಗೆ ಸಂಬಂಧ ಇಟ್ಟುಕೊಂಡು ಹಾಗೆ ಇರುವುದರಿಂದ ನಮಗೂ ಸಹ ತೊಂದರೆ, ಸಾವು ಇರಬಹುದು. ಈತನ ಶಿಷ್ಯರೆನಿಸಿಕೊಳ್ಳುವುದೂ ಸಹ ಒಳ್ಳೆಯದಲ್ಲ. ಇಲ್ಲಿಗೆ ಬಾರದಂತೆಹೋಗಿ, ಗುರುಗಳಿಗೆ ಶತ್ರುಗಳಾದವರ ಹತ್ತಿರ ಕೈಜೋಡಿಸಿದರೆ ನಮಗೆ ಅವರ ಮೂಲಕ ಏನು ತೊಂದರೆ ಇರುವುದಿಲ್ಲ ಎಂದುಕೊಂಡಿದ್ದಾರೆ. ನಂತರ ಗುರುಗಳ ಮುಖವೇ ನೋಡಲಿಲ್ಲ. ಬಲವಂತರಾದ ಶತ್ರುಗಳ ಹತ್ತಿರ ಪರಿಚಯ ಏರ್ಪಡಿಸಿಕೊಂಡು ಅವರೆಲ್ಲಾದರೂ ಕಾಣಿಸಿದರೆ ನಮಸ್ತೆ ಅಣ್ಣ ಎನ್ನುತ್ತಿದ್ದರು.

ಕೊನೆಯದಾಗಿ ಮರಣವೆಂಬ ಸಮಸ್ಯೆಗೆ ಚಲಿಸಿದವರಾಗಿ, ಚಿರಕಾಲ ಇತರರಿಗೆ ಭಯಪಟ್ಟು ಕೆಲವರು ಹೋದರೆ, ಆಗಲೂ ಸಹ ಜ್ಞಾನದಿಂದ ಯೋಚನೆ ಮಾಡಿದವರಾಗಿ, ಜ್ಞಾನಸಿದ್ಧಾಂತದ ಪ್ರಕಾರ ಸರ್ವರನ್ನು ಆಡಿಸುವುದು ಕರ್ಮ, ಕರ್ಮ ನಿರ್ಣಯದ ಪ್ರಕಾರ ನಡೆಯುವುದು ನಡೆಯುತ್ತದೆ. ಮರಣ ಯಾವಾಗಾದರು ಒಂದು ಸಲ ತಪ್ಪುವುದಿಲ್ಲ. ಅದಕ್ಕೆ ಚಲಿಸಿದರೆ ನಮಗೆ ಜ್ಞಾನ ತಿಳಿದು ಏನು ಪ್ರಯೋಜನವೆಂದು ಚಲಿಸದೆ ಉಳಿದ ಶಿಷ್ಯರು ಕೆಲವರಿದ್ದಾರೆ. ಹೀಗೆ ಸ್ವಲ್ಪಕಾಲ ನಡೆದಾಗ ಸಾಯಲ್ಪಡುತ್ತಾನೆಂದುಕೊಂಡ ಗುರುಗಳು ಸಾಯಲಿಲ್ಲ. ಸಾಯಿಸುತ್ತಾರೆಂದುಕೊಂಡ ಶತ್ರುಗಳು ಸತ್ತಿದ್ದಾರೆ. ಮುಂದೇನು ನಡೆಯುತ್ತದೋ ಕಾಣಿಸದ ಕರ್ಮದಲ್ಲಿರುವ ರಹಸ್ಯ ಸ್ವಲ್ಪಕಾಲಕ್ಕೆ ಕಾಣಿಸಿದೆ. ಸಮಸ್ಯೆ ಪ್ರಾರಂಭವಾದಾಗಿನಿಂದ

ಬಾಯಿ ಕದಲಿಸದ ಗುರು ಹೀಗೆ ಅಂದನು. **‘ನಾನೆಷ್ಟೋ ಜ್ಞಾನವನ್ನು ತಿಳಿಸಿದ್ದೇನೆ. ಕೊನೆಗೆ ಭಗವದ್ಗೀತೆಯನ್ನು ವಿವರವಾಗಿ ಬರೆಯುವುದು ನನ್ನ ಜೀವನದ ಧ್ಯೇಯವೆಂದಿದ್ದೇನೆ. ಅದನ್ನು ಪೂರ್ತಿ ಮಾಡುವವರೆಗೂ ನನಗೆ ಮರಣವಿಲ್ಲ ಎಂದಿದ್ದೇನೆ. ಹಾಗೆ ಭಗವದ್ಗೀತೆ ಕರ್ಮಯೋಗದಲ್ಲಿ 34ನೇ ಶ್ಲೋಕದವರೆಗೂ ಬರೆದಿದ್ದೇನೆ. 35ನೇ ಶ್ಲೋಕ ಸ್ವಧರ್ಮ, ಪರಧರ್ಮವನ್ನು ತಿಳಿಸುವುದು. 34ನೇ ಶ್ಲೋಕದವರೆಗೂ ಬರೆದು ನಿಲ್ಲಿಸಿದ್ದೇನೆ. 35ನೆಯದು ಇಲ್ಲಿಯವರೆಗೂ ಬರೆಯದೆ ಸುಮಾರು ಆರು ವರ್ಷಗಳು ಕಾದು ನೋಡಿದ್ದೇನೆ. ನನ್ನ ಜ್ಞಾನವನ್ನು ತಿಳಿದುಕೊಂಡವರು ಸ್ವಧರ್ಮಪರರು ಎಷ್ಟು ಜನರಿದ್ದಾರೆ, ಪರಧರ್ಮಪರರು ಎಷ್ಟು ಜನರಿದ್ದಾರೆಂದು ನೋಡುವುದು ತಪ್ಪಲಿಲ್ಲ. ನಡೆದ ಕಾರ್ಯವನ್ನನುಸರಿಸಿ ನೋಡಿದರೆ ಪರಧರ್ಮಪರರು ನೂರಕ್ಕೆ 99 ರಷ್ಟು ಇದ್ದು, ಒಂದು ಭಾಗ ಮಾತ್ರ ಸ್ವಧರ್ಮವನ್ನು ಆಚರಿಸುವವರಿದ್ದಾರೆ. ಆದ್ದರಿಂದಲೇ ರಚನೆಯಲ್ಲಿ ನಿಂತುಹೋಗಿರುವ ಕರ್ಮಯೋಗದಲ್ಲಿ 35ನೇ ಶ್ಲೋಕವನ್ನು ಇಲ್ಲಿ ಈಗ ಪ್ರಾರಂಬಿಸಿ ಹೇಳಲಾಗಿದೆ. ಸ್ವಧರ್ಮ ಪರಧರ್ಮಗಳನ್ನು ಎಷ್ಟೋ ವಿವರವಾಗಿ ಹೇಳಿದರೇನೆ ಭವಿಷ್ಯತ್ತಿನಲ್ಲಿ ಜ್ಞಾನ ತಿಳಿದುಕೊಳ್ಳುವವರು, “ತಿಳಿದಮಾತ್ರಕ್ಕೆ ಪ್ರಯೋಜನವಿಲ್ಲ, ತಿಳಿದಿರುವುದನ್ನು ಜೀವನದಲ್ಲಿ ಉಪಯೋಗಿಸಿಕೊಂಡಾಗಲೇ ಜ್ಞಾನದ ಬೆಲೆಯನ್ನು ಹೊಂದಿದವರಾಗುತ್ತೇವೆಂದುಕೊಳ್ಳಬಹುದು”.**

ಭಗವಂತನು ಏನು ಹೇಳಿದರೂ ಅದು ಸತ್ಯವೇ, ಆದ ಕಾರಣ ಆತನು ಹೇಳಿದಂತೆ ಎಲ್ಲಾ ವಿಧಗಳಲ್ಲಿ ಯೋಚಿಸಿದರೆ ಭಯಕ್ಕಿಂತ ಮರಣವೇ ಮೇಲು. ಪರಧರ್ಮಕ್ಕಿಂತ ಮರಣವೇ ಮೇಲು. ಪರಧರ್ಮಕ್ಕಿಂತ ಸ್ವಧರ್ಮವೇ ಮೇಲು. ಗುಣಗಳು, ಕರ್ಮವಿರುವ ಅಧರ್ಮಕ್ಕಿಂತ ಅವು ಇಲ್ಲದ ಧರ್ಮವೇ ಮೇಲೆಂದು ಮೇಲಿನ ಶ್ಲೋಕದ ಸಾರಾಂಶ ತಿಳಿಯುತ್ತಿದೆ. ಇಲ್ಲಿಯವರೆಗೂ **ಸ್ವ, ಪರ** ಧರ್ಮಗಳ ವಿವರವನ್ನು ಕೇಳಿದ ಅರ್ಜುನನು ಎಷ್ಟೋ ಜನರು ಪರಧರ್ಮವನ್ನೇ ಆಚರಿಸುತ್ತಿದ್ದಾರೆಂದು, ತಿಳಿದು ತಿಳಿಯದೇ ತಪ್ಪು ಮಾಡಿದವರು ಇರಬಹುದು ಆದರೆ ಜ್ಞಾನ ತಿಳಿದವರು ತಪ್ಪುಮಾಡುತ್ತಿರುವುದು ಬಹಳ ವಿಚಿತ್ರವೆಂದುಕೊಂಡು, ಪ್ರಪಂಚ ವಿಷಯಗಳಲ್ಲಿಯೂ ಸಹ ತಿಳಿದು ಕೆಲವರು ತಪ್ಪು ಏಕೆ ಮಾಡುತ್ತಿದ್ದಾರೆಂದು ಶ್ರೀಕೃಷ್ಣನನ್ನು ಪ್ರಶ್ನೆ ಹಾಕಿದ್ದಾನೆ.

**ಅರ್ಜುನನು ಹೀಗೆ ಕೇಳುತ್ತಾನೆ:–**

**(2) ಶ್ಲೋ॥ 36 : ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ ।**
**ಅನಿಚ್ಛನ್ನಪಿ ವಾರ್ಷ್ಣೇಯ ! ಬಲಾದಿವ ನಿಯೋಜಿತಃ ॥**

**(ಬ್ರಹ್ಮಯೋಗ)**

**ಭಾವಾರ್ಥ** : ಮನುಷ್ಯನಿಗೆ ಇಷ್ಟವಿಲ್ಲದಿದ್ದರೂ ಯಾವುದರಿಂದ ಬಲತ್ಕಾರ ಪೂರ್ವಕವಾಗಿ ನಿಯಮಿಸಲ್ಪಟ್ಟು ಪಾಪಕಾರ್ಯಗಳು ಮಾಡುತ್ತಿದ್ದಾನೆ?

**ವಿವರ : "ಅನಿಚ್ಛನ್ನಪಿ"** ಎಂದಿದ್ದಾರೆ ಅಂದರೆ ಇಷ್ಟವಿಲ್ಲದಿದ್ದರೂ ಎಂದು ಅರ್ಥ. ಇಷ್ಟ ಯಾರಿಗಿಲ್ಲದಿರುವುದೆಂದರೆ ಜ್ಞಾನ ತಿಳಿದು ಬ್ರಹ್ಮಯೋಗ ಆಚರಿಸಬೇಕೆಂದುಕೊಂಡವನಿಗೆ ಮಾತ್ರ ಕೆಲಸಗಳಲ್ಲಿ ಇಷ್ಟ ಇರುವುದಿಲ್ಲ. ಜ್ಞಾನ ತಿಳಿದು ಇದು ಕೆಟ್ಟಕೆಲಸವೆಂದು ಇದು ಮಾಡಬಾರದೆಂದುಕೊಳ್ಳಬಾರದೆಂದು ಹಿಂದೇ ಹೇಳಲಾಗಿದೆ. ಅದು ಕಾರ್ಯಗಳು ಮಾಡುವ ಕರ್ಮಯೋಗಿಗಳಿಗೆಂದು ತಿಳಿಯಬೇಕು. ಪಾಪಪುಣ್ಯ ವಿಚಕ್ಷಣ ಸ್ವಲ್ಪವೂ ಇಲ್ಲದಂತೆ ಕೆಲಸಗಳು ಮಾಡಬೇಕೆನ್ನುವ ಜ್ಞಾನ ಕರ್ಮಯೋಗಕ್ಕೆ ಸಂಬಂಧವಾದುದೆಂದು ಓದುವವರು ಗ್ರಹಿಸಿಕೊಳ್ಳಬೇಕು. ಯಾವ ಕಾರ್ಯವಾಗಲಿ, ಅದರ ಆಲೋಚನೆಯಾಗಲಿ, ಇರಬಾರದೆಂದು ಹೇಳುವ ಜ್ಞಾನ ಬ್ರಹ್ಮಯೋಗಕ್ಕೆ ಸಂಬಂಧವಾದುದು. ಇಲ್ಲಿ ಅರ್ಜುನನು ಕೇಳುವ ಮಾತು ಬ್ರಹ್ಮಯೋಗಿಗಳಿಗೆ ಸಂಬಂಧಿಸಿರುವುದೆಂದು ತಿಳಿಯಬೇಕು. ಬ್ರಹ್ಮ ಯೋಗಿಗಳು ಕೆಲಸಗಳು ಮಾಡಬಾರದೆಂದು, ಅವರ ಮನಸ್ಸನ್ನು ಆಲೋಚನೆಗಳಿಂದ ದೂರಮಾಡಬೇಕೆಂದು ಪ್ರಯತ್ನ ಮಾಡುತ್ತಿರುತ್ತಾರೆ. ಅಂತವನಿಗೆ ಯೋಚನೆಗಳು ಬಂದು ಇಷ್ಟವಿಲ್ಲದಿದ್ದರೂ ಅವನ ಮೂಲಕ ಕೆಲಸಗಳು ಮಾಡಲಾಗುತ್ತದೆ. ಹಾಗೆ ಏಕೆ ನಡೆಯುತ್ತಿದೆ ಅದಕ್ಕೆ ಕಾರಣವೇನು ಎಂದು ಅರ್ಜುನ ವಿವರವಾಗಿ ತಿಳಿಸೆಂದು ಕೋರಿದ್ದಾನೆ. ಅದಕ್ಕೆ ಉತ್ತರವಾಗಿ ಶ್ರೀಕೃಷ್ಣನು ಈ ವಿಧವಾಗಿ ಹೇಳುತ್ತಿದ್ದಾನೆ.

**ಶ್ರೀ ಭಗವಂತನು ಹೀಗೆ ಹೇಳುತ್ತಾನೆ :–**

**(2) ಶ್ಲೋ॥ 37 : ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನ ಮಿಹ ವೈರಿಣಮ್ ॥**

**(ಪ್ರಕೃತಿ)**

**ಭಾವಾರ್ಥ**: ರಜೋಗುಣದಲ್ಲಿ ಹುಟ್ಟಿದ ಕಾಮವೆನ್ನುವ ಗುಣ ಮತ್ತು ಕ್ರೋಧವೆನ್ನುವ ಗುಣಗಳು ಇವೆ. ಈ ಆಸೆ ತೃಪ್ತಿಯಿಲ್ಲದಿರುವುದು. ಕೋಪ ಪಾಪವನ್ನು ಉಂಟುಮಾಡುವುದು. ಇವು ಜ್ಞಾನಕ್ಕೆ ಶತ್ರುಗಳು.

**ವಿವರ** : ನಮ್ಮ ಶರೀರದಲ್ಲಿ ಗುಣಗಳಿವೆಯೆಂದು ತಿಳಿದುಕೊಂಡಿದ್ದೇವೆ. ಅವು ಎಲ್ಲಿವೆ ಎನ್ನುವುದು ತಿಳಿಸಲಿಲ್ಲ. ಇಲ್ಲಿ ಭಗವಂತನು ಸೂಚನೆಗಾಗಿ ಒಂದು ಗುಣದ ಹೆಸರಿಟ್ಟು

ಹೇಳಿದ್ದಾನೆ. ಆದ ಕಾರಣ ಅವುಗಳ ಸ್ವರೂಪವನ್ನು ಸ್ವಲ್ಪ ತಿಳಿದುಕೊಳ್ಳಬೇಕಾಗಿದೆ. **ಗುಣತ್ರಯ ವಿಭಾಗಯೋಗವೆಂಬ** ಅಧ್ಯಾಯದಲ್ಲಿ ಮೂರು ಗುಣಗಳ ವಿವರವನ್ನು ಪೂರ್ತಿಯಾಗಿ ತಿಳಿಸಲಾಗಿದೆ. ಇಲ್ಲಿ ರಾಜಸದಲ್ಲಿ ಹುಟ್ಟಿದ ಕಾಮ ಕ್ರೋಧವೆಂದಿದ್ದಾನೆ ಇದನ್ನನುಸರಿಸಿ ಇದು ಒಂದು ಗುಂಪು ಎಂದು ತಿಳಿಯುತ್ತಿದೆ. ವಾಸ್ತವವಾಗಿ ಗುಣಗಳು ಮೂರು ಗುಂಪುಗಳಾಗಿವೆ. 1) ಸಾತ್ತ್ವಿಕ 2) ರಾಜಸ 3) ತಾಮಸ ಎನ್ನುವವು. ಅವುಗಳಲ್ಲಿ ಮಧ್ಯದಲ್ಲಿರುವ ರಾಜಸ ಭಾಗದಲ್ಲಿ ಹುಟ್ಟಿದ ಕಾಮಕ್ಕೂ ಕ್ರೋಧಕ್ಕೂ ಹೆಚ್ಚಿನ ಬಲವಿದೆ. ರಾಜಸ ಕಾಮಕ್ಕೆ ತೃಪ್ತಿ ಬಹಳ ಕಡಿಮೆ, ತೃಪ್ತಿ ಪಡದಿರುವಾಗ ಅದರ ಹಿಂದೆಯೇ ಅದರಲ್ಲಿನ ಕೋಪ ಬರುತ್ತಿದೆ. ಆ ಕೋಪ ಹೆಚ್ಚಾಗಿ ಕೆಟ್ಟಕಾರ್ಯಗಳು ಮಾಡಿಸಿ ಪಾಪವನ್ನು ಹೊಂದುವಂತೆ ಮಾಡುತ್ತದೆ. ತೃಪ್ತಿಯಿಲ್ಲದ ಮಾನವನು ತೃಪ್ತಿಗೋಸ್ಕರವೇ ಪರದಾಡುತ್ತಿದ್ದಾನೆ. ಜ್ಞಾನದಕಡೆ ಬರಲಾರನು. ಹಾಗೆ ಕ್ರೋಧವು ಜ್ಞಾನವನ್ನು ತಿಳಿಯಗೊಳಿಸುವುದಿಲ್ಲ. ಉಳಿದ ಗುಣಭಾಗಗಳಲ್ಲಿ ಹುಟ್ಟಿದವುಗಳಿಗಿಂತ ರಾಜಸಭಾಗದಲ್ಲಿನ ಈ ಎರಡು ಗುಣಗಳೇ ಹೆಚ್ಚಾಗಿ ಜ್ಞಾನಕ್ಕೆ ಆತಂಕವಾಗಿವೆ. ಆದ್ದರಿಂದ ಈ ಎರಡು ಗುಣಗಳು ಜ್ಞಾನಕ್ಕೆ ಶತ್ರುಗಳಂತೆ ಇವೆ.

**ಗಮನಿಕೆ :** ಮೊಟ್ಟಮೊದಲು ಭಗವದ್ಗೀತೆಯಲ್ಲಿ ಕಾಮ ಎಂಬ ಮಾತನ್ನು ವಿಶೇಷವಾಗಿ ಇಲ್ಲಿಯೇ ಹೇಳಲಾಗಿದೆ. ಶರೀರದಲ್ಲಿ ಇದರ ಪಾತ್ರ ಬಹಳ ಮುಖ್ಯವಾದುದು. ಆದ್ದರಿಂದ ಇದರ ಸ್ವರೂಪ ಮೊದಲೇ ಅರ್ಥವಾಗದೆ ಹೋದರೆ ಭಾವವೆಲ್ಲ ಕೆಟ್ಟು ಹೋಗುತ್ತದೆ. **ಪುರುಷನಿಗೆ ಸ್ತ್ರೀಯರ ಬಗ್ಗೆ ಇರುವ ಶಾರೀರಕ ಕೋರಿಕೆಯನ್ನೇ ಕಾಮವೆಂದು ಬಹಳಜನರು ಅಂದುಕೋಳ್ಳುವುದು ನಡೆಯುತ್ತಿದೆ. ವಾಸ್ತವಕ್ಕೆ ಕಾಮ ಎನ್ನುವ ಮಾತಿಗೆ ಅರ್ಥ ಆಸೆ ಅಥವಾ, ಕೋರಿಕೆ ಎನ್ನಬಹುದು.** ಪ್ರತ್ಯೇಕಿಸಿ ಸ್ತ್ರೀಯರ ಮೇಲಿನ ಕೋರಿಕೆಯನ್ನು ಕಾಮ ಎನ್ನಬಾರದು. ಕಾಮ ಎಂದರೆ ಚಿನ್ನದ ಮೇಲೆ ಆಸೆ ಆಗಬಹುದು. ಮಕ್ಕಳ ಮೇಲೆ ಆಸೆ ಆಗಬಹುದು. ಭೂಮಿ ಮೇಲೆ ಆಸೆ ಯಾಗಬಹುದು, ವಸ್ತುಗಳ ಮೇಲೆ ಆಸೆಯಾಗಬಹುದು. ಹಾಗೆ ಯಾವುದರ ಮೇಲೆ ಆಸೆಯಾದರು ಕಾಮ ಎಂದೇ ಉಚ್ಚರಿಸಲಾಗುತ್ತಿದೆ. ಕಾಮ ಅಂದಮಾತ್ರಕ್ಕೆ ಸ್ತ್ರೀಯರ ಮೇಲೇ ಎಂದುಕೊಳ್ಳಬಾರದು. ಹಾಗೆ ಸ್ತ್ರೀಯರು ಪುರುಷರ ಮೇಲಿರುವ ಆಸೆಯನ್ನು ಕಾಮ ಎಂದುಕೊಳ್ಳಬಾರದು. ಸಂದರ್ಭಾನುಸಾರ ಅರ್ಥ ಮಾಡಿಕೊಳ್ಳಬೇಕು. ಈ ವಿಷಯದಲ್ಲಿ ಚೆನ್ನಾಗಿ ತಿಳಿದ ಜ್ಞಾನಿಗಳೆನಿಸಿಕೊಂಡವರೇ ತಪ್ಪಾಗಿ ಅರ್ಥೈಸಿಕೊಳ್ಳುತ್ತಿದ್ದಾರೆ. ಉದಾಹರಣೆಗೆ ಒಂದು ಆಧ್ಯಾತ್ಮಿಕ ಉಪನ್ಯಾಸ ಹೇಳುವ ಪಂಡಿತನ ಮನೆಯಲ್ಲಿ ಮದುವೆ ನಡೆಯುತ್ತಿತ್ತು. ಮದುವೆ ಸಡಗರ ಸಂಭ್ರಮದಿಂದಿರಬೇಕೆಂದು ಮೈಕ್‌ಸೆಟ್ ಇಟ್ಟು ಅದರಲ್ಲಿ ಘಂಟಸಾಲ ಹಾಡಿರುವ ಭಗವದ್ಗೀತೆ ರಿಕಾರ್ಡ್ ಇಟ್ಟಿದ್ದಾರೆ.

ಆ ರಿಕಾರ್ಡಿನಲ್ಲಿ ಮೇಲಿನ ಶ್ಲೋಕವೇ ಬಂದಿದೆ. ಅದರಲ್ಲಿ ಕಾಮವೆನ್ನುವ ಗುಣ ಜ್ಞಾನಕ್ಕೆ ಶತ್ರುವಿನಂತಹದ್ದು ಅದನ್ನು ಬಿಟ್ಟುಬಿಡು ಪಾರ್ಥ ಎಂದು ಹೇಳುವುದು ಇದೆ. ಆಗ ಅಲ್ಲಿಯೇ ಇದ್ದು ಆ ಹಾಡು ಕೇಳಿದ ಆ ಪಂಡಿತನು ಯಾರು ಈ ರಿಕಾರ್ಡ್ ಇಟ್ಟಿರುವುದೆಂದು ಕೋಪ ಮಾಡಿಕೊಂಡು ಹೀಗೆ ಅಂದನಂತೆ 'ಶುಭವಾ ಎಂದು ಮದುವೆ ಮಾಡುತ್ತಿದ್ದರೆ ಕಾಮವನ್ನು ಬಿಟ್ಟುಬಿಡೆಂದು ಹೇಳುವ ರಿಕಾರ್ಡ್ ಇಡಬಹುದಾ ಕಾಮ ಇಲ್ಲದಿದ್ದರೇ ಅವರ ಮದುವೆ ಏಕೆ' ಈ ಮಾತು ಕೇಳಿದವರು ತಕ್ಷಣ ಆ ರಿಕಾರ್ಡ್‌ನ್ನು ತೆಗೆದುಹಾಕಿದರು. ಇಲ್ಲಿ ಸಾಧಾರಣ ಮಾನವನು ತನ್ನ ತಿಳಿಯದತನದಿಂದ ತಪ್ಪಾಗಿ ಕಾಮ ಅನ್ನುವ ಪದವನ್ನು ಅರ್ಥಮಾಡಿಕೊಂಡರು ಪರವಾಗಿಲ್ಲ. ಆದರೆ ತಿಳಿದ ಜ್ಞಾನಿಯೇ ಕಾಮ ಎಂದರೆ ಬೇರೆ ಅರ್ಥಮಾಡಿಕೊಳ್ಳುವುದು ಅಜ್ಞಾನವೇ ಆಗುತ್ತದೆ. ಸಮಯ ದೊರೆತರೆ ಸಾಕು ಮಾಯೆ ನಮ್ಮನ್ನು ತಪ್ಪುದಾರಿ ಹಿಡಿಸುತ್ತದೆ. ಆದ್ದರಿಂದ ಜಾಗ್ರತೆಯಾಗಿ ಜ್ಞಾನವಿಷಯಗಳು ಪರಿಶೀಲಿಸಬೇಕೆಂದು ಕೋರುತ್ತಿದ್ದೇವೆ. ಕಾಮ ಎನ್ನುವ ಪದ ಭಗವದ್ಗೀತೆಯಲ್ಲಿ ಅನೇಕಸಲ, ಬಹಳ ಸಂದರ್ಭಗಳಲ್ಲಿ ಉಪಯೋಗಿಸಲಾಗಿದೆ. ಎಲ್ಲಾ ಕಡೆ ಆಸೆಎಂಬ ಅರ್ಥವನ್ನೇ ತೆಗೆದುಕೊಳ್ಳಬೇಕೆಂದು ತಿಳಿಸುತ್ತಿದ್ದೇವೆ.

**(2) ಶ್ಲೋ॥ 38 : ಧೂಮೇ ನಾವ್ರಿಯತೇ ವಹ್ನಿರ್ಯಥಾಽಽ ದರ್ಶೋಮಲೇನ ಚ ।**
**ಯಥೋಲ್ಬೇ ನಾವೃತೋ ಗರ್ಭಸ್ತಥಾ ತೇ ನೇದಮಾವೃತಮ್ ॥**
**(ಪ್ರಕೃತಿ)**

**ಭಾವಾರ್ಥ** : ಹೊಗೆಯಿಂದ ಅಗ್ನಿಯೂ, ದೂಳಿನಿಂದ ಕನ್ನಡಿಯೂ, ಗರ್ಭಪೊರೆಗಳಿಂದ ಶಿಶುವು ಮುಚ್ಚಲ್ಪಟ್ಟಂತೆ ಆಸೆಯಿಂದ ಜ್ಞಾನವು ಮುಚ್ಚಲ್ಪಟ್ಟಿದೆ.

**ವಿವರ** : ಹೊಗೆ ಆವರಿಸಿರುವಾಗ ಅಗ್ನಿಯ ತೇಜಸ್ಸು ಕಾಣಿಸುವುದಿಲ್ಲ. ದೂಳು ತುಂಬಿಕೊಂಡಾಗ ಕನ್ನಡಿಯಲ್ಲಿನ ಪ್ರತಿಬಿಂಬ ಕಾಣಿಸುವುದಿಲ್ಲ. ಗರ್ಭದಲ್ಲಿನ ಮಾವಿ ಪೊರೆಯಲ್ಲಿರುವಾಗ ಶಿಶು ಹೆಣ್ಣೋ ಅಥವಾ ಗಂಡೋ ತಿಳಿಯುವುದಿಲ್ಲ. ಹಾಗೆ ಆಸೆ ಎಂಬ ಗುಣ ನಮ್ಮ ತಲೆಯಲ್ಲಿ ತುಂಬಿಕೊಂಡಾಗ, ತಲೆಯಲ್ಲಿಯೇ ಇರುವ ಜ್ಞಾನ ಪ್ರಕಾಶಿಸುವುದಿಲ್ಲ. ಹೊಗೆ ತುಂಬಿಕೊಂಡಾಗ ಒಲೆಯಲ್ಲಿನ ಅಗ್ನಿ ಹೇಗೆ ಪ್ರಕಾಶವಾಗಿ ಉರಿಯುವುದಿಲ್ಲವೋ, ಹಾಗೆ ನಮ್ಮ ತಲೆಯಲ್ಲಿ ಆಸೆ ತುಂಬಿಕೊಂಡಾಗ ಇರುವ ಜ್ಞಾನವು ತಿಳಿಯದಂತೆ ಹೋಗುತ್ತದೆ. ಬ್ರಹ್ಮಯೋಗ ಮಾಡುವವನಿಗೆ ಆ ಯೋಗ ಸಿಗುವುದಿಲ್ಲ. ಬ್ರಹ್ಮಯೋಗ ಆಚರಣೆಗೆ ಅದು ಪೂರ್ತಿ ಆತಂಕವಾಗುತ್ತದೆ.

**(2) ಶ್ಲೋ॥ 39 : ಆವೃತಂ ಜ್ಞಾನ ಮೇತೇನ ಜ್ಞಾನಿನೋ ನಿತ್ಯವೈರಿಣಾ ।**
**ಕಾಮರೂಪೇಣ ಕೌಂತೇಯ! ದುಷ್ಪೂರೇ ಣಾನಲೇನ ಚ ॥**

**(ಪ್ರಕೃತಿ)**

**ಭಾವಾರ್ಥ :** ತೀರದಿರುವುದು ಮತ್ತು ತೃಪ್ತಿ ಇಲ್ಲದಿರುವುದಾದ ಆಸೆ ಜ್ಞಾನಕ್ಕೆ ನಿತ್ಯ ಶತ್ರುವಾಗಿದ್ದು ಜ್ಞಾನವನ್ನು ಮುಚ್ಚಿಹಾಕುತ್ತಿದೆ.

**ವಿವರ :** ಆಸೆಗೆ ಅಂತ್ಯವಿಲ್ಲ ಎನ್ನುವ ಮಾತು ಬಹಳಜನರು ಕೇಳಿರುತ್ತಾರೆ. ಆಕಾಶಕ್ಕೆ ಹದ್ದು (ಎಲ್ಲೆ) ಹೇಗೆ ಇಲ್ಲವೊ, ಆಸೆಗೂ ಸಹ ಎಲ್ಲೆ ಇಲ್ಲವೆಂದು ಹೇಳಬಹುದು. ಜ್ಞಾನಿಗಳನ್ನೇ ಮುಪ್ಪುತಿಪ್ಪಲಿಡುವ ಆಸೆ ಅಜ್ಞಾನಿಗಳನ್ನು ಏನಾದರೂ ಮಾಡಬಲ್ಲದು, ಜ್ಞಾನವನ್ನು ಮುಚ್ಚಿಡುವುದು, ಜ್ಞಾನಿಗಳಿಗೆ ನಿತ್ಯ ಶತ್ರುವಾದ ಆಸೆ ಸಾಧಾರಣ ಮಾನವನಲ್ಲಿ ಶತ್ರುವು ಅಲ್ಲ. ಇದೇನು ವಿಚಿತ್ರವೆಂದುಕೊಳ್ಳುವ ಕೆಲಸವಿಲ್ಲ. ಬೇರೆ ವರ್ಗದವನು ಶತ್ರುವಾಗುತ್ತಾನಾಗಲಿ, ತನ್ನ ವರ್ಗದವನು ಶತ್ರು ಆಗುವುದಿಲ್ಲ ಮಿತ್ರನೇ ಆಗುತ್ತಾನೆ. ಹಾಗೆ ಆತ್ಮ ವರ್ಗವಾದ ಜ್ಞಾನಿ ಶತ್ರುವಾಗುತ್ತಾನೆ. ಆದರೆ ಪ್ರಕೃತಿ ವರ್ಗದಲ್ಲಿರುವ ಅಜ್ಞಾನಿ ತನ್ನ ವರ್ಗದೊಳಗಿನವನಾದ್ದರಿಂದ ಕಾಮಕ್ಕೆ ಶತ್ರುವು ಅಲ್ಲ. ಪ್ರಕೃತಿಯನ್ನು ಬಿಟ್ಟು ಆತ್ಮವರ್ಗದೊಳಗೆ ಹೋಗಬೇಕೆಂದುಕೊಂಡರೆ ಆಗ ಶತ್ರು ಆಗುತ್ತಾನೆ. ಜ್ಞಾನಿಗೆ ಶತ್ರುವೆಂದು ಹೇಳಲಾದ ಆಸೆ ಬಲವಾದುದಾ ಅಲ್ಲವಾ? ಆ ಬಲ ಯಾವುದರಿಂದ ಇದೆಯೆಂಬ ವಿಷಯವಾಗಿ ಕೆಳಗಿನ ಶ್ಲೋಕದಲ್ಲಿ ನೋಡಿರಿ.

**(2) ಶ್ಲೋ॥ 40 : ಇಂದ್ರಿಯಾಣಿ ಮನೋಬುದ್ಧಿ ರಸ್ಯಾಧಿಷ್ಠಾನ ಮುಚ್ಯತೇ ।**
**ಏತೈರ್ವಿಮೋಹಯ ತ್ಯೇಷ ಜ್ಞಾನ ಮಾವೃತ್ಯ ದೇಹಿನಮ್ ॥**

**(ಪ್ರಕೃತಿ)**

**ಭಾವಾರ್ಥ :** ಮನಸ್ಸು, ಬುದ್ಧಿ, ಇಂದ್ರಿಯಗಳು ಆಸೆಗೆ ಅಧಿಷ್ಠಾನಗಳಾಗಿವೆ. ಇವುಗಳ ಆಧಾರದಿಂದ ಮೋಹವನ್ನುಂಟುಮಾಡಿ ಜ್ಞಾನವನ್ನು ಮುಚ್ಚಿಹಾಕುತ್ತಿದೆ.

**ವಿವರ :** ಶರೀರದಲ್ಲಿ ಜ್ಞಾನೇಂದ್ರಿಯಗಳಾದ ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ. ಅಂತರೇಂದ್ರಿಯವಾದ ಬುದ್ಧಿ, ಮತ್ತು ಹೊರಗಿನ ಜ್ಞಾನೇಂದ್ರಿಯಗಳಿಗೂ ಒಳಗಿನ ಬುದ್ಧಿಗೂ ಮಧ್ಯವರ್ತಿಯಾಗಿರುವ ಮನಸ್ಸು ಒಟ್ಟು ಏಳು ಗುಣಗಳಿಗೆ ಆಧಾರವಾಗಿವೆ. ಹೊರಗಿನ ಜ್ಞಾನೇಂದ್ರಿಯಗಳು ವಿಷಯ ಜ್ಞಾನವನ್ನು ತಿಳಿಸಿದರೆ, ಆ ವಿಷಯವನ್ನು ಮನಸ್ಸು ಸ್ವೀಕರಿಸಿ

ಒಳಗಿನ ಭಾಗವಾದ ಬುದ್ಧಿಗೆ ತಿಳಿಸಿದರೆ, ಬುದ್ಧಿಗೆ ಗುಣಗಳು ತಗುಲಿಕೊಂಡು ಯೋಚಿಸುತ್ತವೆ. ಹೀಗೆ ಜ್ಞಾನವನ್ನು ತಿಳಿದುಕೊಳ್ಳಬೇಕಾದ ಬುದ್ಧಿ ಗುಣಗಳಲ್ಲಿ ಸಿಲುಕಿಕೊಳ್ಳುವುದರಿಂದ ಜ್ಞಾನ ತಿಳಿಯದಂತೆ ಹೋಗುತ್ತಿದೆ. ಕಾಮಾದಿ ಗುಣಗಳು ಬುದ್ಧಿಯನ್ನು ಭ್ರಮಿಸುವಂತೆ ಮಾಡುತ್ತಿವೆ. ಬುದ್ಧಿಯನ್ನೇ ಭ್ರಮಿಸುವಂತೆ ಮಾಡುವ ಗುಣಗಳನ್ನು ಅಥವಾ ಆಸೆಯನ್ನು ಅಡಗಿಸಬೇಕೆಂದರೆ ಏನು ಮಾಡಬೇಕೋ ಕೆಳಗಿನ ಶ್ಲೋಕದಲ್ಲಿ ನೋಡೋಣ.

**(2) ಶ್ಲೋ॥ 41 : ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭತರರ್ಷಭ ।**
**ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಮ್ ॥**

**(ಬ್ರಹ್ಮಯೋಗ)**

**ಭಾವಾರ್ಥ:** ಆದ್ದರಿಂದ ಇಂದ್ರಿಯಗಳನ್ನು ಅಡಗಿಸಿ ಪಾಪವನ್ನು ಮಾಡಿಸುವುದು, ಜ್ಞಾನ ವಿಜ್ಞಾನಗಳನ್ನು ನಾಶ ಮಾಡುವುದಾದ ಆಸೆಯನ್ನು ಜಯಿಸಬೇಕು.

**ವಿವರ :** ಶರೀರದ ಬಾಹ್ಯ ಇಂದ್ರಿಯಗಳಾದ ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮಗಳ ವಿಷಯಗಳೇ ಒಳಗಿನ ಗುಣಗಳ ಪ್ರೇರಣೆಗೆ ಮುಖ್ಯವಾದ ಆಧಾರ. ಮೊದಲು ವಿಷಯಗಳೇ ಇಲ್ಲದಿದ್ದರೆ ಮನಸ್ಸಿಗೂ, ಬುದ್ಧಿಗೂ, ಗುಣಗಳಿಗೂ ಕೆಲಸವಿಲ್ಲದಂತೆ ಹೋಗುತ್ತದೆ. ಆಗ ಗುಣಗಳಲ್ಲಿ ಮೊದಲನೆಯದಾದ ಆಸೆ ನಿಂತುಹೋಗುತ್ತದೆ. ಈ ಪದ್ಧತಿ ಬ್ರಹ್ಮಯೋಗಿಗಳಿಗೆ ಅಗತ್ಯವೆಂದು ಮತ್ತೊಂದುಸಲ ನೆನಪಿಸುತ್ತಿದ್ದೇವೆ. ಯೋಗವನ್ನು ಮಾಡಬೇಕೆಂದು ಆಸನ ಹಾಕಿಕೊಂಡು ಕುಳಿತುಕೊಂಡವನಲ್ಲಿ ಮನಸ್ಸು, ಬುದ್ಧಿ, ಗುಣಗಳು ಕೆಲಸ ಮಾಡದಂತೆ ಹೋಗಬೇಕೆಂದರೆ ಜ್ಞಾನೇಂದ್ರಿಯಗಳಾದ ಐದನ್ನು ಅವವುಗಳ ಧ್ಯಾಸಗಳಿಂದ ಮರಳಿಸಬೇಕು. ಐದು ಜ್ಞಾನೇಂದ್ರಿಯಗಳು ಸ್ತಂಭಿಸಿದಾಗಲೇ ಅವುಗಳಿಂದ ಪ್ರಾರಂಭವಾಗುವ ಕಾರ್ಯ ಗಳೆಲ್ಲವೂ ನಿಂತುಹೋಗುತ್ತವೆ. ಈ ವಿಧಾನದಿಂದ ಒಳಗಿರುವ ಆಸೆಯನ್ನು ಪ್ರಯತ್ನ ಪೂರ್ವಕವಾಗಿ ಅಡಗಿಸಬಹುದು.

**(2) ಶ್ಲೋ॥ 42 : ಇಂದ್ರಿಯಾಣಿ ಪರಾಣ್ಯಾಹು ರಿಂದ್ರಿಯೇಭ್ಯಃ ಪರಂ ಮನಃ ।**
**ಮನಸಸ್ತು ಪರಾಬುದ್ಧಿ ರ್ಯೋ ಬುದ್ಧೇಃ ಪರತಸ್ತುಸಃ ॥**

**(ಪ್ರಕೃತಿ, ಆತ್ಮ)**

**ಭಾವಾರ್ಥ :** ಶರೀರದಲ್ಲಿ ಇಂದ್ರಿಯಗಳು ಶ್ರೇಷ್ಠವಾದವು. ಅವುಗಳಿಗಿಂತಲೂ ಮನಸ್ಸು ಶ್ರೇಷ್ಠವಾದುದು. ಅದಕ್ಕಿಂತಲು ಬುದ್ಧಿ ಶ್ರೇಷ್ಠವಾದುದು. ಬುದ್ಧಿ ಗಿಂತಲು ಆತ್ಮ ಶ್ರೇಷ್ಠವಾದುದು.

**ವಿವರ :** ಒಂದು ಮೋಟರ್ ಸೈಕಲ್‌ನ್ನು ತೆಗೆದುಕೊಂಡರೆ ರಸ್ತೆಮೇಲೆ ಹೋಗುವುದಕ್ಕೆ ಚಕ್ರಗಳು, ಚಕ್ರಗಳನ್ನು ತಿರುಗಿಸುವುದಕ್ಕೆ ಚೈನ್, ಚೈನನ್ನು ತಿರುಗಿಸುವುದಕ್ಕೆ ಗೇರ್‌ಬಾಕ್ಸ್, ಗೇರ್‌ಬಾಕ್ಸ್‌ನಲ್ಲಿ ಗೇರ್‌ಚಕ್ರಗಳು ತಿರುಗುವುದಕ್ಕೆ ಇಂಜನ್‌ಗಳಿವೆ. ಚಕ್ರಗಳು, ಚೈನ್, ಗೇರ್‌ಬಾಕ್ಸ್, ಇಂಜನ್ ಎನ್ನುವ ನಾಲ್ಕು ಭಾಗಗಳಾಗಿ ಸೈಕಲ್ ಮೋಟರ್‌ನ್ನು ವಿಭಜಿಸಿಕೊಳ್ಳಬಹುದು. ಒಂದುಕಡೆಯಿಂದ ಮತ್ತೊಂದು ಕಡೆಗೆ ಹೋಗಬೇಕೆಂದರೆ ಮೋಟರ್‌ಸೈಕಲ್‌ಗೆ ಈ ನಾಲ್ಕು ಭಾಗಗಳು ಮುಖ್ಯವಾದವೇ. ಈಗ ಅದಕ್ಕೆ ಚಕ್ರಗಳು ತೆಗೆದು ಹಾಕಿದ್ದೇವೆಂದುಕೊಳ್ಳೋಣ. ಅದು ಮುಂದಕ್ಕೆ ಹೋಗುವುದಿಲ್ಲ. ಆದರೆ ಇಂಜನ್, ಗೇರ್, ಚೈನ್ ಮೂರು ಕೆಲಸ ಮಾಡುತ್ತಿವೆ. ನಂತರ ಚೈನ್ ತೆಗೆದುಹಾಕಿದ್ದೇವೆಂದು ಕೊಳ್ಳೋಣ. ಆಗಲೂ ಗೇರ್ಸ್, ಇಂಜನ್ ಕೆಲಸ ಮಾಡುತ್ತಿರುತ್ತವೆ. ಆ ನಂತರ ಗೇರ್‌ಬಾಕ್ಸ್‌ನನ್ನೆ ತೆಗೆದುಹಾಕಿದ್ದೇವೆಂದುಕೊಳ್ಳಿ. ಕೊನೆಗೆ ಇಂಜನ್ ಕೆಲಸ ಮಾಡುತ್ತಿರುತ್ತದೆ. ಸೈಕಲ್ ಮೋಟರ್‌ಗೆ ಇರುವ ನಾಲ್ಕು ಭಾಗಗಳಲ್ಲಿ ಮೂರು ತೆಗೆದುಹಾಕಿದರೂ, ಕೊನೆಯ ಒಂದು ಭಾಗವಾದ ಇಂಜನ್ ಕೆಲಸಮಾಡುತ್ತಿದೆ. ಈಗ ಹಾಗಲ್ಲದೆ ನಾಲ್ಕು ಭಾಗಗಳಲ್ಲಿ ಮೂರು ಭಾಗಗಳನ್ನು ಹಾಗೆ ಇಟ್ಟು, ಇಂಜನ್ ಒಂದು ತೆಗೆದುಹಾಕಿದ್ದೇವೆಂದುಕೊಳ್ಳೋಣ. ಈಗ ಒಟ್ಟು ಮೂರು ಭಾಗಗಳು ಕೆಲಸ ಮಾಡುವುದಿಲ್ಲ. ಏಕೆಂದರೆ ಮೂರು ಭಾಗಗಳು ಕದಲಿ ಕೆಲಸ ಮಾಡುವುದಕ್ಕೆ ಕದಲಿಸುವ ಮುಖ್ಯ ಭಾಗವಾದ ಇಂಜನ್ ಇಲ್ಲ. ಇದರಿಂದ ಮೋಟರ್ ಸೈಕಲ್‌ಗೆ ಚಕ್ರಗಳು ಮುಖ್ಯವಾದವಾಗಿದ್ದು ಅವುಗಳಿಗಿಂತ ಮುಖ್ಯವಾದುದು ಚೈನ್, ಚೈನ್‌ಗಿಂತ ಮುಖ್ಯವಾದುದು ಗೇರ್‌ಬಾಕ್ಸ್. ಅದಕ್ಕಿಂತ ಮುಖ್ಯವಾದುದು ಇಂಜನ್ ಎಂದು ತಿಳಿಯುತ್ತಿದೆ.

ಮೋಟರ್ ಸೈಕಲ್‌ನಲ್ಲಿ ನಾಲ್ಕು ಭಾಗಗಳು ಇದ್ದಂತೆ, ನಮ್ಮ ಶರೀರದಲ್ಲಿಯೂ ಸಹ ಇಂದ್ರಿಯಗಳು, ಮನಸ್ಸು, ಬುದ್ಧಿ, ಆತ್ಮ ಅನ್ನುವ ನಾಲ್ಕು ಭಾಗಗಳಿವೆ. ಇಂದ್ರಿಯಗಳು ಇಲ್ಲದಿದ್ದರು ಮನಸ್ಸು, ಬುದ್ಧಿ ಇಲ್ಲದಿದ್ದರು ಆತ್ಮ ಇರುವ ಸಜೀವ ಶರೀರವಿರುತ್ತದೆ. ಆದರೆ ಇಂದ್ರಿಯಗಳು, ಮನಸ್ಸು, ಬುದ್ಧಿ ಇದ್ದರು ಆತ್ಮ ಇಲ್ಲದೆ ಅವು ಯಾವು ಕೆಲಸ ಮಾಡುವುದಿಲ್ಲ. ಆತ್ಮವಿಲ್ಲದ ಶರೀರ ಭೂಮಿ ಮೇಲೆ ಎಲ್ಲಿಯೂ ಇರುವುದಿಲ್ಲ. ಆತ್ಮ ಇಲ್ಲದಿದ್ದರೆ ಶರೀರ ಎಲ್ಲವೂ ನಿರ್ಜೀವವಾಗಿ ಶವವಾಗಿ ಬದಲಾಗುತ್ತದೆ. ಆದ್ದರಿಂದಲೆ

ಮೇಲಿನ ಶ್ಲೋಕದಲ್ಲಿ ಇಂದ್ರಿಯಗಳಿಗಿಂತ ಮನಸ್ಸು, ಮನಸ್ಸಿಗಿಂತ ಬುದ್ಧಿ, ಬುದ್ಧಿಗಿಂತ ಆತ್ಮ ದೊಡ್ಡದೆಂದು ಭಗವಂತನು ಹೇಳಿದ್ದಾನೆ.

**(2) ಶ್ಲೋ॥ 43 : ಏವಂ ಬುದ್ಧೇಃ ಪರಂ ಬುದ್ಧ್ವಾ ಸಂ ಸ್ತಭ್ಯಾಽತ್ಮಾ ನಮಾತ್ಮನಾ ।**
**ಜಹಿ ಶತ್ರುಂ ಮಹಾಬಾಹೋ! ಕಾಮರೂಪಂ ದುರಾಸದಮ್ ॥**
**(ಬ್ರಹ್ಮಯೋಗ)**

**ಭಾವಾರ್ಥ** : ಬುದ್ಧಿಗಿಂತ ಶ್ರೇಷ್ಠವಾದುದು ಆತ್ಮವೆಂದು ತಿಳಿದು, ಜೀವಾತ್ಮವನ್ನು ಆತ್ಮನಲ್ಲಿ ಐಕ್ಯವಾಗುವಂತೆ ಮಾಡಿ, ಜಯಿಸಲು ದುಸ್ಸಾಧ್ಯವಾದ ಆಸೆಯನ್ನು ಜಯಿಸಬಹುದು.

**ವಿವರ** : ಈ ಶ್ಲೋಕವು ಪೂರ್ತಿಯಾಗಿ ಬ್ರಹ್ಮಯೋಗವನ್ನು ಕುರಿತು ಹೇಳಿರುವುದು. ಬ್ರಹ್ಮಯೋಗದಲ್ಲಿ ಜೀವಾತ್ಮ ಆತ್ಮದಜೊತೆ ಸಂಬಂಧ ಏರ್ಪಡಿಸಿಕೊಂಡು, ಆತ್ಮದ ಅನುಭವವನ್ನು ತಿಳಿಯುವುದೇ ಸಾರಾಂಶ. ಸಾಧಾರಣ ವ್ಯಕ್ತಿಯಲ್ಲಿ ಆತ್ಮ ಜೀವಾತ್ಮಗಳು ಎರಡು ಇವೆ. ಆತ್ಮ ಜೀವಾತ್ಮವನ್ನು ನೋಡುತ್ತದೆ. ಆದರೆ ಜೀವಾತ್ಮ ಆತ್ಮವನ್ನು ನೋಡಲಾರದು. ಇಬ್ಬರು ಒಂದೆಕಡೆ ಇದ್ದು ಆತ್ಮ ಜೀವಾತ್ಮವನ್ನು ನೋಡಿದಾಗ, ಜೀವಾತ್ಮ ಆತ್ಮವನ್ನು ಏಕೆ ನೋಡಲಿಲ್ಲವೆಂದು ಪ್ರಶ್ನೆ ಕೇಳಬಹುದು. ಅದಕ್ಕೆ ಸಮಾಧಾನ ಇಬ್ಬರು ವ್ಯಕ್ತಿಗಳು ಒಂದು ಕಡೆ ಇದ್ದಾಗ, ಒಬ್ಬರಿಗೊಬ್ಬರು ಎದುರೆದುರಾಗಿ ನಿಂತಾಗ, ಇಬ್ಬರು ಒಬ್ಬರಿಗೊಬ್ಬರು ನೋಡಿಕೊಳ್ಳುತ್ತಾರೆ. ಎದುರೆದುರು ಅಲ್ಲದೇ ಒಬ್ಬರ ಹಿಂದೆ ಒಬ್ಬರು ನಿಂತಿದ್ದಾರೆಂದು ಕೊಳ್ಳೋಣ. ಆಗ ಮುಂದೆ ಇರುವವನನ್ನು ಹಿಂದೆ ಇರುವವನು ನೋಡಬಲ್ಲನು. ಹಿಂದಿರುವವನನ್ನು ಮುಂದಿರುವವನು ನೋಡಲಾರನು. ಈ ವಿಧವಾಗಿಯೇ ಸಾಧಾರಣ ವ್ಯಕ್ತಿಯಲ್ಲಿ ಆತ್ಮ ಜೀವಾತ್ಮ ಒಂದುಕಡೆ ಇದ್ದರೂ, ಅವು ಒಂದರ ಹಿಂದೆ ಒಂದಿದೆ. ಜೀವಾತ್ಮದ ಹಿಂದೆ ಆತ್ಮವಿದೆ. ಆದ ಕಾರಣ ಆತ್ಮಕ್ಕೆ ಜೀವಾತ್ಮ ಕಾಣಿಸುತ್ತದೆ. ಆದರೆ ಜೀವಾತ್ಮಕ್ಕೆ ಆತ್ಮ ಕಾಣಿಸುವುದಿಲ್ಲ. ಜೀವಾತ್ಮದ ಮುಂದೆ ಗುಣಗಳು, ಬುದ್ಧಿ, ಮನಸ್ಸು ಇರುವುದರಿಂದ, ಆತನಿಗೆ ಅವುಗಳೇ ಕಾಣಿಸುತ್ತಿರುತ್ತವೆ. ಅವುಗಳ ಅನುಭವಗಳನ್ನೇ ಪಡೆಯುತ್ತಿರುತ್ತಾನೆ. ಹಿಂದಿರುವ ಆತ್ಮ ತಿಳಿಯುವುದಿಲ್ಲ, ಅದರ ಅನುಭವವು ತಿಳಿಯುವುದಿಲ್ಲ.

ಅದೇ ಬ್ರಹ್ಮಯೋಗದಲ್ಲಿ ಜೀವಾತ್ಮ ಗುಣಗಳು, ಮನಸ್ಸು, ಬುದ್ಧಿ ಕಡೆಯಿಂದ ಹಿಂತಿರುಗಿ ಅವುಗಳ ಅನುಭವಗಳನ್ನು ಬಿಟ್ಟು, ಹಿಂದೆ ಸಾಕ್ಷಿಯಾಗಿರುವ ಆತ್ಮದಕಡೆ

ಎದುರುಗಡೆ ನಿಲ್ಲುತ್ತಿದ್ದಾನೆ. ಆಗ ಜೀವಾತ್ಮ ಆತ್ಮನನ್ನು ನೋಡುತ್ತಿದ್ದಾನೆ, ಆತ್ಮಾನುಭವವನ್ನು ಹೊಂದುತ್ತಿದ್ದಾನೆ. ಹಾಗೆ ಇರುವವರೆಗೂ ಆಸೆ ಮೊದಲಾದ ಗುಣಗಳಾಗಲಿ, ಅವುಗಳ ಜ್ಞಾಪಕವಾಗಲಿ, ಇಂದ್ರಿಯ ವಿಷಯಗಳಾಗಲಿ, ಬುದ್ಧಿ ಯೋಚಿಸುವುದಾಗಲಿ, ಯಾವ ಇತರ ಧ್ಯಾಸಗಳು ಜೀವಾತ್ಮನಿಗೆ ತಿಳಿಯುವುದಿಲ್ಲ. ಅದನ್ನೇ ಸ್ವಚ್ಛವಾದ ಬ್ರಹ್ಮಯೋಗ ಎನ್ನುತ್ತೇವೆ. ಅಭ್ಯಾಸ ಮಾಡಿಕೊಂಡು ಈ ಯೋಗದಲ್ಲಿ ಎಷ್ಟುಕಾಲವಾದರು ಇರಬಹುದು. ಈ ಪದ್ಧತಿ ಮೂಲಕ ಮನಸ್ಸನ್ನು, ಆಸೆಯನ್ನು ಅಡಗಿಸೆಂದು ಭಗವಂತನು ಹೇಳಿದ್ದಾನೆಂದು ತಿಳಿಯಿರಿ. ಕರ್ಮಯೋಗವೆನ್ನುವ ಈ ಅಧ್ಯಾಯ ಇಲ್ಲಿಗೆ ಮುಕ್ತಾಯವಾಗಿದೆ. ಇದರಲ್ಲಿ ಹೇಳಲಾದ ಶ್ಲೋಕಗಳು ಒಟ್ಟು ಮತ್ತು ಯಾವ ಶ್ಲೋಕ ಯಾವ ವಿಷಯವನ್ನು ಕುರಿತು ಬೋಧಿಸಿದೆ ಕೆಳಗಿನ ಪಟ್ಟಿಯಲ್ಲಿ ವಿವರವಾಗಿದೆ.

| | | | |
|---|---|---|---|
| 1. | ಅಶಾಸ್ತ್ರೀಯ ಶ್ಲೋಕಗಳು (ಕಲ್ಪಿತಗಳು) | – | 7 |
| 2. | ಬ್ರಹ್ಮಯೋಗ ಕರ್ಮಯೋಗ ಎರಡು ಸೇರಿ ಇರುವವು | – | 3 |
| 3. | ಬ್ರಹ್ಮಯೋಗ | – | 7 |
| 4. | ಕರ್ಮಯೋಗ | – | 12 |
| 5. | ಪ್ರಕೃತಿ | – | 8 |
| 6. | ಪ್ರಕೃತಿ, ಆತ್ಮ | – | 1 |
| 7. | ಕರ್ಮಯೋಗ, ಜೀವಾತ್ಮ | – | 3 |
| 8. | ಬ್ರಹ್ಮಯೋಗ, ಜೀವಾತ್ಮ | – | 1 |
| 9. | ಜೀವಾತ್ಮ | – | 1 |
| | **ಒಟ್ಟು ಶ್ಲೋಕಗಳು** | – | **43** |

ಭಾವ, ವಿವರವನ್ನು ಬದಲಾಯಿಸಿ ಬರೆದ ಶ್ಲೋಕಗಳು – 9, 21, 24, 35.



**ಮೂರನೆಯ ಅಧ್ಯಾಯ**

# ಜ್ಞಾನಯೋಗ

**ಶ್ರೀ ಭಗವಂತನು ಹೀಗೆ ಹೇಳಿದನು :–**

**(3) ಶ್ಲೋ॥ 1 : ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹ ಮವ್ಯಯಮ್ ।**
**ವಿವಸ್ವಾನ್ ಮನವೇ ಪ್ರಾಹ ಮನುರಿಕ್ಷ್ವಾಕವೇ ಬ್ರವೀತ್ ॥**

**(ಕರ್ಮಯೋಗ, ಬ್ರಹ್ಮಯೋಗ)**

**ಭಾವಾರ್ಥ :** ಇದು ಅವ್ಯಯವಾದ ಜ್ಞಾನ. ಮೊದಲು ಇದನ್ನು ಸೂರ್ಯನಿಗೆ ಹೇಳಿದ್ದೇನೆ. ಸೂರ್ಯನು ಮನುವಿಗೆ ಹೇಳಿದನು. ನಂತರ ಮನುವು ಇಕ್ಷ್ವಾಕನೆಂಬ ರಾಜನಿಗೆ ಹೇಳಿದನು.

**ವಿವರ :** ಹೇಳಿದವನು ಭಗವಂತನು. ಹೇಳಿರುವುದು ನಾಶವಿಲ್ಲದ ಜ್ಞಾನವನ್ನು. ಮೊದಲು ಕೇಳಿದವನು ಸೂರ್ಯನು. ಹೇಳಿದವನು ಆ ದಿನ ಹೇಗಿದ್ದಾನೋ, ಶರೀರವನ್ನು ಧರಿಸಿ ಹೇಳಿದ್ದಾನೋ, ಶರೀರವು ಇಲ್ಲದೇ ಶೂನ್ಯದಲ್ಲಿ ಶಬ್ದವನ್ನು ಹುಟ್ಟಿಸಿ ಹೇಳಿದ್ದಾನೋ ತಿಳಿಯದು. ಆತನು ಹೇಗೆ ಹೇಳಿದರೂ ಜ್ಞಾನ ಶಬ್ಧ ರೂಪದಲ್ಲಿಯೇ ಹೊರಬರಬೇಕು. ಶಬ್ಧರೂಪದಲ್ಲಿರುವ ಜ್ಞಾನವನ್ನು ಸೂರ್ಯನು ಹೇಗೆ ಕೇಳಿದ್ದಾನೆ? ಎನ್ನುವುದು ಪ್ರಶ್ನೆ. ಪೂರ್ವಕಾಲದಲ್ಲಾದರೆ ಏನು ಹೇಳಿದರೂ ನಂಬುವವರೇ. ಆದರೆ ಈ ದಿನ ಅಷ್ಟು ಕುರುಡರಂತೆ ನಂಬುವುದಿಲ್ಲ. ವಿಜ್ಞಾನ ಎಷ್ಟೋ ಮುಂದುವರೆದ ಈ ದಿನಗಳಲ್ಲಿ ಸೂರ್ಯನು ಒಂದು ಗೋಳವೆಂದು, ಅದು ಅಗ್ನಿಮಯವೆಂದು, ಭೂಮಿಗಿಂತ ಎಷ್ಟೋ ಲಕ್ಷಗಳಷ್ಟು ದೊಡ್ಡದಾದ ಸೂರ್ಯಗೋಳ ನಿತ್ಯವು ಉರಿಯುತ್ತಾ ಶಾಖವನ್ನು ಬೆಳಕನ್ನು ಕೊಡುತ್ತಿದೆ ಎಂದು ಎಲ್ಲರಿಗೂ ತಿಳಿದಿದೆ. ಮನುಷ್ಯರಂತೆ ಶರೀರವಿಲ್ಲದ ಸೂರ್ಯನು ಪರಮಾತ್ಮ ಹೇಳಿದ ಜ್ಞಾನ ಹೇಗೆ ಕೇಳಿದ್ದಾನೆ? ಎನ್ನುವ ಪ್ರಶ್ನೆ ಬಾರದಂತೆ ಇರುವುದಿಲ್ಲ. ಇಲ್ಲಿಗೆ ಸುಮ್ಮನಾಗದೆ ಮನುವು ಭೂಮಿ ಮೇಲಿರುವ ಒಬ್ಬ ಮನುಷ್ಯನಾದ್ದರಿಂದ ಆತನಿಗೆ ಸೂರ್ಯನು ಹೇಗೆ ಹೇಳಿದ್ದಾನೆ? ಹೇಳುವುದಕ್ಕೆ ಸೂರ್ಯನಿಗೆ ಬಾಯಿ ಇಲ್ಲವೆ? ಅಷ್ಟುದೊಡ್ಡ ಸೂರ್ಯನು ಎಲ್ಲಿ? ಅತೀ ಚಿಕ್ಕದಾದ ಭೂಮಿಯ ಮೇಲೆ ಮತ್ತಷ್ಟು ಚಿಕ್ಕದಾಗಿರುವ ಒಬ್ಬ ಮನುಷ್ಯ ಎಲ್ಲಿ? ಸೂರ್ಯನು ನಿಜವಾಗಲು ಹೇಳಿದ್ದಾನಾ? ಹೇಳಿದರೆ ಒಬ್ಬ ಮನುಷ್ಯ ಕೇಳಿದ್ದಾನಾ? ಮನುಷ್ಯನ ಹತ್ತಿರಕ್ಕೆ ಸೂರ್ಯನು ಬಂದರೆ ಮನುಷ್ಯ ಸೂರ್ಯನ ಶಾಖಕ್ಕೆ ಸಹಿಸಿಕೊಳ್ಳುತ್ತಾನಾ? ಹೀಗೆ ಅನೇಕ ಪ್ರಶ್ನೆಗಳು ಉದ್ಭವಿಸುತ್ತವೆ. ಈ ಪ್ರಶ್ನೆಗಳಿಗೆ ಉತ್ತರ ಇಲ್ಲದ ಪಕ್ಷದಲ್ಲಿ ಜ್ಞಾನವು ಸಂಶಯಮಯವಾಗಿ ಹೋಗುತ್ತದೆ. **ಸಂಶಯಗಳು**

**ಇಲ್ಲದಿರುವುದು ಜ್ಞಾನ** ಎನ್ನುವ ಸೂತ್ರದ ಪ್ರಕಾರ ಸಂಶಯಗಳಿರುವುದು ಅಜ್ಞಾನವಾಗುತ್ತದೆ. ಎಷ್ಟೋ ಜನ ಭಗವದ್ಗೀತೆಯನ್ನು ಬರೆದವರು ಓದಿದವರು ಇದ್ದರೂ ಅವರಿಗೆ ಈ ಪ್ರಶ್ನೆಗಳು ಬಂದಿರುವುದಿಲ್ಲವಾ? ಒಂದು ವೇಳೆ ಬರೆದಿರುವವರು ಈ ವಿಷಯವನ್ನು ಬಿಟ್ಟು ಮತ್ತೊಂದು ವಿಷಯಕ್ಕೆ ಹೋಗಿರಬಹುದು. ಓದುವವರಿಗಾದರೂ ಈ ಅನುಮಾನಗಳು ಬಂದಿರುವುದಿಲ್ಲವಾ? ಬರೆದವರ ಮತ್ತು ಓದಿದವರ ಭಾವನೆ ನಮಗೆ ಅರ್ಥವಾಗದೆ, ಭಗವದ್ಗೀತೆಯನ್ನು ಪ್ರತಿದಿನ ಓದುತ್ತಿರುವ ಒಬ್ಬ ವ್ಯಕ್ತಿಯನ್ನು ನಾವು ಈ ಪ್ರಶ್ನೆಗಳನ್ನು ಕೇಳಿದ್ದೇವೆ. ಅದಕ್ಕೆ ಆತನು ನಗುತ್ತಾ **'ಕಥೆಗೆ ಕಾಲುಗಳು ಇಲ್ಲ ಮಡಿಕೆಗೆ ಕಿವಿಗಳಿಲ್ಲ'** ಎಂದನು. ಈ ಮಾತುಕೇಳಿದ ನಾವು ಒಂದು ನಿಮಿಷ ಸ್ಥಂಭಿಸಿಹೋಗಿದ್ದೇವೆ. ಆತನ ಹತ್ತಿರ ಏನು ಮಾತನಾಡಬೇಕೋ ಅರ್ಥವಾಗದೇ ಸುಮ್ಮನಾಗಿದ್ದೇವೆ. ಪ್ರಜೆಗಳ ಹತ್ತಿರ ಭಗವದ್ಗೀತೆ ಯಾವ ರೂಪದಿಂದ ಇದೆಯೋ ನಮಗೆ ಅರ್ಥವಾಗಲಿಲ್ಲ.

ಭಗವದ್ಗೀತೆ ಕಥೆ ಅಲ್ಲ. ಭಗವದ್ಗೀತೆ ಮಾನವರಿಗೆಲ್ಲಾ ಜ್ಞಾನ ರೇಖೆ. ಪ್ರಕೃತಿಯಿಂದ ಪ್ರಾರಂಭಿಸಿ ದೈವದವರೆಗೂ ಗೀಚಲ್ಪಟ್ಟ (ಬರೆಯಲ್ಪಟ್ಟ) ಗೀತೆಯೇ ಇದು. ಇದರಲ್ಲಿ ಅಸತ್ಯಕ್ಕೆ ಸ್ಥಳವಿಲ್ಲ. ಎಲ್ಲಾ ಸತ್ಯಗಳೇ. ಎಲ್ಲಾ ಯಾಥಾರ್ಥ ಸತ್ಯಗಳಾದಾಗ, ಶಾಸ್ತ್ರಬದ್ಧವಾದಾಗ ಯಾವ ಪ್ರಶ್ನೆಗಾದರು ಉತ್ತರ ಇರುತ್ತದೆ. ಈಗ ಸೂರ್ಯನನ್ನು ಕುರಿತು ಮನುವನ್ನು ಕುರಿತು ಬಂದಿರುವ ಪ್ರಶ್ನೆಗಳಿಗೆ ಉತ್ತರಗಳು ತಿಳಿದುಕೊಳ್ಳೋಣ.

ಪ್ರಪಂಚದಲ್ಲಿ ಎಷ್ಟೋ ಜೀವರಾಶಿಗಳಿವೆ. ಅನೇಕ ಶರೀರಗಳನ್ನು ಧರಿಸಿದ ಜೀವರಾಶಿಗಳು ಭೂಮಿ ಮೇಲೆ ಅಲ್ಲದೆ ಸಮುದ್ರದಲ್ಲಿಯೂ, ಆಕಾಶದಲ್ಲಿಯೂ ಸಹ ಇವೆ. ಜೀವರಾಶಿಗಳು ಧರಿಸಿದ ಶರೀರಗಳನ್ನನುಸರಿಸಿ ಸ್ಥಾವರ ಜಂಗಮಗಳೆನ್ನುವ ಚಲಿಸದಿರುವವು ಚಲಿಸುವವು ಎರಡು ವಿಧಗಳಾಗಿವೆ. ಭೂಮಿ ಮೇಲೆ ಮನುಷ್ಯರು, ಸಮುದ್ರದಲ್ಲಿ ಜಲಚರಗಳು, ಆಕಾಶದಲ್ಲಿ ಪಕ್ಷಿಗಳೇ ಅಲ್ಲದೆ ವಿಶ್ವಗಗನದಲ್ಲಿರುವ ಎಷ್ಟೋ ಗ್ರಹಗಳೂ ಸಹ ಸಜೀವವಾದವೇ. ಸೂರ್ಯಚಂದ್ರಾದಿ ಗ್ರಹಗಳೂ ಸಹ ಅಂದಿಗೂ ಇಂದಿಗೂ ಸಜೀವವಾದವೇ. ಈ ಮಾತು ಹೊಸದೇನು ಅಲ್ಲ. ಮೊದಲು ಸೂರ್ಯನಿಗೆ ಜ್ಞಾನ ಹೇಳಿದ್ದೇನೆಂದು, ಭಗವಂತನೇ ಹೇಳಿದ್ದಾನೆ ಅಲ್ಲವೆ! ಆ ಮಾತಿನಿಂದ ಸೂರ್ಯನು ಸಜೀವವಾದವನೆಂದು ತಿಳಿಯುತ್ತಿದೆ. ಜೀವಿಗಳು ಧರಿಸಿದ ಶರೀರಗಳು ಅನೇಕ ವಿಧಗಳಾಗಿವೆಯೆಂದು ಮೊದಲೇ ತಿಳಿದುಕೊಂಡಿದ್ದೇವೆ. ಆ ಮಾತಿನ ಪ್ರಕಾರ ಮನುಷ್ಯನ ಶರೀರ ಕದಲುತ್ತಿದೆ. ಮನುಷ್ಯನ ಶರೀರದಂತೆ ತಯಾರು ಮಾಡಲಾದ ದೇವಾಲಯದಲ್ಲಿನ ಪ್ರತಿಮೆಗೂ ಸಹ ಜೀವವಿದೆ. ಮನುಷ್ಯ ಕದಲುವುದರಿಂದ ಜೀವವಿದೆ ಎಂದು ಸುಲಭವಾಗಿ

ತಿಳಿಯುತ್ತಿದೆ. ಪ್ರತಿಮೆ ಚಲಿಸುವುದಿಲ್ಲ ಆದ್ದರಿಂದ ಅದರಲ್ಲಿ ಜೀವವಿದೆ ಎಂದು ಗುರ್ತಿಸದಿದ್ದೇವೆ. ಇಂತಹ ಶರೀರದಿಂದ ಚಲಿಸದಿರುವುವು ಎಷ್ಟೋ ವಿಧಗಳ ಜೀವರಾಶಿಗಳಿವೆ. ಅಂತಹವುಗಳಲ್ಲಿ ಸೂರ್ಯಗೋಳವೂ ಸಹ ಒಂದು. ವಿವಿಧ ಜೀವ ಶರೀರಗಳು ಇರುವಂತೆ, ಗೋಳಗಳ ರೂಪದಲ್ಲಿರುವ ಜೀವರಾಶಿಗಳೂ ಸಹ ಎಷ್ಟೋ ಇವೆ. ಅದರಲ್ಲಿ ಸೂರ್ಯನೊಬ್ಬನೆಂದು ತಿಳಿಯಬೇಕು. ಕಾಣಿಸದ ಕಜ್ಜಿಕ್ರಿಮಿ ಆಕಾರಕ್ಕೂ, ಕಾಣಿಸುವ ಆನೆ ಆಕಾರಕ್ಕೂ ಎಷ್ಟೋ ವ್ಯತ್ಯಾಸ ಇದೆ ಅಲ್ಲವೆ! ಹಾಗೆ ಚಿಕ್ಕದಾಗಿರುವ ಮನುಷ್ಯನ ಆಕಾರಕ್ಕೂ ದೂರದಲ್ಲಿರುವ ಸೂರ್ಯನ ಆಕಾರಕ್ಕೂ ಎಷ್ಟೋ ವ್ಯತ್ಯಾಸ ಇದ್ದರೂ ಆಯಾ ಶರೀರದಲ್ಲಿನ ಜೀವಾತ್ಮಗಳಲ್ಲಿ ವ್ಯತ್ಯಾಸಗಳು ಇಲ್ಲ. ಎಲ್ಲಾ ಶರೀರಗಳಲ್ಲಿರುವ ಜೀವಿಗಳು ಕರ್ಮಬದ್ಧರಾಗಿ ಇರುವವರೇ. ಕರ್ಮಬದ್ಧನಾದ ಸೂರ್ಯನಿಗೂ ಸಹ ಜ್ಞಾನ ಅಗತ್ಯ. ಆದ್ದರಿಂದ ಪರಮಾತ್ಮ ಸೂರ್ಯನಿಗೆ ಪ್ರಾರಂಭದಲ್ಲಿಯೇ ಜ್ಞಾನವನ್ನು ಹೇಳಿದ್ದೇನೆಂದನು.

ಪ್ರತಿ ಜೀವರಾಶಿ ಶರೀರವನ್ನು ವಿಭಜಿಸಿದರೆ 25 ಭಾಗಗಳಿವೆ. ಆ 25 ಭಾಗಗಳಲ್ಲಿ ಹೊರಗಿನ ಇಂದ್ರಿಯಗಳಾದ ಕರ್ಮೇಂದ್ರಿಯಗಳು 5, ಜ್ಞಾನೇಂದ್ರಿಯಗಳು 5, ಮೊತ್ತವೆಲ್ಲ 10 ಆದಾಗ. ಒಳಗಿನ ಭಾಗಗಳು 15 ಕಾಣದಂತೆ ಇವೆ. ಕಾಣಿಸದ ಜೀವಾತ್ಮ, ಮನಸ್ಸು, ಬುದ್ಧಿ, ಚಿತ್ತ, ಅಹಮ್ ಎನ್ನುವ ಐದು ಅಂತಃಕರಣಗಳು, ಕಾಣಿಸದ ವ್ಯಾನ, ಉದಾನ, ಸಮಾನ, ಪ್ರಾಣ, ಅಪಾನ ವಾಯುವುಗಳು ಐದು ಮತ್ತು ದೃಷ್ಟಿ, ಶ್ರವಣ, ವಾಸನೆ, ರುಚಿ, ಸ್ಪರ್ಶ ಎನ್ನುವ ಜ್ಞಾನೇಂದ್ರಿಯಗಳಲ್ಲಿ ಅಡಗಿರುವ ಪಂಚತನ್ಮಾತ್ರಯಗಳು ಕಾಣಿಸದಿರುವವು. ಕಾಣಿಸದ 15 ಭಾಗಗಳಿಗೆ ಸೂಕ್ಷಶರೀರವೆಂದು ಹೆಸರಿಟ್ಟಿದ್ದಾರೆ. ಕಾಣಿಸುವ ಹೊರಗಿನ ಶರೀರದಲ್ಲಿನ ಭಾಗಗಳಾದ ಕಾಲು, ಕೈಯಿ, ಬಾಯಿ, ಗುದ, ಲಿಂಗ ಎನ್ನುವ ಕರ್ಮೇಂದ್ರಿಯಗಳು ಮತ್ತು ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ ಎನ್ನುವ ಜ್ಞಾನೇಂದ್ರಿಯಗಳು ಒಟ್ಟು ಹತ್ತನ್ನು ಸ್ಥೂಲಶರೀರವೆನ್ನಬಹುದು. ಇದರಿಂದ ಸ್ಥೂಲ, ಸೂಕ್ಷ್ಮ ಶರೀರಗಳೆಂದು ಶರೀರವು ಎರಡು ಭಾಗಗಳಾಗಿ ವಿಭಜಿಸಲಾಗಿದೆ. ಎಲ್ಲಾ ಜೀವ ಶರೀರಗಳು ಸೂಕ್ಷ್ಮ ಸ್ಥೂಲಗಳಾಗಿ ಇವೆಯೆಂದು ತಿಳಿಯಬೇಕು. ಈ ಸೂತ್ರದ ಪ್ರಕಾರ ಆಕಾಶದಲ್ಲಿನ ಸೂರ್ಯನಿಗೂ ಸಹ ಸ್ಥೂಲ ಸೂಕ್ಷ್ಮಗಳೆನ್ನುವ ಎರಡು ಶರೀರಗಳಿವೆ. ಈ ಸೂತ್ರದ ಪ್ರಕಾರವೇ ದೇವಾಲಯದಲ್ಲಿನ ಪ್ರತಿಮೆಗೂ ಸಹ ಎರಡು ಶರೀರಗಳಿವೆ.

ಪ್ರತಿ ದೇಹದಲ್ಲಿಯೂ ಒಬ್ಬ ಜೀವಾತ್ಮ ಇದ್ದಂತೆ, ಪ್ರತಿ ದೇವಾಲಯದಲ್ಲಿನ ಪ್ರತಿಮೆಯಲ್ಲಿ ಒಬ್ಬ ಜೀವಿ ಇದ್ದಾನೆ. ಮನುಷ್ಯ ಶರೀರದಲ್ಲಿನ ಸೂಕ್ಷ್ಮಶರೀರವನ್ನು **ಗ್ರಹ** ಎನ್ನುತ್ತೇವೆ. ಹಾಗೇ ಪ್ರತಿಮೆ ಶರೀರದಲ್ಲಿನ ಸೂಕ್ಷ್ಮ ಶರೀರವನ್ನು **ವಿಗ್ರಹ** ಎನ್ನುತ್ತೇವೆ. ಮನುಷ್ಯನ ಸೂಕ್ಷ್ಮಶರೀರ ಇತರೆ ಶರೀರದಲ್ಲಿ ಪ್ರವೇಶಿಸಿ ಮಾತನಾಡುವುದು ನಾವು ನೋಡಿರುತ್ತೇವೆ. ಹಾಗೆ ದೇವಾಲಯದಲ್ಲಿನ ವಿಗ್ರಹವೂ ಸಹ ಇತರರ ಶರೀರದಲ್ಲಿ ಪ್ರವೇಶಿಸಿ ಮಾತನಾಡುವುದೂ ಸಹ ನೋಡಿರುತ್ತೇವೆ. ಸ್ಥೂಲಶರೀರ ನಿರ್ಮಾಣ ಯಾವ ವಿಧವಾಗಿ ಇದ್ದರೂ, ಸೂಕ್ಷ್ಮದಲ್ಲಿ ಪಂಚತನ್ಮಾತ್ರಯಗಳಿಂದ ನೋಡುವುದು ಕೇಳುವುದಿದೆ. ಸೂಕ್ಷ್ಮಶರೀರಗಳು ಎಲ್ಲರನ್ನೂ ನೋಡುತ್ತಿವೆ. ಹಾಗೇ ಎಲ್ಲರ ಮಾತುಗಳನ್ನು ಕೇಳುತ್ತಿವೆ, ಸ್ಥೂಲಶರೀರಗಳಿರುವ ಗಿಡಗಳಲ್ಲಿಯೂ ಸಹ ಸೂಕ್ಷ್ಮವಿದೆ. ಆದ್ದರಿಂದ ಗಿಡಗಳು ಕೇಳುತ್ತಿವೆ, ನೋಡುತ್ತಿವೆ. ಈ ವಿಧವಾಗಿ ಸೂರ್ಯನು ನೋಡುತ್ತಿದ್ದಾನೆ ಮತ್ತು ಕೇಳುತ್ತಿದ್ದಾನೆ.

ಮುಖ್ಯವಾಗಿ ಗಮನಿಸಬೇಕಾದ ವಿಷಯವೊಂದಿದೆ. ಅದೇನೆಂದರೆ! ಸ್ವತಃ ಚಲಿಸುವ ಶರೀರದಳಲ್ಲಿರುವ ಸೂಕ್ಷ್ಮಶರೀರ, ಒಂದುಬಾರಿ ಹೊರಗೆ ಬಂದರೆ ಪುನಃ ಆ ಶರೀರದಲ್ಲಿ ಪ್ರವೇಶಿಸುವುದಿಲ್ಲ. ಸ್ವತಃವಾಗಿ ಚಲಿಸದ ಪ್ರತಿಮೆ ಶರೀರದಲ್ಲಿರುವ ಸೂಕ್ಷ್ಮಶರೀರವು ಎಷ್ಟೋಬಾರಿ ಹೊರಗೆ ಬರುತ್ತದೆ, ಪುನಃ ಆ ಶರೀರದಲ್ಲಿ ಪ್ರವೇಶಿಸುತ್ತದೆ. **ಶರೀರ ಹೊರಗೆ ಬಂದು ಪುನಃ ಸೇರಲಾರದ ಸೂಕ್ಷ್ಮಶರೀರಗಳನ್ನು ಗ್ರಹಗಳು ಎಂದಿದ್ದೇವೆ. ಶರೀರದಿಂದ ಹೊರಗೆ ಬಂದು ಪುನಃ ಶರೀರವನ್ನು ಪ್ರವೇಶಿಸುವ ಸೂಕ್ಷ್ಮಶರೀರಗಳನ್ನು ವಿಗ್ರಹಗಳು ಎಂದಿದ್ದೇವೆ.** ಗ್ರಹಗಳು ತಮ್ಮ ಶರೀರದಿಂದ ತಾವು ಅಂದುಕೊಂಡಾಗ ಹೊರಗೆ ಬರಲಾರವು. ಹಾಗೇ ಶರೀರದೊಳಗೆ ಸೇರುವುದಿಲ್ಲ. ವಿಗ್ರಹಗಳು ತಮ್ಮ ಶರೀರದಿಂದ ತಾವು ಅಂದುಕೊಂಡಾಗ ಹೊರಗೆ ಬರುತ್ತವೆ, ಪುನಃ ಹಾಗೆ ಸೇರುತ್ತವೆ. ಗ್ರಹಗಳು ತಮ್ಮ ಇಷ್ಟಬಂದಾಗ ಸ್ಥೂಲ ಶರೀರದಿಂದ ಎಲ್ಲಿಗಾದರೂ ಹೋಗುತ್ತವೆ. ವಿಗ್ರಹಗಳು ತಮ್ಮ ಸ್ಥೂಲ ಶರೀರದಿಂದ ತಮ್ಮಷ್ಟಕ್ಕೆ ತಾವು ಎಲ್ಲಿಗೂ ಹೋಗುವುದಿಲ್ಲ. ಹೀಗೆ ಸ್ಥೂಲ ಸೂಕ್ಷ್ಮಗಳ ಸ್ಥಾವರ ಜಂಗಮವಾದವುಗಳಿಗೆ ಎಷ್ಟೋ ವ್ಯತ್ಯಾಸಗಳಿವೆ.

ಮನುಷ್ಯ ಚಲಿಸುವ ಜೀವರಾಶಿಗಳ ಗುಂಪಿನೊಳಗೆ ಬರುತ್ತಾನೆ. ಆದ್ದರಿಂದ ಅವನ ಸೂಕ್ಷ್ಮವನ್ನು ಗ್ರಹ ಎನ್ನಬಹುದು. ಒಂದು ಗೋಳ ತಮ್ಮಷ್ಟಕ್ಕೆ ತಾವು ಚಲಿಸುವುದಿಲ್ಲ. ಆದ್ದರಿಂದ ಅದರ ಸೂಕ್ಷ್ಮವನ್ನು ವಿಗ್ರಹವೆನ್ನಬಹುದು. ಈ ಲೆಕ್ಕಪ್ರಕಾರ ಸೂರ್ಯನು ವಿಗ್ರಹ, ಮನುಷ್ಯ ಗ್ರಹ ಎಂದು ಗ್ರಹಿಸಬಹುದು. ಜಗತ್ತು ಹುಟ್ಟಿದಾಗ ಪ್ರಾರಂಭದಲ್ಲಿಯೇ ಪರಮಾತ್ಮ ಸೂರ್ಯನಿಗೆ ಜ್ಞಾನವನ್ನು ಬೋಧಿಸಿದ್ದಾನೆ. ಸೂರ್ಯನು ತನ್ನಲ್ಲಿನ ಸೂಕ್ಷ್ಮಕ್ಕಿರುವ

ಕೇಳುವಿಕೆ (ಶ್ರವಣ) ಎಂಬ ತನ್ಮಾತ್ರದಿಂದ ಆ ದಿನದ ಜ್ಞಾನವನ್ನೆಲ್ಲಾ ಕೇಳಿದ್ದಾನೆ. ನಂತರ ಸೂರ್ಯನು ಕೇಳಿದ ಜ್ಞಾನವನ್ನು ಭೂಮಿ ಮೇಲೆ ಮನುಷ್ಯನಾಗಿರುವ ಮಾನವನಿಗೆ ಬೋಧಿಸಿದ್ದಾನೆ. ಅದು ಹೇಗೆಂದರೆ! ಸೂರ್ಯನು ತನ್ನ ಸ್ಥೂಲ ಶರೀರವನ್ನು ಬಿಟ್ಟು, ಸೂಕ್ಷ್ಮಶರೀರದಿಂದ ಭೂಮಿ ಮೇಲಕ್ಕೆ ಬಂದು, ಬೇರೆ ಮನುಷ್ಯನ ಶರೀರದಲ್ಲಿ ಪ್ರವೇಶಿಸಿ, ಮನುವಿಗೆ ಜ್ಞಾನವನ್ನು ಬೋಧಿಸಿರಬಹುದು. ಹಾಗೆ ಮನುವಿಗೆ ಬೋಧಿಸಿ ಪುನಃ ತನ್ನ ಸ್ಥೂಲ ಶರೀರವಾದ ಅಗ್ನಿ ಗೋಳವನ್ನು ಸೇರಿರಬಹುದು, ಇರಬಹುದೆಂಬ ಮಾತಲ್ಲ, ನಿಜವಾಗಲೂ ಆ ದಿನ ಹಾಗೇ ನಡೆದಿದೆ. ಸೂರ್ಯನ ಮೂಖಾಂತರ ಭೂಮಿ ಮೇಲೆ ಜ್ಞಾನ ತಿಳಿದುಕೊಂಡ ಮನುವು, ತಾನು ತಿಳಿದುಕೊಂಡ ಜ್ಞಾನವನ್ನು ಇಕ್ಷ್ವಾಕನೆಂಬ ರಾಜನಿಗೆ ತಿಳಿಸಿದ್ದಾನೆ.

ಈಗ ಈ ವಿವರವು ತಿಳಿದಿದೆ ಆದ್ದರಿಂದ ನಮ್ಮಲ್ಲಿನ ಪ್ರಶ್ನೆಗಳಿಗೆಲ್ಲ ಉತ್ತರ ದೊರೆತಿದೆ. ಜ್ಞಾನ ಕೇಳಿಸಿಕೊಂಡ ಸೂರ್ಯನು ಜೀವಾತ್ಮ ಎಂದು ತಿಳಿಯದೆ ಹೋದರೂ, ಶರೀರ ಧರಿಸಿದ ಪ್ರತಿಯೊಬ್ಬರಿಗೂ ಎರಡು ಶರೀರಗಳಿವೆಯೆಂದು ತಿಳಿಯದೆ ಹೋದರು, ಆ ಶರೀರಗಳಿಗಿರುವ ಪ್ರತ್ಯೇಕತೆಗಳೂ ತಿಳಿಯದೆ ಹೋದರೂ, ಮೇಲಿನ ಶ್ಲೋಕಕ್ಕೆ ಅರ್ಥವೇ ತಿಳಿಯದು. ಅದರಲ್ಲಿನ ಪ್ರಶ್ನೆಗಳಿಗೆ ಉತ್ತರಗಳೇ ಇರುವುದಿಲ್ಲ. ಆದ್ದರಿಂದ ಸ್ಥೂಲ ಸೂಕ್ಷ್ಮವನ್ನು ಕುರಿತು ಪೂರ್ತಿ ಅವಗಾಹನೆ ಮಾಡಿಕೊಳ್ಳಬೇಕೆಂದು ಕೋರುತ್ತಿದ್ದೇವೆ. ಇಲ್ಲದಿದ್ದರೆ ನಿನ್ನನ್ನು ನೀನೇ ತಿಳಿದುಕೊಳ್ಳಲಾರೆ.

**(3) ಶ್ಲೋ॥ 2 : ಏವಂ ಪರಂಪರಾ ಪ್ರಾಪ್ತ ಮಿಮಂ ರಾಜರ್ಷಯೋ ವಿದುಃ ।**
**ಸಕಾಲೇನೇಹ ಮಹತಾ ಯೋಗೋ ನಷ್ಟಃ ಪರನ್ತಪ ! ॥**
**(ಕರ್ಮಯೋಗ, ಬ್ರಹ್ಮಯೋಗ)**

**ಭಾವಾರ್ಥ :** ಒಬ್ಬರಿಂದ ಒಬ್ಬರಿಗೆ ಪರಂಪರೆಯಾಗಿ ತಿಳಿಯುತ್ತಾಹೋಗಿ ರಾಜರು, ಋಷಿಗಳು, ತಿಳಿದುಕೊಂಡರು. ಎಷ್ಟೋಕಾಲ ಈ ವಿಧವಾಗಿ ನಡೆದಾಗ, ಕೊನೆಗೆ ಯೋಗಗಳ ಜ್ಞಾನವು ತಿಳಿಯದಂತೆಹೋಗಿದೆ.

**ವಿವರ :** ಭಗವಂತನು ಮೊದಲು ಸೂರ್ಯನಿಗೆ ತಿಳಿಸಿದ ಜ್ಞಾನ ಒಬ್ಬರಿಂದ ಒಬ್ಬರಿಗೆ ತಿಳಿಯುತ್ತಾಹೋಗಿ, ಪರಂಪರೆಯಾಗಿ ದೊಡ್ಡ ರಾಜರು ಋಷಿಗಳೆಲ್ಲ ತಿಳಿದುಕೊಂಡರು. ಮೊದಲು ರಾಜರಿಂದ ಪ್ರಾರಂಭವಾದ ಜ್ಞಾನ ಕೊನೆಗೆ ಅರಣ್ಯದಲ್ಲಿರುವ ಋಷಿಗಳ ಹತ್ತಿರಕ್ಕೆ ಸೇರಿದೆ. ಪೂರ್ವದಲ್ಲಿ ಮೊದಲು ಭಗವಂತನು ಜ್ಞಾನವನ್ನು ಪ್ರಜೆಗಳಿಗೆ

ತಿಳಿಯಬೇಕೆಂದು, ಪ್ರಜೆಗಳಿಗೆ ದೊಡ್ಡವರಾದ ರಾಜರಿಗೆ ಹೇಳಿದರೆ, ಅವರಮೂಲಕ ಸುಲಭವಾಗಿ ಪ್ರಜೆಗಳಲ್ಲಿ ಹರಡುತ್ತದೆಂದು ತಿಳಿದು, ರಾಜರಿಗೆ ತಿಳಿಯುವಂತೆ ಮಾಡಿದನು. ರಾಜರಿಗೆ ತಿಳಿದಿರುವುದನ್ನು ಪ್ರಜೆಗಳಿಗೆ ಬೋಧಿಸಿದಾಗ ತಿಳಿದ ಕೆಲವರು ಕಾಲಕ್ರಮೇಣ ಅರಣ್ಯದಲ್ಲಿ ಸೇರಿಹೋಗಿದ್ದಾರೆ. ರಾಜರಿಗೆ ಜ್ಞಾನದ ಮೇಲೆ ಆಸಕ್ತಿ ಕಡಿಮೆಯಾಗಿ ಕೊನೆಗೆ ಅವರಿಗೆ ತಿಳಿಯದಂತೆಹೋಗಿದೆ. ಎಲ್ಲಿಯಾದರೂ ಜ್ಞಾನದ ಮೇಲೆ ಆಸಕ್ತಿ ಹೊಂದಿರುವ ರಾಜರು ಇದ್ದರೆ, ಅವರು ಅರಣ್ಯದಲ್ಲಿರುವ ಋಷಿಗಳ ಹತ್ತಿರಕ್ಕೆ ಹೋಗಿ ಜ್ಞಾನ ತಿಳಿದುಕೊಳ್ಳುತ್ತಿದ್ದರು. ಕಾಲಕ್ರಮೇಣ ಕಾಡಿನಲ್ಲಿನ ಋಷಿಗಳಲ್ಲಿ, ಪ್ರಜೆಗಳಲ್ಲಿನ ನಾಯಕರಲ್ಲಿ ಜ್ಞಾನವು ಶೂನ್ಯವಾಗಿಹೋಗಿದೆ. ಒಂದುವೇಳೆ ಎಲ್ಲಿಯಾದರೂ ತಿಳಿದಿರುವ ಋಷಿಗಳು ಇದ್ದಾರೆಂದುಕೊಂಡರು, ಹಾಗೆ ತಿಳಿದಿರುವ ನಾಯಕರು ಇದ್ದಾರೆಂದುಕೊಂಡರು, ಅವರ ಹತ್ತಿರ ಇರುವುದು ಯೋಗಜ್ಞಾನವಲ್ಲ, ಕಾಮ್ಯಜ್ಞಾನ. ಪರಧರ್ಮವಾದ ಆಶಾ ಜ್ಞಾನವೇ ಪ್ರಜೆಗಳಲ್ಲಿಯೂ ಸಹ ತುಂಬಿಹೋಗಿ ಕೋರಿಕೆಗಳ ಪೂಜೆಗಳು, ಕೋರಿಕೆಗಳ ಯಜ್ಞಗಳು, ಕೋರಿಕೆಗಳ ವ್ರತಗಳು ಶ್ರದ್ಧೆಯಿಂದ ಆಚರಿಸುತ್ತಿದ್ದಾರೆ. ಆಸೆಯನ್ನು ಅಡಗಿಸುವ ಸ್ವಧರ್ಮ ಜ್ಞಾನವಾಗಲಿ, ಕರ್ಮವನ್ನು ನಾಶಮಾಡುವ ಆತ್ಮಜ್ಞಾನವಾಗಲಿ ಸ್ವಲ್ಪವಾದರು ಇಲ್ಲದಂತೆಹೋಗಿದೆ. ಆದ್ದರಿಂದ ಇದನ್ನು ಹೇಳಬೇಕಾದ ಅವಶ್ಯಕತೆ ಬಂದಿದೆ ಎಂದು ಕೆಳಗಿನ ಶ್ಲೋಕದಲ್ಲಿ ಭಗವಂತನು ಈ ವಿಧವಾಗಿ ಹೇಳುತ್ತಿದ್ದಾನೆ.

**(3) ಶ್ಲೋ॥ 3 : ಸ ಏವಾಯಂ ಮಯಾ ತೇಽದ್ಯ ಯೋಗಃ ಪ್ರೋಕ್ತಃ ಪುರಾತನಃ ।**
**ಭಕ್ತೋಽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತ ದುತ್ತಮಮ್ ॥**
**(ಕರ್ಮಯೋಗ, ಬ್ರಹ್ಮಯೋಗ)**

**ಭಾವಾರ್ಥ :** ಉತ್ತಮವಾದದು, ಬಹಳ ರಹಸ್ಯವಾದದು, ಪುರಾತನವಾದದು ಆದ ಯೋಗವಿದ್ಯೆಯನ್ನು ಈಗ ನೀನು ನನಗೆ ಭಕ್ತನು, ಪ್ರಿಯವಾದವನು ಆದ್ದರಿಂದ ಹೇಳುತ್ತಿದ್ದೇನೆ.

**ವಿವರ :** ಯೋಗಗಳಿಗೆ ಸಂಬಂಧಿಸಿದ ಜ್ಞಾನ ಎಷ್ಟೋ ಶ್ರೇಷ್ಟವಾದದ್ದು. ಎಷ್ಟೋ ಬೆಲೆಯುಳ್ಳ ಯೋಗಜ್ಞಾನ ಭಗವಂತನ ಮೇಲೆ ಭಕ್ತಿ ಇರುವವರಿಗೆ, ಆತ್ಮಜ್ಞಾನದ ಮೇಲೆ ಶ್ರದ್ಧೆ ಇರುವವರಿಗೆ ಮಾತ್ರವೇ ತಿಳಿಸಬೇಕು. ಆಗಲೇ ಜ್ಞಾನಕ್ಕೆ ಬೆಲೆ ಇರುತ್ತದೆ, ತಿಳಿಸಿದ ಜ್ಞಾನ ಸಾರ್ಥಕವಾಗುತ್ತದೆ. ಹಾಗಲ್ಲದೆ ಕೋರಿಕೆಗಳಿದ್ದು ಕೋರಿಕೆಗಳು ಕೋರುತ್ತಾ ಪೂಜೆಗಳು ಮಾಡುವ ಭಕ್ತರಿಗೆ, ಯೋಗಗಳಲ್ಲಿ ಆಸಕ್ತಿ ಇಲ್ಲದವರಿಗೆ, ಈ ಜ್ಞಾನವನ್ನು ಯಾವ ಕಾರಣಕ್ಕೂ ತಿಳಿಸಬಾರದು. ಹಾಗೆ ತಿಳಿಸಿದ ಪಕ್ಷದಲ್ಲಿ ಜ್ಞಾನಕ್ಕೆ ಅವರಲ್ಲಿ ಸ್ವಲ್ಪವೂ ಬೆಲೆ ಇಲ್ಲದಂತೆಹೋಗುತ್ತದೆ. ಜ್ಞಾನವನ್ನು ತಿಳಿದುಕೊಳ್ಳುವುದಕ್ಕೆ ತಿಳಿಸುವವನ ಹತ್ತಿರಕ್ಕೆ ಬರುವಾಗ

ಖರ್ಚಾದ ಹತ್ತುರೂಪಾಯಿಗಳೇ ಅವನಿಗೆ ದೊಡ್ಡದಾಗಿರುತ್ತದೆ. ಬಂದು ತಿಳಿದುಕೊಂಡ ಜ್ಞಾನ ಅವನಲೆಕ್ಕದಲ್ಲಿ ಹತ್ತುರೂಪಾಯಿಗಳ ಬೆಲೆಗಿಂತ ಕಡಿಮೆ ಇರುತ್ತದೆ. ಆದ್ದರಿಂದ ಶ್ರದ್ಧಾಭಕ್ತಿ ಇರುವವರಿಗೆ ತಿಳಿಸಬೇಕೆನ್ನುವುದರ ಸಲುವಾಗಿ, ಅರ್ಜುನನನ್ನು ಭಕ್ತನು ಇಷ್ಟವಾದವನು ಎಂದಿದ್ದಾನೆ.

**ಅರ್ಜುನನು ಹೀಗೆ ಕೇಳಿದನು :**

**(3) ಶ್ಲೋ ॥ 4 : ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ ।**
**ಕಥ ಮೇತ ದ್ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ ॥**
**(ಜೀವಾತ್ಮ, ಪರಮಾತ್ಮ)**

**ಭಾವಾರ್ಥ :** ಆದಿಯಲ್ಲಿ ಸೂರ್ಯನಿಗೆ ಜನ್ಮ ಬಂದಿದೆ. ನಿನ್ನ ಜನ್ಮ ಈಗ ಈ ಕಾಲದಲ್ಲಿ ಬಂದಿದೆ. ಈಗಿರುವ ನೀನು ಪೂರ್ವದಲ್ಲಿ ಸೂರ್ಯನಿಗೆ ಹೇಗೆ ಹೇಳಿದ್ದೀಯಾ. ನಂಬುವುದು ಹೇಗೆ?

**ವಿವರ :** ಹೀಗೆ ಅರ್ಜುನನು ಪ್ರಶ್ನೆ ಹಾಕುವುದು ಬಹಳ ಸಂತೋಷದಾಯಕ. ವಿಷಯ ಅರ್ಥವಾಗದೆ ಇರುವಾಗ, ಪ್ರಶ್ನೆ ಹಾಕಿ ತಿಳಿದುಕೊಳ್ಳುವ ಅವಶ್ಯಕತೆ ಇರುವಾಗ, ಭಗವಂತನನ್ನಾದರೂ ತಡೆದು ಕೇಳಬೇಕಾಗಿದೆ ಎಂದು ಇಲ್ಲಿ ತಿಳಿಯುತ್ತಿದೆ. ಹಾಗೆ ಕೇಳುವುದರಿಂದ ಕೇಳುವವರಲ್ಲಿ ಆಸಕ್ತಿ ಬೆಳೆದಿದೆ ಎಂದು ತಿಳಿಯುತ್ತಿದೆ. ಆ ದಿನ ಶ್ರೀಕೃಷ್ಣನು ಅರ್ಜುನನಿಗೆ ಮಧ್ಯದಲ್ಲಿ ಪ್ರಶ್ನೆಗಳು ಹಾಕಬಾರದೆಂದು ಹೇಳಲಿಲ್ಲ. ಆ ದಿನದ ಸಾಂಪ್ರದಾಯ ಹಾಗೇ ಇತ್ತು. ಈದಿನ ಹೇಳುವಾಗ ಕೇಳಬೇಕಾಗಿದ್ದೇ ಆಗಲಿ ಪ್ರಶ್ನೆ ಹಾಕಬಾರದೆಂಬ ಸಾಂಪ್ರದಾಯ ಬಂದಿದೆ. ಆದ್ದರಿಂದ ಪ್ರಶ್ನೆಗಳಿಗೆ ಉತ್ತರಗಳು ಇಲ್ಲದಂತೆ ಹೋಗಿವೆ. ಕೇಳುವವನಿಗೆ ವಿಷಯ ಒಳಗೆ ಹೋಗುತ್ತದೊ ಇಲ್ಲವೊ ಅರ್ಥವಾಗುವುದಿಲ್ಲ. ಕೇಳುವಾಗ ಅರ್ಥವಾಗದೆ ಹೋದರೆ ಪ್ರಶ್ನೆಹಾಕಿ ತಿಳಿದುಕೊಳ್ಳುವುದು ಸತ್ ಸಾಂಪ್ರದಾಯ. ಅರ್ಥವಾಗದಿದ್ದರೂ ತಲೆಯಾಡಿಸುವುದು ಒಳ್ಳೆಯದಲ್ಲ. ಒಂದುವೇಳೆ ಕೇಳುವವರಿದ್ದರು ಮಧ್ಯದಲ್ಲಿ ಪ್ರಶ್ನೆ ಹಾಕಬಾರದೆನ್ನುವುದು ಜ್ಞಾನವನ್ನು ಮುಚ್ಚಿಟ್ಟಂತೆ ಆಗುತ್ತದೆ, **'ನನ್ನ ಎದುರುಗಡೆ ಈಗಿರುವ ನೀನು ಎಷ್ಟೋ ಪೂರ್ವದಲ್ಲಿ ಹುಟ್ಟಿದ ಸೂರ್ಯನಿಗೆ ಹೇಗೆ ಹೇಳಿದ್ದೀಯಾ'** ಎಂದು ಅರ್ಜುನನು ಕೇಳಿದ ಪ್ರಶ್ನೆಗೆ ಭಗವಂತನಾದ ಶ್ರೀಕೃಷ್ಣನು ಕೆಳಗೆ ಈ ವಿಧವಾಗಿ ಉತ್ತರಿಸುತ್ತಿದ್ದಾನೆ.

**ಶ್ರೀ ಭಗವಂತನು ಹೀಗೆ ಹೇಳಿದನು :**

**(3) ಶ್ಲೋ॥ 5 : ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।**
**ತಾನ್ಯಹಂ ವೇದ ಸರ್ವಾಣಿ ನತ್ವಂ ವೇತ್ಥ ಪರಂತಪ ! ॥**
**(ಜೀವಾತ್ಮ, ಪರಮಾತ್ಮ)**

**ಭಾವಾರ್ಥ :** ನನಗೂ ಎಷ್ಟೋ ಜನ್ಮಗಳು ಉಂಟಾಗಿವೆ, ನಿನಗೂ ಸಹ ಎಷ್ಟೋ ಜನ್ಮಗಳುಂಟಾಗಿವೆ. ಅವುಗಳೆಲ್ಲವೂ ಕ್ರಮವಾಗಿ ನನಗೆ ತಿಳಿಯುತ್ತವೆ. ನಿನಗೆ ಮಾತ್ರ ಯಾವುವು ತಿಳಿಯುವುದಿಲ್ಲ.

**ವಿವರ :** ಪರಮಾತ್ಮ ಎಷ್ಟೋಬಾರಿ ಭೂಮಿ ಮೇಲೆ ಹುಟ್ಟಿದ್ದಾನೆ. ಹಾಗೇ ಜೀವಾತ್ಮವೂ ಸಹ ಹುಟ್ಟುತ್ತಾಬಂದಿದ್ದಾನೆ. ಆತನಿಗೆ ಎಲ್ಲಾ ಜನ್ಮಗಳು ಜ್ಞಾಪಕ ಇವೆ. ಜೀವಾತ್ಮಗಳಾದ ನಮಗೆ ಸ್ವಲ್ಪವೂ ಜ್ಞಾಪಕವಿಲ್ಲ. ಇಲ್ಲಿ ನಮಗೇಕೆ ಜ್ಞಾಪಕ ಇಲ್ಲದಂತೆಹೋಗುತ್ತಿದೆ ಎನ್ನುವುದು ಪ್ರಶ್ನೆ. ಈ ಪ್ರಶ್ನೆಯನ್ನು ಅರ್ಜುನನು ಕೇಳಬೇಕಾಗಿದೆ, ಆದರೆ ಕೇಳಲಾರದೆ ಹೋಗಿದ್ದಾನೆ. ಆದರೂ ನಾವು ಬಿಡುವುದಿಲ್ಲ. ಈ ಪ್ರಶ್ನೆಯನ್ನು ಇಲ್ಲಿ ಕೇಳುತ್ತಿದ್ದೇವೆ. ಏನು ಹೇಳುತ್ತಾನೋ ನೋಡೋಣ.

"ಜೀವಾತ್ಮನಾದ ನೀನು ಶರೀರದಲ್ಲಿ ಸ್ವಲ್ಪ ಪರಿವಾರದಿಂದ ವಾಸಿಸುತ್ತಿದ್ದೀಯಾ. ಪರಿವಾರ ಎಂದರೆ ಅರ್ಥವಾಗಲಿಲ್ಲವೇ! ನಿನ್ನೊಂದಿಗೆ ಶರೀರದಲ್ಲಿ ಮನಸ್ಸು, ಬುದ್ಧಿ, ಚಿತ್ತ ಮೊದಲಾದ 24 ಜನ ಸಹಚರರು ಇದ್ದಾರೆ. ಅವರಲ್ಲಿ ಮನಸ್ಸು ಎನ್ನುವುದು ಎಲ್ಲಾ ವಿಷಯಗಳನ್ನು ಜ್ಞಾಪಕ ಇಟ್ಟುಕೊಳ್ಳುವುದಾಗಿ ಇದೆ. ಜೀವಾತ್ಮಕ್ಕೆ ಸಹಚರವಾಗಿರುವ ಮನಸ್ಸು ಜನ್ಮದಿಂದ ಹುಟ್ಟಿ ಬೆಳೆಯುತ್ತಾ ಬಂದು ಮರಣದಿಂದ ನಾಶವಾಗುತ್ತಿದೆ. ಒಬ್ಬ ಜೀವಾತ್ಮ ಎಷ್ಟು ಮರಣಗಳು ಹೊಂದಿದರೂ ಅವನು ಅವನಾಗಿಯೇ ಇರುತ್ತಾನೆ. ಆದರೆ ಶರೀರವು ಹಾಗೆ ಇರುವುದಿಲ್ಲ. ಮೊದಲ ಜನ್ಮದಲ್ಲಿರುವ ಮೂಗು ಇಂದಿನ ಜನ್ಮದಲ್ಲಿರುವುದಿಲ್ಲ. ಒಂದು ಜನ್ಮದಲ್ಲಿ ಅಂದವಾದ ಮೂಗು ಇರಬಹುದು. ಮತ್ತೊಂದು ಜನ್ಮದಲ್ಲಿ ಅಂದಹೀನವಾದ ಮೂಗು ಇರಬಹುದು. ಹಾಗೆ ಎಲ್ಲಾ ಭಾಗಗಳು ಜನ್ಮಜನ್ಮಕ್ಕೂ ಅವು ಹಾಗೆಯೇ ಇರದೆ ಬೇರೆ ಬೇರೆ ಬರುತ್ತಿರುತ್ತವೆ. ಈ ವಿಧವಾಗಿಯೇ ಮನಸ್ಸೂ ಸಹ ಒಂದು ಜನ್ಮದಲ್ಲಿ ಇರುವುದು ಮತ್ತೊಂದು ಜನ್ಮದಲ್ಲಿ ಇರುವುದಿಲ್ಲ. ಒಂದು ಜನ್ಮದಲ್ಲಿ ಜ್ಞಾಪಕಶಕ್ತಿ ಹೆಚ್ಚಾಗಿರುವ ಮನಸ್ಸು ಇದ್ದು, ಬೇರೆ ಜನ್ಮದಲ್ಲಿ ಹೆಚ್ಚಾಗಿ ಮರೆವಿರುವ ಮನಸ್ಸು ಇರಬಹುದು. ಒಂದು ಜನ್ಮದಲ್ಲಿರುವ ವಿಷಯ ಜ್ಞಾಪಕಗಳೆಲ್ಲವೂ ಆ ಜನ್ಮ

ಮನಸ್ಸಿಗೇ ಇರುತ್ತವೆ. ಅದು ಮರಣದಲ್ಲಿ ಹೋದಾಗ ಅದರೊಂದಿಗೆ ಆ ಜ್ಞಾಪಕಗಳೆಲ್ಲವೂ ಹೋಗುತ್ತವೆ. ಆದ್ದರಿಂದ ಹಿಂದಿನ ಜನ್ಮ ಜ್ಞಾಪಕಗಳು ಮರುಜನ್ಮದಲ್ಲಿ ಇರುವುದಿಲ್ಲ. ಎಷ್ಟು ಜನ್ಮಗಳೆತ್ತಿದರೂ ಯಾವ ಜನ್ಮ ಜ್ಞಾಪಕಗಳು ಆ ಜನ್ಮಕ್ಕೇ ಪರಿಮಿತವಾಗಿ ಹೋಗುವುದರಿಂದ, ಜೀವಾತ್ಮನಿಗೆ ಎಷ್ಟು ಜನ್ಮಗಳೆತ್ತಿರುವುದು, ಯಾವ ಜನ್ಮದಲ್ಲಿ ಏನು ಮಾಡಿರುವುದು. ನೀನು ಜೀವಾತ್ಮನಾದ್ದರಿಂದ ನಿನಗೆ ನಿನ್ನ ವಿಷಯ ಏನು ತಿಳಿಯದು.

ನಮಗೆ ಜನ್ಮಗಳಿರುವುದು, ಜನ್ಮಗಳ ವಿಷಯ ನಮಗೆ ಜ್ಞಾಪಕವಿಲ್ಲದಿರುವುದು, ಶ್ಲೋಕದಲ್ಲಿ ಹೇಳುವುದಲ್ಲದೆ ತನಗೂ ಸಹ ಜನ್ಮಗಳು ಇವೆಯೆಂದು, ಅವೆಲ್ಲವೂ ಆತನಿಗೆ ತಿಳಿದಿದೆಯೆಂದು, ಭಗವಂತನು ಪ್ರಕಟಿಸಿಕೊಂಡಿದ್ದಾನೆ. ನಂತರ ಶ್ಲೋಕಗಳಲ್ಲಿ ಮಾನವರು ಹುಟ್ಟಿದಂತೆ ತಾನು ಮರಣಿಸುತ್ತಲೇ ಹುಟ್ಟುವವನು ಅಲ್ಲವೆಂದು, ತನ್ನ ಅವಶ್ಯಕತೆ ಭೂಮಿ ಮೇಲೆ ಉಂಟಾದಾಗ ಮಾತ್ರವೇ ಹುಟ್ಟುವವನೆಂದು ಸಹ ಹೇಳಿದ್ದಾನೆ. ತಾನು ಭೂಮಿ ಮೇಲೆ ಭಗವಂತನಾಗಿ ಹುಟ್ಟಿ ಏನು ಮಾಡಬೇಕೋ ಅದೂ ಸಹ ಹೇಳಿದ್ದಾನೆ. ಆತನ ಜನ್ಮಗಳ ವಿಷಯದಲ್ಲಿ ಇಲ್ಲಿ ದೊಡ್ಡದಾಗಿ ಪ್ರಶ್ನೆ ಬಾರದಿದ್ದರೂ, ಆ ಶ್ಲೋಕಗಳಲ್ಲಿ ಮಾತ್ರ ಒಂದು ಪ್ರಶ್ನೆ ಬರುವುದಕ್ಕೆ ಅವಕಾಶ ಇದೆ. ಎಷ್ಟೋ ಜನ್ಮಗಳು ಪಡೆದ ನಮಗೆ ದೇವರು ಎಷ್ಟು ಜನ್ಮಗಳು ಎತ್ತಿದ್ದಾನೆಂದು ಪ್ರಶ್ನೆ ಬರಬಹುದು. ಅದಕ್ಕೆ ಉತ್ತರ ನಂತರ ಶ್ಲೋಕಕ್ಕಿಂತ ಈಗಲೇ ತಿಳಿದುಕೊಳ್ಳುವುದು ಒಳ್ಳೆಯದು. ಆದ್ದರಿಂದ ಆ ಉತ್ತರ ಏನೊ ನೋಡೋಣ.

ದೇವರಿಂದ ಮೊದಲು ಪ್ರಪಂಚ, ನಂತರ ಜಗತ್ತು ಎರಡು ಸೃಷ್ಟಿಸಲ್ಪಟ್ಟಿವೆ. ದೇವರಿಂದ ಸೃಷ್ಟಿಸಲಾದ ಮಾನವನಿಗೆ ತಾನು ದೇವರಿಂದ ಸೃಷ್ಟಿಸಲ್ಪಟ್ಟಿದ್ದೇನೆ ಎಂದು, ತನಗಿಂತ ಮೊದಲೇ ತಯಾರುಮಾಡಲಾದ ಪಂಚಭೂತಗಳಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ದೇವರಿಂದ ಸೃಷ್ಟಿಸಲಾಗಿವೆ ಎಂದು, ವಿಶ್ವಕ್ಕೆಲ್ಲಾ ಒಬ್ಬ ಸೃಷ್ಟಿಕರ್ತ ಇದ್ದಾನೆಂದು ತಿಳಿದಿಲ್ಲ. ಆ ದಿನದ ಮಾನವನಿಗೆ ಕಾಣಿಸುವ ಪ್ರಕೃತಿ ಧ್ಯಾಸ ಹೊರತು ಕಾಣಿಸದ ದೇವರ ಜ್ಞಾಪಕವಾಗಲಿ, ಧ್ಯಾಸವಾಗಲಿ ಯಾವುದೂ ಇಲ್ಲ. ದೇವರು ಎನ್ನುವ ಪದವೇ ತಿಳಿಯದ ಮಾನವನಿಗೆ ದೇವರೊಬ್ಬನಿದ್ದಾನೆಂದು ಹೇಳುವುದಕ್ಕೆ, ದೇವರ ವಿಷಯ ತಿಳಿದವನೊಬ್ಬನು ಬೇಕು. ಆ ವಿಧವಾಗಿ ದೇವರ ವಿಷಯವನ್ನು ತಿಳಿದ ಮನುಷ್ಯನೊಂದರ ಅವಶ್ಯಕತೆ ಭೂಮಿ ಮೇಲೆ ಮೊದಲು ಏರ್ಪಟ್ಟಿದೆ. ದೇವರ ವಿಷಯ ದೇವರಿಗೆ ಹೊರತು ಇತರರಿಗ್ಯಾರಿಗೂ ತಿಳಿದಿಲ್ಲ. ಆದ್ದರಿಂದ ಅಂತದರಲ್ಲಿ ದೇವರೇ ಒಬ್ಬ ಮನುಷ್ಯನಾಗಿ ಭೂಮಿ ಮೇಲಕ್ಕೆ ಬಂದು ತನ್ನ ವಿಷಯವನ್ನು ತಾನೇ ಹೇಳಬೇಕಾಗಿ ಬಂದಿದೆ. ಈ ವಿಧವಾಗಿ ಮೊದಲು ಭೂಮಿ ಮೇಲೆ ದೇವರು ಹುಟ್ಟುವ ಅವಶ್ಯಕತೆ ಏರ್ಪಟ್ಟಿದೆ.

ದೇವರು ಮನುಷ್ಯನಾಗಿ ಭೂಮಿ ಮೇಲೆ ಹುಟ್ಟುವುದನ್ನು ಭಗವಂತನ ಅವತಾರ ಎನ್ನುತ್ತಿದ್ದೇವೆ. ಮೊಟ್ಟ ಮೊದಲು ದೇವರು ಭಗವಂತನಾಗಿ ಭೂಮಿ ಮೇಲೆ ಹುಟ್ಟಿದ್ದಾನೆ. ದೇವರು ಮನುಷ್ಯನಾಗಿ ಹುಟ್ಟಿದರೆ ಭಗವಂತನಾಗುತ್ತಾನೆ. ಹಾಗೆ ಹುಟ್ಟಿದವನು ದೇವರಾದರೂ ಆತನನ್ನು ಭಗವಂತ ಎಂದೇ ಕರೆಯಬೇಕು. **ದೇವರು ವಿಶ್ವವೆಲ್ಲಾ ವ್ಯಾಪಿಸಿರುವವನಾದರೆ, ಭಗವಂತನು ಕೇವಲ ಒಂದು ಶರೀರದಲ್ಲಿ ಮಾತ್ರ ಇರುವವನು. ಇದರಿಂದ ಸಂದರ್ಭಾನುಸಾರ ದೇವರನ್ನು ದೇವರೆಂದೇ ಕರೆಯಬೇಕು, ಭಗವಂತನನ್ನು ಭಗವಂತನೆಂದೇ ಹೇಳಬೇಕು. ದೇವರನ್ನು ಭಗವಂತನು ಎಂದಾಗಲಿ, ಭಗವಂತನನ್ನು ದೇವರೆಂದಾಗಲಿ ಕರೆಯಬಾರದು.** ಈಗಿನ ಕಾಲದಲ್ಲಿ ಬಹಳ ಜನ ಬೋಧಕರು ದೇವರೊಂದರ, ಭಗವಂತನೊಂದರ ಅರ್ಥ ತಿಳಿಯದೆ, ದೇವರು ಎಂದು ಹೇಳಬೇಕಾದ ಕಡೆ ಭಗವಂತನೆಂದು ಹೇಳುವುದು ನಡೆಯುತ್ತಿದೆ. ಹಾಗೆ ಹೇಳುವುದರಿಂದ ದೇವರಿಗೂ, ಭಗವಂತನಿಗಿರುವ ವ್ಯತ್ಯಾಸವು ಪ್ರಜೆಗಳಿಗೆ ತಿಳಿಯದಂತೆ ಹೋಗಿದೆ.

ತನ್ನ ವಿಷಯವನ್ನು ತಾನೇ ತಿಳಿಸುವುದಕ್ಕೆ ಬಂದಿರುವ ಭಗವಂತನು, ದೇವರಿದ್ದಾನೆಂದಾಗಲಿ, ದೇವರ ವಿಷಯವಾಗಲಿ ಏನೊಂದು ತಿಳಿಯದ ಮಾನವರಿಗೆ ಸೃಷ್ಟಿ ಪ್ರಾರಂಭವಾದ ನಂತರ ಮೊಟ್ಟಮೊದಲು ದೇವರ ವಿಷಯ ತಿಳಿಸಿದ್ದಾನೆ. ಮಾನವನಿಗೆ ಭೂಮಿ ಮೇಲೆ ಕಾಣಿಸದ ದೇವರನ್ನು ತಿಳಿಸುವುದಕ್ಕೆ, ದೇವರು ಇದ್ದಾನೆಂಬ ವಿಷಯ ಮಾನವನ ಮನಸ್ಸಿನಲ್ಲಿ ನಿಂತುಹೋಗುವಂತೆ ಮಾಡುವುದಕ್ಕೆ, ಭಗವಂತನಿಗೆ ಒಂದು ಜನ್ಮ ಕಾಲ ಬೇಕಾಗಿದೆ. ಈ ವಿಧವಾಗಿ ಭಗವಂತನ ಮೊದಲ ಜನ್ಮ ಭೂಮಿ ಮೇಲೆ ಮಾನವರಿಗೆ ದೇವರ ಇರುವಿಕೆಯನ್ನು ತಿಳಿಸುವುದಕ್ಕೆ ಅವಶ್ಯವಾಗಿದೆ. ಭಗವಂತನ ಮೊದಲ ಜನ್ಮದಿಂದ ಜಗತ್ತಿನಲ್ಲಿ ದೇವರ ವಿಷಯ ತಿಳಿದುಹೋಗಿದೆ. ಆಗಿನ ಕಾಲದಲ್ಲಿ ಭಗವಂತನ ಬೋಧನೆಯಿಂದ ತಮಗಿಂತ ಅನ್ಯನು, ಅಧಿಪತಿ, ವಿಶ್ವಸೃಷ್ಟಿಕರ್ತ ಒಬ್ಬನಿದ್ದಾನೆಂಬ ಭಾವನೆ ಮನುಷ್ಯರಲ್ಲಿ ಏರ್ಪಟ್ಟಿದೆ. ಆ ವಿಧವಾಗಿ ಸೃಷ್ಟಿ ನಂತರ ಸ್ವಲ್ಪ ಕಾಲಕ್ಕೆ ಭಗವಂತನಿಂದ ದೇವರ ಸಮಾಚಾರ ತಿಳಿದಿದೆ. ದೇವರೊಬ್ಬನಿದ್ದಾನೆಂಬ ಭಾವವು ಮನುಷ್ಯರಲ್ಲಿ ಕೆಲವು ಸಾವಿರ ವರ್ಷಗಳು ನಿಂತುಹೋಗಿದೆ. ನಂತರ ಮನುಷ್ಯರ ತಲೆಯಲ್ಲಿನ ಮಾಯ ಪ್ರಭಾವದಿಂದ ದೇವರು ಇದ್ದಾನೆಂಬುವುದು ಅಸತ್ಯವೆಂದು, ಇದ್ದರೆ ಹೇಗೆ ಇದ್ದಾನೆಂದು, ದೇವರು ಇದ್ದಾನೆನ್ನುವುದಕ್ಕೆ ಆಧಾರ ಇಲ್ಲವೆಂದು ಆಲೋಚನೆಗಳು ಬರುವುದು ಪ್ರಾರಂಭವಾಗಿವೆ. ಅದರಿಂದ ಕೆಲವು ಸಾವಿರ ವರ್ಷಗಳಿಗೆ ದೇವರ ಇರುವಿಕೆ ಮಾನವರಲ್ಲಿ ಅಳಸಿಹೋಗುವುದಕ್ಕೆ ಪ್ರಾರಂಭವಾಗಿದೆ. ಹಾಗೆ ದೇವರು ಇದ್ದಾನೆಂಬ ಮೊದಲ ಧರ್ಮಕ್ಕೆ

ಗ್ಲಾನಿ ಏರ್ಪಟ್ಟಿರುವುದು ನಡೆದಿದೆ. ಆಗ ದೇವರು ಸತ್ಯವೆಂದು, ದೇವರು ಹೀಗೆ ಇದ್ದಾನೆಂದು ಮನುಷ್ಯರಿಗೆ ತಿಳಿಸುವುದು ಅವಶ್ಯಕವಾಗಿದೆ. ಆ ವಿಧವಾಗಿ ದೇವರ ಅಂಶ ಭಗವಂತನಾಗಿ ಎರಡನೇ ಸಲ ಬರುವುದಕ್ಕೆ ಅವಶ್ಯಕತೆ ಏರ್ಪಟ್ಟಿದೆ.

ದೇವರ ಇರುವಿಕೆ ಭೂಮಿ ಮೇಲೆ ಅಳಸಿಹೋಗದಂತಿರುವುದಕ್ಕೆ, ದೇವರು ಭಗವಂತನಾಗಿ ಭೂಮಿ ಮೇಲೆ ಎರಡನೇ ಬಾರಿ ಹುಟ್ಟಿದ್ದಾನೆ. ಹಾಗೆ ಹುಟ್ಟಿದ ಭಗವಂತನು ದೇವರು ಹೀಗೆ ಇದ್ದಾನೆಂದು ಆಧಾರ ತೋರಿಸುವುದಕ್ಕೆ ದೇವಾಲಯಗಳನ್ನು ತಯಾರುಮಾಡಿದ್ದಾನೆ. ಅಲ್ಲಿಯವರೆಗೂ ದೇವಾಲಯಗಳ ಇರುವಿಕೆ ಭೂಮಿ ಮೇಲೆ ಎಲ್ಲಿಯೂ ಇಲ್ಲ. ಭಗವಂತನು ಎರಡನೇ ಬರುವಿಕೆಯಿಂದ ಭೂಮಿ ಮೇಲೆ ದೇವಾಲಯಗಳು ನೆಲೆಸಿವೆ. **ದೇವರು ಈ ವಿಧವಾಗಿ ನಿರಾಕಾರವಾಗಿದ್ದಾನೆಂದು ತಿಳಿಸುವುದಕ್ಕೆ ಈಶ್ವರಲಿಂಗ ಇರುವ ಆಲಯಗಳು ಮೊಟ್ಟಮೊದಲು ತಯಾರಾಗಿವೆ. ನಿರಾಕಾರವಾಗಿರುವ ದೇವರು ಭೂಮಿ ಮೇಲೆ ಭಗವಂತನಾಗಿ ಶರೀರ ಧರಿಸಿ ಹುಟ್ಟುತ್ತಾನೆಂದು ತಿಳಿಸುವುದಕ್ಕೆ ಆಕಾರ ಪ್ರತಿಮೆಯನ್ನು ಹೊಂದಿರುವ ರಂಗನ ದೇವಾಲಯಗಳು ಏರ್ಪಟ್ಟಿವೆ. ಆಗಿನ ಕಾಲದಲ್ಲಿ ದೇವರಿಗೆ ಉದಾಹರಣೆಯಾಗಿ ಮೂಗು ಮುಖವಿಲ್ಲದ ಲಿಂಗವನ್ನು ಪ್ರತಿಷ್ಟಿಸಿದ ಆಲಯವು ತಯಾರಾದರೆ, ಭಗವಂತನಿಗೆ ಉದಾಹರಣೆಯಾಗಿ ಮೂಗು ಮುಖವಿರುವ ಪ್ರತಿಮೆಯನ್ನು ಪ್ರತಿಷ್ಟಿಸಿದ ಆಲಯವು ತಯಾರಾಗಿದೆ.** ಆ ವಿಧವಾಗಿ ಭೂಮಿ ಮೇಲೆ ಎರಡು ವಿಧಗಳ ಆಲಯಗಳು ಹೊರತುಪಡಿಸಿ ಬೇರೆ ಆಲಯಗಳು ಇಲ್ಲ. ಸ್ತ್ರೀರೂಪ ಹೊಂದಿದ ಆಲಯಗಳು ಯಾವುವು ಇರಲಿಲ್ಲ. ದೇವಾಲಯಗಳು ದೇವರ ಇರುವಿಕೆಯನ್ನು ಪುನಃ ಪ್ರತಿಷ್ಟಿಸುವುದಕ್ಕೋಸ್ಕರ ತಯಾರಾಗಿವೆ. ದೇವರು ನಿರಾಕಾರನೆಂದೂ, ದೇವರು ಮೂರು ವಿಧಗಳ ಆತ್ಮಗಳಾಗಿ ವಿಭಜಿಸಲ್ಪಟ್ಟಿದ್ದಾನೆಂದೂ, ದೇವರು ಪ್ರಕೃತಿಯನ್ನು ತನ್ನ ಪೀಠವಾಗಿ ಮಾಡಿಕೊಂಡಿದ್ದಾನೆಂದೂ, ದೇವರ ಮೂಲಕ ಬರುತ್ತಿರುವ ಜೀವಿಗಳು ಪ್ರಕೃತಿಯಿಂದ ಹೊರಬೀಳುತ್ತವೆಂದೂ, ದೇವರು ತಂದೆಯಾಗಿದ್ದು ಪ್ರಕೃತಿ ತಾಯಿ ಆಗಿದೆಯೆಂದೂ, ಎಷ್ಟೋ ಜ್ಞಾನ ತಿಳಿಯುವಂತೆ ಅರ್ಥದಿಂದ ಈಶ್ವರಾಲಯವನ್ನು ಭಗವಂತನು ನಿರ್ಮಿಸಿದ್ದಾನೆ. ಅಷ್ಟೇ ಅಲ್ಲದೇ ದೇವರು ಒಂದು ಆಕಾರದಿಂದ ಮನುಷ್ಯನಂತೆ ಭೂಮಿ ಮೇಲೆ ಹುಟ್ಟುತ್ತಾನೆಂದು, ಭಗವಂತನಾಗಿ ಹುಟ್ಟಿದ ಮನುಷ್ಯ ದೇವರ ಪ್ರತಿನಿಧಿಯೆಂದು, ಆತನ ಮೂಲಕವೇ ಭೂಮಿ ಮೇಲೆ ದೇವರ ಧರ್ಮಗಳು ತಿಳಿಯುತ್ತವೆಯೆಂದು, ಜ್ಞಾನ ಶಬ್ಧವನ್ನೇ ಮಾಡುವುದೆಂದು ಸೂಚಿಸುವಂತೆ ಶಂಖವನ್ನು, ಜ್ಞಾನತಿಳಿದ ನಂತರ ಕರ್ಮವನ್ನು ನಾಶ ಮಾಡುವಂತೆ ಸೂಚನೆಕೊಡುವ ಚಕ್ರವನ್ನು ಧರಿಸಿದ ಪ್ರತಿಮೆ ಇರುವ

ಆಲಯಗಳನ್ನು ತಯಾರು ಮಾಡಿದ್ದಾನೆ. ಪ್ರತಿಮೆಯ ಆಲಯಗಳಿಗೆ ಆರಾಧನೆಗಳೂ ಸಹ ಕಲ್ಪಿಸಿ ಅರ್ಥವನ್ನೂ ಸಹ ತಿಳಿಸಿದ್ದಾನೆ. ಪ್ರತಿಮೆಯ ಆಲಯವನ್ನು ಭಗವಂತನ ಗುರುತಿಗಾಗಿ ನಿರ್ಮಿಸಿದ್ದಾನೆ. ಆ ವಿಧವಾಗಿ ಪರಮಾತ್ಮನ, ಭಗವಂತನ ಆಲಯಗಳು ಭಗವಂತನಿಂದಲೇ ಸೃಷ್ಟಿಸಲ್ಪಟ್ಟಿವೆ. ಮೊದಲು ದೇವಾಲಯಗಳ ವ್ಯವಸ್ಥೆಯನ್ನು ಸ್ಥಾಪಿಸುವುದಕ್ಕೆ ಭಗವಂತನಿಗೆ ಒಂದು ಜನ್ಮ ಕಾಲಬೇಕಾಗಿದೆ. ಈ ವಿಧವಾಗಿ ಭಗವಂತನ ಎರಡನೇ ಜನ್ಮದಲ್ಲಿ ಭೂಮಿ ಮೇಲೆ ಆಲಯಗಳು ನೆಲೆಸಿ ಅವುಗಳ ಮೂಲಕ ದೇವರ ವಿವರ ಸ್ಪಷ್ಟವಾಗಿ ತಿಳಿಸಲಾಗಿದೆ. ದೇವಾಲಯಗಳ ಮೂಲಕ ದೇವರ ಇರುವಿಕೆಯನ್ನು ಪುನಃ ಪ್ರತಿಷ್ಟಿಸಲಾಗಿದೆ. ದೇವರ ಧರ್ಮ ದೇವಾಲಯಗಳ ಮೂಲಕ ಪ್ರತಿಷ್ಟಿಸಲ್ಪಟ್ಟು, ಆ ಭಾವವು ಭೂಮಿ ಮೇಲೆ ಎಷ್ಟೋ ಸಾವಿರ ವರ್ಷಗಳು ನಿಂತುಹೋಗಿದೆ. ನಂತರ ಸ್ವಲ್ಪ ಕಾಲಕ್ಕೆ ಮಾಯ ಪ್ರಭಾವದಿಂದ ಆಲಯಗಳ ಧರ್ಮವು ಮಾಸಿಹೋಗುವುದಕ್ಕೆ ಪ್ರಾರಂಭವಾಗಿದೆ. ಅಲ್ಲಿಗೆ ಮಾಯೆ ಸುಮ್ಮನಾಗದೆ ಮಾನವನಿಂದ ಸ್ತ್ರೀ ದೇವತಾ ಆಲಯಗಳನ್ನು ಇತರ ದೇವಾಲಯಗಳನ್ನು ಸೃಷ್ಟಿಸಿದೆ. ಅದರಿಂದ ದೇವರ ಇರುವಿಕೆ, ಆಲಯಗಳ ಇರುವಿಕೆ ಬದಲಾಗಿದೆ. ದೇವರು ಒಬ್ಬನೇ ಎಂಬ ಭಾವವು ಹೋಗಿ ದೇವರ ಸ್ಥಾನದಲ್ಲಿ ಎಷ್ಟೋ ಸಾವಿರಾರು ದೇವತೆಗಳು ಏರ್ಪಟ್ಟಿದ್ದಾರೆ.

ಆ ವಿಧವಾಗಿ ದೇವರ ಇರುವಿಕೆಯು, ದೇವಾಲಯಗಳ ಇರುವಿಕೆಯೊಂದರ ಧರ್ಮಗಳಿಗೆ ಗ್ಲಾನಿ(ಮುಪ್ಪು) ಏರ್ಪಟ್ಟಿದೆ. ಆದ ಕಾರಣ ಆ ಸಮಯದಲ್ಲಿ ಭಗವಂತನ ಅವಶ್ಯಕತೆ ಪುನಃ ಏರ್ಪಟ್ಟಿದೆ. ಮೊದಲು ದೇವರ ಇರುವಿಕೆಯನ್ನು ಪ್ರತಿಷ್ಟಿಸುವುದಕ್ಕೆ ದೇವಾಲಯಗಳನ್ನು ಚಿಹ್ನೆಗಳಾಗಿ, ಭಾವಪೂರಿತ ನಿರ್ಮಾಣಗಳಾಗಿಟ್ಟಾಗ, ಅವೂ ಸಹ ಮಾಯೆಯಿಂದ ಕಲುಷಿತವಾಗುವುದನ್ನು ನೋಡಿದ ದೇವರು, ನಂತರ ಭಗವಂತನ ರೂಪದಲ್ಲಿ ಬಂದಿದ್ದಾನೆ. ಹಾಗೆ ಮೂರನೇ ಬಾರಿ ಬಂದಿರುವ ಭಗವಂತನು ಗುರು ರೂಪದಲ್ಲಿ ದೇವರ ಧರ್ಮಗಳನ್ನು, ದೇವಾಲಯ ಧರ್ಮಗಳನ್ನು ಪುನಃ ಪ್ರತಿಷ್ಟಿಸಿದನು. ಈ ಬಾರಿ ಕೆಲವರನ್ನು ಶಿಷ್ಯರನ್ನಾಗಿ ತಯಾರು ಮಾಡಿಕೊಂಡು ಅವರ ಮೂಲಕ ದೇವರ, ದೇವಾಲಗಳ ಧರ್ಮಗಳನ್ನು ಭೂಮಿ ಮೇಲೆ ಪ್ರಚಾರ ಮಾಡಿದನು. ಎಲ್ಲಾ ಕಾಲದಲ್ಲಿ ಧರ್ಮಗಳು ಮಾಸಿಹೋಗದಂತೆ ಶಿಷ್ಯಪರಂಪರೆಗಳು ಇರುವಂತೆ ಏರ್ಪಾಟು ಮಾಡಿದ್ದಾನೆ. ಆ ವಿಧವಾಗಿ ಶಿಷ್ಯರು ದೇವರೊಂದರ, ದೇವಾಲಯಗಳೊಂದರ ಧರ್ಮಗಳನ್ನು ಬಹಳ ಕಾಲ ಪ್ರಚಾರ ಮಾಡುತ್ತಾ, ಅವುಗಳಿಗೆ ಗ್ಲಾನಿ ಏರ್ಪಡದಂತೆ ನೋಡುತ್ತಿದ್ದರು. ಆಗಿನಕಾಲದಲ್ಲಿ ಭಗವಂತನು ಏರ್ಪಡಿಸಿದ ವಿಧಾನದ ಪ್ರಕಾರ ಭೂಮಿ

ಮೇಲೆ ಎಂದಿಗೂ ಗುರು ಒಬ್ಬನೇ. ಶಿಷ್ಯರು ಒಬ್ಬರ ಮೂಲಕ ಒಬ್ಬರು ಜ್ಞಾನ ತಿಳಿದುಕೊಳ್ಳುತ್ತಾ ಶಿಷ್ಯರ ಸಂಖ್ಯೆಯನ್ನು ಬೆಳೆಸಿಕೊಳ್ಳುತ್ತಿದ್ದರು. ಮೊದಲು ಭೂಮಿ ಮೇಲೆ ತಿಳಿದವನು ಗುರುವೆಂದು, ನಂತರ ಅದನ್ನು ತಿಳಿಹೇಳುವವರಾಗಲಿ, ತಿಳಿದುಕೊಳ್ಳುವವರಾಗಲಿ ಎಲ್ಲರೂ ಶಿಷ್ಯರೆಂಬ ನಿಯಮವಿತ್ತು. ಆ ನಿಯಮದ ಪ್ರಕಾರ ಮೊದಲು ತಿಳಿಸಿದ ಭಗವಂತನು ಎಂದಿಗೂ ಗುರುವೇ. ನಂತರ ಅದನ್ನು ಯಾರು ಯಾರಿಗೆ ಹೇಳಿಕೊಂಡರು, ಎಷ್ಟು ಜನ ತಿಳಿದುಕೊಂಡರು ಎಲ್ಲರೂ ಶಿಷ್ಯರೇ. ಹಾಗೆ ಎಷ್ಟೋ ಸಾವಿರ ವರ್ಷಗಳು ಭಗವಂತನು ಒಬ್ಬನೇ ಗುರುವಾಗಿ ಚಲಾವಣೆಯಾಗುತ್ತಾ ಬಂದನು. ಒಬ್ಬರಿಗೊಬ್ಬರು ಹೇಳಿಕೊಳ್ಳುತ್ತಾ ಎಲ್ಲರೂ ಶಿಷ್ಯರಾಗಿ ನಡೆದುಕೊಳ್ಳುತ್ತಾ ಬಂದರು. ಆದ್ದರಿಂದ ಆ ಕಾಲದಲ್ಲಿ ಗುರು ಒಬ್ಬನೇ, ಶಿಷ್ಯರು ಅನೇಕಮಂದಿ ಎನ್ನುವ ನಾಣ್ಣುಡಿ ಇತ್ತು. ಭಗವಂತನು ಭೂಮಿ ಮೇಲೆ ತನ್ನ ಧರ್ಮಗಳನ್ನು ಪ್ರತಿಷ್ಠಾಪಿಸಿದಂತೆಲ್ಲಾ ಮಾಯೆ ಅವುಗಳನ್ನು ಭಗ್ನಪಡಿಸುತ್ತಿತ್ತು. ಈ ಬಾರಿ ಮಾಯೆ ಹಾಗೆಯೇ ಮಾಡಬೇಕೆಂದುಕೊಂಡಿದೆ. ಭೂಮಿ ಮೇಲೆ ಭಗವಂತನು ತನ್ನ ಪ್ರತಿನಿಧಿಗಳಾದ ಶಿಷ್ಯ ಪರಂಪರೆಯನ್ನು ಇಟ್ಟಿದ್ದಾನೆ. ಆದ ಕಾರಣ ಮಾಯೆಗೆ ಸ್ವಲ್ಪ ಪ್ರಯಾಸವಾಗಿದೆ. ಮಾಯೆ ಪುನಃ ವಿಜೃಂಭಿಸಿ ಶಿಷ್ಯಪರಂಪರೆಯನ್ನೇ ಕೆಡಿಸಬೇಕೆಂದುಕೊಂಡಿದೆ. ಆಗಾದರೇ ತನ್ನ ಪಟ್ಟು ನೆರವೇರುತ್ತದೆಂದು ತಿಳಿದಿದೆ. ಈ ಬಾರಿ ಶಿಷ್ಯರ ತಲೆಯಲ್ಲಿ ಮಾಯೆ ಕೆಲಸಮಾಡಿ, ಶಿಷ್ಯ ಪರಂಪರೆಯನ್ನು ಸ್ವಲ್ಪ ಗುರುಪರಂಪರೆಯಾಗಿ ಬದಲಾಯಿಸಿದೆ. ಅದರಿಂದ ಎಂದಿಗೂ ಗುರು ಒಬ್ಬನೇ ಎಂಬ ಸೂತ್ರ ಹೋಗಿದೆ, ಆಗ ಇರುವವನೇ ಗುರು ಎನ್ನುವ ಸೂತ್ರ ಬಂದಿದೆ. ಆಗಿನಿಂದ ಶಿಷ್ಯರು ಸ್ವಲ್ಪಜನರಾಗಿ, ಗುರುಗಳು ಅನೇಕ ಜನರಾಗಿದ್ದಾರೆ. ಆದಕಾರಣ ಶಿಷ್ಯನು ಒಬ್ಬನೇ, ಗುರುಗಳು ಅನೇಕ ಎನ್ನುವ ನಾಣ್ಣುಡಿ ಏರ್ಪಟ್ಟಿದೆ. ಯಾರಿಗವರು ಗುರುಗಳಾಗಿ ಹೋಗಿ ಪುನಃ ದೇವರ ಧರ್ಮಗಳಾದವುಗಳಿಗೆ ಗ್ಲಾನಿ ಏರ್ಪಡುವುದಕ್ಕೆ ಅವಕಾಶವಾಗಿದೆ. ಈ ಸಲ ಗುರು (ಭಗವಂತ)ವೊಂದರ ಧರ್ಮಗಳನ್ನು ಕಾಪಾಡಬೇಕಾದ ಅಗತ್ಯ ಏರ್ಪಟ್ಟಿದೆ. ದೇವರ ಇರುವಿಕೆಯನ್ನು ಕಾಪಾಡುವುದಕ್ಕೆ ದೇವಾಲಯಗಳನ್ನು ನಿರ್ಮಿಸಿ ಅವುಗಳಿಗೆ ಧರ್ಮಗಳನ್ನು ಏರ್ಪಡಿಸಿದಾಗ, ದೇವಾಲಯ ಧರ್ಮಗಳು ನಾಶವಾಗಿವೆ. ನಂತರ ಅವುಗಳ ಇರುವಿಕೆಯನ್ನು ಕಾಪಾಡುವುದಕ್ಕೆ ಗುರು ಶಿಷ್ಯರನ್ನು ಏರ್ಪಡಿಸಿದಾಗ ಅವುಗಳ ಧರ್ಮಗಳೂ ಸಹ ಕೆಟ್ಟುಹೋಗಿವೆ. ಈ ಬಾರಿ ಗುರುವೊಂದರ ಧರ್ಮಗಳು ಕಾಪಾಡುವುದಕ್ಕೆ ಭಗವಂತನ ಅವಶ್ಯಕತೆ ಏರ್ಪಟ್ಟಿದೆ. ಉದಾಹರಣೆಗೆ ಒಬ್ಬ ಯಜಮಾನ ಸೋರೆಯಲ್ಲಿ ನೀರು ಹಾಕಿ ಇಟ್ಟಿದ್ದಾನೆಂದುಕೊಳ್ಳೋಣ. ಸ್ವಲ್ಪಕಾಲಕ್ಕೆ ಸೋರೆಗೆ ರಂಧ್ರ ಏರ್ಪಟ್ಟು ಸೋರೆಯಲ್ಲಿನ ನೀರು ಸೋರುವುದಕ್ಕೆ ಪ್ರಾರಂಭಿಸಿದೆ. ಅದನ್ನು ಗಮನಿಸಿದ ಯಜಮಾನ

ಆ ರಂಧ್ರವನ್ನು ಸಿಮೆಂಟು ಹಾಕಿ ಮುಚ್ಚಿಹಾಕಿದ್ದಾನೆಂದುಕೊಳ್ಳಿ. ಕೆಲವು ದಿನಗಳಿಗೆ ಮತ್ತೊಂದು ಕಡೆ ಮತ್ತೊಂದು ರಂಧ್ರ ಬಿದ್ದು ನೀರು ಸೋರುವುದಕ್ಕೆ ಪ್ರಾರಂಭಿಸಿದೆ. ಅದನ್ನೂ ಸಹ ಗಮನಿಸಿದ ಯಜಮಾನ ಈ ಸಿಮೆಂಟಿಗಿಂತ ಬೇರೆವೊಂದನ್ನು ಟೆಂಕದಿಂದ ಆ ರಂಧ್ರವನ್ನು ಮುಚ್ಚಿ ನೀರು ಸೋರದಂತೆ ಮಾಡಿದ್ದಾನೆ. ಸ್ವಲ್ಪಕಾಲ ಚೆನ್ನಾಗಿರುವ ಸೋರೆಗೆ ಮತ್ತೊಂದು ಕಡೆ ಮೂರನೇ ರಂಧ್ರವು ಬಿದ್ದಿದೆ. ಈ ವಿಧವಾಗಿ ಸೋರೆಗೆ ರಂಧ್ರಬಿದ್ದಂತೆ ದೇವರ ಧರ್ಮಗಳಿಗೆ ಕಿಂಡಿ(ಕನ್ನ) ಏರ್ಪಡುತ್ತಿದ್ದರೆ, ಅವುಗಳನ್ನು ಸರಿಪಡಿಸುವುದಕ್ಕೆ ಭಗವಂತನಾಗಿ ಪುನಃ ಪುನಃ ಹುಟ್ಟಬೇಕಾದ ಕೆಲಸ ದೇವರಿಗೆ ಏರ್ಪಟ್ಟಿದೆ. ಈ ಸಲ ಶಿಷ್ಯಪರಂಪರೆ ಹೋಗಿ ಗುರುಪರಂಪರೆ ಎನ್ನುವ ರಂಧ್ರ ದೈವಧರ್ಮವೆಂಬ ಸೋರೆಗೆ ಏರ್ಪಟ್ಟಿದೆ. ಈಸಲ ಭಗವಂತನಾಗಿ ಬಂದವನು ಗುರು ಶಿಷ್ಯರೊಂದರ ಧರ್ಮವನ್ನು ಪುನಃ ಸ್ಥಾಪಿಸುವುದಕ್ಕೆ ಬ್ರಹ್ಮವಿದ್ಯೆಯನ್ನು (ದೈವ ವಿದ್ಯೆಯನ್ನು) ಶಾಸ್ತ್ರಪದ್ಧತಿಯಲ್ಲಿ ತಿಳಿಸಬೇಕೆಂದುಕೊಂಡಿದ್ದಾನೆ. ಆಧರ್ಮಗಳೆಂಬ ರಂಧ್ರಗಳನ್ನು ಶಾಸ್ತ್ರಧರ್ಮಗಳೆನ್ನುವ ಪದ್ಧತಿಯಿಂದ ಮುಚ್ಚಬೇಕೆಂದುಕೊಂಡಿದ್ದಾನೆ. ನಾಲ್ಕನೇಸಲ ಬಂದಿರುವ ಭಗವಂತನು ಬ್ರಹ್ಮವಿದ್ಯಾಶಾಸ್ತ್ರವನ್ನು ಬೋಧಿಸಿದ್ದಾನೆ. ಬ್ರಹ್ಮವಿದ್ಯಾ ಶಾಸ್ತ್ರದ ಮೂಲಕ ಗುರುವಿನ ಪದ್ಧತಿಯನ್ನು ಶಿಷ್ಯರೊಂದರ ಪದ್ಧತಿಯನ್ನು ತಿಳಿಸಿದ್ದಾನೆ. ದೈವ ವಿದ್ಯೆ ಒಬ್ಬ ಗುರುವಿನ ಮೂಲಕವೇ ಹೊರಬೀಳುತ್ತದೆಂದು ತಿಳಿಸಿದ್ದಾನೆ. ಗುರು ಹೇಳಿರುವುದನ್ನು ಪುನಃ ಎಷ್ಟು ಜನ ಎಷ್ಟು ಜನರಿಗೆ ಹೇಳಿದರು ಅವರೆಲ್ಲರೂ ಗುರುಗಳು ಆಗುವುದಿಲ್ಲವೆಂದು, ಮೊದಲು ತಿಳಿಸಿದವನೇ ಗುರುವೆಂದು, ನಂತರ ಹೇಳಿದವರೆಲ್ಲರೂ ಕೇವಲ ಬೋಧಕರೇ ಎಂದು ಹೇಳಿದ್ದಾನೆ. ಎಷ್ಟೋ ವಿಧಗಳಲ್ಲಿ ದೇವರರೊಂದರ ಧರ್ಮಗಳನ್ನು ಕುರಿತು ಪುನಃ ಬ್ರಹ್ಮವಿದ್ಯಾಶಾಸ್ತ್ರದ ಮೂಲಕ ತಿಳಿಸಿದ್ದಾನೆ. ಹಾಗೆ ನಾಲ್ಕನೇ ಸಲ ಭಗವಂತನು ತಿಳಿಸಿದ ಬ್ರಹ್ಮವಿದ್ಯಾಶಾಸ್ತ್ರವು ಕೆಲವು ಸಾವಿರ ವರ್ಷಗಳವರೆಗೂ ಭೂಮಿ ಮೇಲೆ ನಿಂತು ಎಲ್ಲರಿಗೂ ತಿಳಿದಿರುತ್ತಿತ್ತು. ದೇವರಿಗೆ ಪ್ರತಿಪಕ್ಷವಾದ ಮಾಯೆ ಮಾನವನ ತಲೆಯಲ್ಲಿ ಗುಣಗಳ ರೂಪದಲ್ಲಿ ಪುನಃ ಹೊರಬಂದು ಹೇತುವಾದ, ನಾಸ್ತಿಕವಾದ ಎನ್ನುವ ವಾದಗಳನ್ನು ತೆಗೆದು ಬ್ರಹ್ಮವಿದ್ಯಾಶಾಸ್ತ್ರಕ್ಕೆ ಗುರುತು ಇಲ್ಲದಂತೆ ಮಾಡಿದೆ. ಷಟ್‌ಶಾಸ್ತ್ರಗಳನ್ನು ಆರುಶಾಸ್ತ್ರಗಳಲ್ಲಿ ಉತ್ತಮವಾದ ದೈವಶಾಸ್ತ್ರವನ್ನು ಅಳಸಿಹೋಗುವಂತೆ ಮಾಡುವುದಕ್ಕೆ ಭೂಮಿ ಮೇಲೆ ಶಾಸ್ತ್ರಪದ್ಧತಿ ಇಲ್ಲದ ಅನೇಕ ಶಾಸ್ತ್ರಗಳನ್ನು ತಯಾರು ಮಾಡಿದೆ. ಹೊಸದಾಗಿ ಬಂದಿರುವ ಅನೇಕ ಮಾಯಾ ಶಾಸ್ತ್ರಗಳಲ್ಲಿ ದೈವಶಾಸ್ತ್ರ ಎಂದರೆ ಏನೋ ಸಹ ಮನುಷ್ಯರಿಗೆ ತಿಳಿಯದಂತೆಹೋಗಿದೆ. ಈ ವಿಧವಾಗಿ ಭಗವಂತನು ತಿಳಿಸಿದ ಧರ್ಮಗಳು ಭಗವಂತನಿಗೆ ವಿರುದ್ಧವಾದ ಮಾಯೆಯಿಂದ ಕಾಲಕ್ರಮವಾಗಿ ಸಾವಿರ ಲಕ್ಷಗಳ ವರ್ಷಗಳಿಗೊಂದು ಸಲ ಅಳಸಿಹೋಗುತ್ತಲೇ ಬರುತ್ತಿವೆ. ಮೊದಲು ದೇವರ

ಇರುವಿಕೆಯನ್ನು ತಿಳಿಸಿದ ಭಗವಂತನು ಅದನ್ನು ಕಾಪಾಡುವುದಕ್ಕೆ ದೇವಾಲಯ ಧರ್ಮಗಳನ್ನು ತಿಳಿಸಿದ್ದಾನೆ. ನಂತರ ದೇವಾಲಯ ಧರ್ಮಗಳನ್ನು ಕಾಪಾಡುವುದಕ್ಕೆ ಗುರು ಶಿಷ್ಯ ಧರ್ಮಗಳನ್ನು ತಿಳಿಸಿದ್ದಾನೆ. ನಂತರ ಗುರು ಧರ್ಮಗಳನ್ನು ಕಾಪಾಡುವುದಕ್ಕೆ ದೈವವಿದ್ಯಾ ಶಾಸ್ತ್ರವನ್ನು ಬೋಧಿಸಿದ್ದಾನೆ. ಕೊನೆಗೆ ದೈವವಿದ್ಯಾಶಾಸ್ತ್ರವೂ ಸಹ ಅಳಿಸಿಹೋಗುವುದಕ್ಕೆ ಅನೇಕ ಅಧರ್ಮಶಾಸ್ತ್ರಗಳು ಹೊರಗೆ ಬಂದಿವೆ. ಈ ವಿಧವಾಗಿ ಪುನಃ ಸೋರೆಗೆ ರಂದ್ರಬಿದ್ದಂತಾಗಿದೆ. ಈ ಬಾರಿ ಅಧರ್ಮವೆಂಬ ರಂಧ್ರವನ್ನು ಧರ್ಮವೆಂಬ ಸೀಸದಿಂದ ಭಗವಂತನು ಮುಚ್ಚಬೇಕೆಂದುಕೊಂಡಿದ್ದಾನೆ. ಅದಕ್ಕೋಸ್ಕರ ಬಂದಿರುವುದೇ ಭಗವಂತನ ಐದನೇ ಬರುವಿಕೆ. ಭಗವಂತನ ಐದನೇ ಸಲ ಬರುವುದನ್ನು ನಾವು ಸ್ವಲ್ಪ ಗುರುತಿಸಿದ್ದೇವೆ. ಅದಕ್ಕೂ ಮೊದಲು ಬಂದಿರುವುದನ್ನು ನಾಮಮಾತ್ರವೂ ಸಹ ಗುರುತಿಸಲಾರದೆ ಹೋಗಿದ್ದೇವೆ. ಈ ಗುರುತು ಸಹ ಸ್ವತಃವಾಗಿ ನಾವು ಗುರುತಿಸಿರುವುದಲ್ಲ. ಬಂದಿರುವವನು ನಾನು ಇಂತಹವನೆಂದು ಸಾಕ್ಷ್ಯಾಧಾರಾಗಳಿಂದಲೂ ಸಹ ಹೇಳಿದ್ದರೆ ಅದನ್ನು ಕೆಲವರು ನಂಬಿದ್ದಾರೆ. ಕೆಲವರು ಈಗಲೂ ಆತನು ಭಗವಂತನೆಂದು ನಂಬಲಾರದೆ ಹೋಗುತ್ತಿದ್ದಾರೆ. ಐದನೇ ಸಲ ಭಗವಂತನಾಗಿ ಬಂದಿರುವವನೇ ಶ್ರೀಕೃಷ್ಣನು. ಯಾರು ನಂಬಿದರು ನಂಬದೆಹೋದರು ಕೃಷ್ಣನು ಭಗವಂತನೇ.

## ಭಗವಂತನ ಜನ್ಮಗಳ ವಿವರವು

**1) ದೇವರ ಧರ್ಮಗಳು ಇರುವಿಕೆ → ಭಗವಂತನ ಮೊದಲ ಜನ್ಮ.**

**2) ದೇವಾಲಯ ಧರ್ಮಗಳ ಇರುವಿಕೆ → ಭಗವಂತನ ಎರಡನೆ ಜನ್ಮ.**

**3) ಗುರು ಶಿಷ್ಯ ಧರ್ಮಗಳು ಇರುವಿಕೆ → ಭಗವಂತನ ಮೂರನೆ ಜನ್ಮ.**

**4) ಬ್ರಹ್ಮವಿದ್ಯಾ ಧರ್ಮಗಳು ಇರುವಿಕೆ → ಭಗವಂತನ ನಾಲ್ಕನೆ ಜನ್ಮ.**

**5) ಗೀತೆ ಧರ್ಮಗಳು ಇರುವಿಕೆ → ಭಗವಂತನ ಐದನೆ ಜನ್ಮ.**

**6) ಎಲ್ಲಾ ಧರ್ಮಗಳು ಇರುವಿಕೆ → ಭಗವಂತನ ಆರನೆ ಜನ್ಮ.**

***ಒಂದು ಭಾರತ ದೇಶದಲ್ಲಿ ಮಾತ್ರ ಭಗವಂತನು ಹುಟ್ಟಿದ ವಿವರವನ್ನು ಇಲ್ಲಿ ತಿಳಿಸಲಾಗಿದೆ.***

ತಾನು ಧರ್ಮಗಳನ್ನು ನೆಲೆಗೊಳಿಸಿದರೆ ಮತ್ತೆ ಸ್ವಲ್ಪ ಕಾಲಕ್ಕೆ ಅಧರ್ಮ ಪ್ರಭಲವಾಗುವುದನ್ನು ನೋಡಿದ ಭಗವಂತನು, ತನ್ನ ಐದನೇ ಜನ್ಮದಲ್ಲಿ ಸ್ವಲ್ಪ ಪ್ರತ್ಯೇಕತೆಯಿಂದ

ಧರ್ಮಗಳನ್ನು ತಿಳಿಸಬೇಕೆಂದುಕೊಂಡಿದ್ದಾನೆ. ಆದ್ದರಿಂದಲೇ ತನ್ನನ್ನು ಭಗವಂತನಾಗಿ ಪ್ರಕಟಿಸಿಕೊಂಡಿದ್ದಾನೆ. ಅಷ್ಟೇ ಅಲ್ಲದೇ ಸಾಕಾರವಾಗಿ ಕಾಣಿಸುವ ತಾನೇ ಕಾಣಿಸದ ದೇವರೆಂದು ತಿಳಿಸಿ ಅರ್ಜುನನಿಗೆ ಜ್ಞಾನದೃಷ್ಟಿಯನ್ನು ಕೊಟ್ಟು ತನ್ನ ದೈವತ್ವವನ್ನು ತಿಳಿಯುವಂತೆ ಮಾಡಿದ್ದಾನೆ. ಎಷ್ಟುಸಲ ಸರಿಮಾಡಿದರು ಅನೇಕ ಸಲ ಅಧರ್ಮಪರರಾಗಿ ಬದಲಾಗುವ ಮಾನವರಿಗೆ ಒಂದು ಹದ್ದನ್ನು ಏರ್ಪಡಿಸಬೇಕೆಂದುಕೊಂಡಿದ್ದಾನೆ. ಹದ್ದನ್ನು ಸೂಚಿಸುವ ಹೆಸರಿನಿಂದಲೇ ತನ್ನ ಬೋಧನೆಯನ್ನು ಗೀತೆ ಎಂದು, ಭಗವದ್ಗೀತೆ ಎಂದು ಹೆಸರಿಟ್ಟು ತಿಳಿಸಿದ್ದಾನೆ. ಮಾನವನಿಗೆ ಶರೀರವನ್ನೇ ಹದ್ದನ್ನಾಗಿ ಮಾಡಿ ಅದನ್ನು ದಾಟಿ ನೋಡಿದರೆ ಎಲ್ಲಾ ಅಧರ್ಮವೇಯೆಂದು, ಶರೀರದೊಳಗೆ ನೋಡುವುದೇ ಧರ್ಮವೆಂದು ತಿಳಿಸಿದ್ದಾನೆ. ಗೀತೆಯಲ್ಲಿ ಶರೀರಾಂತರ್ಗತವನ್ನೇ ಹೇಳಿದ್ದಾನೆ. ಅದರಲ್ಲಿಯೇ ಆತ್ಮಗಳು ಮಾಯೆ ಇದೆಯೆಂದು ತಿಳಿಸಿದ್ದಾನೆ. ದೇವರನ್ನು ಸೇರುವ ಮಾರ್ಗಗಳು ಯಾವವು ಅಲ್ಲವೋ ಅವುಗಳನ್ನು ತಿಳಿಸುತ್ತಾ ದೇವರನ್ನು ಸೇರುವ ಪದ್ಧತಿಗಳನ್ನು ಸಹ ತಿಳಿಸಿದ್ದಾನೆ. ಹೀಗೆ ಎಷ್ಟೋ ರಹಸ್ಯಗಳನ್ನು ತಿಳಿಸಿದ ಗೀತೆಯೊಂದರ ಬೋಧನೆ ಎಷ್ಟೋ ಉನ್ನತವಾದರೂ, ಈ ಬಾರಿ ಮಾಯೆಯೂ ಸಹ ಪ್ರತ್ಯೇಕ ಪದ್ಧತಿಯಲ್ಲಿ ಆ ಗೀತೆಯನ್ನು ಮಾನವನಿಗೆ ಅರ್ಥವಾಗದಂತೆ ಮಾಡಿದೆ. ದೇವರು ನಾನು ಇಂತಹವನು, ನನ್ನ ಬೋಧನೆ ಇಂತಹದ್ದೆಂದು ತಿಳಿಸಿದರೂ ಈ ಸಲ ಮಾಯೆಯೂ ಸಹ ನಾನು ಇಂತಹವನು ಎನ್ನುವಂತೆ ಮಾನವನನ್ನು ತನ್ನ ಅಧೀನದಲಿಟ್ಟುಕೊಂಡು, ಗೀತೆ ಎಂದರೆ ಏನೋ ಅರ್ಥವಾಗದಂತೆ ಮಾಡಿದೆ. ಇದಕ್ಕೂ ಮೊದಲು ನಾಲ್ಕು ಸಲ ಭಗವಂತನು ಹೇಳಿರುವುದು ಕನಿಷ್ಟ ಸಾವಿರ ವರ್ಷಗಳಿಗಾದರೂ ಮಾನವರಲ್ಲಿ ಸೇರಿಹೋಗಿ, ಕೆಲವು ಸಾವಿರ ವರ್ಷಗಳು ಅವರಲ್ಲಿರುತ್ತಿತ್ತು. ಈಸಲ ಭಗವಂತನ ಐದನೇ ಬರುವಿಕೆಯಲ್ಲಿ ತಾನು ಎಷ್ಟೋ ಬಲವಾಗಿ ಹೇಳಬೇಕೆಂದುಕೊಂಡು ನಾನೇ ದೇವರು ಎಂದು ಹೇಳಿದರೂ, ಮಾಯೆ ಅದಕ್ಕೆ ಎರಡರಷ್ಟು ಬಲದಿಂದ ಹೇಳಿದವನು ಸಾಧಾರಣ ಮಾನವನೇ ಎಂಬ ಭಾವವನ್ನು ಮನುಷ್ಯರಲ್ಲಿ ಉಂಟುಮಾಡಿದೆ. ಕೆಲವರು ಭಗವದ್ಗೀತೆಯನ್ನು ಅವರವರ ಭಾಷೆಯೊಳಗೆ ಸಂಸ್ಕೃತದಿಂದ ಅನುವಾದಿಸಿಕೊಂಡರೂ, ಅವರ ಮನಸ್ಸಿನಲ್ಲಿ ಕೃಷ್ಣನು ಹೇಳಿದ ಭಾವ ಇಲ್ಲದೆ ಹೋಗುವಂತೆ ಮಾಡಿ ಬೇರೆ ಭಾವ ಬರುವಂತೆ ಮಾಡಿದೆ. ಎಷ್ಟೋ ತಿಳುವಳಿಕೆಯುಳ್ಳವರು, ಸಂಸ್ಕೃತ ಪಂಡಿತರು, ಗುರುಗಳೆಂದು ಹೆಸರುವಾಸಿಯಾದವರು, ಸ್ವಾಮಿಗಳು ಪೀಠಾಧಿಪತಿಗಳು, ಗೀತಾ ಬೋಧಕರೆಂದು ಹೆಸರಿಟ್ಟುಕೊಂಡವರು, ಭಗವದ್ಗೀತೆ ಪರಿಶೋಧನೆ ಸಂಘವೆಂದು ಹೆಸರಿಟ್ಟುಕೊಂಡವರು, ಭಗವದ್ಗೀತೆಯಲ್ಲಿನ ಭಾವವನ್ನು ನೂರಕ್ಕೆ ಹತ್ತರಷ್ಟೂ ಸಹ ಅರ್ಥಮಾಡಿಕೊಳ್ಳದೆ ಹೋಗಿದ್ದಾರೆ. ಈ ವಿಧವಾಗಿ ಗೀತೆಯನ್ನು ಹೇಳಿ ಐದುಸಾವಿರ

ವರ್ಷಗಳು ಕಳೆದುಹೋದರು, ಕೊನೆಗೆ ಗೀತೆಯಲ್ಲಿನ ಜೀವಾತ್ಮ ಪರಮಾತ್ಮ ಎನ್ನುವ ಎರಡು ಆತ್ಮಗಳನ್ನು ಹೊರತುಪಡಿಸಿ ಎರಡಕ್ಕೂ ಮಧ್ಯದಲ್ಲಿರುವ ಆತ್ಮ ಅಸಲಿಗೆ ಇಲ್ಲದಂತೆ ಹೋಗಿದೆ. ಕೊನೆಗೆ ಗೀತೆ ಎಂದರೆ ಹದ್ದು ಎಂದೂ ಸಹ ತಿಳಿಯದಷ್ಟು ಮೂಢರಾಗಿ ಮನುಷ್ಯರನ್ನು ಮಾಯೆ ಬದಲಾಯಿಸಿದೆ.

ದೇವರು ತಯಾರು ಮಾಡಿರುವುದೇ ಮಾಯೆ. ದೇವರ ಅಜ್ಞೆ ಪ್ರಕಾರವೇ ಮಾಯೆ ಭಗವಂತನಿಗೆ ಪ್ರತಿಪಕ್ಷವಾಗಿದೆ. ಮಾಯೆಗೆ ಇರುವ ಬಲವು ದೇವರು ಕೊಟ್ಟಿರುವುದೆ. ಆದರೂ ಯಾರ ಕೆಲಸ ಅವರದು. ಯಾರ ಆಟ ಅವರದು. ಇದು ಭೂಮಿ ಮೇಲೆ ಸಾಗುವ ಆಟ. ಈ ಆಟದಲ್ಲಿ ಪೋಟಿದಾರರು ಒಂದುಕಡೆ ಮಾಯೆ, ಒಂದುಕಡೆ ಭಗವಂತನು. ಭಗವದ್ಗೀತೆಯನ್ನು ಭಗವಂತನು ಹೇಳಿ ಐದುಸಾವಿರ ವರ್ಷಗಳಾದರು ಅದು ಮುಂದಕ್ಕೆ ಹೋಗದೆ, ಹಿಂದಕ್ಕೆ ಕಾಣಿಸದ ವಿಧವಾಗಿ ಹೊರಟು ಹೋಗಿದೆ. ಈ ಸಲ ಭಗವದ್ಗೀತೆಯನ್ನೇ ಅಧರ್ಮವಾಗಿಹೋಗುವಂತೆ ಮಾಯೆ ಮಾಡಿದೆ. ಎಷ್ಟೋ ಅನರ್ಥಗಳನ್ನು ಅದರಲ್ಲಿ ಸೇರಿಸಿದೆ. ಈ ಸಲ ತನ್ನ ಗೀತೆಯನ್ನು ರಕ್ಷಿಸಿಕೊಳ್ಳುವುದಕ್ಕೆ ಭಗವಂತನು ಮತ್ತೆ ಬರಬೇಕಾಗಿದೆ. ಈ ಸಲ ಬಂದರೆ ಆರನೇ ಬಾರಿ ಬಂದಂತಾಗುತ್ತದೆ. ಈ ಬಾರಿ ಭಗವಂತನು ಭೂಮಿ ಮೇಲೆ ಬಂದರೆ, ಮಾಯೆಯನ್ನು ಅಡಗಿಸಿ ಧರ್ಮಗಳನ್ನು ಯಾವ ವಿಧವಾಗಿ ನೆಲೆಗೊಳಿಸುತ್ತಾನೋ, ಅದಕ್ಕೋಸ್ಕರ ಯಾವ ಪಥಕವನ್ನು ರಚಿಸಿಕೊಂಡು ಭೂಮಿ ಮೇಲೆ ಬರುತ್ತಾನೋ ಕಾದು ನೋಡಬೇಕಾಗಿದೆ.

ಸಾವಿರ ವರ್ಷಗಳಿಗೊಂದು ಬಾರಿ ಭೂಮಿ ಮೇಲೆ ಬರುವ ಭಗವಂತನ ಬರುವಿಕೆಯವರೆಗೂ ನಾವು ಇರುವುದಿಲ್ಲ. ಸತ್ತು ಇನ್ನೊಂದು ಕಡೆ ಹುಟ್ಟಿದರೂ ಈ ಜ್ಞಾನ ಆ ದಿನ ನಮ್ಮ ಜ್ಞಾಪಕಕ್ಕೆ ಇಲ್ಲದಂತೆ ಹೋಗಬಹುದು. ಸೃಷ್ಟಿ ಆದಿಯಿಂದಿರುವ ನಾವು ಭಗವಂತನು ಐದು ಸಲ ಬಂದಾಗಲೂ ಸಹ ನಾವು ಇದ್ದೇ ಇರುತ್ತೇವೆ. ಐದು ಸಲ ಆತನನ್ನು ಕಂಡುಕೊಳ್ಳದವರು ಆರನೇ ಬಾರಿ ಬಂದರೆ ಕಂಡುಕೊಳ್ಳುತ್ತೇವೆಂಬ ಗ್ಯಾರಂಟಿ ಏನಿಲ್ಲ. ಆದ್ದರಿಂದ ಪ್ರಸ್ತುತ ಈಗ ತಿಳಿದ ಸ್ವಲ್ಪಮಟ್ಟಿನ ನಮ್ಮ ಜ್ಞಾನದಿಂದ ಭಗವಂತನು ಬಂದರೆ ಹೇಗಿರುತ್ತಾನೋ, ಹೇಗೆ ಪ್ರವರ್ತಿಸುತ್ತಾನೋ, ಹೇಗೆ ಮಾಯೆ ವ್ಯೂಹದಿಂದ ಹೊರಬೀಳುತ್ತಾನೋ ಊಹಿಸಿಕೊಳ್ಳೋಣ. ಭಗವಂತನು ಭೂಮಿ ಮೇಲೆ ಬಂದರೇ ಎಲ್ಲರಿಗಿಂತ ತಿಳುವಳಿಕೆ ಇರುವವನಾಗಿಬರುತ್ತಾನೆ, ಆದರೆ ತಿಳುವಳಿಕೆ ಇಲ್ಲದವನಂತೆ ನಡೆದುಕೊಂಡರೆ ಆತನನ್ನು ಕಂಡುಹಿಡಿಯಲಾರೆವು. ಐದನೇ ಸಲ ತಾನು ಇಂತಹ ಭಗವಂತನೆಂದು ಪ್ರಕಟಿಸಿಕೊಂಡಿರುವುದರಿಂದ ಮಾಯೆಗೆ ಹೆಚ್ಚಿನ ಬಲ ಏರ್ಪಟ್ಟಿದೆ. ಆದ್ದರಿಂದ ಆರನೇ ಬಾರಿ ತನ್ನ ವಿಷಯವನ್ನು ಮಾಯೆಗೂ ಸಹ ತಿಳಿಸುವುದಿಲ್ಲವೇನೋ!

ಅಂತಹದರಲ್ಲಿ ಮನುಷ್ಯರು ನಾವು ತಿಳಿದುಕೊಳ್ಳುತ್ತೇವಾ? ಐದು ಬಾರಿ ಭಗವಂತನು ಬಂದು, ಐದುಸಲ, ಐದು ಅಂಶಗಳಿಂದ ಕೂಡಿಕೊಂಡ ಧರ್ಮಗಳನ್ನು ಬೋಧಿಸಿದಾಗ, ಕೊನೆಗೆ ಐದು ವಿಧಗಳ ಧರ್ಮಗಳು ಮಾನವರಿಗೆ ತಿಳಿಯದಂತೆ ಹೋಗಿವೆ. ಈ ಬಾರಿ ಬಂದರೆ ಗೀತೆಯನ್ನು ಮಾತ್ರವೇ ಪುನರುದ್ಧರಿಸುವುದಿಲ್ಲವೆಂದು, ಇದಕ್ಕೂ ಮೊದಲು ಇದ್ದು ಹೇಳಿಹೋಗಿರುವ ಧರ್ಮಗಳೆಲ್ಲವನ್ನೂ ಸಹ ಪುನರುದ್ಧರಿಸುವುದಕ್ಕೆ ಪ್ರಯತ್ನಿಸುತ್ತಾನೆಂದುಕೊಳ್ಳೋಣ. **ಆರನೇ ಬಾರಿ ತನ್ನ ದೃಷ್ಟಿಯನ್ನು ಮಾಯೆ ಮೇಲೇ ಮುಖ್ಯವಾಗಿ ಕೇಂದ್ರೀಕರಿಸುತ್ತಾನೆಂದುಕೊಳ್ಳೋಣ. ಹಾಗೆ ಮಾಯೆ ಮೇಲೆ ದೃಷ್ಟಿಯಿಟ್ಟು ಎಷ್ಟೋ ಬಾರಿ ಧರ್ಮಗಳನ್ನು ಅಧರ್ಮಗಳಾಗಿ ಬದಲಾಯಿಸಿದ ಮಾಯೆಯೊಂದರ ಹುಟ್ಟು ಪೂರ್ವೋತ್ತರವನ್ನು ಮಾನವರಿಗೆ ಬಿಡಿಸಿ ಹೇಳುತ್ತಾನೆಂದುಕೊಳ್ಳೋಣ,** ಹಾಗೆ ಮಾಡಿದರೆ ಮಾಯೆಯನ್ನು ಗುರುತಿಸಿ ಮಾನವನು ಅದರಕಡೆ ಹೋಗದಂತೆ ಇರುವುದಕ್ಕೆ ಸ್ವಲ್ಪ ಅವಕಾಶ ಏರ್ಪಡುತ್ತದೆ. ಆದ್ದರಿಂದ ಮಾಯೆಯಲ್ಲಿ ಮುಳುಗಿಹೋಗುವ ನಮಗೆ ಮಾಯೆಯನ್ನು ಕುರಿತು ತಿಳಿಸೆಂದು ಬರುವ ಭಗವಂತನನ್ನು ಕೋರಿಕೊಳ್ಳೋಣ. ದೇವರು ಗೀಚಿದ ಗೀತೆಯನ್ನು ಮಾನವರು ದಾಟಿ ಹೋಗುವಂತೆ ಮಾಡಿದ ಮಾಯೆಗೆ, ಈ ಬಾರಿ ಒಂದು ಹದ್ದನ್ನು ಏರ್ಪಡಿಸುತ್ತಾನೆ ಎಂದುಕೊಳ್ಳೋಣ.

ಭೂಮಿ ಮೇಲೆ ಮೊಟ್ಟಮೊದಲು ಬಂದಿರುವ ಭಗವಂತನು ದೇವರ ಇರುವಿಕೆಯನ್ನು ಮಾನವರಲ್ಲಿ ಉಂಟುಮಾಡಿದಾಗ, ಆ ಇರುವಿಕೆ ಇದ್ದರೂ ಇಲ್ಲದಂತಾಗಿದೆ. ಎರಡನೇ ಬಾರಿ ಬಂದಿರುವ ಭಗವಂತನು ತಾನು ಮೊದಲ ಬಾರಿ ತಿಳಿಸಿದ ಬೋಧನೆಗೆ ಅನುಗುಣವಾಗಿ ಮೊದಲ ಧರ್ಮಗಳು ಪುನರುದ್ಧರಿಸಲ್ಪಡುವಂತೆ, ಎರಡನೇ ಬಾರಿ ದೇವಾಲಯ ರಹಸ್ಯಗಳನ್ನು ತಿಳಿಸಿದ್ದಾನೆ. ತಾನು ಮೊದಲು ಬಂದಾಗ ಹೇಳಿರುವುದು ತನಗೆ ಜ್ಞಾಪಕ ಇರುವುದರಿಂದ ಮೊದಲನೆ ಧರ್ಮಗಳಿಗೆ ಬಲವನ್ನು ಕೈಗೂಡಿಸಿದಂತೆ, ಎರಡನೇ ಬಾರಿ ದೇವಾಲಯಗಳನ್ನು ಕುರಿತು ಹೇಳಿದ್ದಾನೆ. ಇದರಿಂದ ಎಲ್ಲಾ ಜನ್ಮಗಳು ಆತನಿಗೆ ಜ್ಞಾಪಕ ಇವೆಯೆಂದು ಹೇಳಬಹುದು. ಭಗವಂತನ ಜನ್ಮ ಜನ್ಮಕ್ಕೂ ಮಧ್ಯದಲ್ಲಿ ಸಾವಿರ, ಲಕ್ಷಗಳ ವರ್ಷಗಳ ಕಾಲ ವ್ಯತ್ಯಾಸವಿದೆ. ಆತನು ಎಷ್ಟು ಸಾವಿರ ವರ್ಷಗಳಿಗೆ ಹುಟ್ಟಿದರು ಹಿಂದಿನ ಜನ್ಮದಲ್ಲಿ ಆತನು ಏಕೆ ಬಂದಿರುವುದು, ಆಗ ಏನು ಮಾಡಿರುವುದು ಆತನಿಗೆ ಜ್ಞಾಪಕ ಇರುತ್ತವೆ. ನಾವು ಹಿಂದೆ ಹಿಂದೆಯೇ ಹುಟ್ಟಿದರೂ ನಮ್ಮ ಜನ್ಮಗಳಿಗೆ ಮಧ್ಯದಲ್ಲಿ ಯಾವ ಕಾಲಾವಧಿ ಇಲ್ಲದಿದ್ದರೂ ಹಿಂದಿನ ಜನ್ಮದ ಜ್ಞಾಪಕಗಳು ಇರುವುದಿಲ್ಲವೆಂದು ತಿಳಿದುಕೊಂಡಿದ್ದೇವೆ. ಭಗವಂತನಿಗೆ ನಮ್ಮ ಹಾಗೆ ಅಲ್ಲದೇ ಆತನ

ಜನ್ಮಗಳು ಕ್ರಮವಾಗಿ ಆತನಿಗೆ ಜ್ಞಾಪಕ ಇರುತ್ತವೆ. ಹಾಗೆ ಏಕೆ ಜ್ಞಾಪಕ ಇವೆಯೆಂದರೆ! ಆತನ ಶರೀರದಲ್ಲಿ ಮನಸ್ಸು ನಮ್ಮಲ್ಲಿರುವ ಮನಸ್ಸಿನಂತೆ ಇದ್ದರೂ, ನಮ್ಮ ಮನಸ್ಸಿನಂತೆ ಜ್ಞಾಪಕಗಳೇ ಅದರ ಕೆಲಸವೂ ಸಹ ಅದರೂ, ನಿದ್ರೆಯಲ್ಲಿ ಮನಸ್ಸು ಇಲ್ಲದಿರುವಾಗ ನಮಗೆ ಜ್ಞಾಪಕವು ಇಲ್ಲದಾಗ ಆತನು ನಿದ್ರೆಯಲ್ಲಿರುವಾಗ ಆತನ ಮನಸ್ಸಿಗೂ ಸಹ ಜ್ಞಾಪಕಗಳು ಇಲ್ಲದಿದ್ದರೂ, ಸತ್ತುಹೋದ ನಂತರ ಹಿಂದಿನ ಶರೀರದಲ್ಲಿನ ಮನಸ್ಸು ಅಲ್ಲೇ ಹೋಗಿ ನಮಗೆ ಹಿಂದಿನ ಜನ್ಮಗಳ ಜ್ಞಾಪಕಗಳು ಇಲ್ಲದ ಹಾಗೆ, ಆತನಿಗೂ ಸಹ ಹಿಂದಿನ ಶರೀರದಲ್ಲಿನ ಮನಸ್ಸು ಇಲ್ಲದಂತೆಹೋಗಿ ಹಿಂದಿನ ಜ್ಞಾಪಕಗಳು ಮನಸ್ಸು ತಿಳಿಸದೆ ಹೋದರೂ, ಆತನಿಗೆ ಎಲ್ಲಾ ಜನ್ಮಗಳ ಜ್ಞಾಪಕಗಳು ಇವೆ. ಶರೀರದಲ್ಲಿ ನಿದ್ರೆ ಹೋದಾಗ ನಡೆದ ವಿಷಯವೂ ಸಹ ಆತನಿಗೆ ಜ್ಞಾಪಕವಿರುತ್ತದೆ. ಆತನ ಶರೀರದಲ್ಲಿನ ಆತ್ಮ ಮನಸ್ಸಿನಂತೆ ಶರೀರವೆಲ್ಲಾ ವ್ಯಾಪಿಸಿ ಎಲ್ಲಾ ವೇಳೆಯಲ್ಲಿ ಜ್ಞಾಪಕದಿಂದ ಇದೆ. ಆದ ಕಾರಣ ಆ ಆತ್ಮವೇ ಎಲ್ಲಾ ಜನ್ಮಗಳ ಜ್ಞಾಪಕಗಳನ್ನು ತಿಳಿಸುತ್ತದೆ. ನಮ್ಮ ಶರೀರದಲ್ಲಿಯೂ ಸಹ ಆತ್ಮ ಇದ್ದರೂ ನಾವು ಬೇರೆ, ಆತ್ಮ ಬೇರೆ. ಆದುದರಿಂದ ಜೀವಿಗೆ ಆತ್ಮ ಜ್ಞಾಪಕವನ್ನು ತಿಳಿಸುವುದಿಲ್ಲ. ಭಗವಂತನ ಶರೀರದಲ್ಲಿ ಆತ್ಮನಾಗಿ ಭಗವಂತನು ಇರುವುದರಿಂದ ಎಲ್ಲಾ ಜ್ಞಾಪಕಗಳು ಆತ್ಮನಿಂದಲೇ ಉಂಟಾಗುತ್ತವೆ. ಮಾನವನು ಜೀವಾತ್ಮನಾಗಿ ಭೂಮಿ ಮೇಲೆ ಜೀವಿಸಿದರೆ ಶರೀರದಲ್ಲಿ ಜೀವಾತ್ಮ, ಆತ್ಮ, ಪರಮಾತ್ಮ ಇದ್ದರೂ, ಜೀವಾತ್ಮ ಜೀವಿಯಾಗಿಯೇ ಜೀವಿಸುತ್ತಿದ್ದಾನೆ. ಭಗವಂತನಲ್ಲಿ ಹಾಗಲ್ಲದೆ ಪರಮಾತ್ಮನೇ ಜೀವಾತ್ಮನಾಗಿ, ಆತ್ಮನಾಗಿ ಇರುತ್ತಿದೆ. ಭಗವಂತನು ಜೀವಾತ್ಮನಾಗಿ, ಆತ್ಮನಾಗಿ, ಪರಮಾತ್ಮನಾಗಿ ಜೀವಿಸುತ್ತಿದ್ದಾನೆ. ಆದ್ದರಿಂದ ನಮಗೆ ಇಲ್ಲದ ಜನ್ಮಗಳ ಜ್ಞಾಪಕಗಳು ಪ್ರತ್ಯೇಕಿಸಿ ಆತನಿಗಿರುತ್ತವೆ. ಆದ ಕಾರಣ ಮೇಲಿನ ಶ್ಲೋಕದಲ್ಲಿ ನಿನ್ನ ಜನ್ಮಗಳು ನಿನಗೆ ಜ್ಞಾಪಕ ಇಲ್ಲ, ನನ್ನ ಜನ್ಮಗಳು ಎಲ್ಲಾ ನನಗೆ ಜ್ಞಾಪಕ ಇವೆಯೆಂದಿದ್ದಾನೆ. ಅಷ್ಟೇ ಅಲ್ಲದೆ ನಾವು ಎಷ್ಟೋ ಜನ್ಮಗಳು ಎತ್ತಿದಂತೆ, ಆತನೂ ಸಹ ಎಷ್ಟೋ ಜನ್ಮಗಳು ಎತ್ತಿದಂತೆ ಹೇಳಿದ್ದಾನೆ. ನಮ್ಮ ಜನ್ಮಗಳು ಎಷ್ಟು ಎನ್ನುವುದು ನಮಗೆ ಹೇಗೋ ತಿಳಿದಿಲ್ಲ. ಆತನ ಜನ್ಮಗಳು ಎಷ್ಟು ಎಂಬ ವಿಷಯ ಹೇಳದಂತೆ ಎಲ್ಲಾ ಜ್ಞಾಪಕಗಳಿವೆಯೆಂದು ಹೇಳಿದ್ದಾನೆ. ಎಲ್ಲಾ ಜನ್ಮಗಳ ಜ್ಞಾಪಕಗಳಿರುವ ಭಗವಂತನು ಭೂಮಿ ಮೇಲೆ ಹೇಗೆ ಹುಟ್ಟುತ್ತಿರುವನೋ ಕೆಳಗಿನ ಶ್ಲೋಕದಲ್ಲಿ ನೋಡೋಣ.

**(3) ಶ್ಲೋ॥ 6 : ಅಜೋಽಪಿಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿಸನ್ ।**
**ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮ ಮಾಯಯಾ ॥**
**(ನಿರಾಕಾರ, ಸಾಕಾರ)**

**ಭಾವಾರ್ಥ :** ನನಗೆ ಹುಟ್ಟು ಇಲ್ಲ, ನಾಶವು ಇಲ್ಲ. ನಾನು ಸರ್ವಜೀವ ರಾಶಿಗಳಿಗೆ ಅಧಿಪತಿಯಾಗಿದ್ದೇನೆ. ಆದರೂ ನನ್ನಿಂದ ನಿರ್ಮಿಸಲ್ಪಟ್ಟ ಪ್ರಕೃತಿಯೊಂದಿಗೆ ಸೇರಿ ಮಾಯೆಯಿಂದ ಜನ್ಮಿಸುತ್ತೇನೆ.

**ವಿವರ :** ಈ ಅಧ್ಯಾಯದ ಮೊದಲ ಶ್ಲೋಕದಲ್ಲಿ ಸೃಷ್ಟಿ ಆದಿಯಲ್ಲಿ ಸೂರ್ಯನಿಗೆ ಜ್ಞಾನ ಹೇಳಿದ್ದೇನೆಂದು, ನಂತರ ಸೂರ್ಯನ ಮೂಲಕ ಭೂಮಿ ಮೇಲಿರುವ ಮನುವಿಗೆ ತಿಳಿದಿದೆ ಎಂದು, ಮನುವಿನ ಮೂಲಕ ಇಕ್ಷ್ವಾಕನೆಂಬ ರಾಜನಿಗೆ ತಿಳಿದಿದೆಯೆಂದು, ನಂತರ ಆತನ ಮೂಲಕ ಇತರರಿಗೆ ತಿಳಿದಿದೆ ಎಂದು ಹೇಳಲಾಗಿದೆ. ಎರಡನೇ ಶ್ಲೋಕದಲ್ಲಿ ಒಬ್ಬರ ಮೂಲಕ ಮತ್ತೊಬ್ಬರಿಗೆ ಪರಂಪರೆಯಾಗಿ ತಿಳಿಯುತ್ತಾಹೋಗಿ ಎಲ್ಲರೂ ತಿಳಿದುಕೊಂಡು ಕೊನೆಗೆ ಇಂದಿಗೆ ಆ ಯೋಗಗಳ ಜ್ಞಾನ ಇಲ್ಲದಂತೆ ಹೋಗಿದೆ ಎಂದೂ ಸಹ ಹೇಳಿದ್ದಾನೆ. ಇನ್ನು ಮೂರನೇ ಶ್ಲೋಕದಲ್ಲಿ ಹೀಗೆ ಯಾರಿಗೂ ತಿಳಿಯದಂತೆ ಹೋಗಿರುವ ರಹಸ್ಯವಾದ ಜ್ಞಾನವನ್ನು ಮತ್ತೆ ಈಗ ನಿನಗೆ ಹೇಳುತ್ತಿದ್ದೇನೆಂದು ಹೇಳುವುದು ನಡೆದಿದೆ. ನಾಲ್ಕನೇ ಶ್ಲೋಕದಲ್ಲಿ ಈಗಿರುವ ನೀನು ಸೃಷ್ಟಿ ಆದಿಯಲ್ಲಿ ಸೂರ್ಯನಿಗೆ ಹೇಗೆ ಹೇಳಿದ್ದೀಯಾ ಎಂದು ಅರ್ಜುನನು ಕೇಳುವುದು ನಡೆದಿದೆ. ಐದನೇ ಶ್ಲೋಕದಲ್ಲಿ ನೀನು ಹುಟ್ಟುತ್ತಿದ್ದೀಯಾ, ನಾನು ಹುಟ್ಟುತ್ತಿದ್ದೇನೆ. ನಿನಗೆ ಹಿಂದಿನ ಜನ್ಮಗಳು ಜ್ಞಾಪಕವಿಲ್ಲ, ನನಗೆ ಎಲ್ಲಾ ಜನ್ಮಗಳ ಜ್ಞಾಪಕ ಇವೆಯೆಂದು ಕೃಷ್ಣನು ಅರ್ಜುನನಿಗೆ ಉತ್ತರ ಹೇಳುವುದು ನಡೆದಿದೆ. ಈಗ ಹೇತುವಾದಿಗಳಿಗೆ ಒಳ್ಳೆಯ ಅವಕಾಶ ದೊರೆತು ಈ ವಿಧವಾಗಿ ಪ್ರಶ್ನಿಸಬಹುದು. ಆದಿಯಲ್ಲಿ ಸೂರ್ಯನಿಗೆ ಹೇಳಿದ ನಂತರ ಇತರರಿಗೆ ಹೇಳಿದ್ದೇನೆಂದು ಕೃಷ್ಣನು ತಿಳಿಸಿಲ್ಲ. ಆಗ ಆತನು ಹೇಳಿರುವುದನ್ನು ಒಬ್ಬರಿಗೊಬ್ಬರು ಪರಂಪರೆಯಾಗಿ ಹೇಳಿಕೊಂಡಿದ್ದಾರೆಂದು ಹೇಳಿದ್ದಾನೆ ಹೊರತು ತಾನು ಯಾರಿಗೂ ಹೇಳಿದಂತೆ ಇಲ್ಲ. ಅಂತಹದರಲ್ಲಿ ಆತನಿಗೆ ಎಷ್ಟೋ ಜನ್ಮಗಳು ಇರುವವೆಂದು ಹೇಳುವುದು ಸತ್ಯನಾ? ಎಂದು ಕೇಳಬಹುದು. ಹಾಗೆ ಜನ್ಮಗಳು ಉಂಟಾಗಿದ್ದರೆ ಆತನು ಭೂಮಿ ಮೇಲೆ ಜ್ಞಾನ ಹೇಳುವುದಕ್ಕೇ ಅಲ್ಲವೇ ಹುಟ್ಟುವುದು. ಅಂತಹದರಲ್ಲಿ ಸೂರ್ಯನ ಹತ್ತಿರದಿಂದ ಅರ್ಜುನನವರೆಗೂ ಮಧ್ಯದಲ್ಲಿ ಯಾರಿಗೂ ತಾನು ಜ್ಞಾನ ಹೇಳಿದಂತೆ ಇಲ್ಲವಲ್ಲ? ಆಗ ಹೇಳಿರುವುದು ಕಾಲ ಗಮನದಲ್ಲಿ ಇಲ್ಲದಂತೆಹೋಗಿದೆ, ಆದ ಕಾರಣ ಈಗ ನೀನು ನನಗೆ ಇಷ್ಟವಾದವನು ಆದ್ದರಿಂದ ನಿನಗೆ ಹೇಳುತ್ತಿದ್ದೇನೆಂದು ಹೇಳಿದ್ದಾನೆ ಅಲ್ಲವೆ! ಇದರಿಂದ ಆತನು ಎಷ್ಟೋ ಬಾರಿ ಹುಟ್ಟಿರುವುದು ವಾಸ್ತವನಾ? ಅಥವಾ ಆದಿಯಲ್ಲಿ ಕೃತಯುಗದಲ್ಲಿ ಹುಟ್ಟಿ ನಂತರ ಈಗ ದ್ವಾಪರಯುಗದಲ್ಲಿ ಅರ್ಜುನ ಜೊತೆ

ಹುಟ್ಟಿದ್ದಾನೆಂಬುವುದು ವಾಸ್ತವನಾ? ಎಂದು ಕೇಳಬಹುದು. ಆತನು ಮಧ್ಯದಲ್ಲಿ ಹುಟ್ಟಲಿಲ್ಲ ಎಂದರೆ ಎಷ್ಟೋ ಜನ್ಮಗಳು ನಾನು ಹೊಂದಿರುವೆನೆಂದು ಹೇಳಿದ್ದಾನೆ ಅಲ್ಲವೆ! ಎನ್ನುವುದು ಅಡ್ಡಬರುತ್ತದೆ. ಹುಟ್ಟಿದ್ದಾನೆಂದರೆ ನಾನು ಆದಿಯಲ್ಲಿ ಹೇಳಿದ್ದೇನೆ ನಂತರ ಈಗ ನಿನಗೆ ಹೇಳುತ್ತಿದ್ದೇನೆಂದು ಈಗಲೇ ಹುಟ್ಟಿದಂತೆ ಆತನೇ ಹೇಳುತ್ತಿದ್ದಾನಲ್ಲವೆ! ಎಂದು ಕೇಳಬಹುದು. ಹುಟ್ಟಿದ್ದಾನೆಂದರೆ ಹುಟ್ಟಲಿಲ್ಲ ಎಂಬುದಕ್ಕೆ ಮೇಲಿನ ಎರಡನೇ ಶ್ಲೋಕ ಆಧಾರವಾಗುತ್ತಿದೆ. ಹುಟ್ಟಲಿಲ್ಲ ಎಂದರೆ ಎಷ್ಟೋಬಾರಿ ಹುಟ್ಟಿದ್ದಾನೆನ್ನುವುದಕ್ಕೆ ಮೇಲಿನ ಐದನೇ ಶ್ಲೋಕವು ಆಧಾರವಾಗುತ್ತಿದೆ. ಇತ್ತ ಹೋದರೆ ಬಾವಿ, ಅತ್ತ ಹೋದರೆ ಕೆರೆ ಎನ್ನುವಂತಿದೆ. ಆದ ಕಾರಣ ಯಾವ ಆಧ್ಯಾತ್ಮಿಕವಾದಿಯಾದರೂ ಹೇತುವಾದಿ ಕೇಳುವ ಪ್ರಶ್ನೆಗೆ ಉತ್ತರ ಹೇಳಲಾರದೆ ಮತ್ತೊಂದು ವಿಚಾರಕ್ಕೆ ಹೋಗಬೇಕಾಗಿದೆ.

ಇಲ್ಲಿ ಆರನೇ ಶ್ಲೋಕದಲ್ಲಿ ಏನಾದರೂ ಉತ್ತರ ದೊರೆಯುತ್ತಾ ಎಂದು ನೋಡಿದರೆ, ಮೊದಲ ವಾಕ್ಯದಲ್ಲಿ ನನಗೆ ಹುಟ್ಟು ಇಲ್ಲ ಎಂದವನು, ಎರಡನೇ ವಾಕ್ಯದಲ್ಲಿ ನಾನು ಹುಟ್ಟುತ್ತಿದ್ದೇನೆಂದು ಹೇಳಿದ್ದಾನೆ. ಹುಟ್ಟು ಇಲ್ಲದವನೆಂದು ಹೇಳಿ ಹುಟ್ಟುತ್ತಿದ್ದೇನೆಂದು ಹೇಳುವುದೇನು? ಅದು ಒಂದೇ ಶ್ಲೋಕದಲ್ಲಿಯೇ ಎರಡು ವಿಧಗಳಾಗಿ ಹೇಳುವುದರಲ್ಲಿ ಯಾರಿಗಾದರೂ ಹುಚ್ಚು ಹಿಡಿದಷ್ಟು ಕೆಲಸವಾಗದೆ ಇರುವುದಿಲ್ಲ. ಇಲ್ಲಿ ಕೇಳುವವರಿಗಾದರು ಹುಚ್ಚು ಇರಬೇಕು, ಇಲ್ಲದಿದ್ದರೆ ಅಲ್ಲಿ ಹೇಳುವವನಿಗಾದರು ಹುಚ್ಚು ಇರಬೇಕು ಎನ್ನುವುದು ತಪ್ಪುವುದಿಲ್ಲ. ಅಲ್ಲೋ ಇಲ್ಲೋ ಯಾರಲ್ಲಿಯೋ ಒಬ್ಬರಲ್ಲಿ ಲೋಪವಿರಬೇಕು. ವಾಸ್ತವವಾಗಿ ಹೇಳಿರುವುದು ಭಗವಂತನು ಆದ್ದರಿಂದ ಹೇಳುವವನಲ್ಲಿ ಲೋಪ ಇರುವುದಿಲ್ಲ, ಆದರೆ ಕೇಳಿ ಅವಗಾಹನೆ ಮಾಡಿಕೊಳ್ಳುವವನಲ್ಲಿ ಲೋಪವಿದ್ದಂತೆ ತಿಳಿಯುತ್ತಿದೆ. ಈಗ ಹೇಳುವವನದು ಸತ್ಯ ಹೇಗೋ ವಿವರಿಸಿಕೊಳ್ಳೋಣ.

ಸೃಷ್ಟಿ ಆದಿಯಲ್ಲಿ ಪರಮಾತ್ಮ (ದೇವರು) ಸೂರ್ಯನಿಗೆ ಜ್ಞಾನವನ್ನು ಹೇಳಿರುವುದು ವಾಸ್ತವವೇ. ಆಗಿನಿಂದ ದ್ವಾಪರಯುಗದಲ್ಲಿ ಅರ್ಜುನನವರೆಗೂ ಆತನು ಜ್ಞಾನ ಹೇಳಿದ ಮಾತು ವಾಸ್ತವವೇ. ಮಧ್ಯದಲ್ಲಿ ಮನುಷ್ಯರು ಒಬ್ಬರಿಗೊಬ್ಬರು ತನ್ನ ಜ್ಞಾನವನ್ನು ಹೇಳಿಕೊಂಡಿದ್ದಾರೆನ್ನುವುದು ನೂರಕ್ಕೆ ನೂರಷ್ಟು ಸತ್ಯವೇ. ಇನ್ನು ಐದನೆ ಶ್ಲೋಕದಲ್ಲಿದ್ದಂತೆ ಭಗವಂತನು ಆದಿಯಿಂದ ಐದು ಬಾರಿ ಹುಟ್ಟಿರುವುದು ನೂರಕ್ಕೆ ನೂರರಷ್ಟು ವಾಸ್ತವವೇ. ಇದೇನು ಈತನೂ ಸಹ ಅಡ್ಡ ಮಾತನಾಡುತ್ತಿದ್ದಾನೆಂದುಕೊಳ್ಳಬೇಡಿ ನಾನು ಹೇಳುವುದು ನೂರುಪಾಲು ವಾಸ್ತವವೇ. ನನ್ನ ಮಾತಿನಲ್ಲಿನ ವಾಸ್ತವ ಏನೆಂದರೆ! ಕೃಷ್ಣನು ಅರ್ಜುನನೊಂದಿಗೆ ಮಾತನಾಡಿದಾಗ ನಡೆದ ಸಂಭಾಷಣೆಯೇ ಅಲ್ಲವೆ ಈ

ರಾದ್ಧಾಂತವೆಲ್ಲವು. ಅರ್ಜುನನು ಸರ್ವಸಾಧಾರಣವಾಗಿ ನಮ್ಮಂತಹ ಮನುಷ್ಯನೇ, ಇನ್ನು ಕೃಷ್ಣನು ಮಾತ್ರ ನಮ್ಮಂತಹ ಮನುಷ್ಯನಲ್ಲ. ಮೇಲ್ನೋಟಕ್ಕೆ ಮನುಷ್ಯನೇ ಆದರೂ ಕೃಷ್ಣನನ್ನು ಭಗವಂತನು ಎನ್ನುತ್ತಿದ್ದೇವಲ್ಲವೆ! ಗೀತೆಯಲ್ಲಿಯೇ ಶ್ರೀಕೃಷ್ಣನ ಉವಾಚ ಎನ್ನದೆ ಭಗವಾನುವಾಚ ಎಂದು ಕೃಷ್ಣನ ಮಾತುಗಳ ಮುಂದೆ ಹೇಳಲಾಗಿದೆಯಲ್ಲವೆ! ಆದ್ದರಿಂದ ಭಗವಂತನೆಂದು ಕೃಷ್ಣನನ್ನು ನಿಜವಾಗಲೂ ಅನ್ನದೆ ತಪ್ಪುವುದಿಲ್ಲ. ಭಗವಂತನಲ್ಲಿ ಸಾಧಾರಣ ಮನುಷ್ಯನಿಗಿಂತ ಪ್ರತ್ಯೇಕತೆ ಇರುತ್ತದೆ. ಭಗವಂತನ ಪ್ರತ್ಯೇಕತೆಯನ್ನು ಕುರಿತು ತಿಳಿದುಕೊಂಡರೆ, ಭಗವಂತನ ಶರೀರದಲ್ಲಿ ಜೀವಾತ್ಮ, ಆತ್ಮ, ಪರಮಾತ್ಮ ಮೂರು ಇರುತ್ತವೆ. ಸಾಧಾರಣ ಮನುಷ್ಯನಲ್ಲಿಯೂ ಸಹ ಮೂರು ಆತ್ಮಗಳಿರುತ್ತವೆ. ಸಾಧಾರಣ ಮನುಷ್ಯನಲ್ಲಿ ಪರಮಾತ್ಮ ಸಾಕ್ಷಿಯಾಗಿರುತ್ತಾನೆ. ಪರಮಾತ್ಮ ಸಾಮಾನ್ಯನ ಶರೀರದಲ್ಲಿ ಕೇವಲ ಸಾಕ್ಷಿಯಾಗಿ ಯಾವ ಕೆಲಸ ಮಾಡದೆ, ಏನು ಮಾತನಾಡದೆ ಇರುತ್ತಾನೆ. ಭಗವಂತನ ಶರೀರದಲ್ಲಿಯೂ ಸಹ ಸಾಮಾನ್ಯನಲ್ಲಿರುವಂತೆ ಪರಮಾತ್ಮ ಸಾಕ್ಷಿಯಾಗಿದ್ದರೆ, ಆತ್ಮ ಚೈತನ್ಯ ಕೊಡುವುದಾಗಿದೆ. ಆದರೆ ಕೆಲವು ಪ್ರತ್ಯೇಕ ಸಂದರ್ಭಗಳಲ್ಲಿ ಭಗವಂತನ ಶರೀರದಲ್ಲಿನ ಪರಮಾತ್ಮ ಸ್ವತಃವಾಗಿ ಮಾತನಾಡುವುದು ನಡೆಯುತ್ತದೆ. ಸಾಮಾನ್ಯನಲ್ಲಿರುವ ಆತ್ಮ ಶರೀರದಲ್ಲಿನ ಕಾರ್ಯಗಳನ್ನು ಚೈತನ್ಯವಾಗಿ ಮಾಡುತ್ತಿರುವಾಗ, ಪರಮಾತ್ಮ ಏನು ಮಾಡದಿರುವುದಾಗಿ, ಏನು ಮಾತನಾಡದೆ ಇರುವುದಾಗಿದೆ. ಭಗವಂತನ ಶರೀರದಲ್ಲಿ ಮಾತ್ರ ಕೆಲವು ಸಮಯಗಳಲ್ಲಿ ಆತ್ಮ ಶರೀರಗಳಿಂದ ಹೊರಗೆ ಜೋಕ್ಯ ಮಾಡಿಕೊಂಡು ಮಾತನಾಡುತ್ತಿದೆ. ಹಾಗೆ ಪ್ರತ್ಯೇಕಿಸಿ ಭಗವಂತನ ಶರೀರದಲ್ಲಿ ಮಾತ್ರ ಪರಮಾತ್ಮ ಮಾತನಾಡಬಲ್ಲದು. ಆ ವಿಧವಾಗಿ ಭಗವಂತನ ಶರೀರದಿಂದ ಸೃಷ್ಟಿ ಆದಿಯಲ್ಲಿ ಸೂರ್ಯನೊಂದಿಗೆ ಸ್ವತಃವಾಗಿ ಮಾತನಾಡಿದ ಪರಮಾತ್ಮ ದ್ವಾಪರಯುಗದಲ್ಲಿ ಮತ್ತೆ ಅರ್ಜುನನೊಂದಿಗೆ ಕೃಷ್ಣನ ಶರೀರದಿಂದ ಮಾತನಾಡಿದ್ದಾನೆ. ಆ ವಿಷಯವನ್ನೇ ಮೊದಲ ಶ್ಲೋಕದಲ್ಲಿ ಹೇಳಿದ್ದಾನೆ. ಇದನ್ನು ಅಸತ್ಯವೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಶರೀರವನ್ನು ಧರಿಸಿದ ಸಾಧಾರಣ ಜೀವಿಯಾಗಿರುವ ಭಗವಂತನು ಆಗಾಗ ಕೆಲವು ಬಾರಿ ಅಧರ್ಮ ಏರ್ಪಟ್ಟಾಗ ಭೂಮಿ ಮೇಲೆ ಹುಟ್ಟುವುದು ವಾಸ್ತವವೇ. ಒಬ್ಬ ಮನುಷ್ಯನ ಶರೀರದಲ್ಲಿ ಮೂರು ಆತ್ಮಗಳ ಕೆಲಸ ಇದ್ದರೆ ಅವನನ್ನು ಭಗವಂತನು ಎನ್ನುತ್ತೇವೆ. ಭಗವಂತನಾದ ಜೀವಾತ್ಮವೂ ಸಹ ಶರೀರ ಧರಿಸಿಯೇ ಹುಟ್ಟಬೇಕಾಗಿದೆ. ಆದ ಕಾರಣ ಆತನಿಗೆ ಹುಟ್ಟುವಿಕೆಗಳು ಇರುವುದು ವಾಸ್ತವವೇ. ಕಾಣಿಸುವ ಶರೀರದಲ್ಲಿ ಕಾಣಿಸದ ಭಗವಂತನ ತತಂಗವನ್ನು ತಿಳಿದು ಕೊಂಡರೆ ಅದನ್ನು ಆತ್ಮಜ್ಞಾನ ತಿಳಿದುಕೊಳ್ಳುವುದು ಎನ್ನುತ್ತೇವೆ. ಮೂರು ಆತ್ಮಗಳ ಜ್ಞಾನ ತಿಳಿಯದೇ ಹೋದರೆ ಮೇಲಿನ ಶ್ಲೋಕಗಳಲ್ಲಿ ತಿಳಿಯದ ಗೊಂದಲ ಪರಿಸ್ಥಿತಿ ಏರ್ಪಡುತ್ತದೆ.

ಈ ಶ್ಲೋಕದಲ್ಲಿ ಹೇಳಿದ ಹಾಗೆ ಒಳಗಿನಿಂದ ಮಾತನಾಡುವ ಪರಮಾತ್ಮಕ್ಕೆ ಮರಣವಾಗಲಿ ಹುಟ್ಟುವುದಾಗಲಿ ಇಲ್ಲ. ಹೊರಗಿನ ಧ್ಯಾಸದಿಂದ ಮಾತನಾಡುವ ಜೀವಾತ್ಮನಿಗೆ ಸಾವು ಹುಟ್ಟುಗಳು ಇವೆ. ಆದ್ದರಿಂದ ಇಲ್ಲಿ ಒಂದೇ ಶ್ಲೋಕದಲ್ಲಿ ಒಳಗಿನಿಂದ ಮಾತನಾಡುವ ಪರಮಾತ್ಮ ನನಗೆ ನಾಶವಾಗಲಿ, ಹುಟ್ಟುವುದಾಗಲಿ ಇಲ್ಲ ಎಂದಿದ್ದಾನೆ. ಈ ಶ್ಲೋಕದಲ್ಲಿಯೇ ಮಾತನಾಡುವ ಜೀವಾತ್ಮ ನಾನು ಗುಣಗಳ ರೂಪವಾದ ಮಾಯೆಯಿಂದ ಕೂಡಿಕೊಂಡು ಹುಟ್ಟುತ್ತಿದ್ದೇನೆಂದು ಹೇಳಿದ್ದಾನೆ. ಇದೆಲ್ಲವೂ ನೋಡಿದರೆ ಅಪರಿಚಿತನು ಸಿನಿಮಾದಲ್ಲಿ ಒಬ್ಬನೇ ಮನುಷ್ಯ "ನಾನು ಸಾಯಿಸಿದ್ದೇನೆ" ಅಂದ ತಕ್ಷಣ "ನಾನು ಸಾಯಿಸಲಿಲ್ಲ" ಎಂದು ಒಂದೇ ವಾಕ್ಯದಲ್ಲಿ ಎರಡು ವಿಧಗಳು ಹೇಳಿದಂತೆ ಇದೆಯಲ್ಲವೇ! ಹೌದು ಅರ್ಥ ಮಾಡಿಕೊಂಡರೆ ಆತನು ಸಾಯಿಸಿದ್ದೇನೆ ಎಂಬುವುದು ವಾಸ್ತವವೇ, ಸಾಯಿಸಿಲ್ಲ ಎಂಬುವುದು ವಾಸ್ತವವೇ. ಹಾಗೆ ಈ ಶ್ಲೋಕದಲ್ಲಿ ಕೃಷ್ಣನು ನನಗೆ ಹುಟ್ಟು ಇಲ್ಲ ಎಂಬುವುದು ವಾಸ್ತವವೇ, ಬಹಳ ಬಾರಿ ಹುಟ್ಟಿದ್ದೇನೆ ಎನ್ನುವುದು ವಾಸ್ತವವೇ. ಭಗವಂತನು ಭೂಮಿ ಮೇಲೆ ಯಾವಾಗ ಹುಟ್ಟುತ್ತಾನೋ ಕೆಳಗಿನ ಶ್ಲೋಕದಲ್ಲಿ ನೋಡೋಣ.

**(3) ಶ್ಲೋ॥ 7 : ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ !।**
**ಅಭ್ಯುತ್ಥಾನಮಧರ್ಮಸ್ಯ ತದಾಽಽ ತ್ಮಾನಂ ಸೃಜಾಮ್ಯಹಮ್ ॥**
**(ನಿರಾಕಾರ, ಸಾಕಾರ)**

**ಭಾವಾರ್ಥ :** ಯಾವಾಗ ಧರ್ಮಗಳಿಗೆ ಗ್ಲಾನಿ ಏರ್ಪಟ್ಟು ಅಧರ್ಮವು ವೃದ್ಧಿ ಯಾಗುವುದೋ, ಆಗ ನನ್ನನ್ನು ನಾನು ತಯಾರು ಮಾಡಿಕೊಂಡು ಭೂಮಿ ಮೇಲೆ ಹುಟ್ಟುತ್ತಿದ್ದೇನೆ.

**ವಿವರ :** ಹಿಂದಿನ ಶ್ಲೋಕದಲ್ಲಿ ಬಂದಿರುವ ಪ್ರಶ್ನೆಗೆ ಉತ್ತರವಾಗಿ ಇಂತಹ ಸಮಯದಲ್ಲಿಯೇ ಹುಟ್ಟುತ್ತಿದ್ದೇನೆಂದು ತಿಳಿಸಿದ್ದಾನೆ. ಆಗಲೇ ಹುಟ್ಟ ಬೇಕಾದ ಅವಶ್ಯಕತೆ ಏನಿದೆ? ಎನ್ನುವ ಪ್ರಶ್ನೆ ನಮಗೆ ಬರಬಹುದು. ಅದಕ್ಕೆ ಉತ್ತರ ಏನೆಂದರೆ! ಒಂದು ಡಿಪಾರ್ಟ್‌ಮೆಂಟಿನಲ್ಲಿ ಕೆಳಗಿನ ಮಟ್ಟದಉದ್ಯೋಗಿಗಳು ಸರಿಯಾಗಿ ಕೆಲಸ ಮಾಡದಿರುವಾಗ, ಅವರಿಗೆ ಬುದ್ಧಿ ಹೇಳಿ ಕೆಲಸ ಮಾಡಿಸುವ ಜವಾಬ್ಧಾರಿ ಮೇಲಿನ ಅಧಿಕಾರಿಗೆ ಇರುತ್ತದೆ. ಹಾಗೆ ಭೂಮಿ ಮೇಲೆ ಪರಮಾತ್ಮ ಧರ್ಮಗಳು ಸರಿಯಾಗಿ ಆಚರಿಸದಿರುವಾಗ, ಅವುಗಳನ್ನು ಸರಿಪಡಿಸುವ ಜವಾಬ್ಧಾರಿಯೂ ಪರಮಾತ್ಮನಿಗೆ ಇರುತ್ತದೆ. ಪರಮಾತ್ಮ ಭೂಮಿ ಮೇಲೆ ತನ್ನ ಧರ್ಮಗಳನ್ನು ಆಚರಿಸುವಂತೆ, ಮಾನವರ ಮಧ್ಯ ಎಷ್ಟೋ ಪ್ರಕ್ರಿಯೆಗಳನ್ನು ಏರ್ಪಾಟು ಮಾಡಿಟ್ಟಿದ್ದಾನೆ. ಧರ್ಮಯುಕ್ತವಾದ ಆ ಪ್ರಕ್ರಿಯೆಗಳು ಇಂದಿಗೂ ಇದ್ದರು, ಅವುಗಳ ಅರ್ಥ ತಿಳಿಯದೇ

ಹೋಗಿರುವುದರಿಂದ, ಧರ್ಮಗಳು ಅಧರ್ಮಗಳಾಗಿ ಬದಲಾಗುತ್ತಿವೆ. ಉದಾಹರಣೆಗೆ **'ನನ್ನಕರ್ಮ'** ಎನ್ನುವ ಮಾತನ್ನು ಎಷ್ಟೋಜನ ಎನ್ನುತ್ತಿದ್ದಾರೆ. ಒಂದೊಂದು ಸಲ ನಾವೂ ಸಹ ಎನ್ನುತ್ತೇವೆ. ಅದು ಒಂದು ಧರ್ಮವೇ ಆದರೂ, ಅದು ಒಂದು ಊತ (ಕೆಟ್ಟ) ಪದದಂತೆ ನಮ್ಮ ಬಾಯಿಂದ ಬರುತ್ತಿದೆ. ಅದರ ಅರ್ಥ ನಮಗೆ ತಿಳಿದಿಲ್ಲ. ಅದು ಧರ್ಮಯುಕ್ತವಾದ ಪದವೇ, ಆ ಪದದಲ್ಲಿನ ಧರ್ಮವು ನಮ್ಮ ಬಾಯಿ ಹತ್ತಿರವೇ ಇದೆ. ಆದರೂ ಅರ್ಥ ತಿಳಿಯದೆ ಹೋಗಿರುವುದರಿಂದ ಅಧರ್ಮವಾಗಿ ಬದಲಾಗಿದೆ.

ಮೊದಲು ನಾವು ಧರ್ಮಪರರೇ, ಕಾಲಕ್ರಮೇಣ ಅಧರ್ಮಪರರಾಗಿದ್ದೇವೆ. ಧರ್ಮಗಳು ಆಕಾಶದಲ್ಲಾಗಲಿ ಮತ್ತೆ ಎಲ್ಲೋ ಆಗಲಿ ಇಲ್ಲ. ಅವು ಭೂಮಿ ಮೇಲೆ ಧರ್ಮವಾಗಿಯೋ, ಅಧರ್ಮವಾಗಿಯೋ ನಮ್ಮ ಮಧ್ಯದಲ್ಲಿ ಆಚರಣೆ ರೂಪವಾಗಿ ಇವೆ. ನಾವು ಧರ್ಮಗಳ ಆಚರಣೆ ಮಾಡುತ್ತಿದ್ದರೂ, ಅರ್ಥ ತಿಳಿಯದೆ ಹೋಗುವುದರಿಂದ, ಭಾವರಹಿತವಾಗಿ ಅಧರ್ಮಗಳಾಗಿ ಬದಲಾಗಿಹೋಗಿವೆ. ಅವುಗಳ ಭಾವ ತಿಳಿದು ಆಚರಿಸಿದರೆ ಧರ್ಮಪರರಾಗುತ್ತೇವೆ. **'ಗೋವಿಂದ'** ಎನ್ನುವ ಪದ ಧರ್ಮವೇ. ಅದು ಅರ್ಥರಹಿತವಾಗಿ ಅಧರ್ಮವಾಗಿ ಹೋಗಿದೆ. ಹಾಗೆ **'ಭಗವಂತನು'** ಎನ್ನುವ ಪದವೂ ಸಹ ಧರ್ಮವೇ. ಅದು ದೊಡ್ಡ ದೊಡ್ಡ ಗುರುಗಳ ಹತ್ತಿರವೇ ಅಧರ್ಮವಾಗಿ ಹೋಗಿದೆ. **'ಮದುವೆ'** ಎನ್ನುವುದು ಧರ್ಮ, ಅದರ ಆಚರಣೆ ಎಲ್ಲವೂ ಧರ್ಮಯುಕ್ತವಾಗಿದೆ. ಮದುವೆ ಆಚರಣೆರೂಪದಲ್ಲಿದ್ದರೂ, ಅದರ ಆಚರಣೆಯ ಅರ್ಥ ತಿಳಿಯದಂತೆ ಹೋಗಿದೆ. ಆದ್ದರಿಂದ ಅಧರ್ಮವಾಗಿ ಹೋಗಿವೆ. ಹೀಗೆ ಎಷ್ಟೋ ನಮ್ಮ ಜೀವನದಲ್ಲಿ ಧರ್ಮಗಳು ಅಡಕವಾಗಿವೆ. ಅವುಗಳ ವಿವರಣೆ ತಿಳಿಯದವರೆಗೂ ಅವು ನಮಗೆ ಅಧರ್ಮಗಳಾಗಿಯೇ ಉಳಿಯುತ್ತವೆ. ಉದಾಹರಣೆಗೆ **ಮಧುಮಗ, ಮಧುಮಗಳು, ಚಂದಮಾಮ, ಅಬ್ಬಾ (ತಂದೆ), ಗೋವಿಂದ** ಎನ್ನುವ ಪದಗಳು ಧರ್ಮಗಳೇ ಅದರೂ ಅವು ಧರ್ಮಗಳೆಂದು ಯಾರಿಗೂ ತಿಳಿದಿಲ್ಲ.

ಇದೆಲ್ಲವೂ ಆಸ್ತಿಕತ್ವ ಹೊಂದಿದ್ದು ದೇವರಿದ್ದಾನೆನ್ನುವವರು ಅಧರ್ಮಪರರಾಗಿ ಬದಲಾಗುವುದನ್ನು ಕುರಿತು ಹೇಳಿರುವುದು. ಆಸ್ತಿಕರು ಧರ್ಮಗಳನ್ನು ಆಚರಿಸುತ್ತಿದ್ದೇವೆಂದುಕೊಳ್ಳುತ್ತಾ ಅಧರ್ಮಪರರಾಗಿ ಬದಲಾಗಿ, ಅಧರ್ಮಗಳನ್ನು ಆಚರಿಸುತ್ತಿರುವಾಗ ಧರ್ಮಗಳಿಗೆ ಹಾನಿ ಏರ್ಪಟ್ಟು, ಅಧರ್ಮಗಳು ಅಭಿವೃದ್ಧಿ ಆಗುತ್ತಿವೆಯೆಂದು ಹೇಳುವುದು ನಡೆದಿದೆ. ಧರ್ಮಗಳು ತಿಳಿಯದಂತೆ ಹೋಗಿರುವುದೇ ಧರ್ಮಗಳಿಗೆ ಹಾನಿ ಏರ್ಪಟ್ಟಂತೆ ಎಂದು ಅರ್ಥಮಾಡಿಕೊಳ್ಳಬೇಕು. ಅಧರ್ಮಪರರು ಎರಡು ವಿಧಗಳು ಇದ್ದಾರೆ. ಅಧರ್ಮಗಳನ್ನು ದೇವರ ಧರ್ಮಗಳೆಂದುಕೊಂಡು ತಿಳಿಯದೆ

ತಪ್ಪಾಗಿ ಅರ್ಥೈಸಿಕೊಂಡು, ಅಸಲಾದ ಧರ್ಮಗಳನ್ನು ಬಿಟ್ಟು ಅಧರ್ಮಗಳನ್ನು ಆಚರಿಸುವವರು ಒಂದು ವಿಧದವರು. ಉದಾಹರಣೆಗೆ ಯಜ್ಞ ಯಾಗಗಳು ಮಾಡುವುದು, ವೇದಗಳನ್ನು ಪಠಿಸುವುದು, ತಪಸ್ಸುಗಳು ಮಾಡುವುದು ಮೊದಲಾದ ಕೆಲಸಗಳು ಮಾಡುವವರು ಅಧರ್ಮಪರರೆಂದು ಹೇಳಬಹುದು. ವೇದಾಧ್ಯಯನಗಳು, ಯಜ್ಞಗಳು, ದಾನಗಳು, ತಪಸ್ಸುಗಳು ಇವೆಲ್ಲವು ಧರ್ಮಗಳು ಅಲ್ಲದಿದ್ದರೂ, ಅವು ಧರ್ಮಾಚರಣೆಗಳೆಂದೇ ತಿಳಿದು ತಪ್ಪು ಮಾಡುವ ಆಸ್ತಿಕರೆಲ್ಲರೂ ಅಧರ್ಮಪರರೆಂದೇ ಹೇಳಬಹುದು. ಇನ್ನು ಎರಡನೇ ವಿಧದ ಆಧರ್ಮಪರರು ಹೇಗಿದ್ದಾರೆಂದರೆ! ದೇವರೇ ಇಲ್ಲವೆಂದು, ದೇವರ ಧರ್ಮಗಳೆನ್ನುವವು ಯಾವುವು ಇಲ್ಲವೆಂದು, ಇರುವುದೆಲ್ಲಾ ಪ್ರತ್ಯಕ್ಷ ಪ್ರಕೃತಿಯೇ ಎಂದು, ಕಾಣಿಸುವ ಪ್ರಕೃತಿ ಅನೇಕ ಪದಾರ್ಥಗಳಿಂದ ಕೂಡಿಕೊಂಡಿದೆ ಎಂದು, ಪದಾರ್ಥಗಳಿಗೆ ಧರ್ಮವಿದೆ ಆದರೆ ಪದಾರ್ಥವಲ್ಲದಂತಹ ದೇವರಿಗೆ ಧರ್ಮ ಇಲ್ಲವೆಂದು, ಪದಾರ್ಥ ಅದರ ಧರ್ಮ ಸತ್ಯ, ದೇವರು ದೇವರ ಧರ್ಮ ಅಸತ್ಯವೆಂದು ಹೇಳುವ ಹೇತುವಾದಿಗಳು, ನಾಸ್ತಿಕರು ಎನ್ನುವ ಎರಡನೇ ವಿಧದ ಅಧರ್ಮಪರರು ಇದ್ದಾರೆ. ದೇವರ ಧರ್ಮ ಇದೆ ಎನ್ನುತ್ತಾ ಅದನ್ನು ಬಿಟ್ಟು ಧರ್ಮವಲ್ಲದ್ದನ್ನು ಆಚರಿಸುವ ಆಸ್ತಿಕರು, ದೇವರ ಧರ್ಮವೇ ಇಲ್ಲ ಎನ್ನುತ್ತಾ ಪ್ರಕೃತಿ ಧರ್ಮಗಳನ್ನು ಆಚರಿಸುವ ನಾಸ್ತಿಕರು ಇಬ್ಬರನ್ನು ಅಧರ್ಮ ಪರರೆಂದೇ ಹೇಳಬಹುದು. ಇಂತಹ ಅಧರ್ಮಪರರು ಹೆಚ್ಚಾದಾಗಲೇ ಅಧರ್ಮಗಳು ಅಭಿವೃದ್ಧಿ ಆಗುತ್ತಿವೆಯೆಂದು ಶ್ಲೋಕದಲ್ಲಿ **"ಅಭ್ಯುತ್ಥಾನಮಧರ್ಮಸ್ಯ"** ಎಂದು ಹೇಳಿದ್ದಾನೆ.

ಧರ್ಮಗಳು ಪೂರ್ತಿ ನಾಶವಾಗುವವು ಅಲ್ಲ. ಅವುಗಳಿಗೆ ಗ್ಲಾನಿ ಮಾತ್ರ ಏರ್ಪಡುತ್ತದೆ. ನಮ್ಮ ಶರೀರಕ್ಕೆ ಹಾನಿ ಏರ್ಪಟ್ಟಾಗ, ವೈದ್ಯನ ಚಿಕಿತ್ಸೆಯಿಂದ ಗುಣವಾಗಿ ಪುನಃ ಶಕ್ತಿವಂತನಾದಂತೆ, ಧರ್ಮಗಳಿಗೆ ನಿಶ್ಶಕ್ತಿ ಏರ್ಪಟ್ಟಾಗ, ಭಗವಂತನ ವೈದ್ಯದಿಂದ ಹಾನಿ ಎಂಬ ನಿಶ್ಶಕ್ತಿ ಹೋಗಿ ಧರ್ಮಗಳು ಶಕ್ತಿವಂತವಾಗುತ್ತವೆ. ಆ ವಿಷಯವೇ ಕೆಳಗಿನ ಶ್ಲೋಕದಲ್ಲಿ ಹೇಳುತ್ತಿದ್ದಾನೆ.

**(3) ಶ್ಲೋ॥ 8 : ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।**
**ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇಯುಗೇ ॥**
**(ಸಾಕಾರ)**

**ಭಾವಾರ್ಥ :** ಧರ್ಮಾಚರಣೆ ಹೊಂದಿದವರನ್ನು ರಕ್ಷಿಸುವುದಕ್ಕೆ, ಅಧರ್ಮ ಆಚರಣೆ ಹೊಂದಿದವರನ್ನು ಇಲ್ಲದಂತೆ ಮಾಡುವುದಕ್ಕೆ, ಧರ್ಮಸಂಸ್ಥಾಪನೆ ಮಾಡುವುದಕ್ಕೆ ಯುಗ ಯುಗದಲ್ಲಿಯೂ ಹುಟ್ಟುತ್ತೇನೆ.

**ವಿವರ :** ಇಲ್ಲಿ ದುಷ್ಟ ಜನರನ್ನು ಸಾಯಿಸಿ ಒಳ್ಳೆಯವರನ್ನು ಕಾಪಾಡುವುದಕ್ಕೆ ದೇವರು ಭಗವಂತನಾಗಿ ಜನ್ಮಿಸುತ್ತಾನೆಂದು, ದುಷ್ಟರನ್ನು ಸಾಯಿಸಿ ಧರ್ಮಗಳನ್ನು ಕಾಪಾಡುತ್ತಾನೆಂದು ಬಹಳ ಜನರು ಭಾವಿಸುತ್ತಿದ್ದಾರೆ. ಹಾಗೆ ಎಲ್ಲರೂ ಅಂದುಕೊಳ್ಳುವಂತೆ ದುಷ್ಟರನ್ನು ಭಗವಂತನು ಸಾಯಿಸುತ್ತಾ ಅವರನ್ನು ಇಲ್ಲದಂತೆ ಮಾಡುತ್ತಾನೆಂದುಕೊಳ್ಳುವುದು ಸರಿಯಾದ ಅರ್ಥವಲ್ಲ. ಏಕೆಂದರೆ! ಇದೇ ಭಗವದ್ಗೀತೆಯಲ್ಲಿ ಇನ್ನೊಂದು ಕಡೆ ಯಾವ ಗುಣದಲ್ಲಿ ಸತ್ತುಹೋದವನು ಅದೇ ಗುಣದಲ್ಲಿ ಹುಟ್ಟಿ ಬೆಳೆದು ಅದೇ ಕೆಲಸಗಳು ಮಾಡುತ್ತಾನೆಂದು, ದುಷ್ಟನು ದುಷ್ಟನಾಗಿಯೇ ಹುಟ್ಟಿ ಬೆಳೆಯುತ್ತಾನೆಂದೂ ಸಹ ಹೇಳಿದ್ದಾರೆ. ಇಲ್ಲೇನೊ ದುಷ್ಟರನ್ನು ಸಂಹರಿಸಿ ಇಲ್ಲದಂತೆ ಮಾಡುತ್ತೇನೆಂದಾಗ ಆ ದುಷ್ಟರು ಎಲ್ಲಿಯೂ ಇಲ್ಲದಂತೆ ಹೋಗಬೇಕಲ್ಲವೆ! ಹಾಗಲ್ಲದೆ ಒಂದು ಕಡೆ ಮರಣಿಸಿದ ಕೆಟ್ಟವನು, ಇನ್ನೊಂದು ಕಡೆ ಕೆಟ್ಟವನಾಗಿಯೇ ಹುಟ್ಟುತ್ತಾನೆಂದಾಗ ಭಗವಂತನು ಅವನನ್ನು ಹೇಗೆ ಇಲ್ಲದ ಹಾಗೆ ಮಾಡಿದಂತಾಗುತ್ತದೆ? ಹೀಗೆ ಎಷ್ಟೋ ಪ್ರಶ್ನೆಗಳು ಹೊರಬರುತ್ತವೆ. ಇಲ್ಲಿನ ಶ್ಲೋಕಕ್ಕೂ ಅಲ್ಲಿನ ಶ್ಲೋಕಕ್ಕೂ ವಿರುದ್ಧ ಭಾವ ಏರ್ಪಟ್ಟಿದೆ. ಈ ಪ್ರಶ್ನೆಗಳಿಗೆ ಉತ್ತರ ಏನು? ಯಾವ ಶ್ಲೋಕದಲ್ಲಿನ ಅರ್ಥ ನಿಜ, ಯಾವುದು ನಿಜವಲ್ಲವೆಂದು ಯೋಚಿಸಿದರೆ ಅವುಗಳ ಪರಿಷ್ಕಾರ ಹೀಗೆ ಇದೆ.

ಒಬ್ಬ ಕೆಟ್ಟವನನ್ನು ಒಬ್ಬ ಒಳ್ಳೆಯವನು ಸಾಯಿಸುವುದಕ್ಕೆ ಸಿದ್ಧವಾದಾಗ, ಎಲ್ಲರ ಮನೋಭಾವನೆಗಳ ಮೇಲೆ ಹೆಚ್ಚಾಗಿ ಪ್ರಭಾವ ತೋರಿಸುವ ಸಿನಿಮಾಗಳಲ್ಲಿಯೂ ಸಹ ವಿಲನ್‌ನನ್ನು ಹಿರೋ ಸಾಯಿಸುವಾಗ ***'ಪರಿತ್ರಾಣಾಯ ಸಾಧೂನಾಂ'*** ಎನ್ನುವ ಶ್ಲೋಕವನ್ನು ನೆನಪಿಸುವುದು ನಡೆಯುತ್ತದೆ. ಇದನ್ನನುಸರಿಸಿ ಕೆಟ್ಟವರನ್ನು ಸಾಯಿಸಿದರೆ ಮಾತ್ರ ಒಳ್ಳೆಯವರು ವೃದ್ಧಿಯಾಗುವುದಿಲ್ಲ ಎಂಬ ಭಾವವು ಸರ್ವದಾ ಎಲ್ಲರಲ್ಲಿಯೂ ಅಡಕವಾಗಿದೆ. ಈ ಶ್ಲೋಕದಲ್ಲಿ ಧರ್ಮವನ್ನು ಉದ್ಧರಿಸಬೇಕೆಂದು ಬಂದಿರುವ ಭಗವಂತನನ್ನೇ ಅಧರ್ಮಪರನನ್ನಾಗಿ ಮಾಡಿದ್ದಾರೆ. ಭಗವಂತನು ಹೇಳಿದ ವಿಷಯ ಅರ್ಥವಾಗದೆ, ಆತನೇ ಅಧರ್ಮಾಚರಣೆ ಮಾಡಿದಂತೆ ಬರೆದುಕೊಳ್ಳುವುದು ವಿಷಾದಕರ. ವಾಸ್ತವಕ್ಕೆ ಭಗವಂತನು ಯಾರನ್ನೂ ಸಂಹರಿಸುತ್ತೇನೆಂದು ಹೇಳಲಿಲ್ಲ. ಮೇಲಿನ ಶ್ಲೋಕದಲ್ಲಿ ***'ವಿನಾಶಾಯಚ ದುಷ್ಕೃತಾಮ್'*** ಎಂದಿದ್ದಾನೆ. ಕೆಟ್ಟವರನ್ನು ಅಥವಾ ಅಧರ್ಮಪರರನ್ನು ನಾಶ ಮಾಡುತ್ತೇನೆಂದಿದ್ದಾನೆ. ನಾಶ ಅಂದಷ್ಟು ಮಾತ್ರಕ್ಕೆ ಸಾಯಿಸುವುದೆಂದು ಅರ್ಥ ಮಾಡಿಕೊಳ್ಳುವುದು ತಪ್ಪು. ಮರಣ ಬೇರೆ, ನಾಶ ಬೇರೆ ಎಂದು ಹಿಂದೆ ಹೇಳಿರುವ ಸಾಂಖ್ಯಯೋಗವೆಂಬ ಅಧ್ಯಾಯದಲ್ಲಿ 19ನೇ ಶ್ಲೋಕದಲ್ಲಿ ವಿವರವಾಗಿ ಹೇಳಲಾಗಿದೆ.

ನಾಶ ಎಂದರೆ ಪೂರ್ತಿಯಾಗಿ ಇಲ್ಲದಂತೆ ಹೋಗುವುದು. ಮರಣ ಎಂದರೆ ಶರೀರ ಬದಲಾವಣೆ ಮಾತ್ರವೇ ಎಂದು ಮತ್ತೊಂದು ಬಾರಿ ನೆನಪಿಸುತ್ತಿದ್ದೇವೆ.

ಯಾವ ರೀತಿಯಲ್ಲಿ ಸತ್ತುಹೋದವನು ಅದೇ ರೀತಿಯಲ್ಲಿ ಹುಟ್ಟುತ್ತಾನೆ. ಒಂದು ಊರಿನಲ್ಲಿ ಸತ್ತುಹೋಗಿ ಇಲ್ಲದಂತೆ ಹೋದವನು ಪುನಃ ಮತ್ತೊಂದು ಕಡೆ ಹುಟ್ಟಿರುತ್ತಾನೆ. ಎಲ್ಲೋ ಒಂದು ಕಡೆ ಇರುತ್ತಾನೆ ಆದರೆ ಇಲ್ಲದಂತೆ ಹೋಗಲಿಲ್ಲ. ಈ ಸೂತ್ರವು ಭಗವಂತನಿಗೆ ಚೆನ್ನಾಗಿ ತಿಳಿದಿದೆ ಆದ್ದರಿಂದ ದುಷ್ಟನನ್ನು ಸಾಯಿಸಲಿಲ್ಲ. ಅವನನ್ನು ಎಲ್ಲಿಯೂ ಇಲ್ಲದಂತೆ ನಾಶ ಮಾಡಬೇಕೆಂದುಕೊಂಡಿದ್ದಾನೆ. ಹಾಗೆ ಮಾಡುವುದಕ್ಕೆ ಒಂದೇ ಮಾರ್ಗವಿದೆ, ಅವನಲ್ಲಿನ ಅಧರ್ಮಗಳನ್ನು ಧರ್ಮಗಳಾಗಿ ಬದಲಾಯಿಸಿದರೆ ಅವನು ಶಾಶ್ವತವಾಗಿ ಧರ್ಮಪರನಾಗುತ್ತಾನೆ. ಉದಾಹರಣೆಗೆ ಒಂದು ಸಣ್ಣ ಊರಿನಲ್ಲಿ ಸಾವಿರಜನ ಅಧರ್ಮಪರರಿದ್ದಾರೆಂದುಕೊಳ್ಳೋಣ. ಹಾಗೇ ಕೇವಲ ಹತ್ತುಜನ ಧರ್ಮಪರರು ಇದ್ದಾರೆಂದುಕೊಳ್ಳೋಣ. ಅಷ್ಟುಜನ ಅಧರ್ಮಪರರಲ್ಲಿ ಕೇವಲ ಹತ್ತುಜನ ಧರ್ಮಪರರಿಗೆ ತೊಂದರೆಯಾಗಿರುತ್ತದೆ. ಆಗ ಭಗವಂತನು ಒಬ್ಬ ಮನುಷ್ಯನಾಗಿ ಆ ಊರಿನಲ್ಲಿ ಸೇರಿ, ಅಧರ್ಮಪರರನ್ನು ಇಲ್ಲದಂತೆ ಮಾಡಬೇಕೆಂದುಕೊಂಡಿದ್ದಾನೆ. ರೋಗಿಗಳಿಗೆ ವೈದ್ಯನು ಅವಶ್ಯ, ಆರೋಗ್ಯವಂತರಿಗೆ ವೈದ್ಯದ ಅವಶ್ಯಕತೆ ಇಲ್ಲ. ಅದಕ್ಕೇ ಭಗವಂತನು ಆ ಊರಿನಲ್ಲಿ ಧರ್ಮಪರರ ಜೊತೆ ಯಾವ ಸ್ನೇಹ ಏರ್ಪಡಿಸಿಕೊಳ್ಳಲಿಲ್ಲ. ಆತನು ಅಧರ್ಮಪರರ ಜೊತೆ ಪೂರ್ತಿಯಾಗಿ ಬೆರೆತು ಹೋಗಿದ್ದಾನೆ. ಅವರು ಮಾಡುವ ಕೆಲಸಗಳೇ ತಾನು ಮಾಡುವುದರಿಂದ ಕೆಟ್ಟವರೆಲ್ಲರೂ ಆತನಿಗೆ ಚೆನ್ನಾಗಿ ಹತ್ತಿರವಾದರು. ಹಾಗೆ ಸ್ವಲ್ಪ ಕಾಲ ಇರುವಾಗ ಸಂದರ್ಭಾನುಸಾರ ಅವರು ಮಾಡುವ ಕೆಲಸಗಳನ್ನು ಬಿಡಿಸದೆ, ಅವುಗಳ ಫಲಿತವನ್ನು ಹೇಳುತ್ತಾ ಬಂದು ಪಾಪಭೀತಿ ಏರ್ಪಡಿಸಿ, ನಂತರ ತಾವು ಮಾಡುವ ಕೆಲಸಗಳಲ್ಲಿ ಅರ್ಥ ಹೀಗಿದೆ ಎಂದು ತಿಳಿಸುತ್ತಾ ಕೊನೆಗೆ ಯೋಗ ಸಾರವನ್ನು, ಅದರಿಂದ ಬರುವ ಫಲಿತವನ್ನು, ಬೋಧಿಸುವುದರಿಂದ ಅವರೆಲ್ಲರೂ ಧರ್ಮಪರರಾಗಿ ಬದಲಾಗುವುದಕ್ಕೆ ಪ್ರಾರಂಭಿಸಿದರು. ಹಾಗೆ ಸ್ವಲ್ಪ ಕಾಲ ನಡೆದಾಗ ಕೊನೆಗೆ ಕೇವಲ ಹತ್ತುಜನ ಮಾತ್ರ ಅಧರ್ಮಪರರು ಉಳಿದುಕೊಂಡು, ಧರ್ಮಪರರು ಸಾವಿರಜನ ತಯಾರಾಗಿದ್ದಾರೆ.

ಈ ವಿಧವಾಗಿ ಒಂದು ವಿಧವಾದ ಆಸ್ತಿಕತ್ವ ಇರುವ ಅಧರ್ಮಪರರಿಗೆ ಮನುಷ್ಯನಾಗಿ ಬಂದ ಭಗವಂತನು ಧರ್ಮಗಳನ್ನು ತಿಳಿಸಿ, ಅವರನ್ನು ಪುನಃ ಧರ್ಮಪರರಾಗಿ ಬದಲಾಯಿಸುತ್ತಾನೆ. ಇನ್ನು ಎರಡನೇ ವಿಧವಾದ ನಾಸ್ತಿಕತ್ವವಿರುವ ಅಧರ್ಮಪರರನ್ನು

ಏನು ಮಾಡುತ್ತಾನೆಂದರೆ! ಎರಡನೇ ವಿಧ ಅಧರ್ಮಪರರನ್ನು ಎರಡು ವಿಧಗಳಾಗಿ ವಿಭಜಿಸಬಹುದು. ದೈವತ್ವದ ಮೇಲೆ ಪ್ರಶ್ನೆಗಳು ಬಂದು, ಅವರ ಪ್ರಶ್ನೆಗಳಿಗೆ ಉತ್ತರ ಸಿಗದಿರುವಾಗ, ಹೇತುವಾದರೆಂಬ ಹೆಸರಿಟ್ಟುಕೊಂಡು ದೇವರಿಗೆ ದೂರವಾದವರು ಒಂದು ವಿಧ. ದೈವತ್ವದ ಮೇಲೆ ಪ್ರಶ್ನೆಗಳೂ ಸಹ ಬಾರದೆ ದೈವತ್ವದ ಮೇಲೆ ದ್ವೇಷಭಾವನೆ ಹೊಂದಿ, ಅಸಲು ದೇವರೇ ಇಲ್ಲವೆನ್ನುವ ನಾಸ್ತಿಕರು ಎರಡನೇ ವಿಧದವರು. ಈ ವಿಧವಾಗಿ ದೇವರ ಮೇಲೆ ವಿಶ್ವಾಸ ವಿಲ್ಲದ ಅಧರ್ಮಪರರು ಎರಡು ಭಾಗಗಳಾಗಿದ್ದಾರೆ. ದೈವತ್ವದ ಮೇಲೆ ಅನುಮಾನದಿಂದ ಪ್ರಶ್ನಿಸುವ ಹೇತುವಾದಿಗಳ ಹತ್ತಿರವಾಗಲಿ, ನಾಸ್ತಿಕವಾದಿಗಳ ಹತ್ತಿರವಾಗಲಿ ಭಗವಂತನು ಪ್ರತ್ಯಕ್ಷವಾಗಿ ಸಂಬಂಧ ಇಟ್ಟುಕೊಳ್ಳುವುದಿಲ್ಲ. ಮನುಷ್ಯನಾಗಿ ಎಂತಹ ಸಂಬಂಧ ಇಟ್ಟುಕೊಳ್ಳದ ಭಗವಂತನು ಭೂಮಿ ಮೇಲಿರುವಾಗ ಕೇವಲ ಹೇತುವಾದಿಗಳ ಪ್ರಶ್ನೆಗಳಿಗೆ ಉತ್ತರ ಸಿಗುವಂತೆ ಮಾಡುತ್ತಾನೆ. ಉತ್ತರಗಳು ದೊರೆತರೂ ದೇವರಿಲ್ಲವೆಂದು, ದೇವರ ಇರುವಿಕೆಯನ್ನು ಪ್ರಶ್ನಿಸುವುದು ಅವರ ಸ್ವಭಾವವಾಗಿರುವುದರಿಂದ, ಭಗವಂತನೇ ಉತ್ತರ ಕೊಟ್ಟರೂ ಆ ಉತ್ತರಗಳನ್ನು ಒಪ್ಪಿಕೊಳ್ಳುವುದಿಲ್ಲ. ಇನ್ನು ನಾಸ್ತಿಕವಾದಿಗಳು ದೈವತ್ವದ ಮೇಲೆ ಅಸೂಯೆ ಹೊಂದಿರುತ್ತಾರೆ, ಆದ್ದರಿಂದ ಅವರಿಗೆ ದೈವಜ್ಞಾನವನ್ನು ಭಗವಂತನು ಯಾವ ವಿಧವಾಗಿಯೂ ತಿಳಿಸುವುದಿಲ್ಲ. ಹೇತುವಾದಿಗಳು, ನಾಸ್ತಿಕರು ಮರುಜನ್ಮಗಳಲ್ಲಿ ಭಯಂಕರ ವಾದ ಕರ್ಮಕ್ಕೆ ಗುರಿಯಾಗಿ, ನಷ್ಟಾತ್ಮರಾಗುತ್ತಾರೆ. ಆಗ ಹೇತುವಾದಿಗಳು ಸ್ವಲ್ಪ ಬದಲಾಗುತ್ತಾರೆ. ಹಾಗೆ ಜನ್ಮಜನ್ಮಕ್ಕೂ ಸ್ವಲ್ಪ ವ್ಯತ್ಯಾಸದಿಂದ ಕೆಲವು ಜನ್ಮಗಳಿಗಾದರು ಅಧರ್ಮಪರರಾದ ಹೇತುವಾದಿಗಳು ಧರ್ಮಪರರಾಗುವುದಕ್ಕೆ ಅವಕಾಶವಿದೆ. ನಾಸ್ತಿಕವಾದಿಗಳಿಗೆ ಮಾತ್ರ ಯಾವ ಜನ್ಮಕ್ಕಾಗಲಿ ಎಂತಹ ದೈವಜ್ಞಾನವು ಲಭಿಸುವುದಿಲ್ಲ. ಅವರು ಜನ್ಮ ಜನ್ಮಕ್ಕೂ ಅದೋಗತಿ ಹೊಂದುತ್ತಾ ಉಗ್ರಕರ್ಮಿಗಳಾಗಿ ಹೋಗುತ್ತಾರೆ. ದೇವರ ಇರುವಿಕೆಯನ್ನು ಪ್ರಶ್ನಿಸುವ ಹೇತುವಾದಿಗಳಿಗಾದರು ಸ್ವಲ್ಪ ಅವಕಾಶ ಕೊಟ್ಟಿದ್ದಾನೆ. ಆದರೆ ನಾಸ್ತಿಕವಾದಿಗಳಿಗೆ ಎಂತಹ ಅವಕಾಶವನ್ನು ಕೊಟ್ಟಿಲ್ಲ. ಎರಡು ವಿಧಗಳಾಗಿರುವ ಅಧರ್ಮಪರರೊಂದಿಗೆ ಪ್ರತ್ಯಕ್ಷವಾಗಿ, ಪರೋಕ್ಷವಾಗಿ, ಭಗವಂತನು ಸಂಬಂಧ ಇಟ್ಟುಕೊಳ್ಳುತ್ತಿದ್ದಾನೆ. ಕೇವಲ ನಾಸ್ತಿಕರನ್ನು ಮಾತ್ರ ಕ್ಷಮಿಸಲಾರದ ಪಾಪದ ಕೆಳಗೆ ಬಿಡುತ್ತಿದ್ದಾನೆ. ಅಧರ್ಮಪರರನ್ನು ಸಾಧ್ಯವಾದಷ್ಟು ಅವರಿಗೂ ಮಾತುಗಳಿಂದ ಬದಲಾಯಿಸುತ್ತೇನೆ. ಕೇಳದವರನ್ನು ಬಿಟ್ಟು ಬಿಡುತ್ತೇನೆಂದು ಹೇಳಿದ್ದಾನೆ ಹೊರತು ಆಯುಧಗಳಿಂದಾಗಲಿ, ಅಣ್ವಾಯುಧಗಳಿಂದಾಗಲಿ ಸಾಯಿಸುತ್ತೇನೆಂದು ಹೇಳಲಿಲ್ಲ.

ಇಲ್ಲಿ ಧರ್ಮಪರರನ್ನು ವೃದ್ಧಿಮಾಡಿ, ಅಧರ್ಮಪರರನ್ನು ಇಲ್ಲದಂತೆ ಮಾಡಿದ್ದಾನೆನ್ನುವುದು ತಪ್ಪು ಅಲ್ಲವೆ! ಮೇಲಿನ ಶ್ಲೋಕದಲ್ಲಿಯೇ **"ಧರ್ಮ ಸಂಸ್ಥಾಪನಾರ್ಥಾಯ"** ಎಂದಿದ್ದಾನೆ. ಒಳ್ಳೆಯವರನ್ನು ಕಾಪಾಡಿ ಕೆಟ್ಟವರನ್ನು ಇಲ್ಲದಂತೆ ಮಾಡುವುದಕ್ಕೆ ಧರ್ಮಸಂಸ್ಥಾಪನೆಗೋಸ್ಕರ ನಾನು ಬಂದಿದ್ದೇನೆಂದಿದ್ದಾನೆ. ಧರ್ಮ ಸಂಸ್ಥಾಪನೆ ಮೂಲಕವೇ ದುಷ್ಟರನ್ನು ಇಲ್ಲದಂತೆ ಮಾಡುತ್ತಿದ್ದೇನೆಂದು ಅರ್ಥವೇ ಹೊರತು, ಆಯುಧಗಳಿಂದ ಇಲ್ಲದಂತೆ ಮಾಡುತ್ತೇನೆಂದು ಹೇಳಲಿಲ್ಲ ಅಲ್ಲವೆ! ಭಗವಂತನು ಧರ್ಮ ಸಂಸ್ಥಾಪನಾರ್ಥವೇ ಬಂದು, ಆ ಕೆಲಸದ ಮೂಲಕವೇ ಸಾಧುಜನರ ಸಂಖ್ಯೆಯನ್ನು ರಕ್ಷಿಸಿ, ದುಷ್ಟ ಜನರ ಸಂಖ್ಯೆಯನ್ನು ಕಡಿಮೆಮಾಡಿದ್ದಾನೆ. ಈ ಪದ್ಧತಿಯೇ ಈ ಶ್ಲೋಕದಲ್ಲಿದೆ ಎಂದು, ಸಂಹರಿಸುವ ಪದ್ಧತಿ ಇಲ್ಲವೆಂದು, ಸಂಹರಿಸುವುದರಿಂದ ಯಾರು ಇಲ್ಲದಂತೆ ಹೋಗುವುದಿಲ್ಲವೆಂದು ತಿಳಿಯಬೇಕು. ಭಗವಂತನು ಎಷ್ಟೋ ಉನ್ನತನಾದರೂ, ನೀಚದಲ್ಲಿರುವ ಮನುಷ್ಯರೊಂದಿಗೆ ಬೆರೆತು, ಅವರಂತೆ ಕೆಲಸಗಳು ಮಾಡುತ್ತಾ, ಎಷ್ಟೋ ನೋವುಗಳನ್ನು ಅನುಭವಿಸುತ್ತಾ, ಮಾನವರ ಮಧ್ಯೆ ಎಷ್ಟೋ ಅವಮಾನಗಳನ್ನೂ ಹೊಂದುತ್ತಾ, ಸಾಧಾರಣ ಮಾನವನಿಗಿಂತ ಕೇವಲವಾಗಿ ಕಾಣಿಸುವ ಭಗವಂತನನ್ನು, ಭಗವಂತನಾಗಿ ಯಾರು ಗುರುತಿಸುತ್ತಾರೆ. ಯಾವ ಆಧಾರವಿಲ್ಲದ ಭಗವಂತನನ್ನು ಗುರುತಿಸಿದವನಿಗೇನು ಲಭ್ಯವಾಗುತ್ತದೆಂಬ ವಿಷಯ ಕೆಳಗಿನ ಶ್ಲೋಕದಲ್ಲಿ ನೋಡೋಣ.

**(3) ಶ್ಲೋ॥ 9 : ಜನ್ಮ ಕರ್ಮಚ ಮೇ ದಿವ್ಯ ಮೇವಂ ಯೋ ವೇತ್ತಿ ತತ್ತ್ವತಃ ।**
**ತ್ಯಕ್ತ್ವಾ ದೇಹಂ ಪುನರ್ಜನ್ಮನೈತಿ ಮಾಮೇತಿ ಸೋಽರ್ಜುನ!॥**
**(ಸಾಕಾರ,ನಿರಾಕಾರ)**

**ಭಾವಾರ್ಥ :** ನನ್ನ ದಿವ್ಯವಾದ ಕೆಲಸಗಳನ್ನು ಜನ್ಮವನ್ನು ತಿಳಿದುಕೊಂಡವನು ಮರಣಿಸಿದ ನಂತರ, ಬೇರೆ ಜನ್ಮಕ್ಕೆ ಹೋಗದೆ ನನ್ನಲ್ಲಿಯೇ ಐಕ್ಯವಾಗುತ್ತಾನೆ.

**ವಿವರ** : ಇಲ್ಲಿಯವರೆಗೂ ಮೂರು ಅಧ್ಯಾಯಗಳಲ್ಲಿಯೂ ಪರಮಪದವನ್ನು, ಮೋಕ್ಷವನ್ನು ಹೊಂದುತ್ತೀಯಾ ಎನ್ನುತ್ತಾ ಬಂದಿರುವ ಶ್ರೀಕೃಷ್ಣನು, ಮೊಟ್ಟಮೊದಲ ಬಾರಿಗೆ ಇಲ್ಲಿ **'ಮಾಮೇತಿ'** ಎನ್ನುವುದು ವಿಶೇಷ. ಮಾಮೇತಿ ಎಂದರೆ ನನ್ನಲ್ಲಿಯೇ ಐಕ್ಯವಾಗುತ್ತೀಯಾ ಎಂದು ಅರ್ಥ. ಮೊದಲು ಎರಡು ಅಧ್ಯಾಯಗಳಲ್ಲಿ ಪರಮಾತ್ಮನನ್ನು ಕುರಿತು ಹೇಳಿದ್ದರೂ, ಆ ಪರಮಾತ್ಮನು ನಾನೇ ಎಂದು ಹೇಳಲಿಲ್ಲ. ಈ ಅಧ್ಯಾಯದಲ್ಲಿ ಪರಮಾತ್ಮನು ನಾನೇ ಎಂದು ಪ್ರಕಟಿಸಿಕೊಳ್ಳುವುದಲ್ಲದೇ, ಮೋಕ್ಷ ಅಥವಾ ಪರಮಪದ ಎನ್ನುವ ಸ್ಥಿತಿಯು

ನಾನೇ ಎನ್ನುತ್ತಾ, ಕರ್ಮಮುಗಿದ ನಂತರ ಜನ್ಮಗಳು ಇಲ್ಲದಂತೆಹೋದ ಜೀವಾತ್ಮಗಳು ನನ್ನಲ್ಲಿ ಐಕ್ಯವಾಗಿ, ಅವರೂ ಸಹ ನಾನಾಗಿ (ಪರಮಾತ್ಮನಾಗಿ) ಬದಲಾಗುತ್ತಾರೆಂದು ಹೇಳಿದ್ದಾನೆ. ಅಷ್ಟೇ ಅಲ್ಲದೆ ಈ ಅಧ್ಯಾಯದಲ್ಲಿ ಇಲ್ಲಿ ಪ್ರತ್ಯೇಕತೆ ಏನೆಂದರೆ! ಕರ್ಮಯೋಗ ಅಥವಾ ಬ್ರಹ್ಮಯೋಗಗಳ ಮೂಲಕ ಮೋಕ್ಷ ಹೊಂದಬಹುದೆಂದು ಇಲ್ಲಿಯವರೆಗೂ ಹೇಳಿದ ಭಗವಂತನು, ಈಗ ಆ ಯೋಗಗಳಿಂದ ಯಾವ ಸಂಬಂಧ ಇಲ್ಲದಿದ್ದರೂ, ಪರಮಾತ್ಮ ಇಂತಹ ಮನುಷ್ಯನಾಗಿ ಜನ್ಮಿಸಿದ್ದಾನೆಂದು ಆತನ ಜನ್ಮವನ್ನು ತಿಳಿದು, ಆ ಜನ್ಮದಲ್ಲಿ ಆತನು ಕರ್ಮ ಅಂಟದ ವಿಧಾನದಿಂದ ಕೆಲಸಗಳು ಮಾಡುತ್ತಿದ್ದಾನೆಂದು ತಿಳಿದು, ಆತನ ಕೆಲಸಗಳನ್ನು ಗ್ರಹಿಸಿದ ಜೀವಿಯು ಯಾರಾದರಾಗಲಿ, ಅವನು ಮರಣಿಸಿದ ನಂತರ ನನ್ನಲ್ಲಿಯೇ ಐಕ್ಯವಾಗುತ್ತಾನೆಂದು ತಿಳಿಸಿದ್ದಾನೆ.

ಹಾಗಾದರೆ ಸಾಧನೆಯಿಂದ ಕೂಡಿಕೊಂಡ ಯೋಗಗಳನ್ನು, ಮಧ್ಯದಲ್ಲಿ ಭಂಗವಾಗುವ ಯೋಗಗಳನ್ನು, ಪ್ರಜೆಗಳ ಮಧ್ಯ ಎಷ್ಟೋ ಆತಂಕಗಳಿಂದ ಕೂಡಿಕೊಂಡ ಯೋಗಗಳನ್ನು. ಅನೇಕ ಜನ್ಮಗಳಲ್ಲಿ ಸಾಧಿಸಿ ಮೋಕ್ಷ ಹೊಂದುವುದಕ್ಕಿಂತ, ಪರಮಾತ್ಮನ ಹುಟ್ಟುವಿಕೆಯಾದ ಭಗವಂತನನ್ನು, ಆತನ ಕಾರ್ಯಗಳನ್ನು ತಿಳಿದುಕೊಳ್ಳುವುದರಿಂದ ಒಂದೇ ಜನ್ಮದಲ್ಲಿ ಮೋಕ್ಷವನ್ನು ಸುಲಭವಾಗಿ ಪಡೆಯಬಹುದಲ್ಲವೆ! ಎಂದು ಬಹಳ ಜನರು ಅಂದುಕೊಳ್ಳಬಹುದು. ಆದರೆ ಅದು ಅಷ್ಟು ಸುಲಭವಾಗಿರುವುದಿಲ್ಲವೆಂದು ಹೇಳಬಹುದು. ಏಕೆಂದರೆ! ಯೋಗಗಳು ಆಚರಿಸುವುದಕ್ಕೆ ತಕ್ಕ ವಿಧಾನಗಳಿವೆ. ಆ ವಿಧಾನಗಳ ಪ್ರಕಾರ ಆಚರಿಸಿ ಎಂದಿಗಾದರೂ ಮೋಕ್ಷವನ್ನು ಹೊಂದಬಹುದು. ಆದರೆ ಯಾವ ವಿಧಾನಗಳು ಇಲ್ಲದ ಭಗವಂತನ ಜನ್ಮ ತಿಳಿದುಕೊಳ್ಳುವುದು ಬಹಳ ಕಷ್ಟ. ಸಾಧಾರಣ ವ್ಯಕ್ತಿಯಾಗಿದ್ದು ಯಾವ ಪ್ರತ್ಯೇಕತೆ ಇಲ್ಲದವನನ್ನು ಗುರುತಿಸುವುದು ಕಷ್ಟವಾಗುತ್ತದೆ. ಒಂದುವೇಳೆ ಕಾರ್ಯಗಳಿಂದ ತಿಳಿದುಕೊಳ್ಳಬಹುದು ಎನ್ನುವುದಕ್ಕೆ, ಆತನು ಮಾಡುವ ಕೆಲಸಗಳು ಉಚ್ಛ ನೀಚಗಳಾಗಿ ಎರಡು ಕಾರ್ಯಗಳು ಇರುತ್ತವೆ. ಇಂತಹ ಸಾಕಾರ ಭಗವಂತನನ್ನು ತಿಳಿದುಕೊಳ್ಳುವುದಕ್ಕಿಂತ ಪ್ರತ್ಯೇಕ ವಿಧಾನಗಳಿರುವ ಯೋಗಗಳನ್ನು ಆಚರಿಸುವುದರಿಂದ ಸುಲಭವಾಗಿ ಮೋಕ್ಷವನ್ನು ಪಡೆಯಬಹುದು. ಭಗವಂತನನ್ನು ತಿಳಿದುಕೊಳ್ಳವುದಕ್ಕೆ ಆಧಾರವೇ ಇಲ್ಲದಿರುವಾಗ, ನನ್ನ ಜನ್ಮವನ್ನು ಕರ್ಮವನ್ನು ತಿಳಿದವರಿಗೆ ಮೋಕ್ಷ ಬರುತ್ತದೆಂದು ಹೇಗೆ ಹೇಳಿದ್ದಾನೆ? ಹಾಗೆ ಹೇಳುವುದರಿಂದ ಏನೋ ಒಂದು ಅವಕಾಶ ಇರುತ್ತದೆ ಅಲ್ಲವೆ! ಅನ್ನುವ ಸಂಶಯ ನಮಗೆ ಬರಬಹುದು. ಹಾಗೆ ಯೋಚಿಸಿದರೆ ಪ್ರಮಾಣ ಪೂರ್ವಕವಾದ ಆಧಾರಗಳು ಇಲ್ಲದಿದ್ದರೂ ಸಂಶಯ ಪೂರ್ವಕವಾದ ಆಧಾರ

ಒಂದಿದೆ. ಅದು ಆತನು ಹೇಳಿರುವುದೇ, ಅದೇನೆಂದರೆ! ಆತನು ಭೂಮಿ ಮೇಲೆ ಬಂದಿರುವುದು ಧರ್ಮಸಂಸ್ಥಾಪನೆಗೋಸ್ಕರವಲ್ಲವೆ! ಆ ಒಂದು ಆಧಾರದಿಂದ ಆತನನ್ನು ಗುರುತಿಸುವುದಕ್ಕೆ ಅವಕಾಶವಿದೆ. ಆದರೂ ಅದು ಸಂಶಯಗಳಿಂದ ಕೂಡಿಕೊಂಡಿದೆ. ಎಲ್ಲಾ ಸಂಶಯಗಳಿಗೆ ಉತ್ತರ ಇದ್ದಾಗಲೇ ಆ ಆಧಾರವನ್ನು ವಿಶ್ವಾಸಿಸಿ ಭಗವಂತನನ್ನು ತಿಳಿಯಬಹುದು. ಆ ಒಂದು ಆಧಾರದ ಪ್ರಕಾರ **ಎಲ್ಲಿಯಾದರೆ ತಿಳಿಯದ ಧರ್ಮಗಳು ತಿಳಿಯುತ್ತಿವೆಯೋ, ಎಲ್ಲಿಯಾದರೆ ಆಚರಣೆಯಲ್ಲಿದ್ದು ಅರ್ಥರಹಿತವಾಗಿ ಹೋಗಿರುವ ಕಾರ್ಯಕ್ರಮಗಳಿಗೆ ಧರ್ಮಯುಕ್ತಾರ್ಥಗಳನ್ನು ಬೋಧಿಸಲ್ಪಡುತ್ತಿದೆಯೊ, ಎಲ್ಲಿಯಾದರೆ ಪೂರ್ವದಲ್ಲಿದ್ದು ಈಗ ಇಲ್ಲದ ಪರಮಾರ್ಥ ರಹಸ್ಯ ವಿಷಯಗಳು ತಿಳಿಯಲ್ಪಡುತ್ತಿವೆಯೊ, ಎಲ್ಲಾದರೆ ಮಾನವನ ಬುದ್ಧಿಗೆ ಸಿಗದ ಆತ್ಮ ವಿಷಯಗಳು ಬೋಧಿಸಲ್ಪಡುತ್ತಿವೆಯೊ, ಎಲ್ಲಿಯಾದರೆ ಮತಾತೀತ ಬೋಧನೆ ಇದೆಯೋ ಅಲ್ಲಿಯೇ ಪರಮಾತ್ಮ ಜನ್ಮವಿದೆಯೆಂದು ತಿಳಿಯಬಹುದು**. ಒಂದು ಶರೀರದಿಂದ ಹೊರಗೆ ಬರುವ ಬೋಧನೆಯನ್ನನುಸರಿಸಿ ಭಗವಂತನೆಂದುಕೊಂಡರೂ, ಆತನು ಮಾಡುವ ಕಾರ್ಯಗಳು ಅನೇಕ ಸಂಶಯಗಳನ್ನು ಹುಟ್ಟಿಸುವವಾಗಿರುತ್ತವೆ. ಆತನ ಜೀವನ ವಿಧಾನವೆಲ್ಲವೂ ಭಗವಂತನಲ್ಲವೆಂಬ ನಿರೂಪಣೆಗಳಿಂದ ಕೂಡಿಕೊಂಡಿರುವುದರಿಂದ ಯಾರು ಗುರುತಿಸಲಾರರೆಂದು ಹೇಳಬಹುದು. ಹೇಳುವ ಬೋಧನೆಗಳಿಗಿಂತ ಮಾಡುವ ಕಾರ್ಯಗಳೇ ಮುಖ್ಯವೆಂದು ಮಾಯೆ ನಮ್ಮಲ್ಲಿ ಮಾತು ಮಾತಿಗೂ ನೆನಪು ಮಾಡುವುದರಿಂದ, ಒಬ್ಬರು ಒಂದು ವರ್ಷದಕಾಲ ಭಗವಂತನನ್ನು ಭಗವಂತನಾಗಿ ಗುರುತಿಸಿದರೂ, ವರ್ಷದ ಕೊನೆಗೆ ಒಂದು ದಿನ ಆತನು ಭಗವಂತನು ಅಲ್ಲವೆಂದು ಅವನ ಬಾಯಿಂದಲೇ ಮಾಯೆ ಹೇಳಿಸುತ್ತದೆ. ದುರ್ಲಭವಾದ ಭಗವಂತನನ್ನು ತಿಳಿಯಬೇಕೆಂದರೆ ಮನುಷ್ಯನಲ್ಲಿ ವಿಶೇಷವಾದ ಜ್ಞಾನ ಇದ್ದು, ನಮ್ಮ ಶರೀರದಲ್ಲಿ ಮಾಯೆ ಮೂಲಕ ಬರುವ ಎಲ್ಲಾ ಸಂಶಯಗಳಿಗೂ ಸಮಾಧಾನಗಳು ಇದ್ದಾಗಲೇ ಭಗವಂತನನ್ನು ಗುರುತಿಸಬಹುದು. ಅಖಂಡವಾದ, ಬ್ರಹ್ಮಾಂಡವಾದ ಆತ್ಮಜ್ಞಾನ ಇರುವವನು ಪರಮಾತ್ಮ ಜನ್ಮವಾದ ಭಗವಂತನನ್ನು ಗುರುತಿಸಬಹುದು. ಹಾಗೆ ಗುರುತಿಸಿದವನಿಗೆ ಮತ್ತೆ ಜನ್ಮವಿಲ್ಲದ ಸ್ಥಾನ ಲಭಿಸುತ್ತದೆ.

ಮುಖ್ಯವಾಗಿ ಗಮನಿಸಬೇಕಾದ ವಿಷಯ ಏನೆಂದರೆ ಭೂಮಿ ಮೇಲೆ ಭಗವಂತನು ಇದ್ದಾಗಲೇ ಗುರುತಿಸುವುದಕ್ಕೆ ಅವಕಾಶ ಇರುತ್ತದೆ. ಎಷ್ಟೋ ಸಾವಿರ, ಲಕ್ಷಗಳ, ಕೋಟಿಗಳ ವರ್ಷಗಳಿಗೆ ಒಂದು ಬಾರಿ ಅವಶ್ಯಕತೆ ಬಂದಾಗ ಬರುವ ಭಗವಂತನನ್ನು ಆ ಸಮಯದಲ್ಲಿಯೇ ಗುರುತಿಸುವುದಕ್ಕೆ ಅವಕಾಶ ಇರುತ್ತದೆ. ಆತನ ಜನ್ಮ ಭೂಮಿಮೇಲೆ ಇಲ್ಲದಿರುವಾಗ ಮೋಕ್ಷ ಹೊಂದುವುದಕ್ಕೆ ಎರಡು ಯೋಗಗಳೇ ಆಧಾರ ಮಾರ್ಗಗಳು.

ಆತನು ಭೂಮಿ ಮೇಲಿರುವಾಗಲೇ ಸಾಕಾರವನ್ನು ಗುರುತಿಸುವುದು ಸಹ ಒಂದು ಮಾರ್ಗವಾಗುತ್ತದೆ. ಮೋಕ್ಷ ಹೊಂದುವುದಕ್ಕೆ ಯಾವಾಗಲೂ ಧರ್ಮಯುಕ್ತವಾದ ಯೋಗಗಳೆಂಬ ಎರಡು ಮಾರ್ಗಗಳು, ಧರ್ಮಾತೀತವಾದ ಯೋಗವೆಂಬ ಒಂದು ಮಾರ್ಗ, ಒಂದುಬಾರಿ ಮಾತ್ರ ಸಾಕಾರ ಗುರುತು ಎನ್ನುವ ಒಂದುಮಾರ್ಗ ಒಟ್ಟು ನಾಲ್ಕು ಮಾರ್ಗಗಳಿವೆ. ಯಾವಾಗಲೂ ಧರ್ಮಯುಕ್ತ, ಧರ್ಮಾತೀತ ಎರಡು ವಿಧಗಳ ಯೋಗಗಳಿರುತ್ತವೆ. ಸಾಕಾರ ಗುರುತು ಯಾವಾಗಲೂ ಇರುವುದು ಅಲ್ಲ.

**(3) ಶ್ಲೋ॥ 10 : ವೀತರಾಗ ಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ।**
**ಬಹವೋ ಜ್ಞಾನ ತಪಸಾ ಪೂತಾ ಮದ್ಭಾವ ಮಾಗತಾಃ ॥**

**(ಸಾಕಾರ)**

**ಭಾವಾರ್ಥ :** ಭಯ, ಪ್ರೇಮ, ಕೋಪ ಬಿಟ್ಟು ನನ್ನ ಮೇಲೆ ಧ್ಯಾಸವುಳ್ಳವರಾಗಿ (ಮನಸ್ಸುಳ್ಳವರಾಗಿ) ನನ್ನನ್ನು ಉಪಾಸಿಸುವವರು ಎಷ್ಟೋಜನ ಜ್ಞಾನ ತಪನೆಯಿಂದ ಪವಿತ್ರರಾಗಿ ನನ್ನ ಸ್ವರೂಪವನ್ನು ಹೊಂದುತ್ತಾರೆ.

**ವಿವರ :** ಪರಮಾತ್ಮ ಸಾಕಾರವಾದ ಭಗವಂತನನ್ನು ತಿಳಿದುಕೊಳ್ಳುವುದಕ್ಕೆ, ಆತನು ಕೆಲವು ಮಾರ್ಗಗಳನ್ನು ಈ ಶ್ಲೋಕದಲ್ಲಿ ಹೇಳಿದ್ದಾನೆ. ಈ ಪದ್ಧತಿಯಲ್ಲಿ ಬಹಳ ಜನರು ಮುಕ್ತಿ ಪಡೆದಿದ್ದಾರೆಂದೂ ಸಹ ಹೇಳಿದ್ದಾನೆ. ಆ ಮಾರ್ಗಗಳನ್ನು ವಿವರವಾಗಿ ತಿಳಿದುಕೊಳ್ಳೋಣ. ಪ್ರೇಮ, ಕೋಪ, ಭಯವನ್ನು ಬಿಟ್ಟು ಧ್ಯಾಸವನ್ನು ನನ್ನ ಮೇಲೇ ಇಟ್ಟುಕೊ ಎಂದಿದ್ದಾನೆ. ನಮ್ಮ ಸುತ್ತಲಿರುವವರ ಮೇಲೆ ಪ್ರೇಮಗುಣಗಳು ಇರುವುದರಿಂದ ಮನಸ್ಸೊಂದರ ಧ್ಯಾಸ ಅವರ ಮೇಲಿರುತ್ತದೆ. ಸಾಕಾರ ಭಗವಂತನ ಮೇಲೆ ಇರುವುದಿಲ್ಲ. ಆದ್ದರಿಂದ ನಿನಗೆ ಹೆಚ್ಚಿನ ಪ್ರೇಮ ಯಾರ ಮೇಲಿರುತ್ತದೋ ಅವರ ಮೇಲಿನ ಪ್ರೇಮವನ್ನು ಬಿಡಬೇಕು. ಹಾಗೆ ಇತರರ ಮೇಲೆ ಕ್ರೋಧ ಇರುವುದರಿಂದ ಮನಸ್ಸಿನಲ್ಲಿ ಆ ಶತ್ರುವೇ ಬರುತ್ತಿರುತ್ತಾನೆ. ಶತ್ರುವನ್ನು ಮನಸ್ಸಿನಿಂದ ತೊಲಗಿಸಬೇಕೆಂದರೆ ಕೋಪವನ್ನು ಬಿಡಬೇಕು. ನೀನು ಯಾರಿಗೆ ಭಯಪಡುತ್ತೀಯೋ, ಅವನ ಧ್ಯಾಸವೂ ಸಹ ಇಲ್ಲದಂತೆ ಹೋಗಿ, ಭಗವಂತನ ಮೇಲೆ ಧ್ಯಾಸ ಬರಬೇಕೆಂದರೆ ಭಯವನ್ನೂ ಸಹ ಬಿಡಬೇಕು. ಭಯಕ್ರೋಧ ರಾಗಗಳು ಬಿಟ್ಟವರು, ಭಗವಂತನ ರೂಪದ ಮೇಲೆ ಧ್ಯಾಸಹೊಂದಿದವರು, ಆತನ ಮೂಲಕ ಹೊರಬರುವ ಜ್ಞಾನಕ್ಕೋಸ್ಕರ ತಪನೆಹೊಂದಿದವರು, ಬಹಳ ಜನರು ಭಗವಂತನ ಸಾಕಾರವನ್ನು ತಿಳಿದು ಮೋಕ್ಷ ಹೊಂದಿದ್ದಾರೆ.

ಜ್ಞಾನ ತಪನೆ ಎಲ್ಲಾರಿಗೂ ಇರಬಹುದು. ಆದರೆ ಪ್ರೇಮ, ಭಯ ಬಿಡಬೇಕೆಂದರೆ ಬಹಳ ಕಷ್ಟ. ಪ್ರೇಮವನ್ನು ಜಯಿಸಬೇಕೆಂದರೆ ಪ್ರೇಮದಿಂದ ಇರುವ ಹೆಂಡತಿಯೋ, ಮಕ್ಕಳೋ ಬಂಧನಗಳಾಗಿ ಕಟ್ಟಿಹಾಕುತ್ತಾರೆ. ಭಯವನ್ನು ಜಯಿಸಬೇಕೆಂದುಕೊಂಡವನಿಗೆ ನಿನಗೆ ಜ್ಞಾನವೇ ಬೇಡ, ಜ್ಞಾನ ಬೇಕೆಂದರೆ ನಿನ್ನನ್ನು ಹಾಗೆ ಮಾಡುತ್ತೇವೆ, ಹೀಗೆ ಮಾಡುತ್ತೇವೆಂದು ಮನೆಯಲ್ಲಿರುವವರೇ ಹೆದರಿಸುತ್ತಾರೆ. ಆದ್ದರಿಂದ ಜ್ಞಾನ ತಪನೆ ಇದ್ದರೂ ನಮ್ಮ ಸುತ್ತಲೂ ಹತ್ತಿರ ಇರುವವರೇ ಬಂಧನಗಳಾಗುತ್ತಾರೆ.

**(3) ಶ್ಲೋ॥ 11 : ಯೇ ಯಥಾ ಮಾಂ ಪ್ರಪದ್ಯನ್ತೇ ತಾಂಸ್ತಥೈವ ಭಜಾಮ್ಯಹಂ॥**
**ಮಮ ವರ್ತ್ಮಾನು ವರ್ತನ್ತೇ ಮನುಷ್ಯಾಃ ಪಾರ್ಥ! ಸರ್ವಶಃ ॥**
**(ಸಾಕಾರ, ನಿರಾಕಾರ)**

**ಭಾವಾರ್ಥ :** ಯಾರು ನನ್ನನ್ನು ಯಾವ ವಿಧವಾಗಿ ಭಾವಿಸಿ ಪೂಜಿಸುತ್ತಿದ್ದಾರೋ, ಹಾಗೇ ಅವರು ನನ್ನ ಅನುಗ್ರಹ ಪಡೆಯುತ್ತಾರೆ. ಮನುಷ್ಯರು ಎಷ್ಟೋ ವಿಧಗಳಾಗಿ ನನ್ನನ್ನು ಆರಾಧಿಸುತ್ತಿದ್ದಾರೆ.

**ವಿವರ :** ಬಹಳ ಜನರು ನನ್ನನ್ನು ಸೇರುವುದಕ್ಕೆ ಎಷ್ಟೋ ಮಾರ್ಗಗಳಲ್ಲಿ ನನ್ನನ್ನು ಆರಾಧಿಸುತ್ತಿದ್ದಾರೆಂದು ಮೇಲಿನ ಶ್ಲೋಕದಲ್ಲಿ ಭಗವಂತನು ಹೇಳಿದ್ದಾನೆ. ಹಾಗೆ ಆರಾಧಿಸುವ ಆರಾಧನೆಗಳು ಎಷ್ಟು ಇದ್ದರೂ ಅವುಗಳನ್ನು ಎರಡನ್ನಾಗಿ ವಿಭಜಿಸಬಹುದು. ಒಂದು ಸಾಕಾರ ಆರಾಧನೆ, ಎರಡನೆಯದು ಆರಾಧನೆ, ನಿರಾಕಾರ ಎಂದರೆ ಯೋಗಪದ್ಧತಿಗಳನ್ನು ಅನುಸರಿಸುವುದೆಂದು ಅರ್ಥ. ಸಾಕಾರ ಆರಾಧನೆಗಳೇ ಬಹಳ ವಿಧಗಳಾಗಿವೆ. ಒಬ್ಬೊಬ್ಬನು ಒಂದೊಂದು ಆಕಾರವನ್ನು ಇಟ್ಟುಕೊಂಡು, ಅದೇ ಭಗವಂತನೆಂದುಕೊಂಡು ಪೂಜಿಸುತ್ತಾರೆ. ಭಗವಂತನ ರೂಪ ಅಲ್ಲದಿದ್ದರೂ, ಅವನು ತನ್ನ ಭಾವದಲ್ಲಿ ಚಿಕ್ಕ ಪ್ರತಿಮೆಯನ್ನು ದೈವ ರೂಪವೆಂದು ತಿಳಿಯುತ್ತಾನೆ. ಹಾಗೆ ಅನೇಕರು ಅನೇಕ ರೂಪಗಳನ್ನು ಪೂಜಿಸುತ್ತಿದ್ದಾರೆ. ಆದರೂ ಅವರಲ್ಲಿ ಪರಮಾತ್ಮ ಎನ್ನುವ ಭಾವಹೊಂದಿ ಮೋಕ್ಷವನ್ನು ಕೋರುವವರು ಬಹಳ ಕಡಿಮೆ. ಹೆಚ್ಚು ಜನರು ಕಷ್ಟಗಳು ತೀರಬೇಕೆಂದೋ, ಧನ ಪ್ರಾಪ್ತಿಯಾಗಬೇಕೆಂದೋ, ಅನೇಕ ಕೋರಿಕೆಗಳಿಂದ ಆರಾಧಿಸುವವರಿದ್ದಾರೆ. ಮೋಕ್ಷವನ್ನು ಕೋರಿ ಪೂಜಿಸುವವರೂ ಸಹ ಇದ್ದಾರೆ. ಕರ್ಮಫಲಗಳಲ್ಲಿ ಆಸೆಹೊಂದಿ ಪೂಜಿಸುವವರೂ ಇದ್ದಾರೆ. ಆ ವಿಷಯ ಕೆಳಗಿನ ಶ್ಲೋಕದಲ್ಲಿ ನೋಡೋಣ.

**(3) ಶ್ಲೋ॥ 12 : ಕಾಂಕ್ಷಂತಃ ಕರ್ಮಣಾಂ ಸಿದ್ಧಿಂ ಯಜಂತ ಇಹ ದೇವತಾಃ ।**
**ಕ್ಷಿಪ್ರಂಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ ॥**

**(ಪ್ರಕೃತಿ)**

**ಭಾವಾರ್ಥ :** ಕರ್ಮಫಲಗಳಲ್ಲಿ ಆಸೆ ಇರುವವರು ದೇವತಾ ಪೂಜೆ ಮಾಡುತ್ತಾರೆ. ಜಗತ್ತಿನಲ್ಲಿ ಕಾಮ್ಯ ಕರ್ಮಫಲಗಳು ಬೇಗನೇ ಸಿದ್ಧಿಸುತ್ತವೆ.

**ವಿವರ :** ಈ ಕೆಲಸಕ್ಕೆ ಇಷ್ಟು ಬೆಲೆ ಎನ್ನುವಂತೆ, ಬೇರೆಬೇರೆ ಕೆಲಸಗಳಿಗೆ ಬೇರೆ ಬೇರೆ ಲಾಭಗಳಿರುವಂತೆ, ಬೇರೆ ಬೇರೆ ದೇವತೆಗಳ ಪೂಜೆಗಳಿಗೆ ಬೇರೆ ಬೇರೆ ಫಲಿತಗಳಿವೆಯೆಂದು ಆಸೆಪಟ್ಟ ಪ್ರಜೆಗಳು, ಆಯಾ ದೇವತೆಗಳನ್ನು ಆರಾಧಿಸುತ್ತಿದ್ದಾರೆ. ಕರ್ಮದಿಂದ ನಡೆಯುವ ಕೆಲಸಗಳಿಗೆ ಕೂಡಲೇ ಕಾಣಿಸುವ ಫಲಿತ ಬರುತ್ತದೆ. ಧನಿಕರು ಕೆಲವರು ಒಬ್ಬ ದೇವರನ್ನು ಆರಾಧಿಸುತ್ತಾ ತಮ್ಮ ವ್ಯಾಪಾರದಲ್ಲಿ ಹೆಚ್ಚಿನ ಲಾಭಗಳು ಬರಬೇಕೆಂದು ಕೋರುತ್ತಿರುತ್ತಾರೆ. ಅವರು ಹಣಕ್ಕೋಸ್ಕರ ಅಕ್ರಮ ವ್ಯಾಪಾರವೂ ಸಹ ಮಾಡುತ್ತಿರುತ್ತಾರೆ. ವರ್ಷದ ಕೊನೆಯಲ್ಲಿ ಅವರು ಮಾಡಿದ ವ್ಯಾಪಾರದಲ್ಲಿ ಲಾಭ ಕಾಣಿಸಿದಾಗ, ಅದು ಅವರ ಪೂಜಾಫಲವೆಂದು ಕೊಳ್ಳುತ್ತಾರೆ. ನಾವು ಮಾಡಿದ ಕಾರ್ಯಾಚರಣೆಯಲ್ಲಿ ಸಿದ್ಧಿಸಿರುವುದೆಂದುಕೊಳ್ಳುವುದಿಲ್ಲ.

**'ಕ್ಷಿಪ್ರಂ ಸಿದ್ಧಿರ್ಭವತಿ ಕರ್ಮಜಾ'** ತಕ್ಷಣ ಕರ್ಮಫಲಗಳು ಉಂಟಾಗುತ್ತವೆ ಎನ್ನುವ ಭಗವಂತನ ಮಾತಿನ ಪ್ರಕಾರ, ಕೆಲಸಗಳು ಮಾಡುವ ಕೂಲಿಯವನಿಗೆ ಸಾಯಂಕಾಲಕ್ಕೆ, ಉದ್ಯೋಗಸ್ತನಿಗೆ ತಿಂಗಳಕೊನೆಗೆ, ವ್ಯಾಪಾರಸ್ತನಿಗೆ ವರ್ಷದ ಕೊನೆಯಲ್ಲಿ ಫಲಿತವು ಕಾಣಿಸುತ್ತಿದೆ. ಈ ಫಲಿತಗಳು ದೇವತಾ ಪೂಜೆಗಳಿಂದ ಉಂಟಾಗುತ್ತಿವೆ ಎಂದು ಆಸೆ ಪಡುವುದರಿಂದ, ಇನ್ನೂ ಬೇಕೆಂಬ ಕೋರಿಕೆಗಳಿಂದ ದೇವತೆಗಳನ್ನು ಆರಾಧಿಸುತ್ತಿದ್ದಾರೆ. ಕಾರ್ಯದಿಂದ ಕಾಣಿಸುವ ಫಲಿತ ಹಣ, ಕಾಣಿಸದ ಫಲಿತ ಕರ್ಮ ಬರುತ್ತದೆಂದು ತಿಳಿಯದ ಪ್ರಜೆಗಳು ಆಸೆಯಿಂದ ಕರ್ಮಾ ಚರಣೆಯಿಂದ ಬರುವ ಫಲಿತಗಳಿಗೋಸ್ಕರ ದೇವತಾಪೂಜೆ ಮಾಡುತ್ತಿದ್ದಾರೆಂದು ಭಗವಂತನು ಮೇಲಿನ ಶ್ಲೋಕದಲ್ಲಿ ಹೇಳಿದ್ದಾನೆ.

**(3) ಶ್ಲೋ॥ 13 : ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣಕರ್ಮವಿಭಾಗಶಃ ।**
**ತಸ್ಯ ಕರ್ತಾರ ಮಪಿ ಮಾಂ ವಿದ್ಧ್ಯ ಕರ್ತಾರ ಮವ್ಯಯಮ್॥**

**(ಪರಮಾತ್ಮ)**

**ಭಾವಾರ್ಥ :** ಕರ್ಮ ಗುಣ ವಿಭಾಗಗಳನ್ನನುಸರಿಸಿ ನಾಲ್ಕು ವರ್ಣಗಳು ನನ್ನಿಂದ ಸೃಷ್ಟಿಸಲ್ಪಟ್ಟಿವೆ. ಅವುಗಳ ಕರ್ತನಾದರೂ ಆಗದೆ ನಾಶವಿಲ್ಲದವನಾಗಿದ್ದೇನೆ.

**ವಿವರ :** ಭಗವಂತನು ನಾಲ್ಕು ವರ್ಣಗಳನ್ನು ಸೃಷ್ಟಿಸಿದ್ದಾನೆ ವಾಸ್ತವವೇ. ಅವು ಯಾವುವು ಎನ್ನುವುದೇ ಇಲ್ಲಿ ದೊಡ್ಡ ಸಮಸ್ಯೆ. ಇಲ್ಲಿಯವರೆಗೂ ಆ ನಾಲ್ಕು ವರ್ಣಗಳನ್ನು ಕುರಿತು ಬಹಳ ಜನರು ನಾಲ್ಕು ಕುಲಗಳಾಗಿ ವರ್ಣಿಸಿಕೊಂಡಿದ್ದಾರೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಾಗಿ ನಾಲ್ಕು ವರ್ಣಗಳು ಸೃಷ್ಟಿಸಲ್ಪಟ್ಟಿವೆ ಎಂದು ಪ್ರಚಾರವಾಗಿದೆ. ಅದು ನಿಜವಾ ಎಂದು ನೋಡಿದರೆ, ಸಮಸ್ತ ಪ್ರಪಂಚವನ್ನು ಸೃಷ್ಟಿಸಿದ ಪರಮಾತ್ಮ ಪ್ರಪಂಚದಲ್ಲಿರುವ ಮನುಷ್ಯರನ್ನು ಪ್ರಕೃತಿಯಿಂದ ತಯಾರುಮಾಡಿದ್ದಾನೆ. ಆದರೆ ಪ್ರಪಂಚ ಜನಸಂಖ್ಯೆಯಲ್ಲಿ ಈ ನಾಲ್ಕು ಕುಲಗಳು ಎಲ್ಲಿಯೂ ಕಾಣಿಸುವುದಿಲ್ಲ. ಇದರಿಂದ ನಮಗೆ ಸಂಶಯ ಏರ್ಪಡುತ್ತಿದೆ. ಭಗವಂತನು ಹೇಳಿದ ಪ್ರತಿಯೊಂದು ಮಾತು ಸರ್ವ ಜೀವರಾಶಿಗಳಿಗೆ ಅನ್ವಯಿಸುವುದಾಗಿರುವಾಗ, ಈ ನಾಲ್ಕು ವರ್ಣಗಳು ನಾಲ್ಕು ಕುಲಗಳು ಎನ್ನುವ ಮಾತು, ವಿದೇಶಗಳಲ್ಲಿಯೇ ಅಲ್ಲ ಭಾರತದಲ್ಲಿಯೂ ಸಹ ಅನ್ವಯಿಸುವುದಿಲ್ಲ. ಪರಮಾತ್ಮ ಬಾಹ್ಯವಾಗಿರುವ ಯಾವ ಮತವನ್ನಾಗಲಿ, ಯಾವ ಕುಲವನ್ನಾಗಲಿ ಇಲ್ಲಿಯವರೆಗೂ ಏರ್ಪಡಿಸಲಿಲ್ಲ. ಕುಲಗಳು ಮತಗಳು ಭೂಮಿ ಮೇಲೆ ಏರ್ಪಡಿಸಿಕೊಂಡವರು ಮನುಷ್ಯರೇ. ಕುಲ ಮತ ಭೇಧಗಳು ಮನುಷ್ಯರು ಏರ್ಪಡಿಸಿಕೊಂಡಿರುವವೇ ಆಗಲಿ ಪರಮಾತ್ಮ ಸೃಷ್ಟಿಸಲಿಲ್ಲ. ಇನ್ನೂ ಕೆಲವರು 'ಭಗವಂತನು ಗುಣಕರ್ಮ ವಿಭಾಗ ಎಂದಿದ್ದಾನಲ್ಲವೆ! ಮನುಷ್ಯರು ಮಾಡುವ ಕೆಲಸಗಳಿಂದ, ಗುಣಗಳಿಂದ ಅವರನ್ನು ವಿಭಜಿಸಿಕೊಳ್ಳಬಹುದು. ವ್ಯಾಪಾರ ಮಾಡುವವರು ಯಾರಾದರೂ ವೈಶ್ಯರೆಂದು, ನೀಚ ಕೆಲಸಗಳು ಮಾಡುವವರು ಶೂದ್ರರೆಂದು, ರಾಜ್ಯವನ್ನಾಳುವವರನ್ನು ಕ್ಷತ್ರಿಯರೆಂದು ಹೇಳಿಕೊಳ್ಳಬಹುದು. ಅವರ ಹುಟ್ಟಿನಿಂದ ಬಂದಿರುವ ಕುಲ ಮುಖ್ಯವಲ್ಲ. ಅವರು ಮಾಡುವ ಕೆಲಸಗಳಿಂದ ಕುಲವನ್ನು ಏರ್ಪಡಿಸಬೇಕು. ಹುಟ್ಟಿನಿಂದ ಬ್ರಾಹ್ಮಣನಾದರೂ ನೀಚ ಕೆಲಸಗಳು ಮಾಡಿದರೆ ಶೂದ್ರನೆಂದು ಹೇಳಬೇಕು.' ಎಂದು ಹೇಳುತ್ತಿದ್ದಾರೆ. ಆತನು ಮಾಡಿರುವುದಾಗಲಿ, ಹೇಳಿರುವುದಾಗಲಿ. ಪ್ರತಿ ಜೀವರಾಶಿಗೂ ಅನ್ವಯಿಸುವುದಾಗಿರುವಾಗ, ಮನುಷ್ಯರಲ್ಲಾದರೆ ನಾಲ್ಕು ಕುಲಗಳು ಏರ್ಪಡಿಸಿದಂತೆ ಹೇಳಿಕೊಳ್ಳಬಹುದು. ಉಳಿದ ಜೀವರಾಶಿಗಳೆಷ್ಟೋ ಇವೆಯಲ್ಲವೆ! ಅವುಗಳನ್ನು ಯಾವ ಕುಲಗಳಾಗಿ ಹೇಳಿಕೊಳ್ಳಬಹುದು? ನಾಯಿಗಳನ್ನು, ನರಿಗಳನ್ನು, ಬೆಕ್ಕುಗಳನ್ನು, ಇಲಿಗಳನ್ನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಾಗಿ ವಿಭಜಿಸಿ ಹೇಳಬಲ್ಲಿರಾ? ಹಾಗೆ ಹೇಳುವುದಕ್ಕೆ ಸಾಧ್ಯವಿಲ್ಲ. ಆದ್ದರಿಂದ ಈ ನಾಲ್ಕುವರ್ಣಗಳು ಪರಮಾತ್ಮ ಹೇಳಿರುವವು ಅಲ್ಲ. ಮಾನವರು ಸೃಷ್ಟಿಸಿಕೊಂಡಿರುವವೇ ಎಂದು ತಿಳಿಯಬೇಕು. ಮೇಲಿನ ಶ್ಲೋಕದಲ್ಲಿ

ನಾಲ್ಕುವರ್ಣಗಳು ನನ್ನಿಂದ ಸೃಷ್ಟಿಸಲ್ಪಟ್ಟಿವೆಯೆಂದು ಹೇಳಿದ್ದಾನೆ. ಆದರೆ ಅವು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಕುಲಗಳೆಂದು ಹೆಸರು ಇಡಲಿಲ್ಲ ಅಲ್ಲವೆ! ಈ ವಿಧವಾಗಿ ಯೋಚಿಸಿದರೆ ಇಲ್ಲಿಯವರೆಗೂ ಈ ಶ್ಲೋಕಕ್ಕೆ ಬರೆದುಕೊಂಡ ಭಾವ ಸರಿಯಾದುದಲ್ಲವೆಂದು ತಿಳಿದುಹೋಗುತ್ತದೆ. ಇದು ಸರಿಯಾಗಿ ಅರ್ಥವಾಗದಿರುವಾಗ ಯಾವುದು ಸರಿಯಾದುದೆಂಬುವುದು ಎಲ್ಲರಿಗೂ ಬರುವ ಪ್ರಶ್ನೆಯೇ. ಅದರ ಉತ್ತರ ಕೆಳಗೆ ನೋಡೋಣ.

ಭಗವಂತನಾದ ಶ್ರೀಕೃಷ್ಣನು ತನ್ನ ತಲೆ ಮೇಲೆ ನವಿಲು ಗರಿಯನ್ನು ಧರಿಸಿದ್ದಾನೆ. ಯಾರೂ ಧರಿಸದ ನವಿಲು ಗರಿಯನ್ನು ಆತನು ಧರಿಸುವುದರಲ್ಲಿ ಪ್ರತ್ಯೇಕತೆ ಏನೆಂದು ಯಾರೂ ಇಲ್ಲಿಯವರೆಗೂ ಯೋಚಿಸಲಿಲ್ಲವೆಂದೇ ಹೇಳಬಹುದು. ಈಗ ನಾವು ಯೋಚಿಸೋಣ. ಶ್ರೀಕೃಷ್ಣನು ನವಿಲುಗರಿಯನ್ನು ಅಂದಕ್ಕೊ, ಅಲಂಕಾರಕ್ಕೊ ಧರಿಸಲಿಲ್ಲ. ತಾನಿರುವ ಸ್ಥಿತಿಯನ್ನು ಕುರಿತು ನವಿಲುಗರಿಯ ಮೂಲಕ ತಿಳಿಸುತ್ತಾ, ನೀವೂ ಸಹ ಇದರಂತೆ ಇರಬೇಕೆಂದು ಬಹಿರ್ಗತ ಮಾಡುವ ಆಧ್ಯಾತ್ಮಿಕ ರಹಸ್ಯವೇ ನವಿಲುಗರಿ ಧರಿಸುವುದರಲ್ಲಿನ ವಿಶೇಷಾರ್ಥವೆಂದು ತಿಳಿಯಬೇಕು. ನವಿಲುಗರಿ ದೊಡ್ಡ ಆಧ್ಯಾತ್ಮಿಕ ರಹಸ್ಯವನ್ನು ಕುರಿತು ಬೋಧಿಸುವ ವಿಶಿಷ್ಟತೆ ಹೊಂದಿದೆ. ಅದರ ವಿಶೇಷವೇನೆಂದರೆ! ನವಿಲುಗರಿಯ ಮಧ್ಯಭಾಗದಲ್ಲಿ ಕಪ್ಪು ಬೆರೆತಿರುವ ನೀಲಿ ಬಣ್ಣದಿಂದ ಕೂಡಿಕೊಂಡು ಸ್ವಲ್ಪ ದುಂಡಾಗಿ ಆಕರ್ಷಣೆಯಾಗಿ ಕಾಣಿಸುತ್ತಿರುತ್ತದೆ. ಈ ಭಾಗ ನವಿಲುಗರಿಯಲ್ಲಿ ಎಲ್ಲಾ ಬಣ್ಣಗಳಿಗಿಂತ ಮುಖ್ಯವಾಗಿ ತಿಳಿಯುವಂತಿರುತ್ತದೆ. ಅದಕ್ಕೆ ಸುತ್ತಲೂ ಮಿಂಚುವಂತಹ ಎಲೆ ಹಸಿರುಬಣ್ಣ ಇರುತ್ತದೆ. ಅದರ ನಂತರ ಎಳೆಗೋಧಿಬಣ್ಣವಿರುವ ಆಕಾರ ಸುತ್ತಲೂ ಇರುತ್ತದೆ. ಈ ಎಳೆಗೋಧಿಬಣ್ಣದ ಸುತ್ತ ಕೊನೆಯಲ್ಲಿ ಮಿಂಚುತ್ತಿರುತ್ತದೆ. ಇದರ ಕೊನೆಯ ಅಂಚು ಮಿಂಚಿನ ನಂತರ ಸುತ್ತಲೂ ಗುರ್ತಿಸಲಾರದಷ್ಟು ತೆಳುವಾಗಿ ಒಂದುಬಣ್ಣದ ಭಾಗವಿರುತ್ತದೆ. ಇವುಗಳಿಂದ ನವಿಲುಗರಿಯಲ್ಲಿ ಒಟ್ಟು ನಾಲ್ಕು ಭಾಗಗಳಿರುವಂತೆ ಗುರುತು ತಿಳಿಯುತ್ತಿದೆ. 1) ಮಧ್ಯದಲ್ಲಿ ಕಪ್ಪುಬಣ್ಣ ಬೆರೆತಿರುವ ನೀಲಿಬಣ್ಣವಿದೆ. 2) ದುಂಡನೆಯ ಮಿಂಚು ಎಲೆಹಸಿರು ಭಾಗ 3) ಎಳೆಗೋಧಿ ಬಣ್ಣ 4) ಬಣ್ಣ ಗಮನಿಸದಷ್ಟು ಒಂದು ಭಾಗವಿರುತ್ತದೆ. ನಾಲ್ಕನೆಯ ಅಂಚಿನ ಕೊನೆಯಲ್ಲಿಯೂ ಸಹ ಸುಲಭವಾಗಿ ಗುರುತಿಸಬಹುದು. ಹೊರಗಿನಿಂದ ಮೂರು ದುಂಡನೆಯ ಭಾಗಗಳಿದ್ದು ಮಧ್ಯದಲ್ಲಿ ಕಣ್ಣಿನಂತೆ ಅಥವಾ ಕೇಂದ್ರವಾಗಿರುವ ನವಿಲುಗರಿಯನ್ನು ಬ್ರಹ್ಮವಿದ್ಯೆಯಾದ ಮತ್ತು ಯೋಗಶಾಸ್ತ್ರವಾದ ಗೀತಾಶಾಸ್ತ್ರವನ್ನು ಹೇಳಿದ ಶ್ರೀಕೃಷ್ಣನು ಧರಿಸುವುದರಲ್ಲಿ ದೊಡ್ಡ ಅರ್ಥವಿದೆ. ಅದರ ವಿವರ ಏನೆಂದರೆ!

ನಮ್ಮ ಶರೀರದಲ್ಲಿ ಶಿರೋಭಾಗದಲ್ಲಿ ಗುಣಗಳಿವೆ. ಶರೀರದಲ್ಲಿ ನಡೆಯುವ ಕಾರ್ಯಗಳಿಗೆಲ್ಲಾ ಕಾರಣವಾದ ಗುಣಗಳು ಒಂದು ಪದ್ಧತಿಯಾಗಿ ಅಳವಡಿಸಲ್ಪಟ್ಟಿವೆ. ಆ ಪದ್ಧತಿ ಒಂದು ಚಕ್ರವಾಗಿ ನಿರ್ಮಿತವಾಗಿದೆ. ಗುಣಗಳು ಮೂರು ವಿಧಗಳಾಗಿ ವಿಭಜಿಸಲ್ಪಟ್ಟಿವೆ. ಅವುಗಳ ಹೆಸರುಗಳು 1) ಸಾತ್ವಿಕ 2) ರಾಜಸ 3) ತಾಮಸ. ಈ ಮೂರು ವಿಧಗಳ ಗುಣಗಳು ಗುಣಚಕ್ರದಲ್ಲಿ ಮೂರು ಭಾಗಗಳಾಗಿ ವಿಭಜಿಸಲ್ಪಟ್ಟಿವೆ. ಆ ಮೂರು ಭಾಗಗಳಿಗೆ ಸಾತ್ತ್ವಿಕ ಭಾಗ, ರಾಜಸ ಭಾಗ, ತಾಮಸ ಭಾಗ ಎಂದು ಹೆಸರುಗಳು ಇಡಲಾಗಿದೆ. ಈ ಮೂರು ಭಾಗಗಳಿಗೆ ಮಧ್ಯದಲ್ಲಿ ದುಂಡನೆಯ ಭಾಗವೊಂದಿದೆ. ಅದನ್ನೇ ಬ್ರಹ್ಮನಾಡಿ ಎನ್ನುತ್ತಿದ್ದೇವೆ. ಅದರಲ್ಲಿಯೇ ಆತ್ಮ ನಿವಾಸವಾಗಿದೆ. ಆತ್ಮ ನಿವಾಸವಿರುವ ಬ್ರಹ್ಮನಾಡಿಯನ್ನು ಆಧಾರವಾಗಿ ಮಾಡಿಕೊಂಡು ಕಣ್ಣಿಗೆ ಕಾಣಿಸದ ಗುಣಚಕ್ರ ಅಳವಡಿಸಲ್ಪಟ್ಟಿದೆ. ಅದರ ಜೋಡಣೆ ಕೆಳಗಿನ ಚಿತ್ರದಲ್ಲಿ ನೋಡಬಹುದು.

ನಾನಾಗಲಿ, ನೀನಾಗಲಿ, ಸರ್ವಜೀವಿಗಳಾಗಲಿ ಈ ಗುಣಚಕ್ರದಲ್ಲಿಯೇ ಸಿಲುಕಿಕೊಂಡಿದ್ದೇವೆ. ಈ ಮೂರು ಭಾಗಗಳಲ್ಲಿ ಜೀವಾತ್ಮ ಹೆಚ್ಚಾಗಿ ಯಾವ ಭಾಗದಲ್ಲಿ ಇರುತ್ತಾನೋ, ಆ ಜೀವಾತ್ಮಕ್ಕೆ ಆ ಭಾಗವೊಂದರ ಹೆಸರು ಇಡಲಾಗಿದೆ. ತಾಮಸ ಭಾಗದಲ್ಲಿ ಹೆಚ್ಚಿನ ಕಾಲವಿರುವ ಜೀವಾತ್ಮವನ್ನು ತಾಮಸನೆಂದು, ರಾಜಸ ಗುಣಭಾಗದಲ್ಲಿರುವ ಜೀವಾತ್ಮನನ್ನು ರಾಜಸನೆಂದು, ಸಾತ್ತ್ವಿಕದಲ್ಲಿರುವ ಜೀವಾತ್ಮನನ್ನು ಸಾತ್ತ್ವಿಕನೆಂದು ಹೆಸರು




ಗುಣಚಕ್ರ

ಇಡಲಾಗಿದೆ. ಯಾವ ಭಾಗದಲ್ಲಿರುವ ಜೀವಿಗಾದರು ಮಧ್ಯದಲ್ಲಿರುವ ಆತ್ಮವೇ ಸಾಕ್ಷಿಯಾಗಿದೆ. ಮಧ್ಯದಲ್ಲಿರುವ ಆತ್ಮಕ್ಕೆ ತಿಳಿಯದ ಜೀವರಾಶಿ ಇಲ್ಲ. ಪ್ರತಿ ಶರೀರದಲ್ಲಿರುವ ಗುಣಚಕ್ರದ ಮಧ್ಯದಲ್ಲಿರುವ ಆತ್ಮ ತನ್ನ ಸುತ್ತಲೂ ಇರುವ ಗುಣಗಳೊಂದಿಗೆ ಸಂಬಂಧ ಇಲ್ಲದೆ ಸಾಕ್ಷಿಯಾಗಿದೆ.

ಪ್ರತಿ ಜೀವರಾಶಿ ಗುಣಗಳಿಂದ ಕೆಲಸಮಾಡುತ್ತಿದೆ. ಮಾಡುವ ಕೆಲಸಗಳಿಂದ ಪಾಪಪುಣ್ಯಗಳು ಆ ಜೀವಿಗೆ ಸಂಭವಿಸುತ್ತಿವೆ. ಪಾಪಪುಣ್ಯ ಕರ್ಮಗಳು ಜೀವಾತ್ಮಕ್ಕೇ ಹೊರತು ಮಧ್ಯದಲ್ಲಿರುವ ಆತ್ಮಕ್ಕೆ ಅಂಟುವುದಿಲ್ಲ. ಆತ್ಮಶಕ್ತಿಯೇ ಶರೀರವೆಲ್ಲಾ ವ್ಯಾಪಿಸಿ ಚಲನೆ ಕೊಡುವುದಾದರೂ, ಆ ಚಲನೆಗಳು ಗುಣಗಳನ್ನು ಅನುಸರಿಸಿರುತ್ತವೆ. ಆ ಗುಣಗಳು ಕರ್ಮವನ್ನು ಅನುಸರಿಸಿರುತ್ತವೆ. ಶರೀರದಲ್ಲಿ ಗುಣಗಳ ಆದೇಶಗಳ ಪ್ರಕಾರ ವಿವಿಧ ಕೆಲಸಗಳು ನಡೆಯುತ್ತಿದ್ದರೂ, ಆ ಕೆಲಸಗಳಿಗೆ ಶಕ್ತಿಕೊಡುವುದಾದ ಆತ್ಮಕ್ಕೆ ಮಾತ್ರ ಕರ್ಮಅಂಟದೆ ಎಲ್ಲವುದಕ್ಕೂ ಸಾಕ್ಷಿಯಾಗಿದೆ.

ನವಿಲುಗರಿಯಲ್ಲಿ ಮಧ್ಯದಲ್ಲಿರುವ ಗುರುತಿನ ಭಾಗವು ಗುಣಚಕ್ರದಲ್ಲಿ ಮಧ್ಯದಲ್ಲಿರುವ ಆತ್ಮ ನಿವಾಸಸ್ಥಾನವೆಂದು ತಿಳಿಯಬೇಕು. ಅದಕ್ಕೆ ಸುತ್ತಲೂ ಇರುವ ಎರಡನೇ ಭಾಗವನ್ನು ಸಾತ್ವಿಕಭಾಗವೆಂದೂ, ಅದರ ಸುತ್ತ ಇರುವ ಮೂರನೇ ಭಾಗವನ್ನು ರಾಜಸಭಾಗವೆಂದು, ಹಾಗೆ ಕೊನೆಯ ನಾಲ್ಕನೇ ಭಾಗವನ್ನು ತಾಮಸಭಾಗವೆಂದು ತಿಳಿಯಬೇಕು. ಈ ವಿಧವಾಗಿ ನವಿಲುಗರಿಯಿಂದ ಗುಣಚಕ್ರಕ್ಕೆ ಸಮಾನ ಹೋಲಿಕೆಗಳಿವೆ. ಶ್ರೀಕೃಷ್ಣನು ನಾನು ಕೆಲಸಗಳು ಮಾಡುತ್ತಿದ್ದೇನೆ, ನನಗೆ ಯಾವ ಗುಣಕರ್ಮ ಅಂಟದು. ನಾನು ಮೂರು ಗುಣಗಳ ಮಧ್ಯೆ ಕರ್ಮ ಅಂಟದ ಆತ್ಮವಾಗಿದ್ದೇನೆಂದು ತಿಳಿಸುವ ನಿಮಿತ್ತವೇ ಮೂರು ಬಣ್ಣಗಳ ಮಧ್ಯದಲ್ಲಿ ಗುರುತಾಗಿ ಕಾಣಿಸುವ ಪ್ರತ್ಯೇಕ ಬಣ್ಣವಿರುವ ನವಿಲುಗರಿಯನ್ನು ಧರಿಸಿದ್ದಾನೆ.

ನಮ್ಮ ಶರೀರದಲ್ಲಿ ಬ್ರಹ್ಮನಾಡಿ ತಲೆಯಿಂದ ಗುದಸ್ಥಾನದವರೆಗೂ ಬೆನ್ನುಮೂಳೆಯ ಮಧ್ಯದಲ್ಲಿ ವ್ಯಾಪಿಸಿದೆ. ಈ ನಾಡಿಯಲ್ಲಿಯೇ ಆತ್ಮ ವಾಸವಿದ್ದು, ತನ್ನ ಶಕ್ತಿಯನ್ನು ಬೆನ್ನುಮೂಳೆಗೆ ಎರಡು ಕಡೆ ಬ್ರಹ್ಮನಾಡಿಯಿಂದ ಸೀಳಿಹೋಗಿರುವ ಸಣ್ಣ ನರಗಳ ಮೂಲಕ ಶರೀರವೆಲ್ಲಾ ವ್ಯಾಪಿಸುವಂತೆ ಮಾಡಿ, ಎಲ್ಲಾ ಅವಯವಗಳು ಕದಲುವಂತೆ ಮಾಡುತ್ತಿದೆ. ಮೇಲೆ ಶಿರಸ್ಸಿನಲ್ಲಿನ ಗುಣಚಕ್ರದಿಂದ ಆದೇಶಗಳು ಬ್ರಹ್ಮನಾಡಿ ನರಗಳ ಮೂಲಕ ಕೊನೆಗೆ ಅವಯವಗಳಿಗೆ ಸೇರಿಕೊಳ್ಳುತ್ತಿವೆ. ಅವಯವಗಳಿಂದ ಬರುವ ವಿಷಯಗಳೂ ಸಹ ಬ್ರಹ್ಮನಾಡಿಯಿಂದಲೇ ಮೇಲಕ್ಕೆ ಸೇರುತ್ತಿವೆ. ಬ್ರಹ್ಮನಾಡಿಯೊಂದರ ಸಣ್ಣ ನರಗಳ ಜೋಡಣೆ



**ನವಿಲುಗರಿ**

ನವಿಲುಗರಿಯನ್ನು ಗಮನಿಸಿದರೆ ಅರ್ಥವಾಗುತ್ತದೆ. ನವಿಲುಗರಿಯೊಂದರ ಕಾಂಡ ದಪ್ಪವಾಗಿ ಬೆಳ್ಳಗೆ ಪ್ರಾರಂಭಗೊಂಡು ಉದ್ದವಾಗಿರುತ್ತದೆ. ಆ ಕಾಂಡವನ್ನು ಬ್ರಹ್ಮನಾಡಿಯಾಗಿ ಅರ್ಥ ಮಾಡಿಕೊಳ್ಳಬೇಕು. ನವಿಲುಗರಿಯೊಂದರ ಕಾಂಡದ ಉದ್ದಕ್ಕೂ ಚಿಕ್ಕ ಚಿಕ್ಕ ರೆಕ್ಕೆಯ ಕೂದಲು ಎರಡು ಕಡೆ ವ್ಯಾಪಿಸಿರುತ್ತವೆ. ಅವುಗಳನ್ನು ಬ್ರಹ್ಮನಾಡಿಯಿಂದ ಹೊರಟ ಚಿಕ್ಕ ಚಿಕ್ಕ ನಾಡಿಗಳಂತೆ ಗುರುತಿಸಿಕೊಳ್ಳಬೇಕು. ನವಿಲುಗರಿಯ ಮೇಲೆ ಕಾಣಿಸುವ ನಾಲ್ಕು ಭಾಗಗಳನ್ನು ಗುಣಚಕ್ರ ಭಾಗಗಳಾಗಿ ಲೆಕ್ಕಿಸಿಕೊಳ್ಳಬೇಕು.

ತಲೆಯಲ್ಲಿನ ಗುಣಚಕ್ರವನ್ನು ಮತ್ತು ಬ್ರಹ್ಮನಾಡಿಯನ್ನು ಹೋಲುವ ನವಿಲುಗರಿಯನ್ನು ಶ್ರೀಕೃಷ್ಣನು ಧರಿಸುವುದರಲ್ಲಿ ವಿಶೇಷಗಳು 1) ಸರ್ವ ಜೀವರಾಶಿಗಳ ಶರೀರದಲ್ಲಿ ಈ ವಿಧದ ಜೋಡಣೆ ಇದೆಯೆಂಬ ಜ್ಞಾನ ತಿಳಿಸುವ ನಿಮಿತ್ತ ನವಿಲುಗರಿಯನ್ನು ಧರಿಸಿದ್ದಾನೆ. 2) ಸರ್ವಜೀವರಾಶಿಗಳಿಗೆ ಆತ್ಮ ಸಾಕ್ಷಿಯಾಗಿದೆ ಎಂಬ ಸೂಚನೆಯಾಗಿ ನವಿಲುಗರಿಯನ್ನು ಧರಿಸಿದ್ದಾನೆ. 3) ಆತ್ಮ ಮೂರು ಗುಣಗಳಿಗೆ ಮಧ್ಯದಲ್ಲಿದ್ದು, ಯಾವ ಗುಣಗಳಿಗೂ ಸಂಬಂಧ ಇಲ್ಲವೆಂದು ತಿಳಿಸುವ ನಿಮಿತ್ತ ನವಿಲುಗರಿಯನ್ನು ಧರಿಸಿದ್ದಾನೆ. 4) ಯಾವ ಕೆಲಸಗಳು ಮಾಡುತ್ತಿದ್ದರೂ ಅವುಗಳ ಕರ್ಮ ಮಧ್ಯದಲ್ಲಿರುವ ನನಗೆ ಅಂಟುವುದಿಲ್ಲವೆಂದು ತಿಳಿಸುವುದಕ್ಕೋಸ್ಕರ ನವಿಲುಗರಿ ಧರಿಸಿದ್ದಾನೆ. 5) ಸರ್ವಜೀವರಾಶಿಗಳಿಗೆ ಶಿರಸ್ಸಿನಲ್ಲಿಯೇ ಆತ್ಮ ಮತ್ತು ಗುಣಗಳಿವೆಂದು ತಿಳಿಸುವುದಕ್ಕಾಗಿ ತಲೆ ಮೇಲೆ ನವಿಲುಗರಿ ಧರಿಸಿದ್ದಾನೆ. 6) ಕೊನೆಯ ಅಂಚು ಬಣ್ಣ ತೆಳುವಾದುದಾಗಿ, ಎರಡನೆಯದು ಅದಕ್ಕಿಂತ ಹೆಚ್ಚಾಗಿ ಕಾಣಿಸುವುದಾಗಿ, ಮೂರನೆಯದು ಎಡನೆಯದಕ್ಕಿಂತ ಮತ್ತಷ್ಟು ಹೆಚ್ಚಾಗಿ ಕಾಣಿಸುವುದಾಗಿ, ನಾಲ್ಕನೆಯದು ಎಲ್ಲದಕ್ಕಿಂತ ಹೆಚ್ಚಾಗಿ ಕಾಣಿಸುವುದಾಗಿದೆ.

ಅಂತಹ ನವಿಲುಗರಿ ಧರಿಸುವುದರಲ್ಲಿ ಯಾವ ಜೀವರಾಶಿಯಾದರೂ ಕೊನೆಗೆ ಇಲ್ಲಿಗೆ ಬರಬೇಕಾಗಿದ್ದೇ ಎಂದು ಅರ್ಥ ತಿಳಿಯಬೇಕು. 7) ಎರಡನೆ ಅಧ್ಯಾಯವಾದ ಕರ್ಮಯೋಗ 28ನೇ ಶ್ಲೋಕದಲ್ಲಿ **'ತತ್ತ್ವವಿತ್ತು ಮಹಾಬಾಹೋ ಗುಣಕರ್ಮ ವಿಭಾಗಯಾಃ ಗುಣಗುಣೇಷು ವರ್ತನ್ತ ಇತಿ ಮತ್ವಾನ ಸಜ್ಜತೇ'** ಗುಣಕರ್ಮ ವಿಭಾಗಗಳು ತಿಳಿದವನು ಆತ್ಮವನ್ನು ತಿಳಿದವನಾಗುತ್ತಾನೆ. ಅಂತಹವನು ಗುಣಗಳಿಂದ ನಡೆಯುವ ಕೆಲಸಗಳು ಎಷ್ಟು ಮಾಡುತ್ತಿದ್ದರೂ, ಮಾಡದವನೇ ಎಂದು ತಿಳಿಸುವ ನಿಮಿತ್ತ ಶ್ರೀಕೃಷ್ಣನು ನವಿಲುಗರಿಯನ್ನು ಧರಿಸಿದ್ದಾನೆ.

ಈಗ ಅಸಲು ವಿಷಯಕ್ಕೆ ಬರೋಣ. ಭಗವಂತನು ಮೇಲಿನ ಶ್ಲೋಕದಲ್ಲಿ ಹೇಳಿದ ನಾಲ್ಕು ವರ್ಣಗಳು ಗುಣಚಕ್ರದಲ್ಲಿನ ನಾಲ್ಕುಭಾಗಗಳೇ ಎಂದು ತಿಳಿಯಬೇಕು. ಅವುಗಳ ಪ್ರಕಾರ ಹೊರಗಿನಿಂದ ಮೊದಲ ಭಾಗದಲ್ಲಿ ಇರುವವರು ತಾಮಸರು, ಎರಡನೇ ಭಾಗದಲ್ಲಿರುವವರು ರಾಜಸರು, ಮೂರನೆ ಭಾಗದಲ್ಲಿರುವವರು ಸಾತ್ತ್ವಿಕರು, ನಾಲ್ಕನೆ ಭಾಗದಲ್ಲಿರುವವರು ಯೋಗಿಗಳು. ಯೋಗವಾಚರಿಸುವವರು ಗುಣರಹಿತರಾಗಿ ಆತ್ಮವನ್ನು ಹೊಂದಿದವರಾದ್ದರಿಂದ ಅವರನ್ನು ಯೋಗಿಗಳೆನ್ನಲಾಗಿದೆ. ಈ ಲೆಕ್ಕದ ಪ್ರಕಾರ ಸರ್ವಜೀವರಾಶಿಗಳಲ್ಲಿ ನಾಲ್ಕು ವರ್ಣಗಳಿವೆ ಎಂದು ಅವುಗಳೇ ತಾಮಸರು, ರಾಜಸರು, ಸಾತ್ತ್ವಿಕರು, ಯೋಗಿಗಳೆಂದು ಕರೆಯಲಾಗುತ್ತಿದೆ ಎಂದು ತಿಳಿಯುತ್ತಿದೆ. ಈ ನಾಲ್ಕು ವರ್ಣಗಳಿಂದ ಪರಮಾತ್ಮ ಸಂಬಂಧ ಇಲ್ಲದವನಾಗಿದ್ದಾನೆ. ಆದ್ದರಿಂದ ಅವುಗಳಿಗೆ ಕರ್ತನಾಗಿ ಅಲ್ಲದಂತಿದ್ದೇನೆಂದಿದ್ದಾನೆ. ಈಗ ದೈವ ನಿರ್ಮಿತವಾದ ನಾಲ್ಕುವರ್ಣಗಳು ಸರ್ವಜೀವರಾಶಿಗಳಿಗೆ ಸಂಬಂಧಿಸಿದ ನಾಲ್ಕುವರ್ಣಗಳೆಂದು ತಿಳಿಯಿತಾ!

**(3)ಶ್ಲೋ॥ 14 : ನಮಾಂ ಕರ್ಮಾಣಿ ಲಿಂಪನ್ತಿ ನಮೇ ಕರ್ಮಫಲೇ ಸ್ಪೃಹಾ।**
**ಇತಿ ಮಾಂ ಯೋ೭ಭಿಜಾನಾತಿ ಕರ್ಮಭಿರ್ನ ಸ ಬಧ್ಯತೇ॥**

**(ಕರ್ಮಯೋಗ, ಸಾಕಾರ)**

**ಭಾವಾರ್ಥ :** ನನಗೆ ಕರ್ಮಗಳಂಟುವುದಿಲ್ಲ. ನನಗೆ ಅವುಗಳ ಫಲಗಳಲ್ಲಿ ಧ್ಯಾಸವಿಲ್ಲ. ನಾನು ಎಂತಹವನೆಂದು ಯಾರು ಅರಿತುಕೊಳ್ಳುತ್ತಾನೋ, ಅವನಿಗೆ ಕರ್ಮಬಂಧನಗಳು ಉಂಟಾಗುವುದಿಲ್ಲ.

**ವಿವರ :** ಇಲ್ಲಿಯವರೆಗೂ ನವಿಲುಗರಿ ಧರಿಸುವುದರಲ್ಲಿ ಯಾವ ಅರ್ಥವಿದೆಯೋ ಅದರ ಪ್ರಕಾರ ನನಗೆ ಕರ್ಮಗಳಂಟುವುದಿಲ್ಲ ಎಂದಿದ್ದಾನೆ. ಆತನು ಯಾವ ವಿಧವಾಗಿ

ಕರ್ಮಗಳು ನನ್ನನ್ನು ಅಂಟುವುದಿಲ್ಲವೆಂದಿದ್ದಾನೋ ತಿಳಿದುಕೊಂಡರೆ, ಅವನೂ ಸಹ ಅದೇ ವಿಧಾನವನ್ನು ಅನುಸರಿಸಿ, ಕರ್ಮಗಳು ಅಂಟದಂತೆ ಮಾಡಿಕೊಳ್ಳುತ್ತಾನೆ.

**(3)ಶ್ಲೋ॥ 15 : ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ।**
**ಕುರು ಕರ್ಮೈವ ತಸ್ಮಾತ್ತ್ವಂ ಪೂರ್ವೈಃ ಪೂರ್ವತರಂ ಕೃತಮ್॥**
**(ಕರ್ಮಯೋಗ)**

**ಭಾವಾರ್ಥ :** ಯಾವ ವಿಧವಾಗಿ ಕರ್ಮ ಅಂಟುವುದಿಲ್ಲವೋ ತಿಳಿದ ಮೋಕ್ಷಕಾಮಿಗಳು ಆ ವಿಧವಾಗಿಯೇ ಆಚರಿಸುವರು. ಅವರು ಆಚರಿಸಿದಂತೆ ನೀನು ಆಚರಿಸು.

**(3) ಶ್ಲೋ॥ 16 : ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ ।**
**ತತ್ತೇ ಕರ್ಮ ಪ್ರವಕ್ಷ್ಯಾಮಿ ಯಜ್ಞಾತ್ವಾ ಮೋಕ್ಷ್ಯಸೇಽಶುಭಾತ್॥**
**(ಕರ್ಮಯೋಗ)**

**ಭಾವಾರ್ಥ :** ಯಾವುದು ಕರ್ಮವೋ, ಯಾವುದು ಕರ್ಮ ಅಲ್ಲವೋ ಅನುಭವವಿರುವ ಜ್ಞಾನಿಗಳೂ ಸಹ ತಿಳಿಯದೆ ಭ್ರಮೆಪಡುತ್ತಿದ್ದಾರೆ. ಎಲ್ಲರಿಗೂ ಅರ್ಥವಾಗದ ಕರ್ಮ ರಹಸ್ಯವನ್ನು ನಿನಗೆ ಹೇಳುತ್ತೇನೆ. ಅದರಿಂದ ಮೋಕ್ಷವನ್ನು ಹೊಂದುತ್ತೀಯಾ.

**ವಿವರ** : ಈ ದಿನ ನಿತ್ಯ ಜೀವನದಲ್ಲಿ ಅನೇಕ ಸಮಸ್ಯೆಗಳಿಂದ ಸಿಲುಕಿಕೊಂಡು ತಪ್ಪದೇ ಕೆಲಸಗಳು ಮಾಡುವವರಿಗೆ ಯಾವ ವಿಧವಾಗಿ ಕರ್ಮ ಅಂಟುತ್ತಿದೆಯೋ, ಯಾವ ವಿಧವಾಗಿ ಕರ್ಮ ಅಂಟದಂತೆ ಹೋಗುತ್ತದೋ, ದೊಡ್ಡ ಜ್ಞಾನಿಗಳು ಅಂದುಕೊಂಡವರಿಗೂ ಸಹ ಅರ್ಥವಾಗಿಲ್ಲ. ಆದುದರಿಂದ ಅವರು ಒಳ್ಳೆಯ ಕೆಲಸಗಳು ಮಾಡಿರಿ, ಕೆಟ್ಟ ಕೆಲಸಗಳು ಮಾಡಬೇಡಿ ಎಂದು ಹೇಳುತ್ತಿದ್ದಾರೆ. ಆ ಲೆಕ್ಕಪ್ರಕಾರ ಹೋದರೆ ಅರ್ಜುನನೂ ಸಹ ಯುದ್ಧ ಮಾಡಬಾರದು. ಯುದ್ಧ ಹಿಂಸೆಯಿಂದ ಕೂಡಿಕೊಂಡ ಕೆಲಸವಾದ್ದರಿಂದ ಪಾಪ ಬರುತ್ತದೆಂದು ಅಂಗೀಕರಿಸದೆ ತಪ್ಪುವುದಿಲ್ಲ. ಮತ್ತು ಯುದ್ಧಮಾಡೆಂದು ಹೇಳುವ ಶ್ರೀಕೃಷ್ಣನು ಕೆಟ್ಟ ಕೆಲಸವನ್ನು ಏಕೆ ಮಾಡೆನ್ನುತ್ತಿದ್ದಾನೆ. ಜ್ಞಾನಿಗಳೆಂದುಕೊಂಡವರಿಗಿಂತ ಹೆಚ್ಚಾಗಿ ಏನೋ ತಿಳಿದಿದೆ ಆದ್ದರಿಂದ ಯುದ್ಧ ಮಾಡೆಂದಿದ್ದಾನೆ. ಈ ವಿಷಯ ಶ್ರೀಕೃಷ್ಣನೂ ಸಹ ಹೇಳುತ್ತಾ 'ಎಷ್ಟೋಜನ ಜ್ಞಾನಿಗಳಿಗೂ ಸಹ ಈ ವಿಷಯವು ತಿಳಿಯದೆ ಭ್ರಮೆಪಡುತ್ತಿದ್ದಾರೆ. ಯಾವುದು ಕರ್ಮವೋ, ಯಾವುದು ಕರ್ಮ ಅಲ್ಲವೋ ಹೇಳುತ್ತೇನೆ ಕೇಳು' ಎಂದಿದ್ದಾನೆ.

**(3) ಶ್ಲೋ॥ 17 :ಕರ್ಮಣೋ ಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ ।**
**ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ॥**
**(ಪ್ರಕೃತಿ, ಕರ್ಮಯೋಗ,ಬ್ರಹ್ಮಯೋಗ)**

**ಭಾವಾರ್ಥ :** ಕರ್ಮವನ್ನು ತಿಳಿದುಕೊಳ್ಳಬೇಕು. ಹಾಗೆ ವಿಕರ್ಮವನ್ನು ತಿಳಿದುಕೊಳ್ಳಬೇಕು ಮತ್ತು ಅಕರ್ಮವನ್ನು ತಿಳಿದುಕೊಳ್ಳಬೇಕು. ಈ ಕರ್ಮ ಗತಿಗಳು ತಿಳಿದುಕೊಳ್ಳವುದು ಬಹಳ ಕಷ್ಟ.

**ವಿವರ :** ಕರ್ಮ, ಅಕರ್ಮ, ವಿಕರ್ಮ ಎಲ್ಲಾ ಗೊಂದಲವಾಗಿವೆ. ಅದಕ್ಕೆ **'ಗಹನಾ ಕರ್ಮಣೋ ಗತಿಃ'** ಎಂದು ಈ ಶ್ಲೋಕದಲ್ಲಿ ಹೇಳಿದ್ದಾನೆ. ಈ ಕರ್ಮಗತಿಗಳು ತಿಳಿಯುವುದು ಬಹಳ ಗಹನವಾಗಿರುತ್ತದೆ. ಆದುದರಿಂದಲೇ ಇಲ್ಲಿಯವರೆಗೂ ಈ ಶ್ಲೋಕಕ್ಕೆ ವಿವರ ಬರೆದುಕೊಂಡವರೂ ಸಹ ಅರ್ಥವಾಗದೆ ಶಾಸ್ತ್ರಬದ್ಧವಾದ ಕರ್ಮವೆಂದು, ಶಾಸ್ತ್ರಬದ್ಧ ಅಲ್ಲದ ಕರ್ಮವೆಂದು ವಿಧವಿಧಗಳಾಗಿ ಬರೆದುಕೊಂಡಿದ್ದಾರೆ. ಎಷ್ಟೋಜನ ಗೀತೆಯನ್ನು ಬರೆದವರು ಯಾವ ಅಧ್ಯಾಯದಲ್ಲಿಯೂ ವಿವರ ಬರೆಯುವುದರಲ್ಲಿ ಇಷ್ಟು ಕಷ್ಟ ಪಟ್ಟಿರುವುದಿಲ್ಲ. ಆದರೆ ಇಲ್ಲಿ ಈ ಶ್ಲೋಕದಲ್ಲಿ ಕರ್ಮ, ಅಕರ್ಮ, ವಿಕರ್ಮ ಎನ್ನುವ ಮಾತುಗಳಿಗೆ ವಿವರ ಬರೆಯುವುದರಲ್ಲಿ ನಾನಾ ಕಷ್ಟಗಳು ಪಟ್ಟಿದ್ದಾರೆ. ಕೊನೆಗೆ ಕುಪ್ಪಳಿಸಿ ದಾಟಿಹೋಗಿದ್ದಾರೆ. ಕರ್ಮಗಳು ನಾನಾ ವಿಧಗಳಾಗಿವೆ. ಆ ಕರ್ಮಗಳು ಯಾರ ಅಧೀನದಲ್ಲಿ ಇಲ್ಲದೇ ಅವುಗಳ ಧರ್ಮವನ್ನು ಅವು ನೆರವೇರಿಸುತ್ತಾ, ನಿನಗೆ ಇಷ್ಟವಿದ್ದರೂ ಇಷ್ಟವಿಲ್ಲದಿದ್ದರೂ ಬಲವಂತವಾಗಿ ನಿಯಮಿಸಿ ಮಾಡಿಸುತ್ತಿವೆ. ಇದು ಮಾಡಬಾರದ ಕೆಲಸ, ಇದು ಮಾಡಬೇಕಾದ ಕೆಲಸ, ಇದು ಶಾಸ್ತ್ರಬದ್ಧವಾದ ಕೆಲಸ, ಇದು ಶಾಸ್ತ್ರಬದ್ಧವಲ್ಲದ ಕೆಲಸ ಎನ್ನುವುದು ಇಲ್ಲಿ ಅನರ್ಥವಾಗುತ್ತದೆ. ನಮ್ಮ ಇಷ್ಟಾಯಿಷ್ಟಗಳು ಕಾರ್ಯಗಳಲ್ಲಿ ಸಂಬಂಧವಿಲ್ಲವೆಂದು ಶ್ರೀಕೃಷ್ಣನು ಪದೇಪದೇ ಹೇಳುತ್ತಲೇ ಇದ್ದಾನೆ. ಆತನ ಮಾತನ್ನು ಅಲ್ಲವೆಂದು ವಿವರಣೆ ಬರೆದುಕೊಳ್ಳುವುದು ಒಳ್ಳೆಯದಲ್ಲ. ಈ ವಿಷಯದಲ್ಲಿ ಪಂಡಿತರೂ ಸಹ ತಿಳಿಯದೆ ಭ್ರಮೆಪಡುತ್ತಾರೆಂದು ಆತನು ಮೊದಲೇ ಹೇಳಿದ್ದಾನೆ. ಆದ್ದರಿಂದ ನಾವು ಎಲ್ಲಾದರೂ ಈ ವಿಷಯದಲ್ಲಿ ತಪ್ಪಾಗಿ ಅರ್ಥೈಸಿಕೊಂಡಿದ್ದೇವೇನೋ ಪುನರಾಲೋಚನೆ ಮಾಡಿರೆಂದು ಎಲ್ಲರಿಗೂ ಮನವಿ ಮಾಡುತ್ತಿದ್ದೇವೆ. ನಮ್ಮ ಕಥೆ ಬಿಟ್ಟು ಆತನೇನು ಹೇಳಿದ್ದಾನೋ ನೋಡೋಣ.

ಮೇಲಿನ ಶ್ಲೋಕದಲ್ಲಿ ಮೂರು ವಿಧಾನಗಳಿವೆ. 1) ಕರ್ಮ 2) ವಿಕರ್ಮ 3) ಅಕರ್ಮ. ಈ ಕರ್ಮಗಳಲ್ಲಿ ಮೊದಲನೆಯದಾದ ಕರ್ಮ ಎನ್ನುವ ಪದವನ್ನು ಕುರಿತು ತಿಳಿದುಕೊಳ್ಳೋಣ. ಸಾಧಾರಣ ಮನುಷ್ಯ ಮಾಡುವ ಕೆಲಸಗಳನ್ನು ಕಾರ್ಯಗಳು ಎನ್ನುತ್ತಿದ್ದೇವೆ. ಈ ಕಾರ್ಯಗಳು ಹಿಂದಿನ ಕರ್ಮದಿಂದ ನಡೆಯುತ್ತಿವೆ. ನಡೆಯುತ್ತಿರುವ ಕಾರ್ಯಗಳು ಜೀವಾತ್ಮನೇ ಮಾಡುತ್ತಿದ್ದಾನೆಂದು ಅಹಂಕಾರ ಜೀವಾತ್ಮನನ್ನು ಭ್ರಮಿಸುವಂತೆ ಮಾಡುತ್ತಿದೆ. ಅಹಂಕಾರದ ಭ್ರಮೆಯಲ್ಲಿದ್ದ ಜೀವಾತ್ಮ ತಾನೇ ಮಾಡಿದ್ದೇನೆಂದುಕೊಳ್ಳುತ್ತಿದ್ದಾನೆ. ವಾಸ್ತವಕ್ಕೆ ಜೀವಾತ್ಮಕ್ಕೆ ಶರೀರದ ಮೂಲಕ ನಡೆಯುವ ಕೆಲಸಗಳಿಗೆ ಯಾವ ಸಂಬಂಧವಿಲ್ಲ. ಆದರೂ ಅಹಂಕಾರದ ಮಹಿಮೆಯಿಂದ ಜೀವಾತ್ಮ ಕಾರ್ಯಗಳಿಗೆ ಕರ್ತನು ತಾನೇ ಎಂದುಕೊಳ್ಳುತ್ತಿದ್ದಾನೆ. ಹಾಗೆಂದುಕೊಳ್ಳುವುದರಿಂದ ಶರೀರದ ಮೂಲಕ ನಡೆಯುವ ಕಾರ್ಯಗಳಿಗೆ ಪಾಪ ಅಥವಾ ಪುಣ್ಯವೆಂಬ ಹೊಸ ಕರ್ಮ ಜೀವಾತ್ಮಕ್ಕೆ ಸೇರುತ್ತಿದೆ. ಅಗ್ನಿ ಜ್ವಾಲೆಗೆ ಶಾಖ ಸಹಜವಾದಂತೆ ಪ್ರತಿ ಕೆಲಸಕ್ಕೂ ಕರ್ಮ ಸಹಜವೇ. ಜೀವಿಯು ಅಹಂಕಾರ ಹೊಂದಿದಾಗ ಕರ್ಮ ಅವನನ್ನು ಅಂಟಿಕೊಳ್ಳುತ್ತದೆ. ಅಹಂಕಾರ ಹೊಂದದೆ ಇರುವಾಗ ಕರ್ಮ ನಶಿಸಿಹೋಗಿ ಅವನಿಗೆ ಅಂಟುವುದಿಲ್ಲ. ಜ್ಞಾನ ತಿಳಿದು ಕರ್ಮಯೋಗ ವಾಚರಿಸುವವರಿಗೆ ಕರ್ಮಅಂಟದ ವಿಧಾನ ಇರುತ್ತದೆ. ಸಾಧಾರಣವಾಗಿ ಪ್ರಕೃತಿ ಮಾಯೆಯಲ್ಲಿದ್ದು ಜ್ಞಾನ ತಿಳಿಯದ ಮನುಷ್ಯ, ನಿತ್ಯ ಕರ್ಮ ಆಡಿಸುವಂತೆ ಕಾರ್ಯಗಳು ಮಾಡುತ್ತಾ, ಅಹಂಕಾರದಿಂದ ಪುನಃ ಹೊಸ ಕರ್ಮವನ್ನು ಪಡೆಯುತ್ತಿದ್ದಾನೆ. ಕೆಲಸಗಳು ಮಾಡುತ್ತಾ ಕರ್ಮವನ್ನು ಸಂಪಾದಿಸಿಕೊಳ್ಳುವುದನ್ನು ಮೇಲಿನ ಶ್ಲೋಕದಲ್ಲಿ **'ಕರ್ಮ'** ಎಂದು ಹೇಳಿದ್ದಾರೆ. ಈ ವಿಧವಾಗಿ ಮನುಷ್ಯನಿಗೆ ಕರ್ಮ ಅಂಟುತ್ತದೆಂದು ತಿಳಿಯುವುದನ್ನೇ **'ಕರ್ಮಣೋ ಹ್ಯಪಿ ಬೋದ್ಧವ್ಯಂ'** ಕರ್ಮವನ್ನು ತಿಳಿದುಕೊಳ್ಳಬೇಕು ಎಂದಿದ್ದಾನೆ. ಅಷ್ಟೇ ಅಲ್ಲದೆ **'ಬೋದ್ಧವ್ಯಂಚ ವಿಕರ್ಮಣಃ'** ವಿಕರ್ಮವನ್ನು ತಿಳಿದುಕೊಳ್ಳಬೇಕೆಂದಿದ್ದಾನೆ. ವಿಕರ್ಮ ಎಂದರೆ ಏನೆಂದು ನೋಡೋಣ. ಸಹಜವಾಗಿ ಕರ್ಮದಿಂದ ಪ್ರೇರೇಪಿಸಲ್ಪಟ್ಟು ನಡೆಯುವ ಕಾರ್ಯಗಳನ್ನು ಬ್ರಹ್ಮಯೋಗದ ಮೂಲಕ ಸ್ಥಂಭಿಸುವಂತೆಮಾಡಿ ನಿಲ್ಲಿಸುವ ಅವಕಾಶವಿದೆ. ಪ್ರಾರಬ್ಧಕರ್ಮವನ್ನು ನಡೆಯದಂತೆ ನಿಲ್ಲಿಸುವ ಶಕ್ತಿ ಒಂದು ಬ್ರಹ್ಮಯೋಗ (ಜ್ಞಾನಯೋಗ)ಕ್ಕೆ ಇದೆ. ತಲೆಯಲ್ಲಿನ ಪ್ರಾರಬ್ಧಕರ್ಮ ಗುಣಗಳು, ಬುದ್ಧಿಮೂಲಕ ಹೊರಟು, ಮನಸ್ಸಿನ ಮೂಲಕ ಹೊರಗೆ ಇಂದ್ರಿಯಗಳಿಗೆ ಹರಡಿ, ಹೊರಗಿನ ಅವಯವಗಳ ಮೂಲಕ ಕೆಲಸ ಮಾಡಿಸುತ್ತಿರುತ್ತದೆ. ಬ್ರಹ್ಮಯೋಗ ಸಾಧಕರು ಪ್ರಯತ್ನದಿಂದ ಶರೀರದಲ್ಲಿ ಬಾಹ್ಯ ಅಂತರ ಭಾಗಗಳಿಗೆ ಮಧ್ಯದಲ್ಲಿರುವ ಮನಸ್ಸನ್ನು ಕೆಲಸ ಮಾಡದಂತೆ ಮಾಡುವುದರಿಂದ ಪ್ರಾರಬ್ಧಕರ್ಮ ಆಚರಣೆ ಪೂರ್ತಿಯಾಗಿ ನಿಂತುಹೋಗುತ್ತಿದೆ. ಹೀಗೆ ಬ್ರಹ್ಮಯೋಗದ

ಮೂಲಕ ಪ್ರಾರಬ್ಧಕರ್ಮವನ್ನು ಅದರ ಕೆಲಸಗಳನ್ನು ನಡೆಯದಂತೆ ಮಾಡುವುದನ್ನು **'ವಿಕರ್ಮ'** ಎನ್ನುತ್ತೇವೆ. ವಿಕರ್ಮ ಎಂದರೆ ಕರ್ಮ ನಡೆಯುವುದಾಗಲಿ ಕರ್ಮ ಬರುವುದಾಗಲಿ ಇಲ್ಲವೆಂದು ಅರ್ಥ.

ಮೂರನೆಯದಾದ ಅಕರ್ಮ ಎಂದರೆ! ಪ್ರಾರಬ್ಧದ ಪ್ರಕಾರ ಕೆಲಸಗಳು ನಡೆಯುತ್ತಿದ್ದರೂ, ಶರೀರದಲ್ಲಿನ ಅಹಂಕಾರ ಕೆಲಸ ಮಾಡದಿರುವುದರಿಂದ, ಕರ್ಮ ಅಂಟದಿರುವುದನ್ನು 'ಅಕರ್ಮ' ಎನ್ನುತ್ತಿದ್ದೇವೆ. ಅಕರ್ಮ ಕರ್ಮಯೋಗಿಗಳಿಗೇ ಸಾಧ್ಯವಾಗುತ್ತದೆ. ಕರ್ಮಯೋಗದಲ್ಲಿ ಅಹಂಕಾರ ಕೆಲಸ ಮಾಡುವುದಿಲ್ಲ. ಆದ್ದರಿಂದ ಆ ವಿಧಾನದಲ್ಲಿ ಕೆಲಸಗಳು ಮಾಡಿದರೂ ಕರ್ಮ ಅಂಟುವುದಿಲ್ಲ.

1) ಪ್ರಾರಬ್ಧಕರ್ಮದಿಂದ ಕೆಲಸಗಳು ನಡೆಯುತ್ತಾ ಹೊಸಕರ್ಮ ಬರುವುದನ್ನು 'ಕರ್ಮ' ಎನ್ನುತ್ತೇವೆ. ಇದು ಅಜ್ಞಾನಿಗಳಲ್ಲಿ ನಡೆಯುತ್ತದೆ. ಹಳೆಕರ್ಮ ಆಚರಣೆಗೆ ಬಂದು ಹೊಸಕರ್ಮ ಅಂಟಿಕೊಳ್ಳುವುದನ್ನು ಕರ್ಮ ಎನ್ನುತ್ತಿದ್ದೇವೆ.

2) ಪ್ರಾರಬ್ಧಕರ್ಮ ಆಚರಣೆ ಇರುವುದಿಲ್ಲ, ಹೊಸಕರ್ಮ ಬರುವುದಿಲ್ಲ, ಎಲ್ಲಾ ಸ್ಥಂಭಿಸಿ ಕರ್ಮಗಳೆಲ್ಲವೂ ನಿಂತುಹೋಗುವುದನ್ನು 'ವಿಕರ್ಮ' ಎನ್ನುತ್ತೇವೆ. ಇದು ಬ್ರಹ್ಮಯೋಗಿಗಳಿಗೆ ಮಾತ್ರವೇ ನಡೆಯುತ್ತದೆ. ಶರೀರದಲ್ಲಿನ ಮನಸ್ಸು ನಿಂತುಹೋಗುವುದರಿಂದ ವಿಕರ್ಮದಲ್ಲಿ ಮನುಷ್ಯನಿಗೆ ಹೊರಗಿನ ಜ್ಞಾಪಕವೇ ಇರುವುದಿಲ್ಲ.

3) ಪ್ರಾರಬ್ಧಕರ್ಮದ ಆಚರಣೆಯ ಪ್ರಕಾರ ಕೆಲಸಗಳು ನಡೆಯುತ್ತಿದ್ದರೂ, ಹೊಸಕರ್ಮ ಬಾರದಂತೆಹೋಗುವುದನ್ನು 'ಅಕರ್ಮ' ಎನ್ನುತ್ತೇವೆ. ಇದು ಕರ್ಮಯೋಗಿಗಳಿಗೆ ಸಾಧ್ಯವಾಗುತ್ತದೆ. ಈ ಯೋಗದಲ್ಲಿ ಶರೀರದಲ್ಲಿನ ಅಹಂಕಾರ ನಿಂತುಹೋಗುತ್ತಿದೆ. ಅಕರ್ಮದಲ್ಲಿ ಸಾಧಾರಣ ಅಜ್ಞಾನಿಗೆ ನಡೆದಂತೆ ಕೆಲಸಗಳು ನಡೆಯುತ್ತಿರುತ್ತವೆ. ಆದರೂ ಎಣ್ಣೆಗೆ ನೀರಂಟದಂತೆ ಅವನಿಗೆ ಕರ್ಮ ಅಂಟದೆ ಹೋಗುತ್ತದೆ.

**(3) ಶ್ಲೋ॥ 18 : ಕರ್ಮಣ್ಯ ಕರ್ಮಯಃ ಪಶ್ಯೇ ದಕರ್ಮಣಿಚ ಕರ್ಮಯಃ ।**
**ಸಬುದ್ಧಿ ಮಾನ್ಮನು ಷ್ಯೇಷು ಸಯುಕ್ತಃ ಕೃತ್ಸ್ನ ಕರ್ಮಕೃತ್ ॥**

**(ಕರ್ಮಯೋಗ)**

**ಭಾವಾರ್ಥ :** ಕರ್ಮಗಳು ಬಾರದಂತೆ ನಿಗ್ರಹಿಸುವುದು ಅಕರ್ಮ ಎಂದೂ, ಕರ್ಮಗಳಲ್ಲೇ ಅಕರ್ಮವಿದೆ ಎಂದು ತಿಳಿದು, ಯಾರು ಎಲ್ಲಾ ಕರ್ಮಗಳನ್ನಾಚರಿಸುತ್ತಿದ್ದಾನೋ, ಅವನೇ ಜ್ಞಾನಿ ಎಂದು ತಿಳಿದ ಹಿರಿಯರು ಹೇಳುತ್ತಾರೆ.

**ವಿವರ** : ಸಮಸ್ತ ಕಾರ್ಯಗಳು ಮಾಡುತ್ತಿದ್ದರೂ, ಹೊಸಕರ್ಮ ಬಾರದಂತೆ ಮಾಡಿಕೊಳ್ಳುವ ವಿಧಾನ ಅಕರ್ಮ ಎಂದು, ಕೆಲಸಗಳು ಮಾಡುತ್ತಾ ಯಾವ ವಿಧಾನವನ್ನು ಅನುಸರಿಸಿದರೆ ಪಾಪ ಪುಣ್ಯಗಳು ಬರುವುದಿಲ್ಲವೋ ಚೆನ್ನಾಗಿ ತಿಳಿದು, ಒಳ್ಳೆಯಕೆಟ್ಟ ಕಾರ್ಯಗಳೆಂದುಕೊಳ್ಳದೆ ಸಮಯಾನುಸಾರವಾಗಿ ಯಾವ ಕರ್ಮ ಆಚರಣೆಗೆ ಬಂದರೆ ಆ ಕೆಲಸಗಳು ಮಾಡುವವನು ಸಂಪೂರ್ಣಜ್ಞಾನಿ ಎಂದೂ, ಸಂಪೂರ್ಣಕರ್ಮಯೋಗಿ ಎಂದೂ ಹೇಳಬಹುದು. ಇಲ್ಲಿ ಕೆಲವರಿಗೆ ಸಂಶಯಬಂದು "ಒಳ್ಳೆಯ ಕೆಲಸಗಳು ಮಾಡಿದವನನ್ನು ಜ್ಞಾನಿ, ಯೋಗಿ ಎನ್ನಬಹುದು. ಕೆಟ್ಟಕೆಲಸಗಳು ಮಾಡುವವನನ್ನು ಜ್ಞಾನಿ ಎಂದಾಗಲಿ, ಯೋಗಿ ಎಂದಾಗಲಿ ಕರೆಯುವುದು ಚೆನ್ನಾಗಿರುತ್ತದಾ? ಈ ಮಾತು ಯಾವ ಗೀತೆಯಲ್ಲಿಯೂ ಬರೆಯಲಿಲ್ಲವೇ. ಎಲ್ಲಿಯೂ ಬರೆಯದ ವಿಷಯ ಇಲ್ಲಿ ನಿಜವಾಗುತ್ತಾ" ಎಂದು ಕೇಳಬಹುದು. ಭಗವಂತನು ಮಾತ್ರ ಈ ವಿಷಯವನ್ನು ಇದಕ್ಕೂ ಮೊದಲು, ಈಗ, ನಂತರ ಬರುವ ಅಧ್ಯಾಯಗಳಲ್ಲಿಯೂ ಬಹಳ ಸಲ ಹೇಳಿದ್ದಾನೆ. ಹಾಗೆ ಕಾರ್ಯಭೇದ ಇಟ್ಟುಕೊಳ್ಳುವವನು ಯೋಗಿಯೇ ಅಲ್ಲವೆಂದೂ ಸಹ ಹೇಳಿದ್ದಾನೆ.

**(3) ಶ್ಲೋ॥ 19 : ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪ ವರ್ಜಿತಾಃ ।**
**ಜ್ಞಾನಾಗ್ನಿ ದಗ್ಧ ಕರ್ಮಾಣಂ ತ ಮಾಹುಃ ಪಂಡಿತಂ ಬುಧಾಃ ॥**
**(ಕರ್ಮಯೋಗ)**

**ಭಾವಾರ್ಥ :** ಯಾರಾದರೆ ಆಸೆ ಎಂಬ ಗುಣ ಇಲ್ಲದಂತೆ ಸರ್ವ(ಒಳ್ಳೆಕೆಟ್ಟ) ಕಾರ್ಯಗಳು ಮಾಡುತ್ತಾನೋ, ಯಾರಾದರೆ ವ್ಯಕ್ತಿ ಜ್ಞಾನಾಗ್ನಿಯಿಂದ ಕರ್ಮವನ್ನು ಸುಡುತ್ತಾನೋ, ಅವನನ್ನು ಬುಧರು ಜ್ಞಾನ ಪಂಡಿತನೆಂದು ಹೇಳುತ್ತಾರೆ.

**ವಿವರ : "ಸರ್ವೇ ಸಮಾರಂಭಾ"** ಎಂದು ಈ ಶ್ಲೋಕದಲ್ಲಿಯೂ ಸಹ ಹೇಳಿದ್ದಾರೆ. ಸರ್ವೇ ಎನ್ನುವುದರಲ್ಲಿ ಎಲ್ಲಾ ಎಂದು ಅರ್ಥ. ಒಳ್ಳೆಯವಾದರೂ ಆಗಬಹುದು, ಕೆಟ್ಟವಾದರೂ ಆಗಬಹುದೆಂದು ಅರ್ಥ. ಸರ್ವಕಾರ್ಯಗಳು ಕೋರಿಕೆಗಳು ಇಲ್ಲದಂತೆ ಮಾಡುವವನನ್ನು ಪಂಡಿತನೆಂದು ಹೇಳಬಹುದೆಂದಿದ್ದಾನೆ. ಇಲ್ಲಿ ಒಂದು ಸಂಶಯ

ಕೆಲವರಿಗೆ ಬರಬಹುದು. ಅದೇನೆಂದರೆ! 'ಆಸೆ ಇದ್ದಾಗಲೇ ಅಲ್ಲವೆ! ಕೆಲಸ ಮಾಡುವುದು ಆಸೆ ಇಲ್ಲದಿರುವಾಗ ಯಾರು ಯಾವ ಕೆಲಸ ಮಾಡುವುದಿಲ್ಲವಲ್ಲ!' ಎಂದು ಕೇಳಬಹುದು. ನಿಜವೇ ಎಲ್ಲರೂ ಆಸೆ ಇದ್ದಾಗಲೇ ಮಾಡುತ್ತಿದ್ದಾರೆ, ಹಾಗೆ ಮಾಡುವವನು ಜ್ಞಾನಿ ಅಲ್ಲ. ಆಸೆಯಿಂದ ಮಾಡುವವನಿಗೆ ಕರ್ಮರಹಸ್ಯ ತಿಳಿಯುವುದಿಲ್ಲ. ಆಸೆಯಿಂದಲೇ ಕಾರ್ಯವೆಂದು ಕೊಳ್ಳುತ್ತಿದ್ದಾನೆ. ನಿಜವಾದ ಜ್ಞಾನತಿಳಿದವನು ಕರ್ಮದಿಂದಲೇ ಕಾರ್ಯ ಎಂದುಕೊಳ್ಳುತ್ತಿದ್ದಾನೆ. ಆಸೆಯ ಹಿಂದಿರುವ ಕರ್ಮವನ್ನೂ ಸಹ ಜ್ಞಾಪಕದಲ್ಲಿಟ್ಟುಕೊಂಡು ಮಾಡುತ್ತಿರುವುದರಿಂದ ಅವನನ್ನು 'ಕರ್ಮಯೋಗಿ' ಎನ್ನುತ್ತಿದ್ದಾರೆ.

**'ಜ್ಞಾನಾಗ್ನಿ ದಗ್ಧ ಕರ್ಮಾಣಂ'** ಜ್ಞಾನಾಗ್ನಿಯಿಂದ ಕರ್ಮ ಸುಟ್ಟವನೆಂದು ಅರ್ಥ. ಇಲ್ಲಿ ಜ್ಞಾನಾಗ್ನಿ ಎಂಬ ಮಾತು ಹೊಸದಾಗಿ ಬಂದಿದೆ. ಜ್ಞಾನಾಗ್ನಿ ಯೋಗ ಆಚರಿಸುವವರಲ್ಲೇ ಪ್ರಜ್ವಲಿಸುತ್ತದೆ. ಯೋಗಿಗಳು ಜ್ಞಾನಾಗ್ನಿ ಇರುವವರಾಗಿರುತ್ತಾರೆ. ಅವರಲ್ಲಿ ಜ್ಞಾನಾಗ್ನಿ ಕರ್ಮಗಳನ್ನು ಸುಡುವುದಾಗಿರುತ್ತದೆ. ಜ್ಞಾನಾಗ್ನಿ ಯೋಗಿಯಲ್ಲಿ ಹೇಗಿದೆ? ಅದು ಆತನಿಗೆ ಹೇಗೆ ಲಭಿಸುತ್ತಿದೆ? ಎನ್ನುವ ಪ್ರಶ್ನೆಗಳು ಕೆಲವರಿಗೆ ಬರಬಹುದು. ಸಂಶಯಗಳು ಇಲ್ಲದಂತೆ ಹೋಗಬೇಕೆಂದರೆ ಜ್ಞಾನಾಗ್ನಿ ವಿಷಯ ಸ್ವಲ್ಪವಾದರೂ ಇಲ್ಲಿ ತಿಳಿದುಕೊಳ್ಳಬೇಕು. ಸಾಮಾನ್ಯ ಅಗ್ನಿಯಿಂದ ಅಡಿಗೆಗಳು ಮಾಡುತ್ತಿದ್ದೇವೆ. ನಾವು ಅಡಿಗೆ ಪ್ರಾರಂಭಿಸದ ಮೊದಲು ಒಲೆಯಲ್ಲಿ ಅಗ್ನಿ ಇಲ್ಲ. ಅಡಿಗೆ ಪ್ರಾರಂಭಿಸಿದ ನಂತರ ಒಲೆಯಲ್ಲಿ ಅಗ್ನಿಯನ್ನು ಒತ್ತಿಸುತ್ತೇವೆ. ಮೊದಲು ಇಲ್ಲದ ಅಗ್ನಿಯನ್ನು ಬೆಂಕಿಕಡ್ಡಿಯಿಂದಲೋ ಇಲ್ಲವೆ ಕಲ್ಲನ್ನು ಕಲ್ಲಿನಿಂದಲೋ ಅಗ್ನಿಯನ್ನು ಹುಟ್ಟಿಸುತ್ತಿದ್ದೇವೆ. ನಾವು ಹೊರಗೆ ತಯಾರು ಮಾಡುವ ಅಗ್ನಿ ಕಣ್ಣಿಗೆ ಕಾಣಿಸುತ್ತದೆ. ಮುಟ್ಟಿದರೆ ಕೈ ಸುಡುತ್ತದೆ. ಅಗ್ನಿ ಯಾವ ವಸ್ತುವನ್ನಾದರೂ ಸುಟ್ಟುಹಾಕುತ್ತದೆ. ಗಂಧದ ಚೆಕ್ಕೆಯಾದರೂ, ತುಂಬೆ ಚೆಕ್ಕೆಯಾದರೂ ಅಗ್ನಿಗೆ ಸಮಾನವೇ. ಹಾಗೇ ಪ್ರಾಣವಿಲ್ಲದ ವಸ್ತುವನ್ನಾಗಲಿ, ಪ್ರಾಣ ಇರುವ ಮನುಷ್ಯನನ್ನಾಗಲಿ, ಎರಡನ್ನು ಸುಟ್ಟುಹಾಕುವ ಸಾಮರ್ಥ್ಯ ಇರುವುದು ಅಗ್ನಿ. ಈ ಅಗ್ನಿಯನ್ನು ಕುರಿತು ತಿಳಿಯದವರು ಇರುವುದಿಲ್ಲ. ಮತ್ತೊಂದು ನಮಗೆ ತಿಳಿಯದ ಅಗ್ನಿಯೂ ಸಹ ಇದೆ. ಅದು ಹೊರಗಿನ ವಸ್ತುಗಳನ್ನು ಸುಡದಿರುವ ಅಗ್ನಿ. ನಮ್ಮ ಶರೀರವನ್ನು ಸ್ವಲ್ಪವೂ ಸಹ ಸುಡದಿರುವುದು, ಕೇವಲ ಕರ್ಮಗಳನ್ನು ಮಾತ್ರ ಸುಡುವುದು. ಕಣ್ಣಿಗೆ ಕಾಣಿಸದ ಆ ಅಗ್ನಿಯೊಂದರ ಹೆಸರು **ಜ್ಞಾನಾಗ್ನಿ**. ಜ್ಞಾನಾಗ್ನಿಗೆ ಸಾಧಾರಣ ಅಗ್ನಿಗೆ ಬಹಳ ವ್ಯತ್ಯಾಸಗಳು ಇವೆ. ಅವುಗಳನ್ನು  ಕ್ರಮವಾಗಿ ಕೆಳಗೆ ಪಟ್ಟಿಯಲ್ಲಿ ನೋಡೋಣ.

| <u>ಅಗ್ನಿ</u> | <u>ಜ್ಞಾನಾಗ್ನಿ</u> |
|---|---|
| 1) ಕಣ್ಣಿಗೆ ಕಾಣಿಸುತ್ತದೆ. | (1) ಕಣ್ಣಿಗೆ ಕಾಣಿಸುವುದಿಲ್ಲ. |
| 2) ಕಟ್ಟಿಗೆಗಳನ್ನುಸುಡುತ್ತದೆ,ಕರ್ಮಗಳನ್ನು ಸುಡುವುದಿಲ್ಲ | (2) ಕರ್ಮಗಳನ್ನು ಸುಡುತ್ತದೆ, ಕಟ್ಟಿಗೆಗಳನ್ನುಸುಡುವುದಿಲ್ಲ.. |
| 3) ಸ್ಥೂಲಶರೀರಕ್ಕೆ ಶಾಖ ಉಂಟುಮಾಡುತ್ತದೆ. | (3) ಸೂಕ್ಷಶರೀರಕ್ಕೆ ಶಾಖವನ್ನು ಉಂಟುಮಾಡುತ್ತದೆ. |
| 4) ಒಳ್ಳೆಯ,ಕೆಟ್ಟ ವಸ್ತುಗಳ ಭೇದವು ಇಲ್ಲದಂತೆ ಸುಡುತ್ತದೆ. | (4) ಪಾಪ, ಪುಣ್ಯ ಕರ್ಮಭೇದವು ಇಲ್ಲದಂತೆ ಸುಡುತ್ತದೆ. |
| 5) ಪ್ರಕೃತಿ ಸಂಬಂಧವಾದುದು. | (5) ಪರಮಾತ್ಮ ಸಂಬಂಧವಾದುದು. |
| 6) ಸ್ಥೂಲಕ್ಕೆ ಕಾಣಿಸುತ್ತದೆ. | (6) ಸೂಕ್ಷಕ್ಕೆ ಕಾಣಿಸುತ್ತದೆ. |
| 7) ಅಜ್ಞಾನಿಗಳಾದರು ಬೆಳಗಿಸುತ್ತಾರೆ. | (7) ಯೋಗಿಗಳಿಗೆ ಮಾತ್ರವೇ ಪ್ರಕಾಶಿಸುತ್ತದೆ. |
| (8) ಶರೀರದ ಹೊರಗೆ ನೆಲೆಸಿರುತ್ತದೆ. | (8) ಶರೀರದೊಳಗೆ ನೆಲೆ ಇರುತ್ತದೆ. |
| 9) ನೀರಿಗೆ ನಂದಿಹೋಗುತ್ತದೆ. ಗಾಳಿಗೆ ಉರಿಯುತ್ತದೆ. | (9) ನೀರಿಗೆ ನಂದಿ ಹೋಗುವುದಿಲ್ಲ. ಗಾಳಿಗೆ ಉರಿಯುವುದಿಲ್ಲ. |
| 10) ಇತರ ವಸ್ತುಗಳು ಯಾವನ್ನಾದರು ಸುಡುತ್ತದೆ. | (10) ಇತರರ ಪ್ರಾರಬ್ಧವನ್ನು ಮಾತ್ರ ಸುಡುತ್ತದೆ. |
| 11) ತನ್ನ ಶರೀರದಲ್ಲಿನ ಯಾವ ಭಾಗವನ್ನಾದರು ಸುಡುತ್ತದೆ | (11) ತನ್ನಶರೀರದಲ್ಲಿಆಗಾಮಿಕರ್ಮವನ್ನು ಸಂಚಿತಕರ್ಮವನ್ನು ಸುಡುತ್ತದೆ. |
| 12) ಎಲ್ಲಿಯಾದರೂ ಯಾವಾಗಾದರೂ ತಯಾರು ಮಾಡಬಹುದು. | 12) ಯೋಗಮಾಡುವ ಸಮಯ ದಲ್ಲಿಯೇ ತಯಾರಾಗುತ್ತದೆ. ಕರ್ಮಯೋಗಿಗಳಿಗೆ ಶರೀರ ದೊಳಗಿನಿಂದ, ಬ್ರಹ್ಮಯೋಗಿಗಳಿಗೆ ಶರೀರದ ಹೊರಗಿನಿಂದ ಸೇರುತ್ತದೆ. |

ಜ್ಞಾನಾಗ್ನಿ ಎಂಬ ಮಾತಿನ ವಿಷಯ ಅರ್ಥವಾಗುವುದಕ್ಕೆ ಹೇಳಿದ ಉಪಮಾನವಾಗಲಿ, ವಾಸ್ತವಕ್ಕೆ ಜ್ಞಾನಾಗ್ನಿ ಇಲ್ಲವೆಂದು ಬಹಳಜನ ಹೇಳುತ್ತಿದ್ದಾರೆ. ಯಾರು ಏನು ಹೇಳಿದರು, ಗೀತೆಯಲ್ಲಿ ಇದನ್ನು ಪ್ರತ್ಯೇಕಿಸಿ ಬರೆಯದಿದ್ದರೂ, ಸತ್ಯವು ಸ್ವಲ್ಪಕಾಲ ಕಾಣಿಸದಂತೆ ಹೋದರೂ, ಅದಕ್ಕೆ ನಾಶವಿಲ್ಲ. ಎಂದಿಗಾದರೂ ಅದು ಹೊರಬೀಳಬಲ್ಲದು. ಹಾಗೆ ಭಗವದ್ಗೀತೆಯಲ್ಲಿನ ಸತ್ಯಗಳನ್ನು ಯಾರು ಗುರುತಿಸದಷ್ಟು ಮಾತ್ರಕ್ಕೆ ಅವು ಅಳಿದು ಹೋಗುವುದಿಲ್ಲ. ಮಾನವರಿಗೆ ತಿಳಿಯಬೇಕೆಂಬ ಭಗವಂತನ ಉದ್ದೇಶ ವ್ಯರ್ಥವಾಗುವುದಿಲ್ಲ. ನೂರು ಜನ ಗುರುತಿಸದೆ ಹೋದರು ಕೊನೆಗೆ ಒಬ್ಬನಾದರೂ ಗುರುತಿಸುತ್ತಾನೆ. ಹಾಗೆ ಕೊನೆಗೆ ಒಬ್ಬನೂ ಸಹ ಗುರುತಿಸದೆ ಹೋದರೆ, ಆತನು ತನ್ನ(ಪರಮಾತ್ಮ) ಮುಂದಿನ ಜನ್ಮದಲ್ಲಿಯಾದರೂ ಅದರ ಬಗ್ಗೆ ತಿಳಿಸುತ್ತಾನೆ. ಇಲ್ಲಿ ಜ್ಞಾನಾಗ್ನಿ ವಿಷಯವೂ ಸಹ ಅಂತದ್ದೇ.

ಜ್ಞಾನಾಗ್ನಿ ಉಪಮಾನ ಅಲ್ಲ. ಅಗ್ನಿಯನ್ನು ಜ್ಞಾನಾಗ್ನಿಗೆ ಉಪಮಾನವಾಗಿ ಹೇಳಲಾಗಿದೆ. ಅಗ್ನಿಯಲ್ಲಿ ಕಟ್ಟಿಗೆಗಳು ಸುಡುವಂತೆ, ಜ್ಞಾನಾಗ್ನಿಯಲ್ಲಿ ಸರ್ವಕರ್ಮಗಳು ಸುಟ್ಟುಹೋಗುತ್ತವೆಂದು ಭಗವಂತನು ಇದೇ ಭಗವದ್ಗಿತೆಯಲ್ಲಿ ಮತ್ತೊಂದು ಕಡೆಯೂ ಸಹ ಹೇಳಿದ್ದಾನೆ. ಇದರಿಂದ ಜ್ಞಾನಾಗ್ನಿ ಇರುವುದೇ ಎಂದು, ಅದಕ್ಕೆ ಉಪಮಾನವಾಗಿ ಹೊರಗಿನ ಅಗ್ನಿಯನ್ನು ಹೇಳಲಾಗಿದೆಯೆಂದು ತಿಳಿಯುತ್ತಿದೆ. ಅಷ್ಟೇ ಅಲ್ಲದೇ ಜ್ಞಾನಾಗ್ನಿ ಕರ್ಮಯೋಗಿಗಳಲ್ಲಿ ಒಂದು ವಿಧವಾಗಿ, ಬ್ರಹ್ಮಯೋಗಿಗಳಲ್ಲಿ ಒಂದು ವಿಧವಾಗಿ ಕೆಲಸ ಮಾಡುತ್ತಾ ತನ್ನ ಇರುವಿಕೆಯನ್ನು ಸಾರಿಕೊಳ್ಳುತ್ತಿದೆ. ಜ್ಞಾನಾಗ್ನಿ ಯೋಗಿಗಳ ಶರೀರದಲ್ಲಿ ಪ್ರತ್ಯೇಕವಾದ ಕೆಲಸಗಳು ಮಾಡುತ್ತಾ, ಅದು ಅಜ್ಞಾನಿಗಳ ಮೇಲೆ ಯೋಗಿಗಳ ಮೂಖಾಂತರ ಪ್ರಸಾರವಾಗಿ ಪ್ರತ್ಯಕ್ಷ ಪ್ರಮಾಣಗಳು ತೋರಿಸುತ್ತಿದೆ. ಅದು ಇದೇ ಎನ್ನುವುದಕ್ಕೆ ಅದಕ್ಕಿಂತ ನಿದರ್ಶನಗಳು ಬೇರೆ ಅಗತ್ಯವಿಲ್ಲ ಎಂದುಕೊಳ್ಳುತ್ತೇವೆ. ಜ್ಞಾನಾಗ್ನಿ ವಿಷಯ ತಿಳಿಯದೆ ಹೋದರೆ ಜ್ಞಾನದೃಷ್ಟಿಗೆ ಕತ್ತಲು ಇದ್ದಂತೆ. ಆದ್ದರಿಂದ ಜ್ಞಾನನೇತ್ರದ ದೃಷ್ಟಿ ಸರಿಯಾಗಿ ಇರಬೇಕೆಂದರೆ ಇಲ್ಲಿ ಜ್ಞಾನಾಗ್ನಿಯನ್ನು ಕುರಿತು ವಿವರವಾಗಿ ತಿಳಿದುಕೊಳ್ಳೋಣ. ಹಿಂದಿನ ಪಟ್ಟಿಯಲ್ಲಿ ಹೇಳಿದ ವರಸೆ ಪ್ರಕಾರ.

1) ಕಣ್ಣಿಗೆ ಕಾಣಿಸುವುದಲ್ಲ ಎಂದಿದ್ದೇವೆ. ಜ್ಞಾನಾಗ್ನಿಗೆ ಸ್ಥೂಲ ಆಕಾರವಿಲ್ಲ. ಇದು ಸಾಮಾನ್ಯ ಅಗ್ನಿಯಂತೆ ಕೆಂಪಗೆ ಇರುತ್ತದೆಂದೂ ಸಹ ಹೇಳಲಾರೆವು. ಕೆಲವರು ದೇವತೆಗಳ

ಜ್ಞಾನಿಗಳ ಚಿತ್ರಪಟಗಳಲ್ಲಿ ಅವರ ತಲೆಯ ಹಿಂದೆ ಪ್ರಕಾಶವಿದ್ದಂತೆ ಗುರುತಿಸಿರುವುದು ಗಮನಿಸಬಹುದು. ಅದು ಅವರ ಜ್ಞಾನ ಪ್ರಕಾಶವೆಂದು, ಅವರ ತಲೆಯಲ್ಲಿ ಜ್ಞಾನಾಗ್ನಿ ಇದೆಯೆಂದು, ತಿಳಿದವರು ಪೂರ್ವದಿಂದ ಹಾಗೆ ಚಿತ್ರಿಸುತ್ತಿದ್ದಾರೆ. ಈ ಚಿತ್ರಗಳು ಜ್ಞಾನಾಗ್ನಿ ತಲೆಯಲ್ಲಿ ಇರುತ್ತದೆಂದು ತಿಳಿಸುತ್ತಾ ಅದರ ಇರುವಿಕೆಯನ್ನು ಸೂಚಿಸುತ್ತಿವೆ.

2) ಜ್ಞಾನಾಗ್ನಿ ಅಗ್ನಿಯಂತೆ ಹೊರಗಿನ ವಸ್ತುಜಾಲವನ್ನು ಏನು ಮಾಡಲಾರದು. ಅದರ ಪ್ರಭಾವವೆಲ್ಲವೂ ಪಾಪ ಪುಣ್ಯಗಳನ್ನು ಸುಟ್ಟು ಹಾಕುವುದೇ. ಆದ್ದರಿಂದ ಜ್ಞಾನಾಗ್ನಿಗೆ ಸಮಿಧಗಳು ಕರ್ಮಗಳೇ ಎಂದು ಹೇಳಬಹುದು.

3) ಸೂಕ್ಷ್ಮ ಶರೀರದಿಂದ ತಿರುಗುವ ಗ್ರಹಗಳನ್ನು ಜ್ಞಾನಾಗ್ನಿ ಬಿಸಿಯನ್ನು ಉಂಟುಮಾಡುತ್ತದೆ. ಆದ ಕಾರಣ ಯೋಗಿಗಳ ಸಮೀಪದಲ್ಲಿ ದೆವ್ವಗಳೆಂಬ ಸೂಕ್ಷ್ಮ ಶರೀರಗಳು ನಿಲ್ಲುವುದಿಲ್ಲ. ಜ್ಞಾನಾಗ್ನಿ ಬಿಸಿಗೆ ಸಹಿಸಿಕೊಳ್ಳದೇ ಅವರಿಗೆ ಭಯಪಡುತ್ತವೆ. ಯೋಗಿಗಳು ಹೇಳಿದಂತೆ ನಡೆದುಕೊಳ್ಳುತ್ತವೆ. ಈ ಪ್ರಕಾರ ಯೇಸುಪ್ರಭು ಹತ್ತಿರ ಎಷ್ಟೋ ದೆವ್ವಗಳು ನಮಸ್ಕರಿಸಿ ಆತನ ಮಾತಿನ ಪ್ರಕಾರ ಹೋಗಿವೆ ಎಂದು ಬೈಬಲ್‌ನಲ್ಲಿ ಇದೆ.

4) ಕರ್ಮ ಎಂದರೆ ಪಾಪ ಮತ್ತು ಪುಣ್ಯವೊಂದರ ಕೂಡಿಕೆ. ಜ್ಞಾನಾಗ್ನಿವೊಂದರ ಸಹಜತ್ವ ಕರ್ಮವನ್ನು ಸುಡುವುದು. ಕರ್ಮದಲ್ಲಿರುವ ಪುಣ್ಯ ಒಳ್ಳೆದೆಂದು, ಪಾಪ ಕೆಟ್ಟದೆಂಬುವ ಭೇದಗಳು ಅದಕ್ಕೆ ಇಲ್ಲ. ತನ್ನ ಪದ್ಧತಿ ಪ್ರಕಾರ ಕರ್ಮದಲ್ಲಿರುವ ಏನನ್ನಾದರೂ ಸುಡುತ್ತದೆ.

5) ಜ್ಞಾನಾಗ್ನಿ ಪರಮಾತ್ಮ ಸಂಬಂಧವಾದುದು. ಪ್ರಕೃತಿ ಸಂಬಂಧವಾದ ಕರ್ಮಗಳಿಗೆ ವಿರುದ್ಧವಾದುದು. ಅಷ್ಟೇ ಅಲ್ಲದೆ ಪರಮಾತ್ಮನಂತೆ ಬಯಲಿನಲ್ಲಿಯೂ ಸಹ ಇದೆ. ಬ್ರಹ್ಮಯೋಗಿಗಳಿಗೆ ಹೊರಗಿನಿಂದಲೇ ಅವರೊಳಗೆ ಪ್ರವೇಶಿಸುತ್ತಿದೆ.

6) ಜ್ಞಾನಾಗ್ನಿ ಗ್ರಹಗಳು ವಿಗ್ರಹಗಳು ಎನ್ನುವ ಸೂಕ್ಷ್ಮಶರೀರಗಳಿಗೆ ಕಾಣಿಸುತ್ತದೆ. ಜ್ಞಾನಾಗ್ನಿ ಯಾವ ಯೋಗಿ ಹತ್ತಿರ ಎಷ್ಟು ಇದೆ, ಯೋಗಿಗಳಲ್ಲಿ ಯಾರ ಹತ್ತಿರ ಹೆಚ್ಚಾಗಿದೆ ಎಂದು ಅವುಗಳಿಗೆ ತಿಳಿಯುತ್ತದೆ. ಆದ್ದರಿಂದಲೇ ಯೋಗಿಗಳಿಗೆ ದೆವ್ವಗಳು ಮತ್ತು ಸಣ್ಣ ಸಣ್ಣ ದೇವತೆಗಳು ಸಹಿತವು ಭಯಪಡುತ್ತಾರೆ. ದೇವತೆಗಳೂ ಸಹ ಯೋಗಿಗಳಿಗೆ ನಮಸ್ಕರಿಸುತ್ತಿರುತ್ತಾರೆ. ಚರಿತ್ರೆಯಲ್ಲಿ ಮನುಷ್ಯರಾದ ಯೋಗಿಗಳ ಮಾತುಗಳನ್ನು ಗೌರವಿಸಿ ದೇವತೆಗಳೂ ಸಹ ಕೆಲಸ ಮಾಡಿದ್ದಾರೆಂದು ಅನೇಕ ಸಂದರ್ಭಗಳಲ್ಲಿ ಕೇಳಿದ್ದೇವೆ.

7) ಜ್ಞಾನಾಗ್ನಿ ಯೋಗಿಗಳಲ್ಲಿ ಮಾತ್ರ ಪ್ರಕಾಶಿಸುತ್ತದೆ. ಯೋಗ ಸಮಯದಲ್ಲಿ ಮಾತ್ರ ಪ್ರಜ್ವಲಿಸುವ ಅಗ್ನಿ ಜ್ಞಾನಾಗ್ನಿ, ಆದ್ದರಿಂದ ಯೋಗಿಗಳಲ್ಲಿ ಹೊರತು ಯಾರಲ್ಲಿಯೂ ಪ್ರಕಾಶಿಸುವುದಿಲ್ಲ.

8) ಜ್ಞಾನಾಗ್ನಿ ಹೊರಗಿನ ಅಗ್ನಿಯಂತೆ ನೀರಿಗೆ ನಂದಿ ಹೋಗುವುದು ಅಲ್ಲ. ಇದು ಪ್ರಕೃತಿಯಲ್ಲಿನ ಶಕ್ತಿಗಳಿಗೆ ಒಳಗಾಗುವುದಲ್ಲ. ಪಂಚಭೂತಗಳಿಗೆ ಅತೀತವಾದುದು.

9) ಜ್ಞಾನಾಗ್ನಿಯನ್ನು ಇತರರ ಕರ್ಮದಮೇಲೆ ಯೋಗಿ ಸಂಕಲ್ಪದಿಂದ ಪ್ರಸಾರ ಮಾಡಬಹುದು. ಹಸ್ತ, ಪಾದ, ದೃಷ್ಟಿ ಮೂಖಾಂತರ ಯೋಗಿ ಶರೀರದಿಂದ ಇತರರ ಶರೀರದಲ್ಲಿ ಪ್ರವೇಶಿಸಿದ ಜ್ಞಾನಾಗ್ನಿ ಆ ಶರೀರದಲ್ಲಿರುವ ಸಂಚಿತ, ಆಗಾಮಿಕ, ಪ್ರಾರಬ್ಧ ಎನ್ನುವ ಕರ್ಮಗಳಲ್ಲಿ ಪ್ರಾರಬ್ದದ ಮೇಲೆ ಹೋಗಿ ಅದನ್ನು ಸುಟ್ಟುಹಾಕುತ್ತದೆ. ಇದು ಜ್ಞಾನಾಗ್ನಿ ಇದೆ ಎನ್ನುವುದಕ್ಕೆ ಪ್ರತ್ಯಕ್ಷ ಪ್ರಮಾಣ. ಏಸುಪ್ರಭು ತನ್ನ ಕೈಯಿಂದ ತಾಕಿ ಪ್ರಾರಬ್ಧಕರ್ಮವಾದ ಕುಷ್ಟ ರೋಗವನ್ನು ಹೋಗಲಾಡಿಸಿದನು. ಹಾಗೆ ಕುರುಡನ ಕಣ್ಣಿಗೆ ದೃಷ್ಟಿ ತರಿಸಿದನು. ಇಲ್ಲಿ ಏಸುಪ್ರಭು ಶರೀರದಿಂದ ಹೊರಗೆ ಬಂದಿರುವ ಜ್ಞಾನಾಗ್ನಿ ಕುರುಡನ ಶರೀರದಲ್ಲಿ ಅಂಧತ್ವಕ್ಕೆ ಕಾರಣವಾದ ಪ್ರಾರಬ್ದವನ್ನು ಸುಟ್ಟುಹಾಕುವುದರಿಂದ ಅವನಿಗೆ ತಕ್ಷಣ ದೃಷ್ಟಿ ಬಂದಿತು. ಹೀಗೆ ಎಷ್ಟೋಜನ ಯೋಗಿಗಳು ಅವರ ಜ್ಞಾನಾಗ್ನಿಯಿಂದ ಕೆಲವರ ರೋಗಗಳನ್ನು ಅಂಗಲೋಪಗಳನ್ನು ಹೋಗಲಾಡಿಸಿದಂತೆ ಎಷ್ಟೋ ಆಧಾರಗಳಿವೆ.

10) ಯೋಗಿಗಳ ಶರೀರದಿಂದ ಹೊರಗೆ ಬಂದು ಮತ್ತೊಬ್ಬನ ಪ್ರಾರಬ್ದದ ಮೇಲೆ ದಾಳಿಮಾಡಿದ ಜ್ಞಾನಾಗ್ನಿ ಯೋಗಿಗಳ ಶರೀರದಲ್ಲಿ ಮಾತ್ರ ಪ್ರಾರಬ್ಧದ ಮೇಲೆ ಕೆಲಸ ಮಾಡುವುದಿಲ್ಲ. ಉದಾಹರಣೆಗೆ ಒಬ್ಬ ಯೋಗಿ ಹೊಟ್ಟೆ ನೋವಿನಿಂದ ಬಾಧೆಪಡುತ್ತಿದ್ದರು ಎದುರಿಗಿರುವವನನ್ನು ನೋಡಿ ದಯತೋರಿಸಿ, ತನ್ನೊಂದರ ಯೋಗಾಗ್ನಿ (ಜ್ಞಾನಾಗ್ನಿ) ಯಿಂದ ಅವನ ಪ್ರಾರಬ್ದವನ್ನು ಸುಟ್ಟುಹಾಕಿ, ಅವನಿಗೆ ಹೊಟ್ಟೆನೋವು ಇಲ್ಲದಂತೆ ಮಾಡಿದನು. ಆ ಯೋಗಿಗಿರುವ ಸಣ್ಣ ಕಿವಿ ನೋವನ್ನು ತಪ್ಪದೇ ಅನಿಭವಿಸುತ್ತಿರುತ್ತಾನೆ. ಅವನಿಗೆ ಹೊಟ್ಟೆನೋವು ವಾಸಿಮಾಡಿದವನು ನಿನಗಿರುವ ಕಿವಿನೋವನ್ನು ವಾಸಿಮಾಡಿ ಕೊಳ್ಳಲಾರೆಯಾ ಎಂದು ಪ್ರಶ್ನಿಸಿದರೆ, ನನ್ನ ಶಕ್ತಿ ನನ್ನ ಮೇಲೆ ಕೆಲಸ ಮಾಡುವುದಿಲ್ಲ ಎಂದನು. ಇದರಿಂದ ಯೋಗಿ ಶರೀರದಲ್ಲಿನ ಜ್ಞಾನಾಗ್ನಿ ಅವನ ಪ್ರಾರಬ್ಧದ ಮೇಲೆ

ಕೆಲಸ ಮಾಡುವುದಿಲ್ಲವೆಂದು ತಿಳಿಯುತ್ತಿದೆ. ಯೋಗಿ ಶರೀರದಲ್ಲಿ ಅಗ್ನಿ ಯಾವ ಕರ್ಮದ ಮೇಲೆ ಕೆಲಸ ಮಾಡುತ್ತದೆಂದರೆ? ಇದು ಬ್ರಹ್ಮಯೋಗಿಯಲ್ಲಿ ಒಂದು ವಿಧವಾಗಿ, ಕರ್ಮಯೋಗಿಯಲ್ಲಿ ಒಂದು ವಿಧವಾಗಿ ಕೆಲಸ ಮಾಡುತ್ತಿದೆ. ಬ್ರಹ್ಮಯೋಗಿಯಲ್ಲಿನ ಜ್ಞಾನಾಗ್ನಿ ಆತನ ಸಂಚಿತಕರ್ಮದ ಮೇಲೆ ಕೆಲಸ ಮಾಡುತ್ತದೆ. ಹಾಗೆ ಕರ್ಮಯೋಗಿ ಶರೀರದಲ್ಲಿನ ಜ್ಞಾನಾಗ್ನಿ ಆತನ ಆಗಾಮಿಕಕರ್ಮದ ಮೇಲೆ ಕೆಲಸ ಮಾಡುತ್ತದೆ. **ಪ್ರಾರಬ್ಧ ಎಂದರೆ! ಪ್ರಸ್ತುತ ಅನುಭವಿಸುವುದೆಂದೂ, ಆಗಾಮಿಕಕರ್ಮ ಎಂದರೆ! ಮಾಡುತ್ತಿರುವ ಕಾರ್ಯಗಳಲ್ಲಿ ಹೊಸದಾಗಿ ಬರುವುದೆಂದೂ, ಸಂಚಿತಕರ್ಮ ಎಂದರೆ! ಜನ್ಮ ಜನ್ಮಗಳಿಂದ ಉಳಿಯುತ್ತಾ ಬಂದಿರುವ ಮೊತ್ತವೆಂದು ತಿಳಿಯಬೇಕು.**

11) ಜ್ಞಾನಾಗ್ನಿ ಬೆಂಕಿಕಡ್ಡಿಯಲ್ಲಿನ ಅಗ್ನಿಯಂತೆ ಕಾಣಿಸದೆ ಪ್ರಪಂಚವೆಲ್ಲಾ ವ್ಯಾಪಿಸಿದ್ದರೂ ಬೆಂಕಿಕಡ್ಡಿ ಗೀಚಿದಾಗಲೇ ಉರಿದಂತೆ, ಜ್ಞಾನಾಗ್ನಿ ಯೋಗಿಗಳು ಯೋಗವು ಮಾಡುವಾಗಲೇ ಪ್ರಜ್ವಲಿಸುತ್ತದೆ. ಬ್ರಹ್ಮಯೋಗವನ್ನು ಆಚರಿಸುವವನಿಗೆ ಹೊರಗಿರುವ ಜ್ಞಾನಾಗ್ನಿ ಕಣಗಳು ಯೋಗದಂಡ ಉಪಯೋಗಿಸಿದ ಕಡೆಯಲ್ಲದೆ, ಅದಕ್ಕೆ ವಿರುದ್ಧ ದಿಕ್ಕಿನಲ್ಲಿ ಬ್ರಹ್ಮನಾಡಿ ಯಲ್ಲಿ ಸೇರಿ, ಅದರ ಮೂಲಕ ಶಿರೋಭಾಗದಲ್ಲಿ ಸೇರಿ ಪ್ರಜ್ವಲಿಸುತ್ತದೆ. ಈ ವಿಷಯವನ್ನು ಐದನೇಯ ಅಧ್ಯಾಯ ಆತ್ಮಸಂಯಮ ಯೋಗದಲ್ಲಿ ಬ್ರಹ್ಮಯೋಗವನ್ನು ಕುರಿತು ಹೇಳಿದ ಕಡೆ ವಿವರವಾಗಿ ಹೇಳಲಾಗಿದೆ. ಕರ್ಮಯೋಗವನ್ನು ಆಚರಿಸುವವನಿಗೆ ತಲೆಯಲ್ಲಿಯೇ ಪ್ರಕಾಶಿಸುತ್ತದೆ. ಕರ್ಮಯೋಗಿಗಳಿಗೆ ಬ್ರಹ್ಮಯೋಗಿಗಳಂತೆ ಚರ್ಮಾಸನ. ಯೋಗದಂಡ, ಪದ್ಮಾಸನದ ಅವಶ್ಯಕತೆ ಇರುವುದಿಲ್ಲ. ಬ್ರಹ್ಮಯೋಗಿಗಳಿಗೆ ಹೊರಗಿನಿಂದ ಲಭಿಸುವ ಜ್ಞಾನಾಗ್ನಿ ಬ್ರಹ್ಮನಾಡಿಯನ್ನು ಸೇರಿ, ಭೂಮಿ ಆಕರ್ಷಣೆಯಿಂದ ಸ್ವಲ್ಪ ಕೆಳಗಿನ ಭಾಗದಿಂದ ಹೊರಗೆ ಹೋಗುವ ಅವಕಾಶ ಇರುವುದರಿಂದ, ಜ್ಞಾನಾಗ್ನಿ ಹಾಗೆ ಸ್ವಲ್ಪವೂ ನಷ್ಟ ಹೋಗದಂತೆ ದರ್ಭಗಳು, ಚರ್ಮಗಳು ಆಸನವಾಗಿ ಹೊಂದಿಸಿಕೊಳ್ಳಬೇಕೆಂದು ಹಿರಿಯರು ಹೇಳಿದ್ದಾರೆ. ಇವೆಲ್ಲವೂ ಜ್ಞಾನಾಗ್ನಿ ಇದೆಯೆಂದು ಹೇಳುವುದಕ್ಕೆ ಆಧಾರಗಳು.

**(3) ಶ್ಲೋ॥ 20 : ತ್ಯಕ್ತ್ವಾ ಕರ್ಮಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ ।**
**ಕರ್ಮಣ್ಯಭಿ ಪ್ರವೃತ್ತೋಽಪಿ ನೈವ ಕಿಂಚಿತ್ಕ ರೋತಿ ಸಃ ॥**

**(ಕರ್ಮಯೋಗ)**

**(3) ಶ್ಲೋ॥ 21 : ನಿರಾಶೀರ್ಯತ ಚಿತ್ತಾತ್ಮಾ ತ್ಯಕ್ತ ಸರ್ವ ಪರಿಗ್ರಹಃ ।**
**ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥**
**(ಕರ್ಮಯೋಗ)**

**(3) ಶ್ಲೋ॥ 22 : ಯದೃಚ್ಛಾ ಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ ।**
**ಸಮಸ್ಸಿದ್ಧಾವ ಸಿದ್ಧೌ ಚ ಕೃತ್ವಾಪಿ ನ ನಿಬದ್ಧ್ಯತೇ ॥**
**(ಕರ್ಮಯೋಗ)**

**ಭಾವಾರ್ಥ :** ಕರ್ಮಫಲಗಳಲ್ಲಿ ಧ್ಯಾಸವಿಲ್ಲದೆ, ನಿತ್ಯತೃಪ್ತನಾಗಿ ಆಸೆಯನ್ನು ನಿಗ್ರಹಿಸಿಕೊಂಡು ಸರ್ವಕಾರ್ಯಗಳನ್ನು ಸದಾ ಮಾಡುವವನು ಮಾಡದವನಿಗೆ ಸಮಾನ.

ಆಸೆ ಬಿಟ್ಟು, ನಿಯಮಿತ ಚಿತ್ತನಾಗಿ, ಯಾವುದರ ಮೇಲೆಯು ಶ್ರದ್ದೆಯಿಲ್ಲದೇ ಕೇವಲ ಶರೀರ ಸಂಬಂಧವಾಗಿ ಕೆಲಸಗಳು ಮಾಡಬೇಕು. ಹಾಗೆ ಮಾಡುವವನಿಗೆ ಕರ್ಮಗಳು ಅಂಟುವುದಿಲ್ಲ.

ದೊರೆತ ಲಾಭದಿಂದ ತೃಪ್ತಿಹೊಂದಿ, ದ್ವಂದ್ವಗಳು ಬಿಟ್ಟು, ಮತ್ಸರ ಇಲ್ಲದವನಾಗಿ ಲಾಭನಷ್ಟಗಳನ್ನು ಸಮಾನವಾಗಿ ಯಾರು ನೋಡುತ್ತಾರೋ ಅವನಿಗೆ ಕರ್ಮ ಬಂಧನಗಳು ಉಂಟಾಗುವುದಿಲ್ಲ.

**ವಿವರ :** ಇಲ್ಲಿ ಮೂರು ಶ್ಲೋಕಗಳಿಗೆ ಒಂದೇ ಬಾರಿ ವಿವರ ಕೊಡಲಾಗಿದೆ. ಈ ಮೂರು ಶ್ಲೋಕಗಳು ಒಂದೇ ಕರ್ಮಯೋಗವನ್ನು ಕುರಿತು ಹೇಳಿವೆ. ಈ ಮೂರಕ್ಕಿಂತ ಮೊದಲು ಹೇಳಿದ 19ನೇ ಶ್ಲೋಕ ಇವುಗಳ ನಂತರ ಇರುವ 23ನೇ ಶ್ಲೋಕವೂ ಸಹ ಕರ್ಮಯೋಗಕ್ಕೆ ಸಂಬಂಧಿಸಿರುವವೇ. ದೈವವನ್ನು ತಿಳಿದುಕೊಳ್ಳುವುದಕ್ಕೆ ಮೋಕ್ಷವನ್ನು ಹೊಂದುವುದಕ್ಕೆ ಎರಡೇ ಮಾರ್ಗಗಳಿವೆ. ಅವುಗಳೇ ಕರ್ಮಯೋಗ, ಬ್ರಹ್ಮಯೋಗ. ಇವು ಚೆನ್ನಾಗಿ ಅರ್ಥವಾಗಬೇಕೆಂದು ಬದಲಾಯಿಸಿ ಬದಲಾಯಿಸಿ ಅನೇಕ ಶ್ಲೋಕಗಳ ರೂಪಗಳಾಗಿ ಹೇಳಿದ್ದಾರೆ. ಕರ್ಮಯೋಗವನ್ನು ಕುರಿತು ಸಾಂಖ್ಯಾ, ಕರ್ಮ, ಜ್ಞಾನಯೋಗಗಳೆಂಬ ಅಧ್ಯಾಯಗಳಲ್ಲಿ, ಬ್ರಹ್ಮಯೋಗವನ್ನು ಕುರಿತು ಕರ್ಮಸನ್ಯಾಸ, ಆತ್ಮ ಸಂಯಮ ಯೋಗಗಳೆಂಬ ಅಧ್ಯಾಯಗಳಲ್ಲಿಯೂ ಹೆಚ್ಚಾಗಿ ಹೇಳಿದ್ದಾರೆ. ಅಷ್ಟೇ ಅಲ್ಲದೇ ಉಳಿದ ಅಧ್ಯಾಯಗಳಲ್ಲಿ, ಅಲ್ಲಲ್ಲಿ ಹೇಳಿದ್ದಾರೆ. ಈಗ ಕರ್ಮಯೋಗಕ್ಕೆ ಸಂಬಂಧಿಸಿ ಮೂರು ಶ್ಲೋಕಗಳಿಗೆ ಒಂದೇ ಭಾವ ವಿವರವನ್ನು ಹೇಳುತ್ತಿದ್ದೇವೆ.

**(3) ಶ್ಲೋ॥ 23 : ಗತ ಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತ ಚೇತಸಃ ।**
**ಯಜ್ಞಾ ಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ॥**
**(ಕರ್ಮಯೋಗ)**

**ಭಾವಾರ್ಥ** : ಸಂಗ ಇಲ್ಲದವನಾಗಿ, ಫಲಾಸಕ್ತಿ ಇಲ್ಲದೇ ದೈವವನ್ನು ಸೇರಬೇಕೆಂದು ಕೋರಿಕೆಯಿರುವವನಾಗಿ, ಕರ್ಮಯಜ್ಞ ಮಾಡುವವನಿಗೆ ಅವನ ಕರ್ಮ ಎಲ್ಲವೂ ಸುಟ್ಟು ನಾಶವಾಗುತ್ತದೆ.

**ವಿವರ** : ಈ ಶ್ಲೋಕದಲ್ಲಿ **'ಯಜ್ಞಾಯಾಚರತಃ ಕರ್ಮ'** ಎನ್ನುವ ವಾಕ್ಯ ಮುಖ್ಯವಾದುದು. ಇದೇ ಅರ್ಥಕೊಡುವ **'ಯಜ್ಞಾರ್ಥಾ ತ್ಕರ್ಮನೋ ನ್ಯತ್ರ'** ಎಂದು ಕರ್ಮಯೋಗ 9ನೇ ಶ್ಲೋಕದಲ್ಲಿ ಹೇಳಿದಾಗ ಬಾಹ್ಯಯಜ್ಞಗಳು ಮಾಡೆಂದು ಕಲ್ಪಿತವಾದ ಏಳು ಶ್ಲೋಕಗಳನ್ನು ಅಲ್ಲಿ ಸೇರಿಸಿದ್ದಾರೆ. ಅವುಗಳನ್ನು ಗುರುತಿಸಿ ಅವು ಅಶಾಸ್ತ್ರೀಯವಾದವೆಂದು ನಾವು ತೆಗೆದುಹಾಕುವುದು ನಡೆದಿದೆ. ಅದೇ ವಿಧವಾಗಿ ಇಲ್ಲಿಯೂ ಸಹ ಯಜ್ಞವೆಂಬ ಮಾತು ಕೇಳಿಸುತ್ತಲೇ 9 ಕಲ್ಪಿತ ಶ್ಲೋಕಗಳನ್ನು ಸೇರಿಸಿದ್ದಾರೆ. ಅನೇಕ ರೀತಿಯ ಯಜ್ಞಗಳಿವೆಯೆಂದು ಹೇಳಿದ 9 ಶ್ಲೋಕಗಳ ಭಾವಗಳು, ಎರಡೇ ಯಜ್ಞಗಳು ಇರುವವೆಂದು ಹೇಳಿದ ಭಗವಂತನ ಮಾತಿಗೆ ವಿರುದ್ಧವಾಗಿವೆ. 23ನೇ ಶ್ಲೋಕದಲ್ಲಿ **'ಯಜ್ಞಾಯಾ ಚರತಃ ಕರ್ಮ'** ಯಜ್ಞಕರ್ಮ ಮಾಡೆಂದು ಹೇಳಿದ ಭಗವಂತನು ಪಕ್ಕದ ಶ್ಲೋಕದಲ್ಲಿಯೇ ಯಜ್ಞಗಳು ಎರಡು ವಿಧಗಳು 1) ದ್ರವ್ಯಯಜ್ಞ 2) ಜ್ಞಾನಯಜ್ಞ ಎಂದು, ಅವುಗಳಲ್ಲಿ ದ್ರವ್ಯಯಜ್ಞಕ್ಕಿಂತ ಜ್ಞಾನಯಜ್ಞವೆ ಶ್ರೇಷ್ಠವಾದುದೆಂದೂ ಸಹ ಹೇಳುತ್ತಾ **'ಶ್ರೇಯಾನ್ ದ್ರವ್ಯಮಯಾದ್ವಜ್ಞಾತ್ ಜ್ಞಾನ ಯಜ್ಞಃ'** ಎಂದಿದ್ದಾನೆ. 24ನೇ ಶ್ಲೋಕವಾಗಿರಬೇಕಾಗಿರುವುದನ್ನು 33ನೇ ಶ್ಲೋಕವಾಗಿ ಮಾಡಿ ಮಧ್ಯದಲ್ಲಿ 9 ಕಲ್ಪಿತ ಶ್ಲೋಕಗಳನ್ನು ಸೇರಿಸಿದ್ದಾರೆ. ವಿವಿಧ ರೀತಿಯ ಯಜ್ಞಗಳನ್ನು ತಿಳಿಸುವ 9 ಶ್ಲೋಕಗಳು 23ನೇ ಶ್ಲೋಕಕ್ಕೆ ವಿರುದ್ಧವಾಗಿವೆ. ಆದ್ದರಿಂದ ಅವುಗಳನ್ನು ತೆಗೆದುಹಾಕಲಾಗಿದೆ. ಇಲ್ಲಿಯವರೆಗೂ ಮೂರು ಅಧ್ಯಾಯಗಳಲ್ಲಿಯು ಕಲ್ಪಿತ ಶ್ಲೋಕಗಳು ಇದ್ದಂತೆ ಕಂಡುಕೊಂಡಿದ್ದೇವೆ. ಮೂರು ಅಧ್ಯಾಯಗಳಲ್ಲಿಯೂ ಕ್ರಮವಾಗಿ 7+7+9 ಒಟ್ಟು 23 ಶ್ಲೋಕಗಳಿವೆ. ಈ ಅಧ್ಯಾಯದಲ್ಲಿ 23ನೇ ಶ್ಲೋಕದ ನಂತರ ಅನುಬಂಧ ಶ್ಲೋಕವು 33 ನೆಯದೆಂದು ಗ್ರಹಿಸಬೇಕು.

**1) ಶ್ಲೋ॥ 24 : ಬ್ರಹ್ಮಾರ್ಪಣಂ ಬ್ರಹ್ಮಹವಿರ್ಬ್ರಹ್ಮಾಗ್ನೌ ಬ್ರಹ್ಮಣಾಹುತಮ್ ।**
**ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮ ಕರ್ಮಸಮಾಧಿನಾ ॥**
**(ಕಲ್ಪಿತ)**

3) ಶ್ಲೋ॥ 25 : ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ ।
ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ ॥

(ಕಲ್ಪಿತ)

3) ಶ್ಲೋ॥ 26 : ಶ್ರೋತ್ರಾ ದೀನೀಂದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ ।
ಶಬ್ದಾದೀನ್ವಿಷಯಾನನ್ಯ ಇಂದ್ರಿಯಾಗ್ನಿಷು ಜುಹ್ವತಿ ॥

(ಕಲ್ಪಿತ)

3) ಶ್ಲೋ॥ 27 : ಸರ್ವಾಣೀಂದ್ರಿಯ ಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ ।
ಆತ್ಮ ಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ॥

(ಕಲ್ಪಿತ)

2) ಶ್ಲೋ॥ 28 : ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾ ಸ್ತಥಾ ಪರೇ ।
ಸ್ವಾಧ್ವಾಯಜ್ಞಾನಯಜ್ಞಾಶ್ಚ ಯತಯಸ್ಸಂಶಿತ ವ್ರತಾ ॥

(ಕಲ್ಪಿತ)

3) ಶ್ಲೋ॥ 29 : ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಪಾನಂ ತಥಾಪರೇ ।
ಪ್ರಾಣಾಪಾನಗತೀ ರುಧ್ವಾ ಪ್ರಾಣಾಯಾಮ ಪರಾಯಣಾಃ ॥

(ಕಲ್ಪಿತ)

3) ಶ್ಲೋ॥ 30 : ಅಪರೇ ನಿಯತಾಹಾರಾಃ ಪ್ರಾಣಾ ನ್ಪ್ರಾಣೇಷು ಜುಹ್ವತಿ ।
ಸರ್ವೇಪ್ಯೇತೇ ಯಜ್ಞವಿದೋ ಯಜ್ಞಕ್ಷ ಪಿತಕಲ್ಮಷಾಃ ॥

(ಕಲ್ಪಿತ)

3) ಶ್ಲೋ॥ 31 : ಯಜ್ಞ ಶಿಷ್ಟಾಮೃತಭುಜೋ ಯಾನ್ತಿ ಬ್ರಹ್ಮ ಸನಾತನಂ ।
ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ ॥

(ಕಲ್ಪಿತ)

3) ಶ್ಲೋ॥ 32 : ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ ।
ಕರ್ಮಜಾನೌನ್ವಿದ್ಧಿ ತಾನ್ ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ ॥

(ಕಲ್ಪಿತ)

**3) ಶ್ಲೋ॥ 33 : ಶ್ರೇಯಾನ್ ದ್ರವ್ಯಮಯಾ ದ್ಯಜ್ಞಾತ್ ಜ್ಞಾನ ಯಜ್ಞಃ ಪರಂತಪ! ।**
**ಸರ್ವಂ ಕರ್ಮಾ಻ಖಿಲಂ ಪಾರ್ಥ! ಜ್ಞಾನೇ ಪರಿಸಮಾಪ್ಯತೇ ॥**
**(ಕರ್ಮಯೋಗ, ಬ್ರಹ್ಮಯೋಗ)**

**ಭಾವಾರ್ಥ:** ದ್ರವ್ಯಯಜ್ಞಕ್ಕಿಂತ ಜ್ಞಾನಯಜ್ಞವು ಶ್ರೇಷ್ಠವಾದುದು. ಸರ್ವಕರ್ಮಗಳು ಜ್ಞಾನಯಜ್ಞದಲ್ಲಿ ಪರಿಸಮಾಪ್ತವಾಗುವುದು.

**ವಿವರ** : ಇಲ್ಲಿ ಯಜ್ಞ ಎಂದರೆ ಏನು? ಎರಡು ಯಜ್ಞಗಳು ಎಲ್ಲಿ ನಡೆಯುತ್ತವೆ? ಯಾರು ಮಾಡುತ್ತಾರೆ, ಅವುಗಳ ಫಲಿತವೇನು? ಇಷ್ಟು ಪ್ರಶ್ನೆಗಳಿಗೆ ಉತ್ತರ ದೊರೆತರೆ ಆಗ ಯಜ್ಞದ ವಿವರವನ್ನು ಪೂರ್ತಿ ತಿಳಿದವರಾಗುತ್ತೇವೆ. ಉತ್ತರಗಳಿಗಾಗಿ ಕೆಳಗಿನ ವಿವರವನ್ನು ನೋಡೋಣ. **'ಯಜ್ಞ'** ಎಂದರೆ **'ಸುಡುವುದು'** ಎಂದು **ಅರ್ಥ**. ಒಂದು ಯಜ್ಞ ನಡೆಯಬೇಕೆಂದರೆ ಸುಡುವುದಕ್ಕೆ ಪದಾರ್ಥಗಳು ಬೇಕು. ಸುಡುವುದಕ್ಕೆ ಅಗ್ನಿ ಬೇಕು. ಆ ವಸ್ತುಗಳನ್ನು ಬೆಂಕಿಯಲ್ಲಿ ಸುಡುವುದಕ್ಕೆ ಒಬ್ಬ ಮನುಷ್ಯಬೇಕು. ಇದು ಎಲ್ಲರಿಗೂ ತಿಳಿದಿರುವ ವಿಷಯವೇ. ಎಲ್ಲಿ ಯಜ್ಞ ನಡೆದರು ಕುಂಡದಲ್ಲಿ ಅಗ್ನಿ ಇರುತ್ತದೆ. ಅದರೊಳಗೆ ಹಾಕುವ ವಸ್ತುಗಳು ಚಿಕ್ಕ ಕಡ್ಡಿಗಳು ಮೊದಲುಗೊಂಡು ಉತ್ತಮ ಔಷಧಗಳು, ರೇಷ್ಮೆಸೀರೆಗಳು, ಚಿನ್ನ, ತುಪ್ಪ ಮೊದಲಾದವು ಎಷ್ಟೋ ಇರುತ್ತವೆ. ಯಜ್ಞಗಳನ್ನು ನೆರವೇರಿಸುವ ಋತ್ವಿಕರು ಇರುವುದು ಸಹಜವೇ. ಹೊರಗೆ ನಡೆಯುವ ಈ ಯಜ್ಞಗಳು ಧರ್ಮಯುಕ್ತವಾದುವಾ, ಅಧರ್ಮಯುಕ್ತವಾದುವಾ ಎಂದು ಯೋಚಿಸಿದರೆ, ಗೀತೆಯಲ್ಲಿನ ಭಗವಂತನು ಹೇಳಿರುವವೆ ಧರ್ಮಯುಕ್ತವಾದವು. ಮಾನವರಿಂದ ಕಲ್ಪಿಸಲಾದ ಯಜ್ಞಗಳು ಅಧರ್ಮಯುಕ್ತವಾದವೆಂದು ತಿಳಿಯುತ್ತದೆ. ಇಲ್ಲಿವೊಂದು ಪ್ರಶ್ನೆ ಬರಬಹುದು. ಅಗ್ನಿಯಲ್ಲಿ ದ್ರವ್ಯಗಳು ಹಾಕಿ ಮಂತ್ರ ಯುಕ್ತವಾಗಿ ಸುಡುವುದು, ದೇವರು ಹೇಳಿದ ಎರಡು ಯಜ್ಞಗಳಲ್ಲಿ ಒಂದಾದ ದ್ರವ್ಯಯಜ್ಞವು ಅಲ್ಲವೇ ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! 8ನೇ ಅಧ್ಯಾಯ ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ 4ನೇ ಶ್ಲೋಕದಲ್ಲಿ, ಶರೀರದೊಳಗೆ ನಡೆಯುವ ಯಜ್ಞಗಳಿಗೆ ನಾನೇ ಅಧಿಪತಿ ಯಾಗಿದ್ದೇನೆಂದು ಹೇಳುವುದಾಗಿದೆ. ಇದರ ಪ್ರಕಾರ ಯಜ್ಞಗಳು ಹೊರಗೆ ನಡೆಯುವವಲ್ಲ. ಶರೀರದಲ್ಲಿಯೇ ನಡೆಯುತ್ತಿವೆಯೆಂದು ತಿಳಿಯುತ್ತಿದೆ. ಅಂತಹದರಲ್ಲಿ ಹೊರಗೆ ನಡೆಯುವ ಯಜ್ಞಗಳು ಅಧರ್ಮವಾದವೆಂದು, ಭಗವಂತನು ಹೇಳಿರುವುದು ಧರ್ಮಯುಕ್ತವಾದವೆಂದು ತಿಳಿಯುತ್ತಿದೆ. ಆದುದರಿಂದ ಆತನು ಹೇಳಿದ ಎರಡು ಯಜ್ಞಗಳನ್ನು ಚೆನ್ನಾಗಿ ವಿವರವಾಗಿ ತಿಳಿದುಕೊಳ್ಳಬೇಕು.

ಮೇಲಿನ ಶ್ಲೋಕದಲ್ಲಿ ಹೇಳಿದ ದ್ರವ್ಯಯಜ್ಞ, ಜ್ಞಾನಯಜ್ಞ ಎನ್ನುವ ಎರಡರಲ್ಲಿ ಜ್ಞಾನಯಜ್ಞವು ಶ್ರೇಷ್ಟವಾದುದೆಂದು ಹೇಳಿದ್ದಾರೆ. ದ್ರವ್ಯಯಜ್ಞ ಏಕೆ ಶ್ರೇಷ್ಟವಾದುದಲ್ಲವೆಂದು ಯೋಚಿಸಿದರೆ, ದ್ರವ್ಯಯಜ್ಞ ಪ್ರಕೃತಿ ಸಂಬಂಧವಾದುದು. ಪರಮಾತ್ಮನನ್ನು ಹೊಂದುವುದಕ್ಕೆ ಈ ಯಜ್ಞವು ಕೆಲಸಕ್ಕೆ ಬರುವುದಿಲ್ಲ. ಪ್ರಕೃತಿಗೆ ಸಂಬಂಧಿಸಿದ ದ್ರವ್ಯಗಳು ಈ ಯಜ್ಞದಲ್ಲಿ ಸುಟ್ಟುಹೋಗುತ್ತವೆ. ದ್ರವ್ಯಯಜ್ಞದಲ್ಲಿ ಜನ್ಮಕ್ಕೆ ಕಾರಣವಾದ ಕರ್ಮಗಳು ಅಭಿವೃದ್ಧಿಯಾಗುತ್ತವೆ. ಭಗವಂತನು ತಿಳಿಸಿದ ಯಜ್ಞಗಳನ್ನು ಕುರಿತು ನಮಗೆ ತಿಳಿದರು ತಿಳಿಯದೇ ಹೋದರು, ಪ್ರತಿಯೊಬ್ಬರು ಪ್ರತಿದಿನ ಯಜ್ಞ ಮಾಡುತ್ತಿದ್ದಾರೆ. **'ತಿಳಿದ ಜ್ಞಾನಿಗಳು ಮಾಡಬಹುದೇನೊ, ಏನು ತಿಳಿಯದ ನಾವು ಯಜ್ಞ ಮಾಡುವುದೇನು'** ಎಂದು ಆಶ್ಚರ್ಯಪಡಬೇಕಾದ ಅವಶ್ಯಕತೆಯಿಲ್ಲ. ವಾಸ್ತವವಾಗಿ ಪ್ರತಿಯೊಬ್ಬರು ದಿನಕ್ಕೆ ಎರಡು ಇಲ್ಲವೇ ಮೂರುಸಲ ಯಜ್ಞ ಮಾಡುತ್ತಲೇ ಇದ್ದಾರೆ. ಅದರ ಹೆಸರೇ ದ್ರವ್ಯಯಜ್ಞ.

ಯಜ್ಞಗಳು ದೇಹದಲ್ಲಿ ನಡೆಯುತ್ತವೆಂಬ ಸೂತ್ರದ ಪ್ರಕಾರ, ನಮ್ಮ ಶರೀರದಲ್ಲಿ ಭಗವಂತನು ತಿಳಿಸಿದ ದ್ರವ್ಯಯಜ್ಞ, ಜ್ಞಾನಯಜ್ಞ ಎರಡು ನಡೆಯುತ್ತಿವೆ. ಎಲ್ಲರೂ ಮಾಡುವಂತಹುದು, ಪ್ರಸ್ತುತ ಮಾಡುತ್ತಿರುವುದು ದ್ರವ್ಯಯಜ್ಞ. ಸರ್ವ ಜೀವರಾಶಿಗಳ ಶರೀರದಲ್ಲಿನ ಜೀರ್ಣಾಶಯದಲ್ಲಿ ಜಠರಾಗ್ನಿಯಿಂದ ನಾವು ತಿಂದಿರುವ ಆಹಾರ ದ್ರವ್ಯಗಳೆಲ್ಲ ಜೀರ್ಣಮಾಡಲ್ಪಡುತ್ತಿವೆ. ಜಠರಾಗ್ನಿಯಲ್ಲಿ ಬಾಯಿ ಮೂಲಕ ಒಳಗೆ ಹಾಕುವ ಪದಾರ್ಥ ಗಳೆಲ್ಲವೂ ಸುಟ್ಟುಹೋಗುತ್ತಿವೆ. ಜೀರ್ಣಾಶಯವೆನ್ನುವ ಯಜ್ಞಕುಂಡದಲ್ಲಿ ಜಠರಾಗ್ನಿವೊಂದರ ಉರಿಯಲ್ಲಿ ಅನೇಕ ರೀತಿಯ ಆಹಾರ ಪದಾರ್ಥಗಳು ಸುಟ್ಟುಹೋಗುವ ಜೀರ್ಣ ಪ್ರಕ್ರಿಯೆಯನ್ನು ದ್ರವ್ಯಯಜ್ಞ ಎಂದಿದ್ದಾರೆ. ಈ ದ್ರವ್ಯಯಜ್ಞವು ಪ್ರತಿದಿನ ನಮ್ಮ ಶರೀರದಲ್ಲಿ ನಡೆಯುತ್ತಿದೆ ಎಂದು ಒಪ್ಪಿಕೊಳ್ಳದೆ ತಪ್ಪುವುದಿಲ್ಲ. ದಿನಕ್ಕೆ ಎರಡು ಅಥವಾ ಮೂರು ಪರ್ಯಾಯಗಳು ಈ ಅಗ್ನಿಕುಂಡದೊಳಗೆ ಆಹಾರ ಪಾದರ್ಥಗಳನ್ನು ಹಾಕುತ್ತಿದ್ದೇವೆ. ಹಾಗೆ ಹಾಕದ ಪಕ್ಷದಲ್ಲಾಗಲಿ, ಸ್ವಲ್ಪ ಆಲಸ್ಯವಾದರೂ ಸಹ, ಆ ಅಗ್ನಿ ಪ್ರಕೋಪಿಸಿ ಜೀರ್ಣಾಶಯ ಗೋಡೆಗಳಲ್ಲಿ ಬಿಸಿ ಹುಟ್ಟಿಸುವುದರಿಂದ ಹಸಿವೆಂದು, ಹೊಟ್ಟೆಯಲ್ಲಿ ಉರಿಯಾಗುತ್ತಿದೆ ಎಂದು ಹೇಳುತ್ತಿರುತ್ತೇವೆ. ಹೊಟ್ಟೆಯಲ್ಲಿ ಉರಿ ಎದ್ದಿದೆಯೆಂದು ನಮ್ಮ ಬಾಯಿಂದ ಬರುವ ಮಾತುಗಳಲ್ಲಿ ಎಷ್ಟೋ ಸತ್ಯವಿದೆ. ಆ ಮಾತು ಬಾಯಿಂದ ಬರುತ್ತಿದ್ದರೂ, ಈ ಉರಿ ಯಾವ ಅಗ್ನಿದೆಂದು ಆಲೋಚಿಸದೆ ಹೋಗಿರುವುದರಿಂದ, ಅಲ್ಲಿ ನಡೆಯುವ ಯಜ್ಞವೂ ಸಹ ತಿಳಿಯದಂತೆ ಹೋಗಿದೆ. ಈ ಯಜ್ಞದಲ್ಲಿರುವ ಅಗ್ನಿ ಜಠರಾಗ್ನಿ ಎಂದು, ಸುಡುವವು ದ್ರವ್ಯಗಳೆಂದು, ಯಜ್ಞ ಮಾಡಿಸುವವನು ಜೀವಾತ್ಮ ಎಂದು, ಅಗ್ನಿಯಾಗಿದ್ದು

ಸುಡುವವನು ಆತ್ಮವೆಂದು ತಿಳಿಯುತ್ತಿದೆ. ಇದನ್ನು ಕುರಿತು ಪುರುಷೋತ್ತಮಪ್ರಾಪ್ತಿ ಯೋಗದಲ್ಲಿ 14ನೇ ಶ್ಲೋಕದಲ್ಲಿ **'ಅಹಂ ವೈಶ್ವಾನರೋಭೂತ್ವಾ ಪ್ರಾಣಿನಾಂ ದೇಹ ಮಾಶ್ರಿತಃ ಪ್ರಾಣಾ ಪ್ರಾಣ ಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್'** ಎಲ್ಲ ದೇಹಗಳ ಜೀರ್ಣಾಶಯದಲ್ಲಿ ಅಗ್ನಿ ಸ್ವರೂಪನಾಗಿದ್ದು ಅವರು ತಿಂದಿರುವ ನಾಲ್ಕು ವಿಧಗಳ ಪದಾರ್ಥಗಳನ್ನು ನಾಶ (ಜೀರ್ಣ) ಮಾಡುತ್ತಿದ್ದೇನೆಂದು ಭಗವಂತನು ತಿಳಿಸಿದ್ದಾನೆ.

ಸೈನ್ಸ್ ಪ್ರಕಾರ ಶರೀರದಲ್ಲಿನ ಜೀರ್ಣಾಶಯದಲ್ಲಿ ಮೂರು ರಸಗಳು ಇತರ ಗ್ರಂಥಿಗಳಿಂದ ಬಂದು ಬೆರೆಯುತ್ತಿರುತ್ತವೆ. ಈ ಮೂರು ರಸಗಳಲ್ಲಿನ ರಾಸಾಯನಿಕ ಕ್ರಿಯೆಯಲ್ಲಿ ಅಗ್ನಿತತ್ತ್ವ ಏರ್ಪಡುತ್ತಿದೆ. ಈ ಅಗ್ನಿ ತತ್ತ್ವಕ್ಕೆ ಯಾವ ಪದಾರ್ಥವನ್ನಾದರೂ ಭಸ್ಮೀಪಟಲ ಮಾಡುವ ಶಕ್ತಿ ಇದೆ. ಈ ಅಗ್ನಿ ಪ್ರಕೃತಿ ಜನಿತ ಶರೀರದಲ್ಲಿನ ಗ್ರಂಥಿಗಳಲ್ಲಿ ಹುಟ್ಟಿದೆ. ಈ ಗ್ರಂಥಿಗಳನ್ನು, ಅದರ ರಸವನ್ನು ಅದರಲ್ಲಿ ಏರ್ಪಡುವ ಶಕ್ತಿಯನ್ನು ಅದರ ಪ್ರಕ್ರಿಯೆಯಾದ ದ್ರವ್ಯಯಜ್ಞ ಪ್ರತ್ಯಕ್ಷವಾಗಿ ಕಾಣಿಸದಿದ್ದರೂ ಎಲ್ಲರ ಶರೀರದಲ್ಲಿ ನಡೆಯುತ್ತಿದೆ. ಜೀರ್ಣಾಶಯದಲ್ಲಿ ನಡೆಯುವ ಈ ಯಜ್ಞಕ್ಕೆ ನಿತ್ಯ ವಸ್ತುಗಳು ಅಗತ್ಯ. ಉಪ್ಪು, ಹುಣಿಸೆಹಣ್ಣು, ಮೆಣಿಸಿನಕಾಯಿ, ತೊಗರಿಬೇಳೆ, ಜೀರಿಗೆ, ಸಾಸುವೆ, ಕರಿಬೇವು ಮೊದಲಾದ ವಸ್ತುಗಳೆಲ್ಲಾ ಅಗತ್ಯ. ಆ ವಸ್ತುಗಳು ಬೇಕೆಂದರೆ ಹಣಬೇಕು. ಹಣ ಬೇಕೆಂದರೆ ಕೆಲಸಗಳು ಮಾಡಬೇಕು. ಕೆಲಸಗಳು ಮಾಡುವುದರಿಂದ ಹೊಸ ಕರ್ಮಬರುತ್ತದೆ. ಅದನ್ನು ಅನುಭವಿಸುವುದಕ್ಕೆ ಹುಟ್ಟಬೇಕು. ಹುಟ್ಟಿದವನು ಮತ್ತೆ ಹೊಸ ಕರ್ಮ ತಂದುಕೊಳ್ಳುವುದು ಅದನ್ನು ಅನುಭವಿಸುವುದಕ್ಕೆ ಹುಟ್ಟುವುದು ನೋಡಿದರೆ ಇದೊಂದು ಚಕ್ರದಂತೆ ತಯಾರಾಗಿದೆ. ಈ ಸಾವು ಹುಟ್ಟಗಳ ಚಕ್ರದಲ್ಲಿ ಎಷ್ಟೋ ಯುಗಗಳಿಂದ ಸಿಲುಕಿಕೊಂಡ ಜೀವಾತ್ಮ ಹೊರಬೀಳಬೇಕೆಂದರೆ ಒಂದೇ ಮಾರ್ಗವಿದೆ. ಅದೇ ಜ್ಞಾನಯಜ್ಞ, ದ್ರವ್ಯಯಜ್ಞದ ಮೂಲಕ ಜೀವಾತ್ಮ ಕರ್ಮಚಕ್ರದಲ್ಲಿ ಸಿಲುಕಿಕೊಂಡರೆ, ಅದರಿಂದ ತಪ್ಪಿಸುವ ಸಾಮರ್ಥ್ಯ ಇರುವುದು ಜ್ಞಾನಯಜ್ಞಕ್ಕೆ. ಆದ್ದರಿಂದ ದ್ರವ್ಯಯಜ್ಞಕ್ಕಿಂತ ಜ್ಞಾನಯಜ್ಞ ಶ್ರೇಷ್ಟವಾದುದೆಂದು ಭಗವಂತನು ಹೇಳಿದ್ದಾನೆ.

ಜ್ಞಾನಯಜ್ಞ ಎಲ್ಲರೂ ಮಾಡಲಾರರು. ಅದನ್ನು ಮಾಡುವವರು ಕರ್ಮಯೋಗಿಗಳು ಬ್ರಹ್ಮಯೋಗಿಗಳು ಮಾತ್ರವೇ. ಎರಡು ರೀತಿಯ ಯೋಗಿಗಳ ಶರೀರದಲ್ಲಿ ನಡೆಯುವ ಜ್ಞಾನಯಜ್ಞ ಅವರ ತಲೆಗಳಲ್ಲಿ ನಡೆಯುತ್ತಿದೆ. ದ್ರವ್ಯಯಜ್ಞದ ಸ್ಥಾನ ಜೀರ್ಣಾಶಯವಾದರೆ ಜ್ಞಾನಯಜ್ಞ ವೇದಿಕೆ ಶರೀರದಲ್ಲಿ ಶಿರಸ್ಸೆಂದು ತಿಳಿಯಬೇಕು.

ಯೋಗಿಗಳ ಶಿರಸ್ಸಿನಲ್ಲಿ ಜ್ಞಾನಾಗ್ನಿ ಇರುತ್ತದೆಂದು ಇದಕ್ಕೂ ಮೊದಲೇ ತಿಳಿದುಕೊಂಡಿದ್ದೇವೆ. ಜ್ಞಾನಾಗ್ನಿಯಲ್ಲಿ ಅವರವರ ಕರ್ಮಗಳು ಸುಟ್ಟುಹೋಗುತ್ತಿರುತ್ತವೆ. ಈ ವಿಧಾನಕ್ಕೆ **'ಜ್ಞಾನಯಜ್ಞ'** ಎಂದು ಗೀತೆಯಲ್ಲಿ ಹೆಸರು ಇಡಲಾಗಿದೆ, ದ್ರವ್ಯಯಜ್ಞದಲ್ಲಿ ಸಂಪಾದಿಸಿಕೊಂಡ ಕರ್ಮಗಳೆಲ್ಲ ಜ್ಞಾನಯಜ್ಞದಲ್ಲಿ ಸುಟ್ಟು ಹೋಗುತ್ತವೆ. ಕರ್ಮಗಳು ಸುಟ್ಟು ಹೋಗುವುದರಿಂದ ಜೀವಾತ್ಮ ಹುಟ್ಟುವುದು ಇಲ್ಲದಂತಾಗಿ ಮೋಕ್ಷ ಹೊಂದುತ್ತಾನೆ. **'ಜ್ಞಾನಾಗ್ನಿ ಸರ್ವ ಕರ್ಮಾಣಿ ಭಸ್ಮಸಾತ್'** ಎನ್ನುವ ಮಾತಿನ ಪ್ರಕಾರ ಕರ್ಮಗಳೆಲ್ಲಾ ನಾಶವಾಗುವ ಈ ಯಜ್ಞವನ್ನು ಜ್ಞಾನವಿಲ್ಲದ ಮನುಷ್ಯರು ಮಾಡಲಾರದೇ ಹೋಗುತ್ತಿದ್ದಾರೆ, ಅವರು ಪ್ರತಿ ದಿನ ದ್ರವ್ಯಯಜ್ಞಕ್ಕೋಸ್ಕರ ಕರ್ಮಗಳು ಸಂಪಾದಿಸಿಕೊಂಡು ಅವುಗಳನ್ನು ಹೊರುತ್ತಿದ್ದಾರೆ. ಅವರು ಯಜ್ಞಕ್ಕೋಸ್ಕರ ಮಾತ್ರವೇ ಕರ್ಮಗಳು ಸಂಪಾದಿಸಿಕೊಳ್ಳುವುದಲ್ಲದೆ, ಅವರ ನಂತರದ ತಲೆಮಾರಿನವರ ಯಜ್ಞಗಳಿಗೂ ಸಹ ಈಗಲೇ ಸಂಪಾದಿಸಬೇಕೆಂಬ ಕೋರಿಕೆ ಗಳಿಂದ ವಿಪರೀತ ಕೆಲಸಗಳು ಮಾಡಿ, ವಿಪರೀತವಾಗಿ ಕರ್ಮಗಳನ್ನು ಮೂಟೆ ಕಟ್ಟಿಕೊಳ್ಳುತ್ತಿದ್ದಾರೆ.

ಜ್ಞಾನ ತಿಳಿದವರು ಜ್ಞಾನಯಜ್ಞವನ್ನು ಮಾಡಿ ಅವರ ಕರ್ಮಗಳು ಇಲ್ಲದಂತೆ ಮಾಡಿಕೊಳ್ಳಬೇಕಾಗಿರುವಾಗ, ಕೆಲವರು ಜ್ಞಾನಿಗಳೂ ಸಹ ಪ್ರಕೃತಿ ಮಾಯೆಯಲ್ಲಿ ಬಿದ್ದು ಶರೀರಯಜ್ಞ ಯಾವುದೋ ತಿಳಿಯದೆ, ಬಾಹ್ಯ ಯಜ್ಞಗಳು ಮಾಡುತ್ತಾ ಸ್ವಾಮಿಗಳೆಂದು ಹೆಸರಿಟ್ಟುಕೊಂಡು, ಪ್ರಜೆಗಳನ್ನೂ ಸಹ ಬಾಹ್ಯಯಜ್ಞಗಳ ಕಡೆಯೇ ಮರಳಿಸುವುದು ಮತ್ತಷ್ಟು ಆಶ್ಚರ್ಯ. ಜ್ಞಾನ ವಿಷಯದಲ್ಲಿ ಹಿರಿಯರು ಎಷ್ಟು ಹೇಳಿದರೂ, ಕುರುಡರಂತೆ ನಂಬದೆ ಶಾಸ್ತ್ರಬದ್ಧವಾಗಿ ಯೋಚನೆಮಾಡಿ ಸರಿಯಾದ ದಾರಿ ಆಯ್ಕೆ ಮಾಡಿ, ಭಗವಂತನು ಹೇಳಿದ ವಿಷಯಗಳು ಅರ್ಥವಾಗುತ್ತವೆ. ಕರ್ಮಗಳು ಇಲ್ಲದಂತೆ ಮಾಡಿ ಮೋಕ್ಷ ಹೊಂದುವಂತೆ ಮಾಡುವ ಜ್ಞಾನಯಜ್ಞವನ್ನು ಕುರಿತು ತಿಳಿಯಬೇಕೆಂದರೂ, ಅದನ್ನು ಆಚರಿಸಿ ಮಾಡಬೇಕೆಂದರು, ತಪ್ಪದೇ ಜ್ಞಾನಯಜ್ಞ ತಿಳಿದ ಗುರುಗಳು ಅಗತ್ಯ.

ಇಷ್ಟು ಕೇಳಿದ ನಂತರ ಕೆಲವರಿಗೆ ಸ್ವಲ್ಪ ಸಂಶಯ ಬಂದು ಈ ವಿಧವಾಗಿ "ದ್ರವ್ಯಯಜ್ಞ ಎಂದರೆ! ದ್ರವ್ಯಗಳನ್ನು ಸುಟ್ಟುಹಾಕುವ ಕಾರ್ಯ ಎನ್ನುವ ಅರ್ಥದ ಪ್ರಕಾರ ಜ್ಞಾನಯಜ್ಞ ಎಂದರೆ! ಜ್ಞಾನವನ್ನು ಸುಟ್ಟುಹಾಕುವ ಕಾರ್ಯವೆಂದು ಭಾವ ಬರುತ್ತದೆ ಅಲ್ಲವೆ! ಯಜ್ಞ ಎಂದರೆ ಇಲ್ಲದಂತೆ ಮಾಡುವುದು ಎಂದಾಗ, ಜ್ಞಾನಯಜ್ಞವೊಂದರ ಕಾರ್ಯಗಳಲ್ಲಿ ಜ್ಞಾನವನ್ನು ಇಲ್ಲದಂತೆ ಮಾಡುವುದೇ ಮುಖ್ಯ ಕಾರ್ಯವಾಗುತ್ತದಲ್ಲವೆ! ಜ್ಞಾನವನ್ನು ಸಂಪಾದಿಸಿಕೊ ಎಂದು ಹೇಳಿದ ನೀವೇ ಜ್ಞಾನವನ್ನು ಇಲ್ಲದಂತೆ ಮಾಡಿಕೊ ಎಂದು ಹೇಳುವುದು ಒಳ್ಳೆಯದಾ" ಎಂದು ಕೆಲವರು ಕೇಳಬಹುದು. ಅದಕ್ಕೆ ನಮ್ಮ

ಉತ್ತರ ಏನೆಂದರೆ! ದ್ರವ್ಯಯಜ್ಞ ಎಂದರೆ ದ್ರವ್ಯಗಳನ್ನು ಸುಡುವುದೆಂಬುವುದು ವಾಸ್ತವವೇ. ಹಾಗೆಯೇ ಜ್ಞಾನಯಜ್ಞ ಎಂದರೆ ಜ್ಞಾನವನ್ನು ಸುಡುವುದು ವಾಸ್ತವವೇ. ಇಲ್ಲಿ ಜ್ಞಾನ ಎನ್ನುತ್ತಲೇ ಯಾವ ಜ್ಞಾನ ಎಂದು ಯೋಚಿಸಬೇಕಾದ ಅವಶ್ಯಕತೆ ಇದೆ. ಜ್ಞಾನ ಎರಡು ವಿಧಗಳಾಗಿವೆ. ಒಂದು ಪ್ರಪಂಚ ಜ್ಞಾನ, ಎರಡು ಪರಮಾತ್ಮ ಜ್ಞಾನ. ಇಲ್ಲಿ ಸುಟ್ಟುಹಾಕು ಎನ್ನುವುದು ಪ್ರಪಂಚಜ್ಞಾನವನ್ನು, ಆದರೆ ಪರಮಾತ್ಮ ಜ್ಞಾನವನ್ನು ಅಲ್ಲವೆಂದು ಗುರುತಿಸಿಕೊಳ್ಳಬೇಕು. ಪ್ರಪಂಚ ಜ್ಞಾನ ಐದು ವಿಧಗಳಾಗಿವೆ. ಪಂಚ ಜ್ಞಾನೇಂದ್ರಿಯಗಳ ಮೂಲಕ ಒಳಗಿನ ಮನಸ್ಸಿಗೆ ಸೇರಿಸುವ ಐದು ವಿಷಯ ಜ್ಞಾನಗಳನ್ನು ಪ್ರಪಂಚಜ್ಞಾನ ಎನ್ನುತ್ತೇವೆ. ಕಣ್ಣಿನ ಮೂಲಕ ಕಾಣಿಸುವ ದೃಶ್ಯವೊಂದರ ವಿಷಯವೆಲ್ಲವನ್ನೂ ದೃಶ್ಯಜ್ಞಾನ ಎನ್ನುತ್ತೇವೆ. ಅದೇ ವಿಧವಾಗಿ ಶಬ್ಧ ವಿಷಯವನ್ನು, ರುಚಿ ವಿಷಯವನ್ನು, ವಾಸನೆ ವಿಷಯವನ್ನು, ಸ್ಪರ್ಶ ವಿಷಯವನ್ನು ಪ್ರಪಂಚ ಜ್ಞಾನ ಎನ್ನುತ್ತಿದ್ದೇವೆ. ಈ ವಿಷಯಗಳನ್ನು ಒಳಗೆ ತಿಳಿಸುವ ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮಗಳನ್ನು ಜ್ಞಾನೇಂದ್ರಿಯಗಳು ಎನ್ನುತ್ತಿದ್ದೇವೆ. ಇವು ಐದು ಪ್ರಪಂಚ ಜ್ಞಾನೇಂದ್ರಿಯಗಳು ಮಾತ್ರವೇ, ಶರೀರಕ್ಕಿರುವ ಐದು ಜ್ಞಾನೇಂದ್ರಿಯಗಳ ಮೂಲಕ ಬರುವ ವಿಷಯ ಜ್ಞಾನದಿಂದಲೇ ಪಾಪಪುಣ್ಯ ಕರ್ಮಗಳು ಬರುತ್ತಿವೆ. ಐದು ಜ್ಞಾನೇಂದ್ರಿಯಗಳ ಮೂಲಕ ಸಂಭವಿಸುವ ಪಾಪಪುಣ್ಯಗಳನ್ನು ಅಂಟದಂತೆ ಮಾಡಿಕೊಳ್ಳುವುದನ್ನು ಜ್ಞಾನಯಜ್ಞ ಎಂದಿದ್ದಾರೆ. ದ್ರವ್ಯಯಜ್ಞದಲ್ಲಿ ನಾಲ್ಕು ದ್ರವ್ಯಗಳು ಸುಟ್ಟುಹಾಕುತ್ತಿರುವಾಗ, ಜ್ಞಾನಯಜ್ಞದಲ್ಲಿ ಐದು ಜ್ಞಾನಗಳು ಸುಡಲ್ಪಡುತ್ತವೆ. 1) ಹಿಟ್ಟಿನ ಪದಾರ್ಥಗಳು, 2) ಕೊಬ್ಬಿನ ಪದಾರ್ಥಗಳು, 3) ಖನಿಜಲವಣಗಳು 4) ಮಾಂಸದ ಪದಾರ್ಥಗಳು ಎನ್ನುವ ನಾಲ್ಕು ದ್ರವ್ಯಗಳು ಜಠರಾಗ್ನಿಯುಲ್ಲಿ ಸುಟ್ಟುಹೋಗುವುದನ್ನು ದ್ರವ್ಯಯಜ್ಞವೆಂದು, ಶಬ್ಧ, ರೂಪ, ರಸ, ಗಂದ, ಸ್ಪರ್ಶ ಎನ್ನುವ ಐದು ಜ್ಞಾನಗಳು ದೈವಜ್ಞಾನವೆಂಬ ಅಗ್ನಿಯಲ್ಲಿ ಸುಡುವುದನ್ನು ಜ್ಞಾನಯಜ್ಞ ಎನ್ನುತ್ತಿದ್ದೇವೆ. ಇದರಿಂದ ನಾಲ್ಕು ಆಹಾರ ದ್ರವ್ಯಗಳನ್ನು ಸುಡುವುದು ದ್ರವ್ಯಯಜ್ಞ, ಐದು ಪ್ರಪಂಚ ಜ್ಞಾನಗಳನ್ನು ಸುಟ್ಟುಹಾಕುವುದು ಜ್ಞಾನಯಜ್ಞವೆಂದು ತಿಳಿಯುತ್ತಿದೆ. ದ್ರವ್ಯಯಜ್ಞಕ್ಕೂ ಜ್ಞಾನಯಜ್ಞಕ್ಕೂ ಇರುವ ವ್ಯತ್ಯಾಸವನ್ನು ಈಗ ಗಮನಿಸೋಣ.

| <u>ದ್ರವ್ಯಯಜ್ಞ</u> | <u>ಜ್ಞಾನಯಜ್ಞ</u> |
|---|---|
| 1) ದ್ರವ್ಯಯಜ್ಞ ಹೊಟ್ಟೆಯಲ್ಲಿ ನಡೆಯುತ್ತದೆ. | (1) ಜ್ಞಾನ ಯಜ್ಞವು ತಲೆಯಲ್ಲಿ ನಡೆಯುತ್ತದೆ. |

| | | | |
|---|---|---|---|
| 2) | ಇದರಲ್ಲಿ ಅನೇಕ ವಿಧಗಳಾದ ಆಹಾರಪದಾರ್ಥಗಳು ಸುಟ್ಟು ಹೋಗುತ್ತವೆ. | (2) | ಇದರಲ್ಲಿ ಅನೇಕ ವಿಧಗಳಾದ ಪಾಪ ಪುಣ್ಯಗಳು ಸುಟ್ಟುಹೋಗುತ್ತವೆ. |
| 3) | ಇದನ್ನು ಎಲ್ಲರೂ ಆಚರಿಸುತ್ತಾರೆ. | (3) | ಇದನ್ನು ಯೋಗಿಗಳು ಮಾತ್ರವೇ ಆಚರಿಸುತ್ತಾರೆ. |
| 4) | ಪ್ರತಿ ದಿನವು ವಿಧಿಯಾಗಿ ತಪ್ಪದೆ ಮಾಡಬೇಕಾಗಿ ಇರುತ್ತದೆ | (4) | ಜ್ಞಾನಯಜ್ಞವು ವಿಧಿಯಾಗಿ ನಡೆಯುವುದು ಅಲ್ಲ. ಪ್ರಯತ್ನ ಮಾಡಿದರೆ ನಡೆಯುತ್ತದೆ. |
| 5) | ಇದರಲ್ಲಿ ಪಾಪ ಪುಣ್ಯಗಳು ಬರುತ್ತವೆ. | (5) | ಇದರಲ್ಲಿ ಪಾಪ ಪುಣ್ಯಗಳು ಹೋಗುತ್ತವೆ. |
| 6) | ಇದು ಹೊರಗೆ ಕಾಣಿಸುವುದು. | (6) | ಇದು ಹೊರಗೆ ಕಾಣಿಸುವುದಿಲ್ಲ. |
| 7) | ಇದರಲ್ಲಿರುವ ಅಗ್ನಿ ಜಠರ ರಸಗಳಿಂದ ಉತ್ಪತ್ತಿಯಾಗುವ ಜಠರಾಗ್ನಿ. | (7) | ಇದರಲ್ಲಿರುವ ಅಗ್ನಿ ಜ್ಞಾನದಿಂದ ಉತ್ಪತ್ತಿಯಾಗುವ ಜ್ಞಾನಾಗ್ನಿ. |
| 8) | ಇದರ ಅಗ್ನಿ ಗ್ರಂಥಿರಸಗಳಿಂದ ಹುಟ್ಟುತ್ತದೆ. | (8) | ಇದರ ಅಗ್ನಿ ಗುರುವಿನ ಉಪದೇಶದಿಂದ ಹುಟ್ಟುತ್ತದೆ. |
| 9) | ದ್ರವ್ಯಯಜ್ಞವು ಆತ್ಮಕ್ಕೆ ಉಪಯೋಗ ಪಡುತ್ತಿದೆ. | (9) | ಜ್ಞಾನಯಜ್ಞವು ಜೀವಾತ್ಮಕ್ಕೆ ಉಪಯೋಗಪಡುತ್ತಿದೆ. |
| 10) | ಇದರಲ್ಲಿ ನಾಲ್ಕು ಪೋಷಕಗಳು ಆಹುತಿ ಆಗುತ್ತಿವೆ. | (10) | ಇದರಲ್ಲಿ ಐದು ಜ್ಞಾನಗಳು ಆಹುತಿ ಆಗುತ್ತಿವೆ. |

**3) ಶ್ಲೋ॥ 34 : ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।**
**ಉಪದೇಕ್ಷ್ಯನ್ತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವ ದರ್ಶಿನಃ॥**
**(ಕರ್ಮಯೋಗ, ಬ್ರಹ್ಮಯೋಗ)**

**ಭಾವಾರ್ಥ:** ಆತ್ಮವನ್ನು ತಿಳಿದಂತಹ ಗುರುಗಳನ್ನು ಸೇರಿ ವಿನಯವಿಧೇಯತೆಗಳಿಂದ ನಮಸ್ಕರಿಸಿ ಸೇವೆಗಳು ಮಾಡುತ್ತಾ, ಸಮಯಾನುಕೂಲವಾಗಿ ಪ್ರಶ್ನೆಗಳು ಕೇಳಿದರೆ ಜ್ಞಾನವನ್ನು ಉಪದೇಶಿಸಿ, ಕರ್ಮಗಳು ನಾಶವಾಗುವ ಜ್ಞಾನಮಾರ್ಗವನ್ನು ತೋರಿಸುತ್ತಾರೆ.

**ವಿವರ :** ಎಲ್ಲಿ ತಪ್ಪು ಮಾಡಿದರೂ ಪರವಾಗಿಲ್ಲ, ಆದರೆ ಗುರುವನ್ನು ಆಯ್ಕೆ ಮಾಡಿಕೊಳ್ಳುವುದರಲ್ಲಿ ತಪ್ಪು ಮಾಡಬಾರದು. ಜೀವನವೆಲ್ಲಾ ಅವರನ್ನು ಅನುಸರಿಸಿ ನೀನು ನಡೆದುಕೊಳ್ಳುವ ವಿಧಾನ ಇರುತ್ತದೆ. ಆದ್ದರಿಂದ ಈ ಶ್ಲೋಕದಲ್ಲಿ ಭಗವಂತನು ಸ್ವತಃವಾಗಿ ತಾನೇ ಜೋಕ್ಯ ಮಾಡಿಕೊಂಡು ಗುರುಗಳ ವಿಷಯ ಹೇಳಿದ್ದಾನೆ. ಶ್ಲೋಕದಲ್ಲಿ ಆತನ ಮೊದಲ ಮಾತು **'ತದ್ವಿದ್ಧಿ'** ಎಂದಿದ್ದಾನೆ. ಅದಕ್ಕೆ ತತ್ತ್ವವನ್ನು ತಿಳಿದವರೆಂದು ಅರ್ಥ. ತತ್ತ್ವ ಎಂದರೆ ಶರೀರದಲ್ಲಿನ ಎರಡನೇ ಆತ್ಮ. ಆತ್ಮವನ್ನು ತಿಳಿದವರು ಮಾತ್ರವೇ ಗುರುಗಳೆಂದು ಈ ಮಾತಿನಲ್ಲಿನ ಅಂತರಾರ್ಥ. ಗುರುಗಳು ಜನ್ಮರಾಹಿತ್ಯವನ್ನು ಮಾಡುವವರಾಗಿರಬೇಕು. ಜನ್ಮಗಳಿಲ್ಲದಂತೆ ಹೋಗಬೇಕೆಂದರೆ ಕರ್ಮಗಳು ಇಲ್ಲದಂತೆ ಹೋಗಬೇಕು. ಕರ್ಮಗಳು ಇಲ್ಲದಂತೆ ಹೋಗಬೇಕೆಂದರೆ ಅವು ಸುಟ್ಟುಹೋಗಬೇಕು. ಅವು ಸುಟ್ಟುಹೋಗಬೇಕೆಂದರೆ ಶರೀರ ಅಂತರ್ಮುಖ ಯಜ್ಞ ಮಾಡಬೇಕು. ಶರೀರದೊಳಗಿನ ಯಜ್ಞ ಮಾಡಬೇಕೆಂದರೆ ಅವುಗಳ ವಿವರವನ್ನು ಹೇಳುವವರಿರಬೇಕು. ಯಜ್ಞಗಳನ್ನು ಕುರಿತು ಹೇಳುವವರು ಯಜ್ಞಗಳ ವಿಷಯವನ್ನು ಪೂರ್ತಿ ತಿಳಿದವರಾಗಿರಬೇಕು. ಹಾಗೆ ತಿಳಿದವರು ಸಿಗಬೇಕೆಂದರೆ ಅವರಿಗೋಸ್ಕರ ಹುಡುಕಬೇಕು. ಹುಡುಕುವುದರಲ್ಲಿ ದೊರೆತರೆ, ಅವರು ತಿಳಿದವರೋ ಅಲ್ಲವೋ ತಿಳಿಯಬೇಕೆಂದರೆ ನಮಗೂ ಅಷ್ಟೋ ಇಷ್ಟೋ ಜ್ಞಾನವಿರಬೇಕು.

ಗುರುವಿಲ್ಲದೆ ಜ್ಞಾನ ಹೇಗೆ ಬರುತ್ತದೆಂದುಕೊಳ್ಳುವ ಕೆಲಸವಿಲ್ಲ. ಪುಸ್ತಕಗಳ ಮೂಲಕ ಇಲ್ಲವೇ ತನ್ನಲ್ಲಿ ತಾನು ಆಲೋಚಿಸುವುದರಿಂದ, ಗುರುವನ್ನು ಗುರುತಿಸುವುದಕ್ಕೆ ಬೇಕಾದ ಜ್ಞಾನ ಲಭಿಸುತ್ತದೆ. ಮುಖ್ಯವಾಗಿ ತಿಳಿಯಬೇಕಾಗಿರುವುದು ಏನೆಂದರೆ **ಗುರು ಇಲ್ಲದಿದ್ದರೂ ಜ್ಞಾನ ಲಭಿಸುತ್ತದೆ, ಆದರೆ ಗುರುವಿಲ್ಲದೆ ಮೋಕ್ಷ ಬರುವುದಿಲ್ಲ**. ಕರ್ಮಗಳ ನಾಶ ಮಾಡುವ ವಿಧಾನ ಗುರುಗಳ ಮೂಲಕವೇ ತಿಳಿಯಬೇಕು. ಕರ್ಮಗಳು ಹೋಗದೆ ಮೋಕ್ಷ ಬರುವುದಿಲ್ಲ, ಆದ ಕಾರಣ ಗುರು ತಪ್ಪದೇ ಅಗತ್ಯ. ಗುರುಗಳ ವಿಷಯದಲ್ಲಿ ತಪ್ಪದೇ ಎಲ್ಲರೂ ಆಲೋಚಿಸಬೇಕು. ಏನೆಂದು ಆಲೋಚಿಸಬೇಕೆಂದುಕೊಳ್ಳಬಾರದು. ನಿನ್ನ ಸಂಶಯಗಳು ಎಲ್ಲಿ ತೀರುತ್ತವೋ ಅಲ್ಲಿಯೇ ಗುರು ಇದ್ದಾನೆಂದು ತಿಳಿಯಬೇಕು. ನಿನಗೆ ಆಲೋಚನೆಗಳು ಬರಲಿಲ್ಲವೆಂದುಕೋ, ನಾವು ಕೇಳುವ ಪ್ರಶ್ನೆಗಳಿಗೆ ಉತ್ತರ ಇದೆಯೊ ಇಲ್ಲವೊ ನೋಡಿಕೊ.

**ನಿನಗೆ ಗುರು ಇದ್ದಾನಾ?** ಇದ್ದರೆ ಪ್ರಕೃತಿಯಿಂದ ತುಂಬಿರುವ ಬೋಧನೆಯಾ? ಅಥವಾ ಪರಮಾತ್ಮಕ್ಕೆ ಸಂಬಂಧಿಸಿದ ಬೋಧನೆ ಮಾಡುತ್ತಿದ್ದಾನಾ! ಯಾವುದು? ಕರ್ಮಗಳು ಉಂಟುಮಾಡುವ ಯಜ್ಞವೊಂದರ ಕೆಲಸಗಳು ಹೇಳಿದ್ದಾನಾ? ಕರ್ಮಗಳು ತೊಲಗಿ ಹೋಗುವ ಜ್ಞಾನಯಜ್ಞವನ್ನು ಕುರಿತಾದ ಕೆಲಸಗಳು ಹೇಳಿದ್ದಾನಾ? ಇವು ಬೋಧನೆಯನ್ನು ಕುರಿತಾದ ಪ್ರಶ್ನೆಗಳು, ಇನ್ನು ಉಪದೇಶವನ್ನು ಕುರಿತಾದ ಪ್ರಶ್ನೆಗಳು. ಏನೆಂದರೆ! ಉಪದೇಶವನ್ನು ಹೊಂದಿದ್ದೀಯಾ! ಇಲ್ಲವಾ? ಆ ಉಪದೇಶ ಪ್ರಕೃತಿ ಸಂಬಂಧ ದೃಶ್ಯನಾ, ಶಬ್ಧನಾ? ಹೀಗೆ ಅನೇಕ ಪ್ರಶ್ನೆಗಳು ಹಾಕಿಕೊಂಡು ಅವುಗಳಿಗೆ ಉತ್ತರ ಸಿಕ್ಕರೆ ಪರವಾಗಿಲ್ಲ. ಉತ್ತರ ಸಿಗದಿದ್ದರೇ ಸಿಗುವವರೆಗೂ ಗುರುವಿಗಾಗಿ ಅನ್ವೇಷಣೆ ಮಾಡಬೇಕು.

***'ಉಪದೇಕ್ಷ್ಯಂತಿತೇ ಜ್ಞಾನಂ'*** ಎನ್ನುವ ವಾಕ್ಯದಿಂದ ಗುರುಗಳು ಏನು ಉಪದೇಶ ಮಾಡುತ್ತಾರೋ ತಿಳಿದುಕೊಳ್ಳೋಣ. ಉಪದೇಶ ಪ್ರಕೃತಿ ಸಂಬಂಧವಾಗದಂತಿರಬೇಕು. ಕರ್ಮಗಳನ್ನು ಸುಟ್ಟುಕೊಳ್ಳುವುದಕ್ಕೆ ಅನುಕೂಲವಾಗಿರಬೇಕು. ಪಕ್ಕದ ಮನೆಯಲ್ಲಿ ಒಲೆ ಇದೆ. ಅದರಲ್ಲಿ ಅಗ್ನಿಯೂ ಇದೆ. ಕಟ್ಟಿಗೆಗಳನ್ನು ಸುಡುವುದರಿಂದ ಏರ್ಪಟ್ಟಿರುವ ಅಗ್ನಿಯಿಂದ ಪಕ್ಕದ ಮನೆಯವರು ಅಡಿಗೆ ಮಾಡಿಕೊಂಡು ತಿಂದು ರುಚಿ ಅನುಭವಿಸಿ ಹಸಿವು ನೀಗಿಸಿಕೊಳ್ಳುತ್ತಿದ್ದಾರೆ. ನಾವು ಆ ಕೆಲಸ ಮಾಡಬೇಕು. ಅಡಿಗೆಗೆ ಪಾತ್ರೆಗಳು, ಅಡಿಗೆ ಸಾಮಾಗ್ರಿಗಳೆಲ್ಲ ಕೈಗೂಡಿಸಿಕೊಂಡಿದ್ದೇವೆ. ಒಲೆಯೂ ಇದೆ. ಅಡಿಗೆ ತಯಾರಾಗುವುದಕ್ಕೆ ಇಲ್ಲದಿರುವುದು ಅಗ್ನಿಯೇ. ಆ ಅಗ್ನಿಯನ್ನು ಪಕ್ಕದ ಮನೆಯವನನ್ನು ಕೇಳಿ, ಅವನು ದಾನ ಮಾಡಿದ ಕೆಂಡವನ್ನು ನಮ್ಮ ಒಲೆಯಲ್ಲಿ ಹಾಕಿ, ಸ್ವಲ್ಪ ಸಮಯ ಊದಿದರೆ ನಮ್ಮ ಒಲೆಯಲ್ಲಿನ ಕಟ್ಟಿಗೆಗಳು ಒತ್ತಿಕೊಳ್ಳುತ್ತವೆ. ಕಟ್ಟಿಗೆಗಳು ಸುಟ್ಟುಹೋಗುತ್ತವೆ. ಫಲಿತವು ಅಡಿಗೆ ತಯಾರಾಗಿ ಹಸಿವು ನೀಗುತ್ತದೆ. ಈ ವಿಧವಾಗಿಯೇ ಜನ್ಮಬಂಧನವೆಂಬ ಹಸಿವು ಹೋಗಬೇಕೆಂದರೆ, ಶರೀರವೆಂಬ ಒಲೆಯಲ್ಲಿ ಕರ್ಮಗಳೆಂಬ ಕಟ್ಟಿಗೆಗಳನ್ನು, ಜ್ಞಾನಾಗ್ನಿ ಎಂಬ ಅಗ್ನಿಯಿಂದ ಉರಿಸಿದಾಗ, ಅದರ ಫಲಿತವಾಗಿ ಮೋಕ್ಷವೆಂಬ ಅಡಿಗೆ ತಯಾರಾಗುತ್ತದೆ. ನಮ್ಮ ಹತ್ತಿರ ಶರೀರವೆಂಬ ಒಲೆ, ಕರ್ಮಗಳೆಂಬ ಕಟ್ಟಿಗೆಗಳು, ಸಾಧನೆ ಎಂಬ ಸಾಮಾಗ್ರಿ ಇದ್ದರೂ ಗುರುಗಳ ಶರೀರದಲ್ಲಿರುವ ಜ್ಞಾನಾಗ್ನಿಯನ್ನು ರವೆಯಷ್ಟು(ಸ್ವಲ್ಪ) ಅವರಿಂದ ಪಡೆದುಕೊಳ್ಳಬೇಕು. ಮೊದಲು ಗುರು ಹತ್ತಿರದಿಂದ ಸ್ವಲ್ಪ ಕೆಂಡವನ್ನು ಪಡೆದು, ಅದರ ಮೂಲಕ ಪ್ರಯತ್ನ ಪೂರ್ವಕವಾಗಿ ಅಂದರೆ ಯೋಗಸಾಧನೆ ಮೂಲಕ ಕರ್ಮಗಳನ್ನು ಸುಡಬೇಕು.

ಮೊದಲು ಗುರು ಹತ್ತಿರದಿಂದ ಅಗ್ನಿಯನ್ನು ಹೊಂದುವುದೇ ಉಪದೇಶ ಎನ್ನುತ್ತಾರೆ. ಜ್ಞಾನಾಗ್ನಿ ಹಸ್ತದ ಮೂಲಕ, ಪಾದದಮೂಲಕ, ದೃಷ್ಟಿಯ ಮೂಲಕ ಗುರುಗಳಿಂದ ಹೊರಗೆ ಬರುತ್ತದೆಂದು ತಿಳಿದುಕೊಂಡಿದ್ದೇವೆ. ಆದ್ದರಿಂದ ಕಳೆದ ಕಾಲದಲ್ಲಿ ಯೇಸುಪ್ರಭುವಿಗೆ ಆತನ ಗುರುವು ಯೋಹಾನನು ತನ್ನ ಹಸ್ತದ ಮೂಖಾಂತರ ಜ್ಞಾನಾಗ್ನಿಯನ್ನು ದಾನ ಮಾಡಿದಂತೆ ಇದೆ. ಹಾಗೆಯೇ ವೇಮನ ತನ್ನ ಗುರುವಿನ ಮೂಲಕ ಹಸ್ತದಿಂದಲೇ ಜ್ಞಾನಾಗ್ನಿಯನ್ನು ಹೊಂದಿದ್ದಾನೆ. ಇನ್ನೂ ಎಷ್ಟೋಜನ ಗುರುಗಳು ಅವರ ಪಾದವನ್ನು ಶಿಷ್ಯನ ಶಿರಸ್ಸಿನ ಮೇಲಿಟ್ಟು ಜ್ಞಾನಾಗ್ನಿಯನ್ನು ದಾನ ಮಾಡಿದ್ದಾರೆ. ಹೀಗೆ ಉಪದೇಶವೊಂದರ ಆಧಾರಗಳು ಇವೆ. ಈ ಉಪದೇಶಗಳೆಲ್ಲವೂ ಪ್ರಕೃತಿಗೆ ಸಂಬಂಧಿಸಿರುವವಲ್ಲ.

ಈ ಶ್ಲೋಕದಲ್ಲಿ ಗುರುವಿನ ಹತ್ತಿರ ಶಿಷ್ಯನು ಹೇಗೆ ಇರಬೇಕೆಂಬ ವಿಷಯವೂ ಸಹ ಹೇಳಿದ್ದಾರೆ. ವಿಧೇಯತೆಯಿಂದ ನಮಸ್ಕರಿಸುವುದು, ಸಮಯಾನುಸಾರವಾಗಿ ಪ್ರಶ್ನೆಗಳು ಕೇಳುವುದು, ಸೇವೆಗಳು ಮಾಡುವುದು ಮೊದಲಾದವು ಇರಬೇಕೆಂದಿದ್ದಾರೆ. ಮನಸ್ಫೂರ್ತಿಯಾಗಿ ಸೇವೆಗಳು ಮಾಡಿ ಸದ್ಭಕ್ತಿಯಿಂದ ಪ್ರಶ್ನೆಗಳು ಕೇಳುವವರಿಗೆ ಫಲಿತವಿರುತ್ತದೆ. ಗೀತೆಯಲ್ಲಿ ಭಗವಂತನು ಹೇಳಿದಂತೆ ನಡೆದುಕೊಳ್ಳುತ್ತಿದ್ದರೆ ನಿಜಗುರುವೇ ಸಿಗುತ್ತಾನೆ.

**3) ಶ್ಲೋ॥ 35 : ಯಥ್ ಜ್ಞಾತ್ವಾನ ಪುನರ್ಮೋಹಮೇವಂ ಯಾಸ್ಯಸಿ ಪಾಂಡವ ।**
**ಯೇನ ಭೂತಾನ್ಯ ಶೇಷೇಣ ದ್ರಕ್ಷ್ಯ ಸ್ಯಾತ್ಮನ್ಯಥೋ ಮಯಿ ॥**
**(ಬ್ರಹ್ಮಯೋಗ)**

**ಭಾವಾರ್ಥ :** ಯಾವ ಜ್ಞಾನದಿಂದ ಮೋಹವು ಉಂಟಾಗುವುದಿಲ್ಲವೋ, ಯಾವ ಜ್ಞಾನದಿಂದ ಸಮಸ್ತ ಜೀವರಾಶಿಗಳಲ್ಲಿ ಆತ್ಮವನ್ನು, ಆತ್ಮದಲ್ಲಿ ಜೀವರಾಶಿಗಳಿದ್ದಂತೆ ತಿಳಿಯುತ್ತದೋ ಅಂತಹ ಜ್ಞಾನವನ್ನು ಪಡೆಯುತ್ತೀಯಾ.

**ವಿವರ :** ತತ್ತ್ವಜ್ಞರಾದ ಗುರುಗಳ ಹತ್ತಿರ ಜ್ಞಾನವನ್ನಾರ್ಜಿಸಿದರೆ, ಅಂತಹ ಜ್ಞಾನದಿಂದ ಸಾಧನಾಪರರಾಗಿ ತನ್ನಲ್ಲಿನ ಆತ್ಮ ದರ್ಶನವನ್ನು ಪಡೆಯುತ್ತಾರೆ. ಆತ್ಮ ವಿಷಯ ತಿಳಿದುಹೋದ ನಂತರ ಆತ್ಮವಿಲ್ಲದ ಜೀವರಾಶಿ ಇಲ್ಲವೆಂದು, ತನ್ನಲ್ಲಿರುವಂತೆ ಎಲ್ಲಾ ಜೀವರಾಶಿಗಳಲ್ಲಿಯೂ ಆತ್ಮ ಇದೆಯೆಂದು ಸುಲಭವಾಗಿ ತಿಳಿಯುತ್ತದೆ. ಶರೀರಗಳಲ್ಲಿ ಆತ್ಮ, ಆತ್ಮನಲ್ಲಿ ಶರೀರಗಳಿದ್ದಂತೆ

ತಿಳಿದುಹೋಗುತ್ತದೆ. ಗುರುಗಳ ಹತ್ತಿರ ಕರ್ಮಗಳು ತೊಲಗುವ ಜ್ಞಾನ ತಿಳಿದುಕೊಳ್ಳಿ ಎಂದು ಹೇಳಿದ್ದೇವಲ್ಲವೆ! ಹಾಗೆ ಗುರು ಕರ್ಮ ನಿರ್ಮೂಲನ ವಿಧಾನಗಳು ಎರಡನ್ನೂ ಬೋಧಿಸಿದ ಮೇಲೆ, ಅದರಲ್ಲಿ ಒಂದಾದ ಬ್ರಹ್ಮಯೋಗದಲ್ಲಿ ಆತ್ಮವನ್ನು ನೋಡಬಹುದು. ಕಣ್ಣಿನಿಂದ ಅಲ್ಲ ಜ್ಞಾನದೃಷ್ಟಿಗೆ ಆತ್ಮ ತಿಳಿಯುತ್ತದೆ. ಎರಡನೆಯದಾದ ಕರ್ಮಯೋಗದಲ್ಲಿ ಆತ್ಮದರ್ಶನ ಎನ್ನುವ ಮಾತೇ ಇರುವುದಿಲ್ಲ. ಕರ್ಮಯೋಗದಲ್ಲಿ ಸಾಧಾರಣವಾಗಿ ಕೆಲಸಗಳು ಮಾಡುವುದೇ ಹೊರತು ಯಾವ ಸಾಧನೆ ಇರುವುದಿಲ್ಲ. ಕರ್ಮಯೋಗದಲ್ಲಿ ಒಳಗಿನ ಸಾಧನೆ ಹೊರತು ಹೊರಗೆ ಕಾಣಿಸುವಂತೆ ಏನು ಇರುವುದಿಲ್ಲ. ಬ್ರಹ್ಮಯೋಗವು ಹೊರಗೆ ಕಾಣಿಸುವ ಸಾಧನೆಯಾಗಿರುತ್ತದೆ. ಆತ್ಮವನ್ನು ತಿಳಿಯುವುದು ಬ್ರಹ್ಮಯೋಗದಲ್ಲಿಯೇ ಸಾಧ್ಯವೆಂದು ತಿಳಿಯಬೇಕು.

**(3) ಶ್ಲೋ॥ 36 : ಅಪಿ ಚೇದಸಿ ಪಾಪೇಭ್ಯಸ್ಸರ್ವೇಭ್ಯಃ ಪಾಪಕೃತ್ತಮಃ ।**
**ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ॥**
**(ಕರ್ಮಯೋಗ, ಬ್ರಹ್ಮಯೋಗ)**

**ಭಾವಾರ್ಥ :** ಅಖಿಲ ಪಾಪಾತ್ಮರಲ್ಲಿ ನೀನೆಷ್ಟು ಅಧಮ ಪಾಪ ಯುತನಾದರೂ, ಪಾಪವೆಂಬ ಸಮುದ್ರವನ್ನು ಜ್ಞಾನವೆಂಬ ಚಿಕ್ಕ ದೋಣಿಯಿಂದಲೇ ದಾಟುತ್ತೀಯಾ.

**ವಿವರ:** ಎಷ್ಟೋ ಜನ್ಮಗಳಿಂದ ಪಾಪವನ್ನು ಸಂಪಾದಿಸಿಕೊಂಡು ಸಂಚಿತಕರ್ಮ ಸಮುದ್ರದಂತೆ ಇದ್ದರೂ, ಕರ್ಮಗಳು ಸುಡುವ ವಿಧಾನ ತಿಳಿದುಕೊಳ್ಳುವುದರಿಂದ, ಯೋಗವೆಂಬ ದೋಣಿಯಿಂದ ಕರ್ಮಗಳೆಂಬ ಸಮುದ್ರವನ್ನು ಸುಲಭವಾಗಿ ದಾಟುತ್ತೀಯಾ. ಎಷ್ಟು ದೊಡ್ಡ ಕರ್ಮಗಳು ಇರುವವನಾದರೂ ಚಿಂತೆಮಾಡಬೇಕಾದ ಅವಶ್ಯಕತೆ ಇಲ್ಲ. ಏಕೆಂದರೆ ಗುರುವಿನ ಹತ್ತಿರದಿಂದ ತೆಗೆದುಕೊಂಡ ಅಗ್ನಿಯಿಂದ ಜ್ಞಾನಯಜ್ಞವು ಶರೀರದಲ್ಲಿ ನಡೆಯುವಂತೆ, ಕರ್ಮಯೋಗವನ್ನು ಆಚರಿಸುವ ವಿಧಾನ ತಿಳಿದಿರುವಾಗ ಭಯಪಡಬೇಕಾದ ಕೆಲಸವಿಲ್ಲ. ಕರ್ಮಗಳಿಂದ ಸುಲಭವಾಗಿ ಹೊರಬೀಳುತ್ತೀಯಾ. ದೊಡ್ಡ ಸಮುದ್ರವನ್ನಾದರೂ ಚಿಕ್ಕ ದೋಣಿಯಿಂದಲೇ ದಾಟುವಂತೆ ಎಷ್ಟು ಕರ್ಮವನ್ನಾದರೂ ಸಣ್ಣ ಅಗ್ನಿಯಿಂದ ಸುಟ್ಟು ಹಾಕಬಹುದು. ಆ ವಿಷಯವನ್ನೇ ಕೆಳಗಿನ ಶ್ಲೋಕದಲ್ಲಿ ಹೇಳುತ್ತಿದ್ದಾನೆ.

**(3) ಶ್ಲೋ॥ 37 : ಯಥೈಧಾಂಸಿ ಸಮಿದ್ಧೋಽಗ್ನಿ ರ್ಭಸ್ಮಸಾತ್ ಕುರುತೇಽರ್ಜುನ ।**
**ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ ॥**
**(ಕರ್ಮಯೋಗ, ಬ್ರಹ್ಮಯೋಗ)**

**ಭಾವಾರ್ಥ:** ಯಾವ ವಿಧವಾಗಿ ಅಗ್ನಿಯಲ್ಲಿ ಕಟ್ಟಿಗೆಗಳು ಸುಟ್ಟುಹೋಗುತ್ತಿವೆಯೋ, ಅದೇ ವಿಧವಾಗಿ ಜ್ಞಾನಾಗ್ನಿಯಲ್ಲಿ ಸರ್ವಕರ್ಮಗಳು ಸುಟ್ಟುಹೋಗುತ್ತಿವೆ.

**ವಿವರ** : ಈ ವಿಷಯವನ್ನು ಮೊದಲೇ ಹೇಳಿಕೊಂಡಿದ್ದೇವೆ. **'ಜ್ಞಾನಾಗ್ನಿ ದಗ್ಧ ಕರ್ಮಾಣಾಂ'** ಎಂದು 19ನೇ ಶ್ಲೋಕದಲ್ಲಿ ಜ್ಞಾನಾಗ್ನಿಯನ್ನು ಕುರಿತು ಹೇಳಿದಾಗ, ನಂಬದಿರುವವರು ಯಾರಾದರು ಇಲ್ಲಿ ಪೂರ್ತಿಯಾಗಿ ನಂಬಬೇಕಾಗಿದೆ. ನಿಜವಾಗಲು ಜ್ಞಾನಾಗ್ನಿ ಇದೆಯೆಂದು ಅದಕ್ಕೆ ಉದಾಹರಣೆಯೂ ಸಹ ಕೊಡುವುದಾಗಿದೆ. ಎಲ್ಲಾ ಕರ್ಮವನ್ನು ನಾಶ ಮಾಡುವ ಜ್ಞಾನಾಗ್ನಿ ಇಲ್ಲದವನು ಯೋಗಿ ಅಲ್ಲವೆಂದು, ನಂತರದ ಆತ್ಮಸಂಯಮ ಯೋಗದಲ್ಲಿ ಮೊದಲನೆಯ ಶ್ಲೋಕದಲ್ಲಿ ಹೇಳಲಾಗಿದೆ. ಲೋಕದ ದೃಷ್ಟಿಯಲ್ಲಿ ನಾನು ಗೀತೆಯನ್ನು ಬರೆದ ಸ್ವಾಮಿಯಾಗಿ, ದೊಡ್ಡ ಜ್ಞಾನಿಯಾಗಿ, ಬಹಳ ಮರ್ಯಾದೆಯಿಂದ ಇದ್ದರೂ ನನ್ನೊಳಗೆ ಜ್ಞಾನಾಗ್ನಿ ಇಲ್ಲದ್ದು ಏನು ಪ್ರಯೋಜನೆ ಇಲ್ಲ. ದೇವರ ದೃಷ್ಟಿಯಲ್ಲಾಗಲಿ, ಆಧ್ಯಾತ್ಮಿಕ ವಿದ್ಯೆಯ ಪ್ರಕಾರವಾಗಲಿ, ನಾನು ಯೋಗಿ ಎನ್ನುವುದಕ್ಕೆ ಸಾಧ್ಯವಿಲ್ಲ. ಯಾರಿಗಾದರೂ ಈ ಸೂತ್ರವೇ ಅನ್ವಯಿಸುತ್ತದೆ.

**(3) ಶ್ಲೋ॥ 38 : ನ ಹಿ ಜ್ಞಾನೇನ ಸದೃಶಂ ಪವಿತ್ರ ಮಿಹ ವಿದ್ಯತೇ ।**
**ತತ್ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ ॥**

**(ಕರ್ಮಯೋಗ)**

**ಭಾವಾರ್ಥ** : ಜ್ಞಾನಕ್ಕೆ ಪ್ರಪಂಚದಲ್ಲಿ ಸಾಟಿಯಾದುದು ಏನು ಇಲ್ಲ. ಅದಕ್ಕಿಂತ ಪವಿತ್ರವಾದುದು ಇಲ್ಲ. ಕರ್ಮಯೋಗವಾಚರಿಸುವ ಕರ್ಮಯೋಗಿ ಕಾಲ ಕಳೆದಂತೆಲ್ಲಾ ಮೋಕ್ಷಕ್ಕೆ ಹತ್ತಿರವಾಗುತ್ತಾನೆ.

**ವಿವರ** : ಜ್ಞಾನಾಗ್ನಿಗೆ ಸಮಾನವಾದುದೇನೂ ಪ್ರಪಂಚದಲ್ಲಿ ಇಲ್ಲ. ಈ ಅಗ್ನಿಗಿಂತ ಪವಿತ್ರವಾದುದು ಇಲ್ಲ. ಕರ್ಮಯೋಗಿಗೆ ಕಾಲವು ಕಳೆದಂತೆಲ್ಲವೂ ಕರ್ಮಗಳು ಸುಟ್ಟುಹೋಗುತ್ತಿರುತ್ತವೆ. ಕರ್ಮಯೋಗಿಯಲ್ಲಿ ಇರುವ ಅಗ್ನಿ ಕರ್ಮವನ್ನು ಸುಡುತ್ತಾ ಕೊನೆಗೆ ಇಲ್ಲದಂತೆ ಮಾಡುವುದು. ಆಗ ಆ ಯೋಗಿ ಮೋಕ್ಷ ಹೊಂದುತ್ತಾನೆ.

**(3) ಶ್ಲೋ॥ 39 : ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರ ಸ್ಸಂಯತೇಂದ್ರಿಯಃ ।**
**ಜ್ಞಾನಂ ಲಭ್ಧ್ವಾ ಪರಾಂ ಶಾಂತಿ ಮಚಿರೇಣಾಧಿ ಗಚ್ಛತಿ ॥**

**(ಬ್ರಹ್ಮಯೋಗಿ)**

**ಭಾವಾರ್ಥ :** ಶ್ರದ್ಧೆಯಿಂದ ಇಂದ್ರಿಯಗಳನ್ನು ನಿಗ್ರಹಿಸುವ ತತ್ಪರರಿಗೆ ಜ್ಞಾನ ಲಭಿಸುತ್ತದೆ ಜ್ಞಾನವನ್ನು ಹೊಂದಿದ ನಂತರ ಅಚಿರಕಾಲದಲ್ಲಿಯೇ ಮೋಕ್ಷವನ್ನು ಪಡೆಯುವರು.

**ವಿವರ** : ದೈವವನ್ನು ತಿಳಿಯಬೇಕೆಂದು ಶ್ರದ್ದೆ ಇರುವವನು, ಒಂದೇ ಧ್ಯಾಸಹೊಂದಿ, ಇಂದ್ರಿಯಗಳನ್ನು ನಿಗ್ರಹಿಸುವ ಜ್ಞಾನ ಇರುವವನಿಗೆ ಜ್ಞಾನಾಗ್ನಿ ಲಭಿಸುತ್ತದೆ. ಜ್ಞಾನಾಗ್ನಿ ಹೊಂದಿದ ಸ್ವಲ್ಪಕಾಲಕ್ಕೆ ಕರ್ಮಗಳು ಪೂರ್ತಿಯಾಗಿ ಸುಟ್ಟುಹೋಗುತ್ತವೆ. ಆದ ಕಾರಣ ಆತನು ತಕ್ಷಣ ಮೋಕ್ಷ ಹೊಂದುತ್ತಾನೆ. ಇಂದ್ರಿಯಗಳು ನಿಗ್ರಹಿಸಿ ಅವುಗಳ ಕೆಲಸವನ್ನು ಇಲ್ಲದಂತೆ ಮಾಡುವುದು ಬ್ರಹ್ಮಯೋಗಕ್ಕೆ ಇರುತ್ತದೆ.

**(3) ಶ್ಲೋ॥ 40 : ಅಜ್ಞಶ್ಚಾಶ್ರದ್ಧಾಧಾನ ಶ್ಚ ಸಂಶಯಾತ್ಮಾ ವಿನಶ್ಯತಿ ।**
**ನಾಯಂ ಲೋಕೋಽಸ್ತಿನಪರೋ ನಸುಖಂ ಸಂಶಯಾತ್ಮನಃ ॥**
**(ಜೀವಾತ್ಮ)**

**ಭಾವಾರ್ಥ:** ಸಂಶಯಾತ್ಮನಾಗಿ, ಶ್ರದ್ಧೆ ಇಲ್ಲದವನಾಗಿ, ಜ್ಞಾನಶೂನ್ಯನಾದ ನರನು ತಪ್ಪದೇ ಕೆಡುತ್ತಾನೆ. ಸಂಶಯಾತ್ಮನಿಗೆ ಇಹ ಪರಗಳಲ್ಲಿ ಎಲ್ಲಿಯಾದರೂ ಸುಖ ಇಲ್ಲ.

**ವಿವರ** : ಈ ಶ್ಲೋಕದಲ್ಲಿ ಸಂಶಯಾತ್ಮನ ಬಗ್ಗೆಯೇ ಹೆಚ್ಚಾಗಿ ಹೇಳಿದ್ದಾರೆ. ಸಂಶಯಗಳಿಂದ ಅವುಗಳ ಪರಿಷ್ಕಾರ ತಿಳಿದುಕೊಳ್ಳದವನಿಗೆ ಇಹ ಪರಗಳಲ್ಲಿ ಸುಖ ಇರುವುದಿಲ್ಲ ಎಂದಿದ್ದಾರೆ. ಮಾನವನಿಗೆ ಕೆಲವು ವಿಷಯಗಳಲ್ಲಿ ಸಂಶಯಗಳು ಬರುವುದು ಸಹಜವೇ. ಎಂತಹ ಸಂಶಯವನ್ನಾದರೂ ಸ್ವಲ್ಪ ಯೋಚಿಸಿದರೆ ಪರಿಷ್ಕಾರ ಮಾರ್ಗ ಲಭಿಸುತ್ತದೆ. ಹಾಗೆ ಯೋಚಿಸದೆ ಈ ವಿಷಯ ಇಷ್ಟೇ ಎಂದು ಗೋಡೆಕಟ್ಟಿಕೊಂಡು ಕುಳಿತುಕೊಂಡವನಿಗೆ ಎಂದಿಗೂ ಸತ್ಯ ತಿಳಿಯುವುದಿಲ್ಲ. ಒಂದು ವಿಷಯವನ್ನು ಪೂರ್ತಿ ಪರಿಶೀಲಿಸದೇ, ಆ ವಿಷಯದ ಮೇಲೆ ಮೊದಲೆ ಒಂದು ನಿರ್ಣಯಹೊಂದಿದ್ದು, ಆ ವಿಷಯವೊಂದರ ಸತ್ಯವನ್ನು ಗ್ರಹಿಸದೆ, ತನಗೆ ಮೊದಲಿನಿಂದ ಇರುವ ನಿರ್ಣಯುವೇ ಸರಿಯಾದುದೆಂದುಕೊಂಡು, ತಮ್ಮ ನಿರ್ಣಯವೇ ಸತ್ಯವಾದುದೆಂಬ ಭ್ರಮೆಯಲ್ಲಿ ಬಿದ್ದವರು ಕೆಲವರಿದ್ದಾರೆ. ಅಂತಹವರು ಅಸತ್ಯದಲ್ಲಿದ್ದು ಸತ್ಯದಲ್ಲಿ ಇದ್ದೇವೆಂದುಕೊಳ್ಳುತ್ತಿರುತ್ತಾರೆ. ಉದಾಹರಣೆಗೆ ದೆವ್ವ ಎನ್ನುವುದು ವಾಸ್ತವವೇ ಆದರೂ ಆ ಮಾತು ಕೇಳುತ್ತಲೇ ಇದರಲ್ಲಿನ ಸತ್ಯವೆಷ್ಟು ಇದೆಯೋ ಪರಿಶೀಲಿಸೋಣ ಎಂದುಕೊಳ್ಳದೆ ದೆವ್ವ ಎಂಬುವುದು ಅಸತ್ಯ

ಎನ್ನುತ್ತಾರೆ. ದೆವ್ವವೊಂದರ ಬಾಧೆಯನ್ನು ಅನುಭವಿಸುವವನನ್ನು ನೋಡಿ ಅದೊಂದು ರೋಗ ಎನ್ನುತ್ತಾರೆ. ಯಾವ ಔಷಧಿಗಳಿಂದ ವಾಸಿಯಾಗದಿದ್ದರೆ ಅವನ ಮಾನಸಿಕ ಪರಿಸ್ಥಿತಿ ಅಂತಹುದು ಎನ್ನುತ್ತಾರೆ. ಈ ವಿಧವಾಗಿ ಮೊದಲೇ ತಮ್ಮ ಒಳಗಿರುವ ನಿರ್ಣಯವನ್ನು ಸಮರ್ಥಿಸಿಕೊಳ್ಳುತ್ತಿರುತ್ತಾರಾಗಲಿ ಸತ್ಯವನ್ನು ತಿಳಿಯುವುದಿಲ್ಲ. ಅಂತಹ ಅಸತ್ಯವಾದಿಗಳು ತಾವು ನಿಜವಾಗಲು ಸತ್ಯವಾದಿಗಳೆಂದುಕೊಳ್ಳುತ್ತಿರುತ್ತಾರೆ. ಅಂತಹವರಿಗೆ ಇಹದಲ್ಲಿ ಯಾವಾಗಲಾದರೂ ದೆವ್ವಗಳ ಬಾಧೆ ಉಂಟಾದರೆ ಅದರಿಂದ ಹೊರಬೀಳಲಾರರು. ಅಷ್ಟೇ ಅಲ್ಲದೇ ಅಂತಹ ವಾದಿಗಳು ನಂತರ ಜನ್ಮಗಳಲ್ಲಿ ಅದೋ ಗತಿ ಪಾಲಾಗುತ್ತಾರೆಂದು, ಅಂತಹವರಿಗೆ ನಂತರ ಜನ್ಮಗಳಲ್ಲಿ ಇಹದಲ್ಲಿ ಸುಖವಾಗಲಿ, ಪರದಲ್ಲಿ ಮೋಕ್ಷವಾಗಲಿ ಲಭಿಸುವುದಿಲ್ಲವೆಂದು ತಿಳಿಸಿದ್ದಾನೆ.

**(3) ಶ್ಲೋ॥ 41 : ಯೋಗ ಸನ್ನ್ಯಸ್ತ ಕರ್ಮಾಣಂ ಜ್ಞಾನ ಸಂಛಿನ್ನ ಸಂಶಯಮ್।**
**ಆತ್ಮವನ್ತಂ ನ ಕರ್ಮಾಣಿ ನಿಬಧ್ನನ್ತಿ ಧನಂಜಯ॥**

**(ಕರ್ಮಯೋಗ, ಬ್ರಹ್ಮಯೋಗ)**

**ಭಾವಾರ್ಥ** : ಜ್ಞಾನ ವಿವರದಿಂದ ಸಂಶಯಗಳು ಇಲ್ಲದಂತೆ ಹೋದವನಿಗೆ, ಯೋಗ ಪದ್ಧತಿಗಳ ಮೂಲಕ ಕರ್ಮಗಳನ್ನು ಸುಟ್ಟುಹಾಕುವವನಿಗೆ, ಮನಸ್ಸನ್ನು ಆತ್ಮವನ್ನು ತಿಳಿಯುವವನಿಗೆ ಕರ್ಮಗಳು ಬಂಧನಗಳು ಆಗುವುದಿಲ್ಲ.

**(3) ಶ್ಲೋ॥ 42 : ತಸ್ಮಾದ ಜ್ಞಾನ ಸಂಭೂತಂ ಹೃತ್ ಸ್ಥಂ ಜ್ಞಾನಾಸಿನಾಽಽತ್ಮನಃ ।**
**ಛಿತ್ವೈನಂ ಸಂಶಯಂ ಯೋಗಮಾತಿಷ್ಠೋ ತ್ತಿಷ್ಠ ಭಾರತ ! ॥**

**(ಕರ್ಮಯೋಗ)**

**ಭಾವಾರ್ಥ** : ಅಜ್ಞಾನದಿಂದ ನಿನ್ನ ಹೃದಯದಲ್ಲಿ ನೆಲೆಗೊಂಡ ಸಂಶಯವನ್ನು ಜ್ಞಾನಖಡ್ಗದಿಂದ ಖಂಡಿಸಿ ಕರ್ಮಯೋಗವನ್ನು ಆಚರಿಸುವುದಕ್ಕೆ ಕಾರ್ಯೋನ್ಮುಖನಾಗು.

**ವಿವರ** : ಮೊದಲು ಅರ್ಜುನನಿಗೆ ಏನು ಸಂಶಯ ಬಂದಿದೆಯೋ ಜ್ಞಾಪಕ ಇದೆಯಾ! ಯುದ್ಧ ಮಾಡುವುದರಿಂದ, ಎಷ್ಟೋ ಜನರನ್ನು ಸಾಯಿಸುವುದರಿಂದ ಪಾಪ ಬರುತ್ತದೆ ಅಲ್ಲವೆ! ಪಾಪ ಬರುವ ಕೆಲಸ ಮಾಡಬಹುದಾ? ಎಂಬ ಸಂಶಯ ಬಂದು ಯುದ್ಧ ಮಾಡುವುದಿಲ್ಲವೆಂದು ಕುಳಿತುಕೊಂಡಿದ್ದಾನೆ. ಈಗ ಇಲ್ಲಿಯವರೆಗೂ ತಿಳಿಸಿದ ಕರ್ಮಯೋಗ ಸಂಬಂಧ ಜ್ಞಾನದಿಂದ ಯುದ್ಧದಿಂದ ಪಾಪ ಬರುತ್ತದೆಂಬ ಅನುಮಾನ ಕಳೆದುಕೊಳ್ಳ

ಬಹುದು. ಮಾಡುತ್ತಿರುವ ಯಾವ ಕೆಲಸವಾದರು ಅದರಿಂದ ಸಂಭವಿಸುವ ಕೆಟ್ಟ ಕರ್ಮವನ್ನು ಸುಟ್ಟುಹೋಗುವಂತೆ ಮಾಡುವುದು ಕರ್ಮಯೋಗ. ಈ ವಿಷಯವನ್ನು ಎಷ್ಟೋ ವಿವರವಾಗಿ ಕೇಳಿಸಿಕೊಂಡ ಅರ್ಜುನನ ಸಂಶಯ ಇಲ್ಲದಂತೆ ಹೋಗುತ್ತದೆ. ಆದ್ದರಿಂದ ಶ್ರೀಕೃಷ್ಣನು ಈ ಜ್ಞಾನದಿಂದ ನಿನ್ನ ಸಂಶಯವನ್ನು ತೆಗೆದುಹಾಕೆಂದನು.

ಇಲ್ಲಿಗೆ ಜ್ಞಾನಯೋಗ ಎನ್ನುವ ಅಧ್ಯಾಯ ಮುಕ್ತಾಯಗೊಂಡಿದೆ. ಈ ಅಧ್ಯಾಯದಲ್ಲಿನ ಶ್ಲೋಕಗಳ ವಿವರ ಕೆಳಗಿದೆ.

| | | | |
|---|---|---|---|
| 1) | ಸಾಕಾರ, ನಿರಾಕಾರ | : | 4 |
| 2) | ಸಾಕಾರ | : | 2 |
| 3) | ಸಾಕಾರ, ಕರ್ಮಯೋಗ | : | 1 |
| 4) | ಬ್ರಹ್ಮಯೋಗ, ಕರ್ಮಯೋಗ | : | 8 |
| 5) | ಬ್ರಹ್ಮಯೋಗ | : | 2 |
| 6) | ಕರ್ಮಯೋಗ | : | 10 |
| 7) | ಪ್ರಕೃತಿ | : | 1 |
| 8) | ಜೀವಾತ್ಮ, ಪರಮಾತ್ಮ | : | 2 |
| 9) | ಪ್ರಕೃತಿ, ಕರ್ಮಯೋಗ, ಬ್ರಹ್ಮಯೋಗ | : | 1 |
| 10) | ಜೀವಾತ್ಮ | : | 1 |
| 11) | ಪರಮಾತ್ಮ | : | 1 |
| 12) | ಅಶಾಸ್ತ್ರೀಯವಾದವು | : | 9 |
| | ಒಟ್ಟು ಶ್ಲೋಕಗಳು | : | 42 |

ಭಾವ, ವಿವರವನ್ನು ಬದಲಾಯಿಸಿ ಬರೆದ ಶ್ಲೋಕಗಳು – 5, 6, 7, 8, 13, 17, 33.



### ನಾಲ್ಕನೆಯ ಅಧ್ಯಾಯ

# ಕರ್ಮ ಸನ್ಯಾಸಯೋಗ

**ಅರ್ಜುನನು ಹೀಗೆ ಕೇಳಿದನು :**

**(4) ಶ್ಲೋ ॥ 1 : ಸನ್ಯಾಸಂ ಕರ್ಮಣಾಂ ಕೃಷ್ಣ ! ಪುನರ್ಯೋಗಂ ಚ ಶಂಸಸಿ ।**
**ಯಚ್ಛ್ರೇಯ ಏತಯೋರೇಕಂ ತನ್ಮೇಬ್ರೂಹಿ ಸುನಿಶ್ಚಿತಮ್ ॥**
**(ಕರ್ಮಯೋಗ, ಬ್ರಹ್ಮಯೋಗ)**

**ಭಾವಾರ್ಥ** : ಕರ್ಮ ಸನ್ಯಾಸವನ್ನು ಹೇಳಿದ್ದೀಯ ಮತ್ತು ಕರ್ಮವನ್ನು ಮಾಡುವುದು ಯೋಗವೆನ್ನುತ್ತಿದ್ದೀಯ. ಇವೆರಡರಲ್ಲಿ ಯಾವುದು ಶ್ರೇಷ್ಠವೋ ನಿಶ್ಚಯಮಾಡಿ ನನಗೆ ಹೇಳುವೆಯ.

**ವಿವರ** : ಕರ್ಮ ಎಂದರೆ ಪಾಪ ಮತ್ತು ಪುಣ್ಯ. ಕಾರ್ಯ ಎಂದರೆ ಕೆಲಸಗಳು. ಕಾರ್ಯಗಳನ್ನು(ಕೆಲಸಗಳನ್ನು) ಕುರಿತು ಹೇಳುವಾಗಾಗಲಿ, ಕರ್ಮಗಳನ್ನು (ಪಾಪಪುಣ್ಯಗಳು) ಕುರಿತು ಹೇಳುವಾಗಾಗಲಿ, ಎರಡು ಸಂದರ್ಭಗಳಲ್ಲಿಯೂ ಕರ್ಮ ಎಂಬ ಪದವನ್ನೇ ಶ್ಲೋಕದಲ್ಲಿ ಉಪಯೋಗಿಸಿದ್ದಾರೆಂದು ಮತ್ತೊಂದು ಬಾರಿ ಜ್ಞಾಪಕ ಮಾಡುತ್ತಿದ್ದೇವೆ. ಇಲ್ಲಿ ಅರ್ಜುನನಿಗೆ ಒಂದು ಅನುಮಾನ ಬಂದ ತಕ್ಷಣ ಕೇಳಿದನು. ಈ ಕಾಲದಲ್ಲಾದರೆ ಅಂತಹ ಅವಕಾಶ ಇಲ್ಲವೆಂದುಕೊಳ್ಳಿ. ಹೇಳುವುದು ಕೇಳದೇ ಮಧ್ಯದಲ್ಲಿ ಕೇಳಬಾರದು ಎನ್ನುವುದಾಗಲಿ ಇರಲಿಲ್ಲ. ಆದ ಕಾರಣ ಸಂಶಯ ಬರುತ್ತಲೇ ಪ್ರಶ್ನೆ ಹಾಕಿದ್ದಾನೆ. ಹಾಗೆ ಕೇಳದೆಹೋದರೆ ಆ ಅನುಮಾನ ಮನಸ್ಸಿನಲ್ಲಿ ಇರುವುದರಿಂದ ನಂತರದ ವಿಷಯ ತಲೆಗೇರುವುದಿಲ್ಲ. ಮನಸ್ಸಿನಲ್ಲಿ ಬಂದಿರುವ ಪ್ರಶ್ನೆಯನ್ನು ತಕ್ಷಣ ಕೇಳುವುದು ಒಳ್ಳೆಯದು.

ಪರಮಾತ್ಮನಲ್ಲಿ ಸೇರುವುದಕ್ಕೆ, ಜನ್ಮಗಳು ಇಲ್ಲದಂತೆ ಮೋಕ್ಷ ಹೊಂದುವುದಕ್ಕೆ ಎರಡೇ ಯೋಗಗಳು ಇವೆ. ಅವುಗಳೇ ಒಂದು ಬ್ರಹ್ಮಯೋಗ, ಎರಡನೆಯದು ಕರ್ಮಯೋಗ. ಬ್ರಹ್ಮಯೋಗದಲ್ಲಿ ಶರೀರದಿಂದ ನಡೆಯುವ ಕೆಲಸಗಳೆಲ್ಲವನ್ನೂ ಬಿಟ್ಟು ಕುಳಿತುಕೊಳ್ಳುವುದು. ಎರಡನೆಯದಾದ ಕರ್ಮಯೋಗದಲ್ಲಿ ಶರೀರದಿಂದ ನಡೆಯುವ ಕೆಲಸಗಳೆಲ್ಲವನ್ನು ಮಾಡುವುದು. ಈ ಎರಡು ಯೋಗ ವಿಷಯಗಳನ್ನು ಕೇಳಿದ ಅರ್ಜುನನು ಎರಡರಲ್ಲಿ ನನಗೆ ಯಾವುದು ಶ್ರೇಷ್ಠವೋ ತಿಳಿಸು ಎಂದಿದ್ದಾನೆ. ಆ ಮಾತಿಗೆ ಶ್ರೀಕೃಷ್ಣನು ತಕ್ಷಣ ಉತ್ತರ ಹೇಳಿದ್ದಾನೆ.

**ಶ್ರೀ ಭಗವಂತನು ಹೀಗೆ ಹೇಳಿದನು :**

**(4) ಶ್ಲೋ॥ 2 : ಸನ್ನ್ಯಾಸಃ ಕರ್ಮಯೋಗಶ್ಚ ನಿಶ್ರೇಯ ಸಕರಾವುಭೌ ।**
**ತಯೋಸ್ತು ಕರ್ಮಸನ್ನ್ಯಾಸಾ ತ್ಕರ್ಮಯೋಗೋ ವಿಶಿಷ್ಯತೇ ॥**
**(ಕರ್ಮಯೋಗ, ಬ್ರಹ್ಮಯೋಗ)**

**ಭಾವಾರ್ಥ:** ಕರ್ಮಯೋಗ, ಬ್ರಹ್ಮಯೋಗ ಎರಡೂ ಶ್ರೇಷ್ಠವಾದವುಗಳೇ. ಆದರೆ ಬ್ರಹ್ಮಯೋಗಕ್ಕಿಂತ ಕರ್ಮಯೋಗವೇ ಉತ್ತಮವಾದುದು.

**ವಿವರ :** ಪರಮಾತ್ಮನನ್ನು ಸೇರುವುದಕ್ಕೆ ಎರಡೇ ಯೋಗ ಮಾರ್ಗಗಳಿವೆ ಅಲ್ಲವೆ! ಅದರಲ್ಲಿ ಒಂದು ಒಳ್ಳೆಯದೆಂದು ಇನ್ನೊಂದು ಒಳ್ಳೆಯದಲ್ಲ ಎನ್ನುವುದಕ್ಕೆ ಸಾಧ್ಯವಿಲ್ಲ. ಎರಡು ಸಮಾನವಾದವೇ. ಎರಡು ಕರ್ಮವನ್ನು ಸುಡುವವೇ. ಎರಡರಲ್ಲಿಯೂ ಸಾಧಾರಣ ಮಾನವನಿಗೆ ಆಚರಣೆಗೆ ಯೋಗ್ಯವಾದುದು ಕರ್ಮಯೋಗವೇ. ಆದ್ದರಿಂದ ಕರ್ಮ ಯೋಗವು ಸಂಸಾರದಲ್ಲಿ ಸಿಲುಕಿಕೊಂಡ ಸಾಧಾರಣ ವ್ಯಕ್ತಿಗಳ ಬಗ್ಗೆ ವಿಶಿಷ್ಟತೆ ಹೊಂದಿದೆ ಎಂದು ಹೇಳಬಹುದು. ಬ್ರಹ್ಮಯೋಗ ಸಂಸಾರವಿಲ್ಲದವರಿಗೆ ಸುಲಭವಾಗುತ್ತದೆ.

**(4) ಶ್ಲೋ॥ 3 : ಜ್ಞೇಯಃ ಸ ನಿತ್ಯಸನ್ನ್ಯಾಸೀ ಯೋನ ದ್ವೇಷ್ಟಿ ನ ಕಾಂಕ್ಷತಿ ।**
**ನಿರ್ದ್ವಂದ್ವೋಹಿ ಮಹಾಬಾಹೋ! ಸುಖಂ ಬಂದಾತ್ಪ್ರ ಮುಚ್ಯತೇ ॥**
**(ಕರ್ಮಯೋಗ)**

**ಭಾವಾರ್ಥ:** ಯಾರಿಗೆ ಅಸೂಯೆ ಪ್ರೇಮಗಳು ಇಲ್ಲವೋ, ಯಾರು ಸುಖ ದುಃಖ ದ್ವಂದ್ವಗಳನ್ನು ಬಿಡುತ್ತಾನೋ ಅವನೇ ನಿತ್ಯ ಸನ್ಯಾಸಿ. ಅವನಿಗೆ ಬಂಧನಗಳು ಇಲ್ಲ.

**ವಿವರ :** ನಮಗೆ ತಿಳಿದಿರುವವರೆಗೂ ಸನ್ಯಾಸಿಗಳು ಎಂದರೆ ಕಾಷಾಯಬಣ್ಣದ ಬಟ್ಟೆಗಳು ಧರಿಸಿದವರೆಂದು, ಸಂಸಾರ ಬಿಟ್ಟು ಭಿಕ್ಷಾಟನೆ ಮಾಡುವವರೆಂದು ಸಾಧಾರಣವಾಗಿ ಎಂದುಕೊಳ್ಳುತ್ತಿರುತ್ತೇವೆ. ಕೆಲಸಗಳು ಮಾಡದವನನ್ನು ದಂಡಿಸುವಾಗ ಸನ್ಯಾಸಿ ಆಗಬೇಕೆಂದುಕೊಂಡಿದ್ದೀಯಾ ಎಂದೋ ಅಥವಾ ಈಗಿದ್ದರೆ ಸನ್ಯಾಸಿಗಳಲ್ಲಿ ಸೇರಿಹೋಗುತ್ತೀಯಾ ಎಂದೋ ಎನ್ನುತ್ತಿರುತ್ತಾರೆ. ಇದನ್ನನುಸರಿಸಿ ನೋಡಿದರೆ ಕೆಲಸಗಳು ಮಾಡದವನನ್ನು ಸನ್ಯಾಸಿ ಎಂಬ ಭಾವನೆ ಎಲ್ಲರಲ್ಲಿಯೂ ಸೇರಿಹೋಗಿದೆ. ಸಂಸಾರದ ಜವಾಬ್ಧಾರಿ ಇಲ್ಲದಂತೆ ಹೋಗುವುದು, ಕೆಲಸಗಳು ಮಾಡದಂತಿರುವುದೇ ಸನ್ಯಾಸವೆಂದು ಎಲ್ಲರೂ ಅಂದುಕೊಂಡ ಮಾತ್ರಕ್ಕೆ ಅದು ಸತ್ಯವಲ್ಲ. ನಿಜವಾದ ಸನ್ಯಾಸ ಯಾವುದೋ ಭಗವಂತನು ಹೇಳಿದ್ದಾನೆ. ನಾವು ಅಂದುಕೊಂಡ ಭಾವನೆಗೆ ವಿರುದ್ಧವಾಗಿ ಸನ್ಯಾಸವನ್ನು

ಕುರಿತು ಭಗವಂತನು ಪ್ರಕಟಿಸಿದ್ದಾನೆ. ಕೆಲಸಗಳು ಮಾಡದಂತಿರುವುದು ಸನ್ಯಾಸ ಅಲ್ಲವೆಂದು, ಒಂದು ಪದ್ಧತಿ ಪ್ರಕಾರ ಕೆಲಸಗಳು ಮಾಡುವುದೇ ನಿಜವಾದ ಸನ್ಯಾಸವೆಂದು ತಿಳಿಸಿದ್ದಾನೆ. ನಿಜವಾದ ಸನ್ಯಾಸಿಯನ್ನು ಬಾಹ್ಯವಾಗಿ ಗುರುತಿಸುವುದಕ್ಕೆ ಸಾಧ್ಯಪಡುವುದಿಲ್ಲವೆಂದು, ಆತನು ಎಲ್ಲರಂತೆ ಕೆಲಸಗಳು ಮಾಡುತ್ತಿರುತ್ತಾನೆಂದು, ಆತನಿಗೆ ಬಾಹ್ಯವಾಗಿ ಯಾವ ಗುರುತುಗಳು ಇರುವುದಿಲ್ಲವೆಂದು ತಿಳಿಸಿದ್ದಾನೆ.

ಹೊರಗೆ ಕಾಣಿಸುವ ವೇಷಧಾರಿಗಳಾದ ಈ ಸನ್ಯಾಸಿಗಳೆಲ್ಲ ಯಾರೆಂಬ ಪ್ರಶ್ನೆ ಬಂದಿದೆಯೆಂದುಕೊಳ್ಳುತ್ತೇವೆ. ಅದಕ್ಕೆ ಉತ್ತರ ಪ್ರೇಮ ಅಸೂಯೆಗಳು, ಕಷ್ಟ ಸುಖಗಳೆಂಬ ದ್ವಂದ್ವಗಳಾದ ಗುಣಗಳನ್ನು ಬಿಟ್ಟು, ಅವುಗಳ ಫಲಿತಗಳ ಮೇಲೆ ಇಷ್ಟ ಇಲ್ಲದವನಾಗಿ, ನಡೆಯುತ್ತಿರುವ ಕೆಲಸಗಳು ಕರ್ಮರೀತ್ಯಾ ನಡೆಯುತ್ತಿವೆ ಎಂದು, ಅವುಗಳ ಅನುಭವಗಳು ಕರ್ಮರೀತ್ಯಾ ಬಂದಿರುವವೆಯೆಂದು, ಒಳ್ಳೆಯಕೆಟ್ಟದೆಂಬ ಭೇದವಿಲ್ಲದೆ ಶರೀರದ ಮೂಲಕ ಕೆಲಸಗಳನ್ನು ಮಾಡುತ್ತಾ, ತಾನು ಬೇರೆ ಎಂಬ ಭಾವವನ್ನು ಹೊಂದಿರುವ ಕರ್ಮಯೋಗಿಯೇ ನಿಜವಾದ ಸನ್ಯಾಸಿಯಾದಾಗ ಉಳಿದವರು ಅಲ್ಲವೆಂದೇ ಅರ್ಥ.

**(4) ಶ್ಲೋ॥ 4 : ಸಾಂಖ್ಯಯೋಗೌ ಪೃಥಗ್ ಬಾಲಾಃ ಪ್ರವದನ್ತಿ ನಪಂಡಿತಾಃ ।**
**ಏಕ ಮಪ್ಯಾಸ್ಥಿತಃ ಸಮ್ಯಕ್ ಉಭಯೋರ್ವಿನ್ದತೇ ಫಲಮ್ ॥**
**(ಕರ್ಮಯೋಗ, ಬ್ರಹ್ಮಯೋಗ)**

**ಭಾವಾರ್ಥ** : ಕರ್ಮಯೋಗ ಬೇರೆ ಎಂದು, ಬ್ರಹ್ಮಯೋಗ ಬೇರೆ ಎಂದು ತಿಳಿಯದವರು ಎನ್ನುತ್ತಿರುತ್ತಾರೆ. ತಿಳಿದವರು ಎರಡರಲ್ಲಿ ಯಾವುದನ್ನು ಅನುಸರಿಸಿದರು ಫಲಸಿದ್ಧಿ ಯಾಗುತ್ತದೆಂದು ಹೇಳುತ್ತಿರುತ್ತಾರೆ.

**ವಿವರ** : ಎರಡನೇ ಶ್ಲೋಕದಲ್ಲಿ ಕರ್ಮಯೋಗವು ವಿಶಿಷ್ಟತೆ ಹೊಂದಿದೆ ಎಂದು ಹೇಳಿ, ಇಲ್ಲಿಯೇನೋ ಎರಡು ಬೇರೆ ಬೇರೆ ಎಂದು ತಿಳಿಯದವರು ಅನ್ನುತ್ತಿದ್ದಾರೆಂದು ಹೇಳುವುದು ನೋಡಿದರೆ ಇದೇನು ಎರಡು ವಿಧಗಳಾಗಿ ಹೇಳಿದ್ದಾರೆಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ನಾವು ಅಲ್ಲಿಯೂ ಸಹ ಎರಡು ಯೋಗಗಳು ಪರಮಾತ್ಮನನ್ನು ಸೇರಿಸುವವೆಂದು ಹೇಳಿದ್ದೇವೆ. ಯಾವುದನ್ನು ಅನುಸರಿಸಿದರೂ ಫಲಸಿದ್ಧಿ ಒಂದೇ. ಅವುಗಳ ವಿಷಯದಲ್ಲಿ ಅವು ಎರಡು ಒಂದೇ. ಆದರೆ ಆಚರಿಸುವ ಮಾನವರಲ್ಲಿ ಯಾವುದು ಅನುಕೂಲವೋ, ಯಾವುದು ಅನಾನುಕೂಲವೋ ಎನ್ನುವುದರಲ್ಲಿ ಸಾಧಾರಣ ಜನರಲ್ಲಿ ಕರ್ಮಯೋಗ ಅನುಕೂಲತೆಗಳಲ್ಲಿ ವಿಶಿಷ್ಟತೆ ಹೊಂದಿದೆ ಎಂದು ಹೇಳಿದ್ದೇವೆ.

ಎರಡು ಯೋಗಗಳು ತೋರಿಸುವ ದಾರಿ ಒಂದೇ ಆದರೂ ಹೆಂಡತಿಮಕ್ಕಳು ಇರುವವರಿಗೆ, ತಪ್ಪದೇ ಕೆಲಸಗಳು ಮಾಡುವ ಅವಶ್ಯಕತೆ ಇರುವವರಿಗೆ ಕರ್ಮಯೋಗ ಶ್ರೇಷ್ಟವಾದುದು. ಹೆಂಡತಿಮಕ್ಕಳು ಇಲ್ಲದವರಿಗೆ, ಸಂಸಾರ ಜವಾಬ್ಧಾರಿ ಇಲ್ಲದೆ ಕೆಲಸಗಳು ಮಾಡದಿದ್ದರು ಜೀವನ ನಡೆದುಹೋಗುವವರಿಗೆ ಬ್ರಹ್ಮಯೋಗ ಅನುಕೂಲವಾಗಿರುತ್ತದೆ. ಇವುಗಳ ವ್ಯತ್ಯಾಸಗಳು ಆಚರಿಸುವ ಮಾನವರಿಗೇ, ಆದರೆ ಯೋಗಿಗಳಲ್ಲಿ ಇಲ್ಲವೆಂದು ತಿಳಿಯಬೇಕು. ಆ ವಿಷಯವೇ ಕೆಳಗಿನ ಶ್ಲೋಕದಲ್ಲಿಯೂ ಸಹ ಹೇಳುತ್ತಿದ್ದಾರೆ.

**(4) ಶ್ಲೋ॥ 5 : ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈ ರಪಿ ಗಮ್ಯತೇ ।**
**ಏಕಂ ಸಾಂಖ್ಯಂಚ ಯೋಗಂಚ ಯಃ ಪಶ್ಯತಿ ಸಪಶ್ಯತಿ ॥**
**(ಕರ್ಮಯೋಗ, ಬ್ರಹ್ಮಯೋಗ)**

**ಭಾವಾರ್ಥ :** ಬ್ರಹ್ಮಯೋಗದ ಮೂಲಕ ಯಾವ ಸ್ಥಾನ ಪ್ರಾಪ್ತಿಸುತ್ತದೆಯೋ, ಅದೇ ಕರ್ಮ ಯೋಗದಲ್ಲಿಯೂ ಪ್ರಾಪ್ತಿಸುತ್ತಿದೆ. ಬ್ರಹ್ಮಯೋಗ, ಕರ್ಮಯೋಗ ಎರಡು ಸಮಾನವಾದವೆಂದು ತಿಳಿದವನೇ ನಿಜವಾದ ಜ್ಞಾನದೃಷ್ಟಿ ಇರುವವನಾಗುತ್ತಾನೆ.

**4) ಶ್ಲೋ॥ 6 : ಸನ್ನ್ಯಾಸಸ್ತು ಮಹಾಬಾಹೋ! ದುಃಖಮಾಪ್ತು ಮಯೋಗತಃ ।**
**ಯೋಗಯುಕ್ತೋ ಮುನಿರ್ಬ್ರಹ್ಮ ನ ಚಿರೇಣಾಽಧಿಗಚ್ಛತಿ ॥**
**(ಕರ್ಮಯೋಗ, ಬ್ರಹ್ಮಯೋಗ)**

**ಭಾವಾರ್ಥ :** ಯೋಗ ಇಲ್ಲದವನು, ಕರ್ಮವನ್ನು ಸನ್ನ್ಯಸಿಸದವನು ದುಃಖವನ್ನೇ ಹೊಂದುತ್ತಿರುತ್ತಾನೆ. ಯೋಗದಲ್ಲಿ ಕೂಡಿಕೊಂಡಿರುವವನು, ಮನಸ್ಸನ್ನು ನಿಯಂತ್ರಿಸಿದವನು ಪರಬ್ರಹ್ಮ ಪದವಿಯನ್ನು ಶೀಘ್ರವಾಗಿ ಪಡೆಯುತ್ತಾನೆ.

**ವಿವರ :** ಈ ಶ್ಲೋಕದಲ್ಲಿ ಇಲ್ಲಿ ನಾವು ಬರೆದ ಭಾವಕ್ಕೆ ಅನೇಕ ಭಗವದ್ಗೀತೆಗಳಲ್ಲಿನ ಭಾವವನ್ನು ವಿಭಿನ್ನವಾಗಿ ಬರೆಯಲಾಗಿದೆ. ಒಬ್ಬರಲ್ಲ ಇಬ್ಬರಲ್ಲ ಎಲ್ಲರೂ ಹಾಗೆ ಬರೆಯುವುದ ರಲ್ಲಿ ಶ್ಲೋಕಗಳ ಭಾವ ವಿವರವನ್ನು ತಿಳಿದು ಬರೆದಿರುವವು ಅಲ್ಲವೆಂದು, ಒಬ್ಬರಿಗೊಬ್ಬರು ನೋಡಿಕೊಂಡು ಬರೆದಿರುವವೆಂದು ತಿಳಿಯುತ್ತದೆ. ಪರೀಕ್ಷೆ ಬರೆಯುವಾಗ ಮುಂದಿರುವ ವನನ್ನು ನೋಡಿ ಹಿಂದಿರುವವನು ಬರೆದಿದ್ದಾನೆಂದುಕೊ, ಮುಂದಿರುವವನದು ತಪ್ಪಾದರೆ ಹಿಂದಿರುವವನದೂ ಸಹ ತಪ್ಪಾಗುತ್ತದೆ. ಆ ವಿಧವಾಗಿಯೇ ಶ್ಲೋಕದಲ್ಲಿನ ಭಾವ ಏನೆಂದು

ನೋಡದೆ, ಮೊದಲು ಇತರರು ಬರೆದಿರುವುದನ್ನು ಅನುಸರಿಸಿ ಬರೆಯುವುದರಿಂದ ಎಲ್ಲರದು ಒಂದೇ ಭಾವವಾಗಿದೆ. ಇದು ಸರಿಯಾ ತಪ್ಪಾ ಎಂದು ನೋಡದೆಯೇ ಬರೆದಿದ್ದಾರೆ.

ಮೊದಲು 4, 5 ಶ್ಲೋಕಗಳಲ್ಲಿ ಎರಡು ಯೋಗಗಳು ಒಂದೇ ಸಾಮರ್ಥ್ಯ ಹೊಂದಿವೆ ಎಂದು ಹೇಳಿದ ಹಿರಿಯರು, ಪಕ್ಕದಲ್ಲಿರುವ ಶ್ಲೋಕದಲ್ಲಿ ಮೋಕ್ಷ ಪಡೆಯುವುದಕ್ಕೆ ಕರ್ಮಯೋಗದ ಸಹಾಯ ಅಗತ್ಯ, ಕರ್ಮಯೋಗದ ಸಹಾಯವಿಲ್ಲದೇ ಕೇವಲ ಬ್ರಹ್ಮಯೋಗದ ಮೂಲಕ ಮೋಕ್ಷ ಪಡೆಯುವುದು ಕಷ್ಟ, ಕರ್ಮಯೋಗವನ್ನು ತಿಳಿದ ಬ್ರಹ್ಮಯೋಗಿ ಶೀಘ್ರವಾಗಿ ಮೋಕ್ಷ ಪಡೆಯುತ್ತಾನೆ ಎನ್ನುವುದು ವಿಚಿತ್ರವಲ್ಲವೆ! ಇಲ್ಲಿ ಪ್ರತಿ ಪದದ ಅರ್ಥವನ್ನು ವಿವರಿಸಿಕೊಳ್ಳೋಣ.

1) **ಸನ್ನ್ಯಾಸಸ್ತು** = ಸನ್ನ್ಯಾಸಿಯಾಗುವುದು, ಅಥವಾ ಬಿಡುವುದು, ಅಥವಾ ಇಲ್ಲದಂತೆ ಮಾಡಿಕೊಳ್ಳುವುದು, ಏನನ್ನು ಬಿಡುವುದು, ಏನನ್ನು ಸನ್ನ್ಯಸಿಸುವುದು ಎಂದರೆ ಕರ್ಮವನ್ನು ಸನ್ನ್ಯಸಿಸುವುದೆಂದು ತಿಳಿಯುತ್ತದೆ. ಕರ್ಮವನ್ನು ಸನ್ನ್ಯಸಿಸುವುದಕ್ಕೆ ಎರಡು ಮಾರ್ಗಗಳಿವೆ. ಒಂದು ಸಂಚಿತ ಕರ್ಮವನ್ನು ಇಲ್ಲದಂತೆ ಮಾಡುವುದು ಬ್ರಹ್ಮಯೋಗ, ಎರಡನೆಯದು ಆಗಾಮಿಕಕರ್ಮವನ್ನು ಇಲ್ಲದಂತೆ ಮಾಡುವುದು ಕರ್ಮಯೋಗ. ಎರಡು ಕರ್ಮಗಳನ್ನು ಇಲ್ಲದಂತೆ ಮಾಡುವ ಅರ್ಥದಿಂದ **'ಸನ್ನ್ಯಾಸಸ್ತು'** ಎಂದಿದ್ದಾರೆ. ಈ ಮಾತು ಎರಡು ಯೋಗಗಳಿಗೆ ಸಂಬಂಧಿಸಿರುವುದೆಂದು ತಿಳಿಯಬೇಕು. ಸನ್ನ್ಯಾಸವು ಎರಡು ಯೋಗಗಳಲ್ಲಿ ಸಮಾನವಾಗಿದೆ ಎಂದು ತಿಳಿಯಬೇಕು.

2) **ಅಯೋಗತಃ** = ಯೋಗವು ಇಲ್ಲದಿರುವುದು, ಎರಡು ಯೋಗಗಳು ಇಲ್ಲದಿರುವುದೆಂದು ಅರ್ಥ, ಕರ್ಮಸನ್ನ್ಯಾಸ ಹೊಂದಿರುವ ಎರಡು ಯೋಗಗಳು ಇಲ್ಲದಂತೆ ಹೋಗುವುದು.

3) **ದುಃಖಮಾಪ್ತು** = ದುಃಖವನ್ನು ಹೊಂದುತ್ತೀಯ. ಯೋಗಗಳು ಇಲ್ಲದಿರುವಾಗ ಜೀವಿಯು ಕರ್ಮಗಳಿಂದ ದುಃಖವನ್ನು ಹೊಂದುತ್ತಲೇ ಇರುತ್ತಾನೆ. ಕರ್ಮಗಳು ನಶಿಸುವ ಯೋಗ ಇರುವಾಗಲೇ ಜೀವಿಯು ದುಃಖ ಹೊಂದುವುದಿಲ್ಲ.

4) **ಯೋಗಯುಕ್ತೋ** = ಯೋಗದಿಂದ ಕೂಡಿಕೊಂಡವನು ಎಂದರೆ ಕೆಲಸಗಳು ಮಾಡುತ್ತಿದ್ದರೂ ಕರ್ಮಯೋಗದಿಂದ ಕೂಡಿಕೊಂಡಿರುವವನು.

5) **ಮುನಿ** = ಮೌನ ವಹಿಸಿದವನು. ಮನಸ್ಸಾಗಲಿ ಇಂದ್ರಿಯಗಳಾಗಲಿ ಕದಲದೆ ಬ್ರಹ್ಮಯೋಗವಾಚರಿಸುವವನು.

**6) ಬ್ರಹ್ಮ** = ಪರಮಾತ್ಮ ಅಥವಾ ಮೋಕ್ಷ.

**7) ನಚಿರೇಣಾಧಿ ಗಚ್ಛತಿ** = ಬೇಗ ಹೊಂದುತ್ತೀಯಾ

**ಭಾವಾರ್ಥ** : ಕರ್ಮನಾಶವಾಗುವ ಎರಡು ಯೋಗಗಳು ಇಲ್ಲದಿದ್ದರೂ ದುಃಖ ಹೊಂದುತ್ತೀಯ. ಕರ್ಮಯೋಗ, ಬ್ರಹ್ಮಯೋಗ ಹೊಂದಿದವನು ಶೀಘ್ರವಾಗಿ ಮೋಕ್ಷ ಹೊಂದಿ ಪರಮಾತ್ಮನೊಳಗೆ ಐಕ್ಯವಾಗುತ್ತಾನೆ.

**(4) ಶ್ಲೋ॥ 7 : ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ ।**
**ಸರ್ವಭೂತಾತ್ಮ ಭೂತಾತ್ಮಾ ಕುರ್ವನ್ನಪಿ ನಲಿಪ್ಯತೇ ॥**
**(ಬ್ರಹ್ಮಯೋಗ)**

**ಭಾವಾರ್ಥ** : ವಿಶುದ್ಧಾತ್ಮನಾಗಿ ಜಿತೇಂದ್ರಿಯನಾಗಿ ಸರ್ವಜೀವಿಗಳೊಂದರ ಆತ್ಮವನ್ನು ತನ್ನ ಆತ್ಮವಾಗಿ ತಿಳಿಯುವ ಯೋಗಿಗೆ ಕರ್ಮಗಳು ಇರುವುದಿಲ್ಲ.

**ವಿವರ** : ಗುಣಗಳು ಅಂಟದ ಶುದ್ಧಾತ್ಮನಾದ ಜೀವಿಯು, ಇಂದ್ರಿಯಗಳೊಂದರ ಕೆಲಸಗಳನ್ನು ನಿಲ್ಲಿಸಿ ಬ್ರಹ್ಮಯೋಗವನ್ನು ಹೊಂದಿ, ಆ ಯೋಗದಲ್ಲಿ ಆತ್ಮವನ್ನು ನೋಡಿ, ಉಳಿದ ಜೀವರಾಶಿಗಳಲ್ಲಿನ ಆತ್ಮವೂ ತನ್ನಲ್ಲಿನ ಆತ್ಮದಂತೆ ಇರುತ್ತದೆಂದು ತಿಳಿದುಕೊಂಡವನಿಗೆ, ಮೊದಲು ಮಾಡಿದ ಸಂಚಿತಕರ್ಮಗಳು ನಾಶವಾಗುತ್ತವೆ. ಇದು ಪೂರ್ತಿ ಬ್ರಹ್ಮ ಯೋಗಿಗಳಿಗೆ ಸಂಬಂಧಿಸಿದ ಶ್ಲೋಕ. ಕೆಳಗೆ ಕರ್ಮಯೋಗಕ್ಕೆ ಸಂಬಂಧಿಸಿದ ಶ್ಲೋಕಗಳನ್ನು ತಿಳಿಸುತ್ತಿದ್ದಾನೆ.

**(4) ಶ್ಲೋ॥ 8 : ನೈವ ಕಿಂಚಿತ್ಕ ರೋಮೀತಿ ಯುಕ್ತೋ ಮನ್ಯೇತತತ್ತ್ವವಿತ್ ।**
**ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ ಅಶ್ನನ್ ಗಚ್ಚನ್ ಸ್ವಪನ್ ಶ್ವಸನ್ ॥**
**(ಕರ್ಮಯೋಗ)**

**(4) ಶ್ಲೋ॥ 9 : ಪ್ರಲಪನ್ ವಿಸ್ರುಜನ್ ಗೃಹ್ಣನ್ ಉನ್ಮಿಷನ್ನಿಮಿಷನ್ನಪಿ ।**
**ಇಂದ್ರಿಯಾಣೀಂದ್ರಿಯಾರ್ಥೇಷು ವರ್ತನ್ತ ಇತಿ ಧಾರಯನ್ ॥**
**(ಕರ್ಮಯೋಗ)**

**(4) ಶ್ಲೋ॥ 10 : ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿಯಃ।**
**ಲಿಪ್ಯತೇ ನ ಸ ಪಾಪೇನ ಪದ್ಮಪತ್ರ ಮಿವಾಂಭಸಾ ॥**
**(ಕರ್ಮಯೋಗ)**

**ಭಾವಾರ್ಥ :** ಆತ್ಮಜ್ಞಾನವನ್ನು ತಿಳಿದುಕೊಂಡ ಕರ್ಮಯೋಗಿ ಯಾವ ಕಾರ್ಯಕ್ಕೂ ತಾನು ಕರ್ತನು ಅಲ್ಲವೆಂದು ತಿಳಿದು ನೋಡುತ್ತಾ, ಕೇಳುತ್ತಾ, ಮುಟ್ಟುತ್ತಾ, ವಾಸನೆ ನೋಡುತ್ತಾ, ತಿನ್ನುತ್ತಾ, ನಡೆಯುತ್ತಾ, ನಿದ್ರಿಸುತ್ತಾ, ಶ್ವಾಸ ಬಿಡುತ್ತಾ ತೆಗೆದುಕೊಳ್ಳುತ್ತಾ, ಮಾತನಾಡುತ್ತಾ, ಮಲಮೂತ್ರಗಳನ್ನು ವಿಸರ್ಜಿಸುತ್ತಾ, ಏನನ್ನಾದರೂ ಗ್ರಹಿಸುತ್ತಾ, ಕಣ್ಣುಗಳು ತೆರೆಯುತ್ತಾ ಮತ್ತು ಕಣ್ಣುಗಳನ್ನು ಮುಚ್ಚುತ್ತಾ ತಮ್ಮ ತಮ್ಮ ಕಾರ್ಯಗಳನ್ನು ಇಂದ್ರಿಯಗಳು ಮಾಡುತ್ತಿವೆ ಎಂದು ತಿಳಿಯುತ್ತಿರುತ್ತಾನೆ. ಈ ವಿಧವಾಗಿ ತನ್ನ ಶರೀರದಲ್ಲಿ ನಡೆಯುವ ಕೆಲಸಗಳನ್ನು ಬ್ರಹ್ಮಾರ್ಪಣವನ್ನು ಹೊಂದಿ ಸಂಗಮ ಎನ್ನುವುದು ವರ್ಜಿಸಿದವನು ತಾವರೆ ಎಲೆಗೆ ನೀರಂಟದಂತೆ ಅಖಿಲ ಪಾಪಗಳು ಅಂಟುವುದಿಲ್ಲ.

**ವಿವರ :** ಮೇಲೆ ಹೇಳಿರುವ ಕಾರ್ಯಗಳೆಲ್ಲವೂ ಎರಡು ವಿಧಗಳಾಗಿ ವಿಭಜಿಸಲ್ಪಟ್ಟಿವೆ. ಒಂದು ಇಷ್ಟವಿದ್ದು ನಡೆಯುವವು, ಎರಡು ನಮ್ಮ ಇಷ್ಟವಿದ್ದರೂ ಇಷ್ಟವಿಲ್ಲದಿದ್ದರೂ ನಡೆಯುವವು. ಹೊರಗೇ ಅಲ್ಲದೆ ಶರಿರದೊಳಗೂ ಸಹ ಕೆಲಸಗಳು ನಡೆಯುತ್ತಲೇ ಇವೆ. ಇವುಗಳನ್ನು ಸೈನ್ಸಿನಲ್ಲಿಯೂ ಸಹ **ಇಚ್ಛಾಧೀನ, ಅನಿಚ್ಛಾಧೀನ** ಕಾರ್ಯಗಳೆನ್ನುತ್ತಿದ್ದಾರೆ. ನೋಡುವುದು, ಕೇಳುವುದು, ತಾಕುವುದು, ತಿನ್ನುವುದು, ನಡೆಯುವುದು ಮೊದಲಾದವೆಲ್ಲವೂ ನಮ್ಮ ಇಚ್ಛೆ ಪ್ರಕಾರವೇ ನಡೆಯುತ್ತಿವೆಯೆಂದು ಇಂತಹವೆಲ್ಲವೂ ಇಚ್ಛಾಧೀನ ಕಾರ್ಯಗಳೆಂದು, ನಮಗೆ ತಿಳಿಯದೆಯೇ ನಡೆಯುವ ಶ್ವಾಸ, ಕಣ್ಣುಗಳು ಮುಚ್ಚುವುದು, ತೆರೆಯುವುದು ಹಾಗೇ ಶರೀರದಲ್ಲಿ ನಡೆಯುವ ಗುಂಡಿಗೆ(ಹಾರ್ಟ್), ಮೂತ್ರ ಪಿಂಡಗಳ, ಜೀರ್ಣಾಶಯಗಳ ಕಾರ್ಯಗಳನ್ನು ಅನಿಚ್ಛಾಧೀನ ಕಾರ್ಯಗಳೆಂದು ಕರೆಯತ್ತಿದ್ದಾರೆ.

ವಾಸ್ತವಕ್ಕೆ ಸೈನ್ಸಿನ ಪ್ರಕಾರ ಈ ಮಾತು ತಪ್ಪೆಂದು ನಿರೂಪಿಸಬಹುದು. ಏಕೆಂದರೆ ಒಂದಾನೊಂದು ಸಮಯದಲ್ಲಿ ಇಚ್ಛಾಧೀನವಾಗಿ ಚಲಿಸುವ ಕಾಲು ಕೈಗಳೂ ಸಹ ಅನಿಚ್ಛಾಧೀನವಾಗಿ ಕೆಲಸಮಾಡುತ್ತಿವೆ. ಕಾಲಿನ ಮೇಲೆ ಏನೋ ಓಡಾಡಿದಂತೆ ಎನಿಸುತ್ತಲೇ ನಿನಗೆ ತಿಳಿಯದೇ ಕಾಲು ಕೈಗಳು ಕದಲುತ್ತವೆ. ನಿದ್ರೆಯಲ್ಲಿ ನಿನಗೆ ತಿಳಿಯದೆಯೇ ನಿನ್ನ ಇಚ್ಛೆ ಇಲ್ಲದೇ ಕಾಲು ಕೈಗಳು ಕದಲುತ್ತಿವೆ. ನಿದ್ರೆಯಲ್ಲಿ ನಡೆದುಹೋಗುವವರೂ ಸಹ ಇದ್ದಾರೆ. ಇದರಿಂದ ಇಚ್ಛಾಧೀನ ಕಾರ್ಯಗಳು ಎನ್ನುವುದು ಸೈನ್ಸ್ ಪ್ರಕಾರವೂ ಸಹ ಪೂರ್ತಿ ಸತ್ಯವಲ್ಲ.

ನಮಗೆ ತಿಳಿದಿರುವಂತೆ ತಿಳಿದು ನಡೆಯುವವು, ತಿಳಿಯದೆ ನಡೆಯುವವೆಂದು ಎರಡು ವಿಧಗಳಾಗಿ ಹೇಳಬಹುದು. ಈ ಮಾತನ್ನು ಯಾರು ಖಂಡಿಸಲಾರರು. ಕೆಲವು ಕೆಲಸಗಳು ಜೀವಾತ್ಮಕ್ಕೆ ತಿಳಿದು ನಡೆಯುತ್ತಿವೆ. ಕೆಲವು ತಿಳಿಯದೆ ನಡೆಯುತ್ತಿವೆ. ಉದಾಹರಣೆಗೆ

ಮೂತ್ರವನ್ನು ತಿಳಿದು ಒಯ್ಯುತ್ತಿದ್ದೇವೆ. ಕೆಲವು ಸಮಯಗಳಲ್ಲಿ ತಿಳಿಯದೇ ಒಯ್ದುಕೊಳ್ಳವುದೂ ಸಹ ನಡೆಯುತ್ತಿದೆ. ಪ್ರತಿಯೊಂದು ನನ್ನ ಇಷ್ಟಪ್ರಕಾರ ನಡೆಯುತ್ತಿದೆಯೆಂದುಕೊಳ್ಳವುದು ಅಹಂಕಾರದಿಂದ ಕೂಡಿದ ಅಜ್ಞಾನವಾಗುತ್ತದೆ. ಉದಾಹರಣೆಗೆ ನಡೆಯುವಾಗ ನನ್ನ ಇಷ್ಟ ಪ್ರಕಾರ ನಡೆದಾಡುತ್ತಿದ್ದೇನೆಂದುಕೊಳ್ಳುವುದು ಅಜ್ಞಾನ. ಇದರಲ್ಲಿ ಅಹಂಕಾರ ತುಂಬಿದೆ. ಕಾಲುಗಳು ನಡೆಯುತ್ತಿವೆ ಎಂದು ನನಗೆ ತಿಳಿಯುತ್ತಿದೆಂದುಕೊಳ್ಳುವುದು ಜ್ಞಾನವಾಗುತ್ತದೆ. ಇದರಲ್ಲಿ ಅಹಂಕಾರವಿಲ್ಲ. ನಿದ್ರೆಯಲ್ಲಿ ನಡೆದಾಡುವುದು ನಿನಗೆ ತಿಳಿಯದಂತೆ ನಡೆದಾಡುವುದೇ ಅಲ್ಲವೆ! ಆಗ ನನಗೆ ತಿಳಿಯದಂತೆ ನಡೆದಾಡಿದ್ದೇನೆಂದುಕೊಳ್ಳಬಹುದು. ಹಾಗಲ್ಲದೆ ನನ್ನ ಇಷ್ಟಪ್ರಕಾರ ನಡೆದಾಡಿದ್ದೇನೆಂದು ಹೇಳಲಾರೆವು ಅಲ್ಲವೆ!

ಶರೀರದಲ್ಲಿ ನಡೆಯುವ ಕೆಲಸಗಳೆಲ್ಲವೂ ನಮಗೆ ತಿಳಿದು ನಡೆಯುತ್ತಿವೆ. ಆದರೆ ಇಷ್ಟಪ್ರಕಾರ ನಡೆಯುತ್ತಿವೆಂದುಕೊಳ್ಳಬಾರದು. ಈ ವಿಧವಾಗಿಯೇ ತಿಳಿದ ಜ್ಞಾನಿಯು ಶರೀರದಲ್ಲಿ ನಡೆಯುವ ಕಾರ್ಯಗಳೆಲ್ಲವನ್ನೂ ಕೆಲವು ನನಗೆ ತಿಳಿದು ನಡೆಯುತ್ತಿವೆ, ಕೆಲವು ತಿಳಿಯದೆಯೇ ನಡೆಯುತ್ತಿವೆ ಎಂದು, ಶರೀರದಲ್ಲಿ ಅವು ಅವುಗಳ ಕಾರ್ಯಗಳು ಅವು ಮಾಡುತ್ತಿವೆ ತಿಳಿದುಕೊಳ್ಳುತ್ತಾನೆ. ಅಜ್ಞಾನ ಇರುವಾಗ ಹೇಗೆ ಇರುತ್ತದೆಂದರೆ ರಾತ್ರಿ ಸಮಯ ಮನೆಯ ಹೊರಗೆ ನಿದ್ರೆಹೋದವನು ಬೆಳಿಗ್ಗೆ ಮನೆಯಲ್ಲಿ ಎಚ್ಚರಗೊಂಡಾಗ ಹೊರಗಿನಿಂದ ಮನೆಯೊಳಗೆ ಯಾವಾಗ ಬಂದಿರುವುದು ನಿಜವಾಗಲು ತಿಳಿಯದು, ಎಷ್ಟು ಯೋಚಿಸಿದರೂ ಅರ್ಥವಾಗಲಿಲ್ಲ. ಇತರರನ್ನು ಕೇಳಿದನು, ಸ್ವಲ್ಪ ಮಳೆ ಬಂದಿದೆ ತಕ್ಷಣ ಬಂದು ಒಳಗೆ ಮಲಗಿದ್ದೀಯಾ ಎಂದು ಹೇಳಿದರು. ನಡೆದಿರುವುದು ವಾಸ್ತವವೇ ನಿನ್ನ ಕಾಲುಗಳು ನಡೆದಿವೆ. ಕೈಗಳು ಒದ್ದುಕೊಂಡ ಬಟ್ಟೆಗಳನ್ನು ತೆಗೆದುಕೊಂಡಿವೆ. ಒಳಗೆ ಬಂದು ಮಲಗುವುದು ನಡೆದಿದೆ. ಇವೆಲ್ಲವೂ ತಿಳಿಯದೆ ನಡೆದಿದೆ. ಈ ಒಂದು ಸಂಘಟನೆ ಸಾಕು ನಾವು ಬೇರೆ ನಮ್ಮ ಶರೀರ ಬೇರೆ ಎಂದು, ನಮ್ಮ ಶರೀರವನ್ನು ನಡೆಸಿ ಕೆಲಸಮಾಡಿಸುವ ಶಕ್ತಿ ಬೇರೊಂದಿದೆ ಎಂದು ಸುಲಭವಾಗಿ ತಿಳಿಯಬಹುದು. ಆಗಲೂ ಸಹ ತಿಳಿಯದೆ ಹೋದರೆ ನೀನೆಂತಹವನು ಎಂದರೆ! ಆಗಾಗ ಕೇಳಿದಾಗಲೆಲ್ಲಾ ನಿನಗೆ ಬೇಕಾದ ಅನ್ನ, ಸಾರು ಕೊಟ್ಟಮಾತ್ರಕ್ಕೆ ಪಕ್ಕದ ಮನೆಯ ಹೆಂಡತಿಯನ್ನು ನಿನ್ನ ಹೆಂಡತಿ ಎಂದುಕೊಳ್ಳುವುದು ಎಷ್ಟು ತಪ್ಪೋ, ನಿನಗೆ ಅಗತ್ಯವಾದಾಗ ಅನುಕೂಲವಾಗಿ ಚಲಿಸಿದ ಅವಯವಗಳಿಗೆ ನೀನೇ ಅಧಿಪತಿ ಅಂದುಕೊಳ್ಳುವುದೂ ಸಹ ಅಷ್ಟೇ ತಪ್ಪಾಗುತ್ತದೆ. ಪಕ್ಕದ ಮನೆಯ ಹೆಂಡತಿಗೆ ಗಂಡ ಇದ್ದಂತೆ ನಿನ್ನ ಅವಯವಗಳನ್ನು ಆಡಿಸುವ ಪತಿ ಒಬ್ಬನಿದ್ದಾನೆ. ಆ ಸ್ಥಾನ ನನ್ನದೆಂದುಕೊಳ್ಳುವುದು ತಪ್ಪಾಗುತ್ತದೆ.

ನಮ್ಮ ಶರೀರದಲ್ಲಿ ನೂರಕ್ಕೆ ಮೂವತ್ತರಷ್ಟು ಕೆಲಸಗಳು ತಿಳಿದು ನಡೆಯುತ್ತಿವೆ. ಎಪ್ಪತ್ತರಷ್ಟು ತಿಳಿಯದೇ ನಡೆಯುತ್ತಿವೆಯೆಂದು ತಿಳಿದವನು, ತಿಳಿದು ತಿಳಿಯದೆ ನಡೆಯುವ ಕೆಲಸಗಳಿಗೆ ತಾನು ಕಾರಣ ಅಲ್ಲವೆಂದು, ಅವು ನಡೆಯುವುದಕ್ಕೆ ಕರ್ಮವೇ ಕಾರಣವೆಂದು ತಿಳಿದಾಗ ಅವನು ನಿಜವಾದ ಕರ್ಮಯೋಗಿ ಆಗುತ್ತಾನೆ. ನಡೆಯುವ ಕೆಲಸಗಳಲ್ಲಿ ಕರ್ಮಗಳು ಅವನನ್ನು ಅಂಟುವುದಿಲ್ಲ. ಯೋಗದಿಂದ ಏರ್ಪಡುವ ಅಗ್ನಿಗೆ ಅವು ಸುಟ್ಟುಹೋಗುತ್ತವೆ.

**(4) ಶ್ಲೋ॥ 11 : ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ ।**
**ಯೋಗಿನಃ ಕರ್ಮ ಕುರ್ವನ್ತಿ ಸಂಗಮ್ ತ್ಯಕ್ತ್ವಾ ಉಉತ್ಮಶುದ್ಧಯೇ ॥**
**(ಕರ್ಮಯೋಗ)**

**(4) ಶ್ಲೋ॥ 12 : ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾಂತಿ ಮಾಪ್ನೋತಿ ನೈಷ್ಠಿಕೀಮ್ ।**
**ಅಯುಕ್ತಃ ಕಾಮ ಕಾರೇಣ ಫಲೇ ಸಕ್ತೋನಿಬಧ್ಯತೇ ॥**
**( ಕರ್ಮಯೋಗ)**

**ಭಾವಾರ್ಥ:** ಶರೀರ, ಮನಸ್ಸು, ಬುದ್ಧಿ ಇಂದ್ರಿಯಗಳಿಂದ ನಡೆಯುವ ಕೆಲಸಗಳಿಗೆ ಸಂಗಮ ಇಲ್ಲದಂತೆ, ಆತ್ಮಶುದ್ಧಿಯೇ ಆಶಯವಾಗಿ ಕರ್ಮಫಲಗಳಲ್ಲಿ ಆಸೆಯನ್ನು ಬಿಟ್ಟಿರುವ ಕರ್ಮಯೋಗಿ ಕೆಲಸಗಳು ಮಾಡುತ್ತಿದ್ದರು ಶಾಂತಿಯನ್ನು ಹೊಂದುತ್ತಾನೆ. ಕರ್ಮಯೋಗಿ ಅಲ್ಲದವನು ಕೋರಿಕೆಗಳನ್ನು ಬಿಡಲಾರದೆ ಬಂಧನದಲ್ಲಿ (ಕರ್ಮಗಳಲ್ಲಿ) ಸಿಲುಕಿಕೊಂಡಿರುತ್ತಾನೆ.

**(4) ಶ್ಲೋ॥ 13 : ಸರ್ವಕರ್ಮಾಣಿ ಮನಸಾ ಸನ್ನ್ಯಸ್ಯಾಸ್ತೇ ಸುಖಂ ವಶೀ ।**
**ನವದ್ವಾರೇ ಪುರೇ ದೇಹೀ ನೈವ ಕುರ್ವನ್ ನ ಕಾರಯನ್ ॥**
**(ಕರ್ಮಯೋಗಿ)**

**ಭಾವಾರ್ಥ** : ಮನಸ್ಸಿನಿಂದ ಸನ್ಯಸಿಸಿ, ಕರ್ಮಕಾರ್ಯಗಳನ್ನು ತನ್ನ ನವದ್ವಾರಪುರ ದೇಹಕ್ಕೆ ಬಿಟ್ಟು, ಕಾರ್ಯಕರ್ತನಲ್ಲದೆ ಯೋಗಿ ಸುಖವಾಗಿ ನಿವಾಸಿಸುತ್ತಿರುತ್ತಾನೆ.

**(4) ಶ್ಲೋ॥ 14 : ನಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ।**
**ನ ಕರ್ಮ ಫಲ ಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥**
**(ಪ್ರಕೃತಿ)**

**ಭಾವಾರ್ಥ :** ಭೂಮಿ ಮೇಲೆ ಕರ್ಮಗಳನ್ನಾಗಲಿ, ಕಾರ್ಯಗಳನ್ನಾಗಲಿ, ಅವುಗಳ ಫಲಿತಗಳಲ್ಲಿ ಆಸೆಯನ್ನಾಗಲಿ ಆತ್ಮ ಯಾರಿಗೂ ಉಂಟುಮಾಡುವುದಿಲ್ಲ, ಪ್ರಕೃತಿ ಸ್ವಭಾವದಿಂದಲೇ ಅವು ಉಂಟಾಗುತ್ತಿರುತ್ತವೆ.

**ವಿವರ** : ಸ್ವಧರ್ಮ ಪರಧರ್ಮವನ್ನು ಹೇಳಿದಾಗಲೇ ಆತ್ಮಧರ್ಮ ಬೇರೆ ಎಂದು, ಪ್ರಕೃತಿ ಧರ್ಮ ಬೇರೆ ಎಂದು ಹೇಳಿದ್ದೇವೆ. ಪರಧರ್ಮವಾದ ಪ್ರಕೃತಿ ನಮ್ಮ ಶರೀರವೆಲ್ಲಾ ತುಂಬಿಕೊಂಡಿದೆ. ಅದರ ಸ್ವಭಾದಿಂದಲೇ ಸರ್ವವು ನಡೆಯುತ್ತಿವೆ. ನಡೆಯುತ್ತಿರುವವುಗಳನ್ನು ಆತ್ಮ ಸಾಕ್ಷಿಯಾಗಿ ನೋಡುತ್ತಿದೆಯಾಗಲಿ, ಆತ್ಮ ಏನನ್ನು ಉಂಟುಮಾಡುವುದಿಲ್ಲ.

**(4) ಶ್ಲೋ॥ 15 : ನಾದತ್ತೇ ಕಸ್ಯಚಿ ತ್ಪಾಪಂ ನ ಚೈವ ಸುಕೃತಂ ವಿಭುಃ ।**
**ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯನ್ತಿ ಜನ್ತವಃ ॥**

**(ಪ್ರಕೃತಿ)**

**ಭಾವಾರ್ಥ** : ಯಾರ ಪಾಪವನ್ನಾಗಲಿ, ಯಾರ ಪುಣ್ಯವನ್ನಾಗಲಿ ಆತ್ಮ ತೊಲಗಿಸುವುದಿಲ್ಲ. ಅಜ್ಞಾನದಿಂದ ಜ್ಞಾನ ಮುಚ್ಚಲ್ಪಟ್ಟಿದೆ. ಅದರಿಂದ ಧರಣಿಯಲ್ಲಿ ಜನರು ಭ್ರಮಿಸುತ್ತಿದ್ದಾರೆ.

**ವಿವರ** : ಯಾರು ಎಷ್ಟು ಯೋಗವಾಚರಿಸಿದರೆ ಅಷ್ಟು ಕರ್ಮ ಸುಟ್ಟು ಹೋಗುತ್ತದೆಂದು ಮೊದಲೇ ಹೇಳಿಕೊಂಡಿದ್ದೇವೆ. ಆತ್ಮ ಯಾರ ಕರ್ಮವನ್ನು ತೊಲಗಿಸುವುದಿಲ್ಲ. ತೊಲಗಿಸಿ ಕೊಳ್ಳುವುದೇನೋ ಯಾರಿಷ್ಟಕ್ಕೆ ಅವರು ಮಾಡಿಕೊಳ್ಳಬೇಕಾದ್ದೇ. ಅದೂ ಯೋಗಪದ್ಧತಿ ಮೂಲಕವೇ ಸಾಧ್ಯವಾಗುತ್ತದೆ. ಹಾಗಲ್ಲದೆ ಅಜ್ಞಾನಿಗಳು ನಾವು ಎಷ್ಟೋ ಆರಾಧನೆಗಳು ಮಾಡುತ್ತಿದ್ದೇವೆ, ನಮ್ಮ ಪಾಪವನ್ನು ದೇವರು ತೆಗೆದುಹಾಕುತ್ತಾನೆ ಎನ್ನುವುದು ಪರಿಪಾಠವಾಗಿದೆ. ಬೆಳಗ್ಗೆಯಿಂದ ಪಾಪದ ಕೆಲಸಗಳು ಮಾಡಿ ಸಾಯಂಕಾಲ ನಮಸ್ಕರಿಸಿದರೆ ದೇವರು ಕ್ಷಮಿಸುತ್ತಾನೆಂದು ಕೆಲವರು ಅಂದುಕೊಳ್ಳುತ್ತಾರೆ. ಮತ್ತೆ ಕೆಲವರು ನಾವು ಮಾಡಿದ ಪಾಪಗಳು ಹೋಗಿ ನಮಗೆ ಲಾಭ ಕೈಗೂಡಲೆಂದಲ್ಲವೆ ನಾವು ಸಾವಿರಾರು ಹಣ ಖರ್ಚುಮಾಡಿ ಪೂಜೆಗಳು ಮಾಡಿಸುತ್ತೇವೆ ಎನ್ನುತ್ತಿದ್ದಾರೆ. ಅಜ್ಞಾನವು ಜ್ಞಾನವನ್ನು ಮುಚ್ಚಿಡುವುದರಿಂದ, ಭೂಮಿ ಮೇಲೆ ಪಾಪಗಳ ನಿವೃತ್ತಿಗೋಸ್ಕರ ಅನೇಕ ಆರಾಧನೆಗಳು ಏರ್ಪಟ್ಟು, ಅವು ಮಾಡುವವರಿಗೆ ದೇವರು ಪಾಪ ಇಲ್ಲದಂತೆ ಮಾಡುತ್ತಾನೆಂದು ಭ್ರಮಿಸುವಂತೆ ಮಾಡುತ್ತಿವೆ. ವಾಸ್ತವಕ್ಕೆ ಇವೆಲ್ಲವೂ ಮಾನವನು ಭ್ರಮೆಯಿಂದಲೇ ಮಾಡುತ್ತಿರುವವೆಂದು ತಿಳಿಯಬೇಕು.

**(4) ಶ್ಲೋ॥ 16 : ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತ ಮಾತ್ಮನಃ ।**
**ತೇಷಾ ಮಾದಿತ್ಯವದ್ ಜ್ಞಾನಂ ಪ್ರಕಾಶಯತಿ ತತ್ಪರಮ್॥**

**(ಆತ್ಮಜ್ಞಾನ)**

**ಭಾವಾರ್ಥ :** ಜ್ಞಾನದಿಂದ ಯಾರ ಅಜ್ಞಾನವೆಲ್ಲವೂ ಇಲ್ಲದಂತೆ ಹೋಗುತ್ತದೊ, ಅಂತಹವರಿಗೆ ಜ್ಞಾನ ಸೂರ್ಯನಂತೆ ಪ್ರಕಾಶಿಸುತ್ತಾ ಅವರಿಗಿರುವ ಭ್ರಮೆಗಳೆಲ್ಲಾ ತೊಲಗಿಹೋಗುತ್ತವೆ.

**ವಿವರ :** ಆರಾಧಿಸಿದರೆ ಪಾಪಗಳು ಹೋಗುತ್ತವೆಂದು ಭ್ರಮಿಸುವವರಿಗೆ ಆತ್ಮಜ್ಞಾನ ಉಂಟಾಗುವುದರಿಂದ, ಅವರಿಗಿರುವ ಅಜ್ಞಾನವೆಲ್ಲವೂ ತೊಲಗಿಹೋಗಿ ಜ್ಞಾನ ದೃಷ್ಟಿ ಉಂಟಾಗುವುದರಿಂದ, ಕರ್ಮಗಳು ಹೋಗುವ ಮಾರ್ಗಚೆನ್ನಾಗಿ ಕಾಣಿಸುತ್ತದೆ. ಅಲ್ಲಿಯವರೆಗೂ ಅವರಿಗಿರುವ ಅಂಧತ್ವವು ಇಲ್ಲದಂತೆಹೋಗುತ್ತದೆ. ಸ್ವಚ್ಛವಾದ ಜ್ಞಾನದೃಷ್ಟಿಯಿಂದ ಪಾಪಗಳು ಹೋಗುವುದಕ್ಕೆ ಯೋಗಮಾರ್ಗವು ಹೊರತು ಬೇರೆ ಇಲ್ಲವೆಂದು, ಅದು ತನ್ನ ಮೇಲೆಯೇ ಆಧಾರಪಟ್ಟಿದೆ ಎಂದು ತಿಳಿಯುತ್ತದೆ. ತಿಳಿದ ನಂತರ ಯೋಗಮಾರ್ಗದಲ್ಲಿ ಪ್ರಯಾಣಿಸುವುದಕ್ಕೆ ಪ್ರಯತ್ನಿಸುತ್ತಾನೆ.

**(4) ಶ್ಲೋ॥ 17 : ತದ್ಬುದ್ಧಯ ಸ್ತದಾತ್ಮಾನ: ಸ್ತನ್ನಿಷ್ಠಾ ಸ್ತತ್ಪರಾಯಣಾಃ ।**
**ಗಚ್ಛನ್ತ್ಯ ಪುನರಾವೃತ್ತಿಂ ಜ್ಞಾನ ನಿರ್ಧೂತ ಕಲ್ಮಷಾಃ ॥**
**(ಬ್ರಹ್ಮಯೋಗ)**

**ಭಾವಾರ್ಥ :** ಆತ್ಮನಲ್ಲಿ ಧ್ಯಾಸಹೊಂದಿ, ಮನೋಬುದ್ಧಿ ನಿಷ್ಟೆಗಳೆಲ್ಲವೂ ಆತ್ಮನಲ್ಲಿ ನಿಲ್ಲಿಸಿ, ಯೋಗವಾಚರಿಸುವವರು ಜ್ಞಾನಾಗ್ನಿಯಿಂದ ಕಲ್ಮಷಗಳೆಲ್ಲವೂ ಸುಟ್ಟುಹಾಕಲ್ಪಟ್ಟವನಾಗಿ ಜನ್ಮಗಳಿಲ್ಲದ ಮೋಕ್ಷ ಪಡೆಯುತ್ತಾನೆ.

**ವಿವರ :** ಆತ್ಮಜ್ಞಾನ ಹೊಂದಿದವನು ತನ್ನ ಪಾಪಪುಣ್ಯಗಳೆಲ್ಲಾ ಹೇಗೆ ಹೋಗುತ್ತವೆಂದು ತಿಳಿದವನಾಗಿ, ಬ್ರಹ್ಮಯೋಗ ಆಚರಿಸಬೇಕೆಂದು ಆಲೋಚನೆಮಾಡಿ ತನ್ನ ಮನಸ್ಸನ್ನು ಬುದ್ಧಿಯನ್ನು ಪಕ್ಕದ ಧ್ಯಾಸಗಳಿಗೆ ಹೋಗದಂತೆ ಇಡುವುದರಿಂದ ಲಭಿಸುವುದು ಆತ್ಮಪ್ರಾಪ್ತಿ ಎಂದು ಗ್ರಹಿಸಿ, ಆ ವಿಧವಾಗಿಯೇ ಆಚರಿಸಿ ಆತನ ಕರ್ಮವೆಲ್ಲವೂ ನಾಶಮಾಡಿಕೊಂಡು ಪುನಃ ಜನ್ಮ ಇಲ್ಲದಂತಹ ಸ್ಥಿತಿಯನ್ನು ಹೊಂದುತ್ತಾನೆ. ಅಂತಹ ಬ್ರಹ್ಮಯೋಗ ಆಚರಿಸುವವನ ಅನುಭೂತಿಗಳು ಹೇಗಿರುತ್ತವೆಂದರೆ!

**(4) ಶ್ಲೋ॥ 18 : ವಿದ್ಯಾ ವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।**
**ಶುನಿಚೈವ ಶ್ವಪಾಕೇಚ ಪಂಡಿತಾಃ ಸಮದರ್ಶಿನಃ ॥**
**(ಬ್ರಹ್ಮಯೋಗ)**

**ಭಾವಾರ್ಥ :** ವಿದ್ಯೆ ವಿನಯಗಳಿಂದ ಕೂಡಿದ ಬ್ರಾಹ್ಮಣನಲ್ಲಿ, ಗೋವುಗಳಲ್ಲಿ, ಆನೆಗಳಲ್ಲಿ, ನಾಯಿಗಳಲ್ಲಿ, ನಾಯಿಗಳನ್ನು ತಿನ್ನುವ ಚಾಂಡಾಲನಲ್ಲಿಯೂ ಪಂಡಿತರ ದೃಷ್ಟಿ ಸಮವಾಗಿರುತ್ತದೆ.

**ವಿವರ :** ಈ ಶ್ಲೋಕದಲ್ಲಿ ಉಚ್ಛ, ನೀಚ, ಮಧ್ಯಮ, ಮೂರು ಹೇಳಿ ಅವುಗಳನ್ನು ಸಮಾನವಾಗಿ ನೋಡುವವರು ಯೋಗಿ ಎಂದು ಹೇಳಿದ್ದಾರೆ. ಮನುಷ್ಯರಲ್ಲಿ ಉಚ್ಛಮ ಬ್ರಾಹ್ಮಣರನ್ನು, ನೀಚ ನಾಯಿಮಾಂಸ ತಿನ್ನುವ ಚಾಂಡಾಲನೆಂದು ಹೇಳುವುದಾಗಿದೆ. ಹಾಗೆ ಪ್ರಾಣಿಗಳಲ್ಲಿ ಉತ್ತಮವಾದ ಹಸುವನ್ನು, ಮಧ್ಯಮವಾದ ಆನೆಯನ್ನು, ನೀಚವಾದ ನಾಯಿಯನ್ನು ಹೇಳುವುದಾಗಿದೆ. ಈ ವಿಧವಾಗಿ ಉಚ್ಛ ನೀಚ ಜೀವರಾಶಿಗಳಲ್ಲಿಯೂ, ಮಧ್ಯಮ ವಾದವುಗಳಲ್ಲಿಯೂ, ಆತ್ಮ ಸಮಾನವಾಗಿದೆ ಎಂದು ಬ್ರಹ್ಮಯೋಗಿ ಗ್ರಹಿಸುತ್ತಾನೆ. ಮೊದಲು ತನ್ನ ಶರೀರದಲ್ಲಿ ಆತ್ಮವನ್ನು ನೋಡಿದವರು ಉಳಿದ ಶರೀರಗಳಲ್ಲಿ ಹೇಗಿರುವುದು ತಿಳಿಯುತ್ತಾರೆ. ತನ್ನ ಶರೀರದಲ್ಲಿ ಆತ್ಮ ಹೇಗಿದೆಯೋ ಎಲ್ಲಿದೆಯೋ, ಎಷ್ಟು ಇದೆಯೋ, ಏನು ಮಾಡುತ್ತಿದೆಯೋ ತಿಳಿದವರು ಉಳಿದ ಎಲ್ಲಾ ಉಚ್ಛ ನೀಚ ಶರೀರಗಳಲ್ಲಿಯೂ ಸಹ ತನ್ನ ಶರೀರದಲ್ಲಿರುವಂತೆ ಇದೆಯೆಂದು ತಿಳಿದು, ತನ್ನ ಶರೀರದಲ್ಲಿ ಎಲ್ಲಿದೆಯೋ ಅಲ್ಲಿಯೆ ಇದೆಯೆಂದು, ತನ್ನಲ್ಲಿ ಎಷ್ಟಿದೆಯೋ ಅಷ್ಟೇ ಇದೆಯೆಂದು, ತನ್ನಲ್ಲೇನು ಮಾಡುತ್ತಿದೆಯೋ ಅದೇ ಕೆಲಸ ಮಾಡುತ್ತಾ ಸಮಾನವಾಗಿ ಇದೆಯೆಂದು ತಿಳಿದುಕೊಳ್ಳುತ್ತಾರೆ. ಆದ್ದರಿಂದ ಬ್ರಹ್ಮಯೋಗಿ ಯಾವ ಜೀವರಾಶಿಯನ್ನು ನೋಡಿದರು ಅದರಲ್ಲಿರುವ ಆತ್ಮವನ್ನು ತನ್ನ ಆತ್ಮನಂತೆ ತಿಳಿಯುತ್ತಾನೆ.

ಕೆಲವರೇನೋ ಉಚ್ಛ ನೀಚಗಳನ್ನು ತಿಳಿಯದಂತೆ ಎರಡನ್ನು ಸಮಾನವಾಗಿ ಆದರಿಸಬೇಕೆಂದು, ಅದೇ ಸಮಾನತ್ವವೆಂದು ಹೇಳಿದ್ದಾರೆ. ಅದು ಬಾಹ್ಯ ಆಚರಣೆಯಾಗುತ್ತದೆ. ಹಾಗಾದರೆ ಹಸುವನ್ನು ಆದರಿಸಿದಂತೆ ನಾಯಿಯನ್ನು ಆದರಿಸುತ್ತೇವೆ ಆದರೆ, ಮಳೆ ಹಾವನ್ನು ಆದರಿಸಿದಂತೆ ನಾಗರಹಾವನ್ನು ಆದರಿಸುವುದಿಲ್ಲ. ಜಿಂಕೆಯನ್ನು ಹತ್ತಿರಕ್ಕೆ ಕರೆದುಕೊಂಡಂತೆ ಹುಲಿಯನ್ನು ಹತ್ತಿರಕ್ಕೆ ಕರೆದುಕೊಳ್ಳುವುದಿಲ್ಲ. ಪ್ರಕೃತಿ ಸಹಜತ್ವದಿಂದ ಅವುಗಳ ಗುಣಗಳು, ನಡುವಳಿಕೆ ಬೇರೆ ಬೇರೆ ಇರುತ್ತವೆ. ಆದ್ದರಿಂದ ನಾವು ತಿಳಿಯದೆ ಅವುಗಳನ್ನೆಲ್ಲ ಒಂದೇಯೆಂದು ನೋಡಿದರೂ ಅವು ಹಾಗಿರುವುದಿಲ್ಲ. ಆದ್ದರಿಂದ ನಾವು ಅವುಗಳ ಪ್ರಕೃತಿ ಸಹಜತ್ವವನ್ನು ಬಿಟ್ಟು ಅವುಗಳಲ್ಲಿನ ಆತ್ಮವೊಂದರ ಸಹಜತ್ವವನ್ನು ನೋಡಬೇಕು. ಎಲ್ಲವುದರಲ್ಲಿಯೂ ಪರಧರ್ಮಗಳು ಹೇಗಿದ್ದರೂ ಸ್ವಧರ್ಮ ಮಾತ್ರ ಒಂದೇ ಎಂದು ಗ್ರಹಿಸಬೇಕು.

**(4) ಶ್ಲೋ॥ 19 : ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇಸ್ಥಿತಂ ಮನಃ ।**
**ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ ಬ್ರಹ್ಮಣಿ ತೇ ಸ್ಥಿತಾಃ ॥**
**(ಬ್ರಹ್ಮಯೋಗ)**

**ಭಾವಾರ್ಥ :** ಯಾರ ಮನಸ್ಸು ಸರ್ವ ಜೀವರಾಶಿಗಳಲ್ಲಿ ಸಮತ್ವವನ್ನು ಗ್ರಹಿಸುತ್ತದೋ, ಆತನು ಇಹದಲ್ಲಿಯೇ ಸಂಸಾರ ಸಮುದ್ರವನ್ನು ದಾಟಿದವನಾಗುತ್ತಿದ್ದಾನೆ. ನಿರ್ದೋಷವಾದ ಎಲ್ಲರಲ್ಲಿಯೂ ಸಮವಾಗಿರುವ ಆತ್ಮವನ್ನು ತಿಳಿಯುವುದರಿಂದ ಅವನು ಆತ್ಮವನ್ನು ಹೊಂದುತ್ತಾನೆ.

**ವಿವರ :** ಇಲ್ಲಿ ಸ್ವಲ್ಪ ಆಳವಾಗಿ ಯೋಚಿಸಬೇಕು. ಬ್ರಹ್ಮಯೋಗವಾಚರಿಸುವ ಆತ್ಮವನ್ನು ತಿಳಿದು, ಅದು ಎಲ್ಲರಲ್ಲಿ ಒಂದೇ ವಿಧವಾಗಿದೆ ಎಂದು ಗ್ರಹಿಸುವುದರಿಂದ, ಆ ಜನ್ಮದಲ್ಲಿಯೇ ಮೋಕ್ಷ ಬಂದಂತೆ ಎಂದು ತಿಳಿಯಬಾರದು. ಮೋಕ್ಷ ಬರಬೇಕೆಂದರೆ ಕರ್ಮ ನಿಶ್ಶೇಷವಾಗಿ ಹೋಗಬೇಕು. ಕರ್ಮ ನಿಶ್ಶೇಷವಾಗಿ ಹೋಗಬೇಕೆಂದರೆ ಕೆಲವು ಜನ್ಮಗಳು ಬೇಕಾಗುತ್ತವೆ. ಇಲ್ಲಿ ಬ್ರಹ್ಮ ಯೋಗದಲ್ಲಿ ಇಹದಲ್ಲಿಯೇ ಸಂಸಾರವನ್ನು ಜಯಿಸಿದವನಾಗುತ್ತಾನೆ, ಎನ್ನುವುದರಲ್ಲಿ ದೇಹವಿದ್ದಂತೆ ಮತ್ತು ಮರಣಿಸದೆ ಶರೀರದಲ್ಲಿ ಜೀವಾತ್ಮ ಇದ್ದಂತೆ ಯೋಗ ಸಮಯದಲ್ಲಿ ಹೊರಗಿನ ಪ್ರಪಂಚದೊಂದಿಗೆ ಸಂಬಂಧವಿಲ್ಲದೆ ಹೋಗುತ್ತಿದ್ದಾನೆ. ಆದ್ದರಿಂದ ಅವನು ಆ ಸಮಯದಲ್ಲಿ ಜಗತ್ತಿನಲ್ಲಿ ಕರ್ಮವನ್ನು ಜಯಿಸಿದಂತೆ ಅವನು ಆತ್ಮವನ್ನು ಹೊಂದುತ್ತಿದ್ದಾನೆ. ಆದರೆ ಪರಮಾತ್ಮನನ್ನು ಹೊಂದಲಿಲ್ಲವೆಂದು ಗ್ರಹಿಸಬೇಕು. ಪರಮಾತ್ಮನನ್ನು ಹೊಂದಿದವನಿಗೆ ಪುನರ್ಜನ್ಮ ಇರುವುದಿಲ್ಲ. ಆತ್ಮವನ್ನು ಹೊಂದಿದವನು ಜನ್ಮವನ್ನೇ ಸ್ಥಂಭಿಸಿದಷ್ಟು ಯೋಗ್ಯತೆಯನ್ನು ಹೊಂದಿದಂತೆ ಕಾಣಿಸುತ್ತದೆ. ಆತ್ಮವನ್ನೇ ಹೊಂದಿದ್ದಾನಾದ್ದರಿಂದ ಜನ್ಮ ತಪ್ಪುವುದಿಲ್ಲ. ಆ ಜನ್ಮದಲ್ಲಿಯೇ ಕರ್ಮ ಮುಗಿದುಹೋದಂತಾದರೆ ಪರಮಾತ್ಮನನ್ನು ಸೇರಿ ಮೋಕ್ಷ ಹೊಂದುತ್ತಾನೆ. ಬ್ರಹ್ಮಯೋಗಿ ಯೋಗದಲ್ಲಿ ಹೇಗಿರುವುದು ಕೆಳಗಿನ ಶ್ಲೋಕದಲ್ಲಿ ಹೇಳುತ್ತಿದ್ದಾನೆ.

**(4) ಶ್ಲೋ॥ 20 : ನಪ್ರಹೃಷ್ಯೇತ್ಪ್ರಿಯಂ ಪ್ರಾಪ್ಯನೋ ದ್ವಿಜೇತ್ ಪ್ರಾಪ್ಯ ಚಾಪ್ರಿಯಂ ।**
**ಸ್ಥಿರಬುದ್ಧಿರಸಮ್ಮೂಢೋ ಬ್ರಹ್ಮವಿದ್ಬ್ರಹ್ಮಣಿ ಸ್ಥಿತಃ ॥**
**(ಬ್ರಹ್ಮಯೋಗ)**

**ಭಾವಾರ್ಥ :** ಬ್ರಹ್ಮವಿದ್ಯೆ ಇರುವವನು ತನ್ನ ಅಜ್ಞಾನವೆಲ್ಲವನ್ನು ಬಿಟ್ಟು ಬುದ್ಧಿಯನ್ನು

ಆತ್ಮನಲ್ಲೇ ನಿಲ್ಲಿಸುತ್ತಾನೆ. ಅವನಿಗೆಷ್ಟು ಸಂಪ್ರೀತಿ ಉಂಟಾದರು ಸಂತೋಷ ಪಡುವುದಿಲ್ಲ. ಹಾಗೆ ಇಷ್ಟ ಇಲ್ಲದಿರುವುದು ದೊರಕಿದರೂ ದುಃಖಪಡುವುದಿಲ್ಲ.

**ವಿವರ :** ಬ್ರಹ್ಮಯೋಗ ಆಚರಿಸುವಾಗ ಅವನ ಮನಸ್ಸು ಹೊರಗಿನ ವಿಷಯಗಳನ್ನು ಶೇಕರಿಸದೆ ಚಲಿಸದಂತೆ ಇದ್ದು, ಮನೋದೃಷ್ಟಿಯೆಲ್ಲವೂ ಆತ್ಮದ ಮೇಲೆ ಕೇಂದ್ರೀಕರಿಸಿ, ಆತ್ಮವೊಂದರ ಅನುಭವವೇನೋ, ಅದರ ಸಮಾಚಾರವೇನೋ ಗ್ರಹಿಸಿ ಬುದ್ಧಿಗೆ ತಿಳಿಸುತ್ತಿರುತ್ತದೆ. ಬುದ್ಧಿಯೂ ಆತ್ಮ ವಿಷಯಗಳನ್ನು ಮನಸ್ಸಿನ ಮೂಲಕ ಗ್ರಹಿಸಿ ಗ್ರಹಿಸಿರುವುದನ್ನು ಜೀವಾತ್ಮಕ್ಕೆ ಸೇರಿಸುತ್ತಿದೆ. ಜೀವಾತ್ಮ ಮನಸ್ಸು ತೋರಿಸಿದ ವಿಷಯವನ್ನೇ ಬುದ್ಧಿಯ ಮೂಲಕ ನೋಡುತ್ತಿರುತ್ತಾನೆ. ಮನಸ್ಸು ಬಾಹ್ಯ ವಿಷಯಗಳನ್ನು ತಂದಿಟ್ಟಾಗ ಅವುಗಳನ್ನು ಗುಣಗಳಿಂದ ಯೋಚಿಸುವುದು ಬುದ್ಧಿ ಕೆಲಸ. ಈಗ ಮನಸ್ಸು ಗುಣಗಳಿಂದ ಸಂಬಂಧವಿಲ್ಲದ ಒಳಗಿನ ಆತ್ಮ ವಿಷಯಗಳನ್ನು ತಂದಿದೆ ಆದುದರಿಂದ ಗುಣಗಳಿಂದ ಸಂಬಂಧ ವಿಲ್ಲದಂತೆ ಬುದ್ಧಿ ಯೋಚಿಸುತ್ತದೆ. ಮನಸ್ಸು ಬುದ್ಧಿಗೆ ಯಾವ ವಿಷಯವನ್ನು ಸೇರಿಸಿದರೂ ಅದರ ಅನುಭೂತಿಯನ್ನು ಹೊಂದುವುದು ಜೀವಾತ್ಮದ ಕೆಲಸ. ಈಗ ಯೋಗ ಸಮಯದಲ್ಲಿ ಹೊರಗಿನ ವಿಷಯಗಳಾದ ಪ್ರಕೃತಿ ವಿಷಯಗಳನ್ನು ಅಲ್ಲದೇ ಒಳಗಿನ ಆತ್ಮ ವಿಷಯಗಳನ್ನು ಮನಸ್ಸು ತಂದಿದೆ ಆದ್ದರಿಂದ ಅದನ್ನೇ ಜೀವಾತ್ಮ ಅನುಭವಿಸುತ್ತಿದ್ದಾನೆ. ಈ ವಿಧವಾಗಿ ಬುದ್ಧಿಗೂ, ಮನಸ್ಸಿಗೂ, ಜೀವಾತ್ಮನಿಗೂ ಒಳಗಿನ ವಿಷಯವಾದ ಆತ್ಮ ಧ್ಯಾಸವೇ ಸರಿಹೋಗಿದೆ. ಹೊರಗಿನ ಧ್ಯಾಸ ಮಾತ್ರವಿಲ್ಲ. ಆದ್ದರಿಂದ ಹೊರಗಡೆ ಎಂತಹ ಸಂಪ್ರೀತಿ ಇದ್ದರೂ ಹಾಗೆ ಎಂತಹ ಅಸಂಪ್ರೀತಿ ಹೊಂದಿದ್ದರೂ ಅದನ್ನು ಗ್ರಹಿಸುವ ಸ್ಥಿತಿಯಲಿಲ್ಲ. ಅಂತದರಲ್ಲಿ ಅವನಿಗೆ ಸಂಪ್ರೀತಿಯಲ್ಲಿ ಸಂತೋಷವಾಗಲಿ, ಅಸಂಪ್ರೀತಿಯಲ್ಲಿ ದುಃಖವಾಗಲಿ ಎರಡು ಇಲ್ಲ. ಯೋಗನಿಷ್ಟೆಯಲ್ಲಿರುವಾಗ ಮಣಿಗಳನ್ನು, ಬಂಗಾರವನ್ನು ಅವನ ಮುಂದೆ ಇಟ್ಟು ನಿನಗೆಂದು ಹೇಳಿದರೂ ಆತನು ಸಂತೋಷಿಸುವುದಿಲ್ಲ.

**(4) ಶ್ಲೋ॥ 21 : ಬಾಹ್ಯ ಸ್ಪರ್ಶೇ ಷ್ವಸಕ್ತಾತ್ಮಾ ವಿನ್ದತ್ಯಾತ್ಮನಿ ಯತ್ ಸುಖಮ್ ।**
**ಸ ಬ್ರಹ್ಮ ಯೋಗ ಯುಕ್ತಾತ್ಮಾ ಸುಖ ಮಕ್ಷಯ ಮಶ್ನುತೇ ॥**
**(ಬ್ರಹ್ಮಯೋಗ)**

**ಭಾವಾರ್ಥ :** ಬಾಹ್ಯಸ್ಪರ್ಶ ಶಬ್ಧಾದಿಗಳಲ್ಲಿ ಸಂಬಂಧ ಪಡದೆ ಅಂತರಾತ್ಮದಲ್ಲಿಯೇ ಸುಖವನ್ನು ಹೊಂದುವವನು ಬ್ರಹ್ಮಯೋಗಿ ಎನ್ನಲ್ಪಡುತ್ತಾನೆ. ಅವನಿಗೆ ಅಕ್ಷಯವಾದ ಸುಖವು ಪ್ರಾಪ್ತಿಸುತ್ತದೆ.

**ವಿವರ :** ಬ್ರಹ್ಮಯೋಗ ಆಚರಿಸುವ ಯೋಗಿ ಆತ್ಮಾನಂದವನ್ನು ಪಡೆಯುತ್ತಾನೆ. ಆ ಅನುಭೂತಿ ಆ ಯೋಗಿಗೆ ಮಾತ್ರವೇ ತಿಳಿಯುತ್ತದೆ. ಅದನ್ನು ಹೊರಗೆ ಹೇಳುವುದಕ್ಕೆ

ಸಾಧ್ಯವಿಲ್ಲ. ಅಕ್ಷಯವಾದ ಆತ್ಮವನ್ನು ಹೊಂದುವುದರಿಂದ ಅಕ್ಷಯವಾದ ಸುಖ ಉಂಟಾಗುತ್ತದೆ. ತನ್ನ ಶರೀರದಲ್ಲಿರುವುದು ಒಂದೇ ಆತ್ಮ. ಯೋಗಿ ಅನುಭವಿಸುವುದು ಒಂದೇ ಸುಖ. ಯಾವಾಗ ಯೋಗವಾಚರಿಸಿದರು ಅದೇ ಸುಖವನ್ನು ಪಡೆಯುತ್ತಾನೆ. ಅದರಲ್ಲಿ ಯಾವ ವ್ಯತ್ಯಾಸ ಇರುವುದಿಲ್ಲ. ಅಕ್ಷಯ ಸುಖ ಎಂದರೆ ಬಿಡುವಿಲ್ಲದಂತೆ ಎಲ್ಲಾ ವೇಳೆಗಳಲ್ಲಿ ಜೀವನದ ಅಂತ್ಯದವರೆಗೂ ಇರುವುದೆಂದುಕೊಳ್ಳಬಾರದು. ಎಷ್ಟು ಸಮಯ ಯೋಗದಲ್ಲಿರುತ್ತಾನೋ ಅಷ್ಟು ಸಮಯವೂ ಅಕ್ಷಯ ಸುಖ ಏರ್ಪಡುತ್ತದೆ. ಅಷ್ಟೇಯಾಗಲಿ ಯೋಗದಲ್ಲಿಲ್ಲದ ಸಮಯದಲ್ಲಿ ಬಾಹ್ಯ ಪ್ರಪಂಚದಲ್ಲಿ ಇರುವಾಗಲೂ ಸಹ ಆ ಸುಖವೇ ಇರುತ್ತದೆಂದುಕೊಳ್ಳಬಾರದು.

**(4) ಶ್ಲೋ॥ 22 : ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖ ಯೋನಯ ಏವತೇ ।**
**ಆದ್ಯನ್ತವನ್ತ: ಕೌನ್ತೇಯ ನತೇಷು ರಮತೇ ಬುಧಃ ॥**
**(ಬ್ರಹ್ಮಯೋಗ)**

**ಭಾವಾರ್ಥ** : ಬಾಹ್ಯೇಂದ್ರಿಯಗಳಿಂದ ಹುಟ್ಟುವ ಸುಖಗಳು ದುಃಖಹೇತುಗಳು. ಅವು ಬರುತ್ತಾ ಹೋಗುತ್ತಿರುತ್ತವೆ. ಅವುಗಳನ್ನು ಜ್ಞಾನಿಗಳು ಲೆಕ್ಕ ಮಾಡುವುದಿಲ್ಲ. ಮತ್ತು ಅವುಗಳಿಂದ ಸಂತೋಷಿಸುವುದಿಲ್ಲ.

**(4) ಶ್ಲೋ॥ 23 : ಶಕ್ನೋತೀ ಹೈವಯ ಸ್ಸೋಢುಂ ಪ್ರಾಕ್ ಶರೀರ ವಿಮೋಕ್ಷಣಾತ್ ।**
**ಕಾಮ ಕ್ರೋಧೋಧ್ಭವಂ ವೇಗಂ ಸಯುಕ್ತಃ ಸ್ಸ ಸುಖೀ ನರಃ ॥**
**(ಬ್ರಹ್ಮಯೋಗ)**

**ಭಾವಾರ್ಥ :** ಶರೀರವನ್ನು ಬಿಡದ ಮೊದಲೇ ಕಾಮ ಕ್ರೋಧಗಳು ಅವುಗಳ ವೇಗವನ್ನು ಇಲ್ಲದಂತೆ ಮಾಡಿ ಶಾಂತನಾಗುವ ಸಮರ್ಥನು ಯಾರೋ ಅವನೇ ಬ್ರಹ್ಮಯೋಗ ಯುಕ್ತನು, ಅವನೇ ಆತ್ಮ ಸುಖ ಹೊಂದುವವನು.

**(4) ಶ್ಲೋ॥ 24 : ಯೋಽನ್ತ ಸುಖೋಽನ್ತ ರಾರಾಮ ಸ್ತಥಾಽನ್ತ ಜ್ಯೋತಿ ರೇವಯಃ ।**
**ಸ ಯೋಗೀ ಬ್ರಹ್ಮ ನಿರ್ವಾಣಂ ಬ್ರಹ್ಮ ಭೂಽತೋ ಧಿ ಗಚ್ಛತಿ ॥**
**(ಬ್ರಹ್ಮಯೋಗ)**

**ಭಾವಾರ್ಥ :** ಯಾರು ಅಂತರಾಳದಲ್ಲಿ ಸುಖ ಪಡೆಯುತ್ತಿರುತ್ತಾನೋ, ಅಂತರಾಳದಲ್ಲಿ ಆತ್ಮಾರಾಧನೆ ಮಾಡುತ್ತಿರುತ್ತಾನೋ, ಯಾರ ಒಳಗಿನ ಜ್ಞಾನಾಗ್ನಿ ಜ್ಯೋತಿಯಂತೆ ಪ್ರಕಾಶಿಸುತ್ತಿದೆಯೋ ಅಂತಹವನು ಬ್ರಹ್ಮಯೋಗಿಯಾಗಿ ಬ್ರಹ್ಮನನ್ನೇ ಹೊಂದುತ್ತಾನೆ.

**(4) ಶ್ಲೋ॥ 25 : ಲಭನ್ತೇ ಬ್ರಹ್ಮ ನಿರ್ವಾಣಮ್ ಋಷಯಃ ಕ್ಷೀಣಕಲ್ಮಷಾಃ ।**
**ಛಿನ್ನದ್ವೈಧಾ ಯತಾತ್ಮಾನ ಸ್ಸರ್ವಭೂತ ಹಿತೇ ರತಾಃ ॥**
**(ಬ್ರಹ್ಮಯೋಗ)**

**ಭಾವಾರ್ಥ** : ಸರ್ವಭೂತ ಹಿತವು ಸಲಹುತ್ತಿರುವವನಾಗಿ, ಪಾಪವನ್ನು ಕ್ಷೀಣಿಸುವಂತೆ ಮಾಡಿಕೊಂಡವನಾಗಿ ಸಂಶಯ ಇಲ್ಲದಂತೆ ಮಾಡಿಕೊಂಡವನಾಗಿ, ಯಾರು ಇದ್ದಾನೋ ಅವನು ಬ್ರಹ್ಮಯೋಗಿಯಾಗಿ ಆತ್ಮಸ್ಥಾನ ಪಡೆಯುತ್ತಿದ್ದಾನೆ.

**(4) ಶ್ಲೋ॥ 26 : ಕಾಮ ಕ್ರೋಧ ವಿಯುಕ್ತಾನಾಂ ಯತೀನಾಂ ಯತಚೇತಸಾಮ್ ।**
**ಅಭಿತೋ ಬ್ರಹ್ಮ ನಿರ್ವಾಣಂ ವರ್ತತೇ ವಿದಿತಾತ್ಮನಾಮ್ ॥**
**(ಬ್ರಹ್ಮಯೋಗ)**

**ಭಾವಾರ್ಥ** : ಕಾಮವನ್ನು, ಕ್ರೋಧವನ್ನು, ಬಿಡುವವನು, ಜ್ಞಾನದಿಂದ ಇಂದ್ರಿಯಗಳನ್ನು ನಿಗ್ರಹಿಸಿದವನು, ಭೂಮಿಯ ಮೇಲೇ ಆತ್ಮಸ್ಥಾನವನ್ನು ಹೊಂದಿದ್ದಾನೆ.

**(4) ಶ್ಲೋ॥ 27 : ಸ್ಪರ್ಶಾನ್ ಕೃತ್ವಾ ಬಹಿರ್ಬಾಹ್ಯಾಂ ಶ್ಚಕ್ಷುಶ್ಚೈ ವಾಂತರೇ ಭ್ರುವೋಃ ।**
**ಪ್ರಾಣಾಪಾನೌ ಸಮೌಕೃತ್ವಾ ನಾಸಾಭ್ಯನ್ತ ರಚಾರಿಣೌ ॥**
**(ಬ್ರಹ್ಮಯೋಗ)**

**(4) ಶ್ಲೋ॥ 28 : ಯತೇಂದ್ರಿಯ ಮನೋಬುದ್ಧಿರ್ಮುನಿ ರ್ಮೋಕ್ಷ ಪರಾಯಣಃ ।**
**ವಿಗತೇಚ್ಛಾ ಭಯಕ್ರೋಧೋ ಯಃ ಸದಾಮುಕ್ತ ಏವಸಃ ॥**
(ಬ್ರಹ್ಮಯೋಗ)

**ಭಾವಾರ್ಥ** : ಬಾಹ್ಯ ಶಬ್ದಾದಿ ಇಂದ್ರಿಯ ವಿಷಯಗಳನ್ನು ಬಿಟ್ಟು, ಬೃಕುಟಿ ಮಧ್ಯದಲ್ಲಿ ಮನೋದೃಷ್ಟಿಯನ್ನಿಟ್ಟು, ಮೂಗಿನ ರಂಧ್ರಗಳಲ್ಲಿ ಸಂಚರಿಸುವ ಉಚ್ಛ್ವಾಸ ನಿಚ್ಛ್ವಾಸಗಳನ್ನು ಸಮಾನವಾಗಿ ನಿಲ್ಲಿಸಿ, ಸ್ವಾಧೀನಪಟ್ಟಿರುವ ಇಂದ್ರಿಯಗಳಿರುವವನಾಗಿ, ಮನಸ್ಸಿನಿಂದ ರಾಗಭಯ ದ್ವೇಷಗಳನ್ನು ಬಿಟ್ಟು, ಮೋಕ್ಷವನ್ನೇ ಪರಮಾಶಯವಾಗಿ ತಿಳಿಯುತ್ತಾ ಬ್ರಹ್ಮ ಯೋಗಿಗಳು ಸದಾ ಆತ್ಮವನ್ನು ಅನುಭವಿಸುತ್ತಿರುತ್ತಾರೆ.

**ವಿವರ** : ಮನಸ್ಸಿಗೆ ದೃಷ್ಟಿ ಇದೆ. ಅದನ್ನೇ ಮನೋದೃಷ್ಟಿ ಎನ್ನುತ್ತೇವೆ. ಹಾಗೇ ಕಿವಿಗಳಿಗು, ನಾಲಿಗೆಗು, ಚರ್ಮಕ್ಕೂ ಸಹ ದೃಷ್ಟಿ ಇದೆ. ಅಡಿಗೆಯಲ್ಲಿ ಉಪ್ಪು ಎಷ್ಟು ಇರುವುದು ನೋಡಿ ಹೇಳುತ್ತೇವೆ ಎನ್ನುವುದನ್ನು ಕೇಳಿಯೇ ಇರುತ್ತೇವೆ. ಆ ಮಾತಿನಿಂದ ನಾಲಿಗೆಗೆ ರುಚಿ ನೋಡುವ ದೃಷ್ಟಿ ಇದೆಯೆಂದು ತಿಳಿಯುತ್ತದೆ. ಹಾಗೇ ಐದು ಜ್ಞಾನೇಂದ್ರಿಯಗಳಿಗೆ ದೃಷ್ಟಿ ಇದೆಯೆಂದು ಹೇಳಬಹುದು. ಅವುಗಳ ದೃಷ್ಟಿಯಿಂದಲೇ ಪ್ರಪಂಚದಲ್ಲಿನ ವಿಷಯಗಳನ್ನು ಅವು ನೋಡಿ ಆ ನೋಡಿದ ವಿಷಯಗಳನ್ನು ಮನಸ್ಸಿಗೆ ತೋರಿಸಿದರೆ ಮನಸ್ಸು ಬುದ್ಧಿಗೆ ತೋರಿಸುತ್ತದೆ. ಬ್ರಹ್ಮಯೋಗದಲ್ಲಿ ಬಾಹ್ಯ ಜ್ಞಾನೇಂದ್ರಿಯಗಳಾದ ಐದನ್ನು ನೋಡದಂತೆ ಮಾಡಿ, ಅವುಗಳ ವಿಷಯಗಳನ್ನು ಮನಸ್ಸಿಗೆ ತಿಳಿಯದಂತೆ ಮಾಡಿ, ಅಂದರೆ ಮನೋದೃಷ್ಟಿಯನ್ನು ಅವುಗಳಿಂದ ಮರಳಿಸಿ  ಬೃಕುಟಿ (ಕಣ್ಣ ಉಬ್ಬುಗಳ) ಮಧ್ಯದಲ್ಲಿ ತಲೆ ಒಳಗಿನ ಭಾಗದಲ್ಲಿ ನೋಡಿದಾಗ ಏನು ಕಾಣಿಸದಂತೆ ಹೋಗುತ್ತದೆ. ಇದು ಸಾಧನೆ ಹೊಂದಿದ ಯೋಗಿಯೊಬ್ಬನ ವಿಷಯ. ಏನು ಕಾಣಿಸದ ಸ್ಥಿತಿಯಲ್ಲಿ ಇರುವುದೇನೊ ಮನಸ್ಸು ನೋಡುತ್ತಾ, ಬುದ್ಧಿ ಗ್ರಹಿಸುತ್ತಾ ಹೋಗುತ್ತದೆ. ಯಾವಾಗಾದರೆ ಮನಸ್ಸು ಹೊರಗಿನ ವಿಷಯಗಳ ಮೇಲೆ ಇಲ್ಲವೋ ಆಗ ಮೂಗಿನ ರಂಧ್ರದಲ್ಲಿನ ಶ್ವಾಸವೂ ಸಹ ಕ್ರಮೇಣ ಕಡಿಮೆಯಾಗಿದೆಯಾ ಇಲ್ಲವಾ ಎನಿಸುತ್ತದೆ. ಅಂತಹ ಸಮಯದಲ್ಲಿ ಆತ್ಮಯಾವುದೋ ಅದನ್ನು ಮನಸ್ಸು ನೋಡುತ್ತಾ ಇದ್ದು ಬುದ್ಧಿಗೆ ತಿಳಿಯಪಡಿಸುತ್ತದೆ. ಆ ಅನುಭವವನ್ನು ಮನೋಬುದ್ಧಿಗಳ ಮೂಲಕ ಜೀವಾತ್ಮನು ಅನುಭವಿಸುತ್ತಿದ್ದಾನೆ. ಈ ಬ್ರಹ್ಮಯೋಗ ಪದ್ಧತಿ ತಿಳಿದವನು ಯಾವಾಗಲೂ ಆ ಪದ್ಧತಿಯಲ್ಲಿಯೆ ಇದ್ದು ಆತ್ಮಾನುಭವವನ್ನು ಹೊಂದುತ್ತಿದ್ದಾನೆ. ಹಾಗೆ ಮಾಡುವುದರಿಂದ ಅವನಲ್ಲಿನ ಸಂಚಿತಕರ್ಮ ಸುಟ್ಟುಹೋಗಿ ಮೋಕ್ಷ ಹೊಂದುವುದಕ್ಕೆ ಅರ್ಹನಾಗುತ್ತಾನೆ.

**(4) ಶ್ಲೋ॥ 29 : ಭೋಕ್ತಾರಂ ಯಜ್ಞ ತಪಸಾಂ ಸರ್ವಲೋ ಕಮಹೇಶ್ವರಮ್ ।**
**ಸುಹೃದಂ ಸರ್ವಭೂತಾನಾಂ ಜ್ಞಾತ್ವಾಮಾಂ ಶಾನ್ತಿ ಮೃಚ್ಛತಿ ॥**

**(ಆತ್ಮ)**

**ಭಾವಾರ್ಥ** : ಯಜ್ಞ ತಪಸ್ಸಗಳು ಸ್ವೀಕರಿಸುವವನಾಗಿ, ಸರ್ವ ಗುಣಗಳಿಗೆ ಮಹೇಶ್ವರನಾಗಿ, ಸರ್ವ ಜೀವರಾಶಿಗಳಿಗೂ ಸುಹೃದಯನಾದ ನನ್ನನ್ನು ತಿಳಿದುಕೊಳ್ಳುವುದರಿಂದ ನರನು ಶಾಂತಿ ಪಡೆಯುತ್ತಾನೆ.

**ವಿವರ** : ಶರೀರದಲ್ಲಿ ನಡೆಯುವ ಯಜ್ಞ ತಪಸ್ಸುಗಳಿಗೆ ಅಧಿಪತಿ ಆತ್ಮ. ಹಾಗೇ ಸರ್ವ ಲೋಕಗಳಿಗೂ ಅಧಿಪತಿ ಆತ್ಮ. ಇಲ್ಲಿ ಲೋಕಗಳೆಂಬುವ ಮಾತಿಗೆ ಗುಣಗಳೆಂದು ಅರ್ಥಮಾಡಿಕೊಳ್ಳಬೇಕು. ಉದಾಹರಣೆಗೆ ಒಬ್ಬ ಗುರುವು ಶಿಷ್ಯನನ್ನು **'ಲೋಕಗಳು ಹೇಗಿವೇ ಶಿಷ್ಯಾ!'** ಎಂದರೆ ಶಿಷ್ಯನ ಉತ್ತರ **'ಯಾರ ಲೋಕ ಅವರದು ಗುರುಗಳೇ'** ಅಂದನಂತೆ. ಯಾರ ಗುಣಗಳಲ್ಲಿ ಅವರು ಇದ್ದಾರೆಂದು ಶಿಷ್ಯನ ಉತ್ತರ. ಇನ್ನೂ ತ್ರಿಲೋಕಗಳೆಂದು ದೊಡ್ಡವರು ಹೇಳುವುದು ಕೇಳುತ್ತಲೇ ಇದ್ದೇವೆ. ಉರ್ಧ್ವ, ಮಧ್ಯ, ಪಾತಾಳ ಲೋಕಗಳು ಎನ್ನುವುದೂ ಸಹ ಕೇಳುತ್ತಲೇ ಇದ್ದೇವೆ. ಮೂರು ಲೋಕಗಳು ಎಂದರೆ ಮೂರು ಗುಣಗಳೆಂದು ತಿಳಿಯಬೇಕು. ಹಾಗೇ **ಊರ್ಧ್ವ ಲೋಕ ಎಂದರೆ ಸಾತ್ವಿಕಗುಣ ಎಂದೂ, ಮಧ್ಯಲೋಕ ಎಂದರೆ ರಾಜಸಗುಣ ಭಾಗವೆಂದೂ, ಪಾತಾಳ ಎಂದರೆ ತಾಮಸವೆಂದು ತಿಳಿಯಬೇಕು**. ಮೂರು ಲೋಕಗಳಿಗೆಂದರೆ ಮೂರು ಗುಣಗಳಿಗೆ ಅಧಿಪತಿ ಮಧ್ಯದಲ್ಲಿರುವ ಆತ್ಮವೆಂದು ತಿಳಿಯಬೇಕು. ಹಾಗೆ ಮೂರು ಗುಣಗಳನ್ನು ಬಿಟ್ಟು ಅವುಗಳ ಮಧ್ಯದಲ್ಲಿ ಅಧಿಪತಿಯಾಗಿರುವ ಆತ್ಮವನ್ನು ತಿಳಿಯುವುದರಿಂದ ನರನು ಶಾಂತಿಯನ್ನು ಪಡೆಯುತ್ತಿದ್ದಾನೆ. ಶರೀರದಲ್ಲಿ ಗುಣಗಳಿಲ್ಲದ ಪ್ರಶಾಂತಕಾಲವನ್ನು ಶಾಂತಿ ಎನ್ನುತ್ತಿದ್ದೇವೆ.

ಇಲ್ಲಿಗೆ ಕರ್ಮಸನ್ಯಾಸ ಯೋಗವೆಂಬ ಅಧ್ಯಾಯ ಮುಕ್ತಾಯವಾಗಿದೆ. ಈ ಅಧ್ಯಾಯದಲ್ಲಿನ ಶ್ಲೋಕಗಳ ವಿವರವನ್ನು ಕೆಳಗೆ ಬರೆಯಲಾಗಿದೆ.

| | | |
|---|---|---|
| 1) ಕರ್ಮಯೋಗವು, ಬ್ರಹ್ಮಯೋಗವು | – | 5 |
| 2) ಕರ್ಮಯೋಗವು | – | 7 |
| 3) ಬ್ರಹ್ಮಯೋಗ | – | 13 |
| 4) ಪ್ರಕೃತಿ | – | 2 |
| 5) ಆತ್ಮ | – | 1 |
| 6) ಆತ್ಮಜ್ಞಾನ | – | 1 |
| **ಒಟ್ಟು ಶ್ಲೋಕಗಳು** | – | **29** |

ಭಾವ, ವಿವರವನ್ನು ಬದಲಾಯಿಸಿ ಬರೆದ ಶ್ಲೋಕಗಳು – 6, 18.



ಐದನೆಯ ಅಧ್ಯಾಯ

# ಆತ್ಮ ಸಂಯಮ ಯೋಗ

**ಶ್ರೀ ಭಗವಂತನು ಹೀಗೆ ಹೇಳಿದನು :-**

**(5) ಶ್ಲೋ॥ 1 : ಅನಾಶ್ರಿತಃ ಕರ್ಮಫಲಮ್ ಕಾರ್ಯಂ ಕರ್ಮಕರೋತಿ ಯಃ ।**
**ಸ ಸನ್ನ್ಯಾಸೀ ಚ ಯೋಗೀಚ ನ ನಿರಗ್ನಿ ರ್ನಚಾಕ್ರಿಯಃ ॥**
**(ಕರ್ಮಯೋಗ)**

**ಭಾವಾರ್ಥ**: ಕರ್ಮಫಲವನ್ನು ಆಶ್ರಯಿಸದೇ ಕಾರ್ಯಗಳು ಮಾಡಬೇಕೆಂದು ತಿಳಿದು ಯಾರು ಮಾಡುತ್ತಾನೋ ಅವನೇ ನಿಜವಾದ ಸನ್ಯಾಸಿ, ನಿಜವಾದ ಯೋಗಿ. ಅಗ್ನಿ ಇಲ್ಲದವನು, ಕೆಲಸಗಳು ಬಿಟ್ಟವನು ಯೋಗಿಯೂ ಅಲ್ಲ ಮತ್ತು ಸನ್ಯಾಸಿಯೂ ಅಲ್ಲ.

**ವಿವರ** : ಯೋಗಿಯನ್ನು ಸನ್ಯಾಸಿ ಎಂದು, ಸನ್ಯಾಸಿಯನ್ನು ಯೋಗಿ ಎಂದು ಕರೆಯಬಹುದು. ಸನ್ಯಾಸಿ ಎಂದರೂ ಯೋಗಿ ಎಂದರೂ ಎರಡು ಒಂದೇ ಅರ್ಥವೆಂದು ತಿಳಿಯಬೇಕು. ಈ ಅಧ್ಯಾಯದಲ್ಲಿ ಮೊದಲು ಸನ್ಯಾಸಿ ಎಂದರೆ ಯಾರೆಂದು ಅರ್ಥವಾಗುವಂತೆ ಭಗವಂತನು ಹೇಳಿದ್ದಾನೆ. ನಿತ್ಯ ಜೀವನದಲ್ಲಿ ಬದುಕುವುದಕ್ಕಾಗಿ ಎಷ್ಟೋ ಜನ ಎಷ್ಟೋ ಕೆಲಸಗಳನ್ನು ಮಾಡುತ್ತಿದ್ದಾರೆ. ಇದಕ್ಕೆ ಗಾದೆಯಾಗಿ **'ಕೂಳಿಗೋಸ್ಕರ ಕೋಟಿ ವಿದ್ಯೆಗಳು'** ಎಂದಿದ್ದಾರೆ. ಎಷ್ಟೋ ಕೆಲಸಗಳಿಂದ ಕೂಡಿಕೊಂಡ ನಮ್ಮ ಜೀವನದಲ್ಲಿ ಎಲ್ಲಾ ಕೆಲಸಗಳು ಒಳ್ಳೆಯವು ಇರುವುದಿಲ್ಲ, ಹಾಗೇ ಎಲ್ಲಾ ಕೆಲಸಗಳು ಕೆಟ್ಟವು ಇರುವುದಿಲ್ಲ. ಕೆಲಸಗಳು ಒಳ್ಳೆಯವಾದರೂ ಕೆಟ್ಟವಾದರೂ ನಾವು ಏಕೆ ಮಾಡುತ್ತಿದ್ದೇವೆಂದುಕೊಂಡರೆ, ಕೆಲಸ ಮಾಡುವುದರಿಂದ ಅದಕ್ಕಿಷ್ಟು ಕೂಲಿಯೆಂದು ಫಲಿತವಿರುತ್ತದೆ. ಒಂದು ದಿನ ಕೆಲಸ ಮಾಡುವುದರಿಂದ 100 ರೂಪಾಯಿಗಳು ಪ್ರತಿಫಲ ಬರುತ್ತದೆಂದುಕೊಳ್ಳೋಣ. ಹೀಗೆ ಒಬ್ಬೊಬ್ಬರ ಕೆಲಸಬೇರೆ ಫಲಿತಬೇರೆ ಇರುತ್ತದೆ. ರೋಡ್‌ಪ್ಲಾನ್ ಹಾಕುವ ಇಂಜಿನೀಯರ್‌ಗೆ ಒಂದು ಫಲಿತ, ಅದೇ ರಸ್ತೆ ಕೆಲಸ ಮಾಡುವವನಿಗೆ ಒಂದು ಫಲಿತವಿರುತ್ತದೆ. ಒಬ್ಬ ಮನುಷ್ಯನಿಗೆ ದಿನಕ್ಕೆ ಸ್ವಲ್ಪ ಕಣ್ಣಿಗೆ ಕಾಣಿಸುವ ಫಲಿತವಿರುವ ವಿಷಯ ಎಲ್ಲರಿಗೂ ತಿಳಿದಿರುವುದೇ.

ಎಲ್ಲರಿಗೂ ತಿಳಿಯದ ವಿಷಯವೂ ಸಹ ಒಂದಿದೆ. ಅದೇನೆಂದರೆ! ಮನುಷ್ಯ ಮಾಡುವ ಪ್ರತಿ ಕೆಲಸದಲ್ಲಿಯೂ ಕಣ್ಣಿಗೆ ಕಾಣಿಸದ ಫಲಿತವೂ ಸಹ ಒಂದಿದೆ. ಕಣ್ಣಿಗೆ ಕಾಣಿಸುವ ಫಲಿತವು ಹಣದರೂಪವಾಗಿದ್ದರೆ, ಕಾಣಿಸದ ಫಲಿತವು ಕರ್ಮರೂಪವಾಗಿದೆ. ಕರ್ಮ ಕಾಣಿಸದೆ ಇರುವುದಾದ್ದರಿಂದ ಯಾರಿಗೆ ಎಷ್ಟು ಕರ್ಮಬರುವುದು ಹೇಳಲಾರೆವು.

ಹೊರಗಿನ ಫಲಿತಗಳನ್ನು ಸಂಪಾಧಿಸಿಕೊಂಡಿರುವುದನ್ನನುಸರಿಸಿ ಅವನು ಇಷ್ಟು ಧನಿಕನು, ಇವನು ಇಷ್ಟು ಬಡವನೆಂದು ಹೇಳಬಹುದು. ಕಾಣಿಸದ ಫಲಿತವಾದ ಕರ್ಮದಿಂದ ಯಾರೆಷ್ಟು ಕರ್ಮಪರನೋ ಹೇಳಲಾರೆವು. ಇದನ್ನೆಲ್ಲವೂ ನೋಡಿದರೆ ಉರಿಯುತ್ತಿರುವ ಅಗ್ನಿಗೆ ಕೆಳಗೆ ಕಾಣಿಸುವ ಕಟ್ಟಿಗೆಗಳು ಮೇಲೆ ಕಾಣಿಸದ ಗಾಳಿ ತಗಲಿಕೊಂಡಿರುವಂತೆ, ನಡೆಯುತ್ತಿರುವ ಕೆಲಸಕ್ಕೆ ಒಂದು ಕಡೆ ಕಾಣಿಸುವ ಫಲಿತ ಮತ್ತೊಂದು ಕಡೆ ಕಾಣಿಸದ ಫಲಿತವು ಇದೆ. ರೂಪಾಯಿ ನಾಣ್ಯಕ್ಕೆ ರಾಜ ರಾಣಿಯಂತವುಗಳೇ ಕಾರ್ಯಗಳಿಗೆ ಕಾಣಿಸುವ, ಕಾಣಿಸದಿರುವ ಫಲಿತಗಳೆಂದು ತಿಳಿಯಬೇಕು. ನಮಗೆ ತಿಳಿಯದ ವಿಷಯ ಮತ್ತೊಂದು ಇದೆ. ಅದೇನೆಂದರೆ! ಮಾಡುತ್ತಿರುವ ಕೆಲಸದಲ್ಲಿ ಕಣ್ಣಿಗೆ ಕಾಣಿಸದ ಕರ್ಮವನ್ನು ಇಲ್ಲದಂತೆ ಮಾಡಿಕೊಳ್ಳುವುದು. ಮಾಡಿದ ಕೆಲಸಕ್ಕೆ ಕೂಲಿ ರೂಪಾಯಿಗಳಾಗಿ ತೆಗೆದುಕೊಂಡರೆ ರಾಜ ರಾಣಿ ಎರಡು ರೂಪಗಳು ಇರುತ್ತವೆ. ಬೇರೆ ಧಾನ್ಯರೂಪವಾಗಿಯೋ, ವಸ್ತುರೂಪವಾಗಿಯೋ ತೆಗೆದುಕೊಂಡರೆ ಅದಕ್ಕೆ ಒಂದುರೂಪ ಹೊರತು ಎರಡು ರೂಪಗಳಿರುವುದಿಲ್ಲ. ಹಾಗೆ ಕಾಣಿಸುವ ಒಂದು ಫಲಿತವನ್ನು ಹೊರತು ಕಾಣಿಸದ ಎರಡನೇ ಫಲಿತವಿಲ್ಲದ ಕಾರ್ಯಗಳು, ಅವುಗಳನ್ನು ಮಾಡುವ ವಿಧಾನವೂ ಸಹ ಇದೆಯೆಂದು ಭಗವಂತನು ತಿಳಿಸಿದ್ದಾನೆ. ಅದು ಹೇಗೆಂದರೆ! ಒಂದು ಕಾರ್ಯ ನಡೆಯುತ್ತಿರುವಾಗ ಕರ್ಮ ಹೇಗೆ ತಗಲಿಕೊಳ್ಳುತ್ತಿದೆಯೋ ಮೊದಲು ತಿಳಿದುಕೊಳ್ಳಬೇಕು. ನಂತರ ಕರ್ಮ ಅಂಟದ ವಿಧಾನವನ್ನು ತಿಳಿದುಕೊಳ್ಳಬಹುದೆಂದಿದ್ದಾನೆ. ಇದೆಲ್ಲವೂ ಇತರ ದೇಶಗಳಿಗೆ ಹೋಗಿ ತಿಳಿದುಕೊಳ್ಳಬೇಕಾಗಿರುವುದಲ್ಲ, ನಮ್ಮ ದೇಹದಲ್ಲಿಯೇ ತಿಳಿದುಕೊಳ್ಳಬೇಕಾಗಿರುವುದು. ಆದ್ದರಿಂದ ಬಹಳ ಸುಲಭವಾಗಿರುತ್ತದೆ. ಒಂದು ಕಾರ್ಯ ಮಾಡುತ್ತಿರುವಾಗ ಆ ಕಾರ್ಯ ನಡೆಯುವುದಕ್ಕೆ ಕಾರಣ ಏನೆಂದು ಮೊದಲು ತಿಳಿದುಕೊಳ್ಳೋಣ. ಗತ ಜನ್ಮಗಳ ಸಂಚಿತಕರ್ಮ ಪ್ರಸ್ತುತವಿರುವ ಜನ್ಮದಲ್ಲಿ ಪ್ರಾರಬ್ಧಕರ್ಮವಾಗಿ ನಿತ್ಯ ಅನುಭವಕ್ಕೆ ಬರುತ್ತಿರುತ್ತದೆ. ಒಂದು ಕಾರ್ಯ ನಡೆಯಬೇಕೆಂದರೆ ಆ ಪ್ರಾರಬ್ಧವೇ ಮೊದಲ ಕಾರಣ. ಪ್ರಾರಬ್ಧದ ಪ್ರಕಾರ ಒಂದು ವಿಷಯ ಮೊದಲು ಮನಸ್ಸಿಗೆ ಜ್ಞಾಪಕ ಬರುತ್ತದೆ. ಆ ವಿಷಯವನ್ನು ತಕ್ಷಣ ಬುದ್ಧಿ ಗ್ರಹಿಸಿ, ಆ ಸಮಯಕ್ಕೆ ಹತ್ತಿರದಲ್ಲಿರುವ ಗುಣಗಳಿಂದ ಯೋಚಿಸುತ್ತದೆ. ಗುಣಗಳು ಎರಡು ವಿಧಗಳಾಗಿವೆ. ಆದಕಾರಣ ಬುದ್ಧಿಯ ಯೋಚನೆಯೂ ಸಹ ಎರಡು ವಿಧಗಳಾಗಿರುತ್ತದೆ. ಒಂದು ವಿಧದ ಗುಣಗಳ ಪ್ರಕಾರ ಬುದ್ಧಿ ಯೋಚನೆ ಆ ವಿಷಯವೊಂದರ ಕೆಲಸ ಮಾಡೆಂದು ಸೂಚಿಸಿದರೆ, ಎರಡನೇ ವಿಧವೊಂದರ ಗುಣಗಳ ಪ್ರಕಾರ ಆ ಕೆಲಸ ಮಾಡಬೇಡವೆಂದು ಬುದ್ಧಿ ಸೂಚಿಸುತ್ತದೆ. ಹೀಗೆ ಅದರಲ್ಲಿ ಲಾಭ ಇರುತ್ತದೆಂದು ಒಂದು ವಿಧ, ಅದರಲ್ಲಿ ಲಾಭ ಇರುವುದಿಲ್ಲವೆಂದು ಮತ್ತೊಂದು ವಿಧ, ಇದು ಒಳ್ಳೆಯ ಕೆಲಸವೆಂದೇ

ಒಂದು ವಿಧ ಎಂದರೆ, ಅದಕ್ಕೆ ವಿರುದ್ಧವಾಗಿ ಇದು ಕೆಟ್ಟ ಕೆಲಸವೆಂದು ಮತ್ತೊಂದು ವಿಧ ಹೇಳುತ್ತಿರುತ್ತದೆ. ಹೀಗೆ ಎಲ್ಲಾ ವಿಧಗಳಲ್ಲಿ ಯೋಚನೆ ಮಾಡುವುದೇ ಬುದ್ಧಿಯ ಕರ್ತವ್ಯ. ಹಾಗೆ ಯೋಚನೆ ಮಾಡಲಾದ ವಿಷಯವನ್ನು ತಕ್ಷಣ ಪಕ್ಕದಲ್ಲಿರುವ ಚಿತ್ತವು ಗ್ರಹಿಸಿ ಆ ಕೆಲಸವನ್ನು ಮಾಡೆಂದೋ, ಮಾಡಬೇಡವೆಂದೋ ಯಾವುದೋ ಒಂದನ್ನು ನಿರ್ಣಯಿಸುತ್ತದೆ. ಹಾಗೆ ನಿರ್ಣಯಿಸುವುದು ಚಿತ್ತದ ಕೆಲಸ. ಆ ನಿರ್ಣಯ ಯಾವುದಾದರು ಚಿತ್ತವು ತನ್ನ ಇಷ್ಟಾನುಸಾರ ಮಾಡುವುದಿಲ್ಲ. ಅದು ಒಂದು ಆಧಾರದಿಂದಲೇ ನಿರ್ಣಯಮಾಡುತ್ತದೆ. ಆ ಆಧಾರ ಏನೆಂದರೆ! ಆಗಿನ ಪ್ರಸ್ತುತ ಪ್ರಾರಬ್ಧಕರ್ಮ ಯಾವುದು ನಡೆಯಬೇಕೆಂದು ಸೂಚಿಸುತ್ತದೋ, ಅದನ್ನೇ ಚಿತ್ತವು ಚಿತ್ತಗಿಸಿ. ಆ ವಿಷಯವನ್ನು ಆಚರಣೆ ಮಾಡಬೇಕಾಗಿರುವ ವಿಧಾನವನ್ನು ಮನಸ್ಸಿಗೆ ತಿಳಿಸುತ್ತದೆ. ಮನಸ್ಸು ತಕ್ಷಣ ಆ ವಿಷಯವನ್ನು ಶರೀರ ಬಾಹ್ಯೇಂದ್ರಿಯಗಳಿಗೆ ಸೇರಿಸುತ್ತದೆ. ಮನಸ್ಸು ಆದೇಶಿಸಿದಂತೆ ಶರೀರ ಅವಯವಗಳು ಕೆಲಸ ಮಾಡುತ್ತವೆ. ಇದೆಲ್ಲವೂ ಒಂದು ಕಾರ್ಯ ನಡೆಯುವುದಕ್ಕೆ ನಿರ್ಣಯಿಸಲಾದ ಶರೀರ ಯಂತ್ರಾಂಗವೆಂದು ತಿಳಿಯಬೇಕು. ಪ್ರಾರಬ್ದಕರ್ಮ ಕಾರ್ಯರೂಪವಾಗುವುದಕ್ಕೆ ಮನಸ್ಸು, ಬುದ್ಧಿ, ಚಿತ್ತ ಮತ್ತು ಶರೀರ ಅವಯವಗಳು ಹತ್ತು ಒಟ್ಟು 13 ಪಾತ್ರಧಾರಿಗಳಾಗಿವೆ.

ಒಂದು ಕಾರ್ಯ ನಡೆಯುವಾಗ ಶರೀರ ಯಂತ್ರಾಂಗವು ಹೇಗೆ ಇದೆಯೋ ಗ್ರಹಿಸಿದ್ದೇವಲ್ಲವೆ! ಇದರಲ್ಲಿ ಜೀವಾತ್ಮದ ಪಾತ್ರ ಏನೂ ಇಲ್ಲ. ಜೀವಾತ್ಮ ಸಾಕ್ಷಿಯಾಗಿ ನೋಡುತ್ತಾ ಇರುವವನೇ, ಪ್ರಾರಬ್ಧಕರ್ಮ ಆಚರಣೆಗೆ ಬರುವುದರಲ್ಲಿ ಮನಸ್ಸು, ಬುದ್ಧಿ, ಚಿತ್ತ ಅವವುಗಳ ಕೆಲಸ ಮಾಡುತ್ತಿರುವಾಗ ಜೀವಾತ್ಮನೂ ಸಹ ಅಲ್ಲಿಯೇ ಇದ್ದಾನೆ. ಆದುದರಿಂದ ಆ ವಿಷಯವೆಲ್ಲವೂ ಜೀವಾತ್ಮನಿಗೆ ತಿಳಿಯುತ್ತಲೇ ಇದೆ. ಹಾಗೆ ಒಂದರ ವಿಷಯ ಇನ್ನೊಂದಕ್ಕೆ ತಿಳಿಯುತ್ತಲೇ ಇರುತ್ತದೆ. ಶರೀರದಲ್ಲಿ ಜೀವಾತ್ಮ, ಮನಸ್ಸು, ಬುದ್ಧಿ, ಚಿತ್ತ ಅಹಮ್ ಎಂಬ ಮುಖ್ಯ ಅಂತರಂಗಗಳಾದವುಗಳಲ್ಲಿ ಕರ್ಮ ಕಾರ್ಯ ರೂಪವಾಗುವುದಕ್ಕೆ ಮನಸ್ಸು, ಬುದ್ಧಿ, ಚಿತ್ತ ಮೂರು ಮಾತ್ರವೇ ಮುಖ್ಯ ಪಾತ್ರಧಾರಿಗಳಾಗಿರುವಾಗ ಜೀವಾತ್ಮ, ಅಹಮ್ ಯಾವುದೇ ಸಂಬಂಧ ಇಲ್ಲದವುಗಳಾಗಿವೆ. ಕಾರ್ಯ ನಡೆಯುವುದಕ್ಕೆ ಇವುಗಳ ಸಂಬಂಧ ಯಾವುದೂ ಇಲ್ಲ. ಮನೋ, ಬುದ್ಧಿ, ಚಿತ್ತಗಳ ಸ್ಪಂದನ ಪ್ರಕಾರ ಶರೀರದ ಮೂಲಕ ಕಾರ್ಯ ನಡೆಯುತ್ತಿರುವಾಗ ಆ ಕಾರ್ಯದಲ್ಲಿರುವ ದುಃಖಗಳಾಗಲಿ, ಸುಖಗಳಾಗಲಿ ಅನುಭವಿಸುವವನು ಜೀವಾತ್ಮ. ಜೀವಾತ್ಮ ಶರೀರದಲ್ಲಿ ಕಷ್ಟ ಸುಖಗಳ ಅನುಭವಗಳನ್ನು ಹೊಂದುವುದಕ್ಕೆ ಇದ್ದಾನೆಂದು ತಿಳಿಯಬೇಕು. ಒಂದು ಸಮಯದಲ್ಲಿ ಲಾಡು ತಿನ್ನಬೇಕೆಂದು ಜ್ಞಾಪಕ ಬರುವುದು, ಆಗಿನ ಆಸೆ ಗುಣದ

ಪ್ರಕಾರ ಬುದ್ಧಿ ತಿನ್ನೆಂದು ಯೋಚಿಸಿರುವುದನ್ನು ಚಿತ್ತ ನಿರ್ಣಯಿಸುವುದು, ಶರೀರದಲ್ಲಿನ ಕೈಗಳು ತಿನ್ನಿಸುವುದು, ಬಾಯಿ ತಿನ್ನುವುದು, ಅದರಲ್ಲಿನ ರುಚಿಯ ಅನುಭೂತಿಯನ್ನು ನಾಲಿಗೆ ಮನಸ್ಸಿಗೆ ಸೇರಿಸುವುದು, ಅದನ್ನು ಕೂಡಲೇ ಮನಸ್ಸಿನೊಳಗಿರುವ ಜೀವಾತ್ಮಕ್ಕೆ ಸೇರಿಸುವುದು, ಜೀವಾತ್ಮ ಆ ಅನುಭೂತಿಯನ್ನು ಹೊಂದಿ ಸಂತೋಷಿಸುವುದು ನಡೆಯುತ್ತದೆ. ಆ ವಿಧವಾಗಿಯೇ ವೈದ್ಯದ ಪ್ರಕಾರ ಔಷಧಿ ತಿನ್ನಬೇಕಾಗಿ ಬಂದಾಗ, ತಿನ್ನುವ ಔಷಧಿಯಲ್ಲಿನ ಕಹಿಯನ್ನೂ ಸಹ ಮನಸ್ಸಿನ ಮೂಲಕ ಅನುಭವಿಸಿ ಬಾಧೆ ಪಡಬೇಕಾಗಿಬರುತ್ತದೆ. ಕೆಲಸ ಮಾಡಿಸುವುದು ಮನೋ, ಬುದ್ದಿ, ಚಿತ್ತಗಳಾಗಿರುವಾಗ ಸುಖ ದುಃಖಗಳು ಅನುಭವಿಸುವವನು ಜೀವಾತ್ಮ. ಪ್ರಾರಬ್ಧವೊಂದರ ಉದ್ದೇಶ ಜೀವಾತ್ಮನನ್ನು ಅನುಭವಿಸುವಂತೆ ಮಾಡುವು ದಾದ್ದರಿಂದ ಅದಕ್ಕೆ ತಕ್ಕಂತೆ ಶರೀರ ಯಂತ್ರಾಂಗವೆಲ್ಲವೂ ಅಳವಡಿಸಲಾಗಿದೆ.

ಇಲ್ಲಿಯವರೆಗೂ ಅಹಂಕಾರ ಒಂದರ ಕೆಲಸ ಏನೋ ತಿಳಿಯಲಿಲ್ಲ ಅಲ್ಲವೆ! ಈಗ ನೋಡೋಣ. ಒಂದು ಕಾರ್ಯದಲ್ಲಿ ಮನಸ್ಸು, ಬುದ್ಧಿ, ಚಿತ್ತಗಳು ಶ್ರಮಿಸಿದಾಗ, ನಡೆಯುವ ಕೆಲಸದಲ್ಲಿನ ಅನುಭವವನ್ನು ಜೀವಾತ್ಮ ಹೊಂದುತ್ತಿರುವಾಗ, ಪಕ್ಕದಲ್ಲಿರುವ ಅಹಂಕಾರ ಈ ಕೆಲಸಕ್ಕೆಲ್ಲವೂ ನೀನೇ ಅಧಿಪತಿಯೂ, ನಿನ್ನಿಂದಲೇ ಈ ಕೆಲಸ ನಡೆಯುತ್ತಿದೆ ಎಂದು ಜೀವಾತ್ಮನಿಗೆ ಬೋಧಿಸುತ್ತದೆ. ಜೀವಾತ್ಮನು ಅಹಂಕಾರದ ಭಾವವನ್ನು ಗ್ರಹಿಸಿದವನಾಗಿ, ಎಂದರೆ ಅಹಂಭಾವನಾಗಿ ಈ ಕೆಲಸವನ್ನು ನಾನೇ ಮಾಡುತ್ತಿದ್ದೇನೆಂದು ಭಾವಿಸುತ್ತಿದ್ದಾನೆ. ಆಗ ಕಾರ್ಯದಲ್ಲಿ ಸ್ವಭಾವವಾಗಿ ಹುಟ್ಟಿದ ಆಗಾಮಿಕ ಕರ್ಮ ಜೀವಿಯ ಕರ್ಮಚಕ್ರದಲ್ಲಿ ಸೇರಿಹೋಗುತ್ತಿದೆ. ಜೀವಿಯು ಹಳೆ ಪ್ರಾರಬ್ಧಕರ್ಮವನ್ನು ಅನುಭವಿಸಿದವನಾದರೂ ಹೊಸ ಆಗಾಮಿಕಕರ್ಮ ಮತ್ತೆ ಸಂಪಾದಿಸಿಕೊಂಡವನಾಗಿದ್ದಾನೆ. ಅನುಭವಿಸಿ ಹಳೆ ಕರ್ಮವನ್ನು ಇಲ್ಲದಂತೆ ಮಾಡಿಕೊಂಡಾಗ ಪುನಃ ಹೊಸಕರ್ಮ ಬಂದು ಸೇರಿದೆ. ಇದು ಸಾಧಾರಣ ಜೀವಾತ್ಮನ ನಿತ್ಯಕರ್ಮ ವಿಧಾನ, ಪ್ರತಿ ನಿತ್ಯ ಕಾರ್ಯಾಚರಣೆಯಲ್ಲಿ ಹುಟ್ಟುತ್ತಿರುವ ನಿತ್ಯ ಕರ್ಮಾಭಿವೃದ್ಧಿ. ಈ ವಿಧಾನ ಸರ್ವಜಗತ್ತಿನಲ್ಲಿ ಜೀವಾತ್ಮಗಳಲ್ಲಿ ನಡೆಯುವ ಯಾಂತ್ರಿಕ ವಿಧಾನ. ಇದು ಅಂತರ್ಮುಖವಾಗಿ ನಡೆಯುತ್ತಿದೆ. ಆದ ಕಾರಣ ಯಾರಿಗೂ ತಿಳಿಯದಂತೆ ಹೋಗಿದೆ. ಬಾಹ್ಯ ಕಾರ್ಯಗಳ ಮೇಲೆ ಇರುವ ದೃಷ್ಟಿ ಅಂತರಂಗ ವಿಧಾನದ ಮೇಲೆ ಯಾರಿಗೂ ಇಲ್ಲ. ಆದ್ದರಿಂದ ಕರ್ಮ ಕಡಿಮೆಯಾಗುವುದೇ ಅಲ್ಲದೆ ಹೆಚ್ಚಾಗುತ್ತಾ ಹೋಗುತ್ತದೆ. ಕರ್ಮ ಇರುವವರೆಗೂ ಜನ್ಮಗಳು ತಪ್ಪುವುದಿಲ್ಲ. ಆದ ಕಾರಣ ಜೀವಾತ್ಮ ಜನನ ಮರಣ ಚಕ್ರದಿಂದ ಹೊರಬೀಳದೆ ಹೋಗುತ್ತಿದ್ದಾನೆ.

ಕರ್ಮ ಹೇಗೆ ಬರುತ್ತದೊ ತಿಳಿದುಕೊಂಡಿದ್ದೇವೆ. ಕರ್ಮ ಹೇಗೆ ಬಾರದಂತೆ ಮಾಡಿಕೊಳ್ಳಬೇಕೋ ಸಹ ತಿಳಿದುಕೊಳ್ಳೋಣ. ಇಲ್ಲಿಯವರೆಗೂ ಶ್ಲೋಕದ ನಿಜಾರ್ಥದೊಳಗೆ ನಾವು ಬರಲಿಲ್ಲ. ಈಗ ಶ್ಲೋಕದಲ್ಲಿ ಹೇಳಲಾದ ವಿಷಯಕ್ಕೆ ಬರುತ್ತಿದ್ದೇವೆ. ಪ್ರಾರಬ್ಧದ ಪ್ರಕಾರ ಕಾರ್ಯಗಳು ಹೇಗೆ ನಡೆಯುತ್ತಿವೆಯೊ, ಶರೀರದಲ್ಲಿರುವ ಮನೋ, ಬುದ್ಧಿ, ಚಿತ್ತ, ಅಹಂಕಾರದ ಕೆಲಸವೇನೊ, ಏನು ಮಾಡದ ಜೀವಾತ್ಮನು ಏಕಿದ್ದಾನೋ ತಿಳಿದುಕೊಂಡಿದ್ದೇವೆ. ಕೊನೆಯಲ್ಲಿರುವ ಅಹಂಕಾರವು ಕಾರ್ಯಕ್ಕೆ ಕಾರಣ ನಾನು ಎಂಬ ಭಾವವನ್ನು ಜೀವಾತ್ಮನಿಗೆ ಹುಟ್ಟಿಸುವುದರಿಂದ ಹೊಸ ಕರ್ಮವನ್ನು ಅಂಟಿಸುತ್ತಿದೆ ಎಂದು ತಿಳಿದುಕೊಂಡಿದ್ದೇವೆ. ಕರ್ಮ ಅಂಟಿಕೊಳ್ಳುವುದಕ್ಕೆ ಕಾರಣ ಅಹಂಕಾರವೇ ಎಂದು ತಿಳಿದುಹೋಗಿದೆ. ಕರ್ಮವನ್ನು ಅಂಟಿಸುವುದೇ ಅಹಂಕಾರದ ಕೆಲಸವಾದಾಗ, ಕರ್ಮ ನಿರ್ಮೂಲನೆಯೂ ಸಹ ಅಹಂಕಾರದ ಹತ್ತಿರವೇ ಇದೆಯೆಂದು ತಿಳಿದು ಹೋಗುತ್ತಿದೆ. ಅಹಂಕಾರದ ಮಾತನ್ನು ಜೀವಾತ್ಮನು ಕುರುಡನಂತೆ ಕೇಳುವುದರಿಂದಲೇ ಕರ್ಮ ಅಂಟುತ್ತದೆ. ಆದುದರಿಂದ ಜೀವಾತ್ಮನಿಗೂ ಅಹಂಕಾರಕ್ಕೂ ಇರುವ ಸಂಬಂಧದಲ್ಲಿಯೇ ಕರ್ಮ ಅಂಟುವ ಸಾರಾಂಶವಿದೆ. ವಾಸ್ತವಕ್ಕೆ ಕಾರ್ಯದಲ್ಲಿ ಜೀವಾತ್ಮನಿಗೆ ಸಂಬಂಧ ಇಲ್ಲದಿರುವಾಗ ನಾನೇ ಮಾಡುತ್ತಿದ್ದೇನೆಂದು ಜೀವಾತ್ಮನು ಅಂದುಕೊಳ್ಳುವುದು, ಅಹಮ್ ಮಾತನ್ನು ನಿಜನಾ ಅಲ್ಲವಾ ಎಂದು ನೋಡದೆ ಜೀವಾತ್ಮನು ಕುರುಡನಂತೆ ನಂಬುವುದು ಏಕೆ ನಡೆಯುತ್ತಿದೆ ಎಂದು ಯೋಚಿಸಿ ನೋಡಿದರು, ಜೀವಾತ್ಮನಿಗೆ ಸತ್ಯವೇನು? ಅಸತ್ಯವೇನೆಂದು ತಿಳಿದುಕೊಳ್ಳುವ ವಿಚಕ್ಷಣಾ ದೃಷ್ಟಿ ಇಲ್ಲವೆಂದು ತಿಳಿಯುತ್ತದೆ. ಅಜ್ಞಾನ ಅಂಧತ್ವದಿಂದಿರುವ ಜೀವಾತ್ಮನು ಪಕ್ಕದಲ್ಲಿರುವ ಅಹಮ್ ಮೇಲೆ ಆಧಾರ ಪಡುತ್ತಿದ್ದಾನೆ. ಅಹಮ್‌ವೊಂದರ ಕೆಲಸ ಇರುವುದು ಇಲ್ಲದಂತೆ, ಇಲ್ಲದ್ದು ಇರುವಂತೆ ಹೇಳುವುದೇ, ಆದ್ದರಿಂದ ಜೀವಾತ್ಮನಿಗೆ ಸಂಬಂಧವಿಲ್ಲದ ವಿಷಯವನ್ನು ಸಂಬಂಧ ಏರ್ಪಡಿಸಿ ಅಹಂಕಾರ ಹೇಳುತ್ತಿದೆ. ಅಜ್ಞಾನವೆಂಬ ಕುರುಡುತನವಿರುವ ಜೀವಾತ್ಮನು ಅಹಂಕಾರದ ಮೇಲೆ ಆಧಾರಪಟ್ಟು ಅದು ಹೇಳುವುದು ನಿಜವೇ ಎಂದು ನಂಬುತ್ತಿದ್ದಾನೆ.

ಜ್ಞಾನದೃಷ್ಟಿ ಇರುವ ಜೀವಾತ್ಮನು ಅಹಮ್ ಮೇಲೆ ಆಧಾರಪಡುತ್ತಿಲ್ಲ. ಕಾರ್ಯಕ್ಕೆ ಕಾರಣ ಮೂಲಕರ್ಮವೆಂದು, ಅದರ ಪ್ರೇರಣೆಯಲ್ಲಿ ಮನಸ್ಸು, ಬುದ್ಧಿ, ಚಿತ್ತ ಗುಣಗಳನ್ನು ಉಪಯೋಗಿಸಿಕೊಂಡು ಕಾರ್ಯಗಳು ಮಾಡುತ್ತಿವೆಯೆಂದು, ಜೀವಾತ್ಮನಾದ ತನಗೆ ಕಾರ್ಯದಲ್ಲಿನ ಅನುಭವವು ಹೊರತು ಇತರೆ ಸಂಬಂಧವೇನು ಇಲ್ಲವೆಂದು ತನ್ನ ಜ್ಞಾನದೃಷ್ಟಿಯಿಂದ ತಿಳಿದುಕೊಳ್ಳುತ್ತಿದ್ದಾನೆ. ಅಂತಹದರಲ್ಲಿ ಅಹಂವೊಂದರ ಮಾತು ಅಸತ್ಯವೆಂದು ತಳ್ಳಿಹಾಕುತ್ತಿದ್ದಾನೆ. ಬಾಹ್ಯವಾಗಿ ಅಗ್ನಿ ಉರಿಯುವುದಕ್ಕೆ ಆಕ್ಸಿಜನ್

(ಪ್ರಾಣವಾಯುವು) ಅಗತ್ಯ. ಹಾಗೇ ಅಗ್ನಿ ನಂದಿ ಹೋಗುವುದಕ್ಕೆ ಕಾರ್ಬನ್ ಡೈ ಆಕ್ಸೈಡ್ (ಇಂಗಾಲ ವಾಯುವು) ಅಗತ್ಯ. ಆಕ್ಸಿಜನ್ ಇರುವಾಗಲೇ ಬೆಂಕಿ ಉರಿಯುತ್ತದೆ. ಆ ವಿಧವಾಗಿಯೇ ಅಹಂಕಾರ ಕೆಲಸ ಮಾಡದಿರುವಾಗಲೇ ಜ್ಞಾನಾಗ್ನಿಯು ಪ್ರಕಾಶವಾಗಿ ಉರಿಯುತ್ತಿದೆ. ಕಾರ್ಬನ್‌ಡೈ ಆಕ್ಸೈಡ್ ಇರುವಾಗ ಅಗ್ನಿ ನಂದಿ ಹೋಗುವಂತೆ ಅಹಂವೊಂದರ ಕೆಲಸ ಇರುವಾಗ ಜ್ಞಾನಾಗ್ನಿ ಉರಿಯದೆ ನಂದಿ ಹೋಗುತ್ತದೆ. ಬಾಹ್ಯಾಗ್ನಿ ಉರಿಯುವುದಕ್ಕು ನಂದಿ ಹೋಗುವುದಕ್ಕು ವಾಯುವಿನ ಆಕ್ಸಿಜನ್, ಕಾರ್ಬನ್‌ಡೈಆಕ್ಸೈಡ್‌ಗಳು ಕಾರಣವಾದಂತೆ, ಶರೀರದಲ್ಲಿ ಜ್ಞಾನಾಗ್ನಿ ಉರಿಯುವುದಕ್ಕು ನಂದಿ ಹೋಗುವುದಕ್ಕು ಅಹಂಕಾರದ ವೃತ್ತಿ ನಿವೃತ್ತಿಗಳು ಕಾರಣವಾಗುತ್ತಿವೆ. ಅಹಂಕಾರ ವೃತ್ತಿಯಾಗಿರುವಾಗ ಜ್ಞಾನಾಗ್ನಿ ನಂದಿ ಹೋಗಿ ಕರ್ಮಗಳನ್ನು ಸುಡಲಾರದ ಸ್ಥಿತಿಯಲ್ಲಿದೆ. ಆಗ ಸಂಭವಿಸುವ ಆಗಾಮಿಕ ಕರ್ಮ ಜೀವಾತ್ಮದ ಕರ್ಮ ಚಕ್ರವನ್ನು ಸೇರುತ್ತಿದೆ. ಅಹಂಕಾರ ನಿವೃತ್ತಿಯಾದಾಗ ಜ್ಞಾನಾಗ್ನಿ ಪ್ರಜ್ವಲಿಸಿ ಉರಿಯುತ್ತಾ ಕರ್ಮವನ್ನು ಸುಡುವ ಸಾಮರ್ಥ್ಯಹೊಂದಿದೆ. ಆಗ ಸಂಭವಿಸುವ ಆಗಾಮಿಕಕರ್ಮ ಜ್ಞಾನಾಗ್ನಿಯಲ್ಲಿ ಪೂರ್ತಿ ಸುಟ್ಟುಹೋಗುತ್ತದೆ. ಆಗಾಮಿಕಕರ್ಮ ದಹನವಾಗುವುದಕ್ಕು ಮತ್ತು ಆಗದಂತಿರುವುದಕ್ಕು ಅಹಂಕಾರ ವೃತ್ತಿ ನಿವೃತ್ತಿಗಳ ಮೇಲೆ ಆಧಾರಪಟ್ಟಿದೆ.

ಅಹಂಕಾರ ಶರೀರದಲ್ಲಿ ಒಂದುಸಲ ಸ್ವಲ್ಪ ಸಮಯ ಇಲ್ಲದಂತೆ ಹೋದನಂತರ ಎಂದಿಗೂ ಇಲ್ಲದಂತೆ ಹೋಗುತ್ತದೆಂದುಕೊಳ್ಳಬಾರದು. ಜೀವಾತ್ಮನಿಗೆ ಒಂದುಬಾರಿ ಮರಣಬಂದ ಮಾತ್ರಕ್ಕೆ ಮತ್ತೊಂದು ಕಡೆ ಹುಟ್ಟುವುದಿಲ್ಲವೆಂದು ಹೇಳಲಾರೆವಲ್ಲವೆ! ಹಾಗೆ ಅಹಂಕಾರವೂ ಸಹ ಒಂದು ವಿಷಯದಲ್ಲಿ ನಿವೃತ್ತಿ ಆದಷ್ಟು ಮಾತ್ರಕ್ಕೆ ಮತ್ತೊಂದು ವಿಷಯದಲ್ಲಿ ಹುಟ್ಟುವುದಿಲ್ಲವೆಂದುಕೊಳ್ಳಬಾರದು. ಶರೀರ ಇರುವವರೆಗೂ ಅದು ಇರುತ್ತದೆ. ಅದು ಮಾತುಮಾತಿಗೂ ತನ್ನ ಕೆಲಸ ತಾನು ಮಾಡುತ್ತಿರುತ್ತದೆ. ಜ್ಞಾನ ಇರುವ ಜೀವಾತ್ಮನೂ ಸಹ ಮಾತು ಮಾತಿಗೂ ಅದರ ಮಾತಿಗೆ ಕಿವಿಗೊಡದೆ ಅಹಂಕಾರವನ್ನು ನಿವೃತ್ತಿ ಮಾಡುತ್ತಲೇ ಇರಬೇಕು. ಯಾವಾಗಾದರೆ ಅಹಮ್ ಇದೆಯೊ ಆಗ ಜ್ಞಾನಾಗ್ನಿ ಇಲ್ಲ, ಆಗಾಮಿಕ ಕರ್ಮ ಇದೆ. ಯಾವಾಗಾದರೆ ಅಹಂಕಾರ ಇಲ್ಲವೊ ಆಗ ಜ್ಞಾನಾಗ್ನಿ ಇದೆ, ಆಗಾಮಿಕಕರ್ಮ ಇಲ್ಲ. ಅಹಂಕಾರವನ್ನನುಸರಿಸಿ ಜ್ಞಾನಾಗ್ನಿ, ಜ್ಞಾನಾಗ್ನಿಯನ್ನನುಸರಿಸಿ ಕರ್ಮವಿದೆ ಎಂದು ತಿಳಿಯಬೇಕು. ಅಹಂಕಾರ ಇರುವಾಗ ಆಗಾಮಿಕಕರ್ಮ ಇದೆ. ಅಹಂಕಾರ ಇಲ್ಲದಿರುವಾಗ ಆಗಾಮಿಕಕರ್ಮ ಇಲ್ಲ. ಅಹಂಕಾರ ಇಲ್ಲದಿರುವಾಗ ಜ್ಞಾನಾಗ್ನಿ ಇದೆ. ಅಹಂಕಾರ ಇರುವಾಗ ಜ್ಞಾನಾಗ್ನಿ ಇಲ್ಲ. ಜ್ಞಾನಾಗ್ನಿ ಇರುವಾಗ ಆಗಾಮಿಕಕರ್ಮ ಸುಟ್ಟುಹೋಗುತ್ತಿದೆ. ಜ್ಞಾನಾಗ್ನಿ ಇಲ್ಲದಿರುವಾಗ ಆಗಾಮಿಕ ಕರ್ಮ ವೃದ್ಧಿಯಾಗುತ್ತದೆ.

ಜ್ಞಾನ ಇರುವವನು, ಶರೀರ ಯಂತ್ರಾಂಗವೆಲ್ಲಾ ತಿಳಿದಿರುವವನು, ಕೆಲಸ ಮಾಡುವಾಗ ಪ್ರಾರಬ್ಧಕರ್ಮದ ಪ್ರಕಾರ ಕೆಲಸ ನಡೆಯುತ್ತದೆಂದು ತಿಳಿದವನಾಗಿ, ಪ್ರಾರಬ್ಧಕರ್ಮದ ಪ್ರಕಾರವೇ ಕಾಣಿಸುವ ಫಲಿತ ಬರುತ್ತದೆಂದು ತಿಳಿದು ಮಾಡುತ್ತಿರುತ್ತಾನೆ. ಫಲಿತದ ಮೇಲೆ ಆಸೆ ಇಟ್ಟುಕೊಳ್ಳದೆ ಅದನ್ನು ಪ್ರಾರಬ್ಧವು ಮೊದಲೆ ನಿರ್ಣಯಿಸಲ್ಪಟ್ಟಿರುತ್ತದೆಂದು, ತನ್ನ ಇಷ್ಟ ಅಯಿಷ್ಟಗಳ ಮೇಲೆ ಫಲಿತ ಇರುವುದಿಲ್ಲವೆಂದು ತಿಳಿದು ಮಾಡುತ್ತಿರುತ್ತಾನೆ. ಈ ವಿಧವಾಗಿ ಫಲಿತದ ಮೇಲೆ ಆಸೆಯಿಲ್ಲದೆ ಎಲ್ಲದಕ್ಕೂ ಪ್ರಾರಬ್ಧಕರ್ಮವೇ ಕಾರಣವೆಂದು, ಅದರ ಪ್ರಕಾರವೇ ಶರೀರ ಭಾಗಗಳೆಲ್ಲ ಕೆಲಸ ಮಾಡುತ್ತವೆಂದು, ಶರೀರದಲ್ಲಿ ತಾನೊಂದು ಭಾಗವೆಂದು, ತನ್ನ ಕೆಲಸ ಕಷ್ಟ ಸುಖಗಳನ್ನು ಅನುಭವಿಸುವುದೆಂದು ತಿಳಿದಿರುತ್ತದೆ. ಹಾಗೆ ತಿಳಿದು ನಿಮಿತ್ತ ಮಾತ್ರನಾಗಿ ಕಾರ್ಯಗಳು ಮಾಡುವವನನ್ನು ಕರ್ಮಯೋಗಿ ಎನ್ನುತ್ತಿದ್ದೇವೆ. ಅವನಲ್ಲಿ ಜ್ಞಾನಾಗ್ನಿ ಇದ್ದು ಆಗಾಮಿಕ ಕರ್ಮಬಾರದಂತೆ ಸುಟ್ಟು ಬೂದಿ ಮಾಡುತ್ತದೆ. ಕರ್ಮಗಳ ಬೂದಿಯನ್ನು ಹೊಂದಿದವನಾದ್ದರಿಂದ ಸನ್ಯಾಸಿ ಎನ್ನುತ್ತಿದ್ದೇವೆ. ಸನ್ಯಾಸಿ ಹತ್ತಿರ ಬೂದಿ ಹೊರತು ಏನಿರುತ್ತದೆಂದು ಮಾತಿನ ವರಸೆಗೆ ಅನ್ನುತ್ತಿರುತ್ತೇವೆ ಅಲ್ಲವೆ! ಸನ್ಯಾಸಿ ಎಂದರೆ ಕರ್ಮಯೋಗಿ ಎಂದು, ಬೂದಿ ಎಂದರೆ ಕರ್ಮ ಸುಟ್ಟುಹೋಗಿದೆ ಎಂದು ಯಾರು ಅಂದುಕೊಳ್ಳುವುದಿಲ್ಲ. ಹೊರಗೆ ಕಾಣಿಸುವ ಬೂದಿಯು ಇಲ್ಲದಿದ್ದರೂ ಅವನ ಹತ್ತಿರ ಬೂದಿ ಹೊರತು ಏನಿದೆ ಎಂಬುವುದು ವಿಚಿತ್ರವಲ್ಲವೆ!

ಇದಕ್ಕಿಂತ ಮತ್ತೊಂದು ದೊಡ್ಡ ವಿಚಿತ್ರವೇನೆಂದರೆ 'ನನಿರಗ್ನಿ' ಅಗ್ನಿ ಇಲ್ಲದವನು' ಎಂದು ಮೇಲಿನ ಶ್ಲೋಕದಲ್ಲಿ ಹೇಳಿದಾಗ, ಬಾಹ್ಯವಾಗಿರುವ ಅಗ್ನಿಯಿಂದ ಯಜ್ಞಯಾಗಾದಿಗಳು ಮಾಡದವನೆಂದು ಅರ್ಥ ಹೇಳುವುದು ಮತ್ತಷ್ಟು ವಿಚಿತ್ರವಲ್ಲವೆ! ಜ್ಞಾನಾಗ್ನಿಗೆ ಎಷ್ಟೋ ಚರಿತ್ರೆ ಇರುವಾಗ ಅದನ್ನು ಸ್ವಲ್ಪವಾದರೂ ವಿವರಿಸದೆ, ಬಾಹ್ಯ ಅಗ್ನಿಯನ್ನು ಹೋಲಿಸಿ ಹೇಳುವುದು ಯಾವ ಸಮಂಜಸವಾದ ಕೆಲಸವೊ ನೀವೇ ಯೋಚಿಸಿ. ಕರ್ಮಫಲಗಳ ಮೇಲೆ ಆಸೆಯಿಲ್ಲದೆ ಕಾರ್ಯಗಳು ಮಾಡುವವನು ನಿಜವಾದ ಸನ್ಯಾಸಿ, ನಿಜವಾದ ಯೋಗಿ ಎಂದು ಶ್ಲೋಕದಲ್ಲಿ ಹೇಳಲಾಗಿದೆ. ಇದಕ್ಕೆ ಅರ್ಥ ಶರೀರ ಯಾಂತ್ರಾಂಗವೆಲ್ಲಾ ತಿಳಿದು, ಸರ್ವ ಕಾರ್ಯಗಳಿಗೂ ಪ್ರಾರಬ್ಧ ಕಾರಣವೆಂದು, ಫಲಿತವೂ ಸಹ ಅದರ ನಿರ್ಣಯವೆಂದು ತಿಳಿದವನು, ನಿಜವಾದ ಯೋಗಿಯೆಂದು ತಿಳಿಯಬೇಕು. ಹಾಗೆ ಅಗ್ನಿ ಇಲ್ಲದಂತವನು, ಕೆಲಸಗಳು ಬಿಟ್ಟವನು ಸನ್ಯಾಸಿಯಲ್ಲ, ಯೋಗಿಯೂ ಅಲ್ಲ ಎನ್ನುವುದರಲ್ಲಿ ಅರ್ಥ ಜ್ಞಾನಾಗ್ನಿ ಇಲ್ಲದವನೆಂದು, ಕೆಲಸಗಳು ಮಾಡುವುದರಿಂದ ಕರ್ಮ

ಬರುತ್ತದೆಂದು ಭಯಪಟ್ಟು ಕೆಲಸಗಳು ಮಾಡದವನೆಂದು ಅರ್ಥ. ಮೇಲಿನ ಶ್ಲೋಕದಲ್ಲಿ **'ಫಲಿತದ ಮೇಲೆ ಆಸೆ ಇಟ್ಟುಕೊಳ್ಳದೆ ಕಾರ್ಯಗಳನ್ನು ಮಾಡಬೇಕೆಂದು ತಿಳಿದು ಮಾಡುವವನು ನಿಜವಾದ ಸನ್ಯಾಸಿ ನಿಜವಾದ ಯೋಗಿ. ಅಗ್ನಿ ಇಲ್ಲದಂತಹವನು, ಕೆಲಸಗಳು ಮಾಡದವನು ಸನ್ಯಾಸಿ ಅಲ್ಲ, ಯೋಗಿಯೂ ಅಲ್ಲ'** ಎನ್ನುವ ವಿಷಯ ಬರೆಯಲ್ಪಟ್ಟ ವಿವರದಲ್ಲಿ ಪೂರ್ತಿ ಅರ್ಥವಾಗಿದೆ ಎಂದುಕೊಂಡಿದ್ದೇವೆ. ಇದರ ವಿಷಯವೇ ಕೆಳಗಿನ ಶ್ಲೋಕದಲ್ಲಿಯೂ ಸಹ ನೋಡಿರಿ.

**(5) ಶ್ಲೋ॥ 2 : ಯಂ ಸನ್ನ್ಯಾಸಮಿತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಂಡವ !**
**ನ ಹ್ಯ ಸನ್ನ್ಯಸ್ತ ಸ್ಸಂಕಲ್ಪೋ ಯೋಗೀ ಭವತಿ ಕಶ್ಚನ ॥**
**(ಕರ್ಮಯೋಗ, ಬ್ರಹ್ಮಯೋಗ)**

**ಭಾವಾರ್ಥ :** ಜ್ಞಾನಿಗಳು ಏನನ್ನು ಸನ್ನ್ಯಾಸವೆನ್ನುತ್ತಾರೋ ಅದೇ ಕರ್ಮಯೋಗವೆಂದು ತಿಳಿಯಿರಿ. ಮನುಷ್ಯನು ಸಂಕಲ್ಪ ರಹಿತನಾದಾಗಲೇ ಯೋಗವು ಪ್ರಾಪ್ತಿಸುತ್ತದೆ.

**ವಿವರ :** ಕೆಲಸಗಳು ಮಾಡುತ್ತಾ ಅದರಲ್ಲಿನ ಕರ್ಮವನ್ನು ಸನ್ನ್ಯಸಿಸಿದವನನ್ನು ನಿಜವಾದ ಸನ್ಯಾಸಿ ಎನ್ನುತ್ತಾರೆ. ನಿಜವಾದ ಸನ್ನ್ಯಾಸಿವೊಂದರ ಸನ್ನ್ಯಾಸತ್ವ ಶರೀರದೊಳಗಿರುವುದು. ಆದ್ದರಿಂದ ಹೊರಗೆ ಕಾಣಿಸುವುದು ಅಲ್ಲ. ಬಾಹ್ಯವಾಗಿ ಇವನು ಸನ್ನ್ಯಾಸಿ ಎಂದು ಗುರುತಿಸುವುದಕ್ಕೆ ಸಾಧ್ಯವಿಲ್ಲ. ನಿಜವಾದ ಸನ್ನ್ಯಾಸಿಯಾದವನು ನಾನು ಸನ್ನ್ಯಾಸಿ ಎಂದು ಹೊರಗೆ ಹೇಳಿಕೊಳ್ಳಬೇಕಾದ ಅವಶ್ಯಕತೆ ಇಲ್ಲ. ಅಂತರಂಗದಲ್ಲಿ ಅಗ್ನಿಹೊಂದಿ ಕರ್ಮವನ್ನು ಸುಟ್ಟು ಸನ್ನ್ಯಾಸಿಸುವವನನ್ನು ಕರ್ಮಯೋಗಿ ಎನ್ನುತ್ತಿದ್ದೇವೆ. ಪೂರ್ವ ಕಾಲದಲ್ಲಿ ಜನಕ ಮಹಾರಾಜ ಮೊದಲಾದವರು ಕರ್ಮಯೋಗವನ್ನು ಆಚರಿಸಿದವರಾಗಿ ಮೋಕ್ಷವನ್ನು ಹೊಂದಿದ್ದಾರೆ. ಅವರಿಗೆ ಹೊರಗೆ ಕಾಣಿಸುವಂತೆ ಯಾವ ಗುರುತು ಇಲ್ಲದೇ ನಿಜವಾದ ಸನ್ಯಾಸಿಗಳಾಗಿದ್ದಾರೆ. ಅವರು ರಾಜ್ಯವನ್ನು ಪಾಲಿಸುತ್ತಾ ಎಲ್ಲಾ ಕೆಲಸಗಳು ಮಾಡುತ್ತಾ ಯೋಗ ಆಚರಿಸಿದ್ದಾರೆಂದು ತಿಳಿಯಬೇಕು. ಇದನ್ನೇ ಕರ್ಮಯೋಗ ಎನ್ನುತ್ತಿದ್ದೇವೆ.

ಬ್ರಹ್ಮಯೋಗ ಎಂಬುವುದು ಮತ್ತೊಂದಿದೆ. ಅದು ಹೊರಗೆ ಕಾಣಿಸುವುದಾಗಿದೆ. ಬ್ರಹ್ಮಯೋಗವು ಬಾಹ್ಯ ಆಚರಣೆಗಳೆಲ್ಲವೂ ನಿಲ್ಲಿಸಿ ಮಾಡುವುದು. ಆದ್ದರಿಂದ ಕೆಲಸಗಳು ಆಚರಿಸದೆ ಒಂದುಕಡೆ ಸ್ಥಂಭಿಸಿ ಕುಳಿತುಕೊಂಡವನನ್ನು ಬ್ರಹ್ಮಯೋಗಿ ಎಂದು ಸುಲಭವಾಗಿ ಗುರುತಿಸಬಹುದು. ಬ್ರಹ್ಮಯೋಗದಲ್ಲಿ ಅಂತರಂಗದಲ್ಲಿನ ಮನಸ್ಸು ತನ್ನ ಸಂಕಲ್ಪಗಳೆಲ್ಲವನ್ನು ವಿಸರ್ಜಿಸಬೇಕಾಗಿದೆ. ಮನಸ್ಸು ಸಂಕಲ್ಪ ವಿಕಲ್ಪಗಳು ಇಲ್ಲದಿರುವುದರಿಂದ ಒಳಗಿನ ಗುಣಗಳು ಉಪಯೋಗಪಡದೆ ಇರುತ್ತವೆ. ಬುದ್ಧಿ, ಚಿತ್ತಕ್ಕೂ ಸಹ ಕೆಲಸವಿಲ್ಲ. ಹಾಗೆ ಬಾಹ್ಯ ಶರೀರವೆಲ್ಲಾ

ಕದಲದಂತೆ ಇರುತ್ತದೆ. ಶರೀರವನ್ನು, ಒಳಗೆ ಸಂಕಲ್ಪವನ್ನು ಕದಲದಂತೆ ಇಡುವವನು ನೇರವಾಗಿ ಮನಸ್ಸಿನಿಂದ ಆತ್ಮವನ್ನು ನೋಡುತ್ತಿದ್ದಾನೆ. ಬ್ರಹ್ಮಯೋಗಿಗೆ ಬಾಹ್ಯ ಪ್ರಪಂಚ ದೃಷ್ಟಿಹೋಗಿ ಒಳಗಿರುವ ಆತ್ಮದರ್ಶನ ಏರ್ಪಡುತ್ತಿದೆ. ಆತ್ಮದರ್ಶನ ಉಂಟಾಗುವುದಕ್ಕೆ ಸರ್ವಸಂಕಲ್ಪಗಳನ್ನು ಬಿಡಬೇಕಾಗಿದೆ. ಅದ್ದರಿಂದ **ಸರ್ವಸಂಕಲ್ಪ ಸನ್ಯಾಸಿ** ಎಂದು ಮೇಲಿನ ಶ್ಲೋಕದಲ್ಲಿ ಹೇಳಲಾಗಿದೆ. ಸರ್ವಸಂಕಲ್ಪ ಸನ್ಯಾಸಿ ಆದವನನ್ನು ಬ್ರಹ್ಮಯೋಗಿ ಎನ್ನುತ್ತಾರೆ. ಈ ಶ್ಲೋಕದಲ್ಲಿ ಕರ್ಮಯೋಗ ವಿಧಾನ, ಬ್ರಹ್ಮಯೋಗ ವಿಧಾನ ಎರಡನ್ನು ಸೂಚನೆಯಾಗಿ ಹೇಳಲಾಗಿದೆ.

**(5) ಶ್ಲೋ॥ 3 : ಆರುರುಕ್ಷೋ ರ್ಮುನೇ ರ್ಯೋಗಂ ಕರ್ಮ ಕಾರಣಮುಚ್ಯತೇ ।**
**ಯೋಗಾರೂಢಸ್ಯ ತಸ್ಯೈವ ಶಮಃ ಕಾರಣ ಮುಚ್ಯತೇ ॥**
**(ಕರ್ಮಯೋಗ, ಬ್ರಹ್ಮಯೋಗ)**

**ಭಾವಾರ್ಥ** : ಯೋಗಸಾಧನೆಗೆ ಕಾರಣ ಕರ್ಮ ಎಂದು ಹೇಳಲಾಗಿದೆ. ಯೋಗಿಗೆ ಕಾರಣ ಕರ್ಮನಾಶವೆಂದು ಹೇಳಲ್ಪಡುತ್ತಿದೆ.

**ವಿವರ** : ಒಬ್ಬ ಮನುಷ್ಯ ಯೋಗ ಸಾಧನೆ ಮಾಡುವುದಕ್ಕೆ ಕಾರಣವಾದುದೇನು? ಹಾಗೆ ಒಬ್ಬ ಮನುಷ್ಯ ಯೋಗವನ್ನು ಮಾಡುವುದಕ್ಕೆ ಕಾರಣವಾದುದೇನು? ಎನ್ನುವ ಎರಡು ಪ್ರಶ್ನೆಗಳಿಗೆ ಇದರಲ್ಲಿ ಉತ್ತರ ಬೇಕಾಗಿದೆ. ಪ್ರತಿಕೆಲಸಕ್ಕೂ ಒಂದು ಕಾರಣ ಇದ್ದೇ ಇರುತ್ತದೆ. ಹಾಗೆಯೇ ಯೋಗಸಾಧನೆಗೆ ಒಂದು ಕಾರಣ. ಯೋಗಕ್ಕೆ ಒಂದು ಕಾರಣವಿದೆ. ಯೋಗ ಸಾಧನೆಗೆ ಮುಖ್ಯವಾದ ಕಾರಣ ಕರ್ಮವೇ ಎಂದು ಶ್ಲೋಕದಲ್ಲಿ ಹೇಳಲಾಗಿದೆ. ಕರ್ಮ ಇದೆ ಆದ್ದರಿಂದ ಯೋಗವನ್ನು ಕಲಿಯಬೇಕಾಗಿ ಬಂದಿದೆ, ಯೋಗ ಇದ್ದಾಗಲೇ ಕರ್ಮ ಹೋಗುತ್ತದಾದ್ದರಿಂದ ಕರ್ಮವನ್ನು ಕಳೆದುಕೊಳ್ಳುವುದಕ್ಕೆ ಯೋಗಸಾಧನೆ ಮಾಡಬೇ ಕಾಗಿಬಂದಿದೆ. ಇದರಿಂದ ಯೋಗಸಾಧನೆಗೆ ಕರ್ಮವೇ ಕಾರಣವೆಂದು ಹೇಳಿದ್ದಾರೆ.

ಯೋಗ ಮಾಡುವುದಕ್ಕೆ ಮುಖ್ಯಕಾರಣ ಕರ್ಮ ನಿವೃತ್ತಿಯೆಂದೂ ಸಹ ಶ್ಲೋಕದಲ್ಲಿ ಹೇಳಿದ್ದಾರೆ. ಕರ್ಮವನ್ನು ಸುಡಬೇಕಾದ್ದರಿಂದ ಯೋಗವನ್ನು ಆಚರಿಸಬೇಕಾಗಿಬಂದಿದೆ. ಯಾವಾಗಾದರೆ ಶರೀರದಲ್ಲಿ ಕರ್ಮ ಸುಡುತ್ತಿದೆಯೋ ಆಗ ಯೋಗ ನಡೆಯುತ್ತಿದೆ. ಆದ್ದರಿಂದ ಯೋಗಕ್ಕೆ ಕಾರಣ ಕರ್ಮ ನಿರ್ಮೂಲನೆ ಎಂದು ತಿಳಿಯಬೇಕು. ಈ ಶ್ಲೋಕದಲ್ಲಿ ಯೋಗಸಾಧನೆ ಬೇರೆ, ಯೋಗಬೇರೆ ಎಂದು ಹೇಳಿರುವುದನ್ನು ಮುಖ್ಯವಾಗಿ ಗಮನಿಸಬೇಕಾಗಿದೆ. ಯೋಗಸಾಧನೆ ಮಾಡುವವರೆಲ್ಲರೂ ಯೋಗಿಗಳಲ್ಲ, ಯೋಗಿಗಳು

ಯೋಗ ಸಾಧಕರು ಆಗುವುದಿಲ್ಲ. ಇಲ್ಲಿ ತಪ್ಪಾಗಿ ಅರ್ಥೈಸಿಕೊಳ್ಳುವ ಅವಕಾಶವಿದೆ. ಆದ್ದರಿಂದ ಸಾಧನೆ ಬೇರೆ, ಯೋಗ ಬೇರೆ ಎಂದು ಒಂದೊಂದಕ್ಕೆ ಒಂದೊಂದು ಕಾರಣವಿದೆ ಎಂದು ಹೇಳಬೇಕಾಗಿ ಬಂದಿದೆ. ಇದು ಎರಡು ಯೋಗಗಳಿಗೆ ಸಂಬಂಧಿಸಿದ ವಿಷಯ.

ಈ ಶ್ಲೋಕಕ್ಕೆ ಉಳಿದ ಗೀತೆಗಳಲ್ಲಿ ಭಾವವನ್ನು ಪೂರ್ತಿ ಬೇರೆ ಅರ್ಥದಲ್ಲಿ ಹೇಳಿದ್ದಾರೆ. ಯಾವುದು ಸರಿಯಾದುದೋ ನೀವೇ ಗ್ರಹಿಸಿಕೊಳ್ಳಿ ಎಂದು ಕೋರುತ್ತಿದ್ದೇವೆ.

**(5) ಶ್ಲೋ॥ 4 : ಯದಾ ಹಿ ಚೇಂದ್ರಿಯಾರ್ಥೇಷು ನಕರ್ಮ ಸ್ವನುಷಜ್ಜತೇ ।**
**ಸರ್ವ ಸಂಕಲ್ಪ ಸನ್ಯಾಸೀ ಯೋಗರೂಢಸ್ತ ದೋಚ್ಯತೇ ॥**
**(ಬ್ರಹ್ಮಯೋಗ)**

**ಭಾವಾರ್ಥ:** ಇಂದ್ರಿಯ ವಿಷಯಗಳಲ್ಲಿ, ಅವುಗಳ ಕೆಲಸಗಳಲ್ಲಿ ಯಾವಾಗಾದರೆ ಸಂಗವರ್ಜಿತ ಏರ್ಪಡುತ್ತದೋ ಆಗಲೇ ಅವನನ್ನು ಯೋಗಿ ಎಂದೂ, ಮತ್ತು ಸರ್ವಸಂಕಲ್ಪ ಸನ್ಯಾಸಿ ಎಂದು ಕರೆಯುತ್ತಾರೆ.

**ವಿವರ** : ಶರೀರದಲ್ಲಿ ಒಂದೊಂದು ಭಾಗಕ್ಕೆ ಒಂದೊಂದು ಪ್ರತ್ಯೇಕವಾದ ಕೆಲಸ ನಿರ್ಣಯಿಸಲ್ಪಟ್ಟಿರುತ್ತದೆ. ಪ್ರತ್ಯೇಕ ಕೆಲಸಗಳನ್ನು ಅನುಸರಿಸಿ ಶರೀರವನ್ನು 25 ಭಾಗಗಳಾಗಿ ವಿಭಜಿಸಲಾಗಿದೆ. ಅದರಲ್ಲಿ ಬಾಹ್ಯವಾಗಿರುವುವು 10. ಅವುಗಳಲ್ಲಿ ಜ್ಞಾನೇಂದ್ರಿಯಗಳು ಮುಖ್ಯವಾದವು. ಕಣ್ಣಿಗೆ ನೋಡುವುದು, ಕಿವಿಗೆ ಕೇಳುವುದು, ಮೂಗಿಗೆ ವಾಸನೆ ಗ್ರಹಿಸುವುದು, ನಾಲಿಗೆಗೆ ರುಚಿ ತಿಳಿದುಕೊಳ್ಳುವುದು, ಚರ್ಮಕ್ಕೆ ಸ್ಪರ್ಶವನ್ನು ಗ್ರಹಿಸುವುದು ಕಾರ್ಯಗಳಾಗಿವೆ. ಇವು ತಮ್ಮ ಕಾರ್ಯಗಳನ್ನು ಮನಸ್ಸಿಗೆ ತಿಳಿಸುತ್ತಿರುತ್ತವೆ. ಈ ಐದು ಒಳಗಿರುವ ಮನಸ್ಸಿಗೆ ಅನುಬಂಧವಾಗಿವೆ. ಜ್ಞಾನೇಂದ್ರಿಯಗಳು ಐದು ತಿಳಿಸಿದ ವಿಷಯಗಳನ್ನು ಒಳಗಿರುವ ಬುದ್ಧಿಗೆ ತಿಳಿಸುವುದು ಮತ್ತು ಇವುಗಳನ್ನು ಜ್ಞಾಪಕ ಇಟ್ಟುಕೊಳ್ಳುವುದು ಮನಸ್ಸೊಂದರ ಕೆಲಸವಾಗಿದೆ. ಇದಕ್ಕೂ ಮೊದಲು ನಡೆದ ಇಂದ್ರಿಯ ವಿಷಯಗಳನ್ನು ಮನನ ಮಾಡುವುದು ಒಂದು ಕೆಲಸವಾಗಿದ್ದು, ಪ್ರಸ್ತುತ ಇಂದ್ರಿಯ ವಿಷಯಗಳನ್ನು ಒಳಗಿನ ಬುದ್ಧಿಗೆ ತಿಳಿಸುವುದು ಎರಡನೆ ಕೆಲಸವಾಗಿದೆ. ಮನುಷ್ಯ ನಿದ್ರೆಯಿಂದ ಎದ್ದಾಗಿನಿಂದ ಎರಡು ಕೆಲಸಗಳಲ್ಲಿ ಯವುದೋ ಒಂದು ಕೆಲಸವನ್ನು ಮನಸ್ಸು ಮಾಡುತ್ತಲೇ ಇರುತ್ತದೆ. ಮನಸ್ಸೊಂದರ ಎರಡು ಕೆಲಸಗಳು ನಿದ್ರೆಯಲ್ಲಿ ನಿಂತುಹೋಗುತ್ತವೆ.

ಪ್ರಯತ್ನಮಾಡಿ ಎಚ್ಚರಿಕೆಯಲ್ಲಿ ಮನಸ್ಸಿನ ಎರಡು ಕೆಲಸಗಳು ನಿಲ್ಲಿಸುವುದು ಬ್ರಹ್ಮಯೋಗವಾಗುತ್ತದೆ. ಈ ಪ್ರಯತ್ನದಲ್ಲಿ ಜ್ಞಾನೇಂದ್ರಿಯಗಳನ್ನು ಕೆಲಸ ಮಾಡದಂತೆ

ಮಾಡಿ, ಅವುಗಳ ವಿಷಯಗಳನ್ನು ಮನಸ್ಸಿಗೆ ಸೇರದಂತೆ ಸುಲಭವಾಗಿ ಮಾಡಬಹುದು. ಉದಾಹರಣೆಗೆ ಕಣ್ಣುಗಳು ಮುಚ್ಚುವುದರಿಂದ ಕಣ್ಣಿನ ವಿಷಯ ಎಂದರೆ ದೃಶ್ಯದ ವಿಷಯ ಒಳಗೆ ಸೇರಿಸುವುದು ಮನಸ್ಸಿಗೆ ಇಲ್ಲದಂತೆ ಹೋಗುತ್ತದೆ. ಹಾಗೇ ಕಿವಿಗಳಿಗೆ ಶಬ್ಧವಿಲ್ಲದ ಕೋಣೆಯಲ್ಲಿ ಕುಳಿತುಕೊಳ್ಳುವುದರಿಂದ ಆ ವಿಷಯ ಮನಸ್ಸಿಗೆ ಇಲ್ಲ. ನಾಲಿಗೆಗೆ ಏನು ಇಡದಿರುವುದರಿಂದ ರುಚಿ ತಿಳಿಯುವುದಿಲ್ಲ. ಏನು ತಾಕದಿರುವುದರಿಂದ ಚರ್ಮದ ಸ್ಪರ್ಶ ಮನಸ್ಸಿಗೆ ತಿಳಿಯುವುದಿಲ್ಲ.  ಹಾಗೆ ಯಾವ ವಾಸನೆ ಇಲ್ಲದ ಸ್ಥಳದಲ್ಲಿ ಇರುವುದರಿಂದ ಮನಸ್ಸಿಗೆ ಒಂದು ವಿಧವಾದ ಕೆಲಸ ಇಲ್ಲದಂತೆ ಹೋಗಿದೆ. ಬ್ರಹ್ಮಯೋಗ ಸಾಧಕನು ನಿರ್ಜನ ನಿರ್ಮಲವಾದ ಪ್ರದೇಶದಲ್ಲಿ ಕುಳಿತುಕೊಂಡು, ಜ್ಞಾನೇಂದ್ರಿಯ ವಿಷಯಗಳಿಗೂ ಮನಸ್ಸಿಗೂ ಸಂಬಂಧ ಇಲ್ಲದಂತೆಮಾಡಿ, ಮನಸ್ಸಿಗೆ ಕೆಲಸವಿಲ್ಲದಂತೆ ಮಾಡುತ್ತಿದ್ದಾನೆ. ಅದರೂ ಮನಸ್ಸು ಎರಡನೇ ಕೆಲಸವನ್ನು ಪ್ರಾರಂಭಿಸಿ ಕಳೆದ ಕಾಲದಲ್ಲಿನ ಇಂದ್ರಿಯ ವಿಷಯಗಳನ್ನು, ನೋಡಿದ ದೃಶ್ಯಗಳನ್ನೊ, ಕೇಳಿದ ಮಾತುಗಳನ್ನೊ ಜ್ಞಾಪಕಕ್ಕೆ ತಂದಿಡುತ್ತದೆ. ಮನಸ್ಸೊಂದರ ಈ ಕೆಲಸವನ್ನು ನಿಲ್ಲಿಸುವುದು ಬ್ರಹ್ಮಯೋಗವಾಗುತ್ತದೆ. ಮನಸ್ಸು ಕೆಲಸ ಮಾಡುವುದು ಬ್ರಹ್ಮಯೋಗವು ಅಲ್ಲ. ಮನಸ್ಸಿಗೆ ಇಂದ್ರಿಯ ವಿಷಯಗಳನ್ನು ತಾತ್ಕಾಲಿಕವಾಗಿ ಇಲ್ಲದಂತೆ ಮಾಡಿದರೂ, ಮನಸ್ಸು ಕಳೆದ ಇಂದ್ರಿಯಾರ್ಥ ವಿಷಯಗಳನ್ನು ಜ್ಞಾಪಕಕ್ಕೆ ತಂದಿಡುವ ಕೆಲಸ ಮಾಡುತ್ತಿರುವುದರಿಂದ, ಬ್ರಹ್ಮಯೋಗವು ಸಾಧಿಸುವುದಕ್ಕೆ ಬಹಳ ಕಷ್ಟವಾಗಿರುತ್ತದೆ. ಎಷ್ಟೊ ಅಭ್ಯಾಸದಿಂದ ಮನಸ್ಸು ವಿಷಯಗಳನ್ನು ಮನನ ಮಾಡುವುದು ಬಿಡುತ್ತದೋ ಆಗಲೇ ಬ್ರಹ್ಮಯೋಗ ಸಾಧ್ಯವಾಗುತ್ತದೆ. ಮನಸ್ಸಿನ ಎರಡು ಕೆಲಸಗಳಲ್ಲಿ ಒಂದಾದ ಇಂದ್ರಿಯ ವಿಷಯಗಳನ್ನು ಮನಸ್ಸಿಗೆ ಸೇರದಂತೆ ಮಾಡುವುದು. ಎರಡನೆ ಕೆಲಸವಾದ ಇಂದ್ರಿಯ ವಿಷಯಗಳನ್ನು ಮನಸ್ಸಿಗೆ ಜ್ಞಾಪಕ ಬಾರದಂತೆ ಮಾಡಿದಾಗಲೇ ಬ್ರಹ್ಮಯೋಗ ಸಾಧ್ಯವಾಗುತ್ತದೆ. ಆದ್ದರಿಂದಲೇ ಮೇಲಿನ ಶ್ಲೋಕದಲ್ಲಿ ಇಂದ್ರಿಯ ವಿಷಯಗಳನ್ನು ಅವುಗಳ ಕೆಲಸಗಳನ್ನು ಮನಸ್ಸಿಗೆ ಇಲ್ಲದಂತೆ ಮಾಡಿದವನನ್ನು ಸರ್ವಸಂಕಲ್ಪ ಸನ್ಯಾಸಿ ಎಂದೂ ಯೋಗಿ ಎಂದೂ ಹೇಳುತ್ತಿದ್ದಾರೆ.

**(5) ಶ್ಲೋ॥ 5 : ಉದ್ಧರೇ ದಾತ್ಮನಾಽಽತ್ಮಾನಂ ನಾತ್ಮಾನ ಮನಸಾದಯೇತ್ ।**
**ಆತ್ಮೈವಹ್ಯಾತ್ಮನೋ ಬನ್ದು ರಾತ್ಮೈವ ರಿಪುರಾತ್ಮನಃ ॥**
**(ಪರಮಾತ್ಮ, ಆತ್ಮ, ಜೀವಾತ್ಮ)**

**ಭಾವಾರ್ಥ :** ಆತ್ಮದಿಂದಲೇ ಆತ್ಮಕ್ಕೆ ಔನ್ನತ್ಯಗತಿಯೂ, ಮತ್ತು ಆತ್ಮದಿಂದಲೇ ಆತ್ಮಕ್ಕೆ

ಅಧೋಗತಿಯೂ ಏರ್ಪಡುತ್ತದೆ. ಆದ್ದರಿಂದ ಆತ್ಮಕ್ಕೆ ಆತ್ಮವೇ ಬಂಧುವು ಮತ್ತು ಆತ್ಮಕ್ಕೆ ಆತ್ಮವೇ ಶತ್ರುವಾಗಿದೆ.

**ವಿವರ :** ಈ ಶ್ಲೋಕದಲ್ಲಿ ಎರಡು ಆತ್ಮಗಳಿವೆ. ಆತ್ಮಗಳ ವಿವರವನ್ನು ತಿಳಿಯದೆ ಹೋದರೆ ಈ ಶ್ಲೋಕದಲ್ಲಿನ ಅರ್ಥ ಅನರ್ಥವಾಗುತ್ತದೆ. ಆದ್ದರಿಂದ ಯಾವ ಶ್ಲೋಕ ಯಾವ ಆತ್ಮಕ್ಕೆ ಹೇಳಲಾಗುತ್ತಿದೆಯೋ ಗ್ರಹಿಸಬೇಕೆಂದು ಮೊದಲೇ ಹೇಳಿದ್ದೇವೆ. ಕೆಲವರು ಇಲ್ಲಿ ಈ ಶ್ಲೋಕಕ್ಕೆ ಸಂಬಂಧವಿಲ್ಲದ ಮನಸ್ಸನ್ನು ತಂದಿಟ್ಟುಕೊಂಡಿದ್ದಾರೆ. ಇದರಲ್ಲಿ ಮನಸ್ಸಿಗೆ ಸಂಬಂಧಿಸಿರುವುದು ಒಂದು ಮಾತೂ ಕೂಡಾ ಇಲ್ಲ. ಕೇವಲ ಆತ್ಮಗಳ ವಿಷಯವಾಗಿದೆ. ಒಂದು ಆತ್ಮದಿಂದ ಒಂದು ಆತ್ಮ ಉದ್ಧರಿಸಲ್ಪಟ್ಟು ಉತ್ತಮ ಸ್ಥಾನಕ್ಕೆ ಸೇರಿಕೊಳ್ಳುವುದು, ಹಾಗೇ ಆತ್ಮದಿಂದ ಒಂದು ಆತ್ಮ ಉದ್ಧರಿಸಲ್ಪಡದೆ ಅಧೋಗತಿ ಹೊಂದುವುದು ನಡೆಯುತ್ತದೆಂದು ಈ ಶ್ಲೋಕದಲ್ಲಿ ಹೇಳಿದ್ದಾರೆ. ಅಷ್ಟೇ ಅಲ್ಲದೆ ಒಂದು ಆತ್ಮ ಮತ್ತೊಂದು ಆತ್ಮಕ್ಕೆ ಬಂಧುವಾಗಿದೆ. ಹಾಗೆ ಒಂದು ಆತ್ಮ ಮತ್ತೊಂದು ಆತ್ಮಕ್ಕೆ ಶತ್ರುವಾಗಿಯೂ ಸಹ ಇದೆಯೆಂದು ಹೇಳುವುದಾಗಿದೆ.

ಇಲ್ಲಿ ಎರಡು ಪ್ರಶ್ನೆಗಳಿಗೆ ಸ್ಥಾನವಿದೆ. ಒಂದು ಯಾವ ಆತ್ಮ, ಯಾವ ಆತ್ಮವನ್ನು ಉದ್ಧರಿಸುತ್ತಿದೆ? ಹಾಗೆ ಯಾವುದು ಯಾವುದನ್ನು ಅಧೋಗತಿಗೆ ಕಳುಹಿಸುತ್ತಿದೆ? ಎರಡನೆಯದು ಯಾವ ಆತ್ಮ ಯಾವ ಆತ್ಮಕ್ಕೆ ಬಂದುವಾಗಿದೆ? ಹಾಗೆ ಯಾವುದು ಯಾವುದಕ್ಕೆ ಶತ್ರುವಾಗಿದೆ? ಈ ಪ್ರಶ್ನೆಗಳಲ್ಲಿ ಒಂದು ಆತ್ಮ ಇನ್ನೊಂದು ಆತ್ಮಕ್ಕೆ ಏಕೆ ಬಂದುವಾಗುತ್ತಿದೆ, ಹಾಗೆ ಏಕೆ ಶತ್ರುವಾಗುತ್ತಿದೆ ಎಂಬ ವಿಷಯ ಪಕ್ಕದಲ್ಲಿ 6ನೇ ಶ್ಲೋಕದಲ್ಲಿ ಹೇಳಲಾಗಿದೆ. ಯಾವ ಆತ್ಮ ಯಾವ ಆತ್ಮಕ್ಕೆ ಶತ್ರು, ಮಿತ್ರನು ಆಗುತ್ತಿದೆಯೆಂಬ ಪ್ರಶ್ನೆಗೆ ವಿವರವನ್ನು ಇಲ್ಲಿ ಮೊದಲು ನಾವು ತಿಳಿದುಕೊಳ್ಳಬೇಕಾಗಿದೆ.

ನಮ್ಮ ಶರೀರದಲ್ಲಿ ಮೂರು ಆತ್ಮಗಳಿವೆ ಎಂದು ಆತ್ಮಗಳ ವಿವರವು ತಿಳಿದುಕೊಂಡಿದ್ದೇವೆ. ಮೂರು ಆತ್ಮಗಳಲ್ಲಿ ಯಾರಿಗೆ ಯಾರು ಶತ್ರು? ಯಾರಿಗೆ ಯಾರು ಮಿತ್ರನು ಎನ್ನುವುದೇ ಮುಖ್ಯವಾದ ಪ್ರಶ್ನೆ. ಯಾರು ಯಾರಿಗೆ ಏನಾಗುತ್ತಿದ್ದಾರೆಂದು ತಿಳಿದ ನಂತರ ಏಕೆ ಆಗುತ್ತಿದ್ದಾರೆಂದು ಸುಲಭವಾಗಿ ತಿಳಿಯಬಹುದು. ಮೂರು ಆತ್ಮಗಳಲ್ಲಿ ಕ್ರಮವಾಗಿ ಮೊದಲನೆಯದು ಜೀವಾತ್ಮ, ಎರಡನೆಯದು ಆತ್ಮ, ಮೂರನೆಯದು ಪರಮಾತ್ಮ. ಈ ಮೂರು ಆತ್ಮಗಳನ್ನು, ವಸ್ತುಗಳನ್ನು ತೂಕ ಮಾಡುವ ತಕ್ಕಡಿಗೆ ಹೋಲಿಸಿಕೊಳ್ಳೋಣ. ಮೊದಲನೆಯದಾದ ಜೀವಾತ್ಮ ತಕ್ಕಡಿಯಲ್ಲಿ ಒಂದು ಕಡೆ ನೇತಾಡುತ್ತಿರುವ ತಟ್ಟೆ ಎಂದುಕೊಳ್ಳೋಣ. ಹಾಗೆ ಎರಡನೆ ಕಡೆ ನೇತಾಡುತ್ತಿರುವ ತಟ್ಟೆಯನ್ನು ಪರಮಾತ್ಮ

ಎಂದುಕೊಳ್ಳೋಣ. ತಕ್ಕಡಿಗೆ ಕಟ್ಟಿಗೆಗೆ ಮಧ್ಯದಲ್ಲಿರುವ ಆಧಾರವನ್ನು ಆತ್ಮ ಎಂದುಕೊಳ್ಳೋಣ. ಕೆಳಗಿನ ಚಿತ್ರವನ್ನು ಗಮನಿಸೋಣ.



ತಕ್ಕಡಿಯಲ್ಲಿ ಎರಡು ಕಡೆಗಿರುವ ಎರಡು ತಟ್ಟೆಗಳಿಗೆ ಮಧ್ಯದಲ್ಲಿ ಸಮಾನ ದೂರದಲ್ಲಿರುವ ಆಧಾರವು ಎರಡು ತಟ್ಟೆಗಳಿಗೂ ಸಮಾನವೆಂದು ತಕ್ಕಡಿಯಲ್ಲಿ ತಿಳಿದಂತೆ ಜೀವಾತ್ಮ ಪರಮಾತ್ಮಗಳಿಗೆ ಮಧ್ಯದಲ್ಲಿರುವ ಆತ್ಮ ಎರಡಕ್ಕೂ ಸಮಾನವಾಗಿದೆ ಎಂದು, ಅದು ಯಾವುದರಕಡೆಯೂ ಪಕ್ಷಪಾತವಿಲ್ಲದ ವಿಧವಾಗಿ ತಕ್ಕಡಿಯಲ್ಲಿನ ಆಧಾರದಂತೆ ಇದೆಯೆಂದು ತಿಳಿಯಬೇಕು. ಇದರಿಂದ ಎರಡನೆಯದಾದ ಆತ್ಮ, ಜೀವಾತ್ಮ, ಪರಮಾತ್ಮ ಗಳಿಗೆ ಸಮಾನವಾಗಿದ್ದು ಯಾರಿಗೂ ಶತ್ರುವಾಗದೆ, ಮಿತ್ರನಾಗದೆ ಇದೆಯೆಂದು ತಿಳಿಯಬೇಕು. ಆತ್ಮನನ್ನು ಪಕ್ಕಕ್ಕಿಟ್ಟರೆ ಉಳಿದಿರುವವು ಜೀವಾತ್ಮ ಪರಮಾತ್ಮ, ಈ ಎರಡು ಒಂದಕ್ಕೊಂದು ಮಿತ್ರ ಶತ್ರುಗಳಾಗಿ ಬದಲಾಗುವುದಕ್ಕೆ ಅವಕಾಶವಿದೆ. ಇದರಿಂದ ಪರಮಾತ್ಮನಿಂದ ಜೀವಾತ್ಮ ಉದ್ಧರಿಸಲ್ಪಡುತ್ತಿದೆ ಎಂದು, ಮತ್ತು ಪರಮಾತ್ಮನಿಂದ ಜೀವಾತ್ಮ ಅಧೋಗತಿಯೂ ಸಹ ಹೊಂದುತ್ತಿದೆ ಎಂದು ತಿಳಿಯುತ್ತದೆ. ಉದ್ಧರಿಸಲ್ಪಟ್ಟ ಜೀವಾತ್ಮ ಪರಮಾತ್ಮಕ್ಕೆ ಬಂಧುವೆಂದು, ಅಧೋಗತಿ ಹೊಂದಿದ ಜೀವಾತ್ಮ ಪರಮಾತ್ಮಕ್ಕೆ ಶತ್ರುವೆಂದೂ ತಿಳಿಯುತ್ತದೆ. ಹೇಗೆ ಶತ್ರುವೋ ಹೇಗೆ ಮಿತ್ರನೊ? ಕೆಳಗಿನ ಶ್ಲೋಕದಲ್ಲಿ ನೋಡೋಣ.

**(5) ಶ್ಲೋ॥ 6 : ಬಂಧುರಾತ್ಮಾ೭೭ತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ ।**
**ಅನಾತ್ಮನಸ್ತು ಶತ್ರುತ್ವೇ ವರ್ತೇ ತಾತ್ಮೈವ ಶತ್ರುವತ್ ॥**
**(ಪರಮಾತ್ಮ, ಆತ್ಮ, ಜೀವಾತ್ಮ)**

**ಭಾವಾರ್ಥ :** ಯಾರು ಆತ್ಮವನ್ನು ತಿಳಿದುಕೊಂಡಿದ್ದಾನೋ, ಅವನಿಗೆ ಆತ್ಮ ಬಂಧುವಾಗಿದೆ ಹಾಗೆ ಯಾರು ಆತ್ಮವನ್ನು ತಿಳಿದುಕೊಳ್ಳಲಿಲ್ಲವೋ, ಅವನಿಗೆ ಆತ್ಮ ಶತ್ರುವಾಗಿಯೂ ಸಹ ಇದೆ.

**ವಿವರ** : ಜೀವಾತ್ಮನಾಗಿರುವ ಮಾನವನು ಬ್ರಹ್ಮಯೋಗವನ್ನಾಚರಿಸಿ ತನ್ನ ಶರೀರದಲ್ಲಿನ ಆತ್ಮನನ್ನು ತಿಳಿದುಕೊಳ್ಳುವುದರಿಂದ ಪರಮಾತ್ಮಕ್ಕೆ ಬಂಧುವಾಗಿ ಬದಲಾಗುತ್ತಿದ್ದಾನೆ. ಅದೇ ವಿಧವಾಗಿಯೇ ಯೋಗ ಪದ್ಧತಿಗಳು ತಿಳಿಯದೆ ಆತ್ಮನನ್ನು ತಿಳಿಯದಂತಹವನು ಪರಮಾತ್ಮಕ್ಕೆ ಶತ್ರುವಿನಂತೆ ಸಮಾನವಾಗಿದ್ದಾನೆ. ಈ ಶ್ಲೋಕದಲ್ಲಿ **'ಆತ್ಮನಾಜಿತಃ'** ಎನ್ನುವ ಪದ ಉಪಯೋಗಿಸಲಾಗಿದೆ. ಆತ್ಮವನ್ನು ಜಯಿಸುವುದೆಂದು ಆ ಪದದ ಅರ್ಥ. ನೀವು ಭಾವದಲ್ಲಾಗಲಿ, ವಿವರ ಹೇಳುವುದರಲ್ಲಾಗಲಿ ಆತ್ಮವನ್ನು ಜಯಿಸಿದವನೆಂದು ಹೇಳದೇ ಆತ್ಮವನ್ನು ತಿಳಿದುಕೊಂಡವನೆಂದು ಹೇಳಿದ್ದೀರಾ! ಎಂದು ಕೆಲವರು ಕೇಳಬಹುದು. ವಾಸ್ತವವಾಗಿ ತನಗಿಂತದೊಡ್ಡದಾದ, ತನಗೆ ದೇವರಾದ ಆತ್ಮವನ್ನು ಯಾರು ಜಯಿಸಲಾರರು. ಜೀವಾತ್ಮ ಆತ್ಮವನ್ನು ಜಯಿಸುವುದೆಂದರೇ ಮನುಷ್ಯ ದೈವವನ್ನು ಜಯಿಸಿದಂತಾಗುತ್ತದೆ. ಇಲ್ಲಿ ಆತ್ಮವನ್ನು ಜಯಿಸಿದವನೆಂದು ಹೇಳದಂತೆ ಆತ್ಮವನ್ನು ತಿಳಿದುಕೊಂಡವನೆಂದು ಹೇಳುವುದೇ ಸರಿಯಾದುದೆಂದು ತಿಳಿಯಬೇಕು. ಆತ್ಮವನ್ನು ತಿಳಿದುಕೊಳ್ಳುವುದರಲ್ಲಿ ಸಾಧನೆ ಎನ್ನುವ ದೊಡ್ಡ ಹೋರಾಟವಿದೆ.

ಒಬ್ಬ ರಾಜ ಕೋಟೆಯಲ್ಲಿದ್ದು ಕೋಟೆಯ ಸುತ್ತಲೂ ಸೈನ್ಯವನ್ನು ಕಾವಲಾಗಿಟ್ಟಿದ್ದಾನೆ. ಇತರ ಶತ್ರುಗಳು ಯಾರು ಕೋಟೆಯೊಳಗೆ ಪ್ರವೇಶಿಸಬಾರದು. ರಾಜ ಸೈನಿಕರ ಶಕ್ತಿಗೆ ಬೇಕಾದ ಆಹಾರವನ್ನಿಟ್ಟು ಪೋಷಿಸುತ್ತಾ ಗಟ್ಟಿ ಬಂದೋಬಸ್ತು ಏರ್ಪಾಟು ಮಾಡಿ ಕೊಂಡಿದ್ದಾನೆ. ಒಂದುವೇಳೆ ಶತ್ರುರಾಜರು ಯಾವಾಗಲಾದರೂ ದಾಳಿಮಾಡಿ ಸೈನ್ಯ ವೆಲ್ಲವನ್ನು ಜಯಿಸಿ ರಾಜನನ್ನು ಸೇರಿದರೆ, ರಾಜನನ್ನು ನೋಡಿದರೆ, ರಾಜನನ್ನು ಜಯಿಸಿದಂತೆ. ಯುದ್ಧ ಮಾಡುವುದು ಸೈನ್ಯವೇ ಹೊರತು ರಾಜನು ಮಾಡುವುದಿಲ್ಲ. ರಾಜ ಕೋಟೆಯೊಳಗಿರುವವನು. ಶತ್ರುರಾಜರು ಹೋರಾಡಿ ಜಯಿಸಿದರೂ, ಅವರು ಜಯಿಸಿರುವುದು ನಿಜವಾಗಿ ಸೈನಿಕರನ್ನೇ ಆಗಲಿ ರಾಜನನ್ನಲ್ಲ. ಕೊನೆಯದಾಗಿ ರಾಜನ ಹತ್ತಿರ ಹೋರಾಟ ಮಾಡಬೇಕಾಗಿಲ್ಲ. ಸೈನಿಕರಿಗೆ ಕೋಟೆ ವಶವಾಗುತ್ತಲೇ ಶತ್ರುರಾಜರು ರಾಜ್ಯವನ್ನು, ರಾಜನನ್ನು ಜಯಿಸಿದಂತೆ. ಆ ವಿಧವಾಗಿಯೇ ನಮ್ಮ ಶರೀರವು ಕೋಟೆಯಂತದ್ದು. ಅದರಲ್ಲಿ ರಾಜನು ಆತ್ಮ. ಜೀವಾತ್ಮ ಹೊರತು ಉಳಿದ ಬಾಹೇಂದ್ರಿಯಗಳು, ಅಂತರೇಂದ್ರಿಯಗಳು ಎಲ್ಲವೂ ಸೈನ್ಯವೆಂದುಕೊಳ್ಳೋಣ. ಸೈನ್ಯಾಧಿಪತಿ ಮನಸ್ಸು, ಮನಸ್ಸಿಗೆ

ಸಂಬಂಧಿಸಿರುವ ಒಳಗಿನ ಹೊರಗಿನ ಇಂದ್ರಿಯಗಳೆಲ್ಲವೂ ಸೈನಿಕರಾಗಿ ಗುರುತಿಸಿ ಜೀವಾತ್ಮ ಶತ್ರುರಾಜನಿಗೆ ಸಮಾನ. ಜೀವಾತ್ಮ ಮನಸ್ಸೆಂಬ ಸೈನ್ಯಾಧಿಪತಿಯನ್ನು, ಇಂದ್ರಿಯಗಳೆಂಬ ಸೈನ್ಯವನ್ನು ಜಯಿಸಿದಾಗ, ಶರೀರ ಕೋಟೆಯೊಳಗಿರುವ ರಾಜನಾದ ಆತ್ಮನನ್ನು ನೋಡಬಲ್ಲನು. ಮನಸ್ಸನ್ನು ಇಂದ್ರಿಯಗಳನ್ನು ಜಯಿಸಿ ಆತ್ಮನನ್ನು ದರ್ಶನ ಮಾಡಿಕೊಳ್ಳುವುದೇ **'ಆತ್ಮನಾ ಜಿತಃ'** ಎಂದು ಶ್ಲೋಕದಲ್ಲಿ ಹೇಳಿದ್ದಾರೆ. ಅದೂ ಅಷ್ಟು ಸುಲಭವಾಗಿರುವುದಿಲ್ಲ. ಶರೀರವೆಂಬ ಕೋಟೆಯಲ್ಲಿ ಜೀವಾತ್ಮನೆಂಬ ರಾಜ, ಆತ್ಮನೆಂಬ ರಾಜನನ್ನು ನೋಡಬೇಕೆಂದರೆ ಆತ್ಮಶಕ್ತಿಯಿಂದ ಚಲಿಸುತ್ತಿರುವ ಮಧ್ಯದಲ್ಲಿನ ಸೈನ್ಯವೆನ್ನುವ ಇಂದ್ರಿಯಗಳನ್ನು, ಸೈನ್ಯಾಧಿಪತಿಯಾದ ಮನಸ್ಸು ಅನೇಕ ಆತಂಕಗಳನ್ನು ಉಂಟುಮಾಡುತ್ತಲೇ ಇರುತ್ತದೆ. ಶರೀರ ಕೋಟೆಯಲ್ಲಿನ ಆತ್ಮವೆಂಬ ರಾಜನನ್ನು ನೋಡಬೇಕೆಂದರೆ, ಜೀವಾತ್ಮನೆಂಬ ಶತ್ರು ರಾಜ ಆನೇಕ ವರ್ಷಗಳು ಸೈನ್ಯದೊಂದಿಗೂ, ಸೇನಾಧಿಪತಿಯೊಂದಿಗೂ ಯುದ್ಧ ಮಾಡಿದಾಗ, ಕಡೆಗೆ ಅವರು ಸೋತುಹೋದರೆ ರಾಜನನ್ನು ಜಯಿಸಿದಂತಾಗುತ್ತದೆ. ಸೈನ್ಯಾಧಿಪತಿಯ ದಾಳಿಗೆ ಸೋತುಹೋದರೆ ಒಳಗಿರುವ ರಾಜ ಕಾಣಿಸುವುದಿಲ್ಲ.

ಒಬ್ಬ ಚಕ್ರವರ್ತಿ ಅಧೀನದಲ್ಲಿರುವ ಸಾಮಂತ ರಾಜನು, ಮತ್ತೊಬ್ಬ ಸಾಮಂತ ರಾಜನನ್ನು ಜಯಿಸಿದಾಗ ಚಕ್ರವರ್ತಿ ತನ್ನ ಸಾಮಂತ ರಾಜನನ್ನು ಹೊಗಳುತ್ತಾನೆ. ಹಾಗಲ್ಲದೆ ಸಾಮಂತರಾಜ ಮತ್ತೊಬ್ಬ ಸಾಮಂತ ರಾಜನ ಹತ್ತಿರ ಶರಣಾಗಿ ಯುದ್ದಮಾಡದೆ ತಾನೆ ಸೋತುಹೋದರೆ ಆ ಸಾಮಂತ ರಾಜನ ಮೇಲೆ ಚಕ್ರವರ್ತಿಗೆ ಕೋಪಬರುತ್ತದೆ. ಪರಮಾತ್ಮ ಚಕ್ರವರ್ತಿ ಆಗಿದ್ದು, ಜೀವಾತ್ಮ ಸಾಮಂತ ರಾಜನಾಗಿದ್ದಾನೆಂದುಕೊಳ್ಳಿ. ಆತ್ಮ ಬೇರೊಬ್ಬ ಸಾಮಂತರಾಜ ಎಂದುಕೊಳ್ಳೋಣ ಜೀವಾತ್ಮವೆಂಬ ರಾಜನು ಆತ್ಮವೆಂಬ ರಾಜನನ್ನು ಜಯಿಸಿದರೆ ಪರಮಾತ್ಮನೆಂಬ ಚಕ್ರವರ್ತಿ ಸಂತೋಷಿಸುತ್ತಾನೆ. ಹಾಗಲ್ಲದೆ ಜೀವಾತ್ಮನೆಂಬ ರಾಜನು ಆತ್ಮನೆಂಬ ರಾಜನ ಸೈನ್ಯದೊಂದಿಗೆ ಯುದ್ದಮಾಡದೆ ಅವರೊಂದಿಗೆ ಸೇರಿಹೋದರೆ ಜೀವಾತ್ಮನೂ ಸಹ ಶತ್ರುವಿಗೆ ಸಮಾನನಾಗುತ್ತಾನೆ.

**(5) ಶ್ಲೋ॥ 7 : ಜಿತಾತ್ಮನಃ ಪ್ರಶಾನ್ತಸ್ಯ ಪರಮಾತ್ಮಾ ಸಮಾಹಿತಃ ।**
**ಶೀತೋಷ್ಣ ಸುಖದುಃಖೇಷು ತಥಾ ಮಾನಾಪ ಮಾನಯೋಃ ॥**
**(ಬ್ರಹ್ಮಯೋಗ)**

**ಭಾವಾರ್ಥ :** ಆತ್ಮವನ್ನು ತಿಳಿದವನು ಪರಮಾತ್ಮನಲ್ಲಿ ಪ್ರಶಾಂತತೆ ಹೊಂದಿರುತ್ತಾನೆ. ಅಂತಹವನು ಶೀತೋಷ್ಣ ಸುಖದುಃಖಗಳಲ್ಲಿ, ಹಾಗೂ ಮಾನಾವಮಾನಗಳಲ್ಲಿ ಸಮಾನತ್ವವನ್ನು ಹೊಂದಿರುತ್ತಾನೆ.

**ವಿವರ :** ಆತ್ಮ ಪರಿವಾರವನ್ನು ಜಯಿಸಿ ಆತ್ಮದರ್ಶನ ಮಾಡಿಕೊಂಡ ಜೀವಾತ್ಮ, ಪರಮಾತ್ಮಕ್ಕೂ ತನಗೂ ಮಧ್ಯೆ ಶತ್ರುತ್ವ ಇಲ್ಲದವನಾಗಿ, ಇಬ್ಬರ ಮಧ್ಯೆ ಪ್ರಶಾಂತತೆ ಹೊಂದಿದವನಾಗಿರುತ್ತಾನೆ. ಆತನು ಶೀತೋಷ್ಣಗಳಲ್ಲಿ, ಸುಖದುಃಖಗಳಲ್ಲಿಯೂ, ಮಾನಾವಮಾನಗಳಲ್ಲಿಯೂ ಸಮಾನತೆ ಹೊಂದಿರುತ್ತಾನೆ. ಇಲ್ಲಿ ಗಮನಿಸಬೇಕಾದ ವಿಶೇಷತೆ ಒಂದಿದೆ. ಅದೇನೆಂದರೆ ಈ ಶ್ಲೋಕವು ಬ್ರಹ್ಮಯೋಗಕ್ಕೆ ಸಂಬಂಧಿಸಿರುವುದು. ಯೋಗಿಯಾದವನು ಎಚ್ಚರದಲ್ಲಿ ಬರುವ ಸುಖ ದುಃಖಗಳಿಗೆ ಸಮಾನವಾಗಿದ್ದಾನೆಂದುಕೊಳ್ಳಬಾರದು. ಸುಖದುಃಖಗಳಿಗೆ ಸಮಾನತೆ ಯೋಗದಲ್ಲಿರುವಾಗಲೇ ಎಂದು ತಿಳಿಯಬೇಕು. ಒಬ್ಬನು ಬ್ರಹ್ಮಯೋಗದಲ್ಲಿರುವಾಗ ಕಣ್ಣುಗಳು ಮುಚ್ಚಿಕೊಂಡು ನಿಶ್ಶಬ್ದವಾದ ಪ್ರದೇಶದಲ್ಲಿ ಶುಭ್ರವಾದ ಕಡೆ ಕುಳಿತುಕೊಂಡು ಯೋಗದಲ್ಲಿ ಲಗ್ನವಾಗಿರುವಾಗ, ಆತನ ಮುಂದೆ ಸುಖವನ್ನು ಉಂಟುಮಾಡುವ ಅಂದವಾದ ದೃಶ್ಯವನ್ನಿಟ್ಟರು, ಹಾಗೆ ಕಷ್ಟವನ್ನು ದುಃಖವನ್ನು ಉಂಟುಮಾಡುವ ಹತ್ತಿರ ಸಂಬಂಧಿಕರೊಂದರ ಶವವನ್ನು ತಂದಿಟ್ಟರು, ಹೊರಗಿನ ಧ್ಯಾಸ ಇಲ್ಲದವನಿಗೆ ಎರಡು ಸಮಾನವೇ. ಮಾನಾವ ಮಾನಗಳಲ್ಲಿಯೂ, ಶೀತೋಷ್ಣಗಳಲ್ಲಿಯೂ ಸಮಾನತ್ವ ಹೊಂದಿದವನೆಂದರೆ, ಪೂರ್ತಿ ಬ್ರಹ್ಮಯೋಗದಲ್ಲಿ ಲಗ್ನವಾಗಿ ಬಾಹ್ಯ ವಿಷಯಗಳ ಧ್ಯಾಸ ಇಲ್ಲದವನೆಂದು ಅರ್ಥ. ಅವನ ಶರೀರದಲ್ಲಿನ ಮನಸ್ಸು ಯಾವ ಕೆಲಸ ಮಾಡದಿರುವಾಗಲೇ, ಬಾಹ್ಯವಿಷಯಗಳ ಸುಖದುಃಖವನ್ನು ಮಾನಾವಮಾನಗಳನ್ನು ಒಳಗಿನ ಜೀವಾತ್ಮಕ್ಕೆ ಸೇರಿಸಲಿಲ್ಲ. ಈ ಶ್ಲೋಕದಲ್ಲಿನ ವಿಷಯವನ್ನು ಈ ವಿಧವಾಗಿ ಅರ್ಥಮಾಡಿಕೊಳ್ಳದೆ, ಎಚ್ಚರಿಕೆಯಲ್ಲಿರುವ ಯೋಗಿ ಕಷ್ಟಸುಖಗಳಲ್ಲಿ ಸಮಾನತ್ವವನ್ನು ಹೊಂದಿದ್ದಾನೆಂದರೆ, ಯೋಗಿ ಶರೀರದಲ್ಲಿನ ಜೀವಾತ್ಮಕ್ಕೆ ಕಷ್ಟಸುಖ ಅನುಭೂತಿಗಳ ವ್ಯತ್ಯಾಸ ಇಲ್ಲವೆಂದರೆ ಒಟ್ಟಾರೆ ಕರ್ಮಸಿದ್ಧಾಂತವೇ ತಲೆಕೆಳಗಾಗಿ ಹೋಗುತ್ತದೆ. ಧರ್ಮಗಳನ್ನು ತಿಳಿಸುವ ಭಗವದ್ಗೀತೆಗೆ ಅರ್ಥ ಇಲ್ಲದಂತಾಗುತ್ತದೆ. ಆದ್ದರಿಂದ ಈ ವಿಷಯ ಬ್ರಹ್ಮಯೋಗದಲ್ಲಿರುವ ಸಮಯದಲ್ಲಿ ಸಂಭವಿಸುವುದೆಂದು, ಉಳಿದ ಸಮಯದಲ್ಲಿ ಕರ್ಮಯೋಗಿಗಾಗಲಿ, ಬ್ರಹ್ಮಯೋಗಿಗಾಗಲಿ ಕಷ್ಟಸುಖ ಅನುಭೂತಿಗಳನ್ನು ಜೀವಾತ್ಮ ಅನುಭವಿಸಬೇಕಾಗಿದೆ ಎಂದು, ಆಗ ಅವುಗಳ ವ್ಯತ್ಯಾಸ ಜೀವಾತ್ಮನಿಗೆ ತಪ್ಪದೆ ತಿಳಿಯುತ್ತಲೇ ಇರುತ್ತದೆಂದು ಗ್ರಹಿಸಬೇಕು. ಈ ಶ್ಲೋಕದಲ್ಲಿಯೂ ಸಹ **ಜಿತಾತ್ಮನಹಃ** ಎಂದು ಹೇಳಿದ್ದಾರೆ. ಆತ್ಮವನ್ನು ಅನುಭವಿಸುವ ಸಮಯವನ್ನೇ **ಜಿತಾತ್ಮನಹಃ** ಎಂದಿದ್ದಾರೆಂದು ತಿಳಿದುಕೊಳ್ಳಬೇಕು. ಬ್ರಹ್ಮಯೋಗದಲ್ಲಿ ಮನಸ್ಸು ಆತ್ಮದ ಮೇಲೆ ಲಗ್ನವಾಗಿ, ಆತ್ಮವೊಂದರ ವಿಷಯವನ್ನು ಬುದ್ಧಿಗು ಜೀವಿಗು ತಿಳಿಸುವ ಸಮಯದಲ್ಲಿ, ಹೊರಗಿನ ವಿಷಯಗಳೆಲ್ಲಾ ಸಮಾನವಾಗಿ ತಿಳಿಯದಂತೆ ಹೋಗುತ್ತಿವೆ ಎಂದು ಕೆಳಗಿನ ಶ್ಲೋಕದಲ್ಲಿಯೂ ಸಹ ತಿಳಿಸುತ್ತಿದ್ದಾರೆ ನೋಡಿರಿ.

**(5) ಶ್ಲೋ॥ 8 :** **ಜ್ಞಾನ ವಿಜ್ಞಾನ ತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ ।**
**ಯುಕ್ತ ಇತ್ಯುಚ್ಯತೇ ಯೋಗೀ ಸಮಲೋ ಷ್ಟಾಶ್ಮ ಕಾಂಚನಃ ॥**
**(ಬ್ರಹ್ಮಯೋಗ)**

**(5) ಶ್ಲೋ॥ 9 :** **ಸುಹೃನ್ಮಿತ್ರಾ ರ್ಯುದಾಸೀನ ಮಧ್ಯಸ್ಥ ದ್ವೇಷ್ಯ ಬಂಧುಷು ।**
**ಸಾಧುಷ್ವಪಿಚ ಪಾಪೇಷು ಸಮಬುದ್ಧಿ ರ್ವಿಶಿಷ್ಯತೇ ॥**
**(ಬ್ರಹ್ಮಯೋಗ)**

**ಭಾವಾರ್ಥ :** ಜ್ಞಾನ ವಿಜ್ಞಾನ ತೃಪ್ತನು, ಆತ್ಮದೊಂದಿಗೆ ಆನಂದದಲ್ಲಿ ಮುಳುಗಿರುವವನು, ಇಂದ್ರಿಯಗಳನ್ನು ಜಯಿಸಿದವನು, ನಿಜವಾದ ಬ್ರಹ್ಮಯೋಗದಲ್ಲಿ ಕೂಡಿಕೊಂಡಿರುವವನು, ಮಣ್ಣು, ಕಲ್ಲು, ಚಿನ್ನವೆಂಬ ವ್ಯತ್ಯಾಸಗಳ ಧ್ಯಾಸವಿಲ್ಲದವನು, ಸ್ನೇಹಿತರಲ್ಲಿ ಸುಹೃಧ್ಭಾವವು ಇರುವವನಲ್ಲಿ ಶತ್ರುಗಳಲ್ಲಿ, ಬಂಧುಗಳಲ್ಲಿ ಉಳಿದವರೆಲ್ಲಾರ ಬಳಿ ಸಮತವಾಗಿರುವವನೇ ಯೋಗಿ.

**ವಿವರ :** ಆತ್ಮಜ್ಞಾನವನ್ನು ಆಚರಣೆ ಮಾಡುವುದೇ ಬ್ರಹ್ಮಯೋಗವೊಂದರ ಆಚರಣೆ, ಬ್ರಹ್ಮಯೋಗದಲ್ಲಿ ಮುಖ್ಯವಾದ ಕೆಲಸ ಮನಸ್ಸನ್ನು ಜಯಿಸುವುದೇ. ಎಷ್ಟೋ ಕಾಲದ ಪ್ರಯತ್ನದಿಂದ ಕಡೆಗೆ ಮನೋ ಜಯವನ್ನು ಸಾಧಿಸಿದಾಗ ಬ್ರಹ್ಮಯೋಗ ಏರ್ಪಡುತ್ತದೆ. ಇಂದ್ರಿಯ ಧ್ಯಾಸಗಳು ಆಗಿನವಾಗಲಿ, ಕಳೆದ ಕಾಲದವಾಗಲಿ, ಮನಸ್ಸಿಗೆ ಮನನ ಇಲ್ಲದಂತೆ ಮಾಡುವುದು ಮನೋಜಯದಲ್ಲಿರುವ ಕಷ್ಟ. ಹೊರಗಿನ ಇಂದ್ರಿಯ ಧ್ಯಾಸಗಳಿಲ್ಲದ ಮನಸ್ಸು ಒಳಗಿನ ಆತ್ಮವನ್ನು ಕುರಿತು ತಿಳಿಸುವುದಕ್ಕೆ ಪ್ರಾರಂಭಮಾಡುತ್ತದೆ. ಹಾಗೆ ಆತ್ಮವನ್ನು ತಿಳಿಸುವುದೇ ಬ್ರಹ್ಮಯೋಗ. ಬ್ರಹ್ಮಯೋಗ ಆಚರಣೆ ಸಮಯದಲ್ಲಿ ಶರೀರದ ಹೊರಗಿನ ಧ್ಯಾಸಗಳು ಇಲ್ಲ. ಆಗ ಅವನ ಮುಂದೆ ಮಣ್ಣಿಟ್ಟರು, ಕಲ್ಲಿಟ್ಟರು, ಬೆಲೆಯುಳ್ಳ ಚಿನ್ನವನ್ನಿಟ್ಟರು ಯಾವುವು ಅವನನ್ನು ಆಕರ್ಷಿಸುವುದಿಲ್ಲ. ಆ ಬ್ರಹ್ಮಯೋಗಿಗೆ ಕಲ್ಲು, ಮಣ್ಣು, ಚಿನ್ನ ಎಲ್ಲಾ ಒಂದೇ. ಅದೇ ವಿಧವಾಗಿಯೇ ಅವನ ಮುಂದಕ್ಕೆ ಶತ್ರು ಬಂದು ನಿಂತರು, ಮಿತ್ರನು ಬಂದು ನಿಂತರು, ಬಂಧುವಾಗಲಿ, ಬಹಳ ಪಾಪಿಯಾಗಲಿ, ಪವಿತ್ರವಾದ ಸಾಧುವಾಗಲಿ ಎಲ್ಲರೂ ಸಮಾನವೇ. ಯಾರನ್ನು ಪ್ರೇಮಿಸುವುದಿಲ್ಲ ಯಾರನ್ನು ದ್ವೇಷಿಸುವುದಿಲ್ಲ. ಆತನು ಬಾಹ್ಯರಂಗದಲ್ಲಿ ಹೀಗಿರುವಾಗ ಅಂತರಂಗದಲ್ಲಿ ಹೇಗೆ ಇದ್ದಾನೋ ಕೆಳಗಿನ ಶ್ಲೋಕವು ವಿವರಿಸುತ್ತಿದೆ ನೋಡಿರಿ.

**(5) ಶ್ಲೋ॥ 10 : ಯೋಗೀ ಯುಂಜೀತ ಸತತ ಮಾತ್ಮಾನಂ ರಹಸಿ ಸ್ಥಿತಃ ।**
**ಏಕಾಕೀ ಯತ ಚಿತ್ತಾತ್ಮಾ ನಿರಾಶೀ ರಪರಿಗ್ರಹಃ ॥**

**(ಬ್ರಹ್ಮಯೋಗ)**

**ಭಾವಾರ್ಥ :** ಯೋಗಿ ಸತತವಾಗಿ ಆತ್ಮದೊಂದಿಗೆ ಬೆರೆತಿದ್ದು ರಹಸ್ಯವಾಗಿರುತ್ತಾನೆ. ಏಕಾಕಿಯಾಗಿ ಆಸೆಗಳೆಲ್ಲವನ್ನು ಬಿಟ್ಟು ಯಾವುದು ಗ್ರಹಿಸದವನಾಗಿ, ನಿಯಮಿಸಿದ ಚಿತ್ತವು ಇರುವವನಾಗಿರುತ್ತಾನೆ.

**ವಿವರ :** ಈ ಶ್ಲೋಕವನ್ನು ಬಹಳ ಜನರು ಬಾಹ್ಯವಾಗಿ ಅರ್ಥ ಮಾಡಿಕೊಳ್ಳುವುದು ನಡೆದಿದೆ. ರಹಸ್ಯವಾಗಿ ಎಂದರೆ ಯಾರೂ ನೋಡದ ಬೆಟ್ಟದ ಗುಹೆಗಳಲ್ಲಿ ಎಂದು, ಏಕಾಕಿ ಎಂದರೆ ಯಾರು ಇಲ್ಲದ ಸ್ಥಳದಲ್ಲಿ ಎಂದು ಹೇಳಿಕೊಳ್ಳಲಾಗಿದೆ. ಆ ವಿಧವಾಗಿ ಬಾಹ್ಯಕ್ಕೆ ಸಂಬಂಧಿಸಿದ ಅರ್ಥವನ್ನು ತೆಗೆದುಕೊಳ್ಳಬಾರದೆಂದು ಮತ್ತೆ ಮತ್ತೆ ತಿಳಿಸುತ್ತಿದ್ದೇವೆ. ಈ ಶ್ಲೋಕದಲ್ಲಿ ಬ್ರಹ್ಮಯೋಗಿಯ ಅಂತರ್ಗತ ಸ್ಥಿತಿಯನ್ನು ಕುರಿತು ಹೇಳಿದ್ದಾರೆ. ಬ್ರಹ್ಮಯೋಗಿ ಆದವನು ಯಾವಾಗಲೂ ಆತ್ಮವೊಂದರ ಅನುಭವದಿಂದ ಕೂಡಿಕೊಂಡಿರುತ್ತಾನೆ. ಬ್ರಹ್ಮಯೋಗಿ ಶರೀರದಲ್ಲಿನ ಜೀವಾತ್ಮ, ತನ್ನ ಶಿರಸ್ಸಿನಲ್ಲಿ ಬಾಹ್ಯ ಪ್ರಜೆಗಳಿಗೆ ತಿಳಿಯದ ರಹಸ್ಯ ಸ್ಥಾವರದಲ್ಲಿ ಆತ್ಮದ ಅನುಭೂತಿಗಳನ್ನು ಅನುಭವಿಸುತ್ತಿದ್ದಾನೆ. **ತಲೆಯಲ್ಲಿ ಭೃಕುಟಿಗೆ ಮಧ್ಯದಲ್ಲಿ ಉಪಜಿಹ್ವೆಗೆ ಪ್ರಾಕ್‌ದಿಕ್ಕಿನಲ್ಲಿ ಆ ರಹಸ್ಯ ಸ್ಥಾವರವಿದೆ**. ಇತರರಿಗೆ ತಿಳಿಯದಿರುವುದು ರಹಸ್ಯವಾಗುತ್ತದೆ. ಸ್ವಲ್ಪಮಟ್ಟಿಗೆ ಆ ಸ್ಥಳದ ಸುಳಿವನ್ನು ಹೇಳಿದರೂ, ಅದನ್ನು ಕಂಡುಹಿಡಿಯದಿರುವಾಗ ಅದು ರಹಸ್ಯವೇ ತಾನೆ! ಬ್ರುಕುಟಿ ಮಧ್ಯದಲ್ಲಿ ಕಿರುನಾಲಿಗೆಗೆ ಮೇಲ್ಭಾಗದಲ್ಲಿ ಎಂದೂ ಸ್ವಲ್ಪ ವಿವರ ಹೇಳಿದರೂ, ಜೀವಾತ್ಮ ಆತ್ಮವನ್ನು ಹೊಂದುವ ಆ ಸ್ಥಳವನ್ನು ಯಾರು ನೋಡದಿರುವಾಗ ಅದು ರಹಸ್ಯ ಸ್ಥಾವರವೆಂದೇ ಹೇಳುತ್ತಾರೆ. ಆದ್ದರಿಂದಲೇ ಶ್ಲೋಕದಲ್ಲಿ ಬ್ರಹ್ಮಯೋಗಿ ರಹಸ್ಯವಾದ ಸ್ಥಳದಲ್ಲಿ ಆತ್ಮದೊಂದಿಗೆ ಬೆರೆತಿದ್ದಾನೆಂದು ಹೇಳಿದ್ದಾರೆ. ಅಷ್ಟೇ ಅಲ್ಲದೆ ಏಕಾಕಿ ಎನ್ನುವ ಮಾತು ಸಹ ಇದೆ. ಏಕಾಕಿ ಎಂದರೆ ಶರೀರದಲ್ಲಿ ಆತ್ಮ ಜೀವಾತ್ಮ ಎರಡು ಜೋಡಿ ಪಕ್ಷಿಗಳಂತೆ ಇವೆ. ಅವು ಕಾಣಿಸುವವಲ್ಲ. ಆದುದರಿಂದ ಅವುಗಳನ್ನು ಕಪ್ಪನೆಯ ಕತ್ತಲಿಗೆ ಸಮಾನವಾಗಿ ಹೋಲಿಸಿದ್ದಾರೆ. ಕಪ್ಪನೆಯ ಕತ್ತಲಲ್ಲಿ ಏನು ಕಾಣಿಸುವುದಿಲ್ಲ. ಆದ್ದರಿಂದ ಅವುಗಳನ್ನು ಕಪ್ಪನೆಯ ಪಕ್ಷಿಗಳಾದ ಕಾಗೆಗಳಿಗೆ ಸಮಾನವಾಗಿ ಹೋಲಿಸಿ ಹೇಳಿದ್ದಾರೆ. ಜೀವಾತ್ಮ ಆತ್ಮಗಳು ಶರೀರವೆನ್ನುವ ವೃಕ್ಷದಲ್ಲಿ ಮಾರುಮೂಲೆ ಕೊಂಬೆ ಮೇಲಿವೆ. ಆ ಎರಡು ಸೇರಿದರೆ ಏಕವಾಗುತ್ತದೆ. ಬ್ರಹ್ಮಯೋಗದಲ್ಲಿ ಜೀವಾತ್ಮ ಆತ್ಮಗಳು ಬೆರೆತು ಹೋಗುವುದರಿಂದ, ಆ ಸಮಯದಲ್ಲಿ ಎರಡು ಆತ್ಮಗಳು ಇಲ್ಲದಂತೆಹೋಗಿ

ಒಂದೇ ಆತ್ಮವಾಗಿ ಏರ್ಪಡುವುದರಿಂದ, ಅವನನ್ನು ಆಗ ಏಕಾಕಿ ಎನ್ನಲಾಗುತ್ತದೆ. ಆದ್ದರಿಂದ ಆತ್ಮದೊಂದಿಗೆ ಸೇರಿದ ಬ್ರಹ್ಮಯೋಗಿಯನ್ನು ಏಕಾಕಿ ಎಂದು ಅನ್ನಬಹುದು. ಯೋಗಸಮಯದಲ್ಲಿ ರಹಸ್ಯ ಸ್ಥಳದಲ್ಲಿರುವ ಜೀವಾತ್ಮ, ಅದಕ್ಕೂ ಮೊದಲು ತನ್ನೊಂದಿಗೆ ಸಂಬಂಧವಿರುವ ವಿಷಯಗಳೆಲ್ಲವನ್ನು ಬಿಟ್ಟು, ತಾನೊಬ್ಬನಾಗಿ ಉಳಿದುಹೋಗಿ ಆತ್ಮವನ್ನು ಅನುಭವಿಸುತ್ತಿದ್ದಾನೆ. ಮನಸ್ಸು ಅನೇಕದಿಂದ ಏಕದೊಳಗೆ ಹೋಗಿ ಜೀವಾತ್ಮನನ್ನು ಏಕಾಗ್ರತೆ ಹೊಂದಿಸುತ್ತಿದೆ. ಅನೇಕವಾದ ಗುಣವಿಷಯಗಳನ್ನು ಮನಸ್ಸು ತಿಳಿಸದಿರುವುದರಿಂದ ಬುದ್ಧಿಯೂ ಸಹ ಏಕವಾಗಿಯೇ ನಿಲ್ಲುತ್ತದೆ. ಬುದ್ಧಿ ತಿಳಿಸುವ ಅನೇಕ ವಿಷಯಗಳನ್ನು ಗ್ರಹಿಸಿ ನಿರ್ಣಯಿಸುವ ಕೆಲಸ ಚಿತ್ತಕ್ಕೆ ಇಲ್ಲದಿರುವುದರಿಂದ ಚಿತ್ತವೂ ಸಹ ಏಕವಾಗಿದೆ. ಈ ವಿಧವಾಗಿ ಮೊದಲು ಮನಸ್ಸನ್ನು ಅನೇಕದಿಂದ ಏಕವಾಗಿಹೋಗಿ, ಅದನ್ನು ಅನುಸರಿಸಿ ಬುದ್ಧಿಯೂ ಸಹ ಅನೇಕದಿಂದ ಏಕವಾಗಿ, ಬುದ್ಧಿಯನ್ನು ಅನುಸರಿಸಿ ಚಿತ್ತವು ಏಕವಾಗಿ ಕಡೆಗೆ ಜೀವಾತ್ಮನೂ ಏಕವಾಗಿದ್ದಾನೆ. ಮನಸ್ಸು ಬುದ್ಧಿ, ಚಿತ್ತ ಯಂತ್ರದಲ್ಲಿನ ಚಕ್ರದಂತೆ ಒಂದಕ್ಕೊಂದು ಸಂಬಂಧವಿದೆ. ಯಂತ್ರದಲ್ಲಿ ಒಂದು ಚಕ್ರ ಕದಲಿದರೆ ಅದಕ್ಕೆ ಅನುಸಂಧಾನವಾದ ಮತ್ತೊಂದು ಚಕ್ರ ತಿರುಗುವಂತೆ, ಮನಸ್ಸು, ಬುದ್ಧಿ, ಚಿತ್ತಗಳಲ್ಲಿ ಒಂದು ಕದಲುತ್ತಿದೆಯೆಂದರೆ ಉಳಿದಿರುವವು ಕದಲುತ್ತಿದ್ದಂತೆ ಕೊನೆಯದಾದ ಚಿತ್ತವು ಅಪರಿಗ್ರಹವಾಗಿ ನಿಂತಿದೆ ಎಂದರೆ, ಉಳಿದ ಮನಸ್ಸು ಬುದ್ಧಿಯೂ ಸಹ ನಿಂತಿವೆಯೆಂದೇ ಅರ್ಥ. ಮನೋ, ಬುದ್ಧಿ, ಚಿತ್ತಗಳು ತಿಳಿಸುವ ಅನುಭೂತಿಗಳು ಸಹ ಜೀವಿಗೆ ನಿಂತುಹೋದಂತೆ. ಆದುದರಿಂದ ಬ್ರಹ್ಮಯೋಗ ಹೊಂದಿದ ಜೀವಾತ್ಮ ಸ್ಥಾವರದಲ್ಲಿ ಏಕಾಕಿಯಾಗಿದ್ದಾನೆಂದು ಹೇಳಿದ್ದಾರೆ. ಅಂತಹ ಸ್ಥಿತಿಯನ್ನು ಹೊಂದುವವರು ಮಾಡಬೇಕಾದ ಆಚರಣೆ ಏನೋ ಕೆಳಗಿನ ಶ್ಲೋಕದಲ್ಲಿ ವಿವರಿಸುತ್ತಿದ್ದಾರೆ ನೋಡಿರಿ.

**(5) ಶ್ಲೋ॥ 11 : ಶುಚೌದೇಶೇ ಪ್ರತಿಷ್ಠಾಪ್ಯ ಸ್ಥಿರ ಮಾಸನ ಮಾತ್ಮನಃ ।**
**ನಾತ್ಯುಚ್ಛ್ರಿತಂ ನಾತಿನೀಚಂ ಚೈಲಾಜಿನ ಕುಶೋತ್ತರಮ್ ॥**
**(ಬ್ರಹ್ಮಯೋಗ)**

**ಭಾವಾರ್ಥ** : ಎತ್ತರ ತಗ್ಗುಗಳಿಲ್ಲದ ಶುಭ್ರವಾದ ಸ್ಥಳದಲ್ಲಿ ಯೋಗಸಾಧನೆಗೆ ಕುಳಿತುಕೊಳ್ಳು ವಂತೆ ಸ್ಥಿರಾಸನ ಏರ್ಪಡಿಸಿಕೊಂಡು ಅದರ ಮೇಲೆ ದರ್ಭೆಗಳು ಹಾಕಿ, ದರ್ಭೆಗಳ ಮೇಲೆ ಚರ್ಮವನ್ನು, ಚರ್ಮದ ಮೇಲೆ ವಸ್ತ್ರವನ್ನು ಹಾಸಿಕೊಂಡು ಕುಳಿತುಕೊಳ್ಳಬೇಕು.

**ವಿವರ** : ಬ್ರಹ್ಮಯೋಗ ಸಾಧನೆಗೆ ಹೆಚ್ಚು ತಗ್ಗುಗಳಿಲ್ಲದ ಶುಭ್ರವಾದ ಸ್ಥಳದಲ್ಲಿ ಆಸನವು

ಕುಳಿತುಕೊಳ್ಳುವುದಕ್ಕೆ ತಕ್ಕಂತೆ ಏರ್ಪಾಟು ಮಾಡಿಕೊಳ್ಳುವುದರವರೆಗೂ ಎಲ್ಲರಿಗೂ ಅರ್ಥವಾಗಿರುತ್ತದೆ. ಆ ಸ್ಥಳದಲ್ಲಿ ದರ್ಭೆಗಳು, ಚರ್ಮ, ಬಟ್ಟೆ ಉಪಯೋಗಿಸುವುದು ಏಕೆಂದು ಕೆಲವರಿಗೆ ಸಂಶಯ ಏರ್ಪಟ್ಟಿರಬಹುದು. ವಿಷಯ ಪೂರ್ತಿ ತಿಳಿದುಕೊಳ್ಳುವುದು ಒಳ್ಳೆಯದು ಆದ್ದರಿಂದ ಅವುಗಳ ಅವಶ್ಯಕತೆ ಏನೋ ತಿಳಿದುಕೊಳ್ಳೋಣ. ಮೊದಲು ದರ್ಭೆಗಳನ್ನು ಕುರಿತು ವಿಚಾರಿಸಿದರೆ ಅದಕ್ಕೊಂದು ದೊಡ್ಡಕಥೆ ಇದೆ. ಅದು ನಿಜವೋ ಅಲ್ಲವೋ ನಮಗೆ ತಿಳಿಯದು, ಆದ್ದರಿಂದ ಆ ಕಥೆಯನ್ನು ಬಿಟ್ಟು ನಮಗೆ ತಿಳಿದಿರುವ ವಿಷಯವನ್ನು ಕುರಿತು ತಿಳಿದುಕೊಳ್ಳೋಣ. ದರ್ಭೆಗಳು ಕರುಕಾಗಿರುವವು ಹಾಗೂ ದರ್ಭೆಗಳು ಹುಲ್ಲಿನ ಜಾತಿಯವು. ದರ್ಭದ ಹುಲ್ಲು ಮೆತ್ತಗೆ ಕರುಕಾಗಿ ಇರುವುದರಿಂದ ಕ್ರಿಮಿ ಕೀಟಕಾದಿಗಳು ಅವುಗಳ ಮೇಲೆ ಓಡಾಡುವುದಿಲ್ಲ. ಯೋಗಸಮಯದಲ್ಲಿ ಇರುವೆಗಳು ಸಹಿತವು ಆಸನದ ಮೇಲೆ ಬಾರದಂತಿರಲು ಅದಕ್ಕೆ ತಕ್ಕಂತೆ ದರ್ಭೆಗಳು ಹಾಕಿಕೊಳ್ಳಬೇಕಾಗಿ ಬಂದಿದೆ. ಸಣ್ಣ ಇರುವೆಗಳು ಶರೀರದ ಮೇಲೆ ಓಡಾಡಿ ಕಚ್ಚುವುದರಿಂದ ಯೋಗಸಾಧನೆಗೆ ಭಂಗ ಏರ್ಪಡುತ್ತದೆ. ಹಾಗೆ ಸಾಧನಪರನಿಗೆ ಆತಂಕ ಉಂಟಾಗದಂತೆ ದರ್ಭೆಗಳನ್ನು ಉಪಯೋಗಿಸ ಬೇಕಾಗಿದೆ. ನಂತರ ಜಿಂಕೆಯ ಚರ್ಮ ದರ್ಭೆಗಳ ಮೇಲೆ ಹಾಸಬೇಕಾಗಿದೆ. ದರ್ಭೆಗಳ ಕರುಕು ಸಾಧಕನ ಶರೀರಕ್ಕೆ ತಗಲದಂತೆ ದರ್ಭೆಗಳ ಮೇಲೆ ಚರ್ಮವನ್ನು ಹಾಸಬೇಕು. ಯೋಗ ಸಾಧನೆಯಲ್ಲಿಯೂ, ಯೋಗಮಾಡುವ ಸಮಯದಲ್ಲಿಯೂ ಚರ್ಮಾಸನದವೊಂದು ವಿಶಿಷ್ಟತೆ ಏನೆಂದರೆ! ಪ್ರತಿ ಜೀವರಾಶಿ ಶರೀರವು ಕೆಳಗಿನಿಂದ ಮೇಲಿನವರೆಗೂ ಬಲ ಎಡ ಎಂಬುವ ಎರಡು ಭಾಗಗಳಾಗಿ ವಿಭಜಿಸಲ್ಪಟ್ಟು ತಯಾರಾಗಿದೆ. ಶರೀರದಲ್ಲಿ ಬಲಗಡೆ ಕಣ್ಣಿದ್ದರೆ ಎಡಗಡೆಯೂ ಸಹ ಕಣ್ಣಿರುತ್ತದೆ. ಎಡಗಡೆ ಕಿವಿ ಇದ್ದರೆ ಬಲಗಡೆಯೂ ಸಹ ಕಿವಿ ಇರುತ್ತದೆ. ಹೀಗೆ ಯಾವ ಅವಯವವಿರುತ್ತದೋ, ಅದಕ್ಕೆ ವಿರುದ್ಧ ದಿಕ್ಕಿನಲ್ಲಿ ಅದೇ ಅವಯವ ಮತ್ತೊಂದು ಇರುತ್ತದೆ. ಒಂದೇ ಅವಯವವಾಗಿ ಕಾಣಿಸುವ ಮೂಗು ಎರಡು ಭಾಗಗಳ ಜೋಡಣೆಯಾಗಿದೆ. ಮೂಗಿಗೆ ಬಲ ಎಡಗಳಲ್ಲಿ ರಂಧ್ರಗಳಿವೆ. ಮೂಗಿನ ತುದಿಯ ಮಧ್ಯದಲ್ಲಿ ಎರಡು ಖಂಡರಗಳ ವಿಭಾಗವು ಚೆನ್ನಾಗಿ ಕಾಣಿಸುತ್ತದೆ. ಮೇಲಿನ ತುಟಿಯ ಮೇಲೆ ಬಾಣದ ಗುರುತಾಗಿ ಮಧ್ಯದಲ್ಲಿ ಸೂಚಿಸಿರುವಂತೆ, ಕಾಣಿಸುತ್ತಾ ಶರೀರ ಮಧ್ಯದಲ್ಲಿ ಒಂದು ರೇಖೆ ಕೆಳಗಿನವರೆಗೂ ಇರುವಂತೆ ಕಾಣಿಸುತ್ತದೆ. ಕೆಳಗೆ ಬೀಜಗಳ ಮಧ್ಯೆ ದಾರದಂತಹ ವಿಭಜನೆ ಗುರುತನ್ನೂ ಸಹ ನೋಡಬಹುದು. ಹಾಗೆ ಒಳಗೂ ಸಹ ಬಲ ಎಡ ಎರಡು ಅವಯವಗಳ ನಿರ್ಮಾಣವಿದೆ. ಇದು ಮಾನವರಿಗಲ್ಲದೆ ಪ್ರಾಣಿಗಳಿಗೂ, ಗಿಡಗಳಿಗೂ ಸಹ ಇದೆ. ಗಿಡಗಳಿಗೆ ಪ್ರತಿ ಎಲೆಯ ಮಧ್ಯದಲ್ಲಿ ಎರಡು ಭಾಗಗಳ ವಿಭಜನೆ ಇರುತ್ತದೆ. ಈ ವಿಧವಾಗಿ ಸರ್ವಜೀವರಾಶಿಗಳ

ಶರೀರಗಳು ಎರಡು ಭಾಗಗಳಾಗಿ ವಿಭಜಿಸಲ್ಪಡುವುದಕ್ಕೆ ಕಾರಣ ಕರ್ಮ. ಕರ್ಮ ಎರಡು ಭಾಗಗಳಾಗಿದ್ದರೂ ಅದರಿಂದಲೇ ಶರೀರಗಳು ಬಲ ಎಡ ಎರಡು ಭಾಗಗಳಾಗಿ ಹುಟ್ಟಿವೆ. ಪಾಪಪುಣ್ಯ ಎರಡು ಭಾಗಗಳಾದ ಕರ್ಮವನ್ನು ಪಾಲಿಸುವ ನವಗ್ರಹಗಳು ಸಹ ಎರಡು ಭಾಗಗಳಾಗಿ ಬೇರ್ಪಟ್ಟು ಗುರು, ಶನಿ ಪಕ್ಷಗಳಾಗಿವೆ. ಕರ್ಮ ಎರಡು ಭಾಗಗಳು, ಕರ್ಮವನ್ನು ಪಾಲಿಸುವ ಗ್ರಹಗಳು ಎರಡು ಭಾಗಗಳು. ಗ್ರಹಗಳ ಗ್ರಹಚಾರವನ್ನು ಅನುಭವಿಸುವ ಶರೀರವು ಎರಡು ಭಾಗಗಳು. ಹಾಗೆ ಕಳೆಯುವ ಕಾಲವೂ ಸಹ ಎರಡು ಭಾಗಗಳಾಗಿದೆ. ಅದು ಹೇಗೆ ಎಂದರೆ! ಮಧ್ಯದಲ್ಲಿ ಬಂದಿರುವ ರಾಹುಕೇತುಗಳನ್ನು ಛಾಯ ಗ್ರಹಗಳನ್ನು ಬಿಟ್ಟು ಉಳಿದ ಏಳು ಗ್ರಹಗಳಿಗೆ ಏಳು ದಿನಗಳು ನಿರ್ಣಯಿಸಲಾಗಿದೆ. ಅವುಗಳೇ ಈ ದಿನ ಪ್ರಪಂಚವೆಲ್ಲವೂ ಆಚರಣೆಯಲ್ಲಿರುವ ಭಾನುವಾರ, ಸೋಮವಾರ ಎನ್ನುವ ದಿನಗಳ ಹೆಸರುಗಳು. ಒಂದೊಂದು ಗ್ರಹವು ಒಂದೊಂದು ದಿನಕ್ಕೆ ಅಧಿಪತಿಯಾಗಿದೆ. ನವಗ್ರಹಗಳು ಭಾಗಗಳಾಗಿ ವಿಭಜನೆಗೊಂಡು ಪ್ರತಿದಿನ  ಹಗಲು ಕಾಲಕ್ಕೆ ಅಧಿಪತಿಯಾಗಿವೆ. ಹಗಲು 12 ಗಂಟೆಗಳ ಕಾಲದಲ್ಲಿ  ಹತ್ತುವರೆ ಗಂಟೆಕಾಲ ಆ ದಿನವು ಒಂದು ಗ್ರಹಕ್ಕೆ ನಿರ್ಣಯಿಸಿದಾಗ, ಒಂದುವರೆ ಗಂಟೆಕಾಲ ರಾಹುಕೇತುಗಳಿಗೆ ನಿರ್ಣಯಿಸಲ್ಪಟ್ಟಿದೆ. ಪ್ರತಿದಿನ ರಾಹುಕಾಲ ಇರುವುದರಿಂದ 7 ದಿನಗಳು ಒಂದುವರೆ ಗಂಟೆ ಪ್ರಕಾರ, ಹತ್ತುವರೆ ಗಂಟೆಗಳು ಎಲ್ಲಾ ಗ್ರಹಗಳ ಹಾಗೆ ಸರಿಹೋಗುತ್ತದೆ. ಈ ವಿಧವಾಗಿ ಕಾಲವನ್ನೂ ಸಹ ವಿಭಜಿಸಿಕೊಂಡು ಗ್ರಹಗಳು ಪಾಲಿಸುತ್ತಿವೆ.

ವಿಭಜಿಸಲ್ಪಟ್ಟ ಕಾಲದಲ್ಲಿ, ವಿಭಜಿಸಲ್ಪಟ್ಟ ಶರೀರದಲ್ಲಿ, ಬ್ರಹ್ಮಯೋಗ ಮಾಡುವ ಯೋಗಿಗೆ ಜ್ಞಾನಾಗ್ನಿಯೂ ಸಹ ಆಯಾ ಗ್ರಹಗಳ ದಿನಗಳ ಪ್ರಕಾರ ಬಲ ಎಡಗಳಲ್ಲಿ ಸೇರುತ್ತದೆ. ಏಳು ಗ್ರಹಗಳಲ್ಲಿ ಸೂರ್ಯ, ಕುಜ, ಗುರು ಮೂವರು ಗುರು ಪಕ್ಷವಾಗಿದ್ದು, ಶುಕ್ರ, ಬುಧ, ಶನಿ ಮೂವರು ಶನಿಪಕ್ಷದಲ್ಲಿದ್ದಾರೆ. ಚಂದ್ರನು ಮಾತ್ರ ಶುಕ್ಲ, ಕೃಷ್ಣ ಪಕ್ಷಗಳನ್ನನುಸರಿಸಿ ಗುರು ಶನಿ ಪಾರ್ಟಿಗಳಲ್ಲಿ ಬದಲಾಗುತ್ತಾ ಇರುತ್ತಾನೆ. ಶುಕ್ಲಪಕ್ಷದಲ್ಲಿ ಗುರುಪಾರ್ಟಿಯೊಳಗೆ, ಕೃಷ್ಣ ಪಕ್ಷದಲ್ಲಿ ಶನಿ ಪಾರ್ಟಿಯೊಳಗೆ ಬದಲಾಗುತ್ತಾ ಇರುತ್ತದೆ. ಆಯಾ ಗ್ರಹಗಳ ಕಾಲದ ಅಧಿಕಾರವನ್ನನುಸರಿಸಿ ಶುಕ್ಲಪಕ್ಷ 15 ದಿನಗಳಲ್ಲಿ ಮನುಷ್ಯ ಯೋಗವಾಚರಿಸುವ ಸಮಯದಲ್ಲಿ ಭಾನು, ಸೋಮ, ಮಂಗಳ, ಗುರುವಾರಗಳಲ್ಲಿ  ಶರೀರದಲ್ಲಿ ಬಲಗಡೆ ಭಾಗದಲ್ಲಿ ಜ್ಞಾನಾಗ್ನಿ ಪ್ರವೇಶಿಸುತ್ತದೆ. ಹಾಗೆ ಕೃಷ್ಣಪಕ್ಷ ಬುಧ, ಶುಕ್ರ, ಶನಿ, ಸೋಮವಾರಗಳಲ್ಲಿ ಎಡಗಡೆ ಜ್ಞಾನಾಗ್ನಿ ಪ್ರವೇಶಿಸುತ್ತದೆ. ಇದನ್ನನುಸರಿಸಿ ಪೂರ್ವದಲ್ಲಿ ಯೋಗಿಗಳು ಯೋಗ ದಂಡವನ್ನೂ ಸಹ ಉಪಯೋಗಿಸುತ್ತಿದ್ದರು. ಜ್ಞಾನಾಗ್ನಿ ಪ್ರವೇಶಿಸುವ ದಿಕ್ಕಿಗೆ ವಿರುದ್ಧ

ದಿಕ್ಕಿನಲ್ಲಿ ಯೋಗದಂಡವನ್ನು ಉಪಯೋಗಿಸುತ್ತಿದ್ದರು. ಯೋಗ ದಂಡದೊಂದಿಗೆ ಚರ್ಮಾಸನಗಳನ್ನೂ ಸಹ ಉಪಯೋಗಿಸುತ್ತಿದ್ದರು. ಈಗ ಚರ್ಮಾಸನದ ಪ್ರಾಧಾನ್ಯತೆ ಸುಲಭವಾಗಿ ಅರ್ಥವಾಗುತ್ತದೆ.

ಬ್ರಹ್ಮಯೋಗಿ ಯೋಗವನ್ನಾಚರಿಸುವ ಸಮಯದಲ್ಲಿ ಪ್ರಪಂಚವೆಲ್ಲಾ ಅಣುಅಣುವಿನಲ್ಲಿ ವ್ಯಾಪಿಸಿರುವ ಪರಮಾತ್ಮ ಶಕ್ತಿ ಜ್ಞಾನಾಗ್ನಿಯಾಗಿ ಬದಲಾಗಿ, ಯೋಗಿ ಶರೀರದಲ್ಲಿ ಬಲ ಎಡಗಳಾಗಿ ಆಯಾ ದಿನಗಳ ಪ್ರಕಾರ ಪ್ರವೇಶಿಸುತ್ತದೆ. ಹಾಗೆ ಶರೀರದೊಳಗೆ ಒಂದು ಕಡೆಯಿಂದ ಬ್ರಹ್ಮನಾಡಿ ಉದ್ದಕ್ಕೆ ಪ್ರವೇಶಿಸುತ್ತದೆ. ಗುದಸ್ಥಾನದಿಂದ ಪ್ರಾರಂಭವಾಗಿ ಶಿರಸ್ಸಿನವರೆಗೂ ಶರೀರ ಮಧ್ಯದಲ್ಲಿನ ಬೆನ್ನು ಮೂಳೆಯಲ್ಲಿರುವ ಬೆನ್ನುಹುರಿ ಅಥವಾ ಬ್ರಹ್ಮನಾಡಿ ಎನ್ನುವ ದೊಡ್ಡ ನರದಲ್ಲಿ ಭೃಕುಟ, ಕಂಠ, ಹೃದಯ, ನಾಭಿ, ಲಿಂಗ, ಗುದಸ್ಥಾನಗಳಿಗೆ ಸರಿಯಾಗಿ ಆರು ನಾಡೀ ಕೇಂದ್ರಗಳಿವೆ. ಕಡೆಯದಾಗಿ ಏಳನೇ ದೊಡ್ಡ ನಾಡೀಕೇಂದ್ರವಾದ ಮೆದುಳು ಇದೆ. ಕೆಳಗೆ ಆರು ನಾಡಿ ಕೇಂದ್ರದೊಳಗೆ ಜ್ಞಾನಾಗ್ನಿ ಪ್ರವೇಶಿಸುತ್ತಿರುತ್ತದೆ. ಹಾಗೆ ಪ್ರವೇಶಿಸಿದ ಜ್ಞಾನಾಗ್ನಿ ಮೇಲಕ್ಕೆ ಏರುತ್ತಾ ಏಳನೇ ಕೇಂದ್ರವಾದ ಮೆದುಳು ಸ್ಥಾನದಲ್ಲಿ ನಿಂತುಹೋಗುತ್ತದೆ. ಅಲ್ಲಿಯೇ ಸೂಕ್ಷ್ಮವಾಗಿರುವ ಸಂಚಿತ ಕರ್ಮವನ್ನು ಸುಡುತ್ತಿರುತ್ತದೆ. ಈ ಅಗ್ನಿ ಒಂದರ ಪ್ರಕಾಶವನ್ನೇ ದೇವತೆಗಳ ಚಿತ್ರಪಟಗಳಲ್ಲಿ ತಲೆ ಹಿಂಬದಿಯಲ್ಲಿ ಪ್ರಕಾಶಿಸುತ್ತಿರುವಂತೆ ತೋರಿಸಿದ್ದಾರೆ. ಯೋಗಿ ಶರೀರದಲ್ಲಿ ಆರು ಕೇಂದ್ರಗಳಲ್ಲಿ ಪ್ರವೇಶಿಸುವ ಜ್ಞಾನಾಗ್ನಿ ಭೂಮ್ಯಾಕರ್ಷಣೆ ಶಕ್ತಿಯಿಂದ ಅರ್ಧ ಎಂದರೆ ಮೂರು ಕೇಂದ್ರಗಳಲ್ಲಿ ಪ್ರವೇಶಿಸುವುದು ಭೂಮಿಯೊಳಗೆ ಸೆಳೆದುಕೊಳ್ಳುತ್ತದೆ. ಆದ್ದರಿಂದ ಯೋಗಿ ಯೋಗ ಮಾಡುವ ಸಮಯದಲ್ಲಿ ಬರುವ ಜ್ಞಾನಾಗ್ನಿಯನ್ನು ಅರ್ಧನಷ್ಟ ಹೋಗುವುದು ನಡೆಯುತ್ತದೆ. ಹಾಗೆ ನಷ್ಟ ಹೋಗದಂತಿರುವುದಕ್ಕೆ ದೊಡ್ಡವರು ಚರ್ಮವನ್ನು ಆಸನದಲ್ಲಿ ಬಳಸಿದ್ದಾರೆ. ವಿದ್ಯುಶ್ಛಕ್ತಿಗೆ ರಬ್ಬರ್ ನಿರೋಧಕವಿದ್ದಂತೆ ಜ್ಞಾನಶಕ್ತಿಗೆ ಅಥವಾ ಜ್ಞಾನಾಗ್ನಿಗೆ ಚರ್ಮಗಳು ನಿರೋಧಕಗಳು. ವಿದ್ಯುತ್ ರಬ್ಬರನ್ನು ದಾಟಿ ಹೋಗದಂತೆ, ಜ್ಞಾನಾಗ್ನಿ ಚರ್ಮವನ್ನು ದಾಟಿ ಹೋಗುವುದಿಲ್ಲ. ಆದ್ದರಿಂದ ಯೋಗಿ ತನ್ನ ಆಸನದಲ್ಲಿ ಚರ್ಮವನ್ನು ಉಪಯೋಗಿಸುವುದರಿಂದ ಮೂರು ಕೇಂದ್ರಗಳಿಂದ ಜಾರಿ ಹೋಗುವ ಶಕ್ತಿಯನ್ನು ಕಳೆದುಕೊಳ್ಳುವುದಿಲ್ಲ. ಚರ್ಮಗಳನ್ನು ಆಸನಗಳಾಗಿ ಬಳಸುವುದರಿಂದ ಪೂರ್ತಿಶಕ್ತಿ ತನ್ನ ಶಿರೋಭಾಗದಲ್ಲಿ ಸೇರುತ್ತದೆ.

ಜ್ಞಾನಾಗ್ನಿ ಯೋಗ ಸಮಯದಲ್ಲಿ ಶರೀರದಲ್ಲಿ ಸೇರುತ್ತಿರುವ ವಿವರವನ್ನು ತಿಳಿದ ದೊಡ್ಡವರು ಬಹಳ ಜನರು ಅನೇಕ ವಿಧದ ಚರ್ಮಗಳನ್ನು ಬಳಸಿದಂತೆ ಚರಿತ್ರೆ

ಹೇಳುತ್ತಿದೆ. ಇದರ ಪ್ರಕಾರ ಯೋಗಿ ಶರೀರಕ್ಕೂ ಇತರೆ ಯಾವ ಜೀವರಾಶಿಯ ಚರ್ಮವಾದರು ಜ್ಞಾನಾಗ್ನಿಗೆ ನಿರೋಧವಾಗಿ ಇದೆಯೆಂದು ತಿಳಿಯುತ್ತದೆ. ಅದು ಸಜೀವ ಜೀವರಾಶಿದಾಗಲಿ, ನಿರ್ಜೀವ ಜೀವರಾಶಿದಾಗಲಿ ಒಂದೇ ಸಾಮರ್ಥ್ಯವಿದೆ ಎನ್ನುವುದಕ್ಕೆ ಅನೇಕ ಆಧಾರಗಳು ಇವೆ. ಉದಾಹರಣೆಗೆ ಶಿವನು ಆನೆ ಚರ್ಮವನ್ನು, ಜಿಂಕೆ ಚರ್ಮವನ್ನು, ಹುಲಿ ಚರ್ಮವನ್ನು ಧರಿಸಿದಂತೆ ಬಹಳ ಚಿತ್ರಪಟಗಳಲ್ಲಿ ನೋಡಬಹದು. ಕ್ರೈಸ್ತವ ಮತಕರ್ತನಾದ ಯೇಸುಪ್ರಭುವಿನ ಗುರುಗಳಾದ ಯೋಹಾನು ಒಂಟೆ ಚರ್ಮವನ್ನು ಧರಿಸಿದ್ದಾನೆ. ವಿಷ್ಣು ಹಾವಿನ ಮೇಲೆ ಯೋಗವನ್ನು ಆಚರಿಸುವುದರಿಂದ ಅಲ್ಲಿ ಹಾವಿನ ಚರ್ಮ ಉಪಯೋಗ ಪಟ್ಟಂತೆ ತಿಳಿಯುತ್ತದೆ. ಶಿವನು ಎತ್ತಿನ ಮೇಲೆ ಕುಳಿತುಕೊಂಡಂತೆ, ಉಳಿದ ದೇವತೆಗಳೆಲ್ಲರೂ ಯೋಗ ಸಮಯದಲ್ಲಿ ಅವರವರ ವಾಹನಗಳಾಗಿ ಹೇಳಿಕೊಳ್ಳುವ ಪ್ರಾಣಿಗಳ ಮೇಲೆ ಕುಳಿತುಕೊಂಡಂತೆ ಇದೆ. ಕೆಲವರು ಮುನಿಗಳು ಚರ್ಮವನ್ನು ಚಾಪೆಯಂತೆ ತಮ್ಮಹಿಂದೆ ತೆಗೆದುಕೊಂಡು ಹೋಗುತ್ತಿದ್ದರು. ಚರಿತ್ರೆಯ ಪ್ರಕಾರ ಯಾವ ಚರ್ಮವಾದರು ತಪ್ಪದೇ ಉಪಯೋಗಿಸಬೇಕೆಂಬ ವಿಷಯವು ತಿಳಿಯುತ್ತದೆ.

ಈ ಶ್ಲೋಕದಲ್ಲಿ ಚರ್ಮವನ್ನು ಬಳಸಬೇಕೆಂದು ಹೇಳಿದ್ದಾರೆ. ಇಂತಹ ಚರ್ಮವನ್ನೇ ಬಳಸಬೇಕೆಂದು ಹೇಳಲಿಲ್ಲ. ಕ್ರೂರವಾದ ಹುಲಿ ಚರ್ಮಕ್ಕಿಂತ ಸಾಧು ಜಂತುವಾದ ಜಿಂಕೆ ಚರ್ಮ ಯೋಗಕ್ಕೆ ಒಳ್ಳೆಯದೆಂದು ಕೆಲವರು ಹೇಳುತ್ತಿರುತ್ತಾರೆ. ಅಂತಹ ನಿಯಮಗಳಾಗಲಿ, ಅದರಿಂದ ಪ್ರಯೋಜನವಾಗಲಿ ಇಲ್ಲ. ಆದ್ದರಿಂದ ಯೋಗಕ್ಕೆ ಇದು ಅದು ಎನ್ನದೇ ಯಾವ ಚರ್ಮವಾದರೂ ಬಳಸಬಹುದು. ಬಟ್ಟೆಯನ್ನು ಉಪಯೋಗಿಸೆಂದು ಶ್ಲೋಕದಲ್ಲಿಯೇ ಹೇಳಿದ್ದಾರೆ. ಚರ್ಮದ ಮೇಲೆ ಬಟ್ಟೆಯನ್ನು ಉಪಯೋಗಿಸಬೇಕು. ಚರ್ಮದ ಮೇಲೆ ರೋಮಗಳು ಚುಚ್ಚುವುದು ಒತ್ತಿಕೊಳ್ಳುವಂತಹ ತೊಂದರೆ ಇಲ್ಲದಂತೆ ಇರಲು ಮೆತ್ತನೆ ನೂಲುವಸ್ತ್ರವನ್ನು ಹಾಸಿಕೊಳ್ಳುವುದು ಒಳ್ಳೆಯದು. ಈ ವಿಧವಾಗಿ ಆಸನ ತಯಾರುಮಾಡಿಕೊಂಡ ಸಾಧಕನು ನಂತರ ಏನು ಮಾಡಬೇಕೆನ್ನುವುದು ಕೆಳಗಿನ ಶ್ಲೋಕದಲ್ಲಿ ನೋಡೋಣ.

**(5) ಶ್ಲೋ॥ 12 : ತತ್ರೈ ಕಾಗ್ರಂ ಮನಃ ಕೃತ್ವಾಯತ ಚಿತ್ತೇಂದ್ರಿಯ ಕ್ರಿಯಃ ।**
**ಉಪವಿ ಶ್ಯಾಸನೇ ಯುಂಜ್ಯಾದ್ಯೋಗ ಮಾತ್ಮ ವಿಶುದ್ಧಯೇ ॥**
**(ಬ್ರಹ್ಮಯೋಗ)**

**ಭಾವಾರ್ಥ :** ಆಸನ ತಯಾರು ಮಾಡಿ ಕುಳಿತುಕೊಂಡು ಮನಸ್ಸನ್ನು ಏಕಾಗ್ರತೆಪಡಿಸಿ,

ಇಂದ್ರಿಯಗಳನ್ನು, ಚಿತ್ತವೊಂದರ ಕೆಲಸಗಳನ್ನು ಅಡಗಿಸಿ ಆತ್ಮ ಪ್ರಾಪ್ತಿಗೋಸ್ಕರ ಬ್ರಹ್ಮಯೋಗವನ್ನು ಅಭ್ಯಾಸಿಸಬೇಕು.

**ವಿವರ :** ಮೊದಲ ಶ್ಲೋಕದಲ್ಲಿ ಹೇಳಿದಂತೆ ಸಮತಟ್ಟಾದ ಸ್ಥಳದಲ್ಲಿ ದರ್ಭೆಗಳು ಚರ್ಮವನ್ನು ವಸ್ತ್ರವನ್ನು ಹಾಸಿಕೊಂಡು ಕುಳಿತು, ಮನಸ್ಸನ್ನು ಏಕಾಗ್ರತೆ ಪಡಿಸಿಕೊಂಡಿರುವುದರಿಂದ ಇಂದ್ರಿಯಗಳ ಕೆಲಸಗಳು, ಅವುಗಳನ್ನು ಅನುಸರಿಸುವ ಬುದ್ಧಿ, ಚಿತ್ತದ ಕೆಲಸಗಳು ಎಲ್ಲಾ ನಿಂತುಹೋಗುತ್ತವೆ. ಹಾಗೆ ಮಾಡಿ ಆತ್ಮ ಪ್ರಾಪ್ತಿಗೋಸ್ಕರ ಯೋಗಮಾಡಬೇಕು. ಇಲ್ಲಿ ಮನಸ್ಸನ್ನು ಏಕಾಗ್ರತೆ ಮಾಡಿಕೊಳ್ಳುವುದರಿಂದ ಹೊರಗಿನ ಇಂದ್ರಿಯಗಳಿಂದ ಒಳಗೆ ಚಿತ್ತದವರೆಗೂ ಎಲ್ಲಾ ಕಾರ್ಯಗಳು ನಿಂತುಹೋಗುತ್ತವೆ. ಆದ ಕಾರಣ ಇದರಲ್ಲಿ ಮನಸ್ಸನ್ನು ಏಕಾಗ್ರತೆ ಮಾಡಿಕೊಳ್ಳುವುದೇ ಮುಖ್ಯ. ಅದು ಹೇಗೆ ಸಾಧಿಸಬೇಕೋ ಅದರ ಪ್ರಕ್ರಿಯೆ ಏನೋ ಈಗ ನೋಡೋಣ.

ಮನಸ್ಸು ಬಾಹ್ಯೇಂದ್ರಿಯಗಳ ವಿಷಯವನ್ನು ಜ್ಞಾಪಕ ಮಾಡುವುದು ಅದರ ಎರಡನೆ ಕೆಲಸವೆಂದು ಮೊದಲೇ ಹೇಳಿಕೊಂಡಿದ್ದೇವೆ. ಅದು ಬೆಳಗ್ಗೆಯಿಂದ ಪ್ರಾರಂಭವಾಗಿ ನಿದ್ರೆಮಾಡುವವರೆಗೂ ಅನೇಕ ವಿಷಯಗಳನ್ನು ಜ್ಞಾಪಕ ಮಾಡುತ್ತಲೇ ಇರುತ್ತದೆ. ಸಾಧನೆ ಮಾಡುವವನಿಗೆ ಆ ಸಮಯದಲ್ಲಿ ಮತ್ತಷ್ಟು ಹೆಚ್ಚು ಜ್ಞಾಪಕಗಳನ್ನು ತಂದಿಡುತ್ತವೆ. ಹಿಂದೆ ಕಣ್ಣು ನೋಡಿದ ವಿಷಯಗಳನ್ನೇ ಅಲ್ಲದೆ ನೋಡದ ವಿಷಯಗಳನ್ನು, ದೃಶ್ಯಗಳನ್ನೂ ಸಹ ನೆನಪಿಗೆ ತರುತ್ತದೆ. ನೋಡದ ಅರಣ್ಯವನ್ನು, ನೋಡದ ಜಂತುಜಾಲವನ್ನು, ನೋಡದ ಮನುಷ್ಯರನ್ನೂ ಸ್ಮೃತಿ ಪಥದಲ್ಲಿ (ಮನೋದೃಷ್ಟಿಯಲ್ಲಿ) ತಂದಿಡುತ್ತದೆ. ಹಾಗೆ ನೋಡಿರುವವು ನೋಡದಿರುವವು, ಕೇಳಿರುವವು ಕೇಳದಿರುವವು ಜ್ಞಾಪಕಬರುವುದರಿಂದ ಯೋಗಸಾಧಕನಿಗೆ ಯೋಗವಿಲ್ಲದಂತೆ ವಿಷಯಗಳೇ ಹೆಚ್ಚಾಗಿ ಒಂದರ ನಂತರ ಒಂದು ಬಿಡುವಿಲ್ಲದಂತೆ ಇರುತ್ತವೆ. ಒಂದು ಸಮಯದಲ್ಲಿ ಒಂದು ಜ್ಞಾಪಕ ಮನಸ್ಸಿನಲ್ಲಿ ಬರುತ್ತದೆ. ಅದು ನಿಮಿಷವೋ, ಅರ್ಧನಿಮಿಷವೋ ಅಥವಾ ಕೆಲವು ನಿಮಿಷಗಳೋ ಇದ್ದು ಆ ಜ್ಞಾಪಕಬಿಟ್ಟು ಹೋದ ಕೂಡಲೆ ಇನ್ನೊಂದು ಜ್ಞಾಪಕ ಏರ್ಪಟ್ಟಿರುತ್ತದೆ. ಹೀಗೆ ಅನೇಕ ವಿಷಯಗಳಲ್ಲಿ ಮನಸ್ಸು ಸಂಚರಿಸುತ್ತಾ ಇರುತ್ತದೆ.

ಏಕ ಎಂದರೆ ಒಂದು ಎಂದು ಅರ್ಥ. ಅನೇಕ ಎಂದರೆ ಒಂದು ಅಲ್ಲದಿರುವುದು ಎಷ್ಟಾದರೂ ಆಗಬಹುದು. ಏಕಾಗ್ರತೆ ಎಂದರೆ ಒಂದಕ್ಕಿಂತ ಮೇಲೆ ಇರುವುದೆಂದು ಅರ್ಥ. ಒಂದರ ನಂತರ ಎರಡು ಮೂರು ಎನ್ನುವವು ಕ್ರಮವಾಗಿ ಇವೆ. ಒಂದಕ್ಕಿಂತ ಮೊದಲು ಅಥವಾ ಮೇಲೆ ಏನೂ ಇಲ್ಲ ಎಂದರೆ ಸೊನ್ನೆ ಎಂದು ಅರ್ಥ. ಏಕಾಗ್ರತೆ

ಎಂದರೆ ಒಂದಕ್ಕೆ ಮೇಲಿರುವ ಸೊನ್ನೆ ಎಂದು ಅರ್ಥ. ಈ ಶ್ಲೋಕದಲ್ಲಿ ಮನಸ್ಸು ಏಕಾಗ್ರತೆ ಮಾಡೆಂದು **"ಏಕಾಗ್ರಂ ಮನಃ"** ಎಂದಿದ್ದಾರೆ. ಒಂದು ಸಂಕಲ್ಪವೂ ಇಲ್ಲದ ಶೂನ್ಯಸ್ಥಿತಿಯೊಳಗೆ ಮನಸ್ಸನ್ನು ಏಕಾಗ್ರತೆಪಡಿಸುವುದರಿಂದ ಯೋಚಿಸುವುದಕ್ಕೆ ಬುದ್ಧಿಗೆ ಒಂದು ವಿಷಯವೂ ಸಹ ಇಲ್ಲದಂತೆ ಹೋಗುತ್ತದೆ. ಚಿತ್ತಕ್ಕೂ ಸಹ ಯಾವ ವಿಷಯವು ಇಲ್ಲದಂತೆ ಹೋಗಿ ಸ್ಥಂಭಿಸಿ ಹೋಗುತ್ತದೆ. ಆ ಸಮಯದಲ್ಲಿ ಲಭಿಸುವ ಆತ್ಮ ಸಿದ್ಧಿಗಾಗಿ ಯೋಗಿ ಪ್ರಯತ್ನಿಸಬೇಕು. ಬ್ರಹ್ಮಯೋಗ ಸಾಧಕನು ಇನ್ನೂ ಹೇಗಿರುತ್ತಾನೆಂದರೆ!

**(5) ಶ್ಲೋ॥ 13 : ಸಮಂಕಾಯ ಶಿರೋಗ್ರೀವಂ ಧಾರಯ ನ್ನಚಲಂ ಸ್ಥಿರಃ ।**
**ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾಽನ್ನವಲೋಕಯನ್ ॥**
**(ಬ್ರಹ್ಮಯೋಗ)**

**ಭಾವಾರ್ಥ** : ಶರೀರ, ಶಿರಸ್ಸು, ಕಂಠ ಮೂರನ್ನು ಸಮವಾಗಿ ಹಂತಹಂತವಾಗಿ ನಿಲ್ಲಿಸಿ, ತನ್ನ ದೃಷ್ಟಿಯನ್ನು ನಾಸಿಕಾಗ್ರದಲ್ಲಿ ನಿಲ್ಲಿಸಿ ಪಕ್ಕದ ದಿಕ್ಕುಗಳು ನೋಡದಂತಿರಬೇಕು.

**ವಿವರ** : ಶರೀರದಲ್ಲಿನ ಬೆನ್ನು ಭಾಗವನ್ನು, ಕಂಠವನ್ನು, ತಲೆಯನ್ನು ಮೂರನ್ನು ನೀಟಾಗಿ ನೇರವಾಗಿ ಇರುವಂತೆ ಮಾಡಿ, ಕದಲದಂತೆ ಕುಳಿತುಕೊಂಡು ಯೋಗಸಾಧನೆ ಮಾಡಬೇಕು. ಬೆನ್ನು ಭಾಗ, ಕಂಠ, ತಲೆ ಬಗ್ಗಿಹೋಗುವುದರಿಂದ ಬೆನ್ನುಮೂಳೆ ನೇರವಾಗಿಲ್ಲದಂತೆ ವಕ್ರವಾಗಿ ಇರುತ್ತದೆ. ಆಗಿರುವುದರಿಂದ ಆರು ಸ್ಥಾನಗಳಲ್ಲಿ ಸೇರುವ ಜ್ಞಾನಾಗ್ನಿ ಬೆನ್ನುಮೂಳೆಯಲ್ಲಿರುವ ಬ್ರಹ್ಮನಾಡಿಯಲ್ಲಿ ಸುಲಭವಾಗಿ ಪ್ರವಹಿಸದೆ ನಿರೋಧವೇರ್ಪಡುತ್ತದೆ. ನಿರೋಧ ಏರ್ಪಡುವುದರಿಂದ ಒಳಗೆ ಸೇರುವ ಶಕ್ತಿ ಪೂರ್ತಿ ಸೇರುವುದಿಲ್ಲ. ಒಂದು ಗಂಟೆಗೆ ಸೇರುವ ಶಕ್ತಿ ಒಂದುವರೆಗಂಟೆ ಕಾಲಕ್ಕೆ ಸೇರುತ್ತದೆ. ಬೆನ್ನುಮೂಳೆ ನೇರವಾಗಿರುವುದರಿಂದ ಜ್ಞಾನಾಗ್ನಿ ಸುಲಭವಾಗಿ ಒಳಗಿನ ಏಳನೇ ಸ್ಥಾನವನ್ನು ಸೇರುತ್ತದೆ. ಆದ್ದರಿಂದ ಬೆನ್ನು, ತಲೆ, ಕಂಠ ನೇರವಾಗಿಟ್ಟು ಕುಳಿತುಕೊಳ್ಳಿ ಎಂದಿದ್ದಾರೆ. ತಲೆಯಿಂದ ಬೆನ್ನಮೂಳೆ ಬಗ್ಗದಂತಿರುವುದಕ್ಕೆ ತಕ್ಕ ಆಸನ ಪದ್ಮಾಸನ. ಪದ್ಮಾಸನ ಹಾಕಿ ನೇರವಾಗಿ ಕುಳಿತುಕೊಂಡ ಸಾಧನಪರನು, ತನ್ನ ಮನೋದೃಷ್ಟಿಯನ್ನು ನಾಸಿಕಾಗ್ರವಾದ ಭೃಕುಟಿ ಮಧ್ಯ ಸ್ಥಾನದಲ್ಲಿ ಒಳಗಿನ ಭಾಗದಲ್ಲಿಡಬೇಕು. ಭೃಕುಟಿಗೆ ಸಮತಲದಲ್ಲಿ ಶಿರಸ್ಸು ಮಧ್ಯಭಾಗದಲ್ಲಿ ಮನೋದೃಷ್ಟಿಯನ್ನು ಕೇಂದ್ರೀಕರಿಸಬೇಕು. ಹಾಗೆ ಕೇಂದ್ರೀಕರಿಸುವುದರಿಂದ ಮನಸ್ಸು ಪಕ್ಕದ ವಿಷಯಗಳ ಮೇಲೆ ಹೋಗದಂತೆ ಅವುಗಳ ಮೇಲೆ ದೃಷ್ಠಿಯಿಲ್ಲದಂತೆ ಹೋಗುತ್ತದೆ. ಮನೋದೃಷ್ಟಿಯನ್ನು ಹರಿಸದೆ ತಲೆ ಮಧ್ಯಭಾಗದಲ್ಲಿ ದೃಷ್ಟಿ ಹೊಂದಿದವನು ಹೇಗಿರುತ್ತಾನೆ ಎಂದರೆ!

**(5) ಶ್ಲೋ॥ 14 : ಪ್ರಶಾನ್ತಾತ್ಮಾ ವಿಗತಭೀ ರ್ಬ್ರಹ್ಮಚಾರಿ ವ್ರತೇ ಸ್ಥಿತಃ ।**
**ಮನಸ್ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ॥**
**(ಬ್ರಹ್ಮಯೋಗ)**

**ಭಾವಾರ್ಥ** : ಪ್ರಶಾಂತನಾಗುತ್ತ, ಬ್ರಹ್ಮಚಾರಿ ವ್ರತವಾಚರಿಸುವವನಾಗಿ, ಭಯವಿಲ್ಲದವನಾಗಿ, ಆತ್ಮನಲ್ಲೇ ಚಿತ್ತವನ್ನಿಟ್ಟು ಮನಸ್ಸನ್ನು ನಿಯಂತ್ರಿಸಿ ಕುಳಿತುಕೊಳ್ಳಬೇಕು.

**ವಿವರ** : ಶಾಂತಿ ಎಂದರೆ ಯಾವ ಗುಣವಿಲ್ಲದಿರುವುದೆಂದು ಅರ್ಥ. ಪ್ರಶಾಂತತೆ ಹೊಂದಿದವನಿಗೆ ಭಯವಿರುವುದಿಲ್ಲ. ಬ್ರಹ್ಮವೊಂದರ ಆಚರಣೆ ಅವನಿಗೆ ದೀಕ್ಷೆಯಾಗಿರುತ್ತದೆ. ಅವನ ಮನಸ್ಸು ನಿಯಂತ್ರಿಸಲ್ಪಟ್ಟು ಯಾವ ವಿಷಯದ ಪ್ರಸ್ತಾವನೆ ತರದಿರುವುದರಿಂದ, ಚಿತ್ತವೂ ಸಹ ನಿಂತುಹೋಗಿರುತ್ತದೆ. ಆ ವಿಧವಾಗಿ ಬ್ರಹ್ಮಯೋಗವನ್ನು ಹೊಂದಿದವನು ಆತ್ಮವನ್ನು ಮನಸ್ಸಿನ ಮೂಲಕ ಅನುಭವಿಸುತ್ತಿರುತ್ತಾನೆ.

**(5) ಶ್ಲೋ॥ 15 : ಯುಂಜನ್ನೇವಂ ಸದಾಽಽತ್ಮಾನಂ ಯೋಗೀ ನಿಯತಮಾನಸಃ ।**
**ಶಾಂತಿಂ ನಿರ್ವಾಣ ಪರಮಾಂ ಮತ್ಸಂಸ್ಥಾ ಮಧಿಗಚ್ಛತಿ ॥**
**(ಬ್ರಹ್ಮಯೋಗಿ)**

**ಭಾವಾರ್ಥ** : ಯೋಗಿ ಯಾವಾಗಲೂ ಮನಸ್ಸನ್ನು ನಿಯತಗೊಳಿಸಿಕೊಂಡವನಾಗಿ ನಾನು ಅನುಗ್ರಹಿಸುವ ಮೋಕ್ಷವೆಂಬ ಶಾಂತಿಯನ್ನು ಹೊಂದುತ್ತಾನೆ.

**ವಿವರ** : ಬ್ರಹ್ಮಯೋಗಿ ಆದವನು, ಆಗಿಂದಾಗಾಗಲಿ ಯಾವಾಗಲಾಗಲಿ ಮನಸ್ಸನ್ನು ನಿಯತಗೊಳಿಸಿಕೊಂಡು ಆತ್ಮವನ್ನು ಅನುಭವಿಸುತ್ತಿದ್ದವನು, ಸ್ವಲ್ಪಕಾಲಕ್ಕೆ ಎಂದರೆ ಕರ್ಮ ಮುಗಿದುಹೋದ ನಂತರ ಶರೀರವನ್ನು ಬಿಟ್ಟು ಮೋಕ್ಷವನ್ನು ಸೇರುತ್ತಾನೆ. ಅವನು ಮತ್ತೆ ಹುಟ್ಟುವುದಿಲ್ಲ. ಅವನು ಪರಮಾತ್ಮನಲ್ಲೇ ಐಕ್ಯವಾಗಿ ಶಾಶ್ವತ ಶಾಂತಿಯನ್ನು ಹೊಂದುತ್ತಾನೆ.

**(5)ಶ್ಲೋ॥ 16 : ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾಂತ ಮನಶ್ನತಃ ।**
**ನಚಾತಿ ಸ್ವಪ್ನ ಶೀಲಸ್ಯ ಜಾಗ್ರತೋ ನೈವ ಚಾರ್ಜುನ ॥**
**(ಬ್ರಹ್ಮಯೋಗ)**

**ಭಾವಾರ್ಥ** : ಅಮಿತವಾಗಿ ಭುಜಿಸುವವನು, ಹೆಚ್ಚಾಗಿ ಉಪವಾಸ ಇರುವವನು, ಹೆಚ್ಚಾಗಿ ನಿದ್ರಿಸುವವನು, ನಿಷ್ಪ್ರಯೋಜನವಾಗಿ ಎದ್ದಿರುವವನು ಬ್ರಹ್ಮ ಯೋಗವನ್ನು ಅಭ್ಯಾಸ ಮಾಡಲಾರನು.

**(5) ಶ್ಲೋ॥ 17 : ಯುಕ್ತಾಹಾರ ವಿಹಾರಸ್ಯ ಯುಕ್ತ ಚೇಷ್ಟಸ್ಯ ಕರ್ಮಸು ।**
**ಯುಕ್ತಸ್ವಪ್ನಾವ ಬೋಧಸ್ಯ ಯೋಗೋ ಭವತಿ ದುಃಖಹಾ ॥**

**(ಬ್ರಹ್ಮಯೋಗ)**

**ಭಾವಾರ್ಥ** : ಮಿತವಾದ ಭೋಜನ, ಮಿತವಾದ ಕೆಲಸಗಳು, ಮಿತವಾದ ನಿದ್ರೆ ಎಚ್ಚರಿಕೆ ಇರುವವನು ಬ್ರಹ್ಮಯೋಗವನ್ನು ಹೊಂದಿ ದುಃಖವನ್ನು ಹೊಂದುವುದಿಲ್ಲ.

**(5) ಶ್ಲೋ॥ 18 : ಯದಾ ವಿನಿಯತಂ ಚಿತ್ತಮಾತ್ಮನ್ಯೇವಾಽವತಿಷ್ಠತೇ ।**
**ನಿಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ॥**

**(ಬ್ರಹ್ಮಯೋಗ)**

**ಭಾವಾರ್ಥ :** ಯಾವಾಗ ನಿಯಮಿತವಾದ ಚಿತ್ತವನ್ನು ಆತ್ಮನಲ್ಲಿ ನಿಲ್ಲಿಸುತ್ತಿದ್ದಾನೋ, ಆಗ ಅವನು ಸರ್ವಕೋರಿಕೆಗಳಲ್ಲಿ ಧ್ಯಾಸ ಇಲ್ಲದವನಾಗಿ, ಆತ್ಮನಲ್ಲಿಯೇ ಧ್ಯಾಸಹೊಂದಿದ್ದು ಯೋಗವನ್ನು ಹೊಂದಿದ್ದಾನೆ.

**(5) ಶ್ಲೋ॥ 19 : ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾ ಸ್ಮೃತಾ ।**
**ಯೋಗಿನೋಯತ ಚಿತ್ತಸ್ಯ ಯುಂಜತೋ ಯೋಗಮಾತ್ಮನಃ ॥**

**(ಬ್ರಹ್ಮಯೋಗ)**

**ಭಾವಾರ್ಥ** : ನಿಯತಚಿತ್ತನಾಗಿ ಯೋಗದಿಂದ ಕೂಡಿಕೊಂಡ ಜೀವಾತ್ಮನಿಗೆ ಉಪಮಾನವಾಗಿ ಗಾಳಿ ಬೀಸದಕಡೆ ದೀಪವು ಕದಲದಂತೆ ಬೆಳಗುವಂತಿರುತ್ತದೆ ಎಂದು ಹೇಳಬಹುದು.

**ವಿವರ** : ಮನಸ್ಸು, ಬುದ್ಧಿ, ಚಿತ್ತಗಳಲ್ಲಿ ಯಾವುದು ನಿಂತುಹೋದರು ಉಳಿದಿರುವವು ಅನುಬಂಧವಾಗಿ ನಿಂತುಹೋಗುತ್ತವೆ. ನಿಯಮಿಸಲ್ಪಟ್ಟ ಚಿತ್ತವಿರುವವನು ಅಂದಾಗ ಅವನನ್ನು ನಿಯಮಿತ ಮನಸ್ಸು ಇರುವವನೆಂದೂ ಸಹ ಹೇಳಬಹುದು. ಈ ಶ್ಲೋಕದಲ್ಲಿ ಚಿತ್ತ ನಿಂತುಹೋದ ಯೋಗಿ ಎಂದಿದ್ದಾರೆ. ಅಂತಹವನಿಗೆ ಆ ಸಮಯದಲ್ಲಿ ಮನಸ್ಸೂ ಸಹ ನಿಂತು ಹೋಗಿದೆ ಎಂದು ತಿಳಿಯಬೇಕು. ಮನೋ ಸಂಕಲ್ಪ ವಿಕಲ್ಪಗಳಿರುವಾಗ ಬುದ್ಧಿ, ಚಿತ್ತಕ್ಕೂ ಸಹ ಕೆಲಸ ಇರುತ್ತದೆ. ಮನಸ್ಸಿಗೆ ಕೆಲಸ ಇಲ್ಲದಿರುವಾಗ ಉಳಿದ ಎರಡಕ್ಕೂ ಸಹ ಕೆಲಸವಿಲ್ಲ. ಹಾಗೆ ಹೊರಗೆ ಜ್ಞಾನ ಕರ್ಮೇಂದ್ರಿಯಗಳಿಗೂ ಸಹ ಕೆಲಸ ಇರುವುದಿಲ್ಲವೆಂದು ಮೊದಲೇ ಹೇಳಿದ್ದೇವೆ.

ಸಾಧಾರಣವಾಗಿ ಮನಸ್ಸು ಕೆಲಸಮಾಡುವ ಶರೀರದಲ್ಲಿನ ಜೀವಾತ್ಮ ಕ್ಷಣಕ್ಷಣವು ಹೊರಗಿನಿಂದ ಬರುವ ಮತ್ತು ಮನಸ್ಸು ತಿಳಿಸುವ ವಿಷಯಗಳಲ್ಲಿನ ಮಾನಾವಮಾನಗಳಿಗೆ, ಕಷ್ಟಸುಖಗಳಿಗೆ, ಶೀತೋಷ್ಣಗಳಿಗೆ ಬರುವ ಅನುಭೂತಿಗಳು ಪಡೆಯುತ್ತಾನೆ. ಎಲ್ಲಾ ಕಡೆಯಲ್ಲಿಯೂ ಬೀಸುವ ಗಾಳಿಗೆ ದೀಪ ಕದಲುವಂತೆ ಅನೇಕ ವಿಷಯಗಳ ಸುಖದುಃಖಗಳ ಅನುಭವದಿಂದ ಅನೇಕವಾಗಿ ಮೆಲಕುತ್ತಿರುತ್ತವೆ. ಬ್ರಹ್ಮಯೋಗ ಹೊಂದಿ ಮನಸ್ಸಿನ ಮೂಲಕ ಯಾವ ವಿಷಯವು ತನ್ನವರೆಗೂ ಸೇರದಿರುವಾಗ, ಪ್ರಶಾಂತತೆಹೊಂದಿ ಗಾಳಿ ಬೀಸದ ಕಡೆ ದೀಪ ಕದಲದೆ ಬೆಳಗುವಂತೆ ಶರೀರದಲ್ಲಿನ ಜೀವಿಯೂ ಸಹ ಇದ್ದಾನೆ. ಬ್ರಹ್ಮಯೋಗ ಹೊಂದಿದವನು ಇನ್ನೂ ಹೇಗಿರುತ್ತಾನೆ ಎಂದರೆ!

**(5) ಶ್ಲೋ॥ 20 : ಯತ್ರೋ ಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ ।**
**ಯತ್ರ ಚೈವಾತ್ಮನಾ೭೭ತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥**
**(ಬ್ರಹ್ಮಯೋಗ)**

**ಭಾವಾರ್ಥ** : ಯಾವಾಗ ಯೋಗಾಭ್ಯಾಸದಿಂದ ಚಿತ್ತವು ಕೆಲಸ ಮಾಡದಂತೆ ಹೋಗುತ್ತಿದೆಯೋ, ಆಗ ಜೀವಾತ್ಮ ಆತ್ಮವನ್ನು ನೋಡಿ ಆತ್ಮಾನಂದವನ್ನು ಅನುಭವಿಸುತ್ತಿದ್ದಾನೆ.

**ವಿವರ** : ಬ್ರಹ್ಮಯೋಗ ಮಾಡುವುದರಿಂದ ದೇಹದಲ್ಲಿನ ಭಾಗಗಳ ಕಾರ್ಯಗಳು ಎಲ್ಲವೂ ಸ್ತಂಭಿಸಿಹೋಗುತ್ತವೆ. ನಿದ್ರೆಯಲ್ಲಿ ಹೊರತು ಉಳಿದ ಸಮಯದಲ್ಲಿ ಬುದ್ಧಿಗು, ಚಿತ್ತಕ್ಕು, ಜೀವಾತ್ಮಕ್ಕು ಯಾವುದೋ ಒಂದು ತಿಳಿಸುವ ಜಾವಾಬ್ಧಾರಿ ಮನಸ್ಸಿಗೆ ಇದೆ. ಮಾನವನ ಜೀವನಕಾಲ ಮುಖ್ಯವಾಗಿ ನಾಲ್ಕು ಭಾಗಗಳಾಗಿ ಇದೆಯೆಂದು ಹೇಳಬಹುದು. ಅವುಗಳೇ 1)ನಿದ್ರೆ 2) ಎಚ್ಚರ 3) ಸ್ವಪ್ನ 4) ಯೋಗ. ನಿದ್ರೆಯಲ್ಲಿ ಮನಸ್ಸಿಗೆ ಯಾವ ಕೆಲಸವು ಇರುವುದಿಲ್ಲ. ಎಚ್ಚರಿಕೆಯಲ್ಲಿ ಮನಸ್ಸು, ಇಂದ್ರಿಯಗಳು ಕೆಲಸ ಮಾಡುವುದು ಎಲ್ಲರಿಗೂ ತಿಳಿದಿರುವುದೇ. ಸ್ವಪ್ನದಲ್ಲಿ ಬಾಹ್ಯಕರ್ಮೇಂದ್ರಿಯಗಳು ಬಿಟ್ಟು ಎಲ್ಲಾ ಕೆಲಸ ಮಾಡುತ್ತಿವೆ. ಯೋಗದಲ್ಲಿ ಎಂದರೆ ಬ್ರಹ್ಮಯೋಗದಲ್ಲಿ ಶರೀರ ಭಾಗಗಳೆಲ್ಲವೂ ಸ್ತಂಭಿಸಿದ್ದರೂ ಮನಸ್ಸು, ಬುದ್ಧಿ, ಚಿತ್ತ, ಜೀವಿಯು ಎಚ್ಚರಿಕೆಯಿಂದ ಇರುತ್ತಾರೆ. ಮನಸ್ಸು ಮಾತ್ರ ಹೊರಗಿನ ವಿಷಯಗಳನ್ನು ಬಿಟ್ಟುಹಾಕಿ ಅಂತರ್ಮುಖವಾಗಿರುವ ವಿಷಯವನ್ನೇ ತಿಳಿಸುತ್ತಿರುತ್ತದೆ. ಬ್ರಹ್ಮ ಯೋಗದಲ್ಲಿರುವುದು ಆತ್ಮ ಹೊರತು ಮನಸ್ಸಿಗೆ ಮತ್ತೊಂದು ಇಲ್ಲ. ಆದುದರಿಂದ ಆತ್ಮದ ವಿಷಯವನ್ನೇ ಜೀವಿಗು, ಬುದ್ಧಿಗು, ಚಿತ್ತಕ್ಕು ತಿಳಿಸುತ್ತಿರುತ್ತದೆ. ಆಗ ಜೀವಾತ್ಮ ತನ್ನ

ಮನಸ್ಸಿನಿಂದ ಆತ್ಮವನ್ನು ನೋಡುತ್ತಿದ್ದಾನೆ. ಮನಸ್ಸು ಮಧ್ಯದಲ್ಲಿ ಇಲ್ಲದಿದ್ದರೆ, ಜೀವಾತ್ಮ ಆತ್ಮವನ್ನು ನೇರವಾಗಿ ನೋಡಲಾರನು. ಜೀವಾತ್ಮ ಮನೋದೃಷ್ಟಿಯಿಂದಲೇ ಆತ್ಮವನ್ನು ನೋಡುತ್ತಿದ್ದಾನೆಂದು ಗ್ರಹಿಸಬೇಕು. ಯೋಗದಲ್ಲಿ ಜೀವಾತ್ಮ ಮನಸ್ಸು ತಿಳಿಸುವ ಆತ್ಮಾನುಭೂತಿಯನ್ನು ಬುದ್ಧಿಯ ಮೂಲಕ ಹೊಂದುತ್ತಿದೆ ಎಂದು ತಿಳಿದುಕೊಳ್ಳಿ. ಆ ಸಮಯದಲ್ಲಿ ಜೀವಾತ್ಮ ಆತ್ಮವೊಂದರ ಅನುಭವವನ್ನು, ಅದರೊಂದರ ಆನಂದವನ್ನು ಪಡೆಯುತ್ತಿದ್ದಾನೆ.

**(5) ಶ್ಲೋ॥ 21 : ಸುಖ ಮಾತ್ಯನ್ತಿಕಂ ಯತ್ತದ್ಬುದ್ಧಿಗ್ರಾಹ್ಯ ಮತೀಂದ್ರಿಯಮ್ ।**
**ವೇತ್ತಿ ಯತ್ರನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥**

**(ಬ್ರಹ್ಮಯೋಗ)**

**ಭಾವಾರ್ಥ** : ಅನಂತವಾದ ಆ ಸುಖವು ಇಂದ್ರಿಯಾತೀತ. ಅದನ್ನು ಬುದ್ದಿ ಮಾತ್ರ ಗ್ರಹಿಸುತ್ತದೆ. ಆ ಸುಖವನ್ನು ಗ್ರಹಿಸಿದವನು ಅದರಿಂದ ಚಲಿಸದೆ ನಿಶ್ಚಲತೆ ಹೊಂದಿದ್ದಾನೆ.

**ವಿವರ** : ಬ್ರಹ್ಮಯೋಗ ಸಮಯದಲ್ಲಿ ಮನಸ್ಸು ಜೀವಾತ್ಮಕ್ಕೆ ತಿಳಿಸುವ ಆತ್ಮಸುಖವು ಹೊರಗಿನ ಜ್ಞಾನೇಂದ್ರಿಯಗಳು ಗ್ರಹಿಸದಿರುವುದು. ಏಕೆಂದರೆ ಆತ್ಮ ಸುಖ ಕಣ್ಣುಗಳಿಗೆ ಕಾಣಿಸುವ ಅಂದವಾದ ದೃಶ್ಯ ಸುಖವಲ್ಲ. ಕಣ್ಣುಗಳು ತಿಳಿಸುವ ಯಾವ ಸುಖ ಅದಕ್ಕೆ ಸಾಟಿಯಲ್ಲ. ಕಣ್ಣುಗಳು, ಕಿವಿಗಳು, ನಾಲಿಗೆ ತಿಳಿಸುವ ಸುಖಗಳಿಗೆ ಅತೀತವಾಗಿದೆ. ಆದ್ದರಿಂದ ಜ್ಞಾನೇಂದ್ರಿಯಗಳು ವಿಷಯಜ್ಞಾನವನ್ನು ಅದರಲ್ಲಿನ ಸುಖವನ್ನು ತಿಳಿಸುವವು ಮಾತ್ರವೇ. ಜ್ಞಾನೇಂದ್ರಿಯಗಳಿಗಿಂತ ದೊಡ್ಡದಾದ ಬುದ್ಧಿ ಮಾತ್ರ ಆತ್ಮಸುಖವನ್ನು ಗ್ರಹಿಸುತ್ತದೆ. ಮನಸ್ಸು ತಿಳಿಸುವ ಆತ್ಮವೊಂದರ ಸುಖವನ್ನು ಬುದ್ಧಿ ಗ್ರಹಿಸಿ ಅದರಲ್ಲಿನ ಸಾರವೆಲ್ಲವನ್ನು ವಿವರವಾಗಿ ತಿಳಿದುಕೊಳ್ಳುತ್ತಲೇ ಇದೆ. ಹುಟ್ಟಿ ದಾಗಿನಿಂದ ನಿತ್ಯವು ನೋಡುತ್ತಿರುವ ಇಂದ್ರಿಯ ಸುಖಗಳಿಗಿಂತ ಆತ್ಮಸುಖವು ಅನಂತವಾದುದೆಂದು ಬುದ್ಧಿಗ್ರಹಿಸಿ, ಜೀವಾತ್ಮನಿಗೆ ತಿಳಿಸುವುದರಿಂದ ಜೀವಾತ್ಮ ಸ್ಥಿರವಾಗಿ ಆ ಸುಖವನ್ನೇ ಹೊಂದಿರುತ್ತಾನೆ. ಇದಕ್ಕೂ ಮೊದಲು ಯಾವಾಗಲೂ ಇಂದ್ರಿಯಗಳ ಮೂಲಕ ಅಂತಹ ಸುಖವನ್ನು ಹೊಂದದ ಜೀವಿಯು ಅದನ್ನೇ ದೊಡ್ಡದಾಗಿ ತಿಳಿದಿರುತ್ತಾನೆ.

**(5) ಶ್ಲೋ॥ 22 : ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಮ್ ತತಃ ।**
**ಯಸ್ಮಿನ್ ಸ್ಥಿತೋ ನಧುಃಖೇನ ಗುರುಣಾಪಿ ವಿಚಾಲ್ಯತೇ ॥**

**(ಬ್ರಹ್ಮಯೋಗ)**

**(5) ಶ್ಲೋ॥ 23 : ತಂವಿದ್ಯಾ ದ್ದುಃಖಸಂಯೋಗ ವಿಯೋಗಂ ಯೋಗಸಂಗ್ನಿತಮ್ ।**
**ಸ ನಿಶ್ಚಯೇನ ಯೋಕ್ತವ್ಯೋ ಯೋಗೋಽನಿರ್ವಿಣ್ಣ ಚೇತಸಾ ॥**
**(ಬ್ರಹ್ಮಯೋಗ)**

**ಭಾವಾರ್ಥ** : ತನಗೆ ಲಭಿಸುವುದರಲ್ಲಿ ಇತರರಗಿಂತ ಯಾವುದು ಅಧಿಕ ಲಾಭವಾಗಿ ಕಾಣಿಸುತ್ತಿದೆಯೋ, ದೊಡ್ಡ ದುಃಖವು ತಟಸ್ಥಿಸಿದರೂ ಯಾವ ಸ್ಥಿತಿಯಲ್ಲಿ ಅದು ತನಗೆ ವಿಚಾರ ಚಲನೆ ಉಂಟುಮಾಡುವುದಿಲ್ಲವೋ, ದುಃಖ ಹೊಂದುವುದು ಯಾವುದರಿಂದ ಇಲ್ಲವೋ, ಅದರ ಹೆಸರೇ ಬ್ರಹ್ಮಯೋಗವೆಂದು ತಿಳಿಯಬೇಕು. ಈ ಯೋಗದ ಸಾರಾಂಶ ನಿಶ್ಚಯವಾಗಿ ತಿಳಿದವನು ವ್ಯಾಕುಲತೆ ಇಲ್ಲದವನಾಗಿ ಬ್ರಹ್ಮಯೋಗವನ್ನೇ ಆಚರಿಸುತ್ತಾನೆ.

**ವಿವರ** : ಶರೀರದೊಳಗಿರುವ ಜೀವಾತ್ಮಕ್ಕೆ ಸೇರುವ ವಿಷಯ ಸುಖಗಳಿಗೆ ಹೋಲಿಸಿದರೆ ಆತ್ಮಸುಖಕ್ಕಿಂತ ಇತರೆ ಯಾವ ಸುಖವು ಅಧಿಕವಾಗಿ ಕಾಣಿಸುವುದಿಲ್ಲ. ಬ್ರಹ್ಮಯೋಗ ಆಚರಿಸುವ ಸಮಯದಲ್ಲಿ ಹೊರಗೆ ಬಹಳ ದುಃಖವನ್ನು ಉಂಟುಮಾಡುವ ವಿಷಯ ಸಂಭವಿಸಿದರೂ ಆ ವಿಷಯ ತನ್ನವರೆಗೂ ಸೇರಿ ವಿಚಾರವನ್ನುಂಟುಮಾಡುವುದಿಲ್ಲ. ಈ ಯೋಗದಲ್ಲಿ ದುಃಖ ಸಂಯೋಗವೆಂಬ ಮಾತೇ ಇಲ್ಲ. ಈ ಯೋಗ ಇರುವವರೆಗೂ ದುಃಖಕ್ಕೆ ದಾರಿ ಇಲ್ಲದೆ ಅಪರಮಿತವಾದ ಮಾತುಗಳಿಗೆ ಎಟುಕದ ಆನಂದವನ್ನೇ ಹೊಂದುವುದಾಗಿದೆ. ಇದರ ವಿಷಯ ತಿಳಿದವನು ವ್ಯಾಕುಲ ವಿಲ್ಲದ ಮನಸ್ಸು ಇರುವವನಾಗಿ ಈ ಯೋಗವನ್ನೇ ಆಚರಿಸುತ್ತಾನೆ.

**(5) ಶ್ಲೋ॥ 24 : ಸಂಕಲ್ಪ ಪ್ರಭವಾ ನ್ಕಾಮಾಂ ಸ್ತ್ಯಕ್ತ್ವಾಸರ್ವಾನಶೇಷತಃ ।**
**ಮನಸೈವೇಂದ್ರಿಯಗ್ರಾಮಂ ವಿನಿಯಮ್ಯ ಸಮನ್ತತಃ ॥**
**(ಬ್ರಹ್ಮಯೋಗ)**

**(5) ಶ್ಲೋ॥ 25 : ಶನೈ ಶ್ಶನೈ ರುಪರಮೇ ದ್ಬುದ್ಧ್ಯಾ ಧೃತಿ ಗೃಹೀತಯಾ ।**
**ಆತ್ಮಸಂಸ್ಥಂ ಮನಃ ಕೃತ್ವಾ ನಕಿಂಚಿದಪಿ ಚಿನ್ತಯೇತ್ ॥**
**(ಬ್ರಹ್ಮಯೋಗ)**

**ಭಾವಾರ್ಥ** : ಮನೋ ಸಂಕಲ್ಪದಿಂದ ಸಂಭವಿಸುವ ಆಸೆ ಮೊದಲಾದ ಗುಣಗಳನ್ನು ನಿಶ್ಶೇಷವಾಗಿ ಇಲ್ಲದಂತೆ ಮಾಡಿ, ಇಂದ್ರಿಯ ವಿಷಯಗಳಿಂದ ಮನಸ್ಸನ್ನು ನಿಗ್ರಹಿಸಿ, ಮತ್ತು ಧೈರ್ಯವಿರುವ ಬುದ್ಧಿಯಿಂದ ಸ್ವಲ್ಪ ಸ್ವಲ್ಪವಾಗಿ ಮನಸ್ಸನ್ನು ವಿಷಯಗಳಿಂದ ಮರಳಿಸಿ ಆತ್ಮನಲ್ಲೇ ನಿಲ್ಲುವಂತೆ ಮಾಡಬೇಕು.

**ವಿವರ** : ಮನಸ್ಸಿಗೆ ಯೋಚನೆಗಳಿಂದ ಗುಣ ವಿಷಯಗಳನ್ನು ಪ್ರೇರೇಪಿಸುವುದು ಒಂದು ಕೆಲಸವಾದರೆ, ಇಂದ್ರಿಯ ವಿಷಯಗಳನ್ನು ತಿಳಿಸುವುದು ಎರಡನೇ ಕೆಲಸವಾಗಿದೆ ಎಂದು ಹೇಳಿಕೊಂಡಿದ್ದೇವೆ. ಧೈರ್ಯವಿರುವ ಬುದ್ಧಿಯಿಂದ ಮನಸ್ಸನ್ನು ಮೆಲ್ಲಮೆಲನೆ ಇಂದ್ರಿಯ ವಿಷಯಗಳಿಂದ ಮತ್ತು ಸಂಕಲ್ಪಗಳಿಂದ ಮರಳಿಸಬೇಕು. ಮನಸ್ಸು ಮಾತುಮಾತಿಗೂ ಚಂಚಲವಾಗಿರುವುದು ಅದರ ಸಹಜತ್ವ. ಅದು ಅಧಿಕವಾಗಿ ಚಂಚಲವಾಗುವುದರಿಂದ ಬುದ್ಧಿ ಅಧೈರ್ಯಪಡದೆ, ಮಾತು ಮಾತಿಗೂ ಮನಸ್ಸಿಗೆ ಹಿತವು ಹೇಳುವ ವಿಷಯಗಳಿಂದ ಹಿಂದಿರುಗಿಸುವ ಪ್ರಯತ್ನ ಮಾಡುತ್ತಿರಬೇಕು. ಮನಸ್ಸೊಂದರ ಎರಡನೇ ಕೆಲಸವಾದ ಸಂಕಲ್ಪವನ್ನು ಇಲ್ಲದಂತೆ ಮಾಡುವುದೇ ಕಷ್ಟವಾದ ಕೆಲಸ.

**(5) ಶ್ಲೋ॥ 26 : ಯತೋಯತೋ ನಿಶ್ಚರತಿ ಮನಶ್ಚಂಚಲ ಮಸ್ಥಿರಂ ।**
**ತತಸ್ತತೋ ನಿಯಮ್ಯೈತ ದಾತ್ಮನ್ಯೇವ ವಶಂ ನಯೇತ್ ॥**

**(ಬ್ರಹ್ಮಯೋಗ)**

**ಭಾವಾರ್ಥ** : ಅಸ್ಥಿರ ಅಧಿಕ ಚಂಚಲವಾದ ಮನಸ್ಸು ಯಾವ ಕಡೆ ಓಡುವುದೋ, ಆ ವಿಷಯದಿಂದ ಮನಸ್ಸನ್ನು ನಿಗ್ರಹಿಸಿ ಮರಳಿಸಿ ಆತ್ಮನಲ್ಲಿಯೇ ವಶವಾಗುವಂತೆ ಮಾಡಬೇಕು.

**ವಿವರ** : ಮನಸ್ಸು ಅಧಿಕ ಚಂಚಲವಾದುದು ಮತ್ತು ದೃಢವಾದುದು. ಪರಮ ನೀಚ ವಿಷಯಗಳನ್ನು ಸಹಿತವು ಯೋಚಿಸುವ ನೀಚವಾದುದೆಂದು. ಇದನ್ನು ಕುರಿತು ವೇಮನಯೋಗಿಯವರು ಒಂದು ಪದ್ಯವನ್ನೂ ಸಹ ಹೇಳಿದ್ದಾನೆ.

***ನಾಯಿಯನ್ನು ತಿಂದವನು ಗುರುಲಿಂಗ ಜಂಗಮನು***
***ಹಂದಿಯನ್ನು ತಿಂದವನು ಪರಮ ಯೋಗಿ***
***ಆನೆಯನ್ನು ತಿಂದವನು ಅವನೆಷ್ಟು ಸುಜ್ಞಾನಿಯೊ***
***ವಿಶ್ವದಾಭಿರಾಮ ಕೇಳಯ್ಯಾ ವೇಮ!***

ನಮ್ಮ ಶರೀರದಲ್ಲಿನ ಮನಸ್ಸು ನಾಯಿಯಂತೆ ಅತಿ ಚಂಚಲವಾದುದು. ಒಂದು ಕ್ಷಣವೂ ಸಹ ಸ್ಥಿರವಾಗಿರದೆ ಮನೆ ಮನೆ ತಿರುಗುವಂತೆ, ಮನಸ್ಸೂ ಸಹ ವಿಷಯಗಳ ಮೇಲೆ ಚಲಿಸುತ್ತಿರುತ್ತದೆ. ನಾಯಿಯಂತೆ ಚಂಚಲವಾದ ಮನಸ್ಸನ್ನು ಯಾರು ಜಯಿಸುತ್ತಾರೋ ಅವನು ನಿಜವಾಗಲು ಗುರುವಿಗೆ ಸಮಾನವೇ. ಗುರುವು ಮನಸ್ಸನ್ನು ಜಯಿಸಿರುವವನು ಎಂಬ ವಿಷಯವನ್ನು ನಾಯಿಯನ್ನು ತಿಂದವನು ಗುರುಲಿಂಗನೆಂದು ಮೇಲಿನ ಪದ್ಯದಲ್ಲಿ ಹೇಳಿದ್ದಾರೆ.

ಮನಸ್ಸು ಚಂಚಲವಾದುದ್ದೇ ಅಲ್ಲದೇ ಪರಮ ನೀಚವಾದ ವಿಷಯಗಳ ಮೇಲೆ ಹೋಗುತ್ತಿರುತ್ತದೆ. ಆದ್ದರಿಂದ ಅದನ್ನು ಹಂದಿಗೆ ಸಮಾನವೆಂದು ಹೋಲಿಸಿ, ಅದನ್ನು ಜಯಿಸಿದವನು ಪರಮಯೋಗಿ ಎಂದು ತಿಳಿಸುತ್ತಾ, ಹಂದಿಯನ್ನು ತಿಂದವನು ಪರಮಯೋಗಿ ಎಂದು ವರ್ಣಸಿದ್ದಾರೆ.

ಮನಸ್ಸು ಚಂಚಲವಾದದು, ನೀಚವಾದುದ್ದೆ ಅಲ್ಲದೇ ದೃಢಬಲವಾದುದಾಗಿಯೂ ಸಹ ಇದೆ. ಅದನ್ನು ಜಯಿಸಬೇಕೆಂದು ಪ್ರಯತ್ನ ಮಾಡಿದವರಿಗೆ ಸುಲಭವಾಗಿ ಬಗ್ಗುವುದಿಲ್ಲ. ಎಷ್ಟು ಬಲವಾಗಿ ಮನಸ್ಸನ್ನು ನಿಲ್ಲಿಸಬೇಕೆಂದು ಪ್ರಯತ್ನ ಮಾಡಿದರು, ಅದು ಬಲವಾದುದು ಆದ್ದರಿಂದ ಹೋಗುತ್ತಲೇ ಇರುತ್ತದೆ. ಪ್ರಯತ್ನವೆಂಬ ಹಗ್ಗಗಳಿಗೆ ನಿಲ್ಲದೆ ನಮ್ಮನ್ನು ಸುಲಭವಾಗಿ ಸೆಳೆದುಕೊಳ್ಳುವ ಮನಸ್ಸನ್ನು ಬಲವಾದುದ್ದಾಗಿ ವರ್ಣಿಸುತ್ತಾ ಅದನ್ನು ಆನೆಗೆ ಹೋಲಿಸಿ ಹೇಳಿದ್ದಾರೆ. ಅಂತಹ ಬಲವಾದ ಮನಸ್ಸನ್ನು ಜಯಿಸಿದವನು ಸುಜ್ಞಾನಿ ಎಂದು ಹೇಳುತ್ತಾ ಆನೆಯನ್ನು ತಿಂದವನು ಎಂದು ಹೇಳಿದ್ದಾರೆ.

ಮನಸ್ಸು ಚಂಚಲವಾದುದು ಆದ್ದರಿಂದ ನಾಯಿಯಾಗಿ, ನೀಚವಾದುದು ಆದ್ದರಿಂದ ಹಂದಿಯಾಗಿಯೂ, ಬಲವಾದುದು ಆದ್ದರಿಂದ ಆನೆಯಾಗಿ ವರ್ಣಿಸಿ, ಅದನ್ನು ಜಯಿಸುವುದನ್ನು ತಿಂದು ಇಲ್ಲದಂತೆ ಮಾಡುವುದೆಂದು ವರ್ಣಿಸಿ ಹೇಳಿದ್ದಾರೆ.

ಮನಸ್ಸಿಗೆ ಅನೇಕ ಇಂದ್ರಿಯ ವಿಷಯಗಳು ಮತ್ತು ಸಂಕಲ್ಪಗಳು ಆಹಾರಗಳಾಗಿವೆ. ಮನಸ್ಸಿಗೆ ಬಲ ಇಲ್ಲದಂತೆ ಮಾಡಿ ಒಂದುಕಡೆ ಇರುವಂತೆ ಮಾಡುವುದಕ್ಕೆ ಮುಖ್ಯವಾಗಿ ಸಂಕಲ್ಪಗಳನ್ನು ಇಲ್ಲದಂತೆ ಮಾಡಬೇಕು. ಯೋಗ ಸಾಧಕನಿಗೆ ಪ್ರಸ್ತುತ ಇಂದ್ರಿಯ ವಿಷಯಗಳಿಂದ ಅಷ್ಟು ತೊಂದರೆ ಇರುವುದಿಲ್ಲ. ಏಕೆಂದರೆ ಸಾಧಕನು ಪ್ರಸ್ತುತ ಆ ಸಮಯದಲ್ಲಿ ಅವುಗಳ ತೊಂದರೆ ಇಲ್ಲದಂತೆ ಮಾಡಿಕೊಂಡು ಕುಳಿತುಕೊಂಡಿರುತ್ತಾನೆ. ಬಂದಿರುವ ಕಷ್ಟವೆಲ್ಲವೂ ಮನಸ್ಸೊಂದರ ಸಂಕಲ್ಪ ಜ್ಞಾಪಕಗಳಿಂದಲೇ ಎಂದು ತಿಳಿಯುತ್ತಿದೆ. ಸಾಧಕನಿಗೆ ಒಂದೇ ಬಾರಿ ಸಂಕಲ್ಪಗಳು ಬರುವುದಿಲ್ಲ. ಒಂದರ ನಂತರ ಒಂದು ಬರುತ್ತಿರುತ್ತವೆ. ಸಾಧಕನು ಬುದ್ಧಿಯಿಂದ ಮನಸ್ಸನ್ನು ಎಚ್ಚರಿಸುತ್ತಾ ಸಂಕಲ್ಪಗಳನ್ನು ಇಲ್ಲದಂತೆ ಮಾಡಿಕೊಳ್ಳುವ ಪ್ರಯತ್ನ ಮಾಡುತ್ತಿರುತ್ತಾನೆ. ಹಾಗೆ ಪ್ರಯತ್ನ ಮಾಡುತ್ತಾ ಮಾಡುತ್ತಾ ಮನಸ್ಸು ಕೆಲವು ಸೆಕೆಂಡುಗಳು ನಿಂತು ಮತ್ತೆ ಆಲೋಚನೆಯಲ್ಲಿ ಬೀಳುತ್ತಿರುತ್ತದೆ. ಹೀಗೆ ಮನಸ್ಸಿನೊಂದಿಗೆ ಹೋರಾಟ ಮಾಡುತ್ತಿರುವಾಗ, ಸ್ವಲ್ಪಕಾಲ ಕಳೆದಾಗ ಆಗ ಸ್ವಲ್ಪ ಫಲಿತವಿರುತ್ತದೆ. ಮನೋವೇಗವು ಕಡಿಮೆಯಾಗಿ ಹಿಂದೆ ಹಿಂದಯೇ ಸಂಕಲ್ಪಗಳು ಬಾರದಂತೆ ಇರುತ್ತವೆ.

ಒಂದು ಜ್ಞಾಪಕದ ನಂತರ ಪ್ರಯತ್ನ ಪೂರ್ವಕವಾಗಿ ಆ ವಿಷಯವನ್ನು ಮನಸ್ಸಿಗೆ ಇಲ್ಲದಂತೆ ಮಾಡಿದ ಕೂಡಲೇ ಮತ್ತೊಂದು ಜ್ಞಾಪಕ ಬರುವುದಿಲ್ಲ. ಮಧ್ಯದಲ್ಲಿ ಸ್ವಲ್ಪ ವ್ಯವಧಿ ನಿರಾಮಯಸ್ಥಿತಿ ಏರ್ಪಡುತ್ತದೆ. ಆ ಸ್ಥಿತಿಯನ್ನು ನಿರ್ವಿಕಲ್ಪ ಸಮಾಧಿ ಎನ್ನುತಿದ್ದಾರೆ. ಅಂದರೆ ಸಂಕಲ್ಪಗಳಿಲ್ಲದ ಸಮಾಧಿ ಸ್ಥಿತಿ ಎಂದು ಅರ್ಥ. ಆ ಸ್ಥಿತಿಯನ್ನು ಅಭ್ಯಾಸದಿಂದ ಬೆಳೆಸಿಕೊಳ್ಳುತ್ತಾ ಹೋದರೆ ಸ್ವಲ್ಪಕಾಲಕ್ಕೆ ಒಂದು ಗಂಟೆ ಸಮಯ ಯೋಗಸಾಧನೆ ಮಾಡಿದರೆ ಕನಿಷ್ಟ 15 ಅಥವಾ 20 ನಿಮಿಷಗಳಾದರು ಮನಸ್ಸಿಗೆ ಸಂಕಲ್ಪಗಳಿಲ್ಲದ ಸ್ಥಿತಿ ಏರ್ಪಡುತ್ತದೆ. ಅದೇ ನಿಜವಾದ ಬ್ರಹ್ಮಯೋಗವೆಂದು ತಿಳಿಯುತ್ತದೆ. ಸ್ವಲ್ಪಕಾಲ ಹಾಗೆ ಸಾಧನೆ ಮಾಡಿದಾಗ ಕೊನೆಗೆ ಒಂದು ಗಂಟೆಕಾಲದ ಸಾಧನೆಯಲ್ಲಿ 30 ನಿಮಿಷಗಳೋ, 40 ನಿಮಿಷಗಳೋ ಯೋಗವಾಗುತ್ತದೆ. ಹತ್ತು ವರ್ಷಗಳು ಸಾಧನೆ ಮಾಡಿದವನಿಗೂ ಸಹ ಗಂಟೆಗೆ ಗಂಟೆ ಪೂರ್ತಿ ಯೋಗವಾಗುವುದಿಲ್ಲ.

ಇನ್ನು ಕೆಲವರು ಪ್ರತಿದಿನ ಗುರೂಪದೇಶದ ಪ್ರಕಾರ ಸಾಧನೆ ಮಾಡುತ್ತಾ, ನಿಯಮ ತಪ್ಪದೇ ಹತ್ತು ಹದಿನೈದು ವರ್ಷಗಳು ಅಭ್ಯಾಸಮಾಡಿ, ಮನಸ್ಸು ಪಕ್ಕದ ವಿಷಯಗಳ ಮೇಲೆ ಹೋಗದಂತೆ ಮಾಡಿಕೊಂಡವರೂ ಸಹ ಇದ್ದಾರೆ. ಎಷ್ಟೋ ಜನ ಭೂಮಿ ಮೇಲೆ ಸಾಧನೆಗಳು ಮಾಡುತ್ತಾ ಮನಸ್ಸನ್ನು ನಿಯಂತ್ರಿಸಿಕೊಳ್ಳುತ್ತಿದ್ದಾರೆ. ಮನಸ್ಸನ್ನು ಜಯಿಸುವುದಕ್ಕೆ ವರ್ಷದ ಕಾಲ ಬೇಕಾಗುತ್ತದಾ ಎಂದು ಕೆಲವರಿಗೆ ಅನುಮಾನ ಬರಬಹುದು. ಅದು ಅವರವರ ಸಾಧನೆ ತೀವ್ರತೆಯನ್ನು ಅನುಸರಿಸಿರುತ್ತದೆಂದು ಹೇಳುತ್ತಿದ್ದೇವೆ. ಶ್ಲೋಕದಲ್ಲಿ ಮನಸ್ಸನ್ನು ಕುರಿತು ಹೇಳುತ್ತಾ ಎಲ್ಲೆಲ್ಲಿಗೆ ಹೋಗುತ್ತದೋ ಅಲ್ಲಿಂದ ಮರಳಿಸಬೇಕೆಂದಿದ್ದಾರೆ. ಈ ಅಧ್ಯಾಯದಲ್ಲಿ 12ನೇ ಶ್ಲೋಕದಲ್ಲಿ **"ಏಕಾಗ್ರಂ ಮನಃ"** ಎಂದಿದ್ದಾರೆ. ಮನಸ್ಸನ್ನು ಏಕಾಗ್ರ ಪಡಿಸಿಕೋ ಎಂದು ಅದರ ಅರ್ಥ. ಮನಸ್ಸನ್ನು ಕುರಿತು ಇಲ್ಲಿಯವರೆಗೂ ಎಷ್ಟೋ ತಿಳಿದುಕೊಂಡರೂ, ಇಲ್ಲಿ ಮತ್ತಷ್ಟು ತಿಳಿದುಕೊಳ್ಳಬೇಕಾದ ಅವಶ್ಯಕತೆ ಇದೆ. ಮನಸ್ಸಿಗೆ ಅನೇಕ ಸಂಕಲ್ಪ ವಿಕಲ್ಪಗಳಿದ್ದರೂ, ಅವು ಎಲ್ಲವೂ ಒಂದೇ ಬಾರಿ ಬರುವುದಿಲ್ಲವೆಂದು, ಒಂದರ ನಂತರ ಒಂದು ಬರುತ್ತವೆಂದೂ ಸಹ ತಿಳಿದುಕೊಂಡಿದ್ದೇವೆ. **ಮನಸ್ಸಿಗೆ ಒಂದು ಸೂತ್ರವಿದೆ. ಅದು ಏನೆಂದರೆ ! ಒಂದು ಸಮಯದಲ್ಲಿ ಒಂದು ಯೋಚನೆ ಮಾಡುವುದು ಮನಸ್ಸು ಒಂದು ಸಮಯದಲ್ಲಿ ಒಂದಕ್ಕಿಂತ ಹೆಚ್ಚಿನ ಯೋಚನೆಗಳು ಮನಸ್ಸಿನಲ್ಲಿ ಇರುವುದಿಲ್ಲವೆಂದು ಅನುಭವ ಪೂರ್ವಕವಾಗಿಯೂ ಸಹ ತಿಳಿಯುತ್ತದೆ. ಮನಸ್ಸಿಗೆ ಒಂದು ಯೋಚನೆ ನಂತರ ಮತ್ತೊಂದು ಯೋಚನೆಬರುತ್ತದೆ.** ಒಂದು ಸಮಯದಲ್ಲಿ ಒಂದು ಯೋಚನೆ ಎಂಬ ಸೂತ್ರದ ಪ್ರಕಾರ ಒಂದು ಯೋಚನೆ ಎಷ್ಟು ಸಮಯವಾದರೂ

ಇರಬಹುದು. ಅದು ಹೋದ ತಕ್ಷಣ ಮತ್ತೊಂದು ಬರಬಹುದು. ಹೀಗೆ ಅನೇಕ ವಿಷಯಗಳು ಬದಲಾಗುತ್ತಿರುತ್ತವೆ. ಅನೇಕ ವಿಷಯಗಳು ಮನಸ್ಸಿಗೆ ಬಾರದಂತೆ ಒಂದು ವಿಷಯದ ಮೇಲೆ ಇರುವಂತೆ ಎಷ್ಟೋಜನ ಸಾಧಕರು ಸಾಧಿಸಿದ್ದಾರೆಂದೂ ಸಹ ಹೇಳಿಕೊಂಡಿದ್ದೇವೆ. ಅಸಲು ಸಮಸ್ಯೆ ಇಲ್ಲಿಯೇ ಇದೆ. ಅದು ಏನೆಂದರೆ!

ಮನಸ್ಸಿಗೆ ಸಹಜವಾದ ಕೆಲಸ ಏನು? ಎನ್ನುವ ಪ್ರಶ್ನೆ ಹಾಕಿಕೊಂಡರೆ ಅದಕ್ಕೆ ಇಂದ್ರಿಯ ವಿಷಯಗಳ ಜ್ಞಾಪಕ ಮಾಡುವುದು ಅಥವಾ ಹೊರಗಿನ ಪ್ರಸ್ತುತ ವಿಷಯಗಳು ಒಳಗೆ ತಿಳಿಸುವುದು. ಮನಸ್ಸು ಚಲಿಸುವ ಅನೇಕ ವಿಷಯಗಳಲ್ಲಿ ಐದು ಜ್ಞಾನೇಂದ್ರಿಯಗಳಾದ ಕಣ್ಣು, ಮೂಗು, ಕಿವಿ, ಚರ್ಮ, ನಾಲಿಗೆವೊಂದರ ವಿಷಯ ಹೊರತು ಮತ್ತೊಂದು ಇರುವುದಿಲ್ಲ. ಈ ಇಂದ್ರಿಯಗಳೊಂದರ ಅನೇಕ ವಿಷಯಗಳಲ್ಲಿ ಏಕ ಕಾಲದಲ್ಲಿ, ಒಂದೇ ವಿಷಯದ ಮೇಲೆ ಇರುವುದು ಮನಸ್ಸೆಂಬ ಸೂತ್ರ ಇದೆ. ಈಗ ಅಸಲು ವಿಷಯಕ್ಕೆ ಬರೋಣ. ಒಬ್ಬ ಗುರುವಿನ ಹತ್ತಿರ ಒಬ್ಬ ಶಿಷ್ಯನು ಉಪದೇಶ ತೆಗೆದುಕೊಂಡಿದ್ದಾನೆ. ಗುರುಗಳು **'ಸೋಹಂ'** ಎನ್ನುವ ಮಂತ್ರೋಪದೇಶವಾಗಲಿ, ಅಥವಾ **'ರಾಮ'** ಎನ್ನುವ ಮಂತ್ರೋಪದೇಶವಾಗಲಿ, **'ನಮಃಶಿವಾಯ'** ಎನ್ನುವ ಮಂತ್ರೋಪದೇಶವಾಗಲಿ ಮಾಡಿದ್ದಾನೆಂದುಕೊಳ್ಳೋಣ. ಹಾಗೆ ಮತ್ತೊಬ್ಬ ಶಿಷ್ಯನು ಮತ್ತೊಬ್ಬ ಗುರುವನ್ನು ಆಶ್ರಯಿಸಿದ್ದಾನೆ. ಆ ಗುರುಗಳು ತನ್ನ ಶಿಷ್ಯನಿಗೆ ಮಂತ್ರೋಪದೇಶ ಮಾಡದೆ ಒಂದು ಗುರುತನ್ನು ತೋರಿಸಿ ಅದನ್ನೇ ನೋಡುತ್ತಿರೆಂದು ದೃಶ್ಯೋಪದೇಶ ಮಾಡಿದ್ದಾನೆ. ಇದನ್ನು ಹೊರತು ಮತ್ತೊಂದು ವಿಷಯವನ್ನು ಮನಸ್ಸಿನಲ್ಲಿ ಸೇರಿಸದೆ ಸಾಧನೆ ಮಾಡೆಂದಿದ್ದಾನೆ. ಗುರುಗಳ ಹತ್ತಿರ ಉಪದೇಶ ಹೊಂದಿದ ಶಿಷ್ಯರು ನಿಯಮದ ಪ್ರಕಾರ ಗುರುಗಳು ಹೇಳಿದಂತೆ ಮನಸ್ಸಿನಲ್ಲಿ ಇತರ ವಿಷಯಗಳನ್ನು ಸೇರಿಸದೆ ಅವರವರ ಸಾಧನೆ ಮಾಡುತ್ತಿದ್ದಾರೆ. ಸುಮಾರು ಕೆಲವು ವರ್ಷಗಳು ಕಳೆದ ನಂತರ ಸಾಧನೆಯಲ್ಲಿ ಅವರ ಮನಸ್ಸನ್ನು ಪಕ್ಕದ ವಿಷಯಗಳ ಮೇಲೆ ಹೋಗದಂತೆ ಮಾಡಿಕೊಂಡಿದ್ದಾರೆ. ಅಷ್ಟರಲ್ಲಿ ಒಂದು ದಿನ ನಮ್ಮಂತಹ ಒಬ್ಬವ್ಯಕ್ತಿ ಅವರ ಹತ್ತಿರಕ್ಕೆ ಬಂದಿದ್ದಾರೆ. ಮಾತುಗಳ ಸಂದರ್ಭದಲ್ಲಿ ಅವರ ಸಾಧನೆ ವಿಷಯ ಬಂದಿದೆ. ಅವರು ಹೇಳುವ ವಿಷಯವೆಲ್ಲಾ ಕೇಳಿದ ನಂತರ ಆ ಹೊಸ ವ್ಯಕ್ತಿ ಮನಸ್ಸನ್ನು ಕುರಿತು ಅವರಿಗೆ ಅರ್ಥವಾಗುವಂತೆ ಹೇಳುವುದು ಪ್ರಾರಂಭಿಸಿದನು. ಅನೇಕ ವಿಷಯಗಳಲ್ಲಿ ಚಲಿಸುವ ಮನಸ್ಸು ಒಂದು ಸಮಯದಲ್ಲಿ ಒಂದು ವಿಷಯದ ಮೇಲೆಯೇ ಇರುತ್ತದೆ. ಅದನ್ನು ಮತ್ತೊಂದು ವಿಷಯದ ಮೇಲೆ ಹೋಗದಂತೆ ಸಾಧನೆ ಮಾಡುವುದರಿಂದ ಅದು ಒಂದು ವಿಷಯದ ಮೇಲೇ ನಿಲ್ಲುತ್ತದೆ. ಅದರಿಂದ ಅನೇಕಗಳಿಂದ ಮನಸ್ಸನ್ನು

ಏಕದ ಮೇಲೆ ತಂದಂತಾಗಿದೆ. ಭಗವದ್ಗಿತೆಯಲ್ಲಿ **'ಏಕಾಗ್ರಂ ಮನಃ'** ಎಂದಿದ್ದಾರೆ. ಮನಸ್ಸನ್ನು ಏಕದಿಂದ ಏಕಾಗ್ರತೆಗೆ ಸೇರಿಸೆಂದಿದ್ದಾರೆ. ಏಕಾಗ್ರತೆ ಎಂದರೆ ಯಾವ ಒಂದು ವಿಷಯವನ್ನು ಇಲ್ಲದಂತೆ ಮಾಡುವುದೆಂದು ಅರ್ಥ. ಹಾಗೆ ಮಾಡುವುದರಿಂದ ಇಂದ್ರಿಯ ಜ್ಞಾಪಕಗಳು ಹೋಗಿ ಆತ್ಮಧ್ಯಾಸ ಮನಸ್ಸಿಗೆ ಏರ್ಪಡುತ್ತದೆ. ಹೀಗೆ ಅನೇಕ ವರ್ಷಗಳಿಂದ ಸಾಧನೆ ಮಾಡಿದರೂ ಏಕದಲ್ಲಿದ್ದಾರಾಗಲಿ ಏಕಾಗ್ರತೆಗೆ ಬರಲಿಲ್ಲ. ಒಂದು ಇಂದ್ರಿಯ ವಿಷಯವನ್ನೂ ಸಹ ಮನಸ್ಸಿಗೆ ಬಾರದಂತೆ ಮಾಡುವುದೇ ಏಕಾಗ್ರತೆಯಾದರೆ, ಒಬ್ಬರೇನೋ ಕಿವಿಯಿಂದ ಆಲಿಸುವ ವಿಷಯವಾದ ಶಬ್ದಕ್ಕೆ ಸಂಬಂಧಿಸಿದ ಮಂತ್ರೋಪದೇಶವನ್ನು, ಮತ್ತೊಬ್ಬರೇನೋ ಕಣ್ಣಿನ ದೃಷ್ಟಿವೊಂದರ ವಿಷಯವಾದ ದೃಶ್ಯೋಪದೇಶವನ್ನು ಹೊಂದಿ, ಅದನ್ನೇ ಸಾಧನೆ ಮಾಡುವುದರ ಮೂಲಕ ಇಂದ್ರಿಯಕ್ಕೆ ಸಂಬಂಧಿಸಿದ ಒಂದು ವಿಷಯದಲ್ಲಿಯೇ ಸಿಲುಕಿಕೊಂಡಿದ್ದಾರೆ. ತಮ್ಮ ಮನಸ್ಸನ್ನು ಒಂದು ವಿಷಯದ ಮೇಲೇ ಇಟ್ಟಿದ್ದಾರೆ ಹೊರತು ಒಂದಕ್ಕಿಂತ ಮೇಲಿರುವ ಸೊನ್ನೆ ಅಥವಾ ಶೂನ್ಯದ ಮೇಲೆ ಕಳುಹಿಸಿ ಏಕಾಗ್ರತೆಮಾಡಿ ಕೊಂಡಿಲ್ಲ. ಆದ್ದರಿಂದ ತಮ್ಮದು ಮಾತ್ರ ಯೋಗವಲ್ಲ. ಎಂದು ತೀರ್ಮಾನಿಸಿ ಹೇಳಿದನು.

ಅವರೇ ಅಲ್ಲ ಅಂತಹ ಸಾಧಕರು ಎಷ್ಟೋಜನ ಇದ್ದಾರೆ. ಅವರು ಈಗಲಾದರೂ ಅವರ ಮನಸ್ಸನ್ನು ಏಕಾಗ್ರತೆ ಮಾಡಿಕೊಳ್ಳಬೇಕು. ಹಾಗೆ ಆಗದಿದ್ದ ಪಕ್ಷದಲ್ಲಿ ಒಂದು ರೇಡಿಯೋ ಮೆಕಾನಿಕ್ ರಿಪೇರಿ ಮಾಡುವುದರಲ್ಲಿ ಅರ್ಧಗಂಟೆ ಸಮಯ ಒಂದೇ ಧ್ಯಾಸದಲ್ಲಿ ಇದ್ದಾನೆಂದುಕೊಳ್ಳೋಣ. ಹಾಗೆ ಸಾಧಕನು **'ಸೋಹಂ'** ಮಂತ್ರದ ಮೇಲೆ ಅರ್ಧಗಂಟೆ ಸಮಯ ಒಂದೇ ಧ್ಯಾಸದಲ್ಲಿ ಇದ್ದಾನೆಂದುಕೊಳ್ಳೋಣ. ಇಬ್ಬರ ಕೆಲಸ ಒಂದೇ ಆಗುತ್ತದೆ. ಅದರಲ್ಲಿ ಇಬ್ಬರ ಮನಸ್ಸು ಇಂದ್ರಿಯ ವಿಷಯ ಧ್ಯಾಸದಲ್ಲಿಯೇ ಇದೆ ಹೊರತು ಬೇರೆಯಿಲ್ಲ. ಆದ್ದರಿಂದ ಈ ಶ್ಲೋಕದಲ್ಲಿ ಯಾವ ಇಂದ್ರಿಯ ವಿಷಯದ ಮೇಲೆ ಮನಸ್ಸು ಹೋದರು ಅದರಿಂದ ಮರಳಿಸಬಹುದು ಎಂದಿದ್ದಾರೆ. ಹಾಗೆ ಮಾಡುವುದರಿಂದ ಇಂದ್ರಿಯ ವಿಷಯಗಳು ಮನಸ್ಸಿಗೆ ಸೇರುವುದಿಲ್ಲ.

**(5) ಶ್ಲೋ॥ 27 : ಪ್ರಶಾನ್ತ ಮನಸಂ ಹ್ಯೇನಂ ಯೋಗಿನಂ ಸುಖ ಮುತ್ತಮಮ್ ।**
**ಉಪೈತಿ ಶಾನ್ತ ರಜಸಂ ಬ್ರಹ್ಮಭೂತ ಮಕಲ್ಮಷಮ್ ॥**

**(ಬ್ರಹ್ಮಯೋಗ)**

**ಭಾವಾರ್ಥ** : ಪ್ರಶಾಂತತೆ ಹೊಂದಿದ ಮನಸ್ಸು ಇರುವವನು, ರಾಜಸ ಗುಣ ಇಲ್ಲದವನು, ಆತ್ಮಾನುಭವ ಹೊಂದಿದವನು, ಕರ್ಮಕಲ್ಮಷವು ಇಲ್ಲದಂತೆ ಮಾಡಿಕೊಳ್ಳುವವನು ಎಲ್ಲಾವೇಳೆಗಳಲ್ಲಿ ಉತ್ತಮವಾದ ಆತ್ಮಸೌಖ್ಯವನ್ನೇ ಹೊಂದುತ್ತಿರುತ್ತಾನೆ.

**(5) ಶ್ಲೋ॥ 28 : ಯುಂಜನ್ನೇವಂ ಸದಾಽಽತ್ಮಾನಂ ಯೋಗೀ ವಿಗತ ಕಲ್ಮಷಃ ।**
**ಸುಖೇನ ಬ್ರಹ್ಮ ಸಂಸ್ಪರ್ಶ ಮತ್ಯನ್ತಂ ಸುಖ ಮಶ್ನುತೇ ॥**
**(ಬ್ರಹ್ಮಯೋಗ)**

**ಭಾವಾರ್ಥ** : ಬ್ರಹ್ಮಯೋಗಿ ಸಾಧನೆ ಮಾಡಿ ಎಲ್ಲಾ ವೇಳೆಯಲ್ಲಿ ಆತ್ಮನಲ್ಲಿಯೇ ಮನಸ್ಸನ್ನು ಲಯಮಾಡಿ ಕರ್ಮ ಕಲ್ಮಷಗಳು ನಶಿಸಿದಾಗ, ಆತ್ಮಸುಖವನ್ನೇ ಪಡೆಯುತ್ತಾ ಅಪರಿಮಿತವಾದ ಆನಂದವನ್ನು ಅನುಭವಿಸುತ್ತಿದ್ದಾನೆ.

**(5) ಶ್ಲೋ॥ 29 : ಸರ್ವ ಭೂತಸ್ಥ ಮಾತ್ಮಾನಂ ಸರ್ವಭೂತಾನಿ ಚಾಽತ್ಮನಿ ।**
**ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥**
**(ಬ್ರಹ್ಮಯೋಗ)**

**ಭಾವಾರ್ಥ** : ಬ್ರಹ್ಮಯೋಗದಲ್ಲಿ ಕೂಡಿಕೊಂಡವನು, ಎಲ್ಲರಲ್ಲಿಯೂ ಒಂದೇ ಸಮದೃಷ್ಟಿ ಹೊಂದಿದ್ದಾನೆ. ಸರ್ವರಲ್ಲಿಯೂ ಆತ್ಮವನ್ನು ನೋಡುತ್ತಿದ್ದಾನೆ. ಮತ್ತು ಆತ್ಮನಲ್ಲೇ ಸರ್ವಭೂತಗಳನ್ನು ನೋಡುತ್ತಿದ್ದಾನೆ.

**ವಿವರ** : ಬ್ರಹ್ಮಯೋಗಿಯಾದವನು ಸರ್ವ ಜೀವರಾಶಿಗಳಲ್ಲಿ ಸಮ ದೃಷ್ಟಿಹೊಂದಿದ್ದಾನೆ. ಸರ್ವಜೀವರಾಶಿಗಳ ಶರೀರದಲ್ಲಿ ಜೀವಾತ್ಮದೊಂದಿಗೆ ಇರುವ ಆತ್ಮವನ್ನು ನೋಡುತ್ತಿದ್ದಾನೆ. ತನ್ನ ಶರೀರದಲ್ಲಿ ತನ್ನೊಂದಿಗೆ ಆತ್ಮವಿದ್ದಂತೆ, ಉಳಿದ ಎಲ್ಲಾ ಶರೀರಗಳಲ್ಲಿಯೂ ಹಾಗೇ ಇದೆಯೆಂದು ಆತನಿಗೆ ತಿಳಿಯುತ್ತದೆ. ಅಷ್ಟೇ ಅಲ್ಲದೇ ಸರ್ವ ಜೀವರಾಶಿಗಳು ಪರಮಾತ್ಮನಲ್ಲಿಯೇ ಇವೆಯೆಂದೂ ಸಹ ತಿಳಿಯುತ್ತದೆ. ಸರ್ವಸಜೀವ ಶರೀರಗಳಲ್ಲಿ ಆತ್ಮ ಇದೆಯೆಂದು, ಪರಮಾತ್ಮನಲ್ಲೇ ಸರ್ವ ಸಜೀವ ಶರೀರಗಳು ಅವನಲ್ಲಿ ಆತ್ಮವೂ ಇದೆಯೆಂದು ತಿಳಿಯುವವನೇ ನಿಜವಾದ ಬ್ರಹ್ಮಯೋಗಿ. ಬ್ರಹ್ಮ ಯೋಗಿಯಾದವನು ತನ್ನ ಶರೀರದಲ್ಲಿನ ಆತ್ಮವನ್ನು ನೋಡಿ, ತನ್ನ ಶರೀರಕ್ಕೂ ತನಗೂ (ಜೀವಿಗೆ) ಆಧಾರ ಆತ್ಮವೆಂದೂ, ತನ್ನ ಶರೀರದಲ್ಲಿರುವ ಆತ್ಮನಂತೆ ಎಲ್ಲಾ ಶರೀರಗಳಲ್ಲಿನ ಆತ್ಮಗಳಿಗೆ ಆಧಾರ ಮತ್ತೊಂದು ಶಕ್ತಿ ಇದೆಯೆಂದೂ, ಅದೇ ಆತ್ಮಗಿಂತ ಪರವಾಗಿರುವ ಪರಮಾತ್ಮನೆಂದು ತಿಳಿಯುತ್ತಿದ್ದಾನೆ.

**(5) ಶ್ಲೋ॥ 30 : ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂಚ ಮಯಿ ಪಶ್ಯತಿ ।**
**ತಸ್ಯಾಹಂ ನ ಪ್ರಣಶ್ಯಾಮಿ ಸಚಮೇನ ಪ್ರಣಶ್ಯತಿ ॥**
**(ಜೀವಾತ್ಮ, ಆತ್ಮ, ಪರಮಾತ್ಮ)**

**ಭಾವಾರ್ಥ** : ಯಾರು ನನ್ನನ್ನು ಎಲ್ಲಾ ಕಡೆಯಲ್ಲಿಯೂ ನೋಡುವನೋ, ಎಲ್ಲವನ್ನೂ ನನ್ನಲ್ಲಿಯೇ ನೋಡುವನೋ, ಅವನನ್ನು ನಾನು ನೋಡುತ್ತಿದ್ದೇನೆ. ಅವನು ನನ್ನನ್ನು ನೋಡುತ್ತಿದ್ದಾನೆ.

**ವಿವರ** : ಯಾರಾದರೆ ಸರ್ವಚರಾಚರ ಪ್ರಪಂಚವೆಲ್ಲವೂ ಅಣುವಣುವಿನಲ್ಲಿ ಪರಮಾತ್ಮನನ್ನು ನೋಡುತ್ತಾನೋ, ಅವನು ಸರ್ವ ಪ್ರಪಂಚವೆಲ್ಲವೂ ಪರಮಾತ್ಮನಲ್ಲೇ ಇದ್ದಂತೆ ನೋಡುತ್ತಾನೆ. ಅವನು ಯಾವಾಗಲೂ ನನ್ನನ್ನು ನೋಡುತ್ತಾನೆ. ನಾನು ಯಾವಾಗಲೂ ಅವನನ್ನು ನೋಡುತ್ತಿದ್ದೇನೆಂದು ಪರಮಾತ್ಮ ಹೇಳಿದ ಮಾತುಗಳು ಇವು. ಆತ್ಮವನ್ನು ತಿಳಿದುಕೊಂಡವನು ಪರಮಾತ್ಮನನ್ನು ಸುಲಭವಾಗಿ ತಿಳಿದುಕೊಳ್ಳುತ್ತಾನೆ. ಪರಮಾತ್ಮನನ್ನು ತಿಳಿದುಕೊಳ್ಳುವುದಕ್ಕೆ ಮುಖ್ಯ ಆಧಾರ ನಮ್ಮ ಶರೀರದಲ್ಲಿನ ಆತ್ಮ. ಆದ್ದರಿಂದಲೇ ಈಶ್ವರಲಿಂಗದ ಮೇಲೆ ಮೂರು ವಿಭೂತಿ ರೇಖೆಗಳನ್ನು ಮೂರು ಆತ್ಮಗಳಾಗಿ ಹೋಲಿಸಿ ಮೊದಲನೆಯದಾದ ಜೀವಾತ್ಮ ಮೂರನೆಯದಾದ ಪರಮಾತ್ಮನನ್ನು ತಿಳಿಯಬೇಕೆಂದರೆ ಮಧ್ಯದಾದ ಆತ್ಮವನ್ನು ತಿಳಿಯಬೇಕೆಂದು, ಅದನ್ನೇ ಆರಾಧಿಸಬೇಕೆಂದು, ಅದೇ ಆಧಾರವೆಂದು ತಿಳಿಯುವಂತೆ ಮಧ್ಯರೇಖೆಗೆ ಗುರುತಿಗಾಗಿ ಬೊಟ್ಟು ಇಟ್ಟಿದ್ದಾರೆ. ಮೂರು ವಿಭೂತಿರೇಖೆಗಳಲ್ಲಿ ಮಧ್ಯದಕ್ಕೆ ಬೊಟ್ಟು ಇಡುವುದು ಅರ್ಥದಿಂದ ಕೂಡಿಕೊಂಡ ಕಾರ್ಯವಾಗುವುದು, ಹಾಗಲ್ಲದೆ ಮಧ್ಯದ್ದನ್ನು ಬಿಟ್ಟು ಕೆಳಗಿನದಕ್ಕೊ ಮೇಲಿನದಕ್ಕೊ ಬೊಟ್ಟು ಇಟ್ಟರೆ ಅದು ಅರ್ಥವಿಲ್ಲದ ಕಾರ್ಯವಾಗುತ್ತದೆ.

(ಇಲ್ಲಿ ಈ ಶ್ಲೋಕದಲ್ಲಿ ಹೇಳಿದ ಸಾರಾಂಶವನ್ನು ಗ್ರಹಿಸಿದಾಗ ಆತ್ಮವನ್ನು ತಿಳಿದರೆ ಪರಮಾತ್ಮವೊಂದರ ಇರುವಿಕೆಯ ವಿಧಾನ ಹೇಗಿರುವುದು ತಿಳಿಯುತ್ತದೆ. ಆದರೆ ಪರಮಾತ್ಮ ಸಂಪೂರ್ಣವಾಗಿ ತಿಳಿದಿದೆಯೆಂದುಕೊಳ್ಳಬಾರದು. ಆತ್ಮವನ್ನು ತಿಳಿಯುವುದರಿಂದ ಪರಮಾತ್ಮ ಎಲ್ಲಕಡೆಯೂ ವ್ಯಾಪಿಸಿದೆಯೆಂಬ ಸತ್ಯ, ಎಲ್ಲವೂ ಆತನಲ್ಲಿಯೇ ಇರುತ್ತದೆಂಬ ಸತ್ಯ ತಿಳಿಯುತ್ತದೆ. ಅಷ್ಟುಮಾತ್ರಕ್ಕೆ ಪೂರ್ತಿ ತಿಳಿದು ಪರಮಾತ್ಮನನ್ನು ಅನುಭವಿಸಿದಂತೆ ಅಲ್ಲ. ನೋಡುವುದಕ್ಕೂ ಅನುಭವಿಸುವುದಕ್ಕೂ ಎಷ್ಟು ವ್ಯತ್ಯಾಸ ಇರುತ್ತದೋ ಇಲ್ಲಿಯೂ ಸಹ ಅಷ್ಟೇ ವ್ಯತ್ಯಾಸ ಇದೆಯೆಂದು ತಿಳಿಯಬೇಕು. ಸಜೀವವಾಗಿ ಆತ್ಮವನ್ನು ಅನುಭವಿಸಬಹುದು ಆದರೆ ಪರಮಾತ್ಮನನ್ನು ಸಜೀವವಾಗಿ ಯಾರು ಅನುಭವಿಸಲಾರರೆಂದು ಜ್ಞಾಪಕ ಇಟ್ಟುಕೊಳ್ಳಬೇಕು.

**(5) ಶ್ಲೋ॥ 31 : ಸರ್ವ ಭೂತ ಸ್ಥಿತಂ ಯೋಮಾಂ ಭಜತ್ಯೇಕತ್ವ ಮಾಸ್ಥಿತಃ ।**
**ಸರ್ವಥಾ ವರ್ತಮಾನೋಽಪಿ ಸಯೋಗೀಮಯಿ ವರ್ತತೇ ॥**
**(ಜೀವಾತ್ಮ, ಆತ್ಮ, ಪರಮಾತ್ಮ)**

**ಭಾವಾರ್ಥ** : ಸರ್ವ ಜೀವರಾಶಿಗಳಲ್ಲಿ ನಾನು ಏಕರೂಪವಾಗಿರುವುದು ತಿಳಿದು ಯಾರು ನನ್ನನ್ನು ಸೇವಿಸುತ್ತಾನೋ, ಹೊಗಳುತ್ತಾನೋ ಅಂತಹ ಯೋಗಿ ಸರ್ವದಾ ಆಚರಿಸುತ್ತಿದ್ದರೂ ಆತನು ನನ್ನಲ್ಲಿಯೇ ಸೇರುತ್ತಾನೆ.

**ವಿವರ** : ಸರ್ವ ಜೀವರಾಶಿಗಳಲ್ಲಿ ಆತ್ಮಗಳಿವೆ ಎಂದು ತಿಳಿದವನು, ಆತ್ಮಗಳಿಗೆ ಆಧಾರವಾದ ಶಕ್ತಿ ಮತ್ತೊಂದು ಇದೆಯೆಂದು ತಿಳಿದವನು, ಆ ಶಕ್ತಿ ಒಳಗೂ ಹೊರಗೂ ಇದೆಯೆಂದು ತಿಳಿದವನು ಯಾರೋ ಅವನು ಯೋಗಗಳನ್ನು ಆಚರಿಸುವುದರಿಂದ ನನ್ನನ್ನು ಆರಾಧಿಸಿದಂತಾಗುತ್ತದೆ. ಅಂತಹವನು ಎಲ್ಲಿ ಏನು ಮಾಡುತ್ತಿದ್ದರೂ, ಆತನು ನನ್ನಲ್ಲಿಯೇ ಮಾಡುತ್ತಾನೆಂದು ಪರಮಾತ್ಮ ತಿಳಿಸಿದ್ದಾನೆ. ಆತ್ಮವನ್ನು ತಿಳಿದವನು ಪರಮಾತ್ಮವೊಂದರ ಇರುವಿಕೆಯನ್ನು ಮಾತ್ರ ತಿಳಿದುಕೊಳ್ಳುತ್ತಿದ್ದಾನೆ. ಆತ್ಮವನ್ನು ಅನುಭವಿಸಿದಂತೆ, ಅದರ ಸುಖ ತಿಳಿದಂತೆ ಪರಮಾತ್ಮನನ್ನು ಅನುಭವಿಸುವುದಾಗಲಿ, ಅದರ ಸುಖ ತಿಳಿಯುವುದಾಗಲಿ ಯಾರಿಗೂ ಸಾಧ್ಯವಿಲ್ಲ. ಯೋಗಿ ಆದವನು ಪರಮಾತ್ಮನ ದೊಡ್ಡತನವನ್ನು, ಆತನ ವ್ಯಾಪಕವನ್ನು ಮತ್ತು ಆತನು ಪ್ರಕೃತಿಗೂ, ಆತ್ಮಕ್ಕೂ ಆಧಾರವೆಂದು ತಿಳಿಯುತ್ತಾನೆ. ಅಷ್ಟೇಯಾಗಲಿ ಆತನಲ್ಲಿ ಪೂರ್ತಿ ಐಕ್ಯವಾಗುವುದಿಲ್ಲ. ಬದುಕಿರುವವನು ಯಾರು ಆತನಂತೆ ಬದಲಾಗುವುದಿಲ್ಲ. ಅದು ಮೋಕ್ಷ ಹೊಂದಿದವರಿಗೆ ಮಾತ್ರ ಸಾಧ್ಯವಾಗುತ್ತದೆ. ಯೋಗಿ ಮೋಕ್ಷಕಾಮಿಯೇ ಆಗಲಿ ಮೋಕ್ಷಯುತನು ಅಲ್ಲ. ಪರಮಾತ್ಮನನ್ನು ಸೇರಬೇಕೆಂಬ ಪ್ರಯತ್ನಪರನೇ ಆಗಲಿ ಪರಮಾತ್ಮನನ್ನು ಸೇರಿದವನಲ್ಲ.

**(5) ಶ್ಲೋ॥ 32 : ಆತ್ಮೌ ಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ ।**
**ಸುಖಂ ವಾ ಯದಿ ವಾದುಃಖಂ ಸಯೋಗೀ ಪರಮೋ ಮತಃ ॥**
**(ಜೀವಾತ್ಮ, ಆತ್ಮ, ಪರಮಾತ್ಮ)**

**ಭಾವಾರ್ಥ** : ಪ್ರಪಂಚದಲ್ಲಿ ಸರ್ವ ಜೀವರಾಶಿಗಳಿಗೆ ಸಂಭವಿಸುವ ಸುಖವಾದರು ದುಃಖವಾದರು ಅವರಲ್ಲಿನ ಆತ್ಮಕ್ಕೆ ಸಮಾನವಾಗಿರುವಂತೆ ನೋಡುವವನು ನಿಜವಾದ ಯೋಗಿ ಎಂದು ನಾನಂದುಕೊಳ್ಳುತ್ತೇನೆ.

**ವಿವರ :** ಬಹಳಜನರು ಈ ಶ್ಲೋಕದಲ್ಲಿಯೂ ಸಹ ಆತ್ಮಕ್ಕೆ ಹೇಳಿಕೊಳ್ಳಬೇಕಾದ ವಿಷಯವನ್ನು ಜೀವಾತ್ಮಕ್ಕೆ ಹೇಳಿಕೊಳ್ಳುವುದು ನಡೆದಿದೆ. ಒಂದು ಕಷ್ಟ ತನಗೆಷ್ಟೋ ಇತರರಿಗೂ ಅಷ್ಟೇ ಆದ್ದರಿಂದ ಜೀವಹಿಂಸೆ ಮಾಡಬಾರದೆಂದೂ ಸಹ ಕೆಲವು ಗೀತಾ ರಚನೆಗಳಲ್ಲಿ ಬರೆಯಲಾಗಿದೆ. ಅಲ್ಲಿ ಅರ್ಜುನನಿಗೆ ಭಗವಂತನು ಯಾರ ಕರ್ಮವನ್ನು ಅವರು ಅನುಭವಿಸುತ್ತಿದ್ದಾರೆ. ನೀನು ಜವಾಬ್ಧಾರಿಯಲ್ಲ, ಪಾಪ ಬಾರದಂತೆ ಕರ್ಮಯೋಗ ಪದ್ಧತಿ ಮೂಲಕ ಯುದ್ಧ ಮಾಡೆಂದಿದ್ದಾನೆ. ಹಾಗೆ ಹೇಳಿದ ಕೃಷ್ಣನು ಶತ್ರುಗಳನ್ನು ಸಾಯಿಸುವುದು ಹಿಂಸೆ ಎಂದು ದಯಾಗುಣವನ್ನು ಬೋಧಿಸುತ್ತಾನಾ? ಒಳ್ಳೆಯದು ಕೆಟ್ಟದೆಂದು ಯೋಚಿಸದೆ ಕರ್ಮರೀತ್ಯ ಕೆಲಸ ಮಾಡೆಂದು ಹೇಳಿದವನೇ ಇದು ಪಾಪ, ಇದು ಪುಣ್ಯ, ಇದು ಮಾಡೆಂದು, ಇದು ಮಾಡಬೇಡೆಂದು ಹೇಳುತ್ತಾನಾ? ಇದೆಲ್ಲವೂ ನೋಡಿ ಆಲೋಚಿಸಿದರೆ ಗೀತೆಯಲ್ಲಿನ ಈ ಶ್ಲೋಕಕ್ಕೆ ವಿವರ ಹೇಳಿದವರದೆ ತಪ್ಪೆಂದು ತಿಳಿಯುತ್ತದೆ.

ನಿಜವಾದ ಅರ್ಥ ಏನೆಂದರೆ ನಿನ್ನ ಶರೀರದಲ್ಲಿನ ಆತ್ಮ ನೀನು ದುಃಖಿಸುತ್ತಿದರು, ಸಂತೋಷಪಟ್ಟರು ಎರಡನ್ನು ಸಮಾನವಾಗಿ ನೋಡುತ್ತಿದೆ. ಹಾಗೆಯೇ ಎಲ್ಲರಲ್ಲಿಯೂ ಅವರವರ ಆತ್ಮ ಆ ಜೀವಾತ್ಮಗಳು ಅನುಭವಿಸುವ ಸುಖವಾದರೂ, ವ್ಯಸನವಾದರು ಸಮಾನವಾಗಿ ನೋಡುತ್ತಿದೆ. ಆತ್ಮ ಸರ್ವ ಜೀವರಾಶಿಗಳಲ್ಲಿ ಕಷ್ಟ ಸುಖಗಳಲ್ಲಿ ಸಮವಾಗಿ ಸಾಕ್ಷಿಯಾಗಿದೆ ಎಂದು ಜ್ಞಾನ ದೃಷ್ಟಿಯಿಂದ ನೋಡಿದವನು ನಿಜವಾದ ಯೋಗಿ ಎಂದು ಪರಮಾತ್ಮ ಹೇಳಿದ್ದಾನೆ. ಶ್ಲೋಕದಲ್ಲಿ ಹೇಳುವವನು ಪರಮಾತ್ಮನಾದರೆ, ಕರ್ಮ ಅನುಭವಿಸುವವನು ಜೀವಾತ್ಮ, ಸಾಕ್ಷಿಯಾಗಿ ಸಮಾನವಾಗಿ ನೋಡುವವನು ಆತ್ಮ. ಮೂವರ ಪುರುಷರ ವಿಷಯ ಶ್ಲೋಕದಲ್ಲಿದೆ.

**ಅರ್ಜುನನು ಹೀಗೆ ಕೇಳಿದ್ದಾನೆ :**

**(5) ಶ್ಲೋ॥ 33 : ಯೋಽಯಂ ಯೋಗಸ್ತ್ವಯಾ ಪ್ರೋಕ್ತಃಸಾಮ್ಯೇನ ಮಧುಸೂದನ !।**
**ಏತಸ್ಯಾಹಂ ನಪಶ್ಯಾಮಿ ಚಂಚಲತ್ವಾತ್ ಸ್ಥಿತಿಮ್ ಸ್ಥಿರಾಮ್ ॥**

**(ಕಲ್ಪಿತ)**

**(5) ಶ್ಲೋ॥ 34 : ಚಂಚಲಮ್ ಹಿ ಮನಃ ಕೃಷ್ಣ ! ಪ್ರಮಾಥಿ ಬಲವ ದ್ಧೃಢಮ್ ।**
**ತಸ್ಯಾಹಂ ನಿಗ್ರಹಂ ಮನ್ಯೇ ವಾ ಯೋರಿವ ಸುದುಷ್ಕರಮ್ ॥**

**(ಬ್ರಹ್ಮಯೋಗ)**

**ಭಾವಾರ್ಥ :** ನನ್ನಲ್ಲಿನ ಮನಸ್ಸು ಚಂಚಲ ಸ್ವಭಾವ ಇರುವುದಾದ್ದರಿಂದ ನೀನು ಹೇಳಿದ ಸ್ಥಿರವಾದ ಸ್ಥಿತಿಯನ್ನು ಯೋಗದಲ್ಲಿ ಪಡೆಯಲಾರದೆ ಆತ್ಮ ಸ್ಥಿತಿಯನ್ನು ತಿಳಿಯದೇ ಇದ್ದೇನೆ. ಅಮಿತ ಚಂಚಲವಾದದು, ದೃಢವಾದದು, ಬಲವಾದುದಾದ ಮನಸ್ಸನ್ನು ನಿಗ್ರಹಿಸುವುದು ದುಸ್ಸಾಧ್ಯವೆಂದು ತೋಚುತ್ತಿದೆ ಕೃಷ್ಣಾ! ಗಾಳಿಯನ್ನು ಯಾರು ಮೂಟೆಕಟ್ಟುತ್ತಾರೆ.

**ವಿವರ :** ಶ್ರೀಕೃಷ್ಣ ಹೇಳಿದ ಮಾತುಗಳೆಲ್ಲಾ ಕೇಳಿ ಅರ್ಜುನನು ಯೋಚಿಸಿ ತನ್ನ ಅನುಮಾನವನ್ನು ತಕ್ಷಣ ಹೊರಗೆ ಹೇಳಿದ್ದಾನೆ. ಗಾಳಿಯನ್ನು ನೂಲಿನ ಬಟ್ಟೆಯಲ್ಲಿ ಮೂಟೆಕಟ್ಟುವುದು ಹೇಗೆ ಸಾಧ್ಯವಾಗುವುದಿಲ್ಲವೋ ಹಾಗೇ ಮನಸ್ಸನ್ನು ನಿಗ್ರಸಿಹಿಕೊಳ್ಳುವುದು ಸಾಧ್ಯವಾಗುವುದಿಲ್ಲವೆಂದು ಅರ್ಜುನನು ಹೇಳಿದ್ದಾನೆ. ಇಲ್ಲಿ ಹೇಳಲಾದ ಎರಡು (33, 34) ಶ್ಲೋಕಗಳಲ್ಲಿ ಎರಡನೆಯದಾದ 34ನೇ ಶ್ಲೋಕವು ಅರ್ಜುನ ಕೇಳಿರುವುದೇ. 33ನೇ ಶ್ಲೋಕದ ವಿಷಯಕ್ಕೆ ಬಂದರೆ ಭಗವಂತನಾದ ಶ್ರೀ ಕೃಷ್ಣನು ಹೇಳುತ್ತಿರುವಾಗಲೇ ಅರ್ಜುನ ಪ್ರಶ್ನೆ ಕೇಳಿದ್ದಾನೆ. ಆ ಶ್ಲೋಕದಲ್ಲಿ ಅರ್ಜುನ ಯೋಗ ಮಾಡಿ ಮನಸ್ಸು ಸ್ವಾಧೀನಪಡದಿರುವಾಗ ನೀನು ಹೇಳಿದಂತೆ ಯೋಗವನ್ನು ಮಾಡಿದಾಗ ನನ್ನ ಮನಸ್ಸು ಸ್ವಾಧೀನಪಡಲಿಲ್ಲ. ಆತ್ಮವನ್ನು ಸರ್ವರಲ್ಲಿ ನೋಡಲಾರದೆ ಹೋಗಿದ್ದೇನೆಂದರೆ ನಿಜವೆಂದು ಒಪ್ಪಿಕೊಳ್ಳಬಹುದು. ಹಾಗಲ್ಲದೆ ಹೇಳುವುದು ನಿಲ್ಲಿಸದೆ, ಕೇಳುವುದು ಮುಗಿಯದೇ ಯೋಗ ಮಾಡಿದಂತೆ ಆತನ ಅನುಭವವನ್ನು ಆರ್ಜುನನು ಹೇಳಿದ್ದಾನೆನ್ನುವುದು ಪೂರ್ತಿ ಅಸತ್ಯ. ಆದ್ದರಿಂದ ಈ ಎರಡು ಶ್ಲೋಕಗಳಲ್ಲಿ ಕೆಳಗಿನದಾದ 34ನೇ ಶ್ಲೋಕ ವಾಸ್ತವವೆಂದು 33ನೇ ಶ್ಲೋಕ ಅವಾಸ್ತವವೆಂದು ತಿಳಿಯಬೇಕು.

**ಶ್ರೀ ಭಗವಂತನು ಹೀಗೆ ಹೇಳಿದನು :–**

**(5) ಶ್ಲೋ॥ 35 : ಅಸಂಶಯಂ ಮಹಾಬಾಹೋ! ಮನೋದುರ್ನಿ ಗ್ರಹಂಚಲಮ್ ।**
**ಅಭ್ಯಾಸೇನ ತು ಕೌಂತೇಯ ! ವೈರಾಗ್ಯೇಣ ಚ ಗೃಹ್ಯತೇ ॥**
**(ಬ್ರಹ್ಮಯೋಗ)**

**(5) ಶ್ಲೋ॥ 36 : ಅಸಂಯ ತಾತ್ಮನಾ ಯೋಗೋ ದುಷ್ಪ್ರಾಪ ಇತಿಮೇಮತಿಃ ।**
**ವಶ್ಯಾತ್ಮನಾ ತು ಯತತಾ ಶಕ್ಯೋಽವಾಪ್ತು ಮುಪಾಯತಃ ॥**
**(ಬ್ರಹ್ಮಯೋಗ)**

**ಭಾವಾರ್ಥ :** ಅರ್ಜುನಾ! ನೀನು ಹೇಳುವ ಮಾತುಗಳಲ್ಲಿ ಅನುಮಾನವಿಲ್ಲ. ಮನಸ್ಸು ನಿಗ್ರಹಿಸಲ್ಪಡದಿರುವುದು, ಚಂಚಲವಾದುದು. ಅಂತಹ ಮನಸ್ಸನ್ನು ಅಭ್ಯಾಸ ವೈರಾಗ್ಯಗಳಿಂದ

ನಿಲ್ಲಿಸಬೇಕು. ಮನಸ್ಸು ನಿಲ್ಲಿಸದೆ ಹೋದರೆ ಈ ಯೋಗವನ್ನು ಹೊಂದುವುದಕ್ಕೆ ಸಾಧ್ಯವಾಗುವುದಿಲ್ಲ. ಆದ ಕಾರಣ ಮನಸ್ಸನ್ನು ನಿಗ್ರಹಿಸುವುದಕ್ಕೆ ಮಾಡುವ ಪ್ರಯತ್ನವೇ ಒಳ್ಳೆಯ ಉಪಾಯ.

**ವಿವರ** : ಅರ್ಜುನ ಕೇಳಿದ ಪ್ರಶ್ನೆಗೆ ಭಗವಂತನ ಉತ್ತರದಲ್ಲಿ ಹೊಸತನವೇನು ಇಲ್ಲ. ಇದಕ್ಕೂ ಮೊದಲು ಹೇಳಿದಂತೆ ಸಾಧನೆ ಹೊರತು ಬೇರೆ ಉಪಾಯವಿಲ್ಲವೆಂದು ಧೃಢಪಡಿಸಿ ಹೇಳಿದ್ದಾನೆ. ಏನೋ ಕೇಳಿದ್ದಾನಲ್ಲವೆಯೆಂದು ಯಾವ ರಿಯಾಯಿತಿ ಕೊಡಲಿಲ್ಲ. ತಪ್ಪದೇ ಅಭ್ಯಾಸ ಮಾಡಬೇಕಾಗಿದೆ, ಆ ಅಭ್ಯಾಸದಲ್ಲಿ ವಿಷಯಗಳಲ್ಲಿ ಮನಸ್ಸಿಗೆ ವೈರಾಗ್ಯವು ಉಂಟು ಮಾಡಬೇಕಾಗಿದೆ. ಅದೇ ಮನಸ್ಸನ್ನು ಜಯಿಸುವುದಕ್ಕೆ ಮುಖ್ಯವಾದ ಉಪಾಯ. ಮನಸ್ಸು ನಿಗ್ರಹಿಸುವುದು ಕಷ್ಟತರವಾದ ಕೆಲಸವೇ ಎಂದು ಭಗವಂತನೂ ಸಹ ಹೇಳಿದ್ದಾನೆ. ಮತ್ತು ಆತನೇ ಅದಕ್ಕೆ ಬೇಕಾದ ಉಪಾಯವೂ ಸಹ ಹೇಳಿದ್ದಾನೆ. ಆದ್ದರಿಂದ ಬ್ರಹ್ಮಯೋಗ ಸಾಧಕರು ಅಭ್ಯಾಸದಿಂದಲೇ ಮನಸ್ಸನ್ನು ಸ್ವಾಧೀನಪಡಿಸಿಕೊಳ್ಳಬೇಕು. ಶಬ್ಧಕ್ಕೆ ಸಂಬಂಧಿ ಸಿದ ಮತ್ತು ದೃಶ್ಯಕ್ಕೆ ಸಂಬಂಧಿಸಿದ ಮಂತ್ರಗಳು, ಆಕಾರಗಳು ಯೋಗ ಸಾಧನೆ ಅಲ್ಲವೆಂದು ತಿಳಿಯಬೇಕು. ಆ ಸಾಧನೆಯಲ್ಲಿ ಮನಸ್ಸನ್ನು ನಿಗ್ರಹಿಸಿಕೊಳ್ಳಬೇಕಾದ ಅವಶ್ಯಕತೆ ಇಲ್ಲ.

**ಅರ್ಜುನನು ಹೀಗೆ ಕೇಳಿದನು :**

**(5) ಶ್ಲೋ॥ 37 : ಅಯತಿಃ ಶ್ರದ್ಧಯೋ ಪೇತೋ ಯೋಗಾಚ್ಚಲಿತಮಾನಸಃ ।**
**ಅಪ್ರಾಪ್ಯ ಯೋಗ ಸಂಸಿದ್ಧಿಂ ಕಾಂ ಗತಿಂ ಕೃಷ್ಣ ! ಗಚ್ಛತಿ?**

**(ಬ್ರಹ್ಮಯೋಗ)**

**(5) ಶ್ಲೋ॥ 38 : ಕಚ್ಚಿನ್ನೋಭಯ ವಿಭ್ರಷ್ಟಶ್ ಛಿನ್ನಾ ಭ್ರ ಮಿವ ನಶ್ಯತಿ ।**
**ಅಪ್ರತಿಷ್ಠೋ ಮಹೋಬಾಹೋ ! ವಿಮೂಢೋ ಬ್ರಹ್ಮಣಃ ಪಥಿ? ॥**

**(ಬ್ರಹ್ಮಯೋಗ)**

**(5) ಶ್ಲೋ॥ 39 : ಏತಂ ಮೇ ಸಂಶಯಂ ಕೃಷ್ಣ ! ಛೇತ್ತು ಮರ್ಹಸ್ಯಶೇಷತಃ ।**
**ತ್ವದನ್ಯ ಸ್ಸಂಶಯ ಸ್ಯಾಸ್ಯಛ್ಛೇತ್ತಾ ನ ಹ್ಯುಪಪದ್ಯತೇ ॥**

**(ಬ್ರಹ್ಮಯೋಗ)**

**ಭಾವಾರ್ಥ** : ಶ್ರದ್ಧೆ ಹೊಂದಿದ್ದು ಸಂಪೂರ್ಣ ಪ್ರಯತ್ನ ಮಾಡಿದರು ಮನೋಚಲನೆಯಿಂದ ಯೋಗಿ ಆಗದಿರುವವನ ಗತಿ ಏನು? ಆತ್ಮದರ್ಶನ ಮಾರ್ಗದಲ್ಲಿ ಅಪ್ರತಿಷ್ಟನಾದ

ಮೂಢನ ಗತಿ ಏನು? ಓ ಕೃಷ್ಣಾ ನನಗಿರುವ ಈ ಸಂಶಯವನ್ನು ನೀನೇ ತೀರಿಸಬೇಕು. ನೀನು ಹೊರತು ನನ್ನ ಸಂಶಯವನ್ನು ಇತರರ್‍ಯಾರು ತೀರಿಸುವುದಿಲ್ಲ.

**ವಿವರ :** ಬ್ರಹ್ಮಯೋಗವಾಚರಿಸಿ ಅದರ ಮೂಲಕ ಆತ್ಮವನ್ನು ತಿಳಿಯಬೇಕೆಂದುಕೊಂಡವನು ಪೂರ್ತಿ ಶ್ರದ್ಧೆಯಿಂದ ಯೋಗಸಾಧನೆ ಮಾಡುತ್ತಿರುವಾಗ, ಮನಸ್ಸು ವಿಷಯ ಧ್ಯಾಸಗಳಿಂದ ಮರಳದೆ ಯೋಗ ಲಭ್ಯವಾಗಲಿಲ್ಲ. ಆದರೆ ಅವನು ಹಾಗೆಯೇ ಪಟ್ಟು ಹಿಡಿದು ಸಾಧನೆ ಮಾಡುತ್ತಿರುವಾಗ ಆಯುವು ಮುಗಿದು ಹೋಗಿರುವುದರಿಂದ ಮರಣ ಸಂಭವಿಸಿದೆ. ಅಂತಹವನನ್ನು ಕುರಿತು ಅರ್ಜುನನಿಗೆ ಅನುಮಾನ ಬಂದಿದೆ. ಅವನು ಎಲ್ಲರಂತೆ ಪ್ರಪಂಚ ವಿಷಯಗಳಲ್ಲಿ ಇಲ್ಲದಂತೆ ಆತ್ಮವನ್ನು ತಿಳಿದುಕೊಳ್ಳಬೇಕೆಂಬ ಪ್ರಯತ್ನದಲ್ಲಿ ಯೋಗಸಾಧನೆ ಮಾಡುತ್ತಿದ್ದಾನೆ. ಆದರೂ ಅವನು ಪೂರ್ತಿಯಾಗಿ ಯೋಗಸಾಧಿಸದೆ ಸತ್ತುಹೋದರೆ ಅವನ ಹುಟ್ಟು ಹೇಗಿರುತ್ತದೋ? ಈಗ ಮಾಡಿದ ಯೋಗಸಾಧನೆಯ ಪ್ರಯತ್ನವೆಲ್ಲವೂ ವ್ಯರ್ಥವಾ? ಅಥವಾ ಅಷ್ಟೋ ಇಷ್ಟೋ ಫಲಿತವಿರುತ್ತದಾ? ಈ ಜನ್ಮದಲ್ಲಿನ ಜ್ಞಾನ ಮರು ಜನ್ಮದಲ್ಲಿ ಉಂಟಾಗುತ್ತದಾ? ಹೀಗೆ ಅನೇಕ ಪ್ರಶ್ನೆಗಳು ಅರ್ಜುನನಿಗೆ ಬಂದಾಗ ಬಂದಿರುವ ಸಂಶಯವನ್ನು ಕೂಡಲೇ ಕೇಳಿದನು. ವಾಸ್ತವಕ್ಕೆ ಬ್ರಹ್ಮಯೋಗಿ ಯೋಗ ಹೊಂದಿದ ನಂತರವೂ ಸಹ ಕರ್ಮ ಮುಗಿದುಹೋಗುವವರೆಗೂ ಕೆಲವು ಜನ್ಮಗಳು ಎತ್ತಬೇಕಾಗಿರುತ್ತದೆ. ಮೋಕ್ಷ ಹೊಂದುವುದಕ್ಕೆ ಪೂರ್ತಿಯಾಗಿ ಕರ್ಮ ಮುಗಿದುಹೋಗಬೇಕಲ್ಲವೆ! ಯೋಗದಿಂದ ಕರ್ಮ ಖಾಲಿಯಾಗುವವರೆಗೂ ಯೋಗಿಗೆ ಜನ್ಮಗಳಿರಬೇಕು. ಒಂದೇ ಜನ್ಮದಲ್ಲಿ ಪೂರ್ತಿ ಕರ್ಮ ಮುಗಿದುಹೋಗುವುದಿಲ್ಲ. ಅಂತಹ ಜನ್ಮರಾಹಿತ್ಯ ಪ್ರಯತ್ನದಲ್ಲಿರುವವನ ಜನ್ಮಗಳ ಬಗ್ಗೆ ಭಗವಂತನು ಹೀಗೆ ಹೇಳುತ್ತಿದ್ದಾನೆ.

**ಶ್ರೀ ಭಗವಂತನು ಹೀಗೆ ಹೇಳಿದನು :–**

**(5) ಶ್ಲೋ॥ 40 : ಪಾರ್ಥ! ನೈವೇಹ ನಾಽಮುತ್ರ ವಿನಾಶಸ್ತಸ್ಯ ವಿದ್ಯತೇ ।**
**ನಹಿ ಕಲ್ಯಾಣಕೃ ತ್ಕಶ್ಚಿ ದ್ದುರ್ಗತಿಂ ತಾತ ! ಗಚ್ಛತಿ ॥**

**(ಜಿವಿಯು)**

**ಭಾವಾರ್ಥ :** ಒಳ್ಳೆಯ ಕೆಲಸಗಳು ಮಾಡುವವನಿಗೆ ಒಳ್ಳೆಯದೇ ನಡೆಯುತ್ತದೆ. ಈ ಜನ್ಮದಲ್ಲಾಗಲಿ ಮತ್ತೆ ಯಾವ ಜನ್ಮದಲ್ಲಾಗಲಿ ಅವನ ಸಾಧನೆಗೆ ನಾಶ ಇರುವುದಿಲ್ಲ.

**ವಿವರ :** ಒಳ್ಳೆಯದು ಮಾಡುವವನಿಗೆ ಒಳ್ಳೆಯ ಫಲಿತ ತಪ್ಪದೇ ಇರುತ್ತದೆ. ಈ ಜನ್ಮದಲ್ಲಿ ಯೋಗವಾಚರಿಸಿ ಮರಣದೊಳಗೆ ಸಾಧಿಸದಿರುವ ಯೋಗಿಗೆ ಕೆಟ್ಟದ್ದು ಎಂದಿಗೂ

ನಡೆಯುವುದಿಲ್ಲ. ಅವನ ಮನಸ್ಸಿನಲ್ಲಿ ಉದ್ದೇಶ ಏನಿರುತ್ತದೋ ಮರಣಾನಂತರ ಮರು ಜನ್ಮದಲ್ಲಿಯೂ ಅದೇ ಇರುತ್ತದೆ. ಆದ್ದರಿಂದಲೇ ಹುಟ್ಟಿ ಬೆಳೆಯುವವರು ಸ್ವಲ್ಪ ವಯಸ್ಸಿಗೆ ಒಬ್ಬೊಬ್ಬನು ಒಂದೊಂದು ಕೆಲಸದಲ್ಲಿ ಆಸಕ್ತಿ ತೋರಿಸುವವನಾಗಿರುತ್ತಾನೆ. ಅವನಿಗಿರುವ ಆಸಕ್ತಿ ಪ್ರಕಾರವೇ ಆ ಕೆಲಸದಲ್ಲಿ ಪ್ರಾವೀಣ್ಯತೆ ಸಂಪಾದಿಸುತ್ತಾನೆ. ಚಿಕ್ಕ ವಯಸ್ಸಿನಲ್ಲಿಯೇ ಸಂಗೀತ ಎಲ್ಲವನ್ನು ಸಾಧಿಸಿದವನು ಕಳೆದ ಜನ್ಮದಲ್ಲಿ ಸಂಗೀತ ಸಾಧಕನಾಗಿರುತ್ತಾನೆ. ಹಾಗೆ ಯೋಗವಿದ್ಯೆಯಲ್ಲಿಯೂ ಸಹ ಇರಬಹುದು.

**(5) ಶ್ಲೋ॥ 41 : ಪ್ರಾಪ್ಯ ಪುಣ್ಯ ಕೃತಾಂ ಲೋಕಾ ನುಷಿತ್ವಾ ಶಾಶ್ವತೀ ಸ್ಸಮಾಃ ।**
**ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ ॥**
**(ಜೀವಾತ್ಮ)**

**ಭಾವಾರ್ಥ :** ಯೋಗಭ್ರಷ್ಟರಾದವರು ಪುಣ್ಯ ಮಾಡಿದವರು ಹೊಂದುವ ಲೋಕಗಳನ್ನೇ ತಾವೂ ಹೊಂದಿ, ಪರಿಶುದ್ಧವಾದ ಜ್ಞಾನ ಇರುವವರ ಮನೆಯಲ್ಲಿ ಹುಟ್ಟುತ್ತಾರೆ.

**ವಿವರ :** ಇಲ್ಲಿ ಈ ಶ್ಲೋಕದಲ್ಲಿ ಇತರರು ಬರೆದಿರುವುದಕ್ಕು ನಾವು ಬರೆಯುವುದಕ್ಕೂ ಬಹಳ ವ್ಯತ್ಯಾಸವಿದೆ. ಒಂದು ಎರಡು ಶ್ಲೋಕಗಳಿಗಾದರೆ ಏನೋ ತಿಳಿಯದೆ ತಪ್ಪು ಮಾಡಿದ್ದಾರೆಂದುಕೊಂಡು ಸರಿಪಡಿಸಿ ಬರೆಯಬಹುದು. ಬಹಳ ಶ್ಲೋಕಗಳಿಗೆ ಭಾವಗಳನ್ನು ಸರಿಮಾಡಿ ಮೊದಲು ಬರೆದವರಿಗೆ ವಿರುದ್ಧ ದಿಕ್ಕಿನಲ್ಲಿ ಬರೆಯಬೇಕೆಂದರೆ ನಮಗೂ ಸಹ ಕಷ್ಟವೇ. ಬಹಳ ಕಡೆ ವಿಭೇದಿಸುವುದರಿಂದ ಕೆಲವರು ನಮ್ಮ ಬರಹಗಳೆ ತಪ್ಪೆಂದುಕೊಳ್ಳುವುದಕ್ಕೆ ಅವಕಾಶವಿದೆ. ಇಷ್ಟು ಶ್ಲೋಕಗಳಿಗೆ ತಪ್ಪು ಬರೆದಿರುತ್ತಾರಾ! ಎನ್ನುವ ಅನುಮಾನ ಯಾರಿಗಾದರೂ ಬಾರದೇ ಇರುವುದಿಲ್ಲ. ಆ ಅನುಮಾನ ನಮಗೇ ಬರುತ್ತದೆಂದರೆ ನಂಬುವುದಿಲ್ಲ. ಎಷ್ಟೋ ಚಿಕ್ಕ ವಿಷಯವನ್ನೂ ಸಹ ಕುರುಡರಂತೆ ತಪ್ಪಾಗಿ ಬರೆದಿರುವುದನ್ನು ನೋಡಿ ದೊಡ್ಡವರು ಹೀಗೆ ಬರೆಯುವುದೇನೆಂದು ಅಂದುಕೊಳ್ಳಬೇಕಾಗಿದ್ದೆ. ದೈವ ವಿರುದ್ಧವಾದ ಮಾಯೆ ಸಾಮಾನ್ಯ ಪ್ರಜೆಗಳೆಲ್ಲರಿಗಿಂತ ಬೋಧಕರ ಮೇಲೇ ಹೆಚ್ಚಾಗಿ ಕೆಲಸ ಮಾಡುತ್ತದೆ. ಏಕೆಂದರೆ ಇವರು ಹೇಳುವ ಬೋಧನೆಯನ್ನನುಸರಿಸಿ ಉಳಿದ ಪ್ರಜೆಗಳು ನಡೆದುಕೊಳ್ಳುತ್ತಿದ್ದಾರೆ. ಮೊದಲು ಬೋಧಕರನ್ನೇ ತಪ್ಪುದಾರಿ ಹಿಡಿಸಿದರೆ ಎಲ್ಲರನ್ನೂ ಹಿಡಿಸಿದಂತಾಗುತ್ತದೆ. ಆದ್ದರಿಂದ ಬೋಧಕರ ತಲೆಯಲ್ಲಿರುವ ಮಾಯೆ ಅಲ್ಲಲ್ಲಿ ತಪ್ಪುದಾರಿ ಹಿಡಿಸಿ ಬರೆಯಿಸಿದೆಂದುಕೊಳ್ಳುತ್ತೇವೆ. ಹಾಗೆ ಅಲ್ಲದಿದ್ದರೆ ಯೋಗ ಸಾಧಕರು ಧನಿಕರ ಮನೆಯಲ್ಲಿ ಹುಟ್ಟುವುದೇನು? ಶ್ರೀಮಂತರಿಗೆ ಜ್ಞಾನ ಲಭಿಸುವುದು ಸೂಜಿ ರಂಧ್ರದಲ್ಲಿ

ಒಂಟೆ ತೂರಿದಂತೆ ಎಂದು ಏಸುಪ್ರಭು ಹೇಳಿದ್ದಾನೆ. ವಾಸ್ತವವಾಗಿ ಅನುಭವಪೂರ್ವಕವಾಗಿ ನೋಡಿದರೂ, ಕಷ್ಟಗಳಲ್ಲಿ ಇರುವವನೆ ಅಷ್ಟೋ ಇಷ್ಟೋ ದೈವವನ್ನು ತಿಳಿದುಕೊಳ್ಳುತ್ತಿದ್ದಾನೆ ಹೊರತು, ಧನಿಕರಲ್ಲಿ ಆ ಧ್ಯಾಸ ಇಲ್ಲವೆಂದೇ ಹೇಳಬಹುದು. ಧನಿಕನಾಗಿರುವವನು ಪುನಃ ಹಣವನ್ನೇ ಸಂಪಾದಿಸುವ ಧ್ಯಾಸದಲ್ಲಿ ಮುಳುಗಿದ್ದಾನೆ. ಧನಿಕರಲ್ಲಿ ಎಲ್ಲಿಯಾದರೂ ಭಕ್ತಿ ಕಾಣಿಸಿದರೆ ಅದು ಹಣದಿಂದ ಮಾಡಿಸುವುದೇ ಆಗಲಿ ಮನಸ್ಸಿನಿಂದ ಮಾಡುವುದಾಗಿರುವುದಿಲ್ಲ.

ಇನ್ನೊಂದು ವಿಧವಾಗಿ ಗಮನಿಸಿದರೆ ಯೋಗಭ್ರಷ್ಟರು ಶ್ರೀಮಂತರ ಮನೆಯಲ್ಲಿ ಹುಟ್ಟುತ್ತಾರೆಂಬ ಮಾತು ಹಿರಿಯರು ಕುರುಡರಂತೆ ಬರೆದಿರುವುದೇ ಹೊರತು ವಾಸ್ತವ ಅಲ್ಲವೆಂದು ಹೇಳಬಹುದು. ಏಕೆಂದರೆ ಈ ದಿನ ಹಣ ಇರುವವರು ಬೆಳಗ್ಗೆ ಎದ್ದು ಪಾಪದ ಕೆಲಸಗಳು ಮಾಡುವುದರಲ್ಲಿ ನಿಮಗ್ನರಾಗಿದ್ದಾರೆ. ಇದರಿಂದ ಅವರಿಗೆ ಹಿಂದಿನ ಜನ್ಮಗಳಲ್ಲಿ ಜ್ಞಾನ ಎಂಬುವುದು ಸ್ವಲ್ಪವೂ ಇಲ್ಲವೆಂದೇ ಹೇಳಬಹುದು. ಮತ್ತೆ ಕೆಲವರು ಧನಿಕರಾದವರು ಜ್ಞಾನಿಗಳನ್ನು ಸಹಿತವು ಅವರ ಮಾತಿನ ಪ್ರಕಾರ ನಡೆಯಬೇಕೆಂದು ಹೇಳುತ್ತಿದ್ದಾರೆ. ಗುರುಗಳೆಂದರೂ, ಯೋಗಿಗಳೆಂದರೂ ಯಾವ ಬೆಲೆಕೊಡದೆ ಹಣ ಇರುವವರು ಪೂರ್ವಜನ್ಮದಲ್ಲಿ ಯೋಗಿಗಳಾ? ಆದುದರಿಂದ ಯೋಗಭ್ರಷ್ಟರಾದವರು ಶ್ರೀಮಂತರ ಮನೆಯಲ್ಲಿ ಹುಟ್ಟುವುದು ಶುದ್ಧ ಅಸತ್ಯ. ಶ್ರೀಮಂತರ ಮನೆಯಲ್ಲಿ ಹುಟ್ಟಿದವರು ಒಂದುವೇಳೆ ಈ ಜನ್ಮದಲ್ಲಿ ಜ್ಞಾನ ಸಂಪಾದಿಸಿಕೊಳ್ಳುವುದು ನಡೆಯಬಹುದು. ಈಗಿನ ಧನಿಕರು ಹಿಂದಿನ ಯೋಗಿಗಳು ಮಾತ್ರ ಅಲ್ಲ.

ಮೇಲಿನ ಶ್ಲೋಕದಲ್ಲಿ **'ಶ್ರೀಮತಾಂಗೇಹೇ ಯೋಗ ಭ್ರಷ್ಟೋಭಿಜಾಯತೇ'** ಎನ್ನುವ ಮಾತಿನಲ್ಲಿ **'ಶ್ರೀಮತಾಂ'** ಎನ್ನುವ ಮಾತಿಗೆ ಶ್ರೀಮತರು ಎಂದು ಅರ್ಥ. ಶ್ರೀ ಎಂದರೆ ಶುಭವಾದ, ಮತಿ ಎಂದರೆ ಜ್ಞಾನ. ಶ್ರೀಮತಾಂ ಎಂದರೆ ಶುಭಪ್ರದವಾದ ಆತ್ಮಜ್ಞಾನ ಇರುವವರೆಂದು ಅರ್ಥ ಇರುವಾಗ **ಶ್ರೀಮತಾಂ** ಎನ್ನುವ ಪದಕ್ಕೆ ಧನಿಕರೆನ್ನುವುದೇನು. **ಶ್ರೀಮಂತಾಂ** ಎಂದರೆ ಧನಿಕರೆಂದೇ ಹೇಳಬಹುದು. ಆದರೆ **ಶ್ರೀಮತಾಂ** ಎನ್ನುವ ಮಾತಿಗೆ ಜ್ಞಾನಿಗಳೆಂದು ಹೇಳಬೇಕು. ಬಹಳ ಜನರು ಬರೆದಂತೆ ಯೋಗಿಗಳು ಮರು ಜನ್ಮದಲ್ಲಿ ಧನಿಕರಾಗಿ ಹುಟ್ಟುತ್ತಾರೆಂಬ ಮಾತು ಬಿಟ್ಟು, ಯೋಗಿಗಳಿಗೆ ಮರುಜನ್ಮ ಯೋಗಿಗಳ ಗೃಹಗಳಲ್ಲಿಯೇ ಉಂಟಾಗುತ್ತದೆಂಬ ಅರ್ಥದಿಂದಲೇ ಹೇಳಿಕೊಳ್ಳೋಣ.

ನಾವು ಮಾಡುವ ಕೆಲಸಗಳನ್ನನುಸರಿಸಿ ಪಾಪಪುಣ್ಯಗಳು ಬರುವುದು ನಡೆಯುತ್ತದೆ. ವಿಧವಿಧದ ಪಾಪಪುಣ್ಯಗಳಲ್ಲಿ ಭಕ್ತಿಮಾರ್ಗದ ಪುಣ್ಯಗಳೂ ಸಹ ಇರುತ್ತವೆ. ಅಂತಹ ಪುಣ್ಯ ಇರುವವನು ಸಾತ್ತ್ವಿಕರಾಗಿ ಹುಟ್ಟುತ್ತಿದ್ದಾರೆ. ಅವರಿಗಿರುವ ಭಕ್ತಿ ಪ್ರವೃತ್ತಿಗಳನ್ನನುಸರಿಸಿ ನವಿಲುಗರಿಯಲ್ಲಿ ತೋರಿಸಿದಂತೆ ಆತ್ಮಕ್ಕೆ ಹತ್ತಿರವಿರುವ ಗುಣಭಾಗವಾದ ಸಾತ್ತ್ವಿಕದಲ್ಲಿ ಹುಟ್ಟುತ್ತಿದ್ದಾರೆ. ಸಾತ್ತ್ವಿಕ ಗುಣ ಭಾಗದಲ್ಲಿರುವವರು ಪರಿಪೂರ್ಣ ಜ್ಞಾನಿಗಳಾಗಿ ಕಡೆಗೆ ಯೋಗಿಗಳಾಗುವುದಕ್ಕೆ ಅವಕಾಶವಿದೆ. ತಾಮಸ, ರಾಜಸ, ಸಾತ್ತ್ವಿಕಗಳಾದ ಮೂರುಲೋಕಗಳಲ್ಲಿ ಯೋಗಭ್ರಷ್ಟರಾದವರು ಸಾತ್ತ್ವಿಕ ಲೋಕದಲ್ಲಿ ಹುಟ್ಟುತ್ತಿರುತ್ತಾರೆ. ಅವರು ಮೋಕ್ಷ ಹೊಂದುವವರೆಗೂ ಎಷ್ಟು ಜನ್ಮಗಳು ಉಂಟಾದರೂ, ಶಾಶ್ವತವಾಗಿ ಜನ್ಮಗಳೆಲ್ಲಾ ಸಮಾನವಾಗಿ ಸಾತ್ತ್ವಿಕದಲ್ಲಿಯೇ ಉಂಟಾಗುತ್ತವೆ. ಸಾತ್ತ್ವಿಕ ಲೋಕದಲ್ಲಿರುವ ಮನುಷ್ಯರಲ್ಲಿ ಪರಿಶುದ್ಧ ಪವಿತ್ರ ಆತ್ಮಜ್ಞಾನ ಹೊಂದಿದವರಿರುವ ಗೃಹಗಳಲ್ಲಿಯೇ ಜನ್ಮಿಸುತ್ತಾರೆ. ತಾಯಿತಂದೆಯರೇ ಜ್ಞಾನಿಗಳಾಗಿರಬೇಕಾದ ಅವಶ್ಯಕತೆ ಇಲ್ಲ. ಹುಟ್ಟುವ ಮನೆಯಲ್ಲಿ ತಾತ ಮುತ್ತಾತರಾದರು ಜ್ಞಾನಿಗಳಾಗಿರಬೇಕು. ಆಗಿರುವುದರಿಂದ ಅವರ ವಂಶಪರಂಪರೆಗೆ ಸಂಬಂಧಿಸಿದ ಜೀನ್ಸ್‌ನಿಂದ ಮಗನಾಗಿಯೋ, ಮೊಮ್ಮಗನಾಗಿಯೋ, ಮರಿಮೊಮ್ಮಗ ನಾಗಿಯೋ ಹುಟ್ಟಬಹುದು.

ಈ ವಿಷಯವೆಲ್ಲವನ್ನು ಅನುಸರಿಸಿ ನೋಡಿದರೆ ಮೇಲಿನ ಶ್ಲೋಕವೊಂದರ ನಿಜಭಾವನೆ ಹೀಗಿದೆ. ಯೋಗಭ್ರಷ್ಟನಾದವನು ಪುಣ್ಯಪರರಿಗೆ ಲಭಿಸುವ ಸಾತ್ತ್ವಿಕ ಲೋಕದಲ್ಲಿ ಎಷ್ಟೋ ಜನ್ಮಗಳು ಸಮಾನವಾಗಿ ಉಂಟಾಗುತ್ತಿರುತ್ತವೆ. ಆ ಜನ್ಮಗಳು ಶುಚಿ ಹೊಂದಿದ ಪವಿತ್ರವಾದ ಜ್ಞಾನವಿರುವ ಮನೆಗಳಲ್ಲಿಯೇ ಉಂಟಾಗುತ್ತದೆ. ಇದಕ್ಕೂ ಮೀರಿ ಬೇರೆ ಅರ್ಥಮಾಡಿಕೊಳ್ಳಬಾರದು. ಲೋಕಗಳೆಂದರೆ ಸ್ವರ್ಗ, ನರಕಲೋಕಗಳೆಂದು ಅವು ಎಲ್ಲೋ ಇವೆಯೆಂದು ಹೇಳಿಕೊಳ್ಳಬಾರದು. ಲೋಕಗಳಿರುವುದು ಮೂರೇ, ಅವು ನಮ್ಮಲ್ಲಿಯೇ ಇವೆ. ಲೋಕಗಳು ನಮ್ಮಲ್ಲಿ ಹೊರತು ಹೊರಗಡೆ ಎಲ್ಲಿಯೂ ಇಲ್ಲ. ಇವು ಮೂರು ಅಲ್ಲದೆ ಲೋಕವಲ್ಲದಲೋಕ ಒಂದಿದೆ. ಅದನ್ನು ಸೇರಿಸಿ ನಾಲ್ಕು ಲೋಕಗಳಾಗುತ್ತವೆ. ಅದನ್ನೇ **ಮೂರು ಲೋಕಗಳಾಚೆ ಆಲೋಕವಿದೆ ಎಂದು** ಪೋತನ ಎಂಬ ಕವಿಯೂ ಸಹ ಹೇಳಿದ್ದಾನೆ. ಸ್ವರ್ಗನರಕ ಲೋಕಗಳು ಎಲ್ಲಿವೆ ಎಂಬ ಅನುಮಾನ ಕೆಲವರಿಗಿರಬಹುದು. ಮೂರು ಲೋಕಗಳಾದ ಅವುಗಳಲ್ಲಿಯೇ ಸ್ವರ್ಗನರಕಗಳಿವೆ. ಶರೀರದಲ್ಲಿಯೇ ಅನುಭವಿಸುವ ಸುಖಗಳು ಸ್ವರ್ಗ. ಮತ್ತು ಶರೀರದಲ್ಲಿಯೇ ಅನುಭವಿಸುವ ಕಷ್ಟಗಳು ನರಕ. ಸ್ವರ್ಗನರಕ

ಗಳೆರಡು ನಮ್ಮ ಶರೀರದಲ್ಲಿ ಸಜೀವವಾಗಿರುವಾಗಲೇ ಇವೆ. ಅವು ಮೂರು ಗುಣಭಾಗದಲ್ಲಿಯೇ ಇವೆ. ಆದ್ದರಿಂದ ಅವುಗಳನ್ನೂ ಲೋಕಗಳೆನ್ನಲಾಗಿದೆ. ಅವು ಮೂರು ಲೋಕಗಳಲ್ಲಿರುವವೇ ಎಂದು ತಿಳಿಯಬೇಕು. ಈ ಶ್ಲೋಕದ ವಿವರ ಅರ್ಥವಾಗುವುದಕ್ಕೆ ಚೆನ್ನಾಗಿ ಆಲೋಚಿಸಬೇಕೆಂದು ಕೋರುತ್ತಿದ್ದೇವೆ.

**(5) ಶ್ಲೋ॥ 42 : ಅಥವಾ ಯೋಗಿನಾ ಮೇವ ಕುಲೇ ಭವತಿ ಧೀಮತಾಮ್ ।**
**ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಮ್ ॥**

**(ಜೀವಾತ್ಮ)**

**ಭಾವಾರ್ಥ** : ಹಾಗಲ್ಲದಿದ್ದರೂ ಧೀಮಂತರಾದ ಯೋಗಿಗಳ ವಂಶದಲ್ಲಿಯಾದರೂ ಹುಟ್ಟುತ್ತಾನೆ. ಅಂತಹ ಲೋಕದ ಜನ್ಮ ಹೊಂದುವುದು ಎಷ್ಟೋ ದುರ್ಲಭ ಅಲ್ಲವೇ!

**ವಿವರ** : ಯೋಗ ಸಾಧಕನು ಜ್ಞಾನಪರರ ಮನೆಗಳಲ್ಲಿ ಹುಟ್ಟುತ್ತಾನೆಂದು ಹೇಳಿಕೊಂಡಿದ್ದೇವೆ. ಹಾಗೆ ಆಗದಿದ್ದರೆ ಯೋಗಪರರ ಮನೆಗಳಲ್ಲಿಯಾದರೂ ಹುಟ್ಟಬಹುದೆಂದೂ ಸಹ ಭಗವಂತನು ತಿಳಿಸಿದ್ದಾನೆ. ಭೂಮಿ ಮೇಲೆ ಆಧ್ಯಾತ್ಮಿಕತೆಯಿಂದ ಸಂಬಂಧ ಇರುವವರು, ಆತ್ಮಜ್ಞಾನ ತಿಳಿದ ಜ್ಞಾನಿಗಳು ಮತ್ತು ತಿಳಿದಿರುವುದು ಸಾಧಿಸಿದ ಯೋಗಿಗಳಿದ್ದಾರೆ. ಅಂತಹ ಜ್ಞಾನಿಗಳು, ಯೋಗಿಗಳ ಹತ್ತಿರವೇ ಯೋಗಭ್ರಷ್ಟರಾಗಿ ಹುಟ್ಟುವುದರಿಂದ ಮತ್ತೆ ಯೋಗ ಸಾಧಿಸುವುದಕ್ಕೆ ಸಾಧ್ಯವಾಗುತ್ತದೆ. ಹುಟ್ಟಿದ ಮನೆಯಲ್ಲಿ ಪ್ರಸ್ತುತ ಯೋಗಿಗಳಿರಬಹುದು ಅಥವಾ ಎರಡು ಮೂರು ತಲೆಮಾರಿನ ಕೆಳಗಾದರೂ ಇರಬಹುದು. ಆದ್ದರಿಂದ ಶ್ಲೋಕದಲ್ಲಿ **'ಯೋಗಿನಾಮೇವ ಲೇಭವತಿ'** ಎಂದಿದ್ದಾರೆ. ಅದಕ್ಕೆ ಯೋಗಿಗಳಿಗೆ ಸಂಬಂಧಿಸಿದ ವಂಶದಲ್ಲಿಯೆ ಎಂದು ಅರ್ಥ.

**(5) ಶ್ಲೋ॥ 43 : ತತ್ರ ತಂ ಬುದ್ಧಿ ಸಂಯೋಗಂ ಲಭತೇ ಪೌರ್ವದೈಹಿಕಮ್ ।**
**ಯತತೇ ಚ ತತೋ ಭೂಯ ಸ್ಸಂಸಿದ್ಧೌ ಕುರುನಂದನ ! ॥**

**(ಜೀವಾತ್ಮ)**

**ಭಾವಾರ್ಥ** : ಹಾಗೆ ಮರುಜನ್ಮವನ್ನು ಹೊಂದಿದವನು. ತನ್ನ ಪೂರ್ವದೇಹದಲ್ಲಿರುವ ಜ್ಞಾನವು ಬುದ್ಧಿಗೆ ತೋಚಿದಾಗ, ಮತ್ತೆ ಮೋಕ್ಷಸಿದ್ಧಿಗೋಸ್ಕರ ಸಂಪೂರ್ಣ ಪ್ರಯತ್ನ ಮಾಡುತ್ತಿರುತ್ತಾನೆ.

**ವಿವರ** : ಯೋಗಪರನು ಮರಣಿಸಿದ ನಂತರ ಜ್ಞಾನಿಗಳ ವಂಶದಲ್ಲಾಗಲಿ, ಯೋಗಿಗಳ

ವಂಶದಲ್ಲಾಗಲಿ ಹುಟ್ಟಿ ಸ್ವಲ್ಪಕಾಲ ಬೆಳೆದು, ನಂತರ ವಯಸ್ಸು ಬಂದಂತೆಲ್ಲ ಅವನಲ್ಲಿನ ಬುದ್ಧಿಗೆ ಜ್ಞಾನಜಿಜ್ಞಾಸೆ ಏರ್ಪಡುತ್ತದೆ. ಹಾಗೆ ಜಿಜ್ಞಾಸೆ ಏರ್ಪಡುವುದರಿಂದ ಅವನು ಮತ್ತೆ ಯೋಗಸಾಧನೆಗೆ ಸಂಬಂಧಿಸಿದ ಮಾರ್ಗದಲ್ಲೇ ನಡೆಯುವುದಕ್ಕೆ ಪ್ರಯತ್ನ ಮಾಡುತ್ತಾನೆ. ಮೊದಲು ಯಾವುದೋ ಒಂದು ಕಾರಣದಿಂದ ಅವನ ಬುದ್ಧಿಗೆ ಜ್ಞಾನದ ಮೇಲೆ ಶ್ರದ್ಧೆ ಏರ್ಪಡುತ್ತದೆ. ಹಾಗೆ ಏರ್ಪಟ್ಟ ಶ್ರದ್ಧೆ ಎಲ್ಲಾ ಶ್ರದ್ಧೆಗಳಿಗಿಂತ ಹೆಚ್ಚಾಗಿರುತ್ತದೆ. ಒಂದುಕಡೆ ನೂರುಜನ ಸೇರಿ ಯೋಗಕ್ಕೆ ಸಂಬಂಧಿಸಿದ ಪುಸ್ತಕ ಓದಿದ್ದಾರೆಂದುಕೊಳ್ಳಿ. ಅದರಲ್ಲಿ ಒಬ್ಬನಿಗೆ ಮಾತ್ರ ಅದೇ ಚಿಂತೆ ಅವನ ಬುದ್ಧಿಗೆ ಯೋಚನೆಯಾಗಿ ಕುಳಿತುಕೊಂಡಿದೆ ಎಂದುಕೊಳ್ಳಿ. ಅದು ಅವನ ಪೂರ್ವಜನ್ಮ ಸುಕೃತವೆಂದು ಕೆಲವರನ್ನುತ್ತಾರೆ. ಹಾಗೆ ಪೂರ್ವಜನ್ಮ ಸಂಸ್ಕಾರವೆಂದೂ ಸಹ ಹೇಳುತ್ತಾರೆ.

**(5) ಶ್ಲೋ॥ 44 : ಪೂರ್ವಾಭ್ಯಾಸೇನ ತೇನೈನ ಹ್ರಿಯಾತೇ ಹ್ಯವಶೋಽಪಿಸಃ ।**
**ಜಿಜ್ಞಾಸು ರಪಿ ಯೋಗಸ್ಯ ಶಬ್ದ ಬ್ರಹ್ಮಽತಿ ವರ್ತತೇ ॥**

**(ಜೀವಾತ್ಮ)**

**ಭಾವಾರ್ಥ** : ಪೂರ್ವಜನ್ಮ ಅಭ್ಯಾಸ ಬಲದಿಂದ ಈ ಜನ್ಮದಲ್ಲಿಯೂ ಸಹ ಯೋಗವಾಚರಿಸಬಹುದು. ಅಂತಹ ಜಿಜ್ಞಾಸಿಗಳು ಶಬ್ದ ಬ್ರಹ್ಮಾಮಧಿಗಮಿಸಿ ಹೋಗುತ್ತಿದ್ದಾರೆ.

**ವಿವರ** : ನಾದ ಬ್ರಹ್ಮ, ದೃಶ್ಯಬ್ರಹ್ಮ ಎಂದು ಎರಡು ವಿಧಗಳು ಇವೆ. ಭೂಮಿ ಮೇಲೆ ಗುರುಗಳು ಎಲ್ಲರೂ ಅವರವರ ಶಿಷ್ಯರಿಗೆ ಇವುಗಳನ್ನೇ ಉಪದೇಶಿಸುತ್ತಿದ್ದರು. ನಾದಬ್ರಹ್ಮ ಎಂದರೆ ಶಬ್ದದಿಂದ ಕೂಡಿಕೊಂಡಿರುವ ದೈವಮಂತ್ರವೆಂದು, ಹಾಗೆ ದೃಶ್ಯಬ್ರಹ್ಮ ಎಂದರೆ ಆಕಾರ ಸ್ವರೂಪ ಬ್ರಹ್ಮ ಗುರುತೆಂದು ಹೇಳಿಕೊಳ್ಳುತ್ತಿದ್ದಾರೆ. ಅವುಗಳನ್ನೇ ಉಪದೇಶಗಳಾಗಿ ಹೇಳುವುದು ಪರಿಪಾಠವಾಗಿದೆ. ಇಲ್ಲಿ ಯೋಗವನ್ನು ಆಚರಿಸುವವನು ದೃಶ್ಯನಾದಗಳಿಗೆ ಅತೀತವಾದ ಆತ್ಮಶಕ್ತಿ (ಜ್ಞಾನಾಗ್ನಿ)ಯನ್ನು ಹೊಂದುತ್ತಿದ್ದಾನೆ. ನಾದಬ್ರಹ್ಮ ಎನ್ನುವ ಮಂತ್ರೋಪದೇಶಕ್ಕಿಂತ ಯೋಗವು ಉತ್ತಮವೆಂದು ತಿಳಿಯುತ್ತದೆ. ಮಂತ್ರ ಧ್ಯಾಸದಲ್ಲಿ ತಪೋಫಲ ಲಭಿಸುತ್ತದೆ. ಯೋಗದಲ್ಲಿ ಜ್ಞಾನಾಗ್ನಿಯೇ ಲಭಿಸುತ್ತದೆ. ತಪೋಫಲಕ್ಕಿಂತ ಜ್ಞಾನಶಕ್ತಿ ಎಷ್ಟೋ ಹಂತಗಳು ಅಧಿಕವೆಂದು ಹೇಳಬಹುದು. ಆದ್ದರಿಂದ ಯೋಗಿ ಶಬ್ಧ ಬ್ರಹ್ಮಾಮಧಿಗಮಿಸಿದವನೆಂದು ಹೇಳಬಹುದು.

**(5) ಶ್ಲೋ॥ 45 : ಪ್ರಯತ್ನಾದ್ಯತ ಮಾನಸ್ತು ಯೋಗೀ ಸಂಶುದ್ಧ ಕಿಲ್ಬಿಷಃ ।**
**ಅನೇಕ ಜನ್ಮ ಸಂಸಿದ್ಧ ಸ್ತತೋ ಯಾತಿ ಪರಾಂಗತಿಮ್ ॥**

**(ಜೀವಾತ್ಮ)**

**ಭಾವಾರ್ಥ :** ಅನೇಕ ಜನ್ಮಗಳನ್ನೆತ್ತುತ್ತಾ ದೃಢಪ್ರಯತ್ನ ಮಾಡಿ ಯೋಗವನ್ನು ಹೊಂದಿ, ತನಗಿರುವ ಸರ್ವಕರ್ಮಗಳು ಹೋದ ನಂತರ ಪರಮಗತಿಯನ್ನು ಹೊಂದುವನು.

**ವಿವರ :** ಯೋಗಿ ಆಗಬೇಕೆಂದುಕೊಂಡವನು ಯೋಗವನ್ನು ಸಾಧಿಸುವುದಕ್ಕೆ ಅವನ ಪ್ರಯತ್ನವನ್ನನುಸರಿಸಿ ವರ್ಷಕಾಲವಾಗಲಿ, ಕೆಲವು ವರ್ಷಗಳ ಕಾಲವಾಗಲಿ, ಅಥವಾ ಜನ್ಮಗಳಾಗಲಿ ಬೇಕಾಗಬಹುದು. ಕೊನೆಗೆ ಯೋಗಿ ಆದವನು ಮೋಕ್ಷ ಹೊಂದುವುದಕ್ಕೆ ಕೆಲವು ಜನ್ಮಗಳು ಬೇಕಾಗುತ್ತದೆ. ಕರ್ಮವೆಲ್ಲವೂ ನಶಿಸುವುದಕ್ಕೆ ಕೆಲವು ಜನ್ಮಗಳು ತಪ್ಪದೇ ಬೇಕಾಗುತ್ತದೆ. ಕರ್ಮ ಮುಗಿಯುವವರೆಗೂ ಜನ್ಮಗಳು ತಪ್ಪುವುದಿಲ್ಲ. ಕರ್ಮವೆಲ್ಲವೂ ಅಂದರೆ ತನಗಿರುವ ಪಾಪಪುಣ್ಯಗಳೆಲ್ಲ ಶೇಷವೂ ಇಲ್ಲದಂತೆ ನಿಶ್ಶೇಷವಾದ ಕ್ಷಣವೇ ಶರೀರವನ್ನು ಬಿಟ್ಟು ಸರ್ವವ್ಯಾಪಿಯಾದ ಮೋಕ್ಷವನ್ನು ಹೊಂದುತ್ತಾನೆ. ಒಂದೇ ಜನ್ಮದಲ್ಲಿ ಯೋಗವನ್ನು ಸಾಧಿಸಬಹುದೇನೋ ಆದರೆ ಮೋಕ್ಷವನ್ನು ಸಾಧಿಸಲಾರೆವು. ಪ್ರಯತ್ನಪರನಿಗೆ ಅನೇಕ ಜನ್ಮಗಳ ಸಂಸ್ಕಾರ ಫಲವೇ ಮೋಕ್ಷವಾಗುತ್ತದೆ.

**(5) ಶ್ಲೋ॥ 46 : ತಪಸ್ವಿಭ್ಯೋದಿ ಽಕೋಯೋಗೀ ಜ್ಞಾನಿಭ್ಯೋ ಽಪಿ ಮತೋಧಿಕಃ ।**
**ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ ॥**

**(ಜೀವಾತ್ಮ)**

**ಭಾವಾರ್ಥ :** ತಪಸ್ವಿಕರಿಗಿಂತ ಯೋಗಿ ಅಧಿಕನು. ಹಾಗೆ ಜ್ಞಾನಿಗಳಿಗಿಂತ ಉತ್ತಮನು ಕರ್ಮಗಳು ಮಾಡುವವರಿಗಿಂತ ಅಧಿಕನು. ಆದ್ದರಿಂದ ನೀನು ಯೋಗಿಯೇ ಆಗು.

**ವಿವರ :** ದೈವವನ್ನು ಆರಾಧಿಸುವ ವಿಧಾನಗಳನ್ನು ಮೂರು ವಿಧಗಳಾಗಿ ವಿಭಜಿಸಿಕೊಳ್ಳಬಹುದು. ಒಂದು ಯೋಗ, ಎರಡು ತಪಸ್ಸು, ಮೂರು ವ್ರತಕ್ರತುಗಳು, ಯಜ್ಞಯಾಗಗಳು, ಅನೇಕ ವಿಧ ಗ್ರಹ ವಿಗ್ರಹ ಪೂಜೆಗಳು. ಮೂರು ಗುಂಪುಗಳಲ್ಲಿ ಯಾರನ್ನು ಕೇಳಿದರು ನಾವು ದೈವಾರಾಧಕರೆಂದೇ ಹೇಳುತ್ತಾರೆ. ಈ ಮೂರು ವಿಧಾನಗಳಲ್ಲಿ ಯಾವುದು ದೊಡ್ಡದೆಂದು ಯೋಚಿಸಿದರು, ಅನೇಕ ವಿಧ ಪೂಜೆಗಳು ಮಾಡುವವರಿಗಿಂತ ತಪಸ್ಸು ಮಾಡುವವರು ಉತ್ತಮರೆಂದು, ತಪಸ್ವೀಕರಿಗಿಂತ ಯೋಗಿಗಳು ದೊಡ್ಡವರೆಂದು

ತಿಳಿಯುತ್ತದೆ. ಸಾಧಾರಣ ಪೂಜೆಗಳು ಮಾಡುವವರಲ್ಲಿ ಯಾವ ಶಕ್ತಿ ಇರುವುದಿಲ್ಲ. ಅವರು ತಮ್ಮ ಕೋರಿಕೆಗಳ ನಿಮಿತ್ತ ಗಿಡಗಳಿಗೂ, ಪ್ರಾಣಿಗಳಿಗೂ, ಗ್ರಾಮ ದೇವತೆಗಳಿಗೂ ಪೂಜೆ ಮಾಡುತ್ತಾರೆ. ಮತ್ತೆ ಕೆಲವರು ಮಂತ್ರೋಪಾಸಕ್ತರಾಗಿ ಸಣ್ಣ ಸಣ್ಣ ಕ್ಷುದ್ರ ದೇವತೆಗಳನ್ನು ವಶಮಾಡಿಕೊಂಡವರಿದ್ದಾರೆ. ಮಂತ್ರವನ್ನು ನಿಯಮದ ಪ್ರಕಾರ ಜಪಿಸಿ ಅದರಿಂದ ಹೊಸಶಕ್ತಿಯನ್ನು ಹೊಂದಿದವರೂ ಇದ್ದಾರೆ. ಮಂತ್ರ ಜಪಿಸುವುದನ್ನು ತಪಸ್ಸೆಂದು ಹೇಳಬಹುದು. ಚಿಲ್ಲರೆ ಪೂಜೆಗಳು ಮಾಡುವವರು ಮೊದಲ ತರಗತಿಯಾದವರಾದರೆ, ಮಂತ್ರಜಪ ಮಾಡುವವರು ಎರಡನೇ ತರಗತಿಯವರು. ಈ ಶ್ಲೋಕದಲ್ಲಿ ಮೊದಲ ತರಗತಿಯವರಾದ ಪೂಜಾ ಕಾರ್ಯಗಳು ಅಂದರೆ ಕಾರ್ಯಗಳಿಂದ ಕೂಡಿಕೊಂಡ ಪೂಜೆಗಳು ಮಾಡುವವರೆಂದು ಹೇಳಿದ್ದಾರೆ. ಬಗ್ಗುವುದು, ಏಳುವುದು ಪ್ರದಕ್ಷಿಣೆಗಳನ್ನು ಮಾಡುವುದು ಮೊದಲಾದ ಕಾರ್ಯಗಳಿಂದ ಕೂಡಿಕೊಂಡಿರುವುದರಿಂದ ಅವರನ್ನು ಕಾರ್ಯಗಳು ಮಾಡುವವರೆಂದು ಹೇಳಲಾಗಿದೆ.

ಎರಡನೇ ತರಗತಿ ಕೆಳಗೆ ಜಮಮಾಡಲ್ಪಟ್ಟ ಮಂತ್ರಜಪ ಮಾಡುವವರನ್ನು ತಪಸ್ವಿಕರು ಎನ್ನುತ್ತಿದ್ದೇವೆ. ಮಂತ್ರವನ್ನು ಉದ್ದೇಶದಿಂದ ತಪಿಸುವುದರಿಂದ ಅವರು ಮಾಡುವುದು ತಪಸ್ಸೆಂದು ಕರೆಯುತ್ತಿದ್ದೇವೆ. ಇವರಲ್ಲಿ ತೀವ್ರ ತಪಸ್ಸು ಮಾಡಿ ದೇವತೆಗಳನ್ನು ಸಾಕ್ಷಾತ್ಕರಿಸಿಕೊಂಡಿದ್ದಾರೆಂದು ಪೂರ್ವಿಕರು ಹೇಳಿದಾಗ ಕೇಳಿದ್ದೇವೆ. ಈಗಿನ ಕಾಲದಲ್ಲಿ ಮಂತ್ರಜಪ ಮಾಡಿ ದೇವತೆಗಳನ್ನು ವಶಪಡಿಸಿಕೊಂಡು ಅವರ ಮೂಲಕ ಕೆಲವು ಕೆಲಸಗಳು ಮಾಡಿಸಿಕೊಳ್ಳುವವರು ಇದ್ದಾರೆಂದು ಹೇಳಬಹುದು. ಹಾಗೆ ನಡೆಯುವುದಕ್ಕೆ ದೇವತೆಗಳು ವಶವಾಗುವುದಕ್ಕೆ ಯಾವುದೋ ಒಂದುಶಕ್ತಿ ಅಗತ್ಯ. ಆ ಶಕ್ತಿಯನ್ನೇ ತಪಶ್ಶಕ್ತಿ ಎನ್ನುತ್ತಿದ್ದೇವೆ. ಮಂತ್ರಯಾವುದಾದರೂ ಆಗಬಹುದು, ಅವನಲ್ಲಿ ಉದ್ದೇಶ ಯಾವುದಾದರೂ ಆಗಬಹುದು, ಮಂತ್ರಜಪ ಮಾಡುವವನನ್ನು ತಪಸ್ವಿಕನೆಂದು ಹೇಳಬಹುದು.

ಮೂರನೇ ತರಗತಿಗೆ ಸೇರಿದ ಯೋಗಿಗಳು ಪ್ರತ್ಯೇಕಿಸಿದವರಾಗಿದ್ದಾರೆ. ಇವರು ಪೂಜಾಕಾರ್ಯಗಳು ಮಾಡುವುದಿಲ್ಲ. ಮಂತ್ರಜಪಗಳು ಮಾಡುವುದಿಲ್ಲ. ಇಂದ್ರಿಯಗಳಿಗೆ ಅತೀತವಾದ ಮನಸ್ಸು ಮತ್ತು ಅಹಮ್‌ವೊಂದರ ಜಯವೇ ಇವರ ಮುಖ್ಯ ಉದ್ದೇಶ ವಾಗಿರುತ್ತದೆ. ಅದರ ಮೂಲಕ ಇವರ ಕರ್ಮ ಸುಟ್ಟುಹೋಗಿ ಎಲ್ಲದಕ್ಕಿಂತ ದೊಡ್ಡದಾದ ಪರಮಾತ್ಮನಲ್ಲೇ ಐಕ್ಯವಾಗಿಹೋಗುತ್ತಾರೆ. ಇವರು ಬ್ರಹ್ಮಯೋಗಿಗಳಾಗಿ ಕೆಲವರು, ಕರ್ಮ ಯೋಗಿಗಳಾಗಿ ಕೆಲವರು ಇದ್ದಾರೆ. ಕರ್ಮಯೋಗಿಗಳಾದವರು ಪೂಜೆಗಳು ಮಾಡುವವರಿಗಿಂತ, ತಪಸ್ಸು ಮಾಡುವವರಿಗಿಂತ ಕಡಿಮೆಯವರಾಗಿ ಕಾಣಿಸುತ್ತಾರೆ. ಸಾಧಾರಣ

ಪೂಜೆಗಳು ಮಾಡುವವರನ್ನು ಮಂತ್ರಜಪ ಮಾಡುವವರು ಅವರ ಶಕ್ತಿಯಿಂದ ತೊಂದರೆ ಮಾಡಬಹುದು. ಉದಾಹರಣೆಗೆ ಒಬ್ಬ ಮಾಂತ್ರಿಕನು ತನ್ನ ವಶದಲ್ಲಿರುವ ಒಂದು ಹೆಸರಿರುವ ದೇವತಾ ಶಕ್ತಿಯಿಂದ ಮತ್ತೊಬ್ಬ ಪೂಜಾರಿಯನ್ನು ಅನಾರೋಗ್ಯಪಾಲು ಮಾಡಿದ್ದಾನೆ. ನಮ್ಮ ಹತ್ತಿರಕ್ಕೆ ಬಂದಿರುವ ಪೂಜಾರಿಯೊಳಗಿರುವ ಅನಾರೋಗ್ಯಕ್ಕೆ ಕಾರಣವಾದ ಆ ದೇವತೆಯನ್ನು ಪ್ರಶ್ನಿಸಿದಾಗ ಇಂತಹ ಮಾಂತ್ರಿಕನ ಆದೇಶಾನುಸಾರ ಈ ವಿಧವಾಗಿ ಮಾಡಿದ್ದೇನೆಂದು ಆ ದೇವತೆ ಹೇಳಿದೆ. ಇದರಿಂದ ಪೂಜೆಗಳು ಮಾಡುವವರಿಗಿಂತ ತಪಸ್ವಿಕನು ಅಧಿಕನೆಂದು ತಿಳಿಯುತ್ತದೆ.

ಮಾಂತ್ರಿಕರಿಂದ ಪ್ರಯೋಗಿಸಲ್ಪಟ್ಟ ಶಕ್ತಿಗಳು ಯೋಗಿಗಳ ಹತ್ತಿರ ಅವಮಾನಪಟ್ಟು ಹಿಂದಿರುಗಿಹೋದ ಎಷ್ಟೋ ಸಂಘಟನೆಗಳು ನಡೆದಿರುವವು ಇವೆ. ಮಂತ್ರಸಾಧನೆಯಿಂದ ಲಭಿಸಿದ ತಪಶ್ಶಕ್ತಿಗಿಂತ ಯೋಗಿಗಳ ಹತ್ತಿರವಿರುವ ಜ್ಞಾನಾಗ್ನಿ ಎಷ್ಟೋ ಪವಿತ್ರವಾದುದು. ಅಣುವಣುವಿನಲ್ಲಿ ವ್ಯಾಪಿಸಿದ ಪರಮಾತ್ಮ ಶಕ್ತಿಯೇ ಜ್ಞಾನಾಗ್ನಿಯಾಗಿ ತಯಾರಾಗಿದೆ. ಆದ ಕಾರಣ ಅದನ್ನು ಯಾವ ಶಕ್ತಿ ತಾಕುವುದಿಲ್ಲ. ಆದ್ದರಿಂದ ತಪಸ್ವಿಕರಿಗಿಂತ ಯೋಗಿಗಳು ಅಧಿಕ. ಅಷ್ಟೇ ಅಲ್ಲದೇ ಯೋಗಕ್ಕೆ ಮಾರ್ಗವನ್ನು ತೋರಿಸುವುದು ಜ್ಞಾನ. ಜ್ಞಾನ ತಿಳಿದ ನಂತರ ಯೋಗ ಸಾಧಿಸಲಾಗುತ್ತದೆ. ಪೂಜಾ ಕಾರ್ಯಗಳು ಮಾಡುವವರಿಗಿಂತ ತಪಸ್ವಿಕರು ಅಧಿಕರು, ತಪಸ್ವಿಕರಿಗಿಂತ ಜ್ಞಾನಿಗಳು ಅಧಿಕರು, ಜ್ಞಾನಿಗಳಿಗಿಂತ ಯೋಗಿಗಳು ಅಧಿಕರೆಂದು ಹೇಳಬಹುದು. ಎಲ್ಲದಕ್ಕಿಂತ ಯೋಗಿಗಳು ಅಧಿಕವಾಗಿರುವುದರಿಂದ ಶ್ಲೋಕದಲ್ಲಿ ಪೂಜೆಗಳು ಮಾಡುವವರಿಗಿಂತ, ತಪಸ್ವೀಕರಿಗಿಂತ, ಜ್ಞಾನಿಗಳಿಗಿಂತ ಯೋಗಿಗಳು ಅಧಿಕರೆಂದಿದ್ದಾರೆ.

**(5) ಶ್ಲೋ॥ 47 : ಯೋಗಿನಾ ಮಪಿ ಸರ್ವೇಷಾಂ ಮದ್ಗತೇ ನಾನ್ತ ರಾತ್ಮನಾ ।**
**ಶ್ರದ್ದಾವಾನ್ ಭಜತೇ ಯೋಮಾಂ ಸ ಮೇಯುಕ್ತತಮೋ ಮತಃ ॥**
**(ಜೀವಾತ್ಮ, ಆತ್ಮ, ಪರಮಾತ್ಮ)**

**ಭಾವಾರ್ಥ :** ಸರ್ವಯೋಗಿಗಳಲ್ಲಿ ಯಾರು ನನ್ನ ಮೋಕ್ಷಕ್ಕೋಸ್ಕರ ಆತ್ಮವನ್ನು ಯೋಗಾ ಚರಣೆಯಿಂದ ಹೊಂದಿರುವರಾಗಿ ನನ್ನನ್ನೇ ಭಜಿಸುವನೋ, ಅವನು ಉತ್ತಮ ಯೋಗಿ ಎಂದು ನನ್ನ ಅಭಿಮತ.

**ವಿವರ :** ಭೂಮಿ ಮೇಲೆ ಮಾನವರಲ್ಲಿ ಪೂಜೆಗಳು ಮಾಡುವವರು ಎಷ್ಟೋ ಜನ ಇದ್ದಾರೆ. ಹಾಗೆ ಮಂತ್ರಜಪ ಮಾಡುವವರು ಇದ್ದಾರೆ. ಅಷ್ಟೋ ಇಷ್ಟೋ ಜ್ಞಾನ ಇರುವವರು ಇದ್ದಾರೆ. ಬಹಳ ಕಡಿಮೆ ಸಂಖ್ಯೆಯಲ್ಲಿ ಕೆಲವು ಸಾವಿರಗಳಲ್ಲಿ ಒಬ್ಬನು ಯೋಗ ಸಾಧನೆ

ಮಾಡುವವನಿದ್ದಾನೆ. ಅಂತವರಲ್ಲಿ ಯಾರೋ ಅಪರೂಪವಾಗಿ ಯೋಗ ಸಾಧಿಸುವವನು ಇದ್ದಾನೆ. ಕೊನೆಗೆ ಲೆಕ್ಕಹಾಕಿದರೆ ಕೆಲವು ಲಕ್ಷಗಳ ಜನರಲ್ಲಿ ಒಬ್ಬ ಯೋಗಿ ಸಿಗಬಹುದು. ಇದು ಈಗಿನ ಪರಿಸ್ಥಿತಿ. ಆ ಸ್ವಲ್ಪಜನ ಯೋಗಿಗಳಲ್ಲಿ ಪರಮಾತ್ಮನನ್ನು ಸೇರುವುದಕ್ಕೆ ಮುಖದ್ವಾರವು ಆತ್ಮವೇ ಎಂದು ತಿಳಿದು, ಆತ್ಮವನ್ನು ಬೇಗನೆ ಹೊಂದಿ ಕರ್ಮನಾಶ ಬೇಗನೆ ಆಗಬೇಕೆಂದರೆ, ಸಾಕಾರವಾದ ಭಗವಂತನನ್ನು ಭಜಿಸಬೇಕೆಂದು ತಿಳಿದು ಭಜಿಸುವವನು ಯೋಗಿಗಳಲ್ಲಿ ಉತ್ತಮನು ಎಂದಿದ್ದಾರೆ.

ಯೋಗಿಗಳಲ್ಲಿ ಯೋಗ ಹೊಂದಿದ ನಂತರ ಯೋಗಿಯೇ ಆಗುತ್ತಾನೆ. ಅದರಲ್ಲಿ ಉತ್ತಮನೆಂದು ನೀಚನೆಂದು ಹೆಚ್ಚುಕಡಿಮೆಗಳಿರುವುದಿಲ್ಲ. ಇಲ್ಲಿ ಉತ್ತಮನೆನ್ನುವುದರಲ್ಲಿ ಆ ಅರ್ಥ ತೆಗೆದುಕೊಳ್ಳಬಾರದು. ಯೋಗದ ಮೂಲಕ ಕರ್ಮಸುಟ್ಟುಹೋಗುವ ಕಾಲಕ್ಕಿಂತ ಬೇಗನೆ ಮೋಕ್ಷ ಹೊಂದುವವನೆಂದು ಅರ್ಥ. ಉದಾಹರಣೆಗೆ ಟೇಪ್‌ರಿಕಾರ್ಡ್‌ನಲ್ಲಿ ನಿಧಾನವಾಗಿ ರಿಕಾರ್ಡ್ ಆಗುವುದು ಸಾಧಾರಣವಾದ ಕೆಲಸವಾದರೆ, ಪ್ರತ್ಯೇಕಿಸಿ ವೇಗವಾಗಿ ರಿಕಾರ್ಡು ಮಾಡುವ ಪದ್ಧತಿವೊಂದಿದೆ. ಎಲ್ಲಾ ಟೇಪ್‌ರಿಕಾರ್ಡ್‌ಗಳಲ್ಲಿ ಸಾಮಾನ್ಯವಾಗಿ ರಿಕಾರ್ಡ್ ಆಗುವ ಅವಕಾಶ ಇರುವಾಗ, ಪ್ರತ್ಯೇಕಿಸಿದ ರಿಕಾರ್ಡ್‌ಗಳಲ್ಲಿ ಮಾತ್ರವೆ ಸ್ಪೀಡ್ ರಿಕಾರ್ಡಿಂಗ್ ಇದ್ದಂತೆ, ಯೋಗಿಗಳೆಲ್ಲರಿಗು ಇಲ್ಲದ ಪ್ರತ್ಯೇಕತೆ ಅವನಿಗೇಕೆ ಇದೆ ಎಂದರೇ ಅವನು ಸಾಕಾರವಾದ ಭಗವಂತನನ್ನು ಸಹ ಗುರುತಿಸಿ ಭಜಿಸುತ್ತಿದ್ದಾನೆ. ಆದ್ದರಿಂದ ಅವನಕರ್ಮ ವೇಗವಾಗಿ ಸುಟ್ಟುಹೋಗುತ್ತದೆ. ಸಾಮಾನ್ಯ ಯೋಗಿ ಒಂದೇ ಜನ್ಮದಲ್ಲಿ ಮೋಕ್ಷ ಹೊಂದುವುದಿಲ್ಲ. ಕರ್ಮ ಮುಗಿಯುವುದಕ್ಕೆ ಕೆಲವು ಜನ್ಮಗಳು ಬೇಕಾಗಬಹುದು. ಪೂರ್ತಿ ಕರ್ಮ ಮುಗಿದುಹೋದ ಜನ್ಮದಲ್ಲಿ ಮೋಕ್ಷ ಹೊಂದುತ್ತಾನೆಂದು 45ನೇ ಶ್ಲೋಕದಲ್ಲಿ **'ಅನೇಕ ಜನ್ಮಸಂಸಿದ್ಧ'** ಎಂದು ಹೇಳಿಕೊಂಡಿದ್ದೇವೆ. ಇಲ್ಲಿ **'ಯೋಗಿನಾಮಪಿ ಸರ್ವೇಷಾಂ ಉಕ್ತ ತಮೋಮತಃ'** ಎಂದಿದ್ದಾರೆ. ಸರ್ವಯೋಗಿಗಳಲ್ಲಿ ಪ್ರತ್ಯೇಕಿಸಿದವನೆಂದು ಹೇಳಿದ್ದಾರೆ. ಪ್ರತ್ಯೇಕತೆ ಹೊಂದಿದ ಯೋಗಿ ಒಂದೇ ಜನ್ಮದಲ್ಲಿಯೇ ಮೋಕ್ಷ ಹೊಂದುತ್ತಾನೆ. ಇದರಿಂದ ಯೋಗಿಗಳಲ್ಲಿ ಉತ್ತಮನೆಂದಿದ್ದಾರೆ ಹೊರತು ಬೇರೆ ಅರ್ಥವಿಲ್ಲ. ಸಾಕಾರವಾದ ಪರಮಾತ್ಮ ಭಗವಂತನಾಗಿ ಭೂಮಿ ಮೇಲೆ ತಿಳಿಯುವುದು ದುರ್ಲಭವಾದ ಕೆಲಸ ಅಷ್ಟು ದುರ್ಲಭವಾದುದನ್ನು ತಿಳಿಯುವುದರಲ್ಲಿ ಆ ಯೋಗಿಗೆ ಪ್ರತ್ಯೇಕತೆ ಇದೆಯೆಂದು ತಿಳಿಯಿರಿ.

ಸರ್ವಯೋಗಿಗಳಲ್ಲಿ ಪರಮಾತ್ಮ ಸಾಕಾರವನ್ನು ತಿಳಿದು ಯೋಗ ಮಾಡುವವನು ಉತ್ತಮ ಯೋಗಿ. ಸಾಕಾರರೂಪವನ್ನು ಕುರಿತು ಎಷ್ಟು ಮಾತ್ರ ತಿಳಿಯದೆ ಯೋಗ ಮಾತ್ರ ತಿಳಿದವನು ಸಾಧಾರಣ ಯೋಗಿ. ಸಾಧಾರಣ ಯೋಗಿಗಳೇ ಬರವಾಗಿರುವ ಈ

ಕಾಲದಲ್ಲಿ ಒಂದೇ ಜನ್ಮದಲ್ಲಿ ಮೋಕ್ಷವನ್ನು ಹೊಂದುವ ಪ್ರತ್ಯೇಕವಾದ ಯೋಗಿ ಸಿಗುವುದು ಕಷ್ಟ. ಅದು ಪರಮಾತ್ಮ ಭೂಮಿ ಮೇಲೆ ಭಗವಂತನಾಗಿ ಸಾಕಾರರೂಪದಲ್ಲಿ ಇರುವಾಗಲೇ ಉತ್ತಮ ಯೋಗಿಗಳಿರುವುದಕ್ಕೆ ಅವಕಾಶ ಇದೆ.

ಇಲ್ಲಿಗೆ ಈ ಆತ್ಮಸಂಯಮ ಯೋಗವೆಂಬ ಅಧ್ಯಾಯ ಮುಕ್ತಾಯವಾಗಿದೆ. ಈ ಅಧ್ಯಾಯದಲ್ಲಿನ ಎಲ್ಲಾ ಶ್ಲೋಕಗಳು ಯಾವುದನ್ನು ಕುರಿತು ಇದೆಯೋ ಆ ವಿವರವನ್ನು ಕೆಳಗೆ ನೋಡಬಹುದು.

| | | |
|---|---|---|
| 1) ಕರ್ಮಯೋಗ | – | 1 |
| 2) ಕರ್ಮಯೋಗ, ಬ್ರಹ್ಮಯೋಗ | – | 2 |
| 3) ಬ್ರಹ್ಮಯೋಗ | – | 30 |
| 4) ಕಲ್ಪಿತ | – | 1 |
| 5) ಜೀವಾತ್ಮ, ಆತ್ಮ, ಪರಮಾತ್ಮ | – | 6 |
| 6) ಜೀವಾತ್ಮ | – | 7 |
| ಒಟ್ಟು ಶ್ಲೋಕಗಳು | – | 47 |

ಭಾವ,ವಿವರವನ್ನು ಬದಲಾಯಿಸಿ ಬರೆದ ಶ್ಲೋಕಗಳು – 1, 3, 5, 6, 32, 41.

***



## ಆರನೆಯ ಅಧ್ಯಾಯ

# ವಿಜ್ಞಾನ ಯೋಗ

ಇಲ್ಲಿಯವರೆಗೂ ಹೇಳಿರುವ ಅಧ್ಯಾಯಗಳಲ್ಲಿ ಹೆಚ್ಚಾಗಿ ಕರ್ಮಯೋಗವನ್ನು, ಬ್ರಹ್ಮಯೋಗವನ್ನು ಕುರಿತು ಹೇಳುವುದಾಗಿದೆ. ಈಗ ಈ ಅಧ್ಯಾಯದಲ್ಲಿ ಜೀವಾತ್ಮ ಪರಮಾತ್ಮರ ಕುರಿತು ಹೆಚ್ಚಾಗಿ ಇರುತ್ತದೆ. ಮುಂಬರುವ ಅಧ್ಯಾಯದಲ್ಲಿ ಪ್ರಕೃತಿ, ಆತ್ಮಗಳ ವಿಷಯವೇ ಹೆಚ್ಚಾಗಿದೆ. ಯೋಗಗಳ ವಿಷಯ ಬಹಳ ಕಡಿಮೆ ಇರುತ್ತದೆ. ಮುಖ್ಯವಾಗಿ ಹೇಳುವುದು ಏನೆಂದರೆ! ಪೂರ್ವಕಾಲದಲ್ಲಿ ರೋಗಕ್ಕೆ ತಕ್ಕ ಬರೆ, ವಿಷಕ್ಕೆ ತಕ್ಕ ಮಂತ್ರ, ಜಾಡ್ಯಕ್ಕೆ ತಕ್ಕ ಔಷಧಿ ಅಗತ್ಯವೆಂದು ಹಿರಿಯರು ಹೇಳುತ್ತಿದ್ದರು. ವಾಸ್ತವವಾಗಿ ಅವರು ಆ ಪದ್ಧತಿಯನ್ನೇ ಅನುಸರಿಸುತ್ತಿದ್ದರು. ಆ ಕಾಲದಲ್ಲಿ ಇಂದಿನ ವೈದ್ಯ. ಸೌಕರ್ಯಗಳು ಸೂಜಿ ಔಷಧಿಗಳು ಇರಲಿಲ್ಲ. ಆದ್ದರಿಂದ ಆಗಿನ ಕಾಲದಲ್ಲಿ ಬರೆಗಳಿಂದ ಕೆಲವು ರೋಗಗಳು ವಾಸಿಯಾಗುತ್ತಿದ್ದವು. ಈಗಿನ ಕಾಲದಲ್ಲಿಯೂ ಸಹ ಕೆಲವು ಕಡೆ ಕಾಮಾಲೆ (ಜಾಂಡೀಸ್) ರೋಗಕ್ಕೆ ಅದೇ ಪದ್ಧತಿ ಅನುಸರಿಸುತ್ತಿದ್ದಾರೆ. ವಿಷಕ್ಕೆ ತಕ್ಕ ಮಂತ್ರಗಳು ಈ ಕಾಲದಲ್ಲಿಯೂ ಸಹ ಅಲ್ಲಲ್ಲಿ ಕೆಲಸಮಾಡುತ್ತಲೇ ಇವೆ. ಬಾಧೆ ಪಡುತ್ತಿರುವವನಿಗೆ ರೋಗದಿಂದ ಬಾಧೆ ಪಡುತ್ತಿದ್ದಾನಾ, ಅಥವಾ ವಿಷದಿಂದ ಬಾಧೆ ಪಡುತ್ತಿದ್ದಾನಾ ಎಂದು ಕಂಡುಹಿಡಿದು, ಯಾವ ವೈದ್ಯವು ಅಗತ್ಯವೋ ಆ ವೈದ್ಯವೇ ಮಾಡಬೇಕು. ಹಾಗೆ ಮಾಡುವುದರಿಂದಲೇ ಅವನು ಚೆನ್ನಾಗಿರುತ್ತಾನೆ. ಹಾಗಲ್ಲದೆ ರೋಗ ಇರುವವನಿಗೆ ಮಂತ್ರ, ವಿಷ ಇರುವವನಿಗೆ ಔಷಧಿ ಹಾಕಿದರೆ ಕೆಲಸ ಮಾಡುವುದಿಲ್ಲ, ಅವನಿಗೆ ವಾಸಿ ಆಗುವುದಿಲ್ಲ. ಆ ವಿಧವಾಗಿಯೇ ಗೀತೆಯಲ್ಲಿ ನಾವು ಓದುವ ಶ್ಲೋಕವನ್ನು ರೋಗಗ್ರಸ್ತನಿಗೆ ಇರುವುದು ವಿಷವಾ, ರೋಗವಾ ಎಂದು ಪರಿಶೀಲಿಸಿದಂತೆ ಆಲೋಚಿಸಿ ನೋಡಿ, ಈ ಶ್ಲೋಕವು ಇಂತಹ ವಿಷಯದ ಬಗ್ಗೆ ಇದೆ ಎಂದು ತಿಳಿದಾಗಲೇ ಓದುವವನು ಚೆನ್ನಾಗಿ ತಿಳಿದುಕೊಳ್ಳುತ್ತಾನೆ. ಹಾಗೆ ತಿಳಿಯದೆ ಅಲ್ಲಿ ಒಂದಿದ್ದರೆ ನಾವೊಂದು ಅರ್ಥಮಾಡಿಕೊಂಡರೆ ಗೀತೆ ಅರ್ಥವಾಗುವುದಿಲ್ಲ, ನಾವು ಚೆನ್ನಾಗಿರುವುದಿಲ್ಲ. ಈ ಅಧ್ಯಾಯದಲ್ಲಿ ಶ್ಲೋಕಗಳೆಲ್ಲ ಆತ್ಮದ ಬಗ್ಗೆ ಹೇಳಿದ್ದಾರೆ. ಅವುಗಳಲ್ಲಿ ಯಾವ ಶ್ಲೋಕ ಯಾವ ಆತ್ಮದೋ ತಿಳಿದಾಗಲೇ ಭಾವ ತಿಳಿಯುತ್ತದೆ. ಹಾಗೆ ತಿಳಿಯದೆಹೋದರೆ ಗೀತೆಯ ಭಾವ ನಾವು ಬಹಳ ದೂರವಾಗಿ ಇರುವವರಾಗುತ್ತೇವೆ.

**ಶ್ರೀ ಭಗವಂತನು ಹೀಗೆ ಹೇಳಿದನು :–**

**(6) ಶ್ಲೋ॥ 1 : ಮಯ್ಯಾಸಕ್ತಮನಾಃ ಪಾರ್ಥ! ಯೋಗಂ ಯುಂಜನ್ಮದಾಶ್ರಯಃ ।**
**ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು॥**
**(ಜೀವಾತ್ಮ, ಪರಮಾತ್ಮ)**

**ಭಾವಾರ್ಥ :** ನನ್ನ ಮೇಲೆ ಆಸಕ್ತಿಹೊಂದಿ, ನನ್ನನ್ನೇ ಆಶ್ರಯಿಸಿ ಯೋಗಾಭ್ಯಾಸ ಮಾಡುತ್ತಾ, ಸಂಶಯ ಇಲ್ಲದಂತೆ ಸಂಪೂರ್ಣವಾಗಿ ನನ್ನನ್ನು ಹೇಗೆ ತಿಳಿಯುತ್ತೀಯೋ ಆ ವಿಧಾನವನ್ನು ಕೇಳು.

**ವಿವರ :** ಇಲ್ಲಿ ಶ್ರೀಕೃಷ್ಣನ ಶರೀರದಿಂದ ಪರಮಾತ್ಮ ಅರ್ಜುನನಾಗಿರುವ ಜೀವಾತ್ಮಕ್ಕೆ **"ಜೀವಾತ್ಮವಾದವನು ಯಾರಾದರು ಪರಮಾತ್ಮ ಎನ್ನುವವನೊಬ್ಬನಿದ್ದಾನೆಂದು ಗ್ರಹಿಸಿ, ಅವನನ್ನು ತಿಳಿಯಬೇಕೆಂಬ ಆಸಕ್ತಿ ಇಟ್ಟುಕೊಂಡು, ಆತನನ್ನು ತಿಳಿಯುವುದಕ್ಕೆ ಆಧಾರವಾದುದು ಯೋಗವೆಂದು ತಿಳಿದು, ಆ ವಿಧಾನದ ಪ್ರಕಾರವೇ ಯೋಗವಾಚರಿಸಿ ಕೊನೆಗೆ ಅನುಮಾನ ಇಲ್ಲದಂತೆ ಪೂರ್ತಿಯಾಗಿ ಪರಮಾತ್ಮನನ್ನು ತಿಳಿಯುವ ವಿಷಯವೆಲ್ಲಾ ಹೇಳುತ್ತೇನೆ ಕೇಳು"** ಎಂದು ತಿಳಿಸುತ್ತಿದ್ದಾನೆ. ಇಲ್ಲಿ ಮುಖ್ಯವಾಗಿ ಗ್ರಹಿಸಬೇಕಾದ ಮುಖ್ಯ ವಿಷಯ ಏನೆಂದರೆ! ಜೀವಾತ್ಮ ಪರಮಾತ್ಮಗಳ ಮಧ್ಯವರ್ತಿಯಂತಹದು ಆತ್ಮ, ಜೀವಾತ್ಮ ಸ್ಥಾನದಿಂದ ಪರಮಾತ್ಮ ಸ್ಥಾನಕ್ಕೆ ಸೇರಬೇಕೆಂದರೆ ಆತ್ಮವೆಂಬುವುದನ್ನು ತಪ್ಪದೇ ತಿಳಿಯಬೇಕಾಗಿದೆ. ಆತ್ಮನನ್ನು ತಿಳಿಯದ ಜೀವಾತ್ಮ ಪರಮಾತ್ಮನನ್ನು ಸೇರುವುದಿಲ್ಲವೆಂದು ಇದರ ಭಾವ.

**(6) ಶ್ಲೋ॥ 2 : ಜ್ಞಾನಂ ತೇ ಽಹಂ ಸವಿಜ್ಞಾನ ಮಿದಂ ವಕ್ಷ್ಯಾಮ್ಯ ಶೇಷತಃ ।**
**ಯಜ್ಜ್ಞಾತ್ವಾನೇಹ ಭೂಯೋ ಽನ್ಯತ್ ಜ್ಞಾತವ್ಯ ಮವಶಿಷ್ಯತೇ ॥**
**(ಜೀವಾತ್ಮ)**

**ಭಾವಾರ್ಥ :** ಜ್ಞಾನವನ್ನು ನಿನಗೆ ನಾನು ವಿಜ್ಞಾನಪೂರ್ವಕವಾಗಿ ತಿಳಿಸುತ್ತೇನೆ. ಅದನ್ನು ತಿಳಿದ ನಂತರ ಇನ್ನೊಂದು ತಿಳಿಯಬೇಕಾಗಿರುವುದಿಲ್ಲ.

**ವಿವರ :** ಪ್ರಪಂಚದಲ್ಲಿ ಎಲ್ಲದಕ್ಕಿಂತ ಮುಖ್ಯವಾಗಿ ತಿಳಿದುಕೊಳ್ಳಬೇಕಾಗಿರುವುದು ಕರ್ಮವನ್ನು ಕಳೆದುಕೊಳ್ಳುವ ಯೋಗವಿಧಾನ. ಜನ್ಮಗಳಿಗೆ ಕಾರಣವಾದ ಕರ್ಮವನ್ನೇ ಭಸ್ಮೀಪಟಲ ಮಾಡುವ ವಿಧಾನವನ್ನು ತಿಳಿದುಕೊಂಡ ನಂತರ ಇನ್ನೊಂದನ್ನು ತಿಳಿದುಕೊಳ್ಳಬೇಕಾದ ಅವಶ್ಯಕತೆ ಇಲ್ಲ. ಕರ್ಮವನ್ನು ಸುಟ್ಟುಹಾಕುವ ಯೋಗ ವಿಷಯ ಜ್ಞಾನವನ್ನು

ಅನುಭವಸಹಿತವಾಗಿ ಹೇಗೆ ತಿಳಿದುಕೊಳ್ಳಬೇಕೋ, ಆ ವಿಷಯವನ್ನು ತಿಳಿಸುತ್ತೇನೆಂದು ಭಗವಂತನ ಶರೀರದಲ್ಲಿನ ಪರಮಾತ್ಮ ಹೇಳಿದ್ದಾನೆ.

**(6) ಶ್ಲೋ॥ 3 : ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।**
**ಯತತಾ ಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥**

**(ಜೀವಾತ್ಮ)**

**ಭಾವಾರ್ಥ :** ನರ ಮನುಷ್ಯರಲ್ಲಿ ಮೋಕ್ಷಕ್ಕಾಗಿ ಪ್ರಯತ್ನ ಮಾಡುವವನು ಸಾವಿರ ಜನರಲ್ಲಿ ಒಬ್ಬನಿರುವುದು ಅಪರೂಪ. ಹಾಗೆ ಪ್ರಯತ್ನ ಮಾಡುವವರಲ್ಲಿ ಕೊನೆಗೆ ಯಾರೋ ಒಬ್ಬನು ನನ್ನನ್ನು ತಿಳಿದುಕೊಳ್ಳುತ್ತಾನೆ.

**ವಿವರ :** ಜನ್ಮರಾಹಿತ್ಯ ಮಾಡಿಕೊಂಡು ಪರಮಾತ್ಮನೊಳಗೆ ಐಕ್ಯವಾಗ ಬೇಕೆಂದುಕೊಳ್ಳುವವರು ಲಕ್ಷಕ್ಕೊಬ್ಬರು ಕಾಣಿಸುವುದು ಸಹ ಕಷ್ಟ. ಭಗವದ್ಗೀತೆಯನ್ನು ಅರ್ಜುನನಿಗೆ ಹೇಳಿದ ದಿನದಂದು ಸಾವಿರಜನಕ್ಕೆ ಒಬ್ಬನಿರುವುದು ಕಷ್ಟ ಆಗಿರಬಹುದು. ಅಂದಿನ ದಿನಗಳಿಗಿಂತ ಅಜ್ಞಾನ ಹೆಚ್ಚು ಬೆಳೆದಿರುವ ಈ ದಿನಗಳಲ್ಲಿ ಲಕ್ಷಕ್ಕೊಬ್ಬನು ಕಾಣಿಸುವುದು ಸಹ ಕಷ್ಟವಾಗಿಯೇ ಇದೆ. ಅಂತಹವರಲ್ಲಿ ಕೊನೆಗೆ ಯಾರೋ ಒಬ್ಬನು ಮೋಕ್ಷ ಹೊಂದುತ್ತಾನೆ. ಭಗವಂತನ ಮಾತಿನಪ್ರಕಾರ ಸಾವಿರಾರು ಜನರಲ್ಲಿ ಒಬ್ಬನು ಪ್ರಯತ್ನ ಮಾಡುವವನಿರುವಾಗ, ಅವರಲ್ಲಿ ಯಾರೋ ಒಬ್ಬನು ಮಾತ್ರ ಮೋಕ್ಷ ಹೊಂದುತ್ತಾನೆಂದುಕೊಳ್ಳೋಣ. ಅದು ಅಲ್ಲದೆ ಸಾವಿರ ಜನರಿಗೊಬ್ಬನು ಅಪರೂಪವಾಗದೆ ಒಬ್ಬನು ತಪ್ಪದೆ ಇದ್ದಾನೆಂದುಕೊಳ್ಳೋಣ. ಆ ಒಬ್ಬನು ತಪ್ಪದೆ ಏಕೆ ಮೋಕ್ಷಹೊಂದದೆ ಹೋಗುತ್ತಿದ್ದಾನೆಂದು ಯೋಚಿಸಿದಾಗ ತಿಳಿಯುವು ದೇನೆಂದರೆ! ಉದಾಹರಣೆಗೆ ಒಂದು ಊರಿನಲ್ಲಿ ಸಾವಿರ ಜನರು ಇದ್ದಾರೆಂದುಕೊಳ್ಳೋಣ. ಅದರಲ್ಲಿ ಒಬ್ಬನು ದೈವಚಿಂತೆಯನ್ನು ಹೊಂದಿ ಧ್ಯಾನ, ಯೋಗ ಎಂದುಕೊಳ್ಳುತ್ತಾ ಪ್ರಯತ್ನ ಮಾಡುತ್ತಿರುತ್ತಾನೆ. ಅವನಿಗೆ ಮನೆಯಲ್ಲಿರುವವರು ಪ್ರಥಮಶತ್ರುಗಳಾಗಿ ಊರಿನಲ್ಲಿ 999 ಜನರು ವಿರೋಧಿಗಳಾಗಿಯೇ ತಯಾರಾಗಿದ್ದಾರೆ. ಊರೆಲ್ಲ ಉತ್ತರವೆಂದರೆ ಅವನೊಬ್ಬನದು ದಕ್ಷಿಣ ಎನ್ನುವಂತಿದೆ. 999 ಜನರು ವಿರೋಧಿಗಳೊಂದಿಗೆ ಒಂದು ವರ್ಷ, ಎರಡು ವರ್ಷಗಳು ಕಳೆದಾಗ, ಉಳಿದವರ ಹತ್ತಿರ ತೊಂದರೆಗಳು ಅನುಭವಿಸಲಾರದೆ ಕೊನೆಗೆ ಅವನೂ ಸಹ ಅವರ ದಾರಿಯಲ್ಲೇ ನಡೆಯುವುದಕ್ಕೆ ಪ್ರಾರಂಭಿಸುತ್ತಾನೆ. ಆ ವಿಧವಾಗಿ ಅವನೂ ಸಹ ಬದಲಾಗುವುದರಿಂದ ಆ ಊರಿನಲ್ಲಿ ಸಾವಿರಕ್ಕೆ ಸಾವಿರ ಒಂದೇ ಅಜ್ಞಾನ ಮಾರ್ಗದಲ್ಲಿ ನಡೆಯುವವರಾಗಿದ್ದಾರೆ. ಹಾಗಲ್ಲದೆ ಎಲ್ಲರಿಗೂ ಎದುರು ಈಜಿ, ಕೊನೆಗೆ ಮರಣವಾದರು ಪರವಾಗಿಲ್ಲ

ಎಂದುಕೊಳ್ಳುವವನಾದರೇನೆ ಮೋಕ್ಷ ಹೊಂದುತ್ತಾನೆ. ಅಷ್ಟು ಧೈರ್ಯವಿರುವವರು ಯಾರಿದ್ದಾರೆ. ಇದ್ದರೂ ಮಾಯೆ ಅವನನ್ನು ಇರಿಸುವುದಿಲ್ಲ. ಹೊರಗಿನ ಪ್ರಜೆಗಳಿಗೂ, ಒಳಗಿನ ಮಾಯೆಗೂ ಒಳಗಾಗದವನಾದರೆ ಮಾತ್ರ ಮೋಕ್ಷಸಿದ್ಧಿ ಸಾಧ್ಯವಾಗುತ್ತದೆ. ಆದ್ದರಿಂದ ಅಂದುಕೊಂಡವರೆಲ್ಲರೂ ಮೋಕ್ಷ ಹೊಂದುವುದಿಲ್ಲವೆಂದು ಭಗವಂತನು ಹೇಳಿದ್ದಾನೆ.

**(6) ಶ್ಲೋ॥ 4 : ಭೂಮಿ ರಾಪೋ೭ನಲೋ ವಾಯುಃಖಂ ಮನೋಬುದ್ಧಿ ರೇವಚ ।**
**ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿ ರಷ್ಟಧಾ ॥**

**(ಪ್ರಕೃತಿ)**

**ಭಾವಾರ್ಥ** : ಭೂಮಿ, ನೀರು, ಅಗ್ನಿ, ವಾಯು, ಆಕಾಶ, ಮನಸ್ಸು, ಬುದ್ಧಿ, ಅಹಮ್ ಎನ್ನುವ ಅಷ್ಟ ಭಾಗಗಳಾಗಿ ನನ್ನ ಪ್ರಕೃತಿ ಇದೆ.

**ವಿವರ** : ಯಾವತ್ ಚರಾಚರ ಪ್ರಪಂಚವೆಲ್ಲವನ್ನೂ ಎರಡಾಗಿ ಹೇಳಿಕೊಳ್ಳಬಹುದು. ಅವುಗಳೇ ಪ್ರಕೃತಿ, ಪರಮಾತ್ಮ. ಕಣ್ಣಿಗೆ ಕಾಣಿಸುವುದೆಲ್ಲವೂ ಪ್ರಕೃತಿಯಾಗಿದ್ದರೆ, ಪ್ರಕೃತಿಗೆ ಆಧಾರವಾಗಿ ಕಣ್ಣಿಗೆ ಕಾಣಿಸದಂತೆ ಸೂಕ್ಷ್ಮವಾಗಿರುವುದು ಪರಮಾತ್ಮ. ಪ್ರಕೃತಿಯನ್ನು ಚರ ಅಚರ ಪ್ರಕೃತಿ ಎಂದು ಎರಡು ಭಾಗಗಳಾಗಿ ಹೇಳಿಕೊಳ್ಳಬಹುದು. ಚರ ಪ್ರಕೃತಿ ಎಂದರೆ ಸಕಲ ಜೀವರಾಶಿಗಳ ಶರೀರಗಳು ಮತ್ತು ಅವುಗಳಲ್ಲಿನ ಭಾಗಗಳಾಗಿದ್ದು ಬದಲಾವಣೆ ಆಗುವುದು. ಅಚರ ಪ್ರಕೃತಿ ಎಂದರೆ ಬದಲಾವಣೆ ಹೊಂದದೆ ಎಂದಿಗೂ ಒಂದೇ ರೀತಿಯಲ್ಲಿರುವ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ. ಅಚರ ಪ್ರಕೃತಿ 5 ಭಾಗಗಳಾಗಿರುವಾಗ, ಚರ ಪ್ರಕೃತಿ ಶರೀರದಲ್ಲಿ ಜೀವಾತ್ಮ ಹೊರತು 24 ಭಾಗಗಳಾಗಿದೆ. ಪಂಚಭೂತಗಳಾಗಿಯೂ ಮತ್ತು ಶರೀರ ರೂಪಗಳಾಗಿರುವ ಪ್ರಕೃತಿ ಎಲ್ಲವೂ ಒಂದು ಭಾಗವಾಗಿದ್ದು, ಶರೀರಗಳಿಗೆ ಆಧಾರವಾದ ಆತ್ಮ, ಜೀವಾತ್ಮಗಳು, ಪಂಚಭೂತಗಳಿಗೆ ಆಧಾರವಾದ ಪರಮಾತ್ಮ ಮೂರು ಒಂದೇ ಭಾಗವಾಗಿವೆ ಎಂದು ಹೇಳಬಹುದು. ಪಂಚ ಭಾಗಗಳಾಗಿರುವ ಪ್ರಕೃತಿ ಎಲ್ಲವೂ ಒಂದಾಗಿದ್ದರೆ, ಮೂರು ಭಾಗಗಳಾಗಿರುವ ಆತ್ಮಗಳು ಎಲ್ಲಾ ಒಂದೇ ಪರಮಾತ್ಮ ಅಂಶವಾಗಿವೆ. ಪ್ರಕೃತಿ ಪರಮಾತ್ಮರೆಂಬ ಎರಡು ಭಾಗಗಳಿಂದ ಕೂಡಿಕೊಂಡ ಈ ಚರಾಚರ ಪ್ರಪಂಚದಲ್ಲಿ ಮಾನವನ ಕರ್ಮಾಚರಣೆ ಪ್ರಕೃತಿಯಲ್ಲಿನ ಮುಖ್ಯವಾದ ಭಾಗಗಳು ಯಾವುವೆಂದು ಯೋಚಿಸಿದರೆ ಹೊರಗೆ ತಿಳಿಯುವ ಪಂಚಭೂತಗಳು ಐದು, ಶರೀರದಲ್ಲಿ ಮನಸ್ಸು, ಬುದ್ಧಿ, ಅಹಂಕಾರ ಎನ್ನುವವು ಮೂರು. ಒಟ್ಟು ಎಂಟು ಮುಖ್ಯ ಪ್ರಕೃತಿ ಭಾಗಗಳಿಂದ ಕರ್ಮಾಚರಣೆ ಪ್ರಪಂಚದಲ್ಲಿ ನಡೆಯುತ್ತಿದೆ.

ಆದ್ದರಿಂದ ಈ ಶ್ಲೋಕದಲ್ಲಿ ನನ್ನ ಪ್ರಕೃತಿ ಎಂಟು ವಿಧಗಳಿವೆ ಎಂದು ಪರಮಾತ್ಮ ತಿಳಿಸಿದ್ದಾನೆ.

**(6) ಶ್ಲೋ॥ 5 : ಅಪರೇಯ ಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿಮೇಪರಾಂ ।**
**ಜೀವಭೂತಾಂ ಮಹಾಬಾಹೋ! ಯಯೇದಂ ಧಾರ್ಯತೇ ಜಗತ್ ॥**
**(ಪ್ರಕೃತಿ, ಪರಮಾತ್ಮ)**

**ಭಾವಾರ್ಥ** : ಯಾವುದರಿಂದ ಈ ಪ್ರಪಂಚವೆಲ್ಲವೂ ಧರಿಸಲ್ಪಡುತ್ತಿದೆಯೋ ಅಂದರೆ ಪ್ರಪಂಚಕ್ಕೆ ಯಾವುದು ಆಧಾರವಾಗಿದೆಯೋ, ಅದೇ ಜೀವರೂಪವಾಗಿ ಪ್ರಕೃತಿಗಿಂತ ಬೇರೆಯಾಗಿ ಇದೆ, ಅದನ್ನು ತಿಳಿದುಕೊಳ್ಳಿ. ಅದಕ್ಕಿಂತ ಪ್ರಕೃತಿ ಬಹಳ ಅಲ್ಪವಾದದ್ದು.

**ವಿವರ** : ಈ ಶ್ಲೋಕದಲ್ಲಿ **'ಅನ್ಯಾಂ ಪ್ರಕೃತಿಂ'** ಎನ್ನುವ ಮಾತಿಗೆ ಪ್ರಕೃತಿಗಿಂತ ಬೇರೆಯಾದದ್ದು ಎನ್ನುವ ಅರ್ಥ ಸರಿಯಾದುದಾಗಿ, ಬೇರೊಂದು ಪ್ರಕೃತಿ ಎನ್ನುವ ಅರ್ಥ ಸರಿಯಲ್ಲದಿರುವುದಾಗಿದೆ. ಈ ಶ್ಲೋಕದಲ್ಲಿ ಎಲ್ಲಾ ಗೀತೆಗಳಲ್ಲಿಯೂ ಬೇರೊಂದು ಪ್ರಕೃತಿ ಎನ್ನುವ ಮಾತನ್ನೇ ಉಪಯೋಗಿಸಿ ಇದರ ಭಾವವನ್ನು ಹೀಗೆ ಬರೆದಿದ್ದಾರೆ. **'ಈ ಪ್ರಕೃತಿ ಬಹಳ ಅಲ್ಪವಾದದ್ದು, ಜೀವರೂಪವಾಗಿ ಶ್ರೇಷ್ಠವಾಗಿ ಜಗತ್ತೆಲ್ಲವೂ ಧರಿಸಲ್ಪಡುವ ಪ್ರಕೃತಿ ಬೇರೊಂದಿದೆ. ಅದನ್ನು ತಿಳಿದುಕೋ'** ಇದು ಸರಿಯಾದ ಭಾವನೆಯಲ್ಲ. ಪ್ರಕೃತಿ ಪುರುಷರು ಬೇರೆ ಬೇರೆ ಎಂದು ಹೇಳಿಕೊಂಡಿದ್ದೇವೆ. ಜೀವಾತ್ಮ ಪರಮಾತ್ಮ ಸಂಬಂಧವಾದ ಪುರುಷನೆಂದೂ ಸಹ ಹೇಳಿಕೊಂಡಿದ್ದೇವೆ. ಜೀವರೂಪವಾಗಿರುವುದು, ಶ್ರೇಷ್ಠವಾದುದು, ಜಗತ್ತೆಲ್ಲವೂ ವ್ಯಾಪಿಸಿರುವುದು, ಪ್ರಕೃತಿಗಿಂತಲೂ ಬೇರೆಯಾಗಿರುವ ಪುರುಷನಾದ ಪರಮಾತ್ಮನನ್ನು ಮತ್ತೊಂದು ಪ್ರಕೃತಿ ಎನ್ನುವುದು ಸಮಂಜಸವಲ್ಲ. ಪ್ರಕೃತಿಗಿಂತ ಭಿನ್ನವಾಗಿ, ಸರ್ವ ಶರೀರಗಳಲ್ಲಿ ಜೀವರೂಪವಾಗಿ, ಸರ್ವ ಶರೀರಗಳಿಗೂ ಚೈತನ್ಯಕೊಡುವ ಆತ್ಮಸ್ವರೂಪವಾಗಿ, ಅಣುವಣುವಿನಲ್ಲಿ ವ್ಯಾಪಿಸಿರುವುದು ಪ್ರಕೃತಿಗಿಂತ ಶ್ರೇಷ್ಠವಾದುದು ಮತ್ತೊಂದಿದೆ ಎಂದು ಅದನ್ನು ತಿಳಿದುಕೋ ಎಂದು, ಅದಕ್ಕಿಂತ ಪ್ರಕೃತಿ ಬಹಳ ಕಡಿಮೆಯಾದುದೆಂದು, ಈ ಶ್ಲೋಕದಲ್ಲಿನ ಪೂರ್ತಿಭಾವವಿದೆ. ಹಾಗೆ ಅಲ್ಲದೆ ಪ್ರಕೃತಿ ಕಡಿಮೆಯಾದುದೆಂದು, ಅದಕ್ಕಿಂತ ಶ್ರೇಷ್ಠವಾದ ಪ್ರಕೃತಿ ಮತ್ತೊಂದಿದೆ ಎಂದು ತಿಳಿದುಕೊಳ್ಳುವುದು ಬಹಳ ತಪ್ಪು. ಇದೇನೋ ನೀಚವಾದ ಪ್ರಕೃತಿ, ಇದಕ್ಕಿಂತ ಶ್ರೇಷ್ಠವಾದ ಪುರುಷನೊಬ್ಬನಿದ್ದಾನೆ. ಅವನನ್ನು ತಿಳಿದುಕೋ ಎಂದಿದ್ದೇವೆ. ಆ ಪುರುಷನು ಎಂತಹವನೆಂದರೆ! ಅವನ ಪ್ರಭಾವವು ಎಂತಹದೆಂದರೆ! ಕೆಳಗಿನ ಶ್ಲೋಕಗಳಲ್ಲಿ ನೋಡೋಣ.

**(6) ಶ್ಲೋ॥ 6 : ಏತ ದ್ಯೋನೀನಿ ಭೂತಾನಿ ಸರ್ವಾಣೀ ತ್ಯುಪಧಾರಯ ।**
**ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಳಯಸ್ತಥಾ! ॥**

**(ಪ್ರಕೃತಿ, ಪರಮಾತ್ಮ)**

**ಭಾವಾರ್ಥ** : ಪ್ರಕೃತಿ ಸಮಸ್ತ ಜೀವರಾಶಿಗಳ ಹುಟ್ಟುವಿಕೆಗೆ ಸ್ಥಾನವಾದ ಯೋನಿ ಯಂತಹದ್ದು. ನಾನು ಜೀವರಾಶಿಗಳು ಹುಟ್ಟುವುದಕ್ಕೆ ಕಾರಣವಾದವನು, ಮತ್ತು ಅವುಗಳ ಪ್ರಳಯಕ್ಕೂ ಸಹ ಕಾರಣವಾದವನು.

**ವಿವರ** : ಒಬ್ಬ ಮನುಷ್ಯ ಹುಟ್ಟುವುದಕ್ಕೆ ಭೌತಿಕವಾಗಿ ತಾಯಿ ತಂದೆ ಇಬ್ಬರು ಅಗತ್ಯ. ತಾಯಿ ಇದ್ದು ತಂದೆ ಇಲ್ಲದಂತೆ, ಹಾಗೇ ತಂದೆ ಇದ್ದು ತಾಯಿ ಇಲ್ಲದಂತೆ ಯಾರು ಹುಟ್ಟುವುದಿಲ್ಲ. ಯಾರ ತಾಯಿತಂದೆ ಅವರಿಗೆ ತಿಳಿದಿರುತ್ತದೆ. ನಿಮ್ಮ ತಾಯಿ ಹೆಸರೇನೆಂದು ಕೇಳಿದರೆ ಹೇಳಬಲ್ಲರು, ತಂದೆ ಹೆಸರನ್ನು ಹೇಳಬಲ್ಲರು. ಒಬ್ಬನಿಗೆ ಒಬ್ಬ ತಾಯಿ ತಂದೆ ಇರುವಂತೆ, ಜೀವರಾಶಿಗಳಿಗೆಲ್ಲರಿಗೂ ಸಮವಾಗಿ ಒಬ್ಬ ತಾಯಿತಂದೆ ಇದ್ದಾರೆ. ಎಲ್ಲರಿಗೂ ಸೇರಿ ಒಬ್ಬಳೇ ತಾಯಿ, ಒಬ್ಬನೇ ತಂದೆ ಯಾರೋ ಬಹಳ ಜನರಿಗೆ ತಿಳಿದಿಲ್ಲ. ಸರ್ವ ಜೀವರಾಶಿಗಳಿಗೂ ಶರೀರವನ್ನು ತಯಾರುಮಾಡಿ ಒಂದು ರೂಪವನ್ನು ಕೊಡುವುದು ಪ್ರಕೃತಿ. ತಾಯಿಗರ್ಭದಲ್ಲಿನ ಶಿಶುವು ಒಂದು ರೂಪವನ್ನು ಸಂತರಿಸಿಕೊಂಡಂತೆ, ಪ್ರಕೃತಿಯಲ್ಲಿನ ಜೀವಿಗಳ ಶರೀರಗಳೆಲ್ಲ ಸ್ತ್ರೀಸ್ವರೂಪವಾದ ಪ್ರಕೃತಿಯಿಂದಲೇ ತಮ್ಮ ತಮ್ಮ ಆಕಾರವನ್ನು ಹೊಂದಿವೆ. ತಾಯಿ ಗರ್ಭದಲ್ಲಿನ ಶಿಶು ಆಕಾರ ಹೊಂದುವುದಕ್ಕೆ ಮೇಲಿರುವ ತಾಯಿ ಏನು ಮಾಡದಿದ್ದರು, ಒಳಗಿರುವ ಚರ ಪ್ರಕೃತಿಯ ಕಾರ್ಯಗಳಿಂದಲೆ ಗರ್ಭದಲ್ಲಿನ ಶಿಶುವಿಗೆ ಆಕಾರ ಏರ್ಪಡುತ್ತಿದೆ. ಇದನ್ನನುಸರಿಸಿ ತಾಯಿ ಹಿಂದೆ ಸರ್ವ ಜೀವರಾಶಿಗಳಿಗೂ ತಾಯಿಯಾಗಿ ಪ್ರಕೃತಿ ಹೆಸರುವಾಸಿಯಾಗಿದೆ. ಆ ವಿಧವಾಗಿಯೇ ಶಿಶುವು ಹುಟ್ಟುವುದಕ್ಕೆ ಕಾರಣವಾದವನು ತಂದೆ. ಒಳಗೆ ಚೈತನ್ಯವಾಗಿದ್ದು, ಶಿಶು ಶರೀರವು ತಯಾರಾಗುವುದಕ್ಕೆ ಭೀಜದಾತನಾಗಿ ಕಾಣಿಸದಂತಿರುವ ಒಳಗಿನ ತಂದೆ ಪರಮಾತ್ಮ. ಆದಕಾರಣ ಸರ್ವಜೀವರಾಶಿಗಳಿಗೆ ತಂದೆ ಪರಮಾತ್ಮ ಎಂದು ತಿಳಿಯಬೇಕು. ಜೀವರಾಶಿಗಳೆಲ್ಲ ಭೂಮಿ ಮೇಲೆ ಹುಟ್ಟುತ್ತಾ, ಬೆಳೆಯುತ್ತಾ, ಸಾಯುತ್ತಾ ಮತ್ತೆ ಹುಟ್ಟುತ್ತಾ, ಮತ್ತೆ ಬೆಳೆಯುತ್ತಾ ನಡೆಯುತ್ತಿರುವ ಪ್ರಪಂಚಕ್ಕೆ ಪ್ರಕೃತಿ, ಪುರುಷರೇ ಕಾರಣವಾಗಿದ್ದಾರೆ. ಈ ಹುಟ್ಟಿ ಬೆಳೆದ ಪ್ರಪಂಚವೆಲ್ಲವೂ ಒಂದಾನೊಂದು ದಿನ ಇಲ್ಲದಂತೆಹೋಗುತ್ತದೆ, ಅದನ್ನೇ ಪ್ರಳಯ ವೆನ್ನುತ್ತಾರೆ. **'ಪ್ರ'** ಎಂದರೆ ಹುಟ್ಟುವುದು. **'ಳಯ'** ಎಂದರೆ ನಾಶವೆಂದು ತಿಳಿಯಬೇಕು. ಪ್ರಳಯವೆಂದರೆ ಹುಟ್ಟಿರುವುದೆಲ್ಲವೂ ಇಲ್ಲದಂತೆ ಹೋಗುವುದೆಂದು ಅರ್ಥ. ಅಂತಹ

ಪ್ರಳಯಕ್ಕೂ ಸಹ ಪರಮಾತ್ಮನೇ ಕಾರಣ. ಯಾವಾಗಲೊ ಒಂದುಸಲ ಸಂಭವಿಸುವ ಪ್ರಳಯದಲ್ಲಿ ಪರಮಾತ್ಮನು ಪ್ರಕೃತಿಯನ್ನು ಪ್ರೇರೇಪಿಸಿ, ಅದರಿಂದಲೇ ಜೀವಿಗಳನ್ನು ಇಲ್ಲದಂತೆ ಮಾಡಿ, ಕೊನೆಗೆ ಪ್ರಕೃತಿಯನ್ನೂ ಸಹ ಇಲ್ಲದಂತೆ ಮಾಡುತ್ತಾನೆ. ಆದ್ದರಿಂದ ಪ್ರಳಯಕ್ಕೆ ಕಾರಣ, ಪ್ರಭವಕ್ಕೆ ಕಾರಣ ನಾನೇ ಎಂದು ಶ್ಲೋಕದಲ್ಲಿ ಹೇಳಿದ್ದಾನೆ. ಇನ್ನೂ ಪುರುಷನಾದ ಪರಮಾತ್ಮ ಹೇಗಿರುತ್ತಾನೆಂದರೆ! ಕೆಳಗಿನ ಶ್ಲೋಕ ನೋಡಿರಿ.

**(6) ಶ್ಲೋ॥ 7 : ಮತ್ತಃಪರತರಂ ನಾನ್ಯತ್ ಕಿಂಚಿ ದಸ್ತಿ ಧನಂಜಯ ।**
**ಮಯಿ ಸರ್ವಮಿದಂ ಪ್ರೋತಂ ಸೂತ್ರೇಮಣಿಗಣಾ ಇವ ॥**

**(ಪರಮಾತ್ಮ)**

**ಭಾವಾರ್ಥ** : ಜಗತ್ತಿನಲ್ಲಿ ನನ್ನನ್ನು ಮೀರಿ ಘನತೆ ಹೊಂದಿರುವುದು ಬೇರೆ ಯಾವುದು ಇಲ್ಲ. ದಾರದಲ್ಲಿ ಮಣಿಗಳನ್ನು ಧರಿಸಲ್ಪಟ್ಟಂತೆ ಸರ್ವ ಪ್ರಪಂಚವನ್ನು ನಾನು ಧರಿಸುತ್ತೇನೆ.

**ವಿವರ** : ಪರಮಾತ್ಮ ಪ್ರಕೃತಿಯನ್ನೇ ಸೃಷ್ಟಿಸಿ ಅದರ ಮೂಲಕ ಜೀವರಾಶಿಗಳನ್ನು ತಯಾರು ಮಾಡಿ ದೊಡ್ಡ ಪ್ರಪಂಚಕ್ಕೆ ಅಧಿಪತಿಯಾಗಿದೆ. ಪರಮಾತ್ಮಗಿಂತ ಅನ್ಯವಾದ ವಸ್ತುವೇನೂ ಇಲ್ಲ. ಆದ್ದರಿಂದ ಅದಕ್ಕಿಂತ ಮಿಗಿಲಾಗಿರುವುದು ಮತ್ತೊಂದು ಎಲ್ಲಿಂದ ಬರುತ್ತದೆ. ಪರಮಾತ್ಮಕ್ಕಿಂತ ಮಿಗಿಲಾಗಿರುವುದು ಭೂತಕಾಲದಲ್ಲಿ ಇಲ್ಲ. ಭವಿಷ್ಯತ್ ಕಾಲದಲ್ಲಿ ಇರುವುದಿಲ್ಲ. ಸರ್ವಜೀವರಾಶಿಗಳ ಹೃದಿಮಧ್ಯದಲ್ಲಿ ಚೈತನ್ಯವಾದ ಆತ್ಮವಾಗಿದ್ದು, ಸರ್ವ ಜೀವಾತ್ಮಗಳೊಂದರ ಆತ್ಮಗಳನ್ನು ತನ್ನೊಂದಿಗೆ ಸಂಬಂಧವಿರುವಂತೆ ಮಾಡಿ, ಸರ್ವಜೀವರಾಶಿಗಳಿಗೆ ಸೂತ್ರಧಾರಿಯಾಗಿ ಪರಮಾತ್ಮ ಇರುತ್ತಿದ್ದಾನೆ. ಚರ ಪ್ರಕೃತಿಯಾದ ಸರ್ವ ಜೀವರಾಶಿಗಳಲ್ಲಿಯೂ ತಾನು ವ್ಯಾಪಿಸಿ, ಅವುಗಳಲ್ಲಿ ಕಾಣಿಸದೆ ಹೂವಿನ ಹಾರದಲ್ಲಿ ದಾರದಂತೆ ಇದ್ದಾನೆ. ಹೂವುಗಳಿಗೆಲ್ಲ ದಾರ ಆಧಾರವಾದಂತೆ ಪರಮಾತ್ಮ ಸರ್ವಜೀವರಾಶಿ ಗಳಿಗೆ ಆಧಾರವಾಗಿ ಶರೀರದಲ್ಲಿ ಆತ್ಮರೂಪವಾಗಿ ಕಾಣಿಸದೆ ಇದ್ದಾನೆ.

ಈ ವಿಧವಾಗಿ ಚರ ಪ್ರಕೃತಿಗೇ ಅಲ್ಲದೆ, ಅಚರಪ್ರಕೃತಿಗೂ ಸಹ ಪರಮಾತ್ಮನು ಆಧಾರವಾಗಿದ್ದಾನೆ. ಆಕಾಶ, ಗಾಳಿ, ಅಗ್ನಿ, ನೀರು, ಭೂಮಿಗೆ ಗುರುತ್ವಾಕರ್ಷಣ ಶಕ್ತಿಯಾಗಿದ್ದು, ಗಗನದಲ್ಲಿ ಅಣುಅಣುವಿನಲ್ಲಿ ವ್ಯಾಪಿಸಿ ಸೂರ್ಯಚಂದ್ರಾದಿ ಗ್ರಹಗಳಿಗೂ, ನಕ್ಷತ್ರಗಳಿಗೂ, ನಕ್ಷತ್ರ ಪುಂಜಗಳಿಗೂ, ಕಪ್ಪುರಂಧ್ರ(ಬ್ಲಾಕ್‌ಹೋಲ್)ಕ್ಕೆ ಅಧಿಪತಿಯಾಗಿ, ಶರೀರದಲ್ಲಿ ಆತ್ಮದಂತೆ ಜೀವರಾಶಿಗಳನ್ನು ಕದಲಿಸುವಂತೆ ಗಗನದಲ್ಲಿ ಅಯಸ್ಕಾಂತ ಶಕ್ತಿಯಾಗಿ ಸರ್ವಗೋಳಗಳನ್ನು ಕದಲಿಸುತ್ತಿದ್ದಾನೆ. ಈ ವಿಧವಾಗಿ ಅಚರ ಪ್ರಕೃತಿಗೆ, ಚರ

ಪ್ರಕೃತಿಗೆ ಸರ್ವ ಪ್ರಪಂಚಕ್ಕೆ ಆಧಾರವಾಗಿ ಪರಮಾತ್ಮ ಇದ್ದಾನೆ, ಅದು ಇನ್ನೂ ಹೇಗಿರುತ್ತದೆ ಎಂದರೆ!

**(6) ಶ್ಲೋ॥ 8 : ರಸೋ೭ಹ ಮಪ್ಸು ಕೌಂತೇಯ ! ಪ್ರಭಾ೭ಸ್ಮಿ ಶಶಿಸೂರ್ಯಯೋಃ ।**
**ಪ್ರಣವ ಸ್ಸರ್ವ ವೇದೇಷು ಶಬ್ಧಃ ಖೇ ಪೌರುಷಂ ನೃಷು ॥**

**(ಪರಮಾತ್ಮ)**

**ಭಾವಾರ್ಥ**: ಜಲದಲ್ಲಿರುವ ರಸವು ನಾನೇ, ಸೂರ್ಯ ಚಂದ್ರರಿಗಿರುವ ಪ್ರಕಾಶವು ನಾನೇ, ವೇದಗಳಲ್ಲಿನ ಓಂಕಾರವು ನಾನೇ. ಆಕಾಶದಲ್ಲಿರುವ ಧ್ವನಿಯೂ ನಾನೇ. ಹಾಗೆ ಪುರುಷರಲ್ಲಿನ ಪೌರುಷವೂ ಸಹ ನಾನೇ ಆಗಿದ್ದೇನೆ.

**ವಿವರ** : ಒಂದೇ ವಿದ್ಯುಶ್ಚಕ್ತಿ ಫ್ಯಾನಿನೊಂದಿಗೆ ಬೆರೆತಾಗ ಗಾಳಿಯಾಗಿಯೂ, ರೇಡಿಯೋದೊಂದಿಗೆ ಬೆರೆತಾಗ ಹಾಡಾಗಿಯೂ, ಟಿ.ವಿಯೊಂದಿಗೆ ಬೆರೆತಾಗ ದೃಶ್ಯವಾಗಿಯೂ, ಬಲ್ಬಿನಲ್ಲಿನ ನೈಕ್ರೋಮ್ ತಂತಿಯೊಂದಿಗೆ ಬೆರೆತಾಗ ಬೆಳಕು ಶಾಖ ಉತ್ಪತ್ತಿಯಾಗಿ ಬದಲಾದಂತೆ ಒಂದೇ ಪರಮಾತ್ಮ ಶಕ್ತಿ ನೀರಿನೊಂದಿಗೆ ಸೇರಿ ಅದರಲ್ಲಿನ ರುಚಿಯಾಗಿಯೂ, ಸೂರ್ಯಚಂದ್ರರೊಂದಿಗೆ ಬೆರೆತು ಬೆಳಕು ಶಾಖವಾಗಿಯೂ, ಶರೀರದಲ್ಲಿನ ಗುಣಗಳಜೊತೆ ಸೇರಿದಾಗ ಶ್ವಾಸವಾಗಿಯೂ, ಗಗನದಜೊತೆ ಸೇರುವುದರಿಂದ ಶಬ್ದವಾಗಿಯೂ, ಪುರುಷರೊಂದಿಗೆ ಇರುವುದರಿಂದ ಪೌರುಷವಾಗಿಯೂ ತಯಾರಾಗುತ್ತಿದೆ. ಪ್ರಪಂಚದಲ್ಲಿ ಯಾವುದಕ್ಕಾದರು ಪ್ರತ್ಯೇಕತೆ ಉಂಟುಮಾಡುವುದು ಪರಮಾತ್ಮವೇ.

**(6) ಶ್ಲೋ॥ 9 : ಪುಣ್ಯೋ ಗಂಧಃ ಪೃಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ ।**
**ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು ॥**

**(ಪರಮಾತ್ಮ)**

**ಭಾವಾರ್ಥ** : ಭೂಮಿಯಲ್ಲಿರುವ ಸುವಾಸನೆ, ಅಗ್ನಿಯಲ್ಲಿರುವ ತೇಜಸ್ಸು, ಜೀವರಾಶಿಗಳಲ್ಲಿನ ಜೀವನ, ತಪಸ್ವಿಕರಲ್ಲಿನ ತಪಸ್ಸು ಆಗಿದ್ದೇನೆ.

**ವಿವರ** : ಪರಮಾತ್ಮ ಅಗ್ನಿಯಲ್ಲಿ, ಭೂಮಿಯಲ್ಲಿ ಅಣುಅಣುವು ವ್ಯಾಪಿಸಿ ಮಣ್ಣಿನ ಕಣಗಳಿಗೆ ವಾಸನೆ ಕೊಡುತ್ತಿದ್ದಾನೆ. ಅಗ್ನಿ ಕಣಗಳಿಗೆ ತೇಜಸ್ಸು ಕೊಡುತ್ತಿದ್ದಾನೆ. ಅಚರ ಪ್ರಕೃತಿಯಲ್ಲಿ ಅಗ್ನಿ, ಭೂಮಿಗೆ ಹೇಗೆ ಅವವುಗಳ ಪ್ರತ್ಯೇಕತೆಯ ಹಿಂದೆ ಕಾರಣ ಭೂತ ನಾಗಿದ್ದಾನೋ, ಹಾಗೆ ಚರ ಪ್ರಕೃತಿಯಲ್ಲಿ ಜೀವರಾಶಿಗಳ ಹಿಂದೆ ಕಾಣಿಸದ

ಕರ್ಮರೂಪವಾಗಿ ಅವುಗಳ ಜೀವನ ವಿಧಾನವನ್ನೇರ್ಪಡಿಸುತ್ತಿದ್ದಾನೆ. ಅಷ್ಟೇ ಅಲ್ಲದೆ ಒಂದಕ್ಕೋಸ್ಕರ ಪರಿತಪಿಸುವವರಲ್ಲಿನ ತಪವೂ ಸಹ ತಾನಾಗಿದ್ದಾನೆ. ಇನ್ನೂ ಹೇಗಿರುತ್ತಾನೆಂದರೆ!

**(6) ಶ್ಲೋ॥ 10 : ಬೀಜಂ ಮಾಂ ಸರ್ವಭೂತಾನಾಂ ವಿದ್ಧಿ ಪಾರ್ಥ! ಸನಾತನಮ್ ।**
**ಬುದ್ಧಿರ್ಬುದ್ಧಿ ಮತಾಮಸ್ಮಿ ತೇಜಸ್ತೇ ಜಸ್ವಿನಾ ಮಹಮ್ ॥**
**(ಪರಮಾತ್ಮ)**

**ಭಾವಾರ್ಥ** : ಸರ್ವ ಜೀವರಾಶಿಗಳಿಗೂ ಶಾಶ್ವತವಾದ ಬೀಜವು ನಾನೇ ಎಂದು ತಿಳಿ. ಬುದ್ಧಿವಂತರಲ್ಲಿನ ಬುದ್ಧಿಯೂ ಮತ್ತು ತೇಜಸ್ಸಲ್ಲಿ ತೇಜಸ್ಸಾಗಿದ್ದೇನೆ.

**ವಿವರ** : ಬೀಜಂ ಎಂದರೆ ಹುಟ್ಟುವುದಕ್ಕೆ ಕಾರಣವಾದುದೆಂದು ಅರ್ಥ. "ಜಂ" ಎಂದರೆ ಹುಟ್ಟುವುದೆಂದೂ, "ಬೀ" ಎಂದರೆ ಕಾರಣವಾದುದೆಂದೂ ಹೇಳಬಹುದು. ಬೀಜಂ ಎಂದರೆ ಗಿಡವೊಂದರ ಬೀಜವೆಂದು ಅಂದುಕೊಳ್ಳದೆ, ಜೀವರಾಶಿ ಹುಟ್ಟುವುದಕ್ಕೆ ಕಾರಣವಾದುದೆಂದು ತಿಳಿಯಬೇಕು. ಗಿಡಕ್ಕೆ ಬೀಜ ಕಾಳಾದಾಗ, ಪಕ್ಷಿಗೆ ಬೀಜ ಮೊಟ್ಟೆಯಾದಾಗ, ಮನುಷ್ಯನಿಗೆ ಬೀಜ ವೀರ್ಯಕಣವಾಗಿದೆ. ಬೀಜವಾಗಲಿ, ಮೊಟ್ಟೆಯಾಗಲಿ, ವೀರ್ಯಕಣವಾಗಲಿ ಈ ಮೂರನ್ನು ಬೀಜ ಎನ್ನುತ್ತೇವೆ. ಬೀಜ ಮೂರು ರೂಪಗಳಲ್ಲಿದೆ. ಮೂರು ರೂಪಗಳಲ್ಲಿರುವ ಬೀಜದಿಂದ ಮೂರು ವಿಧಗಳ ಜನ್ಮಗಳು ಭೂಮಿ ಮೇಲೆ ಇವೆ. ಮೊಟ್ಟೆಯಿಂದ ಹುಟ್ಟುವುದನ್ನು ಅಂಡಜವೆಂದೂ, ವಿರ್ಯದಿಂದ ಹುಟ್ಟುವುದನ್ನು ಪಿಂಡಜವೆಂದೂ, ಕಾಳಿನಿಂದ ಹುಟ್ಟುವುದನ್ನು ಉದ್ಭಿಜ ಎಂದೂ ಹೇಳುತ್ತೇವೆ. ಭೂಮಿ ಮೇಲೆ ಹುಟ್ಟುವ ಅಂಡಜ, ಪಿಂಡಜ, ಉದ್ಬಿಜ ಎನ್ನುವ ಮೂರು ವಿಧ ಜನ್ಮಗಳಿಗೆ ಕಾರಣ ಬೀಜ ಮೂರು ವಿಧಗಳಾಗಿ ಇದ್ದರೂ ಅವುಗಳಲ್ಲಿನ ಬೀಜಶಕ್ತಿ ಒಂದೇ. ಕಾಳು, ವೀರ್ಯ, ಅಂಡ ಸ್ಥೂಲವಾಗಿ ಕಾಣಿಸುವವೇ ಆದರೂ ಅವುಗಳಲ್ಲಿ ಕಾಣಿಸದ ಶಕ್ತಿ ಒಂದು ಇದೆ. ಕಾಳಿನಲ್ಲಿನ ಬೀಜ ಬೇರೆ, ಕಾಳು ಬೇರೆ. ಆದ್ದರಿಂದ ಬೀಜಶಕ್ತಿಯಿಲ್ಲದ ಕಾಳುಗಳು ಸಹ ಕೆಲವು ಇರಬಹುದೆಂದು ಹೇಳಬಹುದು. ಅಂತಹ ಕಾಳುಗಳು ಭೂಮಿಯಲ್ಲಿ ಹಾಕಿದರೂ ಮೊಳಕೆ ಬರುವುದಿಲ್ಲ. ಹಾಗೆಯೇ ಬೀಜಶಕ್ತಿ ಇಲ್ಲದ ವೀರ್ಯವು ಇರಬಹುದು. ಅಂತಹ ವೀರ್ಯಕ್ಕೆ ಗರ್ಭಬರುವುದಿಲ್ಲ. ಅದೇ ವಿಧವಾಗಿ ಬೀಜಶಕ್ತಿ ಇಲ್ಲದ ಮೊಟ್ಟೆಗಳು ಮರಿಯಾಗುವುದಿಲ್ಲ. ಕಾಳು, ವೀರ್ಯ, ಮೊಟ್ಟೆಯಲ್ಲಿನ ಬೀಜಶಕ್ತಿಗೆ ಕಾರಣವಾದ ಶಕ್ತಿ ಒಂದಿದೆ. ಅದೇ ಪರಮಾತ್ಮಶಕ್ತಿ. ಎಲ್ಲವುಗಳಲ್ಲಿ ಅಣುಅಣುವಿನಲ್ಲಿ ವ್ಯಾಪಿಸಿದ ಪರಮಾತ್ಮ ವೀರ್ಯದಲ್ಲಿಯೂ, ಕಾಳಿನಲ್ಲಿಯೂ,

ಮೊಟ್ಟೆಯಲ್ಲಿಯೂ ಬೀಜಶಕ್ತಿಯಾಗಿದ್ದಾನೆ. ಆದ್ದರಿಂದ **"ಬೀಜಂ ಮಾಂ ಸರ್ವ ಭೂತಾನಾಮ್"** ಎಂದು ಶ್ಲೋಕದಲ್ಲಿ ಹೇಳಿದ್ದಾನೆ.

ಕಾಳಿನಲ್ಲಿನ ಬೀಜಶಕ್ತಿ ಕಾಣಿಸದೆ ಹೋದರೂ ಸಸಿ ಮೊಳಕೆ ಬರುವುದಕ್ಕೆ ಕಾರಣ ಕಾಳೆಂದು ಎಲ್ಲರಿಗೂ ತಿಳಿದಿದೆ. ಕಾಣಿಸುವ ಪದಾರ್ಥ ಹುಟ್ಟುವುದಕ್ಕೆ ಕಾಣಿಸದ ಶಕ್ತಿ ಕಾರಣವಾಗಿದೆ. ಪದಾರ್ಥಗಳು ಜೀವವಿರುವವು, ಜೀವವಿಲ್ಲದಿರುವವೂ ಸಹ ಇರಬಹುದು. ಎಲ್ಲದಕ್ಕೂ ಕಾರಣವಾದುದು ಪರಮಾತ್ಮ ಶಕ್ತಿಯೇ. ಇಲ್ಲಿ ಸರ್ವಭೂತಾನಾಮ್ ಎಂದು ಜೀವ ಇರುವವುಗಳನ್ನೇ ಕುರಿತು ಮಾತನಾಡುತ್ತಿದ್ದೇವೆಂದು ಜ್ಞಾಪಕ ಇಟ್ಟುಕೊಳ್ಳಬೇಕು. ಯಾವ ಇಂದ್ರಿಯಕ್ಕೂ ತಿಳಿಯದ ಪರಮಾತ್ಮ ಶಕ್ತಿ ಜೀವರಾಶಿಗಳ ಶರೀರದಲ್ಲಿ ಅನೇಕ ವಿಧ ಶಕ್ತಿಗಳಾಗಿ ಬದಲಾಗಿದೆ. ಮನಸ್ಸಿನೊಂದಿಗೆ ಸೇರಿ ಮನಸ್ಸಿಗೆ ಜ್ಞಾಪಕಶಕ್ತಿಯನ್ನು, ಬುದ್ಧಿಯಜೊತೆ ಸೇರಿ ಬುದ್ಧಿಗೆ ಯೋಚನಾಶಕ್ತಿಯನ್ನು ತಿಳಿಸುತ್ತಿದೆ. ಯಾರಾದರೂ ಬಹಳ ತಿಳುವಳಿಕೆ ಇರುವವನು ಇದ್ದರೆ ಅವನ ತಿಳಿವಳಿಕೆಯೊಂದರ ಪ್ರಾವೀಣ್ಯತೆ ಎಲ್ಲವೂ ಸಹ ಪರಮಾತ್ಮ ಶಕ್ತಿಯಿಂದಲೇ ಉಂಟಾಗಿದೆ ಎಂದು ತಿಳಿಯಬೇಕು. ಈ ವಿಧವಾಗಿ ಮನುಷ್ಯನಲ್ಲಾಗಲಿ ಮತ್ತು ಯಾವ ಇತರ ಜೀವರಾಶಿಗಳಲ್ಲಾಗಲಿ ಯಾವುದಾದರು ಪ್ರಾವೀಣ್ಯತೆ ಇದ್ದರೆ ಆ ಪ್ರಾವೀಣ್ಯತೆ ಎಲ್ಲವೂ ಪರಮಾತ್ಮ ಶಕ್ತಿಯಿಂದಲೇ ಉಂಟಾಗಿದೆ ಎಂದು ತಿಳಿಯಬೇಕು ಯಾವ ವಿದ್ಯೆಯಲ್ಲಾಗಲಿ, ಯಾವ ಆಟದಲ್ಲಾಗಲಿ, ಯಾವ ಕಲೆಯಲ್ಲಾಗಲಿ, ಯಾರ ಮಾತುಗಳಲ್ಲಾಗಲಿ, ಯಾರ ಕೆಲಸದಲ್ಲಾಗಲಿ ಉತ್ತಮ ಪ್ರಾವೀಣ್ಯತೆ ಇದ್ದರೆ ಅದೆಲ್ಲಾ ದೈವಶಕ್ತಿಯಿಂದ ಏರ್ಪಟ್ಟಿರುವುದೇ ಎಂದು ತಿಳಿಯಬೇಕು.

ಇಲ್ಲೊಂದು ಗಮನಿಕೆ ಪರಮಾತ್ಮನನ್ನು ಒಂದು ಕಡೆ ಇದ್ದಾನೆಂದು ಪುರುಷನಾಗಿ, ಮತ್ತೊಂದು ಕಡೆ ಇದೆಯೆಂದು ಸ್ತ್ರೀಲಿಂಗವಾಗಿ ಹೇಳುವುದೇನೆಂದು ಅನುಮಾನ ಬರಬಹುದು. ಪರಮಾತ್ಮ ಎನ್ನುವುದು ಸ್ತ್ರೀಯು ಅಲ್ಲ ಪುರುಷನು ಅಲ್ಲ. ಅದು ಯಾವುದು ಅಲ್ಲದಿರುವುದು. ಅದಕ್ಕೆ ರೂಪವಿಲ್ಲ, ಹೆಸರಿಲ್ಲ, ಪರಮಾತ್ಮ ಎನ್ನುವುದು ಹೆಸರೂ ಸಹ ಅಲ್ಲ. ಆತ್ಮಕ್ಕೆ ಬೇರೆಯಾದುದೆಂದು ತಿಳಿಸುವ ಅರ್ಥ ಪರಮಾತ್ಮ. ಯಾವುದು ಅಲ್ಲದಿರುವುದನ್ನು ಯಾವುದರಾಗಿಯೂ ಹೇಳಬಹುದು. ಒಂದುಬಾರಿ ಸ್ತ್ರೀ ತತ್ತ್ವವಾಗಿ, ಒಂದುಬಾರಿ ಪುರುಷತತ್ತ್ವವಾಗಿ ಹೇಳುವುದರಲ್ಲಿ ಎರಡರಲ್ಲಿ ಒಳಗೊಂಡು, ಎರಡಕ್ಕೂ ಅತೀತನಾಗಿಯೂ ಇದ್ದಾನೆಂದು ಅರ್ಥ ಮಾಡಿಕೊಳ್ಳಬೇಕು. ಪರಮಾತ್ಮನನ್ನು ಸಂದರ್ಭಾನುಸಾರವಾಗಿ ಅದು ಎಂದೂ ಆತನು ಎಂದೂ ಹೇಳುತ್ತಿರುತ್ತೇವೆ. ಸ್ತ್ರೀಯಾಗಿ ಪುರುಷನಾಗಿ ಕರೆಯಲ್ಪಡುವವನು ಒಬ್ಬ ಪರಮಾತ್ಮನೆಂದೇ ತಿಳಿಯಬೇಕು.

**(6) ಶ್ಲೋ॥ 11 : ಬಲಂ ಬಲವತಾಂ ಚಾಹಂ ಕಾಮರಾಗ ವಿವರ್ಜಿತಮ್ ।**
**ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ॥**
**(ಪರಮಾತ್ಮ)**

**ಭಾವಾರ್ಥ** : ಕಾಮ ರಾಗ ವಿವರ್ಜಿತ ಮೊನೆರಿಸುವ ಬಲವಂತರಲ್ಲಿನ ಬಲವು ನಾನು, ಧರ್ಮಗಳಿಗೆ ವಿರುದ್ಧವಾಗಿರುವವರಲ್ಲಿನ ಆಸೆಯೂ ನಾನೇ.

**ವಿವರ** : ನಾವು ಬರೆದಿರುವ ಭಾವವು ನೋಡಿದ್ದೀರಲ್ಲವೆ! ಗುಣಗಳನ್ನು ಜಯಿಸುವುದು ಒಂದು ಯುದ್ಧವಂತಹದೆಂದು ಮೊದಲು ಹೇಳಿಕೊಂಡಿದ್ದೇವೆ. ಯುದ್ಧ ಮಾಡುವುದಕ್ಕೆ ಬಲ ಅಗತ್ಯ. ಇಲ್ಲಿಯೂ ಸಹ ಅದೇ ವಿಷಯ ಪ್ರಸ್ತಾಪಿಸುತ್ತಾ ಕಾಮ, ಕ್ರೋಧ, ಲೋಭ, ಮೋಹ, ಮಧ, ಮತ್ಸರಗಳೆಂಬ ಆರು ಗುಣಗಳು ಅವುಗಳ ವಿರುದ್ಧವಾದ ದಾನ, ದಯ, ಔದಾರ್ಯ, ವೈರಾಗ್ಯ, ವಿನಯ, ಪ್ರೇಮ ಎನ್ನುವ ಆರು ಗುಣಗಳು ಒಟ್ಟು ಹನ್ನೆರಡರಲ್ಲಿ ಮೊದಲನೆಯದಾದ ಆಸೆ (ಕಾಮ) ಕಡೆಯದಾದ ಪ್ರೇಮದವರೆಗೂ ಇರುವ ಗುಣಗಳನ್ನು ಜಯಿಸಬೇಕೆಂದರೂ, ಅವುಗಳನ್ನು ನಿರೋಧಿಸಬೇಕೆಂದರೂ, ಜೀವಾತ್ಮಕ್ಕೆ ಶ್ರದ್ಧೆ ಎನ್ನುವ ಬಲ ಎಷ್ಟೋ ಅಗತ್ಯ. ಶರೀರ ಬಲವು ಇಲ್ಲಿ ಅವಶ್ಯಕತೆ ಇಲ್ಲ. ಶರೀರ ಬಲ ಇರುವವರು ಗುಣಗಳನ್ನು ಜಯಿಸುವುದಿಲ್ಲವೆಂದು, ಶರೀರದೊಳಗಿರುವ ಶ್ರದ್ಧೆ ಎಷ್ಟು ಬಲವಾದುದಾದರೆ ಅಷ್ಟು ಬೇಗನೇ ಗುಣಗಳನ್ನು ಜಯಿಸಬಹುದೆಂದು ತಿಳಿಯಬೇಕು. ಗುಣಗಳನ್ನು ಜಯಿಸುವ ಶ್ರದ್ಧಾಬಲ ಇರುವವರಲ್ಲಿ ಬಲವೂ ಸಹ ಪರಮಾತ್ಮನೇ ಆಗಿದ್ದಾನೆ. ಆತನು (ಪರಮಾತ್ಮ) ಶರೀರದಲ್ಲಿ ಎಲ್ಲಕಡೆಯೂ ವ್ಯಾಪಿಸಿದ್ದಾನೆ. ಆದ್ದರಿಂದ ಶರೀರ ಭಾಗಗಳಲ್ಲಿ ಎಲ್ಲಿ ಏನು ಇದೆಯೋ ಅಲ್ಲಿ ಅದರ ಪ್ರಭಾವವೂ ಸಹ ಪರಮಾತ್ಮನಾಗಿದ್ದಾನೆ. ಒಳ್ಳೆಯದರಲ್ಲಿ ಒಳ್ಳೆಯದು, ಕೆಟ್ಟದರಲ್ಲಿ ಕೆಟ್ಟದ್ದು ಆತನೆ ಎಂದು ಗ್ರಹಿಸಬೇಕು, ಹಾಗಲ್ಲದೆ ಒಳ್ಳೆಯವು ಮಾತ್ರ ಪರಮಾತ್ಮನೆಂದು, ಒಳ್ಳೆಯವು ಅಲ್ಲದಿರುವವು ಪರಮಾತ್ಮ ಅಲ್ಲವೆಂದುಕೊಳ್ಳಬಾರದು. ಈ ವಿಷಯವಾಗಿ ಉದಾಹರಣೆಯಾಗಿ ಮೇಲಿನ ಶ್ಲೋಕದಲ್ಲಿ **'ಧರ್ಮಾವಿರುದ್ಧೋ ಭೂತೇಷು ಕಾಮೋಸ್ಮಿ'** ಎಂದಿದ್ದಾನೆ. ಧರ್ಮ ವಿರುದ್ಧವಾದ ಜೀವರಾಶಿಗಳಲ್ಲಿನ ಕಾಮವು ನಾನೇ ಆಗಿದ್ದೇನೆಂದು ಹೇಳಿದ್ದಾನೆ. ಇತರ ಗೀತೆಗಳಲ್ಲಿ ಧರ್ಮವಿರುದ್ಧವಲ್ಲದ ಕಾಮ ನಾನೇ ಎಂಬ ಭಾವವು ಬರೆಯುವುದು ಶೋಚನೀಯ.

**(6) ಶ್ಲೋ॥ 12 : ಯೇಚೈವ ಸಾತ್ತ್ವಿಕಾ ಭಾವಾ ರಾಜಸಾ ಸ್ತಾಮಸಾಶ್ಚಯೇ ।**
**ಮತ್ತ ಏವೇತಿ ತಾನ್ವಿದ್ಧಿ ನ ತ್ವಹಾಂ ತೇಷು ತೇ ಮಯಿ ॥**
**(ಪರಮಾತ್ಮ)**

**ಭಾವಾರ್ಥ :** ಸಾತ್ತ್ವಿಕ, ರಾಜಸ, ತಾಮಸ ಭಾವಗಳು ನನ್ನಿಂದ ಸೃಷ್ಟಿಸಲ್ಪಟ್ಟಿವೆಯೆಂದು ತಿಳಿದುಕೊ. ಅವುಗಳಲ್ಲಿ ನಾನು ಇಲ್ಲ ಅವು ನನ್ನಲ್ಲಿವೆ.

**ವಿವರ** : ಮೂರು ಲೋಕಗಳೆನ್ನುವ ಮೂರು ಗುಣಭಾಗಗಳು ಪ್ರಕೃತಿ ಜನಿತಗಳಾದರೂ ಅಂದರೆ ಪ್ರಕೃತಿಯಿಂದ ಹುಟ್ಟಿದರೂ, ಮೊದಲು ಪ್ರಕೃತಿಯನ್ನು ಹುಟ್ಟಿಸಿದವನು ಪರಮಾತ್ಮ. ಆದ್ದರಿಂದ ಗುಣಗಳ ಹುಟ್ಟು ಸಹ ಪರಮಾತ್ಮನಿಂದಲೇ ನಡೆದಿದೆ ಎಂದು ಮೂಲ ತೆಗೆದುಕೊಂಡು ಹೇಳಬೇಕು. ಅದರ ಪ್ರಕಾರ ಮೂರು ಲೋಕಗಳು ನನ್ನಿಂದ ಹುಟ್ಟಿವೆಯೆಂದಿದ್ದಾನೆ. ಗುಣಗಳಿಗೆ ಆಧಾರವಾಗಿ ಪರಮಾತ್ಮ ಇದ್ದಾನೆ. ಪರಮಾತ್ಮಕ್ಕೆ ಆಧಾರವಾಗಿ ಗುಣಗಳು ಇಲ್ಲ. ಆದ್ದರಿಂದ ಅವುಗಳಲ್ಲಿ ನಾನು ಇಲ್ಲ ಅವು ನನ್ನಲ್ಲಿಯೇ ಇವೆ ಎಂದಿದ್ದಾನೆ. ಸಾತ್ತ್ವಿಕ, ರಾಜಸ, ತಾಮಸ ಎಂಬುವ ಮೂರು ಗುಣಗಳು ಪ್ರಕೃತಿಯಲ್ಲಿನ ಭಾಗಗಳೇ ಆದರೂ ಅವುಗಳಿಗೆ ಆಧಾರ ಪರಮಾತ್ಮನೆ ಎಂದು ತಿಳಿಯಬೇಕು.

**(6)ಶ್ಲೋ॥ 13 : ತ್ರಿಭಿ ರ್ಗುಣಮಯೈ ರ್ಭಾವೈ ರೇಭಿಃ ಸರ್ವಮಿದಮ್ ಜಗತ್ ।**
**ಮೋಹಿತಂ ನಾಭಿ ಜಾನಾತಿ ಮಾಮೇಭ್ಯಃ ಪರ ಮವ್ಯಯಮ್ ॥**
**(ಪರಮಾತ್ಮ)**

**ಭಾವಾರ್ಥ :** ಈ ಜಗವೆಲ್ಲವೂ ಸಾತ್ತ್ವಿಕ, ರಾಜಸ, ತಾಮಸ ಗುಣಮಯವಾಗಿರುವುದರಿಂದ ಅವುಗಳ ಪ್ರಭಾವದಿಂದ ಮೋಹಿಸಲ್ಪಟ್ಟವರಾಗಿ, ನಾನು ಅವ್ಯಯವಾದ ಮೋಕ್ಷವೆಂದು ತಿಳಿಯದಿದ್ದಾರೆ.

**ವಿವರ :** ಈ ಪ್ರಪಂಚದಲ್ಲಿನ ಎಲ್ಲಾ ಜೀವರಾಶಿಗಳು ಮತ್ತು ಮನುಷ್ಯರು ಸಾತ್ತ್ವಿಕ, ರಾಜಸ, ತಾಮಸ ಗುಣಗಳಿಂದ ಪ್ರವರ್ತಿಸುತ್ತಿರುವುದರಿಂದ, ಆ ಗುಣ ಪ್ರಭಾವಗಳಿಂದ ಪ್ರಪಂಚವನ್ನೇ ಗುರುತಿಸಿ ಅದರಲ್ಲಿಯೇ ಸಂಚರಿಸುತ್ತಿದ್ದಾರೆ. ಗುಣಗಳು ಪ್ರಕೃತಿ ಜನಿತಗಳಾಗಿರುವುದರಿಂದ ಅವು ಪ್ರಕೃತಿಗೆ ಸಂಬಂಧಿಸಿದ ವಿಷಯಗಳಲ್ಲಿಯೇ ಮಾನವರನ್ನು ನೆಲೆಗೊಳಿಸುತ್ತಿವೆ. ಗುಣಗಳ ಪ್ರಭಾವದಿಂದ ಪ್ರಕೃತಿಗಿಂತ ಬೇರೆಯಾದ ಸಾಕಾರನಾದ ಭಗವಂತನನ್ನಾಗಲಿ, ನಿರಾಕಾರವಾದ ಪರಮಾತ್ಮನನ್ನಾಗಲಿ ಗುರುತಿಸಲಾರದೆ ಹೋಗುತ್ತಿದ್ದಾರೆ. ಗೋಡೆ ಹಿಂದೆ ಇರುವವನು ಗೋಡೆಯ ಮುಂದೆ ಇರುವವನನ್ನು ನೋಡದಿರುವಂತೆ, ಗುಣಗಳ ಹಿಂದಿರುವ ಜೀವಾತ್ಮ ಗುಣಗಳ ಆಚೆ ಇರುವ ಪರಮಾತ್ಮನನ್ನು ನೋಡಲಾರದೆ ಇದ್ದಾನೆ.

**(6) ಶ್ಲೋ ॥ 14 : ದೈವೀಹ್ಯೇಷಾ ಗುಣಮಯೀ ಮಮಮಾಯಾ ದುರತ್ಯಯಾ ।**
**ಮಾಮೇವ ಯೇ ಪ್ರಪದ್ಯನ್ತೇ ಮಾಯಾ ಮೇತಾಂ ತರನ್ತಿ ತೇ ॥**
**(ಪರಮಾತ್ಮ)**

**ಭಾವಾರ್ಥ**: ದೈವನಿರ್ಮಿತವಾದ ಗುಣಗಳಿಂದ ಕೂಡಿಕೊಂಡ ನನ್ನ ಮಾಯೆ ದುಸ್ಸಾಧ್ಯವಾದುದು. ಯಾರಾದರೆ ನನ್ನನ್ನು ಶರಣುಕೋರುವವರೋ ಅವರು ಮಾಯೆಯನ್ನು ದಾಟಿಹೋಗುತ್ತಾರೆ.

**ವಿವರ** : ಆದಿಕರ್ತನಾದ ಪರಮಾತ್ಮ ಸರ್ವಜಗತ್ತಿಗೆಲ್ಲವೂ ಅಧಿಪತಿಯಾಗಿ, ಸರ್ವವನ್ನು ತಾನೇ ಸೃಷ್ಟಿಸಿ ಅವು ಎಲ್ಲಾ ನಡೆಯುವುದಕ್ಕೆ ಬೇಕಾದ ಪದ್ಧತಿಯನ್ನು ಏರ್ಪಡಿಸಿದ್ದಾನೆ. ತಾನು ಏರ್ಪಡಿಸಿದ ಪದ್ಧತಿಗೆ ಸಮಸ್ತವು ಕಟ್ಟು ಬಿದ್ದು ಇರುವಂತೆ ಮಾಡಿದ್ದಾನೆ. ಸರ್ವಪ್ರಪಂಚಕ್ಕೂ ತಾನೇ ಸೃಷ್ಟಿಕರ್ತ, ಅಧಿಪತಿಯಾದರೂ ಪ್ರಪಂಚದ ಜೊತೆ ತಾನು ಯಾವ ಮಾತ್ರ ಜೋಕ್ಯ ಮಾಡಿಕೊಳ್ಳದೆ, ಬಂಧವು ಇಟ್ಟುಕೊಳ್ಳದೆ, ತಾನು ನಿರ್ಮಿಸಿದ ಪದ್ಧತಿಯಿಂದ ನಡೆಯುವಂತೆ ನಿರ್ಮಾಣ ಮಾಡಿದ್ದಾನೆ. ತಾನು ನಿರ್ಮಿಸಿದ ಪದ್ಧತಿಗೆ ಸಮಸ್ತವು ಅಧೀನವಾಗಿದ್ದು, ಆ ಪದ್ದತಿ ಪ್ರಕಾರವೇ ನಡೆದುಕೊಳ್ಳುತ್ತಿವೆ. ಈ ಲೆಕ್ಕ ಪ್ರಕಾರ ಸರ್ವಪ್ರಪಂಚವನ್ನು ಅಧೀನಪಡಿಸಿಕೊಂಡು ಆಡಿಸುತ್ತಿರುವುದು ಸ್ವತಃವಾಗಿ ಪರಮಾತ್ಮನು ಅಲ್ಲ. ಪರಮಾತ್ಮನಿಂದ ನಿರ್ಮಿಸಲ್ಪಟ್ಟ ಪ್ರತ್ಯೇಕವಾದ ವಿಧಾನ. ಆ ವಿಧಾನಕ್ಕೆ ಅಥವಾ ಪದ್ಧತಿಗೆ ಮುಖ್ಯವಾದ ಹೆಸರು ಇದೆ. ಅದನ್ನೇ ಮಾಯೆ ಎನ್ನುತ್ತಿದ್ದೇವೆ. ಮಾಯೆಗೆ ಮತ್ತೆ ಕೆಲವು ಹೆಸರುಗಳು ಇವೆ. ಯೇಸುಪ್ರಭು ಅದಕ್ಕೆ ಸಾತಾನ್ ಎಂದು ಹೆಸರಿಟ್ಟರೆ, ಇಸ್ಲಾಂ ಪ್ರವಕ್ತ ಸೈತಾನ್ ಎನ್ನುವ ಹೆಸರಿನಿಂದ ಕರೆದಿದ್ದಾನೆ. ಪರಮಾತ್ಮ ನಿರ್ಮಿಸಿರುವುದು ಮಾಯೆಯಾದ್ದರಿಂದ ಈ ಶ್ಲೋಕದಲ್ಲಿ **' ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ'** ಎಂದು ಹೇಳಿದ್ದಾನೆ.

ಮಾಯೆ ಪರಮಾತ್ಮನಿಂದ ನಿರ್ಮಿಸಲ್ಪಟ್ಟು ಆತನು ಮೊದಲು ಹೇಳಿದ ಆದೇಶಾನುಸಾರ ತನ್ನ ಕೆಲಸವನ್ನು ತಾನು ಮಾಡುತ್ತಾ ಹೋಗುತ್ತಿದೆ. ಪ್ರಪಂಚದಲ್ಲಿ ಮಾಯೆಗೆ ಒಳಪಡದಿರುವುದು ಏನು ಇಲ್ಲ. ಹುಟ್ಟಿರುವವೆಲ್ಲಾ ಮಾಯೆಗೆ ಒಳಪಟ್ಟಿವೆ. ಮಾಯೆಗೆ ಒಳಪಡದಿರುವುದು ಮಾಯೆಯನ್ನೆ ಹುಟ್ಟಿಸಿರುವ ಪರಮಾತ್ಮ ಒಬ್ಬನೇ. ಮಾಯ ಪದ್ದತಿಯ ಪ್ರಕಾರ ತನ್ನ ಅಧೀನದಲ್ಲಿರುವವರನ್ನು ಸಾಧಾರಣವಾಗಿ ನಡೆಸುತ್ತದೆ. ಹಾಗಲ್ಲದೆ ತನಗೆ ವಿರುದ್ಧವಾಗಿ ನಡೆದುಕೊಳ್ಳಬೇಕೆಂದುಕೊಳ್ಳುವವರಿಗೆ ಪೂರ್ತಿ ವಿರುದ್ಧವಾಗಿ

ಮಾಡುವುದಕ್ಕೆ ಪ್ರಯತ್ನಿಸುತ್ತದೆ. ಪ್ರಕೃತಿಸಿದ್ಧವಾದ ಜನನ ಮರಣದಿಂದ ತಪ್ಪಿಸಿ ಕೊಳ್ಳಬೇಕೆನ್ನುವವರು ಎಲ್ಲರೂ ಮಾಯೆ ಅಧೀನದಿಂದ ತಪ್ಪಿಸಿಕೊಳ್ಳಬೇಕು ಎಂದುಕೊಳ್ಳುವವರೆ. ಆದ ಕಾರಣ ಮಾಯೆಗೆ ಮುಕ್ತಿ ಬೇಕೆನ್ನುವವರು ವಿರೋಧಿಗಳು, ಮುಕ್ತಿ ಬೇಕೆನ್ನುವವರಿಗೆ ಮಾಯೆ ವಿರೋಧಿ. ಮುಕ್ತಿ ಬೇಕೆಂದುಕೊಳ್ಳುವವನು ಪ್ರಪಂಚ ಅಧಿನೇತನಾದರು ಮಾಯೆಯನ್ನು ಏನು ಮಾಡಲಾರ. ಆದರೆ ಮಾಯೆ ಅಂದುಕೊಂಡರೆ ಯಾರನ್ನಾದರೂ ಏನಾದರೂ ಮಾಡಬಲ್ಲದು. ಅದನ್ನು ಜಯಿಸಬೇಕೆಂದರೆ ದುಸ್ಸಾಧ್ಯವಾಗಿರುತ್ತದೆ. ಆದ್ದರಿಂದ **'ಮಮಮಾಯಾ ದುರತ್ಯಯಾ'** ಎಂದು ಮೇಲಿನ ಶ್ಲೋಕದಲ್ಲಿ ಹೇಳಿದ್ದಾರೆ. ಹಾಗಾದರೆ ಮೋಕ್ಷವನ್ನು ಯಾರು ಹೊಂದುವುದಿಲ್ಲವೆಂಬ ಪ್ರಶ್ನೆಯೂ ಸಹ ಬರಬಹುದು.

ಯಾರು ಜಯಿಸಲಾರದ ಅತಿ ಬಲವಾದ ಮಾಯೆಯನ್ನು ಜಯಿಸಿ, ಅದರ ಅಧೀನದಿಂದ ಹೊರಬೀಳುವುದಕ್ಕೆ ಪರಮಾತ್ಮನಲ್ಲಿ ಶರಣಾದವರಿಗೆ ಮಾತ್ರ ಸಾಧ್ಯವಾಗುತ್ತದೆ. ಆದ ಕಾರಣ ಮೇಲಿನ ಶ್ಲೋಕದಲ್ಲಿ **'ಮಾಮೇವ ಯೇಪ್ರಪದ್ಯಂತೇ'** ಎಂದಿದ್ದಾನೆ. ಪರಮಾತ್ಮ ಜ್ಞಾನ ಇಂತಹದೆಂದು ಸ್ವಲ್ಪವಾದರೂ ತಿಳಿದರಲ್ಲವೆ! ಆತನಿಗೆ ಶರಣಾಗತನಾಗಬೇಕೆಂಬ ಜ್ಞಾಪಕ ಬರುತ್ತದೆ. ಅದಕ್ಕೆ ಪರಮಾತ್ಮ ಒಂದು ಪ್ರತ್ಯೇಕವಾದ ವಿಧಾನವನ್ನು ನಿರ್ಮಿಸಿದ್ದಾನೆ. ಅವುಗಳೇ ಧರ್ಮಗಳು (ಜ್ಞಾನ). ಪರಮಾತ್ಮನ ಧರ್ಮಗಳನ್ನು ಆಚರಿಸುವವರನ್ನು ಮಾಯೆ ಎಷ್ಟು ಆತಂಕಪಡಿಸಿದರು ಅದರಿಂದ ಹೊರಬಿದ್ದು ಕೊನೆಗೆ ಪರಮಾತ್ಮನನ್ನೇ ಸೇರುತ್ತಾರೆ. ಹಾಗೆ ಆಚರಿಸುವುದಕ್ಕೆ ಪರಮಾತ್ಮ ಧರ್ಮಗಳು ಇಂತಹವೆಂದು ತಿಳಿಯಬೇಕಲ್ಲವೆ! ಎಂದು ಕೆಲವರು ಕೇಳಬಹುದು. ಇದಕ್ಕೆ ಉತ್ತರ ಏನೆಂದರೆ! ಪ್ರಪಂಚ ಸೃಷ್ಟಿ ಆದಿಯಲ್ಲಿ ಮಾಯೆಯನ್ನು ತಯಾರು ಮಾಡಿದ ಪರಮಾತ್ಮ ಮಾಯೆಗೆ ಪ್ರತ್ಯರ್ಥಿಯಾಗಿರುವಂತೆ ಸೂತ್ರಬದ್ಧವಾದ ಜ್ಞಾನವನ್ನು ಧರ್ಮಗಳನ್ನು ಸಹ ತಯಾರು ಮಾಡಿಟ್ಟಿದ್ದಾನೆ. ಮಾಯೆ ಕೆಲಸ ಮಾಯೆಗೆ, ಧರ್ಮಗಳ ಕೆಲಸ ಧರ್ಮಗಳಿಗೆ ನಿರ್ಮಿ ಸಿಟ್ಟಿದ್ದಾನೆ. ಆಗಿನಿಂದ ಅವು ಎರಡು ಅವುಅವುಗಳ ಕೆಲಸವನ್ನು ನಿರ್ವಹಿಸುತ್ತಲೇ ಇವೆ. ಮಾಯೆ ಅದಕ್ಕೆ ವಿರುದ್ಧವಾದ ಧರ್ಮಗಳನ್ನು ಪ್ರಪಂಚದಲ್ಲಿನ ಜೀವರಾಶಿಗಳಿಗೋಸ್ಕರವೇ ನಿರ್ಮಿಸಿದರೂ, ಜೀವರಾಶಿಗಳೆಲ್ಲವೂ ಮಾಯೆ ಬಗ್ಗೆಯೇ ಹೆಚ್ಚಾಗಿ ಪ್ರಭಾವಿತವಾಗುತ್ತಿವೆ. ಧರ್ಮಗಳ ಪಕ್ಕದಲ್ಲಿ ಸೇರಲಾರದೆ ಹೋಗುತ್ತಿವೆ. ಇದಕ್ಕೆ ಸ್ವಲ್ಪ ಕಾರಣವಿದೆ. ಪರಮಾತ್ಮ ಮಾಯೆಯನ್ನು ಮೂರು ವಿಧಗಳಾಗಿ ಜೀವರಾಶಿಗಳ ಮೇಲೆ ಕೆಲಸ ಮಾಡುವಂತೆ ನಿರ್ಮಿಸಿದ್ದಾನೆ. ಅದಕ್ಕಾಗಿ ಜೀವರಾಶಿಗಳನ್ನು ಮೂರು ವಿಧಗಳಾಗಿ ಸೃಷ್ಟಿಸಿದ್ದಾನೆ ಅವು

ಯಾವುವೆಂದರೆ! ಒಂದು ವಿಧ ಮೇಲಕ್ಕೆ ಬೆಳೆಯುವವು, ಎರಡನೇ ವಿಧ ಅಡ್ಡವಾಗಿ ಬೆಳೆಯುವವು. ಮೂರನೇ ವಿಧ ಕೆಳಗೆ ಬೆಳೆಯುವವು, ಮೊದಲನೇ ವಿಧ ಮೇಲಕ್ಕೆ ಬೆಳೆಯುವ ಅವುಗಳ ಮೇಲೆ ಮಾಯೆ ಪ್ರಭಾವ ಕಡಿಮೆ ಇರುತ್ತದೆ. ಆ ಜಾತಿ ಜೀವರಾಶಿಗಳು ಕರ್ಮವನ್ನು ಬಹಳ ಕಡಿಮೆ ಸಂಪಾದಿಸಿಕೊಳ್ಳುವವಾಗಿ, ಮಾಯೆಗೆ ದೂರವಾಗಿ ದೇವರಿಗೆ ಹತ್ತಿರವಾಗಿವೆ. ಎರಡನೇ ವಿಧವಾದ ಜೀವರಾಶಿಗಳು ಮೊದಲ ಜಾತಿಗಿಂತ ಸ್ವಲ್ಪ ಹೆಚ್ಚಿನ ಕರ್ಮ ಸಂಪಾದಿಸಿಕೊಳ್ಳುವವು ಆಗಿದ್ದು, ಮಾಯೆಗೂ ದೇವರಿಗೂ ಸಮಾನ ದೂರದಲ್ಲಿವೆ. ಮೂರನೇ ವಿಧದ ಜೀವರಾಶಿಗಳು ಹೆಚ್ಚಿನ ಕರ್ಮ ಸಂಪಾದಿಸಿಕೊಳ್ಳುತ್ತಾ, ಮಾಯೆಗೆ ಹತ್ತಿರವಾಗಿ ದೇವರಿಗೆ ದೂರವಾಗಿವೆ. ಆ ಮೂರು ವಿಧಗಳ ಜೀವರಾಶಿಗಳು ಯಾವು ಎಂದು ಪರಿಶೀಲಿಸಿ ನೋಡಿದರೆ, ಭೂಮಿಯಿಂದ ಹುಟ್ಟುತ್ತಿರುವ ಗಿಡಗಳು ಬಳ್ಳಿಗಳು ಮೊದಲಾದವೆಲ್ಲವೂ ಮೊದಲ ತರಗತಿ ಜಾತಿಯೆಂದು, ಅವುಗಳ ಶರೀರದಲ್ಲಿ ಆತ್ಮ ಸ್ಥಾನವಾದ ಮೆದುಳು ಅಥವಾ ಬೇರುಗಳಿಂದ ಮೇಲಕ್ಕೆ ಬೆಳೆಯುತ್ತಿವೆಂದು ತಿಳಿಯಬೇಕು. ಹಾಗೇ ಅಂಡಜಗಳಾಗಿ, ಪಿಂಡಜಗಳಾಗಿ ಹುಟ್ಟುತ್ತಿರುವ ಅನೇಕ ವಿಧ ಪ್ರಾಣಿ, ಕ್ರಿಮಿ, ಕೀಟಕ, ಮೀನುಗಳು, ಹಾವುಗಳು ಮೊದಲಾದವೆಲ್ಲವೂ ಎರಡನೆ ತರಗತಿಗೆ ಸೇರಿವೆ ಎಂದು, ಅವು ತಮ್ಮ ಶರೀರದಲ್ಲಿನ ಆತ್ಮ ಸ್ಥಾನವಾದ ಶಿರಸ್ಸಿನಿಂದ ಪಕ್ಕಕ್ಕೆ ಬೆಳೆಯುತ್ತಿವೆಂದು ತಿಳಿಯಬೇಕು. ಇನ್ನು ಪಿಂಡೋದ್ಭವಗಳಾದ ಒಂದೇ ಒಂದು ಮಾನವಜಾತಿ ಮಾತ್ರ ಮೂರನೆಯ ತರಗತಿಗೆ ಸೇರಿದೆ. ಈ ಜಾತಿ ಆತ್ಮ ಸ್ಥಾನವಾದ ಶಿರೋ ಸ್ಥಾನದಿಂದ ಕೆಳಗೆ ಬೆಳೆಯುವುದಾಗಿದೆ. ಈ ಮೂರು ಜಾತಿಗಳಲ್ಲಿ ಅವು ಅವುಗಳ ಅಂತಃಕರಣಗಳಾದ ಮನೋ, ಬುದ್ಧಿ, ಚಿತ್ತಗಳ ಕೆಲಸದಲ್ಲಾಗಲಿ, ಗುಣಗಳ ಚುರುಕುತನದಲ್ಲಾಗಲಿ ಬಹಳ ವ್ಯತ್ಯಾಸ ಇರುತ್ತದೆ. ಎಲ್ಲದಕ್ಕಿಂತ ಹೆಚ್ಚಾಗಿ ಚುರುಕುತನದಿಂದ ಕೆಲಸ ಮಾಡುವವು ಮೂರನೆ ಜಾತಿಯಾದ ಮನುಷ್ಯನಲ್ಲಿನ ಬುದ್ಧಿ, ಚಿತ್ತ, ಅಹಮ್, ಮನಸ್ಸು. ಮಾನವನಲ್ಲಿ ಅಂತಃಕರಣಗಳು ಬಲವಾದವಾಗಿವೆಯಾದ್ದರಿಂದ ಗುಣಗಳು ಚೆನ್ನಾಗಿ ಕೆಲಸ ಮಾಡುತ್ತಿವೆ. ಮಾಯೆ ಗುಣಗಳ ರೂಪದಲ್ಲಿ ಶರೀರದಲ್ಲಿದ್ದು ಮನುಷ್ಯನನ್ನು ತನ್ನ ಪ್ರಭಾವದಲ್ಲಿಯೇ ಇಟ್ಟುಕೊಳ್ಳುತ್ತಿದೆ. ಆದ್ದರಿಂದ ಮೇಲಿನ ಶ್ಲೋಕದಲ್ಲಿಯೂ ಸಹ **'ಗುಣಮಯೀ ಮಮ ಮಾಯ'** ಎಂದಿದ್ದಾನೆ. ದೇವರು ಮಾಯೆಯನ್ನು ಗುಣಗಳ ರೂಪದಲ್ಲಿ ಮಾನವನಲ್ಲಿ ಪ್ರತಿಷ್ಠಿಸಿದ್ದಾನೆ. ಆದ್ದರಿಂದ ಮಾಯೆಗೆ ಮಾನವನ ಮೇಲೆ ಹೆಚ್ಚಾಗಿ ಬಲವಿದೆ. ದೇವರು ಮಾನವನಲ್ಲಿ ಮಾಯೆಯನ್ನು, ಧರ್ಮಗಳನ್ನು ಎರಡನ್ನು ಪ್ರತಿಷ್ಠಿಸಿದ್ದರೂ, ಧರ್ಮಗಳ್ಯಾವುವೋ ಮನುಷ್ಯನಿಗೆ ತಿಳಿಯದ ಕಾರಣದಿಂದ, ಮತ್ತು ದೇವರು ತನಗೆ ಕೊಟ್ಟಿರುವ ಅಧಿಕಾರದಿಂದ, ಮಾಯೆ ಮಾನವರೆಲ್ಲರನ್ನು ತನ್ನಕಡೆಗೆ ಸೆಳೆದುಕೊಳ್ಳುತ್ತಿದೆ.

ತನ್ನ ಪಕ್ಷವೇ ಎಲ್ಲರಿಗೂ ಒಳ್ಳೆಯದಾಗಿ ಕಾಣಿಸುವಂತೆ ಮಾಡುತ್ತಿದೆ. ಮಾಯೆ ಮತ್ತು ಅದಕ್ಕೆ ವಿರುದ್ಧವಾದ ಜ್ಞಾನ ಅವುಅವುಗಳ ಇರುವಿಕೆಯನ್ನು ಕಳೆದುಕೊಳ್ಳದಂತಿರುವುದಕ್ಕೆ ಅವುಗಳ ಪ್ರಯತ್ನ ಅವು ಮಾಡುತ್ತಲೇ ಇವೆ. ಆ ಪ್ರಯತ್ನಗಳಲ್ಲಿ ಮಾಯಜ್ಞಾನ ದೈವಧರ್ಮಗಳಂತೆ ನಟಿಸುತ್ತಾ ತನ್ನ ಪ್ರಾಬಲ್ಯವನ್ನು ಬೆಳೆಸಿಕೊಳ್ಳುತ್ತಿದೆ. ಯಾವುದು ಏನಾದರು ಪ್ರಪಂಚದಲ್ಲಿ ದೈವಜ್ಞಾನಕ್ಕಿಂತ ಮಾಯೆಯೊಂದರ ಪ್ರಾಬಲ್ಯ ಅಧಿಕವಾಗಿರುವುದಕ್ಕೆ ಮುಖ್ಯವಾದ ಕಾರಣ ಒಂದಿದೆ. ದೈವಜ್ಞಾನಕ್ಕೆ ಒಂದರಷ್ಟು ಬಲ ಇರುವಾಗ, ಮಾಯೆಗೆ ಸಾವಿರದಷ್ಟು ಬಲ ಹೆಚ್ಚಾಗಿರುವಂತೆ ಮೊದಲೇ ನಿರ್ಣಯಿಸಲಾಗಿದೆ. ಒಂದರಷ್ಟು ಬಲವೂ ಸಹ ಜ್ಞಾನಕ್ಕೆ ಸರಿಯಾಗಿಲ್ಲ. ಆದ್ದರಿಂದ ಗೀತೆಯಲ್ಲಿ ಭಗವಂತನು ಮನುಷ್ಯರಲ್ಲಿ ಸಾವಿರಕ್ಕೊಬ್ಬನು ಸಿದ್ಧಿಗೋಸ್ಕರ ಪ್ರಯತ್ನಿಸುವುದೂ ಸಹ ಅಪರೂಪವಾಗಿರುತ್ತಾರೆಂದು ತಿಳಿಸಿದ್ದಾನೆ.

ಭೂಮಿ ಮೇಲೆ ಕೆಲವರು ಗುರುಗಳಾಗಿ ಜ್ಞಾನವನ್ನು ಬೋಧಿಸುವುದು, ಉಪದೇಶಗಳು ಕೊಡುವುದು ನಡೆಯುತ್ತಿರುವ ಕೆಲಸವೆ. ಮಾಯೆ ಅವರ ಮೇಲೆ ದೃಷ್ಟಿಯನ್ನಿಟ್ಟು, ಅವರನ್ನು ಒಳ್ಳೆಯ ಜ್ಞಾನಿಗಳಾಗಿ ಹೊರಗೆ ಕಾಣಿಸುವಂತೆ ಮಾಡಿ, ಅವರನ್ನು ಬಹಳ ಜನ ಪ್ರಜೆಗಳು ಆಶ್ರಯಿಸುವಂತೆ ಮಾಡಿ, ಆ ಗುರುಗಳು ಹೇಳಿದ ವಿಷಯಗಳು ಚೆನ್ನಾಗಿ ಕೇಳುವಂತೆ ಮಾಡುತ್ತದೆ. ಅಷ್ಟೇ ಅಲ್ಲದೆ ಬೋಧಿಸುವುದೆಲ್ಲವೂ ಪರಮಾತ್ಮ ಜ್ಞಾನ ಧರ್ಮವೇ ಎನ್ನುವಂತೆ, ಜ್ಞಾನ ದೇವರು ಎನ್ನುವ ಪದಗಳನ್ನು ಉಪಯೋಗಿಸುತ್ತಾ, ಎಷ್ಟೋ ಆಕರ್ಷಣೀಯವಾದ ಬೋಧನೆಗಳನ್ನು ಮಾಡುತ್ತಿರುತ್ತದೆ. ಆ ಬೋಧನೆಗಳಲ್ಲಿ ಶೇಕಡ ಒಂದರಷ್ಟು ದೈವಜ್ಞಾನ ಇರುವಾಗ 99% ಮಾಯೆಗೆ ಸಂಬಂಧಿಸಿದ ಜ್ಞಾನವೇ ಒಳಗೊಂಡಿರುತ್ತದೆ. ಇದು ಬಹಳ ಆಶ್ಚರ್ಯಕರವಾದ ವಿಷಯವಾದರೂ, ಇದು ಮಾಯೆಗೆ ಸಂಬಂಧಿಸಿದ ಜ್ಞಾನವೆಂದು, ಪರಮಾತ್ಮನಲ್ಲಿ ಐಕ್ಯಮಾಡುವುದು ಅಲ್ಲವೆಂದು ಯಾರು ಗುರುತಿಸಲಾರರು. ಅದೇ ಮಾಯೆಯೊಂದರ ದೊಡ್ಡಸ್ಥಿಕೆ. ಎಷ್ಟು ದೊಡ್ಡ ಆಧ್ಯಾತ್ಮಿಕ ಗುರುವಿದ್ದರೂ, ಸ್ವಚ್ಛವಾದ ಆಧ್ಯಾತ್ಮಿಕವನ್ನು ಬೋಧಿಸಿದರೂ ಅವರಲ್ಲಿಯೂ ಸಹ ಕೊನೆಗೆ 95% ದೈವ ಧರ್ಮಗಳಿಲ್ಲದ ಮಾಯೆಯೊಂದರ ಬೋಧನೆಯೇ ಇರುತ್ತದೆ. ಹೀಗೆ ಕಾಣಿಸುವ ಗುರುಗಳಲ್ಲಿಯೂ ಸಹ ಇದ್ದು ಅವರಿಂದಲೇ ದೈವ ಜ್ಞಾನವೆನ್ನುವಂತೆ ದೈವಧರ್ಮಗಳೆನ್ನುವಂತೆ ಅಧರ್ಮಗಳನ್ನು ಬೋಧಿಸುವುದರಿಂದ, ದೇವರನ್ನು ತಿಳಿದುಕೊಳ್ಳಬೇಕೆನ್ನುವವರೂ ಸಹ ಮಾಯೆಯಲ್ಲಿಯೆ ಸಿಲುಕಿಕೊಂಡು ಪರಮಾತ್ಮನ ಕಡೆ ಪ್ರಯಾಣಿಸದಂತೆ ಇದ್ದಾರೆ. ಇರುವ ಕೋಟಿ ಪ್ರಜೆಗಳಲ್ಲಿ ಸಾವಿರಾರು

ಸಂಖ್ಯೆಗಳಲ್ಲಿ ಕೆಲವರಿಗೆ ಮಾತ್ರವೆ ಜ್ಞಾನದ ಮೇಲೆ ಇಚ್ಛೆ ಉಂಟಾದಾಗ, ಅವರನ್ನೂ ಸಹ ಮಾಯೆ ಗುರುಗಳ ರೂಪದಲ್ಲಿ ಬೋಧಿಸುತ್ತಲೇ ತನ್ನ ಕಡೆಗೆ ಸೆಳೆದುಕೊಳ್ಳುತ್ತಿದೆ. ಆದ್ದರಿಂದ ಗೀತೆ ವಿಜ್ಞಾನಯೋಗದಲ್ಲಿ ಮೋಕ್ಷ ಕೋರುವವರಲ್ಲಿ ಕೊನೆಗೆ ಯಾರೋ ನನ್ನನ್ನು ತಿಳಿದುಕೊಳ್ಳುವುದು ಎಂದಿದ್ದಾನೆ. ಮಾಯೆ ಅನೇಕ ಸ್ಥಾನಗಳಲ್ಲಿ ವಿವಿಧ ಗುರುಗಳನ್ನು ಆಶ್ರಯಿಸುವುದರಿಂದ, ಜ್ಞಾನ ಕೋರುವವರು ಯಾವುದೋ ಒಬ್ಬ ಗುರುವನ್ನು ಆಶ್ರಯಿಸಿ ಮಾಯೆ ಆವರಣದಲ್ಲಿಯೇ ಸೇರಿಹೋಗುತ್ತಾರೆ. ಆದ್ದರಿಂದ ನಿಜವಾದ ಪರಮಾತ್ಮ ಜ್ಞಾನ ಸಿಗಬೇಕೆಂದರೆ ಅನೇಕ ಜನ್ಮಗಳ ಸಂಸ್ಕಾರದಿಂದಲೇ ಲಭ್ಯವಾಗುತ್ತದೆಂದು ಗೀತೆಯಲ್ಲಿ ಹೇಳಿದ್ದಾನೆ. ಅನೇಕ ಎಂದರೆ ನೂರು ಆಗಬಹುದು, ಸಾವಿರ ಆಗಬಹುದು. ಇಲ್ಲಿ ಕೆಲವರಿಗೆ ಒಂದು ಅನುಮಾನ ಬರಬಹುದು. ಅದು ಏನೆಂದರೆ! ಗುರುಗಳೆಲ್ಲರನ್ನೂ ಮಾಯೆ ಭ್ರಮಿಸುವಂತೆ ಮಾಡಿ, ತನ್ನ ಬೋಧನೆಯನ್ನೇ ಬೋಧಿಸುತ್ತಾ ಇರುವಾಗ, ಯಾರೂ ಪರಮಾತ್ಮ ಜ್ಞಾನವನ್ನು ಬೋಧಿಸುವವರೆ ಇಲ್ಲವೆಂದು ಹೇಳಿದಾಗ, ಅನೇಕ ಜನ್ಮಗಳ ನಂತರವಾದರು ಅವರಿಗೆ ಪರಮಾತ್ಮ ಜ್ಞಾನ ಹೇಗೆ ಲಭಿಸುತ್ತದೆಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಪರಮಾತ್ಮನ ಜ್ಞಾನ ಧರ್ಮಗಳನ್ನು ನೂರಕ್ಕೆ ನೂರು ಪಾಲು ಬೋಧಿಸುವ ಗುರುಗಳು ಭೂಮಿ ಮೇಲಿದ್ದರೆ ಪರಮಾತ್ಮ ಹುಟ್ಟಬೇಕಾದ ಅವಶ್ಯಕತೆಯೇ ಇಲ್ಲತಾನೆ! ಹಾಗೆ ತನ್ನ ಧರ್ಮಗಳು ತಿಳಿದು ಬೋಧಿಸುವವರು ಇಲ್ಲದಿರುವುದರಿಂದ, ಪರಮಾತ್ಮನೇ ಸ್ವತಃ ಭೂಮಿ ಮೇಲೆ ಹುಟ್ಟಿ ಬೋಧಿಸಬೇಕಾಗಿ ಬರುತ್ತಿದೆ. ಆದ್ದರಿಂದ ಧರ್ಮಗಳಿಗೆ ಗ್ಲಾನಿ ಏರ್ಪಟ್ಟಾಗ ನಾನು ಜನ್ಮಿಸಿ, ನನ್ನ ಧರ್ಮಗಳನ್ನು ತಿಳಿಸುತ್ತೇನೆಂದು ಗೀತೆಯಲ್ಲಿ ಹೇಳಿದ್ದಾನೆ.

ದೈವಧರ್ಮಗಳ ಸಲುವಾಗಿ ಪರಮಾತ್ಮನೇ ಸ್ವತಃ ಉದ್ಭವಿಸಿ, ತನ್ನ ಧರ್ಮಗಳನ್ನು ಪೂರ್ತಿಯಾಗಿ ತಿಳಿಸುವುದರಿಂದ ಮಾಯೆಗೆ ತೊಂದರೆ ಏರ್ಪಟ್ಟು, ಗುರುಗಳ ಮೇಲೆ ತನ್ನ ಪಟ್ಟು ತಪ್ಪಿಹೋಗುವ ಪರಿಸ್ಥಿತಿ ಏರ್ಪಡುತ್ತದೆ. ಆದ್ದರಿಂದ ಅಂತಹ ಪರಿಸ್ಥಿತಿ ಬಾರದಂತೆ ಮಾಯೆಯೂ ಸಹ ಸ್ವತಃ ಜನ್ಮ ಎತ್ತಿ, ಭಗವಂತನಿಗಿಂತಲೂ ದೊಡ್ಡದಾಗಿ ಕಾಣಿಸಿ, ತಾನೇ ಭಗವಂತನೆಂದು ಹೆಸರುವಾಸಿ ಆಗಿರುತ್ತದೆ. ಮಾಯೆ ಅವತಾರ ಭಗವಂತನ ಮುಂದೆ ಅಸಲಾದ ಪರಮಾತ್ಮನ ಅವತಾರವೂ ಸಹ ಕಡಿಮೆಯಾಗಿರುತ್ತದೆ. ಆದ್ದರಿಂದ ನಿಜವಾದ ಭಗವಂತನ ಜ್ಞಾನಿಗಳು ಸಹಿತ ಗುರುತಿಸಲಾರರು. ಆದರೆ ಮಾಯಾ ಭಗವಂತನ ಅಜ್ಞಾನಿಗಳು ಸಹಿತವು ಗುರುತಿಸಬಲ್ಲರು. ಭೂಮಿ ಮೇಲೆ ಧರ್ಮಗಳು ತಿಳಿಯದಿರುವಾಗ, ಅನೇಕ ಜನ್ಮ ಸಂಸ್ಕಾರಪರರಿಗೆ ಧರ್ಮಗಳು ಅವಶ್ಯಕವಾದಾಗ, ಸಾವಿರ ವರ್ಷಗಳಿಗೋ

ಅಥವಾ ಲಕ್ಷ ವರ್ಷಗಳಿಗೋ ಪರಮಾತ್ಮ ಜನ್ಮ ಎತ್ತಬೇಕಾಗಿ ಬರುತ್ತದೆ. ಮಾಯೆ ಮಾತ್ರ ಪರಮಾತ್ಮ ಜನ್ಮಕ್ಕೆ ಮುಂದೆ ಹಿಂದೆ ಅವತಾರ ಎತ್ತುವುದಲ್ಲದೆ, ಪರಮಾತ್ಮ ಭಗವಂತನಾಗಿ ಜನಿಸಿದಾಗ ತಾನೂ ಸಹ ಮೂರು ನಾಲ್ಕು ಕಡೆಗಳಲ್ಲಿ ಜನ್ಮಿಸಿ, ಎಲ್ಲರನ್ನೂ ತನ್ನಕಡೆ ಆಕರ್ಷಿಸಿಕೊಳ್ಳುವುದಕ್ಕೆ ಪ್ರಯತ್ನಿಸುತ್ತದೆ. ಪರಮಾತ್ಮ ಭಗವಂತನಾಗಿ ಯಾವ ದೇಶದಲ್ಲಿ ಹುಟ್ಟುತ್ತಾನೋ ಮಾಯೆಯೂ ಸಹ ಅದೇ ದೇಶದಲ್ಲಿ ಹುಟ್ಟುತ್ತದೆ. ಪರಮಾತ್ಮ ಯಾವ ಪ್ರದೇಶದಲ್ಲಿ ಹುಟ್ಟುತ್ತದೋ, ಆ ಪ್ರದೇಶಕ್ಕೆ ಸುತ್ತ ಮುತ್ತ ಮಾಯೆ ಮೂರು ಅಥವಾ ನಾಲ್ಕು ಜನ್ಮಗಳು ಹೊಂದಿರುತ್ತದೆ. ಪರಮಾತ್ಮ ಕೇವಲ ಜ್ಞಾನಧರ್ಮಗಳನ್ನೇ ಬೋಧಿಸಿದಾಗ, ಮಾಯೆಯೂ ಸಹ ಧರ್ಮಗಳಿಲ್ಲದ ಆಧ್ಯಾತ್ಮಿಕವನ್ನೇ ಆಕರ್ಷಣೀಯವಾಗಿ ಹೇಳುತ್ತಿರುತ್ತದೆ. ತಿನ್ನುವ ಆಹಾರ ರುಚಿಯಾಗಿದ್ದರೂ ಅದರಲ್ಲಿ ಪೋಷಕ ಪದಾರ್ಥಗಳು ವಿಟಮಿನ್‌ಗಳು ಇಲ್ಲದಂತೆ ಮಾಯೆ ಬೋಧಿಸುವುದು ನಿಜ ಜ್ಞಾನವೇ ಎನ್ನುವಂತೆ ಇರುತ್ತದೆ, ಆದರೆ ಅದರಲ್ಲಿ ಧರ್ಮಯುಕ್ತ ಜ್ಞಾನವಿರುವುದಿಲ್ಲ. ಮಾಯೆ ಪ್ರಪಂಚಕ್ಕೆ ಅಧಿಪತಿಯಾಗಿದೆ, ಆದ್ದರಿಂದ ಪ್ರಪಂಚದಲ್ಲಿನ ಯಾವ ವಿಷಯವನ್ನಾದರೂ ತಾನು ಅಂದುಕೊಂಡಂತೆ ಮಾಡಬಲ್ಲದು. ಪರಮಾತ್ಮ ಜನ್ಮ ಕೇವಲ ಧರ್ಮಗಳನ್ನೇ ಬೋಧಿಸಿದಾಗ, ಮಾಯೆ ತನ್ನದು ನಿಜವಾದ ಜ್ಞಾನವೆನ್ನುವಂತೆ ಬೋಧಿಸುವುದೇ ಅಲ್ಲದೇ ಪ್ರಪಂಚದಲ್ಲಿನ ಯಾವ ಅದ್ಭುತವನ್ನಾದರೂ ಮಾಡಿ ಅದನ್ನು ದೇವರ ಮಹಿಮೆ ಅಂದುಕೊಳ್ಳುವಂತೆ ಮಾಡಬಲ್ಲದು. ಚಿನ್ನವನ್ನು ಕಲ್ಲಾಗಿ, ಕಲ್ಲನ್ನು ಚಿನ್ನವಾಗಿ ತೋರಿಸುತ್ತದೆ. ಇರುವ ವಸ್ತುಗಳನ್ನು ಇಲ್ಲದಂತೆ, ಇಲ್ಲದ ವಸ್ತುಗಳನ್ನು ಇರುವಂತೆ ಮಾಡುತ್ತದೆ. ರೋಗಗಳನ್ನು ಸೃಷ್ಟಿಸಬಲ್ಲದು. ಮತ್ತು ಇಲ್ಲದಂತೆಯೂ ಮಾಡಬಲ್ಲದು. ಅಮೇರಿಕಾದಲ್ಲಿ ಇದ್ದು ರಷ್ಯಾದಲ್ಲಿ, ರಷ್ಯಾದಲ್ಲಿದ್ದು ಅಮೇರಿಕಾದಲ್ಲಿ ಕಾಣಿಸುತ್ತದೆ. ಹೇಳುವುದು ಧರ್ಮಗಳಲ್ಲದಿದ್ದರು ಎಲ್ಲಾ ಧರ್ಮಪ್ರಚಾರ ಮಾಡುವಂತೆ ತಿಳಿಯುತ್ತದೆ. ಎಲ್ಲದಕ್ಕೂ ಅಧಿಪತಿಯಾದ್ದರಿಂದ ಎಷ್ಟು ಕೋಟಿ ಹಣವನ್ನಾದರೂ ಸೃಷ್ಟಿಸುತ್ತದೆ. ಎಂತವರಿಂದಾದರೂ ಪಾದಾಭಿವಂದನೆ ಮಾಡಿಸುತ್ತದೆ. ತಾನೇ ನಿಜದೈವವೆಂದು ಪ್ರತ್ಯಕ್ಷ ದೈವವೆಂದು ಎಲ್ಲರಿಂದ ಹೇಳಿಸುತ್ತದೆ.

ಪರಮಾತ್ಮ ಭೂಮಿ ಮೇಲೆ ಜನ್ಮಿಸಿ ತನ್ನ ಧರ್ಮಗಳ ಪ್ರಕಾರ ತಾನು ನಡೆದುಕೊಳ್ಳುತ್ತಾ, ತನ್ನ ಧರ್ಮಗಳನ್ನೇ ಬೋಧಿಸುತ್ತಿರುತ್ತಾನೆ. ತನ್ನ ಬೋಧನೆಯಲ್ಲಿ ಮಹತ್ವಗಳು ಇಲ್ಲದಿರುವದರಿಂದ ಲಕ್ಷ ಸಂಖ್ಯೆಯಲ್ಲಿನ ಮನುಷ್ಯರಲ್ಲಿ ಆತನ ಬೋಧನೆಯನ್ನು ಒಬ್ಬರಾದರು ಗುರುತಿಸುತ್ತಾರೆಂಬ ನಂಬಿಕೆಯಿಲ್ಲ. ಯಾರಿಗಾದರು ಸ್ವಲ್ಪ ನಂಬಿಕೆ ಏರ್ಪಟ್ಟರೂ ಅವನ ತಲೆಯಲ್ಲಿ ಮಾಯೆ ಯಾವುದೋ ಒಂದು ವಿಧವಾಗಿ ಅದನ್ನು ತಪ್ಪಿಸುತ್ತದೆ.

ಮಾಯೆಯನ್ನು ಸೃಷ್ಟಿಸಿದ ಪರಮಾತ್ಮ ಮಾಯೆ ಮುಂದೆ ಕಡಿಮೆಯಾಗಿ ಕಾಣಿಸುವುದೇನೆಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರ ಏನೆಂದರೆ! ಪರಮಾತ್ಮ ಮಾಯೆಗಿಂತ ಎಂದಿಗೂ ದೊಡ್ಡವನೇ. ಆದರೆ ಪರಮಾತ್ಮ ಭೂಮಿ ಮೇಲೆ ಜನ್ಮಿಸಿ ಭಗವಂತನಾಗಿ ಬಂದಾಗ ಮಾತ್ರ ಮಾಯೆಗಿಂತ ಬಲಹೀನನೆ. ಆದ್ದರಿಂದ ಪರಮಾತ್ಮನೇ ಸ್ವತಃ ಯೇಸುಪ್ರಭುವಾಗಿ ಹುಟ್ಟಿದ ದಿನದಂದು ಬಲಹೀನನನ್ನಾಗಿ ಮಾಡಿ ಮಾಯೆ ತನ್ನ ಪ್ರಜೆಗಳಿಂದಲೇ ಹೊಡೆಸಿದೆ, ಬೈಯ್ಯುವಂತೆ ಮಾಡಿದೆ. ಶ್ರೀಕೃಷ್ಣನಾಗಿ ಹುಟ್ಟಿದ ಸಮಯದಲ್ಲಿ ಆತನಿಗೂ ಸಹ ಶತ್ರುಗಳನ್ನು ಏರ್ಪಡಿಸಿ ಕಂಸನಿಂದ ಬೈಯ್ಯುಸುವುದಲ್ಲದೆ, ಅನೇಕ ಸಮಯಗಳಲ್ಲಿ ಅನೇಕ ಕಷ್ಟಗಳ ಪಾಲು ಮಾಡಿದೆ. ಜಾರನನ್ನಾಗಿ, ಚೋರನನ್ನಾಗಿ ತೋರಿಸಿದೆ. ಭೂಮಿ ಮೇಲೆ ಮಾಯೆಗಿಂತ ಭಗವಂತನು ಬಲಹೀನನಾಗಿ ಇದು ನನ್ನ ರಾಜ್ಯವಲ್ಲ, ನನ್ನ ರಾಜ್ಯ ಬೇರೆ ಇದೆ, ನನ್ನ ರಾಜ್ಯಕ್ಕೆ ರಾಜನು ನಾನೇ ಎಂದಿದ್ದಾನೆ. ಅಷ್ಟೇ ಅಲ್ಲದೆ ಇದು ಜನ್ಮ ಮರಣಗಳಿರುವ ಸ್ಥಳ ಇದಕ್ಕೆ ಅಧಿಪತಿ ಮಾಯೆ. ಜನನ ಮರಣಗಳು ಇಲ್ಲದ ಮತ್ತೊಂದು ಸ್ಥಳ ಇದೆ ಅಲ್ಲಿಗೆ ಸೇರಿರೆಂದು ಅಲ್ಲಿ ನಾನು ಹೊರತು ಯಾರು ಇಲ್ಲವೆಂದೂ ಸಹ ಹೇಳಿದ್ದಾನೆ.

ಮಾಯೆಯೂ ಸಹ ಭಗವಂತನಂತೆ ಜನ್ಮಿಸುತ್ತಿದೆ ಎನ್ನುತ್ತಿದ್ದೀರಲ್ಲವೆ! ಪರಮಾತ್ಮ ಭಗದಿಂದ ಸಜೀವವಾಗಿ ಹೊರಗೆ ಬರುತ್ತಿದ್ದಾನಾದ್ದರಿಂದ ಆತನನ್ನು ಭಗವಂತನು ಎನ್ನಬಹುದು. ಮಾಯೆ ಯಾವ ವಿಧವಾಗಿ ಜನ್ಮ ತೆಗೆದುಕೊಳ್ಳುತ್ತಿದೆ. ಸಾಧಾರಣ ಮಾನವರಂತೇನಾ ಅಥವಾ ಭಗದಿಂದ ಬರುವ ಭಗವಂತನಾಗಿಯಾ? ಎಂದು ಕೆಲವರು ಕೇಳಬಹುದು ಅದಕ್ಕೆ ವಿವರವೇನೆಂದರೆ! ಮಾಯೆ ಭಗವಂತನಂತೆ ಚಲಾವಣೆ ಆಗುತ್ತದಾಗಲಿ ಭಗದಿಂದ ಸಜೀವವಾಗಿ ಹುಟ್ಟಲಿಲ್ಲ, ಆದ್ದರಿಂದ ಭಗವಂತನು ಅಲ್ಲ. ಹಾಗೆಂದು ಸಾಧಾರಣ ಮನುಜರಂತೆಯೂ ಸಹ ಹುಟ್ಟಲಿಲ್ಲ. ಮಾಯೆ ತಾಯಿ ಗರ್ಭದಿಂದಾಗಲಿ, ಗರ್ಭದ ಹೊರಗಾಗಲಿ ಜನ್ಮ ಪಡೆಯಲಿಲ್ಲ. ಹಾಗಲ್ಲದೆ ಈಗಲ್ಲದೆ ಯಾವ ವಿಧವಾಗಿ ಜನ್ಮಿಸಿದೆ ಎಂದರೆ? ಭೂಮಿ ಮೇಲೆ ಪರಮಾತ್ಮ ಜನ್ಮಿಸುವ ಅವಕಾಶ ಇರುವ ಪ್ರಾಂತವನ್ನು ಮಾಯೆ ಮೊದಲೆ ಗುರಿ ಇಟ್ಟಿರುತ್ತದೆ. ಅಂತಹ ಪ್ರದೇಶವನ್ನು ತಿಳಿದುಕೊಂಡ ಮಾಯೆ, ಆ ಪ್ರಾಂತದ ಸುತ್ತ ಮುತ್ತಲಿರುವ ಸಾಧಾರಣ ಮನುಷ್ಯರಲ್ಲಿ ಒಬ್ಬನನ್ನು ಗುರುತಿಸಿಕೊಂಡು ಅವನಲ್ಲಿ ಸ್ವಲ್ಪ ಸ್ವಲ್ಪವಾಗಿ ಪ್ರವೇಶಿಸಿ ಪೂರ್ತಿಯಾಗಿ ತುಂಬಿಕೊಳ್ಳುತ್ತದೆ. ಹಾಗೆ ಅವನಲ್ಲಿ ಪೂರ್ತಿಯಾಗಿ ತುಂಬಿಕೊಳ್ಳುವುದಕ್ಕೆ ಆರು ತಿಂಗಳಿಂದ ವರ್ಷ ಕಾಲವಾದರು ಬೇಕಾಗುತ್ತದೆ. ಹಾಗೆ ಪೂರ್ತಿ ಪ್ರವೇಶಿಸಿ ಅವನಿಂದ ತನ್ನ ಪೂರ್ಣಮಟ್ಟದ ಕಾರ್ಯಗಳು ಪ್ರಾರಂಭ ಮಾಡುತ್ತದೆ. ಮಾಯೆ ಪ್ರವೇಶಿಸುವವನು ಬಡವನಾಗಬಹುದು. ಯುಕ್ತವಯಸ್ಕನಾಗಬಹುದು

ಅಥವಾ ಮುದುಕನಾಗಬಹುದು. ಯಾರಲ್ಲಿ ಮಾಯೆ ಪ್ರವೇಶಿಸಿದರು, ಅದನ್ನು ಮಾಯೆಯೊಂದರ ಜನ್ಮ ಎನ್ನಬಹುದು. ಮಾಯೆ ಪ್ರವೇಶಿಸಿದ ವ್ಯಕ್ತಿಗೆ ತನ್ನಲ್ಲಿ ಮಾಯೆ ಪೂರ್ಣ ಮಟ್ಟದಲ್ಲಿ ಇದೆಯೆಂದು ಗುರುತಿಸಲಾರನು. ಆದ್ದರಿಂದ ಮೊದಲು ತನ್ನ ಮೂಲಕ ನಡೆಯುವ ಕೆಲವು ಮಹಿಮೆಗಳು ಹೇಗೆ ನಡೆದಿವೆಯೋ ತನಗೆ ತಿಳಿಯದಂತೆ ಇರುತ್ತದೆ. ನಂತರ ತನಗೇನೋ ಮಹಿಮೆ ಇದೆಯೆಂದು, ತಾನು ಎಲ್ಲರಂತೆ ಸಾಮಾನ್ಯನು ಅಲ್ಲವೆಂದು ತಾನು ಪ್ರತ್ಯೇಕವಾದ ಮನುಷ್ಯನು ಎಂದುಕೊಳ್ಳುತ್ತಾನೆ. ಹೀಗೆ ಮಾಯೆ ಕೆಲವರಲ್ಲಿ ಪ್ರವೇಶಿಸುತ್ತಿದೆಯಾಗಲಿ ಹೊಸ ಶರೀರದಲ್ಲಿ ಜನ್ಮಿಸಲಿಲ್ಲ, ಪರಮಾತ್ಮನಂತೆ ಹುಟ್ಟಲು ಇಲ್ಲ, ಆದಕಾರಣ ಮಾಯೆ ಎಂದಿಗೂ ಭಗವಂತನು ಅಲ್ಲ. ಭಗವಂತನಂತೆ ಕಾಣಿಸಿದರೂ ನಿಜವಾಗಲೂ ಭಗವಂತನು ಅಲ್ಲವೆಂದು ತಿಳಿಯಬೇಕು.

ಇನ್ನೊಂದು ವಿಚಿತ್ರವೇನೆಂದರೆ ಮಾಯೆ ಜನ್ಮಿಸಿದರೆ ಎರಡು ಮೂರು ಕಡೆಯಾದರು ಇದ್ದು ತನ್ನ ಮಹಿಮೆಯನ್ನು ನೂರಕ್ಕೆ ನೂರು ಪಾಲು ತೋರಿಸುತ್ತದೆ. ಆದರೆ ಪರಮಾತ್ಮ ಜನ್ಮಿಸಿ ಭೂಮಿ ಮೇಲೆ ಇರುವಾಗ ಶರೀರದಲ್ಲಿನ ಜೀವಾತ್ಮವಾಗಿ, ಆತ್ಮವಾಗಿ, ಪರಮಾತ್ಮನಾಗಿದ್ದು ಕೆಲವು ಸಮಯಗಳಲ್ಲಿ ಕೇವಲ ಸಾಧಾರಣ ಜೀವಾತ್ಮವಾಗಿ ಕಷ್ಟ ಸುಖಗಳನ್ನು ಅನುಭವಿಸುತ್ತಾನೆ. ಕೆಲವು ಸಮಯಗಳಲ್ಲಿ ಮಾತ್ರ ಆತ್ಮವಾಗಿ ಅನುಭೂತಿಗಳಿಗೆ ಅತೀತವಾಗಿರುತ್ತಾನೆ. ಪ್ರತ್ಯೇಕಿಸಿ ಕೆಲವು ಸಮಯದಲ್ಲಿ ಮಾತ್ರ ಆದಿಕರ್ತನಾದ ಪರಮಾತ್ಮನಾಗಿರುತ್ತಾನೆ. ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಜೀವಾತ್ಮವಾಗಿ, ಆತ್ಮವಾಗಿ, ಪರಮಾತ್ಮವಾಗಿ ಮೂರು ಸ್ಥಾನಗಳಲ್ಲಿ ಮಾತನಾಡಿದಂತೆ ಅರ್ಥವಾಗುತ್ತದೆ. ಹಾಗೆಯೇ ಯೇಸುಪ್ರಭುವಾಗಿ ಬಂದಿರುವ ದಿನಗಳಲ್ಲಿ ಜೀವಾತ್ಮವಾಗಿ ಶರೀರ ಬಾಧೆಗಳನ್ನು ಅನುಭವಿಸಿದ್ದಾನೆ. ಆತ್ಮವಾಗಿ ನಿನ್ನನ್ನು ಯಾವಾಗಲೂ ನೋಡುತ್ತಿದ್ದೇನೆಂದಿದ್ದಾನೆ. ಪರಮಾತ್ಮನಾಗಿ ಚಂಡಮಾರುತ ಹೆಚ್ಚಾದಾಗ ಸಮುದ್ರವನ್ನೇ ನಿಶ್ಚಲವಾಗುವಂತೆ ಶಾಸಿಸಿದ್ದಾನೆ.

ಪರಮಾತ್ಮ ಜನ್ಮದಲ್ಲಿರುವಾಗ ಜೀವಾತ್ಮವಾಗಿರುವ ಸಮಯದಲ್ಲಿ ಮಾಯೆ ಹಿಂಸಿಸುತ್ತದೆ, ಆತ್ಮವಾಗಿರುವ ಸಮಯದಲ್ಲಿ ದ್ವೇಷಿಸುತ್ತದೆ ಮತ್ತು ದೂಷಿಸುತ್ತದೆ, ಪರಮಾತ್ಮನಾಗಿ ಇರುವಾಗಾದರೆ ಪೂರ್ತಿ ಭಕ್ತಿ ವಿನಯಹೊಂದಿ ಆತನ ಮಾತಿನ ಪ್ರಕಾರ ನಡೆದುಕೊಳ್ಳುತ್ತದೆ. ಯೇಸು ಜೀವಾತ್ಮವಾಗಿರುವಾಗ ಕೊರಡು(ದೊಣ್ಣೆ)ಗಳಿಂದ ಹೊಡೆಸಿ ಕಷ್ಟವನ್ನು ಅನುಭವಿಸುವಂತೆ ಮಾಡಿದೆ. ಆತ್ಮವಾಗಿರುವಾಗ ಆಧ್ಯಾತ್ಮಿಕ ಗುರುಗಳಿಂದ ನಿಂದಿಸಿದೆ. ಪರಮಾತ್ಮನಾಗಿರುವಾಗ ಹೇಳಿದಂತೆ ನಡೆದುಕೊಂಡು ಶವವನ್ನು ಸಜೀವವಾಗಿ ಮಾಡಿದೆ. ಯೇಸು ಜೀವಾತ್ಮವಾಗಿರುವಾಗ ಮಾಯೆ ಆತನೊಂದಿಗೆ ನನಗೆಷ್ಟು ಬಲ

ಇದೆಯೆಂದು ಕಲ್ಲನ್ನು ಆಹಾರವಾಗಿ ಬದಲಾಯಿಸುತ್ತೇನೆಂದು, ಈ ರಾಜ್ಯಕ್ಕೆ ರಾಜನನ್ನು ಮಾಡುತ್ತೇನೆಂದೂ ಸಹ ಹೇಳಿದೆ. ಹಾಗೆಯೇ ಯೇಸುಪ್ರಭುವು ಜೀವಾತ್ಮವಾಗಿ ನನ್ನ ತಂದೆ ಒಬ್ಬನಿದ್ದಾನೆಂದು ಹೇಳಿದ್ದಾನೆ. ಆತ್ಮವಾಗಿ ನಿನ್ನ ಪಕ್ಕದವನನ್ನು ಪ್ರೇಮಿಸೆಂದಿದ್ದಾನೆ. ಪರಮಾತ್ಮನಾಗಿ ಜೀವವೂ (ಜೀವಾತ್ಮ), ಮಾರ್ಗ (ಆತ್ಮ), ಗಮ್ಯ (ಪರಮಾತ್ಮ) ನಾನೇ ಎಂದಿದ್ದಾನೆ. ಶ್ರೀಕೃಷ್ಣ ಜನ್ಮದಲ್ಲಿ ತಾವರೆ ಎಲೆಯ ಮೇಲೆ ನೀರಂಟದ ವಿಧವಾಗಿ ಕರ್ಮ ಅಂಟದಂತೆ ಇದ್ದೇನೆಂದು ಜೀವಾತ್ಮವಾಗಿ, ಶರೀರದಲ್ಲಿ ಅಗ್ನಿಯಾಗಿ ತಿಂದ ಆಹಾರವನ್ನು ಜೀರ್ಣಮಾಡುತ್ತಿದ್ದೇನೆಂದು ಆತ್ಮವಾಗಿ, ಕ್ಷಯವನ್ನು ವೃದ್ಧಿಯನ್ನುಂಟು ಮಾಡುವ ಕಾಲನು ನಾನೇ. ಎಲ್ಲೆಗಳಿಲ್ಲದ ವಿಶ್ವರೂಪವನ್ನು ನನ್ನ ಅನುಗ್ರಹದಿಂದ ನಿನಗೆ ತೋರಿಸಿದ್ದೇನೆಂದು ಪರಮಾತ್ಮನಾಗಿ ಮಾತನಾಡಿದ ಸಂದರ್ಭಗಳು ಇವೆ. ಪರಮಾತ್ಮ ಅಧೀನದಲ್ಲಿರುವ ಮಾಯೆ ಪರಮಾತ್ಮನ ಬಗ್ಗೆ ಮಾತ್ರ ಪೂರ್ತಿ ಭಕ್ತಿ ವಿನಯವಾಗಿದ್ದು, ಉಳಿದವರ ಬಗ್ಗೆ ತನ್ನ ಕರ್ತವ್ಯವನ್ನು ತಾನು ನಿರ್ವಹಿಸುತ್ತದೆ. ಅಷ್ಟೇ ಅಲ್ಲದೆ ಜ್ಞಾನ ಯೋಗ, ಧರ್ಮಗಳಿಗಿಂತ ಅತೀತವಾಗಿರುವ ಪರಮಾತ್ಮನನ್ನು ಅಥವಾ ಭಗವಂತನನ್ನು ಪೂರ್ತಿ ವಿಶ್ವಾಸಿಸಿ ಆರಾಧಿಸುವವನನ್ನು ಮಾಯೆ ಏನು ಮಾಡಲಾರದು. ಅವನು ಪೂರ್ತಿ ಅಧಿಪತಿಯಾದ ಪರಮಾತ್ಮನನ್ನೇ ನೇರವಾಗಿ ನಂಬಿದವನು. ಆದ್ದರಿಂದ ಮಾಯೆ ಅವನ ಬಗ್ಗೆ ಏನು ಮಾಡಲಿಲ್ಲ. ಅಂತಹವನು ಆ ಜನ್ಮದಲ್ಲಿಯೇ ಮೋಕ್ಷ ಹೊಂದಬಹುದು. ಆದ್ದರಿಂದಲೇ ಗೀತೆಯಲ್ಲಿ ಪರಮಾತ್ಮ **'ಮಾಮೇವ ಯೇ ಪ್ರಪದ್ಯಂತೇ ಮಾಯಾ ಮೇತಾಂ ತರಂತಿತೇ'** ಯಾರಾದರೆ ನನ್ನನ್ನು ಆರಾಧಿಸುತ್ತಿದ್ದಾರೊ ಅವರು ಮಾಯೆಯಿಂದ ಸುಲಭವಾಗಿ ದಾಟಿ ಹೋಗಬಲ್ಲರೆಂದಿದ್ದಾನೆ. ಆದ ಕಾರಣ ಮಾಯೆಯನ್ನು ತಯಾರು ಮಾಡಿಟ್ಟಿರುವ ಪರಮಾತ್ಮನನ್ನೇ ಆರಾಧಿಸಬೇಕು. ಹಾಗೆ ಆರಾಧಿಸದಿದ್ದಲ್ಲಿ ಜಗತ್ತಿನ ಮೇಲೆ ಸರ್ವಹಕ್ಕುಗಳು ಹೊಂದಿದ ಮಾಯೆ, ಜಗತ್ತಿನಲ್ಲಿ ನಿಜವಾದ ದೇವರಾಗಿಯೂ ಸಹ ಕಾಣಿಸುತ್ತದೆ. ಪರಮಾತ್ಮ ವಿಭೂತಿಗಳು ಎಷ್ಟು ದೊಡ್ಡವೋ, ಅದಕ್ಕಿಂತ ದೊಡ್ಡದಾಗಿ ಭೂಮಿ ಮೇಲೆ ಮಾಯೆವೊಂದರ ವಿಭೂತಿಗಳು  ಕಾಣಿಸುತ್ತವೆ. ನಾವು ಎಷ್ಟು ಹೇಳಿದರು ಪರಮಾತ್ಮ ಜ್ಞಾನ ಅನೇಕ ಜನ್ಮಗಳ ಸಂಸ್ಕಾರ ಇರುವವರಿಗೆ ಅರ್ಥವಾಗುತ್ತದೆ. ಅವರಲ್ಲಿ ಇನ್ನೂ ಸಂಸ್ಕರಿಸಲ್ಪಟ್ಟವರಿಗೇ ಭಗವಂತನು ಅರ್ಥವಾಗುತ್ತಾನೆ. ಎಷ್ಟು ಅರ್ಥವಾದರೂ ನಾನೇ ದೊಡ್ಡವನೆಂಬ ಮಾಯೆ ಮಾತುಗಳನ್ನು ಕೇಳದವರು  ಅಪರೂಪವಾಗಿರುತ್ತಾರೆ. ಗೀತೆಯ ಕೊನೆಯಲ್ಲಿ ಭಗವಂತನು **'ಮನ್ಮನಾಭವ ಮದ್ಭಕ್ತೋ ಮದ್ಯಾಜೀನಾಂ ನಮಸ್ಕುರು'** ನನ್ನನ್ನೇ ನಿನ್ನ ಮನಸ್ಸಿನಲ್ಲಿ ದೊಡ್ಡದಾಗಿಟ್ಟುಕೊ, ನನಗೆ ಭಕ್ತನಾಗಿರು, ನನ್ನನ್ನೇ ನಮಸ್ಕರಿಸು ನನ್ನಲ್ಲಿಯೇ ಬೆರೆತುಹೋಗುತ್ತೀಯಾ! ಮಾಯೆಯೂ ಸಹ ನನ್ನನ್ನೇ ದೊಡ್ಡದಾಗಿಟ್ಟುಕೋ, ನನ್ನನ್ನೇ

ನಮಸ್ಕರಿಸು, ನಿನಗೆ ಯಾವ ಕಷ್ಟಗಳು ಬಾರದಂತೆ ಯಾವ ಸಮಸ್ಯೆಯೂ ಇಲ್ಲದಂತೆ ನೋಡುತ್ತೇನೆ ಎನ್ನುತ್ತದೆ. ಯಾವುದನ್ನು ಕೇಳುತ್ತೀರೊ ಯಾವಕಡೆ ಹೋಗುತ್ತೀರೊ ನಿಮ್ಮ ಇಷ್ಟ.

**(6) ಶ್ಲೋ॥ 15 : ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ ।**
**ಮಯಯಾಽಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ ॥**
**(ಜೀವಾತ್ಮ, ಪರಮಾತ್ಮ)**

**ಭಾವಾರ್ಥ :** ಪಾಪಕಾರ್ಯಗಳು ಮಾಡುವವರು, ಮೂಢರಾದವರು, ಮಾಯೆ ಯಿಂದ ಮುಚ್ಚಿಹಾಕಲ್ಪಟ್ಟ ಜ್ಞಾನ ಇರುವವರು, ಅಸುರ ಭಾವವಿರುವ ಜನರು ನನ್ನನ್ನು ತಿಳಿಯಲಾರರು. ಹೊಂದಲಾರರು.

**(6) ಶ್ಲೋ॥ 16 : ಚತುರ್ವಿಧಾ ಭಜನ್ತೇ ಮಾಂ ಜನಾಃಸ್ಸುಕೃತಿನೋಽರ್ಜುನ! ।**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀಚ ಭರತರ್ಷಭ ॥**
**(ಜೀವಾತ್ಮ, ಪರಮಾತ್ಮ)**

**ಭಾವಾರ್ಥ** : ಅರ್ಜುನಾ ನನ್ನನ್ನು ಭಜಿಸುವ ಸುಕೃತರು ನಾಲ್ಕು ವಿಧಗಳು ಇದ್ದಾರೆ. ಅವರನ್ನು ಆರ್ತರು, ಜಿಜ್ಞಾಸಿಗಳು, ಅರ್ಥಾರ್ಥಿಗಳು, ಜ್ಞಾನಿಗಳು ಎಂದು ವಿಭಜಿಸಿ ಹೇಳಬಹುದು.

**ವಿವರ** : ಪರಮಾತ್ಮನನ್ನು ಅನೇಕ ವಿಧಗಳಾಗಿ ವಿಭಜಿಸಿಕೊಂಡು ಆರಾಧಿಸುವವರು ಇದ್ದಾರೆ. ನಾವು ದೈವವನ್ನೇ ಆರಾಧಿಸುತ್ತೇವೆಂದು ಅವರ ನಂಬಿಕೆ. ನಿಜವಾದ ದೈವವೆನ್ನುವವನು ಹೇಗಿರುತ್ತಾನೆಂಬ ವಿವರ ತಿಳಿಯದೆ, ಯಾರ ಊಹೆಗೆ ಅವರು ಹೆಸರು ರೂಪ ಕಲ್ಪಿಸಿಕೊಂಡು ಆರಾಧಿಸುತ್ತಿದ್ದಾರೆ. ಯಾರಿಗೆ ತೋಚಿರುವುದು ಅವರು ಮಾಡಿದಾಗ ಅವರ ಮನಸ್ಸಿನಲ್ಲಿ ನಾವು ದೈವವನ್ನೇ ಆರಾಧಿಸುತ್ತಿದ್ದೇವೆಂಬ ಭಾವನೆ ಇರುವುದರಿಂದ ಅವರು ಪರಮಾತ್ಮನನ್ನು ಆರಾಧಿಸಿದಂತೇ. ಹಾಗೆ ಆರಾಧಿಸುವವರಲ್ಲಿ ನಾಲ್ಕು ವಿಧಗಳಾಗಿದ್ದಾರೆಂದು ಹೇಳಬಹುದು. **1) ಆರ್ತನು 2) ಜಿಜ್ಞಾಸಿ 3) ಅರ್ಥಾರ್ಥಿ 4) ಜ್ಞಾನಿ ಎಂದು ಹೇಳಬಹುದು.**

**1) ಆರ್ತನು :–** ಆರ್ತನು ಎಂದರೆ ಕಷ್ಟಕಾಲದಲ್ಲಿ ಮಾತ್ರ ಕೈ ಮುಗಿಯುವವನೆಂದು ಅರ್ಥ. ಯಾವುದಾದರು ಕಷ್ಟ ಬಂದಾಗಲೋ, ರೋಗಬಂದಾಗಲೋ, ಆರ್ಥಿಕ

ತೊಂದರೆಗಳು ಬಂದಾಗಲೋ, ಯಾವ ದೈವವಾದರೆ ಬೇಗನೆ ಫಲಕೊಡುತ್ತಾನೋ ಆತನಿಗೆ ಮುಡುಪು ಕಟ್ಟಿ ಕೈ ಮುಗಿಯುವವನು. ಉದಾಹರಣೆಗೆ ತಿರುಪತಿ ವೆಂಕಟೇಶ್ವರಸ್ವಾಮಿಗೆ ಕಷ್ಟದಲ್ಲಿ ಆಪದ್ಭಾಂದವನೆಂದು ಹೆಸರಿಟ್ಟು ಕಷ್ಟಗಳಲ್ಲಿಯೇ ಮುಗಿಯುವವರೆಷ್ಟೋ ಜನರು ಇದ್ದಾರೆ. ಅಷ್ಟೇ ಅಲ್ಲದೆ ಒಬ್ಬೊಬ್ಬರು ಒಂದೊಂದು ದೇವರನ್ನು ಅವರವರ ಕಷ್ಟಗಳಿಗೆ ಅಡ್ಡ ಇಟ್ಟುಕೊಂಡು ಆರಾಧಿಸುತ್ತಿದ್ದಾರೆ. ಮಗುವಿಗೆ ಜ್ವರ ಬಂದರು ಆಗಿಂದಾಗಲೇ ಮುಗಿಯುವವರನ್ನು ಆರ್ತರೆಂದು ಹೇಳಬಹುದು.

**2) ಜಿಜ್ಞಾಸಿ :–** ಜಿಜ್ಞಾಸಿಗಳೆಂದರೆ! ದೈವವನ್ನು ಕುರಿತು ತಿಳಿದುಕೊಳ್ಳಬೇಕೆಂದು ಪ್ರಯತ್ನ ಮಾಡುವವರು. ಇವರು ಆಪತ್ತಿನಲ್ಲಿ ಮಾತ್ರ ಅಲ್ಲಲ್ಲಿ ಚಿಕ್ಕ ಚಿಕ್ಕ ಪೂಜೆಗಳು ಮಾಡುತ್ತಿದ್ದರೂ ಅಲ್ಲಿಗೆ ಸುಮ್ಮನಿರದೆ ದೈವವನ್ನು ತಿಳಿದುಕೊಳ್ಳಬೇಕೆಂದು ಪ್ರಯತ್ನವೂ ಸಹ ಮಾಡುತ್ತಿರುತ್ತಾರೆ. ಉದಾಹರಣೆಗೆ ಆರ್ತನೆಂದರೆ ತಿರುಪತಿ ವೇಂಕಟೇಶ್ವರ ಸ್ವಾಮಿಯನ್ನು ದರ್ಶಿಸುವುದಕ್ಕೆ ತಿರುಪತಿಗೆ ಹೋದವನು. ಎಲ್ಲರಂತೆ ತಾನು ಗುಂಡುಮಾಡಿಸಿಕೊಳ್ಳವುದರಿಂದ ದೇವರಿಗೆ ಏನು ಲಾಭ. ದೈವಕ್ಕೆ ಲಾಭವಾಗಲಿ, ನಮಗೆ ನಷ್ಟವಾಗಲಿ ಇಲ್ಲದ ಈ ಕೆಲಸವನ್ನು ಏಕೆ ಎಲ್ಲರೂ ಮಾಡುತ್ತಿದ್ದಾರೆ. ಇದಕ್ಕೇನೋ ನಮ್ಮೆಲ್ಲರಿಗೂ ತಿಳಿಯದ ರಹಸ್ಯ ಅರ್ಥವಿದೆ. ಅದನ್ನು ತಿಳಿದುಕೊಂಡರೆ ದೇವರನ್ನು ಅಷ್ಟೊ ಇಷ್ಟೊ ತಿಳಿದುಕೊಂಡವರಾಗುತ್ತೇವೆಂದು, ಆ ವಿವರ ತಿಳಿದುಕೊಳ್ಳಬೇಕೆಂದು, ದೈವವನ್ನು ತಿಳಿದುಕೊಳ್ಳಬೇಕೆಂದು ಪ್ರಯತ್ನಿಸುತ್ತಾರೆ. ಅಂತಹವರನ್ನು ಜಿಜ್ಞಾಸಿಗಳು ಎನ್ನಬಹುದು.

**3) ಅರ್ಥಾರ್ಥಿ :–** ಅರ್ಥಾರ್ಥಿ ಎಂದರೆ ಅರ್ಥಕ್ಕೋಸ್ಕರ ಅರ್ಥಿಸುವವನೆಂದು ವಿವರ. ಅರ್ಥವೆಂದರೆ ಹಣ, ಹಣಕ್ಕೋಸ್ಕರ ದೇವರುಗಳನ್ನು ಪೂಜಿಸಿ ಅರ್ಥಿಸುವವನನ್ನು ಅರ್ಥಾರ್ಥಿ ಎನ್ನುತ್ತಾರೆ. ಉದಾಹರಣೆಗೆ ಒಬ್ಬನಿಗೆ ಯಾವ ಆಪತ್ತು ಯಾವ ಕಷ್ಟ ಇಲ್ಲ. ಅವನಿಗೆ ದೇವರನ್ನು ಕುರಿತು ತಿಳಿದುಕೊಳ್ಳಬೇಕೆಂಬ ಜಿಜ್ಞಾಸೆಯೂ ಇಲ್ಲ. ಮತ್ತು ಕಷ್ಟದಲ್ಲಿ ಆರ್ತನಾಗಿ ಮುಗಿಯುವ ಅಗತ್ಯವೂ ಇಲ್ಲ. ಆದರೂ ಧನ ಇನ್ನೂ ಬೇಕೆಂದು ಮುಗಿಯುವುದೇ ಅವನ ಅಭಿಮತವಾಗಿರುತ್ತದೆ. ಉದಾಹರಣೆಗೆ ಒಬ್ಬ ಧನಿಕನಿದ್ದಾನೆಂದು ಕೊಳ್ಳೋಣ. ಅವನಿಗೆ ಕಷ್ಟವಿಲ್ಲ. ದೈವವನ್ನು ತಿಳಿಯಬೇಕೆಂಬ ಧ್ಯಾಸವಿಲ್ಲ. ಆದರೆ ಧನವು ಇನ್ನೂ ಬೇಕೆಂಬ ಆಸೆ ಇದೆ. ಆದ್ದರಿಂದ ಆತನು ಧನಕ್ಕೋಸ್ಕರ ಹೆಸರಿರುವ ದೇವತೆಗಳನ್ನು, ಹೆಸರಿರುವ ಮಹಿಮೆ ಇರುವ ಸ್ವಾಮಿಗಳನ್ನು  ಕೋರಿಕೆಗಳು ಕೋರುತ್ತಿರುತ್ತಾನೆ. ನನಗೆ ಈ ವರ್ಷ ವ್ಯಾಪಾರದಲ್ಲಿ 10 ಕೋಟಿ ಲಾಭ ಬಂದರೆ ಹತ್ತುಲಕ್ಷ ಮುಡುಪು ಕೊಡುತ್ತೇನೆಂದೋ, ಬಂಗಾರದ ಕಿರೀಟ ಮಾಡಿಸುತ್ತೇನೆಂದೋ ಮುಗಿಯುತ್ತಾರೆ. ಹೇಗೋ

ಲಾಭ ಬರುವಂತೆ ಮಾಡಿಕೊಳ್ಳುತ್ತಾರೆ. ಲಾಭ ಬಂದ ತಕ್ಷಣ ಮುಡುಪಿನ ರೂಪವಾಗಿಯೋ, ಕಾಣಿಕೆಗಳ ರೂಪವಾಗಿಯೋ ಅವರ ಹರಕೆ ತೀರಿಸಿಕೊಳ್ಳುತ್ತಾರೆ. ಈ ವಿಧವಾಗಿ ದೇವರುಗಳಿಗೆ ಕಿರೀಟ ಮಾಡಿಸಿದವರಿದ್ದಾರೆ. ಲಕ್ಷಗಳ ಕಾಣಿಕೆಗಳು ಸಲ್ಲಿಸಿದವರು ಇದ್ದಾರೆ. ಇಂತಹವರೆಲ್ಲರನ್ನು ಅರ್ಥಾರ್ಥಿಗಳೆಂದು ಹೇಳಬಹುದು.

4) **ಜ್ಞಾನಿ:–** ಈತನು ಆರ್ತನು, ಅರ್ಥಾರ್ಥನು ಅಲ್ಲದೇ ಜಿಜ್ಞಾಸಿಯಾಗಿದ್ದು ಜ್ಞಾನವನ್ನು ತಿಳಿದುಕೊಳ್ಳುತ್ತಿರುತ್ತಾನೆ. ಹಾಗೆ ತಿಳಿದುಕೊಳ್ಳುತ್ತಾ ಕೊನೆಗೆ ಸಂಪೂರ್ಣಜ್ಞಾನವನ್ನು ಪಡೆಯುತ್ತಾನೆ. ಉದಾಹರಣೆಗೆ ದೈವಜ್ಞಾನದ ಮೇಲೆ ಜಿಜ್ಞಾಸೆಹೊಂದಿ ಕೋರಿಕೆಗಳು ಕೋರುವುದು ದೈವಾರಾಧನೆಯಲ್ಲಿ ಸರಿಯಲ್ಲವೆಂದು ತಿಳಿದುಕೊಂಡು, ಆರಾಧನೆಯಲ್ಲಿ ಎಷ್ಟು ಜ್ಞಾನ ಇರುವುದು ಗ್ರಹಿಸಿ, ಅವುಗಳ ಅರ್ಥಗಳಿಗೋಸ್ಕರ ಪ್ರಯತ್ನ ಮಾಡುತ್ತಾ ಕೊನೆಗೆ ದೈವಪೂಜೆಯಲ್ಲಿನ ಮತ್ತು ದೇವಾಲಯಗಳಲ್ಲಿನ ಗುರ್ತುಗಳ ಅರ್ಥವನ್ನು ಗ್ರಹಿಸುತ್ತಾನೆ. ದೈವಾರಾಧನೆಯಲ್ಲಿನ ಪ್ರತಿಕೆಲಸಕ್ಕೂ ಅರ್ಥ ತಿಳಿದುಕೊಂಡು ಪೂರ್ತಿ ಜ್ಞಾನಿಯಾಗುತ್ತಾನೆ. ಹಾಗೆ ಜ್ಞಾನಿಯಾದವನು ಜ್ಞಾನದ ಪ್ರಕಾರ ನಡೆದುಕೊಳ್ಳುತ್ತಾ ದೈವತ್ವವನ್ನು ತಿಳಿದುಕೊಳ್ಳಬೇಕೆಂದು, ಮಾನವತ್ವದಿಂದ ದೇವರಲ್ಲಿ ಸೇರಿಕೊಳ್ಳಬೇಕೆಂದು ಪ್ರಯತ್ನ ಮಾಡುತ್ತಿರುತ್ತಾನೆ. **ಆರ್ತನು– ಅರ್ಥಾರ್ಥಿ– ಜಿಜ್ಞಾಸಿ– ಜ್ಞಾನಿ** ಎನ್ನುವ ವರಸೆ ಕ್ರಮವೆಂದು ತಿಳಿಯಬೇಕು. ಆರ್ತನಿಗೆ, ಅರ್ಥಾರ್ಥನಿಗೆ ಹತ್ತಿರ ಸಂಬಂಧವಿದೆ. ಹಾಗೆ ಜಿಜ್ಞಾಸಿಗೂ, ಜ್ಞಾನಿಗೂ ಹತ್ತಿರ ಸಂಬಂಧವಿದೆ. ಆರ್ತನು ಅರ್ಥಾರ್ಥಿಯಾಗುತ್ತಾನೆ, ಜಿಜ್ಞಾಸಿ ಜ್ಞಾನಿಯಾಗಬಲ್ಲನು.

**(6) ಶ್ಲೋ॥ 17 : ತೇಷಾಂ ಜ್ಞಾನೀ ನಿತ್ಯಯುಕ್ತ ಏಕ ಭಕ್ತಿರ್ವಿಶಿಷ್ಯತೇ ।**
**ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮಪ್ರಿಯಃ ॥**
**(ಜೀವಾತ್ಮ , ಪರಮಾತ್ಮ )**

**ಭಾವಾರ್ಥ :** ಅಂತಹವರಲ್ಲಿ ಜ್ಞಾನಿ ನಿತ್ಯವು ನನ್ನನ್ನೇ ಹೊಂದಬೇಕೆಂದು ಒಂದೇ ಭಕ್ತಿಹೊಂದಿದವನು ಶ್ರೇಷ್ಟನೆಂದು ಹೇಳಬಹುದು. ಅವನಿಗೆ ನಾನು ಹೆಚ್ಚಿನ ಪ್ರಿಯನು, ಹಾಗೆ ನನಗೆ ಅವನು ಪ್ರಿಯನು.

**ವಿವರ :** ಆರ್ತನು, ಅರ್ಥಾರ್ಥಿ, ಜಿಜ್ಞಾಸನು, ಜ್ಞಾನಿ ಎಂಬ ನಾಲ್ಕು ವಿಧಗಳಲ್ಲಿ ಹೆಚ್ಚಾಗಿ ಆರ್ತರು ಇದ್ದಾರೆ. ನೂರಕ್ಕೆ 50 ಜನರು ಆರ್ತರಾಗಿದ್ದರೆ 45 ಜನರು ಅರ್ಥಾರ್ಥರು ಇದ್ದಾರೆ. ಕೇವಲ ನಾಲ್ಕುಜನರು ಜಿಜ್ಞಾಸಿಗಳಿರುವಾಗ, ಒಬ್ಬರು ಅದೂ ಸಹ ಅಪರೂಪವಾಗಿ

ಜ್ಞಾನಿ ಇದ್ದಾನೆಂದುಕೊಳ್ಳೋಣ. ಇರುವ ಒಬ್ಬ ಜ್ಞಾನಿ ಆತ್ಮದೊಂದಿಗೆ ಪರಮಾತ್ಮನೊಂದಿಗೆ ಕೂಡಿಕೊಳ್ಳಬೇಕೆಂದು ನಿತ್ಯವು ಪ್ರಯತ್ನ ಮಾಡುತ್ತಾ, ಒಂದೇ ಭಕ್ತಿಹೊಂದಿ ಎಂದರೆ ಇತರೆ ದೇವತೆಗಳನ್ನು ಆರಾಧಿಸದೆ ಆತ್ಮದ ಮೇಲೇ ಭಕ್ತಿಹೊಂದಿರುವವನಾಗಿರುತ್ತಾನೆ. ಅಂತಹವನನ್ನು ಉಳಿದ ಮೂರು ಮಾರ್ಗದವರಿಗಿಂತ ಶ್ರೇಷ್ಟನೆಂದು ಹೇಳಬಹುದು. ಅಂತಹವನು ಪರಮಾತ್ಮನನ್ನು ಎಲ್ಲದಕ್ಕಿಂತಲೂ ದೊಡ್ಡದಾಗಿ, ದೇವರುಗಳಿಗೆಲ್ಲ ದೇವರಾಗಿ ತಿಳಿದುಕೊಳ್ಳುತ್ತಾ ಪರಮಾತ್ಮನ ಮೇಲೇ ತನ್ನ ಇಷ್ಟತೆಯನ್ನು ಹೊಂದಿರುತ್ತಾನೆ. ಎಂತಹ ಕಷ್ಟ ಸಮಯದಲ್ಲಾಗಲಿ ಪರಮಾತ್ಮ ವಿಷಯ ಪ್ರಸ್ತಾವನೆ ಬರುತ್ತಲೇ ಎಲ್ಲವನ್ನು ಮರೆತುಹೋಗಿ ಆನಂದಬರಿತನಾಗುತ್ತಾನೆ. ಅಂತಹವನನ್ನು ಪರಮಾತ್ಮನೂ ಸಹ ಪರಮ ಪ್ರಿಯನಾಗಿ ಭಾವಿಸಿಕೊಳ್ಳುತ್ತಾನೆಂದು ಹೇಳಲಾಗಿದೆ.

**(6) ಶ್ಲೋ॥ 18 : ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇಮತಂ ।**
**ಆಸ್ಥಿತಃ ಸ್ಸಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಮ್ ॥**
**(ಜೀವಾತ್ಮ, ಪರಮಾತ್ಮ)**

**ಭಾವಾರ್ಥ :** ಈ ನಾಲ್ಕು ವಿಧಗಳಲ್ಲಿನ ಸರ್ವರು ಉದಾರಿಗಳೇ. ಅದರಲ್ಲಿ ಜ್ಞಾನಿಯನ್ನು ನನ್ನ ಆತ್ಮವಾಗಿ ತಿಳಿಯುತ್ತಿದ್ದೇನೆ. ಆತನು ನನ್ನ ಆತ್ಮದೊಂದಿಗೆ ಕೂಡಿಕೊಂಡಿದ್ದು ನನ್ನೊಂದರ ಉತ್ತಮವಾದ ಗತಿಯನ್ನು ಪಡೆಯುತ್ತಿದ್ದಾನೆ.

**ವಿವರ :** ಆರ್ತನು, ಅರ್ಥಾರ್ಥಿ, ಜಿಜ್ಞಾಸನು, ಜ್ಞಾನಿ ಎನ್ನುವವರಲ್ಲಿ ಜ್ಞಾನಿ ಎನ್ನುವವನನ್ನು ಪರಮಾತ್ಮ ಬೇರೆಯವನಾಗಿ ತಿಳಿಯದೆ ತನ್ನ ಆತ್ಮವಾಗಿಯೇ ಲೆಕ್ಕಿಸಿಕೊಳ್ಳುತ್ತಿದ್ದಾನೆ. ಏಕೆಂದರೆ ಸಂಪೂರ್ಣಜ್ಞಾನಿಯಾದವನು ಯೋಗವನ್ನೇ ಆಚರಿಸುತ್ತಾ ಆತ್ಮದಲ್ಲಿಯೇ ಕೂಡಿಕೊಂಡಿದ್ದಾನೆ. ಅವನ ಮನಸ್ಸಿಗೆ ಬಾಹ್ಯ ಚಿಂತೆಗಳಿಲ್ಲ. ಆತ್ಮಧ್ಯಾಸ ಹೊಂದಿದ ಆ ಜೀವಾತ್ಮವನ್ನು ಆತ್ಮವಾಗಿಯೇ ಪರಮಾತ್ಮ ನೋಡುತ್ತಿದ್ದಾನೆ. ಆ ಜೀವಾತ್ಮ ಆತ್ಮಧ್ಯಾಸ ಹೊಂದಿದ್ದು ಕೊನೆಗೆ ಪರಮಾತ್ಮನನ್ನು ಹೊಂದುತ್ತಿದ್ದಾನೆ.

**(6)ಶ್ಲೋ॥ 19 : ಬಹೂನಾಂ ಜನ್ಮನಾಮಂತೇ ಜ್ಞಾನವಾನ್ ಮಾಂಪ್ರಪದ್ಯತೇ ।**
**ವಾಸುದೇವಸ್ಸರ್ವಮಿತಿ ಸ ಮಾಹಾತ್ಮಾ ಸುದುರ್ಲಭಃ ॥**
**(ಜೀವಾತ್ಮ, ಸಾಕಾರ)**

**ಭಾವಾರ್ಥ :** ಜ್ಞಾನವಂತನು ಎಷ್ಟೋ ಜನ್ಮಗಳು ಪಡೆದು ಕೊನೆಗೆ ವಾಸುದೇವನೇ

ಸರ್ವವೆಂದು ತಿಳಿದು ನನ್ನನ್ನು ಹೊಂದುತ್ತಿದ್ದಾನೆ. ಅಂತಹವನು ಎಷ್ಟೋ ದುರ್ಲಭವಾಗಿ ಲಭಿಸುತ್ತಾನೆ.

**ವಿವರ :** ಇಲ್ಲಿಯವರೆಗೂ ಮೊದಲು ಹೇಳಿದ ಶ್ಲೋಕಗಳಲ್ಲಿ ನಿರಾಕಾರವನ್ನು ಕುರಿತು ಹೇಳಿದಾಗ ಇಲ್ಲಿ ಸಾಕಾರವನ್ನು ಕುರಿತು ಹೇಳಲಾಗಿದೆ. ಇದು ಪರಮಾತ್ಮ ಭೂಮಿ ಮೇಲೆ ಭಗವಂತನಾಗಿರುವಾಗ ಅಪರೂಪವಾದ ವಿಷಯ. ಯಾವಾಗಲೊ ಅವಶ್ಯಕತೆ ಬಂದಾಗ ಸಾವಿರಾರು ವರ್ಷಗಳಿಗೋ, ಲಕ್ಷಗಳ ವರ್ಷಗಳಿಗೋ ಒಂದು ಬಾರಿ ಬರುವ ಭಗವಂತನನ್ನು ಆ ಸಮಯದಲ್ಲಿ ಕಂಡುಹಿಡಿದವನು ಬಹಳ ಅಪರೂಪದವನೆಂದು ಹೇಳಬಹುದು. ಆ ವಿಷಯವನ್ನು ಶ್ಲೋಕದಲ್ಲಿಯೂ ಸಹ **'ಸಮಹಾತ್ಮಾ ಸುದುರ್ಲಭಃ'** ಅಂತಹ ಮಹಾತ್ಮನು ಸುಲಭವಾಗಿ ಸಿಗುವುದಿಲ್ಲವೆಂದು ಹೇಳಿದ್ದಾರೆ. ಜ್ಞಾನಿಯಾದವನು ಎಷ್ಟೋ ಜನ್ಮಗಳು ಎತ್ತಿದರೂ ಕೊನೆಗೆ ಭೂಮಿ ಮೇಲೆ ಪರಮಾತ್ಮನನ್ನು ಭಗವಂತನಾಗಿ ಗುರುತಿಸುವ ಯೋಗ್ಯತೆ ಹೊಂದಿರುತ್ತಾನೆ. ಆ ಸಮಯದಲ್ಲಿ ಭಗವಂತನು ಭೂಮಿ ಮೇಲೆ ಇದ್ದರೆ ಆತನು ಗುರುತಿಸುತ್ತಾನೆ. ಅಂತಹವನು ಸಿಗುವುದು ಬಹಳ ದುರ್ಲಭ. ಪರಮಾತ್ಮ ಜನ್ಮ ದುರ್ಲಭವಾಗಿ ಯಾವಾಗಲೋ ನಡೆಯುವುದು. ಆಗಲೇ ಅಂತಹ ಜ್ಞಾನಿ ಇರುವುದು ಸಹ ದುರ್ಲಭವೇ ಅಲ್ಲವೆ! ಪೂರ್ವವು ದೊಡ್ಡ ಯೋಗಿಗಳೂ ಸಹ ಗ್ರಹಿಸಲಾರದ ಭಗವಂತನ ಜನ್ಮವನ್ನು ಶ್ರೀಕೃಷ್ಣನಾಗಿರುವುದನ್ನು ಗುರುತಿಸಿದ ಭೀಷ್ಮನು ಸೂಕ್ಷ್ಮದಲ್ಲಿ ಮೋಕ್ಷವನ್ನು ಹೊಂದಿದ್ದಾನೆ. ಸೂಕ್ಷ್ಮದಲ್ಲಿ ಮೋಕ್ಷವೆಂದರೆ ಯಾವ ಯೋಗವನ್ನು ಮಾಡದೆ ನೇರವಾಗಿ ಸುಲಭವಾಗಿ ಮೋಕ್ಷ ಹೊಂದುವುದು.

**(6) ಶ್ಲೋ॥ 20 : ಕಾಮೈಸ್ತೈಸ್ತೈರ್ಹೃತ ಜ್ಞಾನಾಃ ಪ್ರಪಂದ್ಯಂತೇಽನ್ಯದೇವತಾಃ ।**
**ತಂತಂನಿಯಮ ಮಾಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ ॥**

**(ಜೀವಾತ್ಮ)**

**ಭಾವಾರ್ಥ :** ಪ್ರಕೃತಿ ಸಂಬಂಧಗಳಾದ ಆಸೆ ಗುಣಗಳಿಂದ, ಜ್ಞಾನ ಇಲ್ಲದವರಾಗಿ ಅನ್ಯದೇವತಾರಾಧನೆ ಮಾಡುತ್ತಿದ್ದಾರೆ. ಆಯಾ ದೇವತೆಗಳ ನಿಯಮ ನಿಷ್ಟೆಗಳನ್ನು ಅನುಸರಿಸಿ ಅವರನ್ನು ಆರಾಧಿಸುತ್ತಿದ್ದಾರೆ.

**ವಿವರ :** ಪ್ರಕೃತಿ ಗುಣಗಳಿಂದ ಆಸೆ ಎನ್ನುವ ಬಲೆಗೆ ಬಿದ್ದವರಾಗಿ, ಆರ್ತರು ಅರ್ಥಾರ್ಥಿಗಳು ಎಲ್ಲದಕ್ಕಿಂತ ದೊಡ್ಡದಾದ ಪರಮಾತ್ಮನನ್ನು ಬಿಟ್ಟು ಸಣ್ಣ ದೇವತೆಗಳನ್ನು ನಂಬಿಕೊಂಡು, ಅವರಿಂದ ನಮಗೇಷ್ಟೋ ಲಾಭ ಉಂಟಾಗುತ್ತದೆಂದು ತಿಳಿದವರಾಗಿ ಆ ದೇವತೆಗಳನ್ನೇ

ಆರಾಧಿಸುತ್ತಿದ್ದಾರೆ. ಆರಾಧನೆಯಲ್ಲಿ ನಿಯಮ ನಿಷ್ಟೆಗಳಿಲ್ಲದ ಆತ್ಮ ವಿಧಾನವನ್ನು ಬಿಟ್ಟು, ನಿಯಮ ನಿಷ್ಟೆಗಳಿರುವ ಇತರ ದೇವತಾರಾಧನೆ ಮಾಡುತ್ತಿದ್ದಾರೆ. ಇತರ ದೇವತಾರಾಧನೆಯಲ್ಲಿ ಶರೀರ ಶ್ರಮ ಎಷ್ಟು ಇದ್ದರೂ ಸಹಿಸಿಕೊಂಡು ಆರಾಧಿಸುವುದು ನಡೆಯುತ್ತದೆ.

**(6) ಶ್ಲೋ॥ 21 : ಯೋಯೋ ಯಾಂ ಯಾಂ ತನುಂಭಕ್ತ ಶ್ರದ್ಧಯಾರ್ಚಿತುಮಿಚ್ಛತಿ ।**
**ತಸ್ಯ ತಸ್ಯಾಽಚಲಾಂ ಶ್ರದ್ಧಾಂತಾ ಮೇವ ವಿದಧಾಮ್ಯಹಮ್ ॥**
**(ಜೀವಾತ್ಮ)**

**ಭಾವಾರ್ಥ :** ಯಾರ್‍ಯಾರು ಯಾವ ಯಾವ ದೇವತೆಯನ್ನು ಶ್ರದ್ಧೆಯಿಂದ ಆರಾಧಿಸ ಬೇಕೆಂದುಕೊಳ್ಳುತ್ತಾನೋ, ಅವರವರಿಗೆ ಆ ಶ್ರದ್ಧೆಯನ್ನು ದೃಢವಾದುದಾಗಿರುವಂತೆ ನಾನು ಉಂಟುಮಾಡುತ್ತೇನೆ.

**ವಿವರ :** ಕುರುಡುಗಿಂತ ಮೆಳ್ಳಗಣ್ಣು ಮೇಲೆನ್ನುವಂತೆ ಯಾವುದೋ ಒಂದು ದೇವತಾ ಭಕ್ತಿಯಾದರೂ ಅವನಲ್ಲಿರುವುದು ಒಳ್ಳೆಯದು. ಯಾವ ಭಕ್ತಿ ಇಲ್ಲದವನು ವಾಸನೆಯಿಲ್ಲದ ಹೂವಿನಂತಹವನು ಆಗುತ್ತಾನೆ. ಹಾಗೇ ವ್ಯರ್ಥ ಜೀವಿ ಆಗದಂತೆ ಅವನಿಗಿರುವ ಆ ಭಕ್ತಿಯನ್ನಾದರೂ ದೃಢವಾಗಿರುವಂತೆ ಪರಮಾತ್ಮನೇ ಮಾಡುತ್ತಿದ್ದಾನೆ.

**(6) ಶ್ಲೋ॥ 22 : ಸತಯಾ ಶ್ರದ್ಧ ಯಾ ಯುಕ್ತಸ್ತ ಸ್ಯಾ ರಾಧನ ಮೀಹತೇ ।**
**ಲಭತೇ ಚ ತತಃ ಕಾಮಾನ್ ಮಯ್ಯೈವ ವಿಹಿತಾನ್ ಹಿತಾನ್ ॥**
**(ಜೀವಾತ್ಮ)**

**ಭಾವಾರ್ಥ :** ಅವನು ಶ್ರದ್ಧೆವಹಿಸಿ ಆ ದೇವತೆಗಳನ್ನೇ ಉಪಾಸನೆ ಮಾಡಿದಾಗ ಅದರಿಂದ ಕಾಮ್ಯಾರ್ಥಸಿದ್ಧಿ ಉಂಟಾಗುತ್ತದೆ. ಅವನ ಹಿತವು ಕೋರಿ ನಾನೇ ಕಾಮ್ಯಾರ್ಥಸಿದ್ಧಿ ಉಂಟುಮಾಡುತ್ತೇನೆ.

**ವಿವರ :** ಯಾರ ಇಷ್ಟಕ್ಕೆ ಅನುಗುಣವಾಗಿ ಅವನಿಗಾಶ್ರದ್ಧೆಯೇ ಪರಮಾತ್ಮ ಉಂಟುಮಾಡುತ್ತಾನೆ. ಆ ಶ್ರದ್ಧೆಯಿಂದಲೇ ಅವನು ದೇವತಾರಾಧನೆಗಳು ಮಾಡಿದಾಗ, ಆ ಆರಾಧನೆಗಳಿಂದ ಅವನು ಕೋರಿಕೊಂಡ ಕೋರಿಕೆಗಳನ್ನು ನೆರವೇರುವಂತೆ ಪರಮಾತ್ಮನೇ ಮಾಡುತ್ತಿದ್ದಾನೆ. ಅವನ ಕರ್ಮಾನುಸಾರ ಲಭ್ಯವಾಗುವ ಫಲಿತಗಳನ್ನೇ, ಕೋರಿರುವವು ಲಭಿಸುವಂತೆ ಅವನಿಗೆ ಅರ್ಥವಾಗುವಂತೆ ಮಾಡುತ್ತಿದ್ದಾನೆ. ಲಭಿಸಿದ ಫಲಗಳನ್ನನುಸರಿಸಿ ಅವನು ನಾಸ್ತಿಕನಾಗಿ ಬದಲಾಗದೆ ಆಸ್ತಿಕನಾಗಿಯಾದರು ಇರುತ್ತಾನೆ.

**(6) ಶ್ಲೋ॥ 23 : ಅಂತ ವತ್ತು ಫಲಂ ತೇಷಾಂ ತದ್ಭವ ತ್ಯಲ್ಪ ಮೇಧಸಾಮ್ ।**
**ದೇವಾನ್ ದೇವ ಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ ॥**
**(ಜೀವಾತ್ಮ)**

**ಭಾವಾರ್ಥ:** ಅಲ್ಪಬುದ್ಧಿ ಇರುವವರು ಪಡೆಯುವ ಫಲಗಳು ಅನಿತ್ಯವಾದುದು. ದೇವತೆಗಳನ್ನು ಪೂಜಿಸುವವರು ದೇವತೆಗಳನ್ನು ಸೇರಿದಾಗ, ನನ್ನನ್ನು ಪೂಜಿಸುವವರು ನನ್ನನ್ನೇ ಸೇರುತ್ತಾರೆ.

**ವಿವರ :** ತಿಳುವಳಿಕೆ ಇಲ್ಲದವರು ವಿಶಾಲವಾದ ಪರಮಾತ್ಮನನ್ನು ಬಿಟ್ಟು, ರವೆಯಷ್ಟಿರುವ ದೇವತೆಗಳನ್ನು ಪೂಜಿಸುವವರಿಗೆ ಸಿಗುವ ಫಲಿತವೂ ಸಹ ಸ್ವಲ್ಪವೇ ಇರುತ್ತದೆ. ಆ ಫಲಿತಗಳು ಆ ಸಮಯಕ್ಕೆ ರುಚಿಸಿದರು ಶಾಶ್ವತವಾದವು ಅಲ್ಲ. ಅಷ್ಟೇ ಅಲ್ಲ ದೇವತೆಗಳನ್ನು ಆರಾಧಿಸುವವರು ಮರಣಿಸಿದ ನಂತರ ಯಾವುದೋ ಒಂದು ಪ್ರತಿಮೆಯಲ್ಲಿ ಜೀವಾತ್ಮವಾಗಿ ಸೇರಿ ಅವರೂ ಸಹ ದೇವತೆಗಳಾಗಿ ಹೋಗುತ್ತಾರೆ. ಅವರವರು ಮಾಡಿಕೊಂಡ ಆರಾಧನೆಗಳನ್ನನುಸರಿಸಿ, ಆಯಾ ದೇವತೆಗಳನ್ನನುಸರಿಸಿ, ಎಷ್ಟೋ ಸಣ್ಣ ದೊಡ್ಡ ವಿಧಗಳಾಗಿರುವ ದೇವತಾ ಪ್ರತಿಮೆಗಳಲ್ಲಿ ಹುಟ್ಟಿ, ವಿವಿಧ ದೇವತೆಗಳಾಗಿ ಬದಲಾಗುತ್ತಿದ್ದಾರೆ. ಮನುಷ್ಯ ಶರೀರದಲ್ಲಿ ಜನ್ಮಗಳಿರುವಂತೆ ಪ್ರತಿಮೆ ಶರೀರದಲ್ಲಿಯೂ ಸಹ ಜನ್ಮಗಳಿವೆ. ದೇವತೆಗಳಾಗಿ ಹುಟ್ಟಿದ ಜೀವಾತ್ಮಗಳು ವಿಗ್ರಹಗಳಾಗಿ ಹೇಳಲಾಗುತ್ತದೆ. ಮನುಷ್ಯರಾಗಿ ಹುಟ್ಟಿದ ಜೀವಾತ್ಮಗಳನ್ನು ಗ್ರಹಗಳಾಗಿ ಹೇಳಲಾಗುತ್ತದೆ. ಬಹಳ ಜನರಿಗೆ ಪ್ರತಿಮೆಗಳಲ್ಲಿ ಜನ್ಮಗಳಿರುವ ಮಾತು ತಿಳಿದಿಲ್ಲ. ಮೇಲಿನ ಶ್ಲೋಕವನ್ನನುಸರಿಸಿ ನಂಬುತ್ತಾರೆಂದುಕೊಳ್ಳುತ್ತೇವೆ. ಕೆಲವರು ದೇವತಾರಾಧಕರು ದೇವತೆಗಳಲ್ಲಿ ಹುಟ್ಟಿದಾಗ, ಪರಮಾತ್ಮನನ್ನು ಸೇರಬೇಕೆಂದು ಅನ್ಯದೇವತಾರ್ಚನೆ ಮಾಡದೆ, ನಿತ್ಯವು ಕರ್ಮಕಳೆದುಕೊಳ್ಳುವ ಕೆಲಸದಲ್ಲಿ, ಅಂತರಾತ್ಮ ಧ್ಯಾಸದಲ್ಲಿ ಇರುವವನು ಪರಮಾತ್ಮನನ್ನೇ ಸೇರಿ ಜನ್ಮಿಸದಂತಾಗುತ್ತಾನೆ.

**(6) ಶ್ಲೋ॥ 24 : ಅವ್ಯಕ್ತಂ ವ್ಯಕ್ತಿ ಮಾಪನ್ನಂ ಮನ್ಯಂತೇ ಮಾಮಬುದ್ಧಯಃ ।**
**ಪರಂ ಭಾವ ಮಜಾನನ್ತೋ ಮಮಾವ್ಯಯ ಮನುತ್ತಮಮ್ ॥**
**(ಜೀವಾತ್ಮ, ಪರಮಾತ್ಮ)**

**ಭಾವಾರ್ಥ :** ನಾಶವಿಲ್ಲದ ಉತ್ತಮವಾದ ಪರಮವಾದ ನನ್ನ ನಿಜಸ್ವರೂಪವನ್ನು ಬುದ್ಧಿಹೀನರು ತಿಳಿದುಕೊಳ್ಳದೆ ಅವ್ಯಕ್ತನಾದ ನನ್ನನ್ನು ವ್ಯಕ್ತನೆಂದು ತಿಳಿಯುತ್ತಿದ್ದಾರೆ.

**ವಿವರ :** ಪರಮಾತ್ಮ ಉಳಿದ ದೇವತೆಗಳಂತೆ ಇರುವುದಿಲ್ಲ. ದೇವತೆಗಳ ಆಕಾರದಂತೆ ಪರಮಾತ್ಮಗೆ ಆಕಾರ ಇರುವುದಿಲ್ಲ. ಹಾಗೇ ಹೆಸರು ಇರುವುದಿಲ್ಲ. ಪರಮಾತ್ಮ ದೇವತೆಗಳಂತೆ

ಕಾಣಿಸುವ ಮೂರ್ತಿಯೂ ಅಲ್ಲ. ವ್ಯಕ್ತವಾಗಿರುವ (ತಿಳಿಯುವ) ದೇವತೆಗಳಂತೆ ಅಲ್ಲದೆ ಅವ್ಯಕ್ತವಾಗಿ ಕಾಣಿಸದವನಾಗಿದ್ದಾನೆ. ದೇವತೆಗಳು ಒಂದುಕಡೆ ಸ್ಥಿರಸ್ಥಾಯಿಯಾಗಿ ಪ್ರತಿಮೆ ರೂಪದಲ್ಲಿದ್ದು, ಸೂಕ್ಷ್ಮವಾಗಿ ಆಗಾಗ ಅಲ್ಲಲ್ಲಿ ತಿರುಗುತ್ತಾರೆ. ಪರಮಾತ್ಮ ಇಲ್ಲಿ ಅಲ್ಲಿ ಎನ್ನುವ ತಾರತಮ್ಯ ಇಲ್ಲದಂತೆ ಎಲ್ಲಾಕಡೆ ಕಾಣಿಸದಂತೆ ಇದ್ದಾನೆ. ಹಾಗೆ ಹೋಲಿಸಿದರೆ ಎಷ್ಟೋ ವಿಧಗಳ ದೇವತೆಗಳಿಗಿಂತ ಅಧಿಕನಾಗಿ, ನಾಶವಿಲ್ಲದವನಾಗಿ, ಉತ್ತಮನಾಗಿರುವ ಪರಮಾತ್ಮ ಕಾಣಿಸದ ಶಕ್ತಿಯಾಗಿ ಇದ್ದರೂ, ತಿಳುವಳಿಕೆ ಇಲ್ಲದವರು ಜ್ಞಾನಹೀನವಾದವರು ಕೆಲವರು ಪರಮಾತ್ಮನನ್ನೂ ಸಹ ಕಾಣಿಸುವ ದೇವತೆಗಳಲ್ಲಿ ಒಬ್ಬನನ್ನಾಗಿ ಹೋಲಿಸಿಕೊಳ್ಳುತ್ತಿದ್ದಾರೆ. ಪರಮಾತ್ಮ ದೇವತೆಗಳಿಗೆ ದೇವರೆಂದು, ಎಲ್ಲರಂತೆ ಕಾಣಿಸುವವನು ಅಲ್ಲವೆಂದು ತಿಳಿಯದಂತೆ ಇದ್ದಾರೆ. ಕಾಣಿಸುವ ದೇವತೆಗಳಿಗೆ, ಕಾಣಿಸದ ಪರಮಾತ್ಮಕ್ಕೆ ಯಾವ ಯಾವ ವ್ಯತ್ಯಾಸಗಳಿವೆಯೋ ಕೆಳಗೆ ನೋಡಿ.

| <u>ದೇವತೆಗಳು</u> | <u>ಪರಮಾತ್ಮ</u> |
|---|---|
| 1. ದೇವತೆಗಳು ಕಾಣಿಸುವ ಆಕಾರ ಇರುವವರು. | (1) ಪರಮಾತ್ಮ ಆಕಾರವೇ ಇಲ್ಲದವನು. |
| 2. ದೇವತೆಗಳು ವಿವಿಧ ಹೆಸರುಗಳಿರುವವರು. | 2) ಪರಮಾತ್ಮ ಯಾವ ಹೆಸರಿಲ್ಲದವನು |
| 3) ದೇವತೆಗಳಿಗೆ ಮರಣವು ಇದೆ. | (3) ಪರಮಾತ್ಮಗೆ ಮರಣವು ಇಲ್ಲ. |
| 4) ದೇವತೆಗಳಿಗೆ ನಾಶವು ಇದೆ. | (4) ನಾಶ ಇಲ್ಲದವನು ಪರಮಾತ್ಮ. |
| 5) ಪುರುಷದೇವತೆಗಳು, ಸ್ತ್ರೀದೇವತೆಗಳಿದ್ದಾರೆ. | (5) ಪರಮಾತ್ಮ ಸ್ತ್ರೀಯಲ್ಲ. ಪುರುಷನೂ ಅಲ್ಲ. |
| 6) ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸೂಕ್ಷ್ಮವಾಗಿ ಹೋಗಬಲ್ಲರು. | (6)ಎಲ್ಲಾಕಡೆಯಲ್ಲಿಯೂ ಇರುವವನು ಹೋಗಬೇಕಾದ ಕೆಲಸವಿಲ್ಲ. |
| 7) ಪ್ರತಿಮೆಯೇ ದೇಹವಾಗಿರುವವರು | (7) ಪ್ರತ್ಯೇಕಿಸಿ ಎಂತಹ ದೇಹವು ಇಲ್ಲ. |
| 8) ಇವರೂ ಸಹ ತಪಸ್ಸು ಯೋಗವು ಆಚರಿಸುತ್ತಾರೆ. | (8) ಏನು ಆಚರಿಸುವುದಿಲ್ಲ. |

| | |
|---|---|
| 9) ಜೀವಾತ್ಮಗಳಾಗಿರುವವರು. | (9) ಪರಮಾತ್ಮನಾಗಿರುವವನು. |
| 10) ಧನಿಕರು ಬಡವರು ಇದ್ದಾರೆ. | (10) ಆತನು ಯಾವುದು ಅಲ್ಲ. |
| 11) ಮಾಂತ್ರಿಕರಿಗೆ ಭಯಪಡುತ್ತಾರೆ ವಶವಾಗುತ್ತಾರೆ. | (11) ಯಾರಿಗೂ ಬಯಪಡುವುದಿಲ್ಲ. ಯಾರಿಗೂ ವಶವಾಗುವುದಿಲ್ಲ. |
| 12) ಪ್ರಳಯದಲ್ಲಿ ಲಯವಾಗಿ ಹೋಗುತ್ತಾರೆ. | (12) ಪ್ರಳಯದಲ್ಲಿಯೂ ಸಹ ಉಳಿದಿರುವವನು. |
| 13) ಒಂದುಕಡೆಯಿದ್ದು, ಒಂದು ಕಡೆಯಿಂದಲೇ ನೋಡುವವರು. | (13) ವಿಶ್ವವ್ಯಾಪಿ, ಎಲ್ಲಾಕಡೆ ನೋಡುತ್ತಿದ್ದಾನೆ |
| 14) ಇವರಿಗೆ ಕಷ್ಟಸುಖಗಳಿವೆ. | (14) ಕಷ್ಟಸುಖಗಳಿಗೆ ಅತೀತನು. |
| 15) ಯಾರಾದರೂ ಇಂತಹ ದೇವರೆಂದು ಗುರುತಿಸುತ್ತಾರೆ. | (15) ಯೋಗಿಗಳಿಗೆ ಮಾತ್ರ ಗುರುತು ಇರುವವನು. |

**6) ಶ್ಲೋ॥ 25 : ನಾಹಂ ಪ್ರಕಾಶ ಸ್ಸರ್ವಶ್ಯ ಯೋಗಮಾಯಾಸಮಾವೃತಃ ।**
**ಮೂಢೋಽಯಂ ನಾಭಿಜಾನಾತಿ ಲೋಕೋ ಮಾ ಮಜ ಮವ್ಯಯಮ್॥**
**(ಜೀವಾತ್ಮ, ಪರಮಾತ್ಮ)**

**ಭಾವಾರ್ಥ : 'ಯೋಗಮಾಯಾ ಸಮಾವೃತಃ'** ಎಂಬ ಪದವು ಈ ಶ್ಲೋಕದಲ್ಲಿ ಉಪಯೋಗಿಸಲಾಗಿದೆ. ಮಾಯೆ ಎಂದರೆ ತ್ರಿಗುಣಗಳ ಸಾರವು. ಯೋಗವೆಂದರೆ ಕೂಡಿಕೊಳ್ಳುವುದು. **"ಸಮಾವೃತಃ"** ಎಂದರೆ ಹೊದ್ದಿರುವುದು ಅಥವಾ ಮುಚ್ಚಲ್ಪಟ್ಟಿರುವುದೆಂದು ಅರ್ಥ. ಗುಣಗಳಿಂದ ಕೂಡಿಕೊಂಡು ಗುಣಗಳ ಸಾರವಾದ ಮಾಯೆಯಿಂದ ಮುಚ್ಚಲ್ಪಡುವವರು ಪರಮಾತ್ಮನಾ? ಅಥವಾ ಸರ್ವ ಮಾನವರಾ? ಎಂದು ಯೋಚಿಸಬೇಕು.

ಉಳಿದ ಗೀತೆಗಳಲ್ಲಿ ಹೀಗೆ ಬರೆಯಲಾಗಿದೆ. ಯೋಗ ಮಾಯೆಯಿಂದ ಮುಚ್ಚಲ್ಪಟ್ಟಿರುವ ನಾನು ಯಾರಿಗೂ ತಿಳಿಯುವುದಿಲ್ಲ. ಹುಟ್ಟು ನಾಶವಿಲ್ಲದ ನನ್ನನ್ನು ಮೂಢರು ತಿಳಿದುಕೊಳ್ಳುವುದಿಲ್ಲ. ಮೂಢರಾದ ಮಾನವರು ಪರಮಾತ್ಮನನ್ನು

ತಿಳಿದುಕೊಳ್ಳುವು ದಿಲ್ಲವೆನ್ನುವ ಮಾತು ನಿಜವೇ. ಪರಮಾತ್ಮಕ್ಕೆ ಮಾಯೆ ಕೂಡಿಕೊಂಡು ಇದೆಯಾ? ಪರಮಾತ್ಮ ಮಾಯೆಯಿಂದ ಮುಚ್ಚಲ್ಪಟ್ಟವನಾ! ಪರಮಾತ್ಮಗಿಂತ ಮಾಯೆ ದೊಡ್ಡದಾ? ಎನ್ನುವ ಪ್ರಶ್ನೆಗಳು ಈ ಭಾವವನ್ನು ನೋಡಿದವರಿಗೆ ಬರುತ್ತವೆ. ಮೇಲಿನ ಶ್ಲೋಕದಲ್ಲಿ ಸರ್ವಮಾನವರು ಮಾಯೆಯಿಂದ ಯೋಗವಾಗಿದ್ದಾರೆ, ಎಂದರೆ ಮಾಯೆಯಿಂದ ಕೂಡಿಕೊಂಡಿದ್ದಾರೆ. ಮಾಯೆಯಿಂದ ಮುಚ್ಚಲ್ಪಟ್ಟ ಮೂಢರು ನನ್ನನ್ನು ನೋಡಲಾರರು. ಹುಟ್ಟು ನಾಶವಿಲ್ಲದ ನನ್ನನ್ನು ಯಾರು ತಿಳಿಯಲಾರರು ಎನ್ನುವ ಭಾವನೆ ಸ್ಪಷ್ಟವಾಗಿರುವಾಗ ಮಾಯೆಯಿಂದ ಪರಮಾತ್ಮ ಬಂಧಿಯಾಗಿದ್ದಾನೆನ್ನುವುದು, ಮಾಯೆಯಿಂದ ಕೂಡಿಕೊಂಡು ಇದ್ದಾನೆನ್ನುವುದು ಬಹಳ ತಪ್ಪು. ಮಾಯೆಯಿಂದ ಕೂಡಿಕೊಳ್ಳುವವನು, ಗುಣಗಳಿಂದ ಹೂತಲ್ಪಟ್ಟವನು ಜೀವಾತ್ಮ. ಗುಣಗಳ ಪ್ರಭಾವದಿಂದ, ಮಾಯೆ ಎಂಬ ಪೊರೆ ಅಡ್ಡ ಇರುವುದರಿಂದ, ಪರಮಾತ್ಮ ಅಂಶವಾದ ಆತ್ಮವನ್ನು ಜೀವಿಯು ನೋಡಲಾರದೆ ಪರಮಾತ್ಮನನ್ನು ಅರ್ಥಮಾಡಿಕೊಳ್ಳದೆ ಇದ್ದಾನೆ. ಸರ್ವರು ಮಾಯೆಯಲ್ಲಿ ಮುಳುಗಿ ದೈವವನ್ನು ನೋಡಲಾರದೆ ಇದ್ದಾರೆಂಬುವುದು ವಾಸ್ತವ. ಹಾಗಲ್ಲದೆ ದೇವರೆ ಮಾಯೆಯೊಂದಿಗೆ ಕೂಡಿರುವುದರಿಂದ ಯಾರು ತಿಳಿಯಲಾರದೆ ಇದ್ದಾರೆಂಬುವುದು ಅವಾಸ್ತವ. ಶುದ್ಧ ತಪ್ಪು. ಮೂಢರಾದವರು ನನಗೆ ಹುಟ್ಟು ನಾಶ ಇಲ್ಲವೆಂಬ ಮಾತನ್ನು ತಿಳಿಯದಿದ್ದಾರೆ. ನಾವು ಪ್ರತ್ಯೇಕಿಸಿ ಬರೆಯುವ ಟೀಕೆ –ಭಾವನೆ ಕೆಳಗೆ ಇದೆ.

**ಟೀಕೆ :– ಸರ್ವಸ್ಯ**= ಮಾನವರೆಲ್ಲರೂ, **<u>ಯೋಗಮಾಯೆ</u>**= ಮಾಯೆಯಿಂದ ಕೂಡಿಕೊಂಡು

**ಸಮಾವೃತಃ** = ಬಂಧಿಯಾಗಿರುವವರಾಗಿ, **<u>ಅಹಂ=</u>** ನಾನು

**ನಪ್ರಕಾಶಃ** = ಕಾಣಿಸುವವನು ಅಲ್ಲ ಅಥವಾ ತಿಳಿಯುವವನು ಅಲ್ಲ

**ಮಾಮ್** = ನನ್ನನ್ನು, **<u>ಅಜ</u>** = ಹುಟ್ಟು ಇಲ್ಲದ, **<u>ಅವ್ಯಯಮ್</u>** = ನಾಶವಿಲ್ಲದ

**ಲೊಕೋಮೂಢ** = ಮೂಢರಾದ ಲೋಕಸ್ತರು, **<u>ಅಭಿಜಾನಾತಿ</u>**=ತಿಳಿಯದಿದ್ದಾರೆ.

**ಭಾವಾರ್ಥ :** ಮಾಯೆಜೊತೆ ಕೂಡಿಕೊಂಡವರು, ಮಾಯೆಯಿಂದ ಬಂಧಿಸಲ್ಪಟ್ಟವರಾಗಿ ಸರ್ವರು ನನ್ನನ್ನು ತಿಳಿಯದಂತೆ ಇದ್ದಾರೆ. ಮೂಢರಾದ ಲೋಕಸ್ತರು ನನಗೆ ಹುಟ್ಟು ನಾಶ ಇಲ್ಲವೆಂದು ತಿಳಿಯದಂತೆ ಇದ್ದಾರೆ.

**(6) ಶ್ಲೋ॥ 26 : ವೇ ದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ ।**
**ಭವಿಷ್ಯಾಣಿ ಚ ಭೂತಾನಿ ಮಾಂತು ವೇದ ನ ಕಶ್ಚನ ॥**

**(ಜೀವಾತ್ಮ, ಪರಮಾತ್ಮ)**

**ಭಾವಾರ್ಥ :** ಸರ್ವ ಜೀವಿಗಳಿಗೂ ನಡೆದುಹೋಗಿರುವವು, ನಡೆಯುತ್ತಿರುವವು, ನಡೆಯುವವು ನನಗೆ ತಿಳಿದಿದೆ. ನನ್ನನ್ನು ಮಾತ್ರ ಯಾರು ತಿಳಿಯಲಾರರು.

**ವಿವರ :** ಸರ್ವ ಜೀವರಾಶಿಗಳ ಕರ್ಮಗಳು ಅವನ ಶಿರಸ್ಸಿನಲ್ಲಿ ಕರ್ಮಚಕ್ರದಲ್ಲಿ ಜೋಡಣೆ ಆಗಿರುತ್ತದೆ. ಕಾಲಚಕ್ರ, ಕರ್ಮಚಕ್ರ ಆತ್ಮವನ್ನು ಕೇಂದ್ರವಾಗಿ ಮಾಡಿಕೊಂಡು ತಲೆಯಲ್ಲಿ ತಿರುಗುತ್ತಿರುತ್ತದೆ. ಯಾವ ಕಾಲದಲ್ಲಿ ಯಾವ ಕರ್ಮ ಕಳೆದಿರುವುದು, ಯಾವ ಕಾಲದಲ್ಲಿ ಯಾವ ಕರ್ಮ ನಡೆಯುತ್ತದೋ, ಪ್ರಸ್ತುತಕಾಲದಲ್ಲಿ ಏನು ನಡೆಯುತ್ತಿದೆಯೋ ಎಲ್ಲಾ ಅಲ್ಲಿ ಆ ಚಕ್ರಗಳಲ್ಲಿ ತಿಳಿಯುತ್ತವೆ. ಪರಮಾತ್ಮ ಪ್ರತಿ ಶರೀರದಲ್ಲಿಯೂ ಸಹ ವ್ಯಾಪಿಸಿದ್ದಾನೆ. ಪ್ರತಿ ತಲೆಯಲ್ಲಿನ ಕರ್ಮ ಕಾಲವು ಆತನಿಗೆ ತಿಳಿಯುತ್ತದೆ. ಆದ್ದರಿಂದ ಯಾರಿಗೆ ಏನು ನಡೆಯುತ್ತದೋ, ಏನು ನಡೆದಿದೆಯೋ ಸಹ ಆತನಿಗೆ ಸುಲಭವಾಗಿ ತಿಳಿದಿರುತ್ತದೆ.

**(6) ಶ್ಲೋ॥ 27 : ಇಚ್ಛಾದ್ವೇಷ ಸಮುತ್ಥೇನ ದ್ವನ್ದ್ವಮೋಹೇನ ಭಾರತ ।**
**ಸರ್ವ ಭೂತಾನಿ ಸಂಮ್ಮೋಹಂ ಸರ್ಗೇಯಾಂತಿ ಪರಂತಪ! ॥**
**(ಜೀವಾತ್ಮ, ಪ್ರಕೃತಿ)**

**ಭಾವಾರ್ಥ :** ರಾಗದ್ವೇಷಗಳಿಂದ ಹುಟ್ಟುತ್ತಿರುವ ದ್ವಂದ್ವಗಳಿಂದ ಭ್ರಾಂತಿ ಹೊಂದಿದವರಾಗಿ, ಸರ್ವಜೀವರಾಶಿಗಳು ಹುಟ್ಟಿದಾಗಿನಿಂದ ಅವುಗಳಲ್ಲಿಯೇ ಸಮ್ಮೋಹವಾಗಿ ಹೋಗುತ್ತಿದ್ದಾರೆ.

**ವಿವರ :** ಪ್ರೇಮ, ದ್ವೇಷ ಎನ್ನುವ ಎರಡು ವಿಧಗಳ ಗುಣಗಳಂತೆ, ಉಳಿದ ಗುಣಗಳಿಂದ ಉಂಟಾಗುವ ಸುಖದುಃಖಗಳಿಗೆ ಒಳಗಾಗಿ, ಸರ್ವಜೀವರಾಶಿಗಳು ಹುಟ್ಟಿದಾಗಿನಿಂದ ಮಂತ್ರಿಸಲ್ಪಟ್ಟವರಂತೆ ಆ ಗುಣಗಳಲ್ಲಿಯೇ ಸಿಲುಕಿಕೊಂಡಿದ್ದಾರೆ.

**(6) ಶ್ಲೋ॥ 28 : ಯೇಷಾಂ ತ್ವನ್ತಗತಂ ಪಾಪಂ ಜನಾನಾಂ ಪುಣ್ಯ ಕರ್ಮಣಾಮ್ ।**
**ತೇದ್ವನ್ದ್ವ ಮೋಹನಿರ್ಮುಕ್ತಾ ಭಜನ್ತೇ ಮಾಂ ದೃಢವ್ರತಾಃ ॥**
**(ಜೀವಾತ್ಮ, ಪರಮಾತ್ಮ)**

**ಭಾವಾರ್ಥ :** ಮನುಷ್ಯರಲ್ಲಿ ಯಾರು ಅವನೊಂದರ ದ್ವಂದ್ವ ಗುಣಗಳ ಮೋಹವನ್ನು ಬಿಟ್ಟು ನನ್ನನ್ನೇ ಭಜಿಸುತ್ತಿದ್ದಾನೋ, ಅಂತಹವನು ತನ್ನ ಪಾಪಪುಣ್ಯಗಳನ್ನು ನಶಿಸುವಂತೆ ಮಾಡಿಕೊಳ್ಳುತ್ತಾನೆ.

**ವಿವರ :** ಬಹಳ ಗೀತೆಗಳಲ್ಲಿ ಯಾರೊಂದರ ಪಾಪಪುಣ್ಯಗಳು ನಶಿಸುತ್ತವೆಯೋ, ಅಂತಹವನು ದ್ವಂದ್ವಗಳನ್ನು ಬಿಟ್ಟು ಪರಮಾತ್ಮನನ್ನೇ ಭಜಿಸುತ್ತಾನೆಂದು ಬರೆದಿದ್ದಾರೆ. ದ್ವಂದ್ವಗಳನ್ನು ಬಿಟ್ಟು ಯೋಗವಾಚರಿಸಿದ ನಂತರ ಪಾಪಪುಣ್ಯಗಳು ಹೋಗುತ್ತವೆಯಾಗಲಿ, ಪಾಪಪುಣ್ಯಗಳು ಹೋದ ನಂತರ ದ್ವಂದ್ವಗಳು ಬಿಡುವುದು ಪರಮಾತ್ಮನನ್ನು ಭಜಿಸುವುದು ಅರ್ಥವಿಲ್ಲದ ಮಾತಾಗುತ್ತದೆ. ಯಾವುದು ಮುಂದೆ ಯಾವುದು ಹಿಂದೆ ಎಂದು ಯೋಚಿಸದೆ ಬರೆದಿದ್ದಾರೆ. ಮೊದಲು ದ್ವಂದ್ವ ಗುಣಗಳನ್ನು ಇಲ್ಲದಂತೆ ಮಾಡಿಕೊಂಡು, ಯೋಗದ ಮೂಲಕ ಪರಮಾತ್ಮನನ್ನು ಆರಾಧಿಸಿದಾಗ, ನಂತರ ಪಾಪಪುಣ್ಯ ಕರ್ಮ ನಶಿಸುತ್ತದೆ.

**(6) ಶ್ಲೋ॥ 29 : ಜರಾಮರಣ ಮೋಕ್ಷಾಯ ಮಾ ಮಾಶ್ರಿತ್ಯ ಯತನ್ತಿ ಯೇ ।**
**ತೇ ಬ್ರಹ್ಮ ತದ್ ವಿದುಃ ಕೃತ್ಸ್ನ ಮಧ್ಯಾತ್ಮಂ ಕರ್ಮಚಾಖಿಲಮ್ ॥**
**(ಜೀವಾತ್ಮ, ಪರಮಾತ್ಮ)**

**ಭಾವಾರ್ಥ :** ಜರಾಮರಣ ಮೋಕ್ಷಕ್ಕೋಸ್ಕರ ನನ್ನನ್ನೇ ಆಶ್ರಯಿಸಿ ಯಾರು ಪ್ರಯತ್ನಿಸುತ್ತಿದ್ದಾನೋ ಅವನು ಆತ್ಮವನ್ನು, ಆಧ್ಯಾತ್ಮಿಕವನ್ನು, ಕರ್ಮವನ್ನು ತಿಳಿದವನಾಗಿರುತ್ತಾನೆ.

**ವಿವರ :** ಸಾವು ಹುಟ್ಟುಗಳಿಂದ ಬಿಡುಗಡೆಹೊಂದಿ, ಅವುಗಳನ್ನು ಹೊಂದದಂತೆ ಮೋಕ್ಷವನ್ನು ಸೇರಬೇಕೆಂದರೆ ಪರಮಾತ್ಮನೇ ಇದಕ್ಕೆ ಆಧಾರವೆಂದು, ಪರಮಾತ್ಮನನ್ನೇ ಆಶ್ರಯಿಸಿ ಆತನನ್ನು ಸೇರಬೇಕೆಂದು ಪ್ರಯತ್ನ ಮಾಡುವವನು ಯಾರೋ, ಅಂತಹವನು ಆಧ್ಯಾತ್ಮಿಕವನ್ನು ಕರ್ಮಗಳ ವಿವರವು ಎಲ್ಲವೂ ತಿಳಿದಿರುತ್ತಾನೆ.

**(6) ಶ್ಲೋ॥ 30 : ಸಾಧಿಭೂತಾಧಿ ದೈವಂ ಮಾಂ ಸಾಧಿಯಜ್ಞಂ ಚ ಯೇವಿದುಃ ।**
**ಪ್ರಯಾಣಕಾಲೇ಻ಽಪಿಚ ಮಾಂ ತೇ ವಿದುರ್ಯುಕ್ತ ಚೇತಸಃ ॥**
**(ಜೀವಾತ್ಮ, ಪರಮಾತ್ಮ)**

**ಭಾವಾರ್ಥ :** ಸರ್ವಜೀವರಾಶಿಗಳಿಗೂ, ಸರ್ವದೇವತೆಗಳಿಗೂ, ಸರ್ವಯಜ್ಞಗಳಿಗೂ ನಾನೇ ಆಧಾರಭೂತನೆಂದು ಯಾರು ತಿಳಿದುಕೊಳ್ಳುತ್ತಾರೊ, ಅವರು ಅವಸಾನ ದಶೆಯಲ್ಲಿ ಅವರ ಮನಸ್ಸನ್ನು ನನ್ನಲ್ಲಿಯೇ ಇಟ್ಟುಕೊಂಡು ನನ್ನನ್ನು ತಿಳಿದುಕೊಳ್ಳುತ್ತಾರೆ.

**ವಿವರ :** ಸಂಪೂರ್ಣ ಜ್ಞಾನ ತಿಳಿದು ಪ್ರಪಂಚಕ್ಕೆಲ್ಲಾ ಅಧಿಪತಿ ಒಬ್ಬನಿದ್ದಾನೆಂದು, ಅವನು ಸಮಸ್ತ ಜೀವಕೋಟಿಗೆ, ಸರ್ವದೇವತೆಗಳಿಗು ಅಧಿಪತಿಯಾಗಿದ್ದಾನೆಂದು, ಮತ್ತು

ಸಮಸ್ತ ಕರ್ಮನಿರ್ಮೂಲನೆಗೆ ಅಗ್ನಿಯಾಗಿದ್ದಾನೆಂದು, ತಿಳಿದವನು ಅಂತ್ಯಕಾಲದಲ್ಲಿ ಮನಸ್ಸಿನಿಂದ ಆತ್ಮವನ್ನೇ ಸ್ಮರಿಸಿಕೊಳ್ಳುವವನಾಗಿ ಕೊನೆಗೆ ಪರಮಾತ್ಮನನ್ನು ಸೇರುತ್ತಾನೆ.

ಇಲ್ಲಿಗೆ ವಿಜ್ಞಾನ ಯೋಗವೆಂಬ ಅಧ್ಯಾಯ ಮುಕ್ತಾಯ. ಈ ಅಧ್ಯಾಯದಲ್ಲಿನ ಶ್ಲೋಕಗಳು ಹೀಗೆ ಇವೆ.

| | | | |
|---|---|---|---|
| 1. | ಜೀವಾತ್ಮ, ಪರಮಾತ್ಮ | – | 11 |
| 2. | ಜೀವಾತ್ಮ | – | 6 |
| 3. | ಪ್ರಕೃತಿ | – | 1 |
| 4. | ಪ್ರಕೃತಿ, ಪರಮಾತ್ಮ | – | 2 |
| 5. | ಪರಮಾತ್ಮ | – | 8 |
| 6. | ಜೀವಾತ್ಮ, ಸಾಕಾರ | – | 1 |
| 7. | ಪ್ರಕೃತಿ, ಜೀವಾತ್ಮ | – | 1 |
| | **ಒಟ್ಟು ಶ್ಲೋಕಗಳು** | – | **30** |

ಭಾವ, ವಿವರವನ್ನು ಬದಲಾಯಿಸಿ ಬರೆದ ಶ್ಲೋಕಗಳು – 5, 11, 25.

*********



**ಏಳನೆಯ ಅಧ್ಯಾಯ**

# ಅಕ್ಷರ ಪರಬ್ರಹ್ಮಯೋಗ

ಅಕ್ಷರ ಎಂದರೆ ನಾಶ ಇಲ್ಲದಿರುವುದೆಂದು ಅರ್ಥ. ಅಕ್ಷರ ಪರಬ್ರಹ್ಮವೆಂದು ಹೆಸರು ಇಡಲಾದ ಈ ಅಧ್ಯಾಯದಲ್ಲಿ ಹೆಚ್ಚಾಗಿ ಮೋಕ್ಷವನ್ನು ಕುರಿತಿರುವ ವಿಷಯವೇ ಇದೆ. ಇನ್ನೂ ಯೋಗವಾಚರಿಸುವ ಯೋಗಿಗಳು ಆ ಜನ್ಮದಲ್ಲಿ ಮೋಕ್ಷ ಹೊಂದಿದ್ದಾರಾ ಇಲ್ಲವಾ ಎಂದು ತಿಳಿದುಕೊಳ್ಳುವ ವಿಧಾನವೂ ಸಹ ತಿಳಿಸಲಾಗಿದೆ. ಭಗವಂತನು ಯುದ್ದರಂಗದಲ್ಲಿ ಹೀಗೆ ಅಧ್ಯಾಯಗಳಾಗಿ ಗೀತೆಯನ್ನು ಹೇಳಲಿಲ್ಲವೆಂದು, ಯುದ್ಧದನಂತರ ವ್ಯಾಸನಿಂದ ಭಗವಂತನು ಹೇಳಿದ ವಿಷಯ ಬರೆಯಲಾಗಿದೆ ಎಂದು ಮೊದಲೇ ತಿಳಿಸಿದ್ದೇವೆ. ವ್ಯಾಸನು ಅಧ್ಯಾಯಗಳಾಗಿ ವಿಭಜಿಸಿ ಹೇಳಿದವುಗಳಲ್ಲಿ ಸುಮಾರು ಆತ್ಮಸಂಯಮ ಯೋಗವೆಂಬ ಅಧ್ಯಾಯದವರೆಗೂ ಹೆಚ್ಚಾಗಿ ಯೋಗಗಳ ಬಗ್ಗೆಯೇ ಹೇಳಿದ್ದಾನೆ. ಅಲ್ಲಿಂದ ಹೆಚ್ಚಾಗಿ ಜೀವಾತ್ಮ, ಆತ್ಮ, ಪರಮಾತ್ಮಗಳ ಕುರಿತು ಹೇಳುತ್ತಾ ಬಂದು ಈ ಅಧ್ಯಾಯದಲ್ಲಿ ಮೋಕ್ಷವನ್ನು ಕುರಿತು ಹೆಚ್ಚಾಗಿ ಹೇಳಿದ್ದಾನೆ. ಅಷ್ಟೇ ಅಲ್ಲದೆ ಅಧ್ಯಾಯದ ಪ್ರಾರಂಭದಲ್ಲಿ ಒಳ್ಳೆಯ ಪ್ರಶ್ನೆಗಳನ್ನು ಕೊಟ್ಟು ಅವುಗಳಿಗೆ ಉತ್ತರಗಳು ತಿಳಿಸುವುದು ಎಷ್ಟೋ ಪ್ರತ್ಯೇಕವಾಗಿ, ಓದುವವರಿಗೆ ಸುಲಭವಾಗಿ ಜ್ಞಾನ ಅರ್ಥವಾಗುವಂತೆ ಇದೆ.

**ಅರ್ಜುನನು ಹೀಗೆ ಕೇಳಿದನು :–**

(7) **ಶ್ಲೋ॥ 1 :** **ಕಿಂ ತ ದ್ಬ್ರಹ್ಮ? ಕಿಮಧ್ಯಾತ್ಮಂ? ಕಿಂ ಕರ್ಮ ಪುರುಷೋತ್ತಮ! ।**
**ಅಧಿಭೂತಂ ಚ ಕಿಂ? ಪ್ರೋಕ್ತ ಮಧಿದೈವಂ ಕಿಮುಚ್ಯತೇ? ॥**
**(ಪ್ರಕೃತಿ, ಆತ್ಮ, ಪರಮಾತ್ಮ)**

(7) **ಶ್ಲೋ॥ 2 :** **ಅಧಿ ಯಜ್ಞಃ ಕಥಂ ಕೋಽತ್ರ ದೇಹೇಽಸ್ಮಿ ನ್ಮಧುಸೂದನ! ।**
**ಪ್ರಯಾಣ ಕಾಲೇಚ ಕಥಂ ಜ್ಞೇಯೋ ಽಸಿ ನಿಯತಾತ್ಮಭಿಃ ॥**
**(ಆತ್ಮ, ಪರಮಾತ್ಮ)**

**ಭಾವಾರ್ಥ :** ಬ್ರಹ್ಮ ಯಾವುದು? ಯಾವುದು ಆಧ್ಯಾತ್ಮಿಕ? ಕರ್ಮ ಯಾವುದು? ಯಾವುದು ಭೂತಗಳಿಗೆ ಅಧಿಪತಿ? ಹಾಗೇ ದೇವತೆಗಳಿಗೆ ಅಧಿಕನಾದವನು ಯಾರು? ತಿಳಿಸು. ಪುರುಷೋತ್ತಮ.! ದೇಹದಲ್ಲಿ ಯಜ್ಞಗಳಿಗೆ ಅಧಿಪತಿ ಯಾದವನು ಹೇಗಿದ್ದಾನೆ? ನಿಯಾತಾತ್ಮರು ಅವರ ಅಂತ್ಯಕಾಲದಲ್ಲಿ ನಿನ್ನನ್ನು ಹೇಗೆ ಹೊಂದುತ್ತಾರೆ?

**ವಿವರ :** ಇಲ್ಲಿ ಅರ್ಜುನನು ಒಂದೇ ಬಾರಿ ಏಳು ಪ್ರಶ್ನೆಗಳು ಕೇಳಿದ್ದಾನೆ. ಈ ಏಳು ಪ್ರಶ್ನೆಗಳ ಕೊನೆಯಲ್ಲಿ ಅಂತ್ಯಕಾಲದಲ್ಲಿ ಯೋಗಿಗಳು ಹೇಗೆ ನಿನ್ನನ್ನು ಹೊಂದುತ್ತಾರೆಂಬ ಪ್ರಶ್ನೆ ಇದೆ. ಮೊದಲ ಆರು ಪ್ರಶ್ನೆಗಳಿಗೆ ಎರಡು ಶ್ಲೋಕಗಳಲ್ಲಿ ಉತ್ತರ ಹೇಳಲ್ಪಟ್ಟಿವೆ. ಈ ಅಧ್ಯಾಯದಲ್ಲಿನ 28 ಶ್ಲೋಕಗಳಲ್ಲಿ ಎರಡು ಶ್ಲೋಕಗಳು ಅರ್ಜುನನ ಪ್ರಶ್ನೆಗಳಾಗಿದ್ದು ಎರಡು ಶ್ಲೋಕಗಳಲ್ಲಿ ಆರು ಪ್ರಶ್ನೆಗಳಿಗೆ ಉತ್ತರಗಳು ಹೇಳಿದಾಗ ಉಳಿದ 24 ಶ್ಲೋಕಗಳಲ್ಲಿಯೂ ಏಳನೇ ಪ್ರಶ್ನೆಗೆ ಉತ್ತರ ಇದೆ. ಅರ್ಜುನನು ಕೇಳಿದ ಏಳು ಪ್ರಶ್ನೆಗಳು ಯಾವುವೆಂದರೆ! ಬ್ರಹ್ಮ ಎಂದರೆ ಏನು? ಇಲ್ಲಿ ಗಮನಿಸಬೇಕಾಗಿರುವುದು ಈ ಪ್ರಶ್ನೆ ವಿಷ್ಣು, ಈಶ್ವರ, ಬ್ರಹ್ಮ ಎಂಬುವವರಲ್ಲಿನ ನಾಲ್ಕು ತಲೆಯ ಬ್ರಹ್ಮನನ್ನು ಕುರಿತು ಕೇಳಿರುವುದಲ್ಲ. ಈ ಸರ್ವಸೃಷ್ಟಿಗೆ ಮೂಲ ಕರ್ತ, ಎಲ್ಲದಕ್ಕೂ ಅಧಿಪತಿ, ಎಲ್ಲಾಕಡೆ ವ್ಯಾಪಿಸಿರುವವನು, ದೇವತೆಗಳಿಗೆ ದೇವರಾದವನು, ಪರಮಾತ್ಮನೆಂದು ಕರೆಯಲ್ಪಡುವವನು ಯಾರೆಂದು ಅರ್ಜುನನು ಮೊದಲ ಪ್ರಶ್ನೆ ಹಾಕಿದ್ದಾನೆ. ಎರಡನೇ ಪ್ರಶ್ನೆ ಅಧ್ಯಾತ್ಮಿಕ ಎಂದರೆ ಏನು? ಮೂರನೆಯದು ಕರ್ಮ ಎಂದರೆ ಏನು? ನಾಲ್ಕನೆಯದು ಸರ್ವ ಜೀವರಾಶಿಗಳಿಗೆ ಅಧಿಪತಿಯಾದವನು ಯಾರು? ಐದನೆಯ ಪ್ರಶ್ನೆ ಸರ್ವ ದೇವತೆಗಳಿಗೆ ದೊಡ್ಡವನು ಯಾರು? ಆರನೇ ಪ್ರಶ್ನೆ ದೇಹದಲ್ಲಿ ಯಜ್ಞಗಳಿಗೆ ಯಾರು ಅಧಿಪತಿ? ಕೊನೆಯದಾದ ಏಳನೆಯ ಪ್ರಶ್ನೆ ಯೋಗಿಗಳು ಅವಸಾನ ದೆಸೆಯಲ್ಲಿ ಹೇಗೆ ಮೋಕ್ಷ ಹೊಂದುತ್ತಿದ್ದಾರೆ.? ಈ ಪ್ರಶ್ನೆಗಳಿಗೆ ಉತ್ತರವಾಗಿ ಶ್ರೀಕೃಷ್ಣನು ಹೀಗೆ ಹೇಳಿದ್ದಾನೆ.

**ಶ್ರೀ ಭಗವಂತನು ಹೀಗೆ ಹೇಳಿದನು :–**

**(7) ಶ್ಲೋ॥ 3 : ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋಽಧ್ಯಾತ್ಮ ಮುಚ್ಯತೇ ।**
**ಭೂತ ಭಾವೋದ್ಭವಕರೋ ವಿಸರ್ಗಃ ಕರ್ಮ ಸಂಜ್ಞಿತಃ ॥**

**(ಪ್ರಕೃತಿ, ಪರಮಾತ್ಮ)**

**ಭಾವಾರ್ಥ :** ಎಲ್ಲದಕ್ಕಿಂತ ಶ್ರೇಷ್ಟವಾದ ನಾಶರಹಿತವಾದದ್ದೇ ಬ್ರಹ್ಮ. ತನ್ನನ್ನು ತಾನು ತಿಳಿದುಕೊಳ್ಳುವುದೇ ಅಧ್ಯಾತ್ಮಿಕ ಎನ್ನುತ್ತೇವೆ. ಜೀವರಾಶಿಗಳ ಇರುವಿಕೆಗೆ ಕಾರಣವಾದ ಲೆಕ್ಕಾಚಾರವನ್ನು ಕರ್ಮ ಎನ್ನುತ್ತಾರೆ.

**ವಿವರ :** ಮೊದಲ ಪ್ರಶ್ನೆಗೆ ಉತ್ತರವಾಗಿ ಎಲ್ಲದಕ್ಕಿಂತ ಶ್ರೇಷ್ಟವಾದ, ನಾಶರಹಿತವಾದದ್ದೇ

ಬ್ರಹ್ಮವೆಂದು ಹೇಳಿದ್ದಾನೆ. ಬ್ರಹ್ಮ ಎನ್ನುತ್ತಲೆ ಯಾವ ಬ್ರಹ್ಮ ಎಂದು ಯೋಚಿಸದೆ ಕೆಲವರು ಅವರಿಗೆ ಇಷ್ಟ ಬಂದ ದೈವವನ್ನು ಕುರಿತು ನೆನಪಿಸಿಕೊಳ್ಳುತ್ತಿದ್ದಾರೆ. ಬಹಳ ಜನರು ಚತುರ್ಮುಖ ಬ್ರಹ್ಮ ಎಂದುಕೊಳ್ಳುತ್ತಿದ್ದಾರೆ. ಬ್ರಹ್ಮ ಎನ್ನುವುದು ಹೆಸರಲ್ಲ. ಒಂದು ದೊಡ್ಡತನವನ್ನು ತಿಳಿಸುವ ಪದ. **ಬ್ರಹ್ಮ ಎಂದರೆ ದೊಡ್ಡದು ಎಂದು ಅರ್ಥ ಮಾಡಿಕೊಳ್ಳಬೇಕು.** ವಿಶೇಷತೆಯನ್ನು ತೋರಿಸುವಾಗ ಬ್ರಹ್ಮ ಪದವನ್ನು ಉಪಯೋಗಿಸುತ್ತಾರೆ. ಬ್ರಹ್ಮಾಂಡ, ಬ್ರಹ್ಮರಥ ಎನ್ನುವ ಪದಗಳೂ ಸಹ ವಿಶೇಷತೆಯನ್ನು ತೋರಿಸುವವೇ. ಇಲ್ಲಿ ಎಲ್ಲದಕ್ಕಿಂತ ಪರಮಾತ್ಮ ವಿಶೇಷತೆ ಹೊಂದಿರುವವನು ಆದಕಾರಣ ಆತನನ್ನು ಬ್ರಹ್ಮ ಎನ್ನುವ ಪದವನ್ನು ಕುರಿತು ಹೇಳಿದ್ದಾರೆ. ವಾಸ್ತವವಾಗಿ ಉತ್ತರದಲ್ಲಿ ಹೇಳುವ ಶ್ರೇಷ್ಟವಾದ ಬ್ರಹ್ಮ ಎನ್ನುವವನಿಗೆ ಅಸಲಿಗೆ ಹೆಸರೇ ಇಲ್ಲ. ಅದು ಒಂದು ದೊಡ್ಡ ವಿಚಿತ್ರವಾದ ಶಕ್ತಿ. ಆ ಶಕ್ತಿಯನ್ನು ಏನೆಂದು ಹೆಸರಿಡಬೇಕೋ ಯಾರಿಗೂ ತಿಳಿಯದೆ ಹೀಗೆ ಬ್ರಹ್ಮವೆಂದು, ಪರಮಾತ್ಮನೆಂದು, ಈಶ್ವರನೆಂದು ಹೇಳಿಕೊಳ್ಳುತ್ತಿದ್ದಾರೆ. ಬ್ರಹ್ಮ ಎಂದರೂ, ಪರಮಾತ್ಮ ಎಂದರೂ, ಈಶ್ವರನೆಂದರೂ ಅವು ಹೆಸರುಗಳಲ್ಲ. ಬ್ರಹ್ಮ ಎಂದರೆ ದೊಡ್ಡದೆಂದು, ಪರಮಾತ್ಮ ಎಂದರೆ ಆತ್ಮನಿಗಿಂತ ಬೇರೆಯಾದವನೆಂದು ಅಥವಾ ಆತ್ಮನಿಗಿಂತ ಶ್ರೇಷ್ಟವಾದವನೆಂದು ಅರ್ಥ. ಹಾಗೇ ಈಶ್ವರ ಎಂದರೆ ಅಧಿಪತಿ ಎಂದು ಅರ್ಥ. ವಾಸ್ತವಕ್ಕೆ ಇವು ಹೆಸರುಗಳು ಅಲ್ಲವೆಂದು ಏನು ಅಲ್ಲದವನಿಗೆ ಯಾವ ಹೆಸರು ಇಡಬೇಕೋ ಯಾರಿಗೂ ತಿಳಿದಿಲ್ಲವೆಂದೇ ಹೇಳಬಹುದು. ಪರಮಾತ್ಮ ಸ್ತ್ರಿಲಿಂಗವು ಅಲ್ಲ, ಪುರುಷ ಲಿಂಗವು ಅಲ್ಲ. ಆದ್ದರಿಂದ ಒಂದುಕಡೆ ಪುರುಷನಾಗಿ, ಒಂದುಕಡೆ ಸ್ತ್ರೀಯಾಗಿ ಹೇಗೆ ಹೇಳಿದರು ಸರಿಹೋಗುತ್ತದೆ. **ಭಗವದ್ಗೀತೆಯನ್ನು ಹೇಳಿರುವುದು, ಶ್ರೀ ಕೃಷ್ಣನ ಶರೀರದಿಂದ ಹೇಳಿರುವುದೂ ಸಹ ಆ ಶಕ್ತಿಯೇ. ಈಗ ಎಲ್ಲಾ ಪ್ರಶ್ನೆಗಳಿಗೆ ಉತ್ತರ ಹೇಳುವುದೂ ಸಹ ಅದೇ.** ಅದು ಮೂರನೇ ಅಧ್ಯಾಯ ಜ್ಞಾನಯೋಗದಲ್ಲಿ ಹೇಳಿದಂತೆ ಆಗಾಗ ಅವಶ್ಯಕತೆ ಬಂದಾಗ ಮಾನವನ ಅವತಾರದಲ್ಲಿ ಹುಟ್ಟಿ ತನ್ನ ಧರ್ಮಗಳನ್ನು ತಿಳಿಸಿ ಹೋಗುತ್ತಾನೆ. ಹಾಗೆ ಪರಮಾತ್ಮ ಶರೀರವನ್ನು ಧರಿಸುವುದನ್ನೇ ಅವತಾರ ಎನ್ನುತ್ತಿದ್ದೇವೆ. ಆತನು ಎಲ್ಲಿ ಯಾವ ಅವತಾರವೆತ್ತಿದ್ದಾನೋ ಆಗಲಿ ಶ್ರೀಕೃಷ್ಣನಾಗಿ ಹುಟ್ಟಿ ನಾನು ಇಂತಹವನೆಂದು ಸ್ವತಃವಾಗಿ ಪ್ರಕಟಿಸಿಕೊಂಡರಾಗಲಿ ನಮಗೆ ತಿಳಿಯಲಿಲ್ಲ. ಅಂತಹ ಜನ್ಮವನ್ನೇ ಭಗವಂತನೆಂದು ಹಿಂದೆ ಎಷ್ಟೋ ಬಾರಿ ಹೇಳಿಕೊಂಡಿದ್ದೇವೆ. ಭಗವಂತನಾದವನು ಅರ್ಜುನ ಕೇಳಿದ ಎರಡನೇ ಪ್ರಶ್ನೆಗೆ ಏನು ಉತ್ತರ ಹೇಳಿದ್ದಾನೆಂದರೆ!

ತನ್ನನ್ನು ತಾನು ತಿಳಿದುಕೊಳ್ಳುವುದೇ ಆಧ್ಯಾತ್ಮಿಕ ಎಂದಿದ್ದಾನೆ. ಅಧ್ಯಯನ ಎಂದರೆ ಹಿಂದಿರುಗಿ ನೋಡಿಕೊಳ್ಳುವುದೆಂದು ಅಥವಾ ಪುನಃ ಓದಿಕೊಳ್ಳುವುದೆಂದು ಅರ್ಥ.

ಗೀತೆಯನ್ನು ಅಧ್ಯಾಯನ ಮಾಡುವುದೆಂದರೆ ಗೀತೆಯನ್ನು ಮತ್ತೆ ತಿಳಿದುಕೊಳ್ಳುವುದು ಅಥವಾ ಓದಿಕೊಳ್ಳುವುದೆಂದು ಅರ್ಥ. ಹಾಗೆ ಆತ್ಮ ಅಧ್ಯಯನ ಎಂದರೆ ಆತ್ಮವನ್ನು ನೋಡಿಕೊಳ್ಳುವುದು ಅಥವಾ ಆತ್ಮನನ್ನು ತಿಳಿದುಕೊಳ್ಳುವುದೆಂದು ಅರ್ಥ ಇದರ ಪ್ರಕಾರ ಆಧ್ಯಾತ್ಮಿಕ ಎನ್ನುವ ಮಾತಿಗೆ ತನ್ನ ಆತ್ಮನನ್ನು ತಾನು ತಿಳಿದುಕೊಳ್ಳುವುದೆಂದು ಅರ್ಥ. ಅಥವಾ ತನ್ನನ್ನು ತಾನು ತಿಳಿದುಕೊಳ್ಳುವುದೆಂದು ಸಹ ಹೇಳಬಹುದು. ತನ್ನ ಆತ್ಮವನ್ನು ತಾನು ಅಧ್ಯಯನ ಮಾಡಿಕೊಳ್ಳವುದು ಆಧ್ಯಾತ್ಮಿಕ ಎನ್ನುವ ಉತ್ತರ ನಂತರ ಕರ್ಮ ಎಂದರೆ ಏನು ಎನ್ನುವ ಪ್ರಶ್ನೆಗೆ ಉತ್ತರ ಹೇಳಿದ್ದಾನೆ.

ಕರ್ಮ ಎಂದರೆ ಜೀವರಾಶಿಗಳಿಗೆ ಸಂಬಂಧಿಸಿದ ಲೆಕ್ಕಾಚಾರಗಳ ಪಟ್ಟಿ. ಒಬ್ಬ ಜೀವಿಯು ಯಾವಾಗ ಹುಟ್ಟಬೇಕು, ಹೇಗೆ ಹುಟ್ಟಬೇಕು. ಯಾವ ಶರೀರದಿಂದ ಹುಟ್ಟಬೇಕು, ಹುಟ್ಟಿದಾಗ ಎಷ್ಟು ಅಳಬೇಕು, ಹುಟ್ಟಿದ ನಂತರ ಎಷ್ಟು ಸಮಯಕ್ಕೆ ಹಾಲು ಕುಡಿಯಬೇಕು ಎಂದು, ನಿಮಿಷಕ್ಕು ಪ್ರತಿ ಸೆಕೆಂಡಿಗು ಏನು ನಡೆಯಬೇಕು ಎನ್ನುವ ನಿಯಂತ್ರಿತ ವಿವರವನ್ನೇ ಕರ್ಮ ಎನ್ನುತ್ತಿದ್ದಾರೆ. ಇದು ಹುಟ್ಟಿದಾಗಿನಿಂದ ಸಾಯುವವರೆಗೂ ಮೊದಲೆ ಲೆಕ್ಕಾಚಾರವಾಗಿ ಬರೆದಿಡಲಾಗಿರುತ್ತದೆ. ಆ ಬರಹವನ್ನೇ ಕರ್ಮ ಎನ್ನುತ್ತಾರೆ. ಈ ವಿಷಯವಾಗಿ ಬೈಬಿಲ್‌ನಲ್ಲಿ ಏಸುಪ್ರಭು ಹೀಗೆ ಹೇಳಿದ್ದಾನೆ. **'ನಿನ್ನ ತಲೆಯಲ್ಲಿನ ಕೂದಲುಗಳು ಸಹ ಲೆಕ್ಕಿಸಲ್ಪಟ್ಟಿವೆ'** ನಮ್ಮ ತಲೆಯಲ್ಲಿ ಎಷ್ಟು ಕೂದಲಿರಬೇಕು, ಎಷ್ಟು ಹೋಗಬೇಕು, ಯಾವಾಗ ಏನು ಹೋಗಬೇಕೆಂಬ ವಿಷಯವೂ ಸಹ ಬರೆಯಲಾಗಿದೆ. ಹಾಗೆ ಎಷ್ಟು ಬಾರಿ ಕಣ್ಣರೆಪ್ಪೆ ಮುಚ್ಚಿ ತೆರೆಯಬೇಕೋ ಸಹ ಬರೆದಿರುವಾಗ ಜೀವನದಲ್ಲಿ ನಡೆಯುವ ದೊಡ್ಡ ಚಿಕ್ಕ ಕಾರ್ಯಗಳೆಲ್ಲವೂ ಲಿಖಿತವಾಗಿವೆ ಎಂದು ಆ ವಿವರವನ್ನೇ ಕರ್ಮ ಎನ್ನುತ್ತಾರೆಂದು ತಿಳಿದುಕೊಳ್ಳಬೇಕು. ವಿಸರ್ಗ ಎಂದರೆ ನಿಯಂತ್ರಿಸಲಾಗಿರುವ ಲೆಕ್ಕಾಚಾರವೆಂದು ತಿಳಿದುಕೊಳ್ಳಬೇಕು. ಅದರ ಪ್ರಕಾರವೇ ಜೀವನದಲ್ಲಿ ಪ್ರತಿ ಚಿಕ್ಕ ದೊಡ್ಡ ಕೆಲಸ ನಡೆಯುತ್ತಿದೆ. ಅದರ ಅನುಭೂತಿಯನ್ನು ಜೀವಾತ್ಮ ಹೊಂದುತ್ತಿದ್ದಾನೆ.

**(7) ಶ್ಲೋ॥ 4 : ಅಧಿಭೂತಂ ಕ್ಷರೋ ಭಾವಃ ಪುರುಷಶ್ಚಾಧಿದೈವತಮ್ ।**
**ಅಧಿ ಯಜ್ಞೋಽಹಮೇ ವಾತ್ರ ದೇಹೇದೇಹ ಭೃತಾಂವರ ॥**
**(ಆತ್ಮ)**

**ಭಾವಾರ್ಥ :** ನಾಶ ಸ್ವಭಾವವಿರುವ ಶರೀರಗಳಿರುವ ಜೀವರಾಶಿಗಳಿಗೂ, ದೇವತೆಗಳಿಗೂ ಆಧಾರವಾದವನು ನಾನೇ. ದೇಹದಲ್ಲಿ ನಡೆಯುವ ಯಜ್ಞಗಳಿಗೆ ನಾನು ಅಧಿಪತಿ ಎಂದು ತಿಳಿಯಿರಿ.

**ವಿವರ** : ಈ ಶ್ಲೋಕವೊಂದರ ಅರ್ಥ ಬರೆಯುವುದರಲ್ಲಿ ಬಹಳ ಗೀತೆಗಳಲ್ಲಿ ಭೂತಗಳಿಗೆ ಆಧಾರ ನಾಶ ಸ್ವಭಾವವಿರುವ ಶರೀರಗಳೆಂದು ಹೇಳಲಾಗಿದೆ. ಹಾಗೆ ಅಂದುಕೊಂಡರೆ ಒಬ್ಬ ಮನುಷ್ಯ ಬದುಕಿರುವಾಗ, ಆ ಜೀವಾತ್ಮಕ್ಕೆ ಅವನ ಶರೀರ ಆಧಾರವಾಗಿ ಅಧಿಭೂತವಾಗಿದೆಯೆಂದುಕೊಳ್ಳೋಣ. ಅವನು ಅಕಾಲಮರಣ ಹೊಂದಿ ಸ್ಥೂಲಶರೀರವನ್ನು ಮಾತ್ರ ಕಳೆದುಕೊಂಡು, ಸೂಕ್ಷ್ಮ ಶರೀರದೊಂದಿಗೆ ಇನ್ನೂ ಕೆಲವು ವರ್ಷಗಳು ಜೀವಿಸಿದ್ದಾನೆಂದುಕೊಳ್ಳಿ, ಆ ಜೀವಾತ್ಮಕ್ಕೆ ಆಗ ಶರೀರವೇ ಇಲ್ಲ. ಆಗ ಅವನಿಗೆ ಅಧಿಭೂತವು ಯಾರಾಗುತ್ತಾರೆ? ಹಾಗೆ ಬದುಕುವವನಿಗೆ ಅಧಿಭೂತ ಇರುವುದಿಲ್ಲವಾ? ಇಂತಹ ಪ್ರಶ್ನೆಗಳು ಬಂದು ಅವುಗಳಿಗೆ ಉತ್ತರಗಳು ಹುಡುಕಿದರು ಸಿಗುವುದಿಲ್ಲ. ಆದ್ದರಿಂದ ಶರೀರ ಅಧಿಭೂತಗಳೆನ್ನುವ ಮಾತು ನಿಜವಲ್ಲ.

ನಾಶ ಸ್ವಭಾವಗಳಾದ ಜೀವರಾಶಿಗಳಿಗೆ ಆಧಾರವಾದುದು, ಅಧಿಪತಿಯಾಗಿರುವುದು, ಮತ್ತು ದೇವತೆಗಳಿಗೂ ಸಹ ಆಧಾರ, ಅಧಿಪತಿ ಆತ್ಮ (ಪುರುಷನು) ಎಂದು ಹೇಳಲಾಗಿದೆ. ನಾಶವಾಗುವ ಶರೀರಗಳಿಗೂ, ಅವುಗಳನ್ನು ಧರಿಸಿದ ಜೀವಿಗಳಿಗೂ, ಸಕಲ ದೇವತೆಗಳಿಗೂ ಆತ್ಮವೇ ಆಧಾರವಾಗಿದೆ. ಅವುಗಳ ಜೀವನ ವಿಧಾನ ನಡೆಯುವುದಕ್ಕೆ ಕಾರಣವಾಗಿದೆ. ಆತ್ಮಶಕ್ತಿ ಇಲ್ಲದೆ ನಾಶ ಸ್ವಭಾವ ಇರುವ ಶರೀರಗಳು ಕದಲುವುದಿಲ್ಲ ಮತ್ತು ಬೆಳೆಯುವುದಿಲ್ಲ. ಆತ್ಮ ಇಲ್ಲದೆ ಜೀವಾತ್ಮ ಶರೀರದಲ್ಲಿಯೇ ಇರುವುದಿಲ್ಲ. ಸಕಲ ದೇವತೆಗಳ ಪ್ರತಿಮೆಗಳಲ್ಲಿ ಆತ್ಮ ಇಲ್ಲದೆ ಅವುಗಳಿಗೆ ಶಕ್ತಿಯಿಲ್ಲ. ಅವು ಪ್ರತಿಮೆಯಿಂದ ಹೊರಗೆ ಬರಲಾರವು, ಒಳಗೆ ಹೋಗಲಾರವು. ಅವು ಸಂಚರಿಸುವುದು ಇಲ್ಲ. ಕ್ಷರ ಭಾವವಿರುವ ಶರೀರಗಳಿಗೆ, ಜೀವಾತ್ಮಗಳಿಗೆ, ದೇವತೆಗಳಿಗೆ ಅಧಿಪತಿ ಯಾದವನು ಆತ್ಮವೇ ಎಂದು ತಿಳಿಯಿರಿ.

ಯಜ್ಞಗಳು ಹೊರಗೆ ನಡೆಯುವಂತವಲ್ಲ. ಶರೀರದಲ್ಲಿಯೇ ಎರಡು ವಿಧಗಳಾದ ಯಜ್ಞಗಳು ನಡೆಯುತ್ತಿವೆಯೆಂದು ಮೊದಲೇ ಜ್ಞಾನಯೋಗದಲ್ಲಿ ಹೇಳಿಕೊಂಡಿದ್ದೇವೆ. ಆ ಯಜ್ಞಗಳಿಗೆ ಅಧಿಪತಿಯಾದವನು ಆತ್ಮ ಎಂದು ತಿಳಿಯಬೇಕು. ಕೋರ್ಟಿನಲ್ಲಿ ಜಡ್ಜ್ ಇಲ್ಲದೆ ಕೋರ್ಟ್ ಹೇಗೆ ನಡೆಯುವುದಿಲ್ಲವೋ ಹಾಗೇ ಆತ್ಮ ಇಲ್ಲದೆ ಶರೀರದಲ್ಲಿ ಯಾವ ಕೆಲಸವು ನಡೆಯುವುದಿಲ್ಲ. ಕೋರ್ಟಿಗೆ ಮುಖ್ಯ ಆಧಾರ, ಮತ್ತು ಅಧಿಪತಿ ಜಡ್ಜ್ ಆದಂತೆ, ಶರೀರಕ್ಕೆ ಅಧಿಪತಿ, ಮುಖ್ಯ ಆಧಾರ ಆತ್ಮವೇ ಆಗಿದೆ. ಸರ್ವಜೀವರಾಶಿಗಳ ಶರೀರಗಳ ಒಳಗೆ ನಡೆಯುವ ಎರಡು ಯಜ್ಞಗಳಿಗೆ, ಜೀವರಾಶಿಗಳ ಶರೀರಗಳೊಂದಿಗೆ ಪೂಜಿಸಲ್ಪಡುವ ಹೊರಗಿನ ದೇವತೆಗಳಿಗೆ, ಜೀವರಾಶಿಗಳಿಗೆ ಅಧಿಪತಿ ಆತ್ಮ ಅಥವಾ ಪುರುಷನೆಂದು

ಹೇಳಬಹುದು. ವಿಭಜನೆ ಪ್ರಕಾರ ಪುರುಷೋತ್ತಮ ಬೇರೆ, ಪುರುಷ ಬೇರೆಯೆಂದು ಗ್ರಹಿಸಬೇಕು. ಇಲ್ಲಿ ಅಧಿಭೂತ, ಅಧಿಯಜ್ಞ ಅಧಿದೈವವಾದವನು ಪುರುಷನೆಂದು ಗ್ರಹಿಸಬೇಕು. ಕೆಳಗಿನ ಶ್ಲೋಕದಲ್ಲಿ ಪುರುಷೋತ್ತಮನನ್ನು ಕುರಿತು ಹೇಳಲಾಗುತ್ತಿದೆ. ಎಲ್ಲಿ ಪುರುಷನು, ಎಲ್ಲಿ ಪುರುಷೋತ್ತಮನನ್ನು ಕುರಿತು ಹೇಳುತ್ತಿದ್ದಾರೋ ಗ್ರಹಿಸದೆ ಹೋದರೆ ಅರ್ಥಗಳೆಲ್ಲವೂ ತಲೆಕೆಳಗಾಗಿ ಹೋಗಿ ಭಗವದ್ಗೀತೆ ಸ್ವರೂಪವೇ ತಿಳಿಯದಂತೆ ಹೋಗುತ್ತದೆ.

**(7) ಶ್ಲೋ॥ 5 : ಅನ್ತಕಾಲೇ ಚ ಮಾಮೇವ ಸ್ಮರನ್ ಮುಕ್ತ್ವಾ ಕಳೇಬರಮ್ ।**
**ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯ: ॥**

**(ಆತ್ಮ, ಪರಮಾತ್ಮ )**

**ಭಾವಾರ್ಥ :** ಕೊನೆಯ ಕಾಲದಲ್ಲಿ ನನ್ನನ್ನೇ ಸ್ಮರಿಸಿಕೊಳ್ಳುತ್ತಾ ಶರೀರವನ್ನು ಬಿಡುವವನು ನನ್ನನ್ನೇ ಹೊಂದುತ್ತಿದ್ದಾನೆ. ಈ ವಿಷಯದಲ್ಲಿ ಯಾವುದೇ ಸಂಶಯವಿಲ್ಲ.

**ವಿವರ :** ಒಂದೊಂದು ಬಾರಿ ಪರಮಾತ್ಮ ನಾನು ಎಂದು ಹೇಳಿದಾಗ ಎಲ್ಲಿ ಜೀವಾತ್ಮ ಪಾತ್ರವಿದೆ, ಎಲ್ಲಿ ಆತ್ಮ ಪಾತ್ರ ಇದೆಯೆಂದು ಯೋಚಿಸಿ ನೋಡಬೇಕು. ಈ ಶ್ಲೋಕದಲ್ಲಿ ಅವಸಾನದೆಸೆಯಲ್ಲಿ ನನ್ನನ್ನು ಸ್ಮರಿಸುವವನು ಮರಣಿಸಿದ ನಂತರ ನನ್ನನ್ನೇ ಹೊಂದುತ್ತಿದ್ದಾನೆಂದು ಹೇಳಲಾಗಿದೆ. ಶರೀರದಲ್ಲಿ ಅವಸಾನದೆಸೆ ಏರ್ಪಡುತ್ತಿದೆ. ಶರೀರದಲ್ಲಿ ಮನೋಧ್ಯಾಸ ಆತ್ಮದ ಮೇಲೆ ಇರಬೇಕು. ಅಂತಹದರಲ್ಲಿ ಮರಣಿಸಿದವನಿಗೆ ಶರೀರವಿಲ್ಲ. ಶರೀರ ಇರುವಾಗ ಸ್ಮರಿಸಲ್ಪಡುವುದು ಆತ್ಮವಾದರೆ, ಶರೀರ ಬಿಟ್ಟ ನಂತರ ಹೊಂದುವುದು ಪರಮಾತ್ಮ. ಆತ್ಮನಾಗಿ ಶರೀರದಲ್ಲಿ ನನ್ನನ್ನೇ ಸ್ಮರಿಸುತ್ತಿದ್ದಾರೆಂದು, ಪರಮಾತ್ಮನಾಗಿ ಶರೀರದ ಹೊರಗೆ ನನ್ನನ್ನೇ ಹೊಂದುತ್ತಿದ್ದಾರೆಂದು ಹೇಳಿರುವುದು ಒಬ್ಬನೇ, ಅವನೇ ಪರಮಾತ್ಮ. ಪರಮಾತ್ಮ ಶರೀರದೊಳಗೆ ಸ್ಮರಣೆಗೆ ಹತ್ತಿರವಾಗಿ ಆತ್ಮವಾಗಿ, ಶರೀರದ ಹೊರಗೆ ಹೊಂದುವುದಕ್ಕೆ ಸಾಧ್ಯವಾಗುವಂತೆ ಪರಮಾತ್ಮನಾಗಿದ್ದಾನೆ. ಆದ್ದರಿಂದ ನನ್ನನ್ನೇ ಸ್ಮರಿಸುವವನು ನನ್ನನ್ನೆ ಹೊಂದುತ್ತಾನೆಂದು ಹೇಳಿದ್ದಾನೆ. ಇಲ್ಲಿ ನಾವು ಮಾತ್ರ ಸ್ಮರಿಸಲ್ಪಡುವವನು ಆತ್ಮವೆಂದು, ಹೊಂದುವಂತವನು ಪರಮಾತ್ಮನೆಂದು ಬೇರೆ ಬೇರೆಯಾಗಿ ವಿಭಜಿಸಿ ತಿಳಿದುಕೊಳ್ಳಬೇಕು.

**(7) ಶ್ಲೋ॥ 6 : ಯಂ ಯಂ ವಾಽಪಿ ಸ್ಮರನ್‌ಭಾವಂ ತ್ಯಜತ್ಯನ್ತೇ ಕಳೇಬರಮ್ ।**
**ತಂ ತ ಮೇವೈತಿ ಕೌಂತೇಯ! ಸದಾತದ್ಭಾವ ಭಾವಿತಃ ॥**

**(ಜೀವಾತ್ಮ)**

**ಭಾವಾರ್ಥ :** ಯಾವ ಯಾವ ಭಾವವನ್ನು ಸ್ಮರಿಸಿಕೊಳ್ಳುತ್ತಾ ಶರೀರವನ್ನು ಬಿಡುತ್ತಿದ್ದಾನೋ, ಆಯಾ ಭಾವವನ್ನೇ ಅಭ್ಯಾಸ ಬಲದಿಂದ ಹೊಂದುತ್ತಿದ್ದಾನೆ.

**ವಿವರ** : ಈ ಶ್ಲೋಕ ನಿರ್ದಿಷ್ಟವಾಗಿ ಇಂತಹವರನ್ನು ಕುರಿತು ಹೇಳಿದ್ದಾರೆ ಎನ್ನುವುದಕ್ಕೆ ಸಾಧ್ಯವಿಲ್ಲ. ಈ ಶ್ಲೋಕ ಒಂದು ಸೂತ್ರವಂತದ್ದು. ಒಂದು ಸೂತ್ರದ ಪ್ರಕಾರ ಯಾವ ಲೆಕ್ಕವಾದರು ಮಾಡಿದಂತೆ, ಇಲ್ಲಿ ಹೇಳಿದ ಸೂತ್ರವೂ ಸಹ ಜ್ಞಾನಿಗಳಿಗೂ ಅಜ್ಞಾನಿಗಳಿಗೂ ಎಲ್ಲರಿಗೂ ಕೆಲಸಕ್ಕೆ ಬರುತ್ತದೆ. ಇದು ಯಾರಿಗಾದರು ಅನ್ವಯಿಸುತ್ತದೆ. ಆದ್ದರಿಂದ ಇದು ಇಂತಹವರಿಗೆಂದು, ಇಂತಹ ವಿಷಯಕ್ಕೆಂದು ಯಾವುದೂ ಹೇಳಲಿಲ್ಲ. ಈ ಸೂತ್ರ ಏನೆಂದರೆ ಶರೀರವನ್ನು ಬಿಡುವಾಗ ಎಂದರೆ **'ಅವಸಾನ ದೆಸೆಯಲ್ಲಿ ಯಾರ ಮನಸ್ಸಿನಲ್ಲಿ ಯಾವ ಜ್ಞಾಪಕವಿರುತ್ತದೋ, ಮರಣದ ನಂತರ ಅದನ್ನೇ ಅವನು ಹೊಂದುತ್ತಾನೆ'** ಎನ್ನುವುದು ಸೂತ್ರ. ಮುಖ್ಯವಾಗಿ ಗಮನಿಸಬೇಕಾಗಿರುವುದು ಏನೆಂದರೆ! ಇದು ಮರಣದಲ್ಲಿ ಅವಸಾನದೆಸೆ ಏರ್ಪಡುವವರಿಗೆ ಮಾತ್ರವೆ. ಅವಸಾನದೆಸೆ ಏರ್ಪಡದ ಮರಣಗಳೆಷ್ಟೋ ಇವೆ. ಅವುಗಳಿಗೆ ಈ ಸೂತ್ರವು ಅನ್ವಯಿಸುವುದಿಲ್ಲ. ಕಾಲಮರಣಕ್ಕೇಯಾಗಲಿ ಅಕಾಲಮರಣಕ್ಕೆ ಈ ಪದ್ಧತಿ ಸರಿಹೋಗುವುದಿಲ್ಲವೆಂದು ತಿಳಿಯಬೇಕು. ಅವಸಾನದೆಸೆಯಲ್ಲಿ ಪ್ರಕೃತಿಗೆ ಸಂಬಂಧಿಸಿದ ವಿಷಯ ಇರಬಹುದು, ಆತ್ಮಕ್ಕೆ ಸಂಬಂಧಿಸಿದ ವಿಷಯವಾದರು ಇರಬಹುದು. ಒಂದುವೇಳೆ ಪ್ರಕೃತಿಗೆ ಸಂಬಂಧಿಸಿದ ವಿಷಯವಿದ್ದರೆ ಮತ್ತೆ ಜನ್ಮವಿದೆ. ಯಾವ ವಿಷಯವನ್ನು ಜ್ಞಾಪಕಮಾಡಿಕೊಳ್ಳುತ್ತಿರುತ್ತಾನೋ ಅದನ್ನೇ ಹೊಂದುತ್ತಾನೆ. ಹಾಗಲ್ಲದೆ ಆತ್ಮ ಜ್ಞಾಪಕವಿದ್ದರೆ ಮರುಜನ್ಮ ಪಡೆಯದೇ ಪರಮಾತ್ಮನನ್ನೇ ಹೊಂದಬಲ್ಲನು. ಆ ಕೊನೆಯ ಕಾಲದಲ್ಲಿ ಅಂದರೆ ಅವಸಾನದೆಸೆಯಲ್ಲಿ ಜೀವನದಲ್ಲಿ ಬಲವಾದುದಾಗಿ ಯಾವ ವಿಷಯವಿದ್ದರೆ ಅದೇ ಜ್ಞಾಪಕಕ್ಕೆ ಬರುತ್ತದೆ. ಕೆಲವರು ಕೊನೆಯಲ್ಲಿ ದೇವರನ್ನು ಜ್ಞಾಪಕ ಮಾಡಿಕೊಂಡರೆ ಸರಿಹೋಗುತ್ತದೆ ಅಲ್ಲವೆ! ಕೊನೆಯ ಕಾಲದಲ್ಲಿ ನನ್ನನ್ನು ಸ್ಮರಿಸಿದರೆ ಮೋಕ್ಷವನ್ನು ಹೊಂದಬಹುದೆಂದಿದ್ದಾರಲ್ಲವೆ! ಈಗಿನಿಂದ ಏಕೆ ಪರದಾಡಬೇಕು. ವೃದ್ಧಾಪ್ಯ ಬಂದಾಗ ಅದನ್ನು ಕುರಿತು ಯೋಚಿಸೋಣ ಎನ್ನುವವರಿದ್ದಾರೆ. ನಾವು ಅಂದುಕೊಂಡಂತೆ ಕೊನೆಯ ಸಮಯದಲ್ಲಿ ಯಾವುದು ಬೇಕಾದರೆ ಅದು ಜ್ಞಾಪಕ ಬರುವುದಿಲ್ಲ. ಜೀವನಕಾಲದಲ್ಲಿರುವ ವಿಷಯಗಳೆಲ್ಲವುದಕ್ಕಿಂತ ಯಾವ ವಿಷಯ ಮನಸ್ಸಿಗೆ ಹೆಚ್ಚಾಗಿ ಗಾಢವಾಗಿ ಅಂಟಿಕೊಂಡಿರುತ್ತದೋ, ಆ ವಿಷಯವೇ ಕೊನೆಯಲ್ಲಿ ಜ್ಞಾಪಕ ಬರುತ್ತದೆ. ಹಾಗೆ ಏಕೆ ನಡೆಯುತ್ತಿದೆಯೆಂದರೆ! ಅವಸಾನದೆಸೆಯಲ್ಲಿ ಮನಸ್ಸು ಬಲವನ್ನು ಕಳೆದುಕೊಳ್ಳುತ್ತದೆ.

ಬಲಹೀನಪಟ್ಟಿರುವ ಮನಸ್ಸು ಮುಖ್ಯವಾಗಲಿ ಚಿಕ್ಕ ಚಿಕ್ಕ ವಿಷಯಗಳೆಲ್ಲವನ್ನೂ ಮರೆತುಹೋಗುತ್ತದೆ. ಜೀವನದಲ್ಲಿನ ಮುಖ್ಯ ವಿಷಯಗಳನ್ನು ಮಾತ್ರವೆ ಜ್ಞಾಪಕ ಮಾಡುತ್ತಿರುತ್ತದೆ. ಮರಣ ಹತ್ತಿರವಾದಂತೆಲ್ಲ ಪೂರ್ತಿ ಜ್ಞಾಪಕಗಳೆಲ್ಲವನ್ನು ಮರೆತುಹೋಗುತ್ತದೆ. ಕೊನೆಗೆ ಯಾವುದಾದರೆ ಜೀವನದಲ್ಲಿ ಹೆಚ್ಚಾಗಿ ಮನಸ್ಸಿಗೆ ಅಂಟಿಕೊಂಡಿರುತ್ತದೋ ಅದನ್ನೇ ಜ್ಞಾಪಕ ಮಾಡುತ್ತದೆ. ಆ ವಿಷಯ ಜ್ಞಾಪಕವೇ ಕೊನೆಯದಾಗುತ್ತದೆ.

ಕೆಲವರಿಗೆ ದೈವ ವಿಷಯವೇ ಮನಸ್ಸಿನಲ್ಲಿ ಹೆಚ್ಚಾಗಿ ಲಗ್ನವಾಗಿರುತ್ತದೆ. ಕೆಲವರಿಗೆ ಪ್ರಪಂಚ ವಿಷಯಗಳಲ್ಲಿ ಯಾವುದೋ ಒಂದು ದೊಡ್ಡದಿರುತ್ತದೆ. ಇದರಿಂದ ಜನ್ಮನಾ ಅಥವಾ ಮೋಕ್ಷನಾ ಎಂದು ತಿಳಿಯುತ್ತದೆ. ಉದಾಹರಣೆಗೆ ಒಬ್ಬನಿಗೆ ಸಂಗೀತವೇ ಪ್ರಾಣವಾಗಿದೆ ಎಂದುಕೊಳ್ಳೋಣ. ಅವನಿಗೆ ಮರಣ ಸಮಯದಲ್ಲಿ ಸಹ ಅದೇ ಜ್ಞಾಪಕ ಬಂದು ಮರುಜನ್ಮ ಉಂಟಾಗುತ್ತದೆ. ಆ ಜನ್ಮದಲ್ಲಿಯೂ ಸಹ ಸಂಗೀತವನ್ನೇ ಕಲಿತು ಅದರ ಆಸಕ್ತಿಯಿಂದಲೆ ಮುಂದೆಸಾಗುತ್ತಾನೆ. ಒಬ್ಬನು ಒಂದು ಪರಿಶೋಧನೆ ಸಾಗಿಸುತ್ತಾ ಅವನ ಮನಸ್ಸಿನ ತುಂಬಾ ಆ ಪರಿಶೋಧನೆ ವಿಷಯವೇ ತುಂಬಿಕೊಂಡು ಬದುಕುತ್ತಿದ್ದಾನೆ. ಕೊನೆಗೆ ಮರಣ ಸಮಯದಲ್ಲಿ ಕೂಡ ಕೊನೆಯ ಧ್ಯಾಸ ಪರಿಶೋಧನೆಯ ಮೇಲೆ ಇರುವುದರಿಂದ ಅವನಿಗೆ ಜನ್ಮ ಉಂಟಾಗಿ ಮರುಜನ್ಮದಲ್ಲಿ ಆ ಪರಿಶೋಧನೆಯನ್ನೇ ಪುನಃ ಮುಂದುವರಿಸುತ್ತಾನೆ. ಮನಸ್ಸಿನಲ್ಲಿ ಯಾವುದಾದರೆ ಇಷ್ಟತೆಯಿಂದ ಇದೆಯೋ ಅದನ್ನೇಮತ್ತೆ ಜನ್ಮಾಂತರದಲ್ಲಿ ಹೊಂದುತ್ತಿದ್ದಾನೆ. ಪ್ರಪಂಚ ವಿಷಯಗಳಲ್ಲಿ ಯಾವುದಾದರೆ ಇಷ್ಟವಾಗಿದೆಯೋ ಅದನ್ನೇ ಅವನು ಹೊಂದುತ್ತಿರುತ್ತಾನೆ. ಎಷ್ಟು ಜನ್ಮಗಳು ಬದಲಾದರು ಅದರಿಂದ ಹೊರಬೀಳುವುದಿಲ್ಲ. ಅವನನ್ನು ಆ ಶ್ರದ್ಧೆಯಿಂದ ಮರಳಿಸಬೇಕೆಂದರೆ ಬಹಳ ಕಷ್ಟ. ಇಷ್ಟ ಜಿಗಟಿನಂತಹದ್ದು. ಯಾವುದಕ್ಕೆ ಅಂಟಿಕೊಂಡರೆ ಅದಕ್ಕೇ ಅಂಟಿಕೊಂಡಿರುತ್ತದೆ. ಆದ್ದರಿಂದಲೇ ಒಬ್ಬರ ಇಷ್ಟವನ್ನೊಬ್ಬರು ಬದಲಿಸಲಾರರೆಂದು ಹಿರಿಯರು ಹೇಳಿದ್ದಾರೆ. ಒಬ್ಬನಿಗೆ ಇಷ್ಟವಾದುದ್ದನ್ನು ಎಷ್ಟುಜನ ನಿವಾರಿಸಿದರು ಅವನು ಬಿಡುವುದಿಲ್ಲ. ಶ್ರದ್ಧೆ ಎನ್ನುವುದು ದೈವವಿಷಯಗಳ ಮೇಲೆ ಇದ್ದರೆ ಪರವಾಗಿಲ್ಲ. ಪ್ರಪಂಚ ವಿಷಯಗಳ ಮೇಲೆ ಇರುವವರನ್ನು ದೊಡ್ಡ ದೊಡ್ಡ ಗುರುಗಳು ಸಹಿತ ಬದಲಿಸಲಾರರು. ಯಾರಿಗವರು ಶ್ರದ್ಧೆ ಎನ್ನುವುದನ್ನು ಯಾವುದರ ಮೇಲೆ ಇಟ್ಟರೆ ಚೆನ್ನಾಗಿರುತ್ತದೋ ಚೆನ್ನಾಗಿ ಯೋಚಿಸಿ ನಿರ್ಣಯಿಸಿಕೊಳ್ಳಬೇಕು. ಇದನ್ನು ಕುರಿತೆ ಅರ್ಜುನನಿಗೆ ಭಗವಂತನು ಕೆಳಗಿನ ಶ್ಲೋಕದಲ್ಲಿ ಸಲಹೆ ಕೊಡುತ್ತಿದ್ದಾನೆ.

**(7) ಶ್ಲೋ॥ 7 : ತಸ್ಮಾ ತ್ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯಚ ।**
**ಮಯ್ಯರ್ಪಿತ ಮನೋಬುದ್ಧಿ ರ್ಮಾಮೇ ವೈಷ್ಯಸ್ಯ ಸಂಶಯಃ ॥**
**(ಆತ್ಮ, ಸಾಕಾರ)**

**ಭಾವಾರ್ಥ:** ಆದುದರಿಂದ ಸರ್ವಕಾಲ ನಿನ್ನ ಮನಸ್ಸಿನಲ್ಲಿ ನನ್ನನ್ನು ಸ್ಮರಿಸುತ್ತಿರು. ಬುದ್ಧಿ ಮನಸ್ಸು ನನಗೇ ಸಮರ್ಪಿಸುವುದರಿಂದ ನನ್ನನ್ನೇ ಹೊಂದುತ್ತೀಯಾ. ಇದರಲ್ಲಿ ಸಂಶಯವಿಲ್ಲ.

**ವಿವರ :** ಅಂತ್ಯಕಾಲದಲ್ಲಿನ ಜ್ಞಾಪಕವನ್ನನುಸರಿಸಿ ಮರುಜನ್ಮವಾಗಲಿ, ಮೋಕ್ಷವಾಗಲಿ ಇರುತ್ತದೆ. ಕೊನೆಯ ಜ್ಞಾಪಕಕ್ಕೋಸ್ಕರ ಈಗಿನಿಂದ ಪ್ರಯತ್ನ ಮಾಡಬೇಕೆಂದು, ಹಾಗೆ ಮಾಡುವುದರಿಂದ ಕೊನೆಯಲ್ಲಿ ಅಂದುಕೊಂಡಿರುವುದನ್ನು ಹೊಂದಬಹುದೆಂದು ಅರ್ಜುನನಿಗೆ ಭಗವಂತನು ತಿಳಿಸುತ್ತಾ ಹೀಗೆ ಹೇಳಿದ್ದಾನೆ. **“ ಸರ್ವಕಾಲದಲ್ಲಿ ನಿನ್ನ ಮನಸ್ಸು ಬುದ್ಧಿ ನನ್ನ ಯೋಚನೆಗಳೇ ಮಾಡುವಂತೆ ಅಭ್ಯಾಸ ಮಾಡಿಕೋ, ಹಾಗೆ ಸರ್ವಕಾಲದಲ್ಲಿ ನನ್ನನ್ನು ಸ್ಮರಿಸುವುದರಿಂದ ನನ್ನನ್ನೇ ಹೊಂದುತ್ತೀಯಾ,”** ಇಲ್ಲಿ ಹೇಳಿರುವುದು ಕಣ್ಣಿಗೆ ಕಾಣಿಸುತ್ತಿರುವ ಶ್ರೀಕೃಷ್ಣನು. ಶ್ರೀಕೃಷ್ಣನು ನನ್ನನ್ನು ಸ್ಮರಿಸೆಂದಿದ್ದಾನೆ. ಆ ಮಾತು ಶ್ರೀಕೃಷ್ಣ ಇರುವವರೆಗೂ ಸರಿಹೋಗುತ್ತದೆ ಶ್ರೀಕೃಷ್ಣ ಹೋದ ನಂತರ ಯಾರನ್ನು ಸ್ಮರಿಸಬೇಕು? ಆತನು ಹೋದ ನಂತರವೂ ಸಹ ಆತನ ರೂಪವನ್ನೇ ಸ್ಮರಿಸಬೇಕಾ? ಅಥವಾ ನಿರಾಕಾರವಾದ ಆತ್ಮವನ್ನು ಸ್ಮರಿಸಬೇಕಾ? ಆತನಿರುವಾಗ ಆತನನ್ನು ಬಿಟ್ಟು ಆತ್ಮವನ್ನು ಸ್ಮರಿಸಬೇಕಾ? ಹೀಗೆ ಇಷ್ಟು ಪ್ರಶ್ನೆಗಳು ಉದ್ಭವಿಸುತ್ತವೆ. ಈ ಶ್ಲೋಕವನ್ನು ಹೇಳಿ ಇಕಟ್ಟಿನಲ್ಲಿ ಇಟ್ಟಿದ್ದಾನಾದ್ದರಿಂದ ಯೋಚಿಸಬೇಕು.

ಸಾಕಾರ, ನಿರಾಕಾರ ಎನ್ನುವ ಎರಡರಲ್ಲಿ ಯಾವಾಗ ಸಾಕಾರವನ್ನು, ಯಾವಾಗ ನಿರಾಕಾರವನ್ನು ಧ್ಯಾನಿಸಬೇಕೆನ್ನುವುದು ಪೂರ್ವದಿಂದ ಇರುವ ಸಮಸ್ಯೆಯೇ. ಪರಮಾತ್ಮ ಸಾಕಾರನಾಗಿ ಭಗವಂತನಾಗಿ ಬಂದಿರುವ ಜನ್ಮ ಇರುವವರೆಗೂ ಸಾಕಾರಕ್ಕೆ ಪೂಜೆ, ಸಾಕಾರಕ್ಕೆ ಮನೋಬುದ್ಧಿ ಕೆಲಸವನ್ನು ಲಗ್ನ ಮಾಡಬೇಕು. ಇಂತಹುದು ಸಾಕಾರವೆಂದು ತಿಳಿದ ನಂತರ ಪೂಜೆಯಾಗಲಿ ಮನೋಲಗ್ನವಾಗಲಿ ಆ ಸಾಕಾರವನ್ನು ಬಿಟ್ಟು ಮಾಡಬಾರದು. ಶ್ರೀಕೃಷ್ಣನು ಭಗವಂತನೆಂದು ತಿಳಿದ ನಂತರ ಬ್ರಹ್ಮಯೋಗವೆಂದು ನಿರಾಕಾರ ಧ್ಯಾನಮಾಡುವುದು, ಕುರಿಮರಿಯನ್ನು ಕಂಕಳದಲ್ಲಿ ಇಟ್ಟುಕೊಂಡು ಅದಕ್ಕೋಸ್ಕರ ಊರೆಲ್ಲಾ ಹುಡಿಕಿದಂತಾಗುತ್ತದೆ. ಭೂಮಿ ಮೇಲೆ ಪರಮಾತ್ಮ ಭಗವಂತನಾಗಿ ಜನ್ಮಿಸುವುದು ಅಪರೂಪ.

ಅದು ಎಷ್ಟೋ ಸಾವಿರ ವರ್ಷಗಳಿಗೋ ನಡೆಯುತ್ತದೆ. ಆಗ ಅದೃಷ್ಟವಶಾತ್ತು ಆ ಜನ್ಮ ಸಾಮಾನ್ಯವಾದುದು ಅಲ್ಲವೆಂದು, ಆಗಾಗ ಬುದ್ಧಿ ಯೋಚನೆಗೆ ಅರ್ಥವಾಗುತ್ತಿರುವಾಗ ಆ ಸಾಕಾರವನ್ನು ಬಿಟ್ಟು ನಿರಾಕಾರದ ಮೇಲೆ ಹೋಗಬೇಕಾದ ಅವಶ್ಯಕತೆ ಇಲ್ಲ. ಭಗವಂತನ ಜನ್ಮ ಶ್ರೀಕೃಷ್ಣನದೇ ಎಂದು ತಿಳಿದ ನಾವು ಆತನು ಭಗವಂತನಾಗಿ ಇಲ್ಲದ ಸಮಯದಲ್ಲಿ ಇದ್ದೇವೆ, ಆದ್ದರಿಂದ ಆತನ ಪ್ರತಿಮೆಗೆ ಸಾಕಾರಪೂಜೆ ಮಾಡಿದರೂ ನಿರಾಕಾರ ಧ್ಯಾನ ಮಾಡದು ತಪ್ಪುವುದಿಲ್ಲ. ಶ್ರೀಕೃಷ್ಣನಿರುವಾಗ ಆತನೊಂದಿಗೆ ಶತ್ರುತ್ವ ಹೊಂದಿದ್ದು ಯೋಗ ಮಾಡುವವರು ಕೆಲವರಿರುತ್ತಿದ್ದರು. ಅಂದರೆ ಸಾಕಾರದೊಂದಿಗೆ ಶತ್ರುತ್ವ, ನಿರಾಕಾರದೊಂದಿಗೆ ಮಿತ್ರುತ್ವ ಹೊಂದಿದವರು ನಷ್ಟ ಯೋಗಿಗಳಾಗುತ್ತಾರೆ. ಪೂರ್ತಿ ಜ್ಞಾನಾಗ್ನಿ ಅವರನ್ನು ಸೇರುವುದಿಲ್ಲ. ಸಾಕಾರದಿಂದ ಬರಬೇಕಾಗಿರುವುದು ಬರುವುದಿಲ್ಲ. ಅರ್ಧ ಅಗ್ನಿ ನಷ್ಟ ಹೋದವರಾಗುತ್ತೇವೆ. ಶ್ರೀಕೃಷ್ಣನ ಜನ್ಮ ಮುಗಿದುಹೋದ ನಂತರ ಆತನ ಪ್ರತಿಮೆ ವಿಗ್ರಹ ಅಲ್ಲವೆಂದು ಗ್ರಹಿಸಬೇಕು. ಪ್ರತಿಮೆ ಯಾವುದಾದರು ವಿಗ್ರಹವಾಗಿರುತ್ತದೆ. ಭಗವಂತನ ಪ್ರತಿಮೆ ವಿಗ್ರಹವಾಗಿರಲ್ಲ. ಭಗವಂತನ ಪ್ರತಿಮೆಯನ್ನು ಪೂಜಿಸಿದವರು ಯೋಗ ಮಾಡಿದರೊಂದಿಗೆ ಸಮಾನವೇ ಆಗುತ್ತದೆ. ಆ ಅವಕಾಶ ಉಳಿದ ವಿಗ್ರಹಗಳಾದ ಪ್ರತಿಮೆಗಳಿಗೆ ಇಲ್ಲ.

**(7) ಶ್ಲೋ॥ 8 : ಅಭ್ಯಾಸ ಯೋಗ ಯುಕ್ತೇನ ಚೇತಸಾ ನಾನ್ಯಗಾಮಿನಾ ।**
**ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನು ಚಿಂತಯನ್ ॥**
**(ಆತ್ಮ, ಪರಮಾತ್ಮ)**

**ಭಾವಾರ್ಥ :** ಅಭ್ಯಾಸದಿಂದ ಮನಸ್ಸನ್ನು ಇತರ ವಿಷಯಗಳ ಮೇಲೆ ಹೋಗಲು ಬಿಡದೆ ಯೋಗದಿಂದ ಕೂಡಿಕೊಂಡು ಚಿಂತಿಸುವವನು ಶ್ರೇಷ್ಟವಾದ, ದಿವ್ಯವಾದ ಪುರುಷನನ್ನು ಹೊಂದುತ್ತಿದ್ದಾನೆ.

**ವಿವರ :** ಸಾಕಾರ ತಿಳಿಯದ ನಾವು ಆತ್ಮಯೋಗಿಗಳು ಆಗಬೇಕು. ಆತ್ಮವನ್ನು ತಿಳಿಯಬೇಕೆಂದರೆ ಮನಸ್ಸನ್ನು ಅಭ್ಯಾಸದಿಂದ ನಿಲ್ಲಿಸಬೇಕು. ಸ್ವಾಧೀನವಾದ ಮನಸ್ಸನ್ನು ಅಂತರ್ಮುಖವಾಗಿ ಚಿಂತೆಮಾಡಿಸಬೇಕು. ಮನಸ್ಸು ಆತ್ಮದ ಮೇಲೆ ಚಿಂತೆ ಇರುವುದಾಗಿದ್ದು ಜ್ಞಾನಾಗ್ನಿ ಸಮುಪಾರ್ಜನೆಯಿಂದ ಕರ್ಮ ಸುಟ್ಟುಹೋದ ನಂತರ ಮರಣಿಸಿದವನು ಮರುಜನ್ಮಕ್ಕೆ ಹೋಗುವುದಿಲ್ಲ. ಅವನು ಮರುಜನ್ಮಕ್ಕೆ ಹೋಗದಂತೆ ಮೂವರು ಪುರುಷರಲ್ಲಿ ಶ್ರೇಷ್ಟವಾದ

ದಿವ್ಯವಾದ ಪುರುಷನನ್ನು ಸೇರುತ್ತಿದ್ದಾನೆ. ಮೂರನೇ ಪುರುಷನು ಎಂತಹವನೋ ಅಂತಹವನಂತೆ ಅವನಲ್ಲಿಯೇ ಸೇರಿಹೋಗುತ್ತಿದ್ದಾನೆ.

**(7) ಶ್ಲೋ। 9 : ಕವಿಂಪುರಾಣಮನುಶಾಸಿತಾರಮಣೋರಣೀಯಾಂಸಮನುಸ್ಮರೇದ್ಯಃ।**
**ಸರ್ವಸ್ಯಧಾತಾರ ಮಚಿಂತ್ಯ ರೂಪ ಮಾದಿತ್ಯವರ್ಣಂ ತಮಸಃ ಪರಸ್ತಾತ್ ॥**
**(ಜೀವಾತ್ಮ, ಆತ್ಮ, ಪರಮಾತ್ಮ)**

**(7) ಶ್ಲೋ॥ 10 : ಪ್ರಯಾಣಕಾಲೇಮನಸಾಽಚಲೇನಭಕ್ತ್ಯಾಯುಕ್ತೋಯೋಗಬಲೇನ ಚೈವ**
**ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯಸಮ್ಯಕ್‌ಸತಂಪರಂಪುರುಷಮುಪೈತಿದಿವ್ಯಮ್ ॥**
**(ಜೀವಾತ್ಮ, ಆತ್ಮ, ಪರಮಾತ್ಮ)**

**ಭಾವಾರ್ಥ :** ಸರ್ವದರ್ಶಿ, ಪುರಾಣನು, ಜಗತ್ತನ್ನು ಶಾಶಿಸುವವನು, ಸೂಕ್ಷ್ಮಗಳಿಗೆ ಸೂಕ್ಷ್ಮವಾದವನು, ಸರ್ವಸ್ವವನ್ನು ರಕ್ಷಿಸುವವನು, ಚಿಂತೆಯಿಂದ ತಿಳಿಯದವನು, ಸೂರ್ಯ ಪ್ರಕಾಶ ಹೊಂದಿದವನು, ಅಜ್ಞಾನಕ್ಕಿಂತ ಬೇರೆಯಾದ ಪರಮಾತ್ಮನನ್ನು ಹೊಂದಲು ಕೋರುವವನು, ಮರಣ ಸಮಯದಲ್ಲಿ ಯೋಗ ಬಲದಿಂದ ಮನಸ್ಸನ್ನು ಭೃಕುಟಿಯ ಮಧ್ಯದಲ್ಲಿ ನಿಲ್ಲಿಸಿ, ಪ್ರಾಣವಾಯುವನ್ನು ಸ್ಥಿರಪಡಿಸಿದವನಾಗಿ ಪರಮಾತ್ಮನಲ್ಲಿ ಸೇರುತ್ತಾನೆ.

**ವಿವರ :** ಸೇರಬೇಕಾಗಿರುವುದು ಪರಮಾತ್ಮನಲ್ಲಿ, ದೃಷ್ಟಿಯನ್ನು ನಿಲ್ಲಿಸಬೇಕಾಗಿರುವುದು ಆತ್ಮದ ಮೇಲೆ, ಸೇರಬೇಕಾದವನು ಜೀವಾತ್ಮ. ಪ್ರಯಾಣಿಕನು ಜೀವಾತ್ಮ, ದಾರಿ ಆತ್ಮ, ಗಮ್ಯ(ಗುರಿ) ಪರಮಾತ್ಮ. ಪ್ರಯಾಣಿಕನಿಗೆ ಮೊದಲು ಗಮ್ಯ ತಿಳಿಯಬೇಕು. ಯಾವ ಊರಿಗೆ ಹೋಗಬೇಕೊ, ಆ ಊರು ಎಂತಹುದೊ ಸ್ವಲ್ಪ ಇತರರಿಂದ ತಿಳಿದ ನಂತರ ಆ ಊರಿಗೆ ಹೋಗುವ ದಾರಿಯನ್ನು ತಿಳಿದುಕೊಂಡು, ಅದರ ಹಿಂದೆ ಪ್ರಯಾಣಿಸಿದರೆ ಗಮ್ಯವನ್ನು ಸೇರಬಹುದು. ಹಾಗೆಯೇ ಗಮ್ಯವಾದ ಮೋಕ್ಷವನ್ನು ಕುರಿತು ಭಗವಂತನು ನಮಗೆ ಸ್ವಲ್ಪ ತಿಳಿಸಿದ್ದಾನೆ. ಮೋಕ್ಷ ಎಂದರೆ ಒಂದು ಪ್ರದೇಶವಾಗಲಿ, ಒಂದು ಲೋಕವಾಗಲಿ ಅಲ್ಲ. ಮೋಕ್ಷ ಎಂದರೆ ಬಿಡುಗಡೆ ಎಂದು ಅರ್ಥ. ಜನನ ಮರಣಗಳನ್ನು ಉಂಟುಮಾಡುವ ಕರ್ಮದಿಂದ ಹೊರಬೀಳುವುದೇ ಮೋಕ್ಷ. ಹಾಗೆ ಕರ್ಮದಿಂದ ಮೋಕ್ಷ ಹೊಂದಿದವನೇನಾಗುತ್ತಾನೆಂದರೆ, ಸರ್ವದರ್ಶಿಯಾಗಿ ಬದಲಾಗಿ ಸರ್ವಪ್ರಪಂಚವನ್ನು ನೋಡುತ್ತಾನೆ. ಒಂದು ಶರೀರದಲ್ಲಿರುವಾಗ ತನ್ನ ಮುಂದಿರುವುದನ್ನು ಮಾತ್ರ ನೋಡುವವನು, ಮೋಕ್ಷ ಹೊಂದಿದ ನಂತರ ಸರ್ವವನ್ನು ನೋಡುವುದು ಎಷ್ಟು ದೊಡ್ಡದೊ ಆಲೋಚಿಸಿರಿ.

ಅಷ್ಟೇ ಅಲ್ಲದೇ ಪೂರ್ವದಿಂದ ಇರುವವನಾಗಿ, ಆದಿಯಿಂದ ಇರುವವೆಲ್ಲಾ ತಿಳಿಯಬಲ್ಲನು. ಮನುಷ್ಯನಾಗಿರುವಾಗ ನಮ್ಮ ಜೀವನವೂ ಸಹ ಪೂರ್ತಿ ಜ್ಞಾಪಕವಿಲ್ಲದ ನಾವು, ಸನಾತನ ಕಾಲದಿಂದ ತಿಳಿದವರಾಗುವುದು ಎಷ್ಟು ದೊಡ್ಡದು ಅಲ್ಲವೆ! ಜನ್ಮದಿಂದಿರುವಾಗ ನಮ್ಮ ಮಕ್ಕಳೂ ಸಹ ನಮ್ಮ ಮಾತು ಕೇಳುವುದಿಲ್ಲ, ಅವರನ್ನು ಶಾಶಿಸಿ ಹೇಳಲಾರೆವು. ಜನ್ಮವಿಲ್ಲದೆ ಮೋಕ್ಷ ಹೊಂದಿದಾಗ ಸರ್ವಜಗತ್ತನ್ನು ಶಾಸಿಸಿ ನಡೆಸುವ ಅಧಿಕಾರ ಹೊಂದಿರುತ್ತೇವೆ. ಮನೆಯಲ್ಲಿರುವವರನ್ನು ಸಹ ಶಾಶಿಸದವನು ಜಗತ್ತಿಗೆ ಶಾಸನಕರ್ತ ಆಗುವುದು ಎಷ್ಟು ವಿಶೇಷ ಅಲ್ಲವೆ! ಸಾಮಾನ್ಯ ಜೀವರಾಶಿ ಯಾಗಿರುವಾಗ ಸ್ಥೂಲವನ್ನು ಹೊರತು ಸೂಕ್ಷ್ಮವನ್ನು ತಿಳಿಯದವನು, ಸೂಕ್ಷ್ಮಗಳಿಗೆ ಸೂಕ್ಷ್ಮವಾಗಿ ಬದಲಾಗುವುದು ಎಷ್ಟು ದೊಡ್ಡದೊ ಆಶ್ಚರ್ಯ ಅಲ್ಲವೆ! ಶರೀರದಿಂದಿರುವ ನಾವು ಎಲ್ಲರ ದೃಷ್ಟಿಗೆ ಕಾಣಿಸುತ್ತಿದ್ದೇವೆ. ಮೋಕ್ಷಕ್ಕೆ ಹೋದ ನಂತರ ಯಾರ ಮನೋದೃಷ್ಟಿಗೂ ಸಹ ಕಾಣಿಸುವುದಿಲ್ಲವೆಂದರೆ, ಆ ಗಮ್ಯ ಎಷ್ಟು ದೊಡ್ಡದೋ ಆಲೋಚಿಸಿರಿ. ಈಗ ಯಾವ ಪ್ರಕಾಶವಿಲ್ಲದ ನಾವು, ಬಿಡುಗಡೆಯಿಂದ ಕೋಟಿ ಸೂರ್ಯಪ್ರಕಾಶವಂತರಾಗುವುದು ದೊಡ್ಡ ಸ್ಥಾನವನ್ನು ಹೊಂದುವುದು ಅಲ್ಲವೆ!

ಅಂತಹ ಸ್ಥಿತಿಯನ್ನು ಹೊಂದಲು ಕೋರುವವನು ಮರಣ ಸಮಯದಲ್ಲಿ ತನ್ನ ಮನಸ್ಸನ್ನು ಇತರ ವಿಷಯಗಳ ಮೇಲೆ ಹೋಗದಂತೆಮಾಡಿ, ಭೃಕುಟಿಗೆ ಮಧ್ಯ ಸ್ಥಾನದಲ್ಲಿ ತಲೆಮಧ್ಯ ಭಾಗದಲ್ಲಿ ಮನೋದೃಷ್ಟಿಯನ್ನು ನಿಲ್ಲಿಸಿ. ಅಲ್ಲಿರುವುದೇನೋ ನೋಡುತ್ತಿರುವಾಗ ಮನೋ ನಿಲುಗಡೆ ಉಂಟಾಗುವುದರಿಂದ, ಮೂಗುರಂಧ್ರದಲ್ಲಿನ ಪ್ರಾಣವಾಯುವೂ ಸಹ ಸಂಚರಿಸದೇ ನಿಂತುಹೋಗುತ್ತದೆ. ಭ್ರೂಮಧ್ಯಸ್ಥಾನದಲ್ಲಿ ಧ್ಯಾಸಹೊಂದಿ ಅಲ್ಲಿನ ಆತ್ಮವನ್ನು ನೋಡುವವನು ಹೊರಗಿನ ವಿಷಯಗಳನ್ನು ಮರೆತು, ತನ್ನ ಪೂರ್ತಿ ಧ್ಯಾಸ ತಲೆಮಧ್ಯ ಕೇಂದ್ರದಲ್ಲಿಡುವಾಗ ಶ್ವಾಸ ತನ್ನಷ್ಟಕ್ಕೆ ತಾನೇ ನಿಂತುಹೋಗುತ್ತದೆ. ಹಾಗೆ ಜೀವಾತ್ಮ ಜ್ಞಾಪಕದಿಂದಿದ್ದಾಗ ಶ್ವಾಸ ನಿಂತುಹೋಗುವುದು ಯೋಗಿಗಳಿಗೆ ಮಾತ್ರವೇ ಸಾಧ್ಯವಾಗುತ್ತದೆ. ಉಳಿದವರಿಗೆ ಮರಣ ಮರೆವಿನಲ್ಲಿ ನಡೆಯುತ್ತದೆ. ಜ್ಞಾಪಕದಲ್ಲಿ ಮರಣವನ್ನು ಹೊಂದುವವರು ಯೋಗಿಗಳು ಮಾತ್ರವೇ. **ವಿಜ್ಞಾನ ಪರವಾಗಿ (ಸೈನ್ಸು ಪ್ರಕಾರ) ನೋಡಿದರೆ ಶರೀರವನ್ನು ಬೆಳೆಸುವವು, ಆರೋಗ್ಯವಾಗಿ ಇರಿಸುವವು, ಆಯಸ್ಸನ್ನು ನಿರ್ಣಯಿಸುವವು, ವೃದ್ಧಾಪ್ಯವನ್ನು ಉಂಟುಮಾಡುವವು ಶರೀರದಲ್ಲಿನ ಗ್ರಂಥಿಗಳು**. ಗ್ರಂಥಿಗಳಲ್ಲಿ ತಯಾರಾಗುವ ರಸ ಪ್ರಭಾವ ಶರೀರವನ್ನು ರೂಪಿಸಿ ಅದರ ಬೆಳವಣಿಗೆಗೂ, ಕ್ಷೀಣಿಸುವುದಕ್ಕೂ ಎಲ್ಲವುದಕ್ಕೂ ಕಾರಣವೆಂದು ವಿಜ್ಞಾನಶಾಸ್ತ್ರಜ್ಞರು ಸಹ ಹೇಳುತ್ತಲೇ ಇದ್ದಾರೆ. ಎಲ್ಲಾ ಗ್ರಂಥಿಗಳಕ್ಕಿಂತ ಅತಿ ಚಿಕ್ಕ ಗ್ರಂಥಿ

ತಲೆಮಧ್ಯ ಭಾಗದಲ್ಲಿದೆ. ಚಿಕ್ಕದಾದರೂ ಗ್ರಂಥಿಗಳೆಲ್ಲವನ್ನೂ ಶಾಸಿಸಿ ನಡೆಸುವ ಸ್ವಭಾವ ಇರುವುದು. **ಆದ ಕಾರಣ ಅದಕ್ಕೆ ಗ್ರಂಥಿರಾಜವೆಂದು ಹೆಸರು ಇದೆ. ಇದನ್ನೇ ಪಿಟ್ಯೂಟರಿ ಗ್ಲಾಂಡ್ ಎಂದೂ ಸಹ ಕರೆಯುತ್ತಾರೆ.** ಇದರ ಸ್ಥಾನ ತಲೆಮಧ್ಯೆ ಭಾಗದಲ್ಲಿ ಭೃಕುಟಿ ಮಧ್ಯದಲ್ಲಿ ಇದೆ. ಕಿರುನಾಲಿಗೆ ಮೇಲ್ಭಾಗದಲ್ಲಿ ಭೃಕುಟಿ ಮಧ್ಯಸ್ಥಾನದಲ್ಲಿರುವ ಈ ಗ್ರಂಥಿ ಬಹಳ ಮುಖ್ಯವಾದುದು. ಇದರಲ್ಲಿ ಏನೋ ಅತೀತವಾದ ಶಕ್ತಿ ಇರುವುದರಿಂದ, ಆ ಗ್ರಂಥಿಯಿಂದ ಕಾಣಿಸದ ಕಿರಣಗಳು ಅಲೆಗಳ ರೂಪವಾಗಿ ಶರೀರವೆಲ್ಲ ಹರಡುತ್ತಿರುತ್ತದೆ. ಯೋಗಿಗಳ ಶರೀರದಲ್ಲಿ ಆ ತರಂಗಗಳ ಪ್ರಭಾವ ಮತ್ತಷ್ಟು ಹೆಚ್ಚಾಗಿರುತ್ತದೆ. ಮೆದುಳಿನ ಮಧ್ಯಭಾಗದಲ್ಲಿರುವ ಈ ಚಿಕ್ಕ ಗ್ರಂಥಿ ಹತ್ತಿರ ಕೇಂದ್ರೀಕೃತವಾದ ಮನಸ್ಸಿಗೆ ಆತ್ಮ ಅನುಭವ ಲಭಿಸುತ್ತದೆ. ಆ ಅನುಭವವನ್ನು ಮನಸ್ಸಿನ ಮೂಲಕ ಜೀವಾತ್ಮ ಅನುಭವಿಸುತ್ತಿರುವಾಗ, ಪ್ರಾಣವಾಯುವು ಮೂಗಿನ ರಂಧ್ರಗಳಲ್ಲಿ ತನ್ನಷ್ಟಕ್ಕೆ ತಾನು ನಿಂತುಹೋಗುತ್ತದೆ. ಆ ಪ್ರಾಣವಾಯುವು ಸಾಧಾರಣ ಮಾನವನ ಮರಣದಲ್ಲಿ ಕೊನೆಯ ಶ್ವಾಸವಾಗಿ ಹೊರಗೆ ಹೋಗುತ್ತದೆ. ಇಲ್ಲಿ ಯೋಗಿಗಳ ಮರಣದಲ್ಲಿ ಕೊನೆಯ ಶ್ವಾಸವಾಗಿ ಹೊರಗೆ ಹೋಗದೆ ಶರೀರದಲ್ಲಿಯೇ ನಿಕ್ಷಿಪ್ತವಾಗಿ ನಿಂತಾಗ, ಜೀವಾತ್ಮ ಶರೀರದಲ್ಲಿನ ಆತ್ಮವನ್ನು ಸೇರಿ ಅದರ ಮೂಲಕ ಶರೀರದಲ್ಲಿಯೇ ಕೊನೆಯದಾಗಿ ಪರಮಾತ್ಮನನ್ನೂ ಸಹ ಸೇರಿಕೊಳ್ಳುತ್ತಿದ್ದಾನೆ.

ಸಾಧಾರಣ ಮಾನವನ ಮರಣದಲ್ಲಿ ಆ ಜೀವಾತ್ಮ ಶರೀರವನ್ನು ಬಿಟ್ಟು ಆತ್ಮದೊಂದಿಗೆ ಸಹ ಮತ್ತೊಂದು ಶರೀರವನ್ನು ಸೇರುತ್ತಿದ್ದಾನೆ. ಅವನೊಂದಿಗೆ ಅವನ ಕರ್ಮ, ಗುಣಗಳು ಬೇರೆ ಶರೀರವನ್ನು ಆಶ್ರಯಿಸುತ್ತವೆ. ಇಲ್ಲಿ ಯೋಗಿಗಳ ಮರಣದಲ್ಲಿ ಕರ್ಮ ಎಲ್ಲವೂ ನಾಶವಾಗಿಹೋಗಿದೆ. ಗುಣಗಳು ನಿರ್ವೀರ್ಯವಾಗಿಹೋಗಿವೆ. ಮನಸ್ಸು ಆತ್ಮನಲ್ಲಿಯೇ ಲಗ್ನವಾಗಿ ಜೀವಾತ್ಮನನ್ನು ಲಗ್ನ ಮಾಡುತ್ತಿದೆ. ಬುದ್ಧಿ, ಜೀವಾತ್ಮದೊಂದಿಗೆ ಕೊನೆಯವರೆಗೂ ಇದ್ದು ಮನಸ್ಸು, ಬುದ್ಧಿ, ಜೀವಾತ್ಮ ಏಕವಾಗಿ ಬದಲಾಗಿ ಆತ್ಮನಲ್ಲಿ ಸೇರಿ ಕಾಣಿಸದಂತೆ ಹೋದಾಗ ಜೀವಾತ್ಮ ಆತ್ಮ ಎರಡು ಸೇರಿ ಒಂದೇ ಪದಾರ್ಥವಾಗಿ ಪರಮಾತ್ಮನಲ್ಲಿ ಬೆರೆತು ಹೋಗುತ್ತಿವೆ. ಆಗ ಶರೀರವು ನಿರ್ಜೀವವಾಗುತ್ತಿದೆ.

ಪ್ರತಿ ದಿನ ಯೋಗ ಮಾಡುತ್ತಿರುವಾಗ ಕಣ್ಣುಬ್ಬುಗಳ(ಭೃಕುಟಿ) ಮಧ್ಯದಲ್ಲಿಯೇ ಮನಸ್ಸನ್ನು ನಿಲ್ಲಿಸಿ ಆತ್ಮಾನುಭವವನ್ನು ಜೀವಾತ್ಮ ಹೊಂದಿದಾಗ ಶ್ವಾಸವೂ ಸಹ ನಿಂತುಹೋಗುತ್ತದಲ್ಲವೆ! ಆಗ ಶರೀರವನ್ನು ಬಿಟ್ಟು ಪರಮಾತ್ಮನಲ್ಲಿ ಐಕ್ಯವಾಗಬಹುದಲ್ಲವೆ! ಬ್ರಹ್ಮಯೋಗ ಸಮಯದಲ್ಲಿ ಸಾಧಾರಣವಾಗಿ ಮನಸ್ಸು ನಿಂತು ಹೋಗುವುದು, ಆತ್ಮ

ಅನುಭವವನ್ನು ಹೊಂದುವುದು, ಶ್ವಾಸ ನಿಂತುಹೋಗುವುದು ನಡೆಯುತ್ತಿರುವ ಕೆಲಸವಲ್ಲವೆ! ಸಾಧಾರಣವಾಗಿ ನಡೆಯುವ ಕೆಲಸವೇ ಒಂದು ದಿನ ಮರಣವಾಗಿ ಹೋಗುವುದರಲ್ಲಿ ಏನಾದರೂ ಪ್ರತ್ಯೇಕತೆ ಇದೆಯಾ ಎನ್ನುವ ಪ್ರಶ್ನೆ ಕೆಲವರಿಗೆ ಬರಬಹುದು. ಅದಕ್ಕೆ ಉತ್ತರ ಏನೆಂದರೆ! ಪ್ರತಿಯೊಂದು ಬಾರಿ ಯೋಗ ಮಾಡಿದಾಗ ನಡೆಯುವ ಕೆಲಸವೇ ಕೊನೆಗೆ ಮರಣದಲ್ಲಿ ನಡೆಯುತ್ತಿದ್ದರೂ ಬಹಳ ಪ್ರತ್ಯೇಕತೆಗಳು ಇರುವಂತೆ ನಾವು ಗ್ರಹಿಸಬಹುದು.

ಪ್ರತಿ ಯೋಗದಲ್ಲಿಯೂ ಆತ್ಮನನ್ನು ಹೊಂದಿದರು, ಶ್ವಾಸ ನಿಂತು ಹೋದರೂ, ಮನೋನಿಲುಗಡೆ ಇದ್ದರೂ ಕರ್ಮ ಮುಗಿಯಲಿಲ್ಲ, ಕರ್ಮಶೇಷವಿದೆ. ಆದ ಕಾರಣ ಮನಸ್ಸು, ಬುದ್ಧಿ, ಜೀವಿಯು ಒಂದು ಸ್ವರೂಪ ಆಗಲಿಲ್ಲ. ಮನಸ್ಸು ಅನುಭೂತಿಯನ್ನು ತಿಳಿಸುತ್ತಾ ಬೇರೆ ಇರುವಾಗ ಬುದ್ಧಿ ಮನಸ್ಸನ್ನು ಎಚ್ಚರಿಸುತ್ತಾ ಕದಲದಂತೆ ಮಾಡುತ್ತಾ ಅದು ತಿಳಿಸುವ ಅನುಭೂತಿಯನ್ನು ಜೀವಾತ್ಮಕ್ಕೆ ತಿಳಿಸುತ್ತಿರುತ್ತದೆ. ಬುದ್ಧಿ ತಿಳಿಸುವುದನ್ನು ಜೀವಾತ್ಮ ಹೊಂದುತ್ತಿರುವಾಗ ಆ ಅನುಭೂತಿಯನ್ನು ಕುರಿತು ಬುದ್ಧಿ ತೀರ್ಮಾನಿಸಿ ಹೇಳುತ್ತದೆ. ಹೀಗೆ ಯೋಗಸಮಯದಲ್ಲಿ ಬೇರೆ ಬೇರೆ ಪದಾರ್ಥಗಳಾಗಿ ಅವುಅವುಗಳ ಕೆಲಸವನ್ನು ಅಂತರ್ಮುಖವಾಗಿ ನಿರ್ವರ್ತಿಸುವ ಮನಸ್ಸು, ಬುದ್ಧಿ, ಜೀವಿಯು ಕೊನೆಯ ಮರಣ ಸಮಯದಲ್ಲಿ ಒಂದು ಪದಾರ್ಥವಾಗಿ ಬದಲಾಗುವರು. ಹಾಗೆ ಬದಲಾದ ಪದಾರ್ಥವು ಆತ್ಮದೊಂದಿಗೆ ಬೆರೆತುಹೋಗುತ್ತಿದೆ. ಯೋಗ ಸಮಯದಲ್ಲಿ ಆತ್ಮ, ಜೀವಾತ್ಮ, ಬೇರೆಬೇರೆಯಾಗಿ ಇದ್ದು ಆತ್ಮನನ್ನು ಜೀವಾತ್ಮ ಅನುಭವಿಸುತ್ತಿರುವಾಗ ಕೊನೆಯ ಸಮಯದಲ್ಲಿ ಮನೋ, ಬುದ್ಧಿ, ಜೀವಾತ್ಮ ಬೆರತ ಜೀವಪದಾರ್ಥವು ಆತ್ಮದೊಂದಿಗೆ ಬೆರೆತು ಪ್ರತ್ಯೇಕವಾದ ಆತ್ಮವಾಗಿ ಬದಲಾಗುತ್ತದೆ. ಅಲ್ಲಿಯವರೆಗೂ ಶರೀರದಲ್ಲಿ ಪರಮಾತ್ಮ ಆತ್ಮ ಬೇರೆ ಬೇರೆಯಾಗಿ ಇರುವಾಗ, ಆ ಸಮಯದಲ್ಲಿ ಪ್ರತ್ಯೇಕವಾಗಿ ಬದಲಾದ ಆತ್ಮ ಪರಮಾತ್ಮನೊಳಗೆ ಸುಲಭವಾಗಿ ಬೆರೆತು ಹೋಗುತ್ತಿದೆ. ಅಲ್ಲಿಯವರೆಗೂ ಪರಮಾತ್ಮದೊಂದಿಗೆ ಸೇರುವುದಕ್ಕೆ ಸಾಧ್ಯವಾಗದ ಆತ್ಮ, ಜೀವಾತ್ಮದೊಂದಿಗೆ ಬೆರೆತ ಆತ್ಮವಾಗಿ ಪ್ರತ್ಯೇಕತೆಹೊಂದಿ ಪರಮಾತ್ಮನಲ್ಲಿ ಐಕ್ಯವಾಗುವುದಕ್ಕೆ ಸಾಮರ್ಥ್ಯಹೊಂದಿ ಶರೀರದಲ್ಲಿಯೇ ಸೇರಿಹೋಗುತ್ತಿದ್ದಾನೆ. ಈ ವಿಧವಾಗಿ ಶರೀರದಲ್ಲಿರುವ ಜೀವಾತ್ಮ ಪರಮಾತ್ಮನನ್ನು ಹೊಂದುತ್ತಿದ್ದಾನೆ. ಇದು ಬ್ರಹ್ಮಯೋಗಿಗಳ ಅಂತ್ಯಕಾಲದಲ್ಲಿ ಶರೀರದಲ್ಲಿಯೇ ನಡೆಯುವ ಕೆಲಸವಾಗಿದ್ದು ಕರ್ಮಯೋಗಿಗಳ ಕೊನೆಯ ದೆಸೆಯಲ್ಲಿ ಮನೋ ಬುದ್ಧಿಗಳಿಂದ ಅಹಂಕಾರವೂ ಸಹ ಸೇರಿ ಜೀವಾತ್ಮದೊಂದಿಗೆ ಐಕ್ಯವಾಗುತ್ತಿವೆ, ಕರ್ಮಯೋಗಿಗಳಲ್ಲಿ ಮನಸ್ಸು ನಿಲ್ಲುವ ಅವಶ್ಯಕತೆ ಇಲ್ಲ. ಅದಕ್ಕೆ ಸಮಾನವಾದ ನಿಗ್ರಹ

ಅಹಮ್ ಬಳಿ ಇದೆ. ಬ್ರಹ್ಮಯೋಗದಲ್ಲಿ ಮನಸ್ಸು ನಿಲುಗಡೆಯಾದರೆ, ಕರ್ಮಯೋಗಿಗಳಲ್ಲಿ ಅಹಮ್‌ವೊಂದರ ನಿಲುಗಡೆ ನಡೆಯಬೇಕು. ನಂತರ ಜೀವಾತ್ಮ ಆತ್ಮದೊಂದಿಗೆ, ಆತ್ಮ ಪರಮಾತ್ಮದೊಂದಿಗೆ ಸೇರುತ್ತಿದೆ. ಕರ್ಮಮುಗಿದ ತಕ್ಷಣ ಯೋಗಿಗಳಲ್ಲಿ ನಡೆಯುವ ಮರಣವಿದು. ಈ ವಿಧವಾಗಿ ಯೋಗಿಗಳು ತಮ್ಮ ಶರೀರದಲ್ಲಿಯೇ ಪರಮಾತ್ಮನನ್ನು ಹೊಂದುತ್ತಿದ್ದಾರೆ. ಎಲ್ಲಿ ಹುಡುಕಿದರೆ ಅಲ್ಲಿ ಸಿಗುತ್ತದೆಂದು **'ಇದರಲ್ಲಿ ಇದ್ದವನಲ್ಲಿಲ್ಲವೆಂಬ ಸಂದೇಹ ಬೇಡವೆಂದು'** ಹಿರಿಯರು ಹೇಳಿದ ಮಾತಿನ ಪ್ರಕಾರ, ಶರೀರದೊಳಗೆ ಯೋಗ ಮಾಡುವ ಯೋಗಿಗಳಿಗೆ ಶರೀರದಲ್ಲಿಯೇ ಪರಮಾತ್ಮ ಲಭಿಸುತ್ತಾನೆ.

**(7) ಶ್ಲೋ॥ 11 : ಯದಕ್ಷರಂವೇದವಿದೋವದನ್ತಿವಿಶನ್ತಿಯದ್ಯತಯೋ ವೀತರಾಗಾಃ ।**
**ಯದಿಚ್ಛಂತೋ ಬ್ರಹ್ಮಚರ್ಯಂ ಚರನ್ತಿ ತತ್ತೇಪದಂ ಸಂಗ್ರಹೇಣ ಪ್ರವಕ್ಷ್ಯೇ ॥**
**(ಪರಮಾತ್ಮ )**

**ಭಾವಾರ್ಥ :** ವೇದನಿಪುಣರೆಲ್ಲರೂ ಯಾವುದಕ್ಕೆ ನಾಶ ಇಲ್ಲವೆನ್ನುತ್ತಿದ್ದಾರೋ, ಗುಣಗಳು ಬಿಟ್ಟವರಿಗೆ ಯಾವುದು ಗಮ್ಯಸ್ಥಾನವೊ, ಬ್ರಹ್ಮಚರ್ಯದಿಂದ ಏನನ್ನು ಹೊಂದುತ್ತಾರೋ ಆ ಪದವನ್ನು ಕುರಿತು ಸವಿವರವಾಗಿ ಹೇಳುತ್ತಿದ್ದೇನೆ.

**ವಿವರ :** ವೇದಗಳು ತಿಳಿದವರೆಂದರೆ ಏಷ್ಟೋ ದೊಡ್ಡ ಗ್ರಂಥಗಳು ಓದಿದವರೆಂದೋ, ಮತ್ಯಾರನ್ನೋ ಎಂದುಕೊಳ್ಳಬೇಡ. **'ತ್ರೈಗುಣ್ಯ ವಿಷಯಾ ವೇದಾ'** ಎನ್ನುವ ಭಗವಂತನ ವಾಕ್ಯದ ಪ್ರಕಾರ ಗುಣಗಳು, ಅವುಗಳಿಂದ ನಡೆಯುವ ಪರ್ಯವಸಾನಗಳು ತಿಳಿದ ಹಿರಿಯರು, ಅಂದರೆ ಸಂಪೂರ್ಣಜ್ಞಾನಿಗಳು ಏನನ್ನು ನಾಶವಿಲ್ಲದ ಸ್ಥಿತಿ ಎನ್ನುತ್ತಿದ್ದಾರೋ ಅಂದರೆ ಪ್ರಳಯದಲ್ಲಿಯೂ ಸಹ ನಾಶವಾಗದ ಸ್ಥಿತಿ ಯಾವುದೊ, ಮತ್ತು ಗುಣಗಳು ಜಯಿಸಿದವರೆಲ್ಲರೂ ಹೊಂದುವ ಮರಣವಿಲ್ಲದ ಸ್ಥಿತಿ ಏನೋ ಹೇಳುತ್ತೇನೆಂದು ಭಗವಂತನು ಹೇಳಿದ್ದಾನೆ. ಅಷ್ಟೇ ಅಲ್ಲದೆ ಬ್ರಹ್ಮಚರ್ಯದಿಂದ ಏನನ್ನು ಹೊಂದುವರೋ ಅದನ್ನೂ ಸಹ ತಿಳಿಸುತ್ತೇನೆಂದಿದ್ದಾನೆ. ಇಲ್ಲಿ ಬ್ರಹ್ಮಚರ್ಯವೆಂದರೆ ಮದುವೆ ಮಾಡಿಕೊಳ್ಳದಂತೆ ಇರುವುದಾ? ಸಂಸಾರ ಬಿಡುವುದಾ? ಸ್ತ್ರೀ ಸಾಂಗತ್ಯ ನಿಷೇಧವಾ? ಎನ್ನುವ ಸಂಶಯಗಳು ಬರಬಹುದು. ಆದರೆ ಅವುಯಾವು ಅಲ್ಲ **ಬ್ರಹ್ಮವೊಂದರ ಆಚರಣೆ ಆಚರಿಸುವವನು ಬ್ರಹ್ಮಚಾರಿ ಎನ್ನುವ ಅರ್ಥವಿದೆ**. ಬ್ರಹ್ಮ ಎಂದರೆ ದೊಡ್ಡವನು, ಅಧಿಪತಿ, ಪರಮಾತ್ಮ ಎನ್ನುವ ಅರ್ಥಗಳಲ್ಲಿ ತುಂಬಿರುವವನೆಂದು ತಿಳಿದುಕೊಳ್ಳಬೇಕು. ಪರಮಾತ್ಮಕ್ಕೆ ಆಚರಣೆ ಇದೆಯಾ? ಎಂದರೆ ಇದೆಯೆಂದು ಹೇಳಬಹುದು. ಆತನು ಭಗವಂತನಾಗಿ ಹುಟ್ಟಿ ಆಚರಿಸುವುದೇ ಆತನ

ಆಚರಣೆ. ಅದೇ ಬ್ರಹ್ಮಾಚರಣೆ. ಪರಮಾತ್ಮ ಸಾಕಾರವಾಗಿ ಕರ್ಮಯೋಗವಾಚರಿಸಿ ತೋರಿಸಿದ್ದಾನೆ. ತನ್ನಂತೆಯೇ ಆಚರಿಸೆಂದು ಸಹ ಹೇಳಿದ್ದಾನೆ. ನಾನು ಮಾರ್ಗದರ್ಶ ಕತೆಗೋಸ್ಕರ ಆಚರಿಸುತ್ತಿದ್ದೇನೆ. ನನ್ನಂತೆ ಆಚರಿಸೆಂದು ಹೇಳಿದ್ದಾನೆ. ಹಾಗೆ ಆಚರಿಸುವುದೇ ಬ್ರಹ್ಮ ಆಚರಣೆಯಾಗುತ್ತದೆ. ಹಾಗೆ ಆಚರಿಸುವವನೇ ಬ್ರಹ್ಮಾಚಾರಿ. ಕರ್ಮಯೋಗಿಯನ್ನು ಬ್ರಹ್ಮಚಾರಿ ಎನ್ನಬಹುದು. ಆದರೆ ಮದುವೆ ಮಾಡಿಕೊಳ್ಳದವನನ್ನು ಬ್ರಹ್ಮಾಚಾರಿ ಎನ್ನಬಾರದು. ಬ್ರಹ್ಮಾಚಾರಿಗಳು ಯಾವ ಗಮ್ಯವನ್ನು ಹೊಂದುತ್ತಿದ್ದಾರೋ ಹೇಳುತ್ತೇನೆಂದು ಭಗವಂತನು ಕೆಳಗಿನ ಶ್ಲೋಕದಲ್ಲಿ ತಿಳಿಸಿದ್ದಾನೆ.

**(7) ಶ್ಲೋ॥ 12 : ಸರ್ವದ್ವಾರಾಣಿ ಸಂಯಮ್ಯ ಮನೋಹೃದಿ ನಿರುಧ್ಯ ಚ ।**
**ಮೂರ್ಧ್ನ್ಯಾರ್ಧಾಯಾಽತ್ಮನಃ ಪ್ರಾಣ ಮಾಸ್ಥಿತೋ ಯೋಗಧಾರಣಮ್ ॥**
**(ಜೀವಾತ್ಮ, ಆತ್ಮ, ಪರಮಾತ್ಮ)**

**(7) ಶ್ಲೋ॥ 13 : ಓ ಮಿತ್ಯೇ ಕಾಕ್ಷರಂ ಬ್ರಹ್ಮ ವ್ಯಾಹರ ನ್ಮಾಮನು ಸ್ಮರನ್ ।**
**ಯಃ ಪ್ರಯಾತಿ ತ್ಯಜನ್ ದೇಹಂ ಸಯಾತಿ ಪರಮಾಂ ಗತಿಮ್ ॥**
**(ಜೀವಾತ್ಮ, ಆತ್ಮ, ಪರಮಾತ್ಮ)**

**ಭಾವಾರ್ಥ :** ಸರ್ವದ್ವಾರಗಳನ್ನು ನಿಯಮಿಸಿ, ಮನಸ್ಸನ್ನು ಹೃದಿ ಮಧ್ಯದಲ್ಲಿ ನಿಲ್ಲಿಸಿ, ಪ್ರಾಣವಾಯುವನ್ನು ಮೇಲ್ಮುಖವಾಗಿ ನಿಲ್ಲುವಂತೆ ಮಾಡಿ, ಸ್ಥಿರಯೋಗತ್ವವು ಹೊಂದಿ **'ಓಂ'** ಎನ್ನುವ ಅಕ್ಷರವನ್ನೇ ಸ್ಮರಿಸಿಕೊಳ್ಳುತ್ತಾ, ಶರೀರವನ್ನು ಬಿಟ್ಟು ಹೋಗುವವನು ಪರಮವಾದ ನನ್ನನ್ನು ಹೊಂದುತ್ತಾನೆ.

**ವಿವರ :** ಶರೀರಕ್ಕೆ ವಿಷಯ ಪ್ರವೇಶ ದ್ವಾರಗಳು ಐದು ಇವೆ. ಐದು ಜ್ಞಾನೇಂದ್ರಿಯಗಳಿಂದ ವಿಷಯಗಳು ಒಳಗೆ ಪ್ರವೇಶಿಸುತ್ತಿವೆ. ಯೋಗಿಯಾದವನು ಐದು ಜ್ಞಾನೇಂದ್ರಿಯಗಳನ್ನು ಮನಸ್ಸಿನ ಮೂಲಕ ನಿಯಮಿಸಿ, ಅವುಗಳಿಂದ ಯಾವ ವಿಷಯವು ಪ್ರವೇಶಿಸದಂತೆ ಮಾಡಿಕೊಳ್ಳುತ್ತಾನೆ. ಹಾಗೆ ವಿಷಯಪ್ರವೇಶ ಇಲ್ಲದಂತೆ ಮಾಡಿಕೊಂಡವನು, ತನ್ನ ಮನಸ್ಸನ್ನು ಹೃದಯದ ಮಧ್ಯಭಾಗದಲ್ಲಿ ನಿಲ್ಲಿಸಿಕೊಳ್ಳುತ್ತಿದ್ದಾನೆ. ಹೃದಯ ಎಂದರೆ ಹಾರ್ಟ್ ಎಂದು ಬಹಳ ಜನರು ಅಂದುಕೊಳ್ಳುತ್ತಾರೆ. ವಾಸ್ತವವಾಗಿ **'ಹೃದಿ'** ಎಂದರೆ ಗುಂಡಿಗೆ ಅಲ್ಲ. **ಬ್ರಹ್ಮನಾಡಿಯಲ್ಲಿರುವ ಏಳು ನಾಡಿಕೇಂದ್ರಗಳಲ್ಲಿ ಕೊನೆಯದಾದ ದೊಡ್ಡದಾದ ನಾಡಿಕೇಂದ್ರ ಯಾವುದೋ ಅದೇ ಹೃದಯ ಎನ್ನುತ್ತೇವೆ. ಏಳನೇ ಕೇಂದ್ರವಾಗಿರುವುದು ತಲೆ ಭಾಗದಲ್ಲಿನ**

**ಮೆದುಳು. ಮೆದುಳನ್ನೇ ಹೃದಯ ಎನ್ನಬಹುದು.** ಹೃದಿ ಮಧ್ಯಭಾಗದಲ್ಲಿ ಮನಸ್ಸನ್ನು ಇರಿಸಬೇಕೆಂದರೆ! ಭ್ರೂಮಧ್ಯ ಸ್ಥಾನಕ್ಕೆ ಸಮತಲದಲ್ಲಿ ಮೆದುಳಿನಲ್ಲಿ ಮಧ್ಯದಲ್ಲಿರುವ ಗ್ರಂಥಿರಾಜ ಎನ್ನುವ ಪಿಟ್ಯೂಟರಿ ಗ್ರಂಥಿ ಹತ್ತಿರ ಮನಸ್ಸನಿರಿಸಬೇಕೆಂದು ಅರ್ಥ. ಹಾಗೆ ನಿಲ್ಲಿಸುವುದರಿಂದ ಮೂಗಿನರಂಧ್ರದಲ್ಲಿ ಆಡುವ ಶ್ವಾಸ ಮೇಲಕ್ಕೆ ಬಂದಿರುವುದು ಕೆಳಗೆ ಹೋಗದಂತೆ ನಿಂತುಹೋಗಬಲ್ಲದು. ಹಾಗೆ ಸ್ಥಿರಯೋಗವನ್ನು ಹೊಂದಿ **'ಓಂ'** ಎನ್ನುವ ಅಕ್ಷರವೇ ಪರಮಾತ್ಮನೆಂದು ಧ್ಯಾನಿಸುವನಾಗಿರುತ್ತಾನೆ. ಇಲ್ಲಿ 'ಓಂ' ಎನ್ನುವುದನ್ನು ಕುರಿತು ತಿಳಿದುಕೊಳ್ಳಬೇಕಾಗಿದೆ.

ನಮ್ಮ ಮೂಗಿನರಂಧ್ರಗಳಲ್ಲಿ ಶ್ವಾಸ ಮೇಲೆ ಕೆಳಗೆ ಹೋಗುವಾಗ ಸಣ್ಣ ಶಬ್ದವು ಹುಟ್ಟುತ್ತದೆ. ಹೊರಗೆ ಎರಡು ರಂಧ್ರಗಳಲ್ಲಿ ಪ್ರವೇಶಿಸುವ ಶ್ವಾಸ ಒಂದು ಶಬ್ದವು. ಒಳಗಿನಿಂದ ಒಂದೇ ರಂಧ್ರದ ಮೂಲಕ ಬಂದು ಎರಡಾಗಿ ಸೀಳಿ ಹೊರಗೆ ಬಂದು ಶ್ವಾಸ ಮತ್ತೊಂದು ಶಬ್ದವನ್ನು ಮಾಡುತ್ತಿದೆ. ಮೇಲಕ್ಕೆ ಹೋಗುವ ಶ್ವಾಸದಲ್ಲಿ **'ಸೋ'** ಶಬ್ದವನ್ನು ಕೆಳಗೆ ಬರುವ ಶ್ವಾಸದಲ್ಲಿ **'ಹಂ'** ಎನ್ನುವ ಶಬ್ಧವನ್ನು ಏರ್ಪಡಿಸುತ್ತಿವೆ. 'ಸೋ' ಶಬ್ಧದಕೊನೆಯಲ್ಲಿ 'ಓಂ' ಎಂದೂ 'ಹಂ' ಕೊನೆಯಲ್ಲಿ **'ಮ್'** ಕಾರವು ಇದೆ. ಸೋಹಂ ಶಬ್ದದಲ್ಲಿ ಕೊನೆಯದಾಗಿ ಅಡಗಿದ ಶಬ್ದವು **'ಓಮ್'** ಆಗುತ್ತದೆ. ಒಂದುಬಾರಿ ಶ್ವಾಸ ಒಳಗೆ ಹೋಗಿ ಹೊರಗೆ ಬಂದರೆ **'ಓಂ'** ಶಬ್ದವು ಏರ್ಪಡುತ್ತಿದೆ. ಇದು ಪ್ರತಿಯೊಂದು ಬಾರಿ ಶ್ವಾಸದಲ್ಲಿ ಒಳಗೊಂಡಿದೆ. 'ಓಂ' ಶಬ್ದ ಹುಟ್ಟುವುದಕ್ಕೆ ಶ್ವಾಸ ಕಾರಣ. ಶ್ವಾಸ ಆಡುವುದಕ್ಕೆ ಶ್ವಾಶ ಕೋಶಗಳು ಆಧಾರ. ಶ್ವಾಶ ಕೋಶಗಳು ಕದಲುವುದಕ್ಕೆ ಕೆಲವು ನಾಡಿಗಳಲ್ಲಿನ ಸ್ಪಂದನೆ ಕಾರಣ. ಆ ನಾಡಿಗಳಲ್ಲಿನ ಚೈತನ್ಯವು ಎಲ್ಲಿಯದೆಂದು ನೋಡಿದರೆ ಕೊನೆಗೆ ಬ್ರಹ್ಮನಾಡಿಯಲ್ಲಿನ ಹೃದಯದಿಂದ ಹೊರಡುತ್ತದೆ. ಮೂಗಿನ ರಂಧ್ರಗಳಲ್ಲಿ ಹುಟ್ಟುವ **'ಓಮ್'** ಶಬ್ದಕ್ಕೆ ಆತ್ಮ ಕಾರಣವಾಗಿದೆ. ಆತ್ಮ ನಾಶ ಇಲ್ಲದ್ದು. ಆದ್ದರಿಂದಲೇ ಅದನ್ನು ಅಕ್ಷರವೆಂದು ಹೇಳುತ್ತಿದ್ದೇವೆ. ಕ್ಷರವಲ್ಲದ ಅಕ್ಷರವಾದ ಆತ್ಮ ಹೊರಗೆ ಶ್ವಾಸದ ಮೂಲಕ **'ಓಂ'** ಶಬ್ದವಾಗಿ ತಿಳಿಯುತ್ತದೆ. ಒಳಗಿನ ಆತ್ಮ ಹೊರಗೆ **'ಓಮ್'** ಆಗಿ ಇದೆ. ಆದ್ದರಿಂದ **'ಓಂ'** ಎನ್ನುವುದು ನಾಶ ಇಲ್ಲದೆಂದು ಹೇಳಿದ್ದಾರೆ. ಅಂತಹ **'ಓಂ'** ಅಕ್ಷರವನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಾ, ಅಂದರೆ ಮನಸ್ಸಿನ ಮೂಲಕ ಆತ್ಮ ಧ್ಯಾಸಹೊಂದಿ ಯೋಗವಾಚರಿಸುತ್ತಾ, ಶರೀರವನ್ನು ಬಿಡುವವನು ಪರಮವಾದ ಪರಮಾತ್ಮನನ್ನೇ ಹೊಂದುತ್ತಾನೆ. ಕೊನೆಯಲ್ಲಿ ಶರೀರವನ್ನು ಬಿಡುವಾಗ ಮನೋಬುದ್ಧಿ ಜೀವಾತ್ಮದೊಂದಿಗೆ ಬೆರೆತಾಗ, ಜೀವಾತ್ಮದ ಸ್ಥಿತಿ ಬದಲಾದವನಾಗಿ ಆತ್ಮನಲ್ಲಿ

ಕೂಡಿದಾಗ, ಜೀವಾತ್ಮ ಸೇರಿದ ಆತ್ಮ ತನ್ನ ಸ್ಥಿತಿಯನ್ನು ಕಳೆದುಕೊಂಡು ಪರಮಾತ್ಮನಲ್ಲಿ ಸೇರಿದಾಗ, ಜೀವಾತ್ಮ ಮುಕ್ತನಾಗಿ ಎಲ್ಲಾಕಡೆ ವ್ಯಾಪಿಸಿ ಹೋಗುತ್ತಿದ್ದಾನೆ.

**(7) ಶ್ಲೋ॥ 14 : ಅನನ್ಯಚೇತಾಃ ಸ್ವತತಂ ಯೊಮಾಂ ಸ್ಮರತಿ ನಿತ್ಯಶಃ ।**
**ತಸ್ಯಾಹಂ ಸುಲಭಃ ಪಾರ್ಥ! ನಿತ್ಯಯುಕ್ತಸ್ಯ ಯೋಗಿನಃ ॥**

**(ಪರಮಾತ್ಮ)**

**ಭಾವಾರ್ಥ :** ಅನ್ಯ ಚಿಂತೆಗಳು ಮನಸ್ಸಿನಲ್ಲಿ ಸೇರಿಸದೆ ಯಾರು ಸರ್ವದಾ ನನ್ನನ್ನೇ ಸ್ಮರಿಸುತ್ತಾರೋ ಅವರಿಗೆ ಸುಲಭನಾಗುತ್ತೇನೆ. ಆತನೇ ನಿತ್ಯವು ನನ್ನೊಂದಿಗೆ ಕೂಡಿಕೊಂಡ ಯೋಗಿ ಎನ್ನಲ್ಪಡುತ್ತಾನೆ.

**(7) ಶ್ಲೋ॥ 15 : ಮಾ ಮುಪೇತ್ಯ ಪುನರ್ಜನ್ಮ ದುಃಖಾಲಯ ಮಶಾಶ್ವತಮ್ ।**
**ನಾ ಉಪ್ನುವಂತಿ ಮಹತ್ಮಾನ ಸಂಸಿದ್ಧಿಂ ಪರಮಾಂ ಗತಾಃ ॥**

**(ಪರಮಾತ್ಮ)**

**ಭಾವಾರ್ಥ :** ಶ್ರೇಷ್ಟವಾದ ಸಂಸಿದ್ಧಿ ಹೊಂದಿದ ಜನರು ನನ್ನನ್ನು ಹೊಂದಿದವರಾಗಿದ್ದು ನಂತರ ದುಃಖದಿಂದ ಕೂಡಿಕೊಂಡ ಅಶಾಶ್ವತವಾದ ಜನ್ಮಗಳು ಹೊಂದುವುದಿಲ್ಲ.

**ವಿವರ :** ಮೋಕ್ಷ ಹೊಂದಿದವನು ಪರಮಾತ್ಮನಲ್ಲಿ ಐಕ್ಯವಾಗುತ್ತಾನೆ. ಅವನು ಮತ್ತೆ ಹುಟ್ಟುವುದಿಲ್ಲ. ಹುಟ್ಟುವುದಕ್ಕೆ ಕರ್ಮ ಅಗತ್ಯ. ಕರ್ಮ ಇಲ್ಲದವನೇ ಸಿದ್ಧಿಹೊಂದುತ್ತಿದ್ದಾನೆ. ಸಿದ್ಧಿಹೊಂದಿದ ನಂತರ ಕರ್ಮವಿಲ್ಲದ ಕಾರಣದಿಂದ ಅವನು ಹುಟ್ಟುವುದಿಲ್ಲ. ಅಂತಹವನು ವಿಶಾಲವಾಗಿ ಜಗತ್ತೆಲ್ಲವೂ ವ್ಯಾಪಿಸಿರುತ್ತಾನೆ. ಮರಣಿಸುವ ಸಮಯದಲ್ಲಿ ಶ್ವಾಸ ಹೊರಗೆ ಹೋಗದೆ ಶರೀರದೊಳಗೆ ಅಡಗಿಕೊಂಡು ಜೀವಾತ್ಮ ಹೊರಗೆ ಬಾರದೆ ಶರೀರದಲ್ಲಿಯೇ ಉಳಿದುಹೋಗುವುದರಿಂದ ಅವನು ಮತ್ತೊಂದು ಶರೀರವನ್ನು ಪಡೆಯಲಿಲ್ಲವೆಂದು ತಿಳಿಯಬೇಕು.

**(7) ಶ್ಲೋ॥ 16 : ಆಬ್ರಹ್ಮ ಭುವನಾ ಲ್ಲೋಕಾಃ ಪುನರಾವರ್ತಿ ನೋಽರ್ಜುನ ।**
**ಮಾಮುಪೇತ್ಯ ತು ಕೌಂತೇಯ! ಪುನರ್ಜನ್ಮ ನ ವಿದ್ಯತೇ ॥**

**(ಪರಮಾತ್ಮ)**

**ಭಾವಾರ್ಥ :** ಬ್ರಹ್ಮಲೋಕ ಮೊದಲಾದ ಲೋಕಗಳನ್ನು ಹೊಂದಿದರೂ ಪುನರ್ಜನ್ಮ ಇದೆ. ನನ್ನನ್ನು ಹೊಂದಿದವನಿಗೆ ಪುನರ್ಜನ್ಮ ಇಲ್ಲ.

**ವಿವರ** : ಲೋಕಗಳು ಎಷ್ಟೋ ಇವೆಯೆಂದು ಅದರಲ್ಲಿ ಸ್ವರ್ಗಲೋಕವೆಂದು, ನರಕಲೋಕವೆಂದು ಅತಲ, ವಿತಲ, ಸುತಲ, ರಸಾತಲ, ಪಾತಾಳಲೋಕಗಳೆಂದು ವಿಧವಿಧಗಳಾಗಿ ಹೇಳಿಕೊಳ್ಳವುದು ನಾವು ಕೇಳಿದ್ದೇವೆ. ಆ ಲೋಕಗಳೆಲ್ಲವೂ ಊಹಾಗಾನಗಳೇ ಎಂದು ಹೇಳಬಹುದು. ಇರುವುದು ಮೂರೇಲೋಕಗಳು. ಊರ್ಧ್ವ, ಮಧ್ಯ, ಅಧಮ ಎನ್ನುವ ಮೂರು ಲೋಕಗಳಾಗಿ ವಿಭಜಿಸಲ್ಪಟ್ಟಿವೆ. ಅವು ಸಾತ್ತ್ವಿಕಲೋಕ, ರಾಜಸಲೋಕ, ತಾಮಸಲೋಕ. ಈ ಮೂರು ಲೋಕಗಳು ಭೂಮಿ ಮೇಲೆ ಜೀವಿಗಳ ಶರೀರದ ತಲೆಯಲ್ಲಿವೆ. ಮೇಲಿನ ಲೋಕದಲ್ಲಿ **"ಭುವನಾಲ್ಲೋಕಾಃ"** ಎಂದು ಹೇಳಲಾಗಿದೆ. ಅದಕ್ಕೆ ಪ್ರಪಂಚದಲ್ಲಿರುವ ಲೋಕಗಳೆಲ್ಲವೂ ಎಂದು ಅರ್ಥ. ಭೂಮಿ ಮೇಲಿರುವ ಲೋಕಗಳಲ್ಲಿ ದೊಡ್ಡದು ಸಾತ್ತ್ವಿಕ. ಇದು ದೊಡ್ಡದಾದ್ದರಿಂದ ಇದಕ್ಕೆ ಬ್ರಹ್ಮಲೋಕವೆಂದು ಹೆಸರಿಡಲಾಗಿದೆ. ಭೂಮಿ ಮೇಲೆ ಬ್ರಹ್ಮಲೋಕ ಮೊದಲಾದ ಲೋಕಗಳನ್ನು ಹೊಂದುವುದರಿಂದ ಜನ್ಮ ಉಂಟಾಗುತ್ತದೆನ್ನುವುದರಲ್ಲಿ, ಜೀವಾತ್ಮ ಯಾವ ಗುಣಭಾಗದಲ್ಲಿ ಪ್ರವೇಶಿಸಿದರೂ ಪುನರ್ಜನ್ಮ ತಪ್ಪುವುದಿಲ್ಲವೆಂದು ಭಗವಂತನು ತಿಳಿಸಿದ್ದಾನೆ. ಮೂರುಲೋಕಗಳು ಬಿಟ್ಟು ಅವುಗಳಲ್ಲಿ ಮಧ್ಯದಲ್ಲಿರುವ ಲೋಕಕ್ಕೆ ಹೋದವನು ನನ್ನಂತೆ ಆಗುತ್ತಾನೆಂದು, ಭಗವಂತನು ನವಿಲುಗರಿಯನ್ನು ತನ್ನ ಶಿರಸ್ಸಿನ ಮೇಲೆ ಇಟ್ಟುಕೊಂಡು ತೋರಿಸಿದ್ದಾನೆ. ಮೂರುಲೋಕಗಳು ಬಿಟ್ಟು ಅಲೋಕವನ್ನು ಸೇರಿದವನಿಗೆ ಪುನರ್ಜನ್ಮ ಇರುವುದಿಲ್ಲ. ಲೋಕಗಳಲ್ಲದ ಆಲೋಕ ನಮ್ಮ ಶರೀರದಲ್ಲಿಯೇ ಇದೆ. ಮೂರು ಗುಣಗಳ ಮಧ್ಯದಲ್ಲಿರುವುದು, ನವಿಲು ಗರಿಯಲ್ಲಿ ಮಧ್ಯದಲ್ಲಿ ತೋರಿಸಿರುವುದು ಲೋಕವಲ್ಲದ ಅಲೋಕವೆಂದು, ಅದೇ ಪರಮಾತ್ಮ ಸ್ಥಾನವೆಂದು, ಅದೇ ಮೋಕ್ಷಸ್ಥಾನವೆಂದು ತಿಳಿಯಬೇಕು.

**7) ಶ್ಲೋ॥ 17 : ಸಹಸ್ರ ಯುಗ ಪರ್ಯಂತ ಮಹರ್ಯದ್ಬ್ರಹ್ಮಣೋ ವಿದುಃ ।**
**ರಾತ್ರಿಂ ಯುಗ ಸಹಸ್ರಾನ್ತಾಂ ತೇಽಹೋ ರಾತ್ರವಿದೋ ಜನಾಃ ॥**
**(ಪರಮಾತ್ಮ)**

**ಭಾವಾರ್ಥ :** ಪರಮಾತ್ಮನಿಗೆ ಸಾವಿರಯುಗಗಳು ಒಂದು ಹಗಲಾಗಿ, ಸಾವಿರ ಯುಗಗಳು ಒಂದು ರಾತ್ರಿಯಾಗಿದೆ ಎಂದು ತಿಳಿದವರು ರಾತ್ರಿಹಗಲನ್ನು ತಿಳಿದುಕೊಳ್ಳುತ್ತಿದ್ದಾರೆ.

**ವಿವರ** : ಕಾಲ, ಕರ್ಮ, ಗುಣಚಕ್ರಗಳು ಒಂದೇ ಕೇಂದ್ರಕ್ಕೆ ಅಳವಡಿಸಲಾಗಿದೆ. ಕೆಳಗೆ ಗುಣಚಕ್ರವು ಮೂರು ಭಾಗಗಳಾಗಿ ಇದೆ. ಅದರ ಮೇಲೆ ಕರ್ಮಚಕ್ರ 12 ಭಾಗಗಳಾಗಿ

ಇದೆ. ಕರ್ಮಚಕ್ರದ ಮೇಲೆ ಕಾಲಚಕ್ರವೂ ಸಹ 12 ಭಾಗಗಳಾಗಿ ಇದೆ. ಈ ಮೂರುಚಕ್ರಗಳ ಮೇಲೆ ಎರಡು ಭಾಗಗಳಾಗಿರುವ ಬ್ರಹ್ಮಚಕ್ರವೆಂಬ ಹೆಸರಿರುವ ಮತ್ತೊಂದು ಚಕ್ರ ಇದೆ. ಇದು ಒಂದು ಸುತ್ತು ತಿರುಗುವುದಕ್ಕೆ ಎರಡುಸಾವಿರ ಯುಗಗಳ ಕಾಲ ಬೇಕಾಗುತ್ತದೆ. ಅರ್ಧಸುತ್ತು ತಿರುಗುವುದಕ್ಕೆ ಸಾವಿರಯುಗಗಳ ಕಾಲ ಬೇಕಾಗುತ್ತದೆ. ಈ ಚಕ್ರದಲ್ಲಿ ಅರ್ಧಭಾಗ ಹಗಲಾಗಿ, ಅರ್ಧಭಾಗ ರಾತ್ರಿಯಾಗಿದೆ.

ವಾರದಲ್ಲಿನ ಏಳು ದಿನಗಳಿಗೆ ಹೆಸರುಗಳು ಇರುವಂತೆ, ಯುಗಗಳು ನಾಲ್ಕು ಅವುಗಳಿಗೆ ಹೆಸರುಗಳು ಇವೆ. 1) ಕಲಿಯುಗ 2) ದ್ವಾಪರಯುಗ 3) ತ್ರೇತಾಯುಗ 4) ಕೃತಯುಗ. ಈ ನಾಲ್ಕು ಯುಗಗಳು ವಾರಗಳು ಬದಲಾದಂತೆ ಬದಲಾಗುತ್ತಾ ಕೃತಯುಗದಿಂದ ಪ್ರಾರಂಭವಾಗಿ ಕಲಿಯುಗದೊಂದಿಗೆ ಅಂತ್ಯವಾಗುತ್ತಿರುತ್ತದೆ. ಈ ನಾಲ್ಕು ಯುಗಗಳು 250 ಬಾರಿ ನಡೆದರೆ ಪರಮಾತ್ಮನಿಗೆ ಒಂದು ಹಗಲಾಗುತ್ತದೆ. ಹಾಗೆ 250 ಬಾರಿ ರಾತ್ರಿಯಾಗಿದೆ. ಪರಮಾತ್ಮ ವೊಂದರ ರಾತ್ರಿ ಹಗಲು ತಿಳಿದವರು, ನಮಗೆ ನಡೆಯುವ ರಾತ್ರಿ ಹಗಲು ಕಾಲದ ಪ್ರಕಾರ ಸಹ ವಿವರಿಸಿ ನೋಡಿಕೊಳ್ಳುತ್ತಾರೆ. ನಮಗೆ 1) ಕಲಿಯುಗ ಕಾಲ 4,32,000 ವರ್ಷಗಳು. 2) ದ್ವಾಪರಯುಗ 8,64,000 3) ತ್ರೇತಾಯುಗ 12,96,000 4) ಕೃತಯುಗ 17,28,000. ಈ ವಿಧವಾಗಿ ಒಟ್ಟು ನಾಲ್ಕು




**ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳ ಚಿತ್ರವು**

ಯುಗಗಳ ಕಾಲವು 43,20,000 ವರ್ಷಗಳಾಗುತ್ತವೆ. ನಾಲ್ಕುಯುಗಗಳು 250 ಬಾರಿ ನಡೆದರೆ 108 ಕೋಟಿ ವರ್ಷಗಳು ಆಗುತ್ತಿವೆ. ಬ್ರಹ್ಮ ಹಗಲು 108 ಕೋಟಿ ವರ್ಷಗಳು. ಅಂದರೆ ಪ್ರಪಂಚ ಆಯಸ್ಸು 108 ಕೋಟಿ ವರ್ಷಗಳೇ.

ಭೂಮಿಯಾಗಲಿ, ಆಕಾಶವಾಗಲಿ ಭೂಮಿ ಮೇಲೆ ಸಾಮ್ರಾಜ್ಯವಾಗಲಿ, ಮತಗಳಾಗಲಿ ಇರುವುದು 108 ಕೋಟಿ ವರ್ಷಗಳೆ ಎಂಬಮಾತು. ನೀನು ಈ ಪ್ರಪಂಚದಲ್ಲಿ ಆಡುವ ನಾಟಕಕ್ಕೆ ಕೊನೆಯದಾಗಿ ತೆರೆ ಬೀಳುವುದು 108 ಕೋಟಿ ವರ್ಷಗಳಿಗೆ. ಜೀವಾತ್ಮಗಳ ಸಾವು, ಹುಟ್ಟುಗಳ ಕಥೆ ಜರುಗುವುದು 108 ಕೋಟಿ ಸಂವತ್ಸರಗಳೆಂದು ತಿಳಿಯಬೇಕು. ಇದು ದೇವರು ಜೀವಿಗಳ ಹಿಂದೆ ಕಳುಹಿಸಿದ ಆಯುಃಕಾಲ. ಇದು ನಮ್ಮ ಆಯುವೊಂದರ ಧರ್ಮವೆಂದು ಎಲ್ಲಾರಿಗೂ ತಿಳಿಯುವಂತೆ, 108 ಸಂಖ್ಯೆ ಏನೆಂದು ತಿಳಿಯದವರು ಯೋಚಿಸುವಂತೆ, ತಿಳಿದವರು ಮರೆತು ಹೋಗದಂತಿರಲು, ಪ್ರತಿ ದೈವಾರಾಧನೆಯಲ್ಲಿಯೂ, ನಾಮ ಜಪದಲ್ಲಿಯೂ, ಮಂತ್ರ ಜಪದಲ್ಲಿಯೂ 108 ಮಾಡಬೇಕೆಂದು, ಕಾಣಿಕೆ ಮಾಡುವ ಸ್ವತ್ತಾಗಲಿ 108 ಸಂಖ್ಯೆ ಇರುವಂತೆ ತಿಳಿಸಿದ್ದಾರೆ. ಅಷ್ಟೇ ಅಲ್ಲದೆ 108 ಸಂಖ್ಯೆಗೂ ನಮಗೂ ಬಹಳ ಅಮೂಲ್ಯವಾದ ಹತ್ತಿರ ಸಂಬಂಧ ಒಂದಿದೆ. ಅದು ಹೇಗೆಂದರೆ ನಮ್ಮ ಶರೀರದಲ್ಲಿ ಆಸೆ, ಕೋಪ, ಲೋಭ, ಮೋಹ, ಗರ್ವ, ಅಸೂಯೆ ಎನ್ನುವ ಆರು ಕೆಟ್ಟ ಗುಣಗಳು ಇವೆ. ಅವುಗಳಿಗೆ ವಿರುದ್ಧವಾದ ಆರು ಒಳ್ಳೆಯ ಗುಣಗಳು ಸಹ ಇವೆ. ಅಸೂಯೆಗೆ ಪ್ರೇಮ ವಿರುದ್ಧವಾದಂತೆ ಆರಕ್ಕೆ ಆರು ವಿರುದ್ಧ ಗುಣಗಳು ಇವೆ. ಇವೆಲ್ಲವೂ ಶರೀರದಲ್ಲಿ ಇರುವುದರಿಂದ ಇವುಗಳ ಮೇಲೆ ಕರ್ಮ, ಕರ್ಮದಮೇಲೆ ಗ್ರಹಗಳು ಅಧಿಕಾರ ಹೊಂದಿವೆ. ಆದ ಕಾರಣ ನವಗ್ರಹಗಳನ್ನು ಅನುಸರಿಸಿ ಕರ್ಮ, ಕರ್ಮವನ್ನು ಅನುಸರಿಸಿ ಗುಣಗಳು ಸ್ಪಂದಿಸುತ್ತಿರುತ್ತವೆ. ನವಗ್ರಹಗಳ ಪ್ರಭಾವ ಕರ್ಮದ ಮೂಲಕ ಗುಣಗಳ ಮೇಲೆ ಇದೆ. ಆದಿತ್ಯಾದಿ 9 ಗ್ರಹಗಳು, ಗುಣಗಳನ್ನೂ ಸಹ ಒಂದೊಂದನ್ನು 9 ವಿಧಗಳಾಗಿ ವಿಭಜಿಸಿವೆ. ಆಸೆ 9 ಸ್ಥಾನಗಳಲ್ಲಿರುವಾಗ, ಹಾಗೆ ಉಳಿದ ಗುಣಗಳೂ ಸಹ 9 ಸ್ಥಾನಗಳಾಗಿ ಇವೆ. ಆದ್ದರಿಂದಲೆ ನಮಗೆ ಬರುವ ಕೋಪಗಳಲ್ಲಿ ದೊಡ್ಡವಿಧದ ಕೋಪ, ಚಿಕ್ಕ ವಿಧದ ಕೋಪ ಇದೆ. ಹಾಗೆ ದೊಡ್ಡ ಆಸೆಯಿದೆ ಚಿಕ್ಕ ಆಸೆಯಿದೆ. ಉಳಿದ ಎಲ್ಲಾ ಗುಣಗಳು ಹಾಗೆಯೆ ಇವೆ. ಇದು ಪ್ರತ್ಯಕ್ಷವಾಗಿ ಕಾಣಿಸುವ ವಿಷಯವೆ. ಈ ವಿಧವಾಗಿ ನಮ್ಮ ಶರೀರದಲ್ಲಿ ಕೆಟ್ಟ ಗುಣಗಳು ಆರು ಒಂದೊಂದು ಒಂಭತ್ತಾಗಿ ಸೀಳಿಹೋಗಿ, ಹಾಗೆ ಅವುಗಳಿಗೆ ವಿರುದ್ಧವಾದ ಆರು ಒಳ್ಳೆಯ ಗುಣಗಳು ಸಹ ಸೀಳಿಹೋಗಿವೆ. ಒಂದು

ವರ್ಗವಾದ ಆರು ಗುಣಗಳ ಸೀಳಿಕೆಗಳೆಷ್ಟೆಂದು ಲೆಕ್ಕಿಸಿ ನೋಡಿದರೆ 6X9=54 ಆಗುತ್ತವೆ. ಹಾಗೆ ಮತ್ತೊಂದು ವರ್ಗವನ್ನು ಗುಣಿಸಿ ನೋಡಿದರೆ 6X9=54 ಆಗುತ್ತದೆ. ಈ ವಿಧವಾಗಿ ಒಂದು ಗುಣಭಾಗದಲ್ಲಿನ ಎಲ್ಲಾ ಗುಣಗಳ ಸಂಖ್ಯೆ 108 ಎಂದು ತಿಳಿಯುತ್ತಿದೆ.

ಪ್ರಪಂಚ ಆಯಸ್ಸು 108 ಕೋಟಿಗಳ ವರ್ಷಗಳನ್ನು ಅನುಸರಿಸಿಯೇ ಮಾನವರ ಜೀವನವನ್ನು ನಡೆಸುವ ಗುಣಗಳ ಸಂಖ್ಯೆ 108 ಇರುವಂತೆ ದೇವರು ಸರಿಮಾಡಿ ಇಟ್ಟಿದ್ದಾನೆ. ಗಣಿತದಲ್ಲಿ ಅತಿ ದೊಡ್ಡ ಸಂಖ್ಯೆ ಕೋಟಿ. ಗಣಿತದಲ್ಲಿನ 108 ಕೋಟಿಗಳು ಜ್ಞಾಪಕ ಇರುವಂತೆ 108 ಆಲೋಚನಾ ವಿಕಾರಗಳನ್ನು ನಮ್ಮ ಶರೀರದಲ್ಲಿ ಇಟ್ಟಿದ್ದಾನೆ. ಆ ವಿಕಾರಗಳು ಗುಣಿತದಿಂದ ಬಂದಿರುವವು. ಆದ ಕಾರಣ ಹತ್ತಿರ ಪದವಾದ ಗುಣಿತದಿಂದ ಉದ್ಭವಿಸಿರುವುದಾಗಿ ಕಾಣಿಸುವಂತೆ ಅವುಗಳನ್ನು **'ಗುಣಗಳು'** ಎಂದಿದ್ದಾರೆ. ಈ ವಿಧವಾಗಿ ಶರೀರದಲ್ಲಿರುವ ಯೋಚನೆಗಳಿಗೆ ಗುಣಗಳೆಂಬ ಹೆಸರು ಬಂದಿದೆ. ಇಷ್ಟು ವಿಧಗಳಾಗಿ ದೊಡ್ಡವರು ಯೋಚಿಸಿ ಗುಣಗಳೆಂದು ಪ್ರತ್ಯೇಕವಾದ ಹೆಸರಿಟ್ಟು ಅವುಗಳೊಂದರ 108 ಸಂಖ್ಯೆಯನ್ನೂ ಸಹ ಪ್ರತ್ಯೇಕವಾಗಿಟ್ಟಿದ್ದಾರೆ. 108 ಕೋಟಿ ವರ್ಷಗಳು 108 ಗುಣಗಳಿಂದ ಜೀವನವನ್ನು ಕಳೆಯಬೇಕೆಂದು ಗುರುತಿಸುವಂತೆ ನಾವು ಜಪಿಸುವ ಜಪಮಾಲೆಯಲ್ಲಿ 108 ಮಣಿಗಳನ್ನು ಇಟ್ಟಿದ್ದಾರೆ. ಆದರೂ ನಮ್ಮ ಹಿರಿಯರು ತಿಳಿಸಿದ ವಿಧಾನ ಸ್ವಲ್ಪ ಮರೆಯಾಗಿದೆ. ಜೀವಾತ್ಮದ ಹಿಂದೆ ಕಳುಹಿಸಿದ ಆಯುವೊಂದರ ಧರ್ಮ ಅಧರ್ಮವಾಗಿ ಬದಲಾಗಿಹೋಗುತ್ತಿದೆ. ಜಪಮಾಲೆಯಲ್ಲಿ 108 ಸಂಖ್ಯೆ ಇನ್ನೂ ಉಳಿದಿದ್ದರೂ, ಅದರ ಅರ್ಥ ತಿಳಿಯದಂತೆಹೋಗಿದೆ. ಕಾಣಿಕೆ ಕೊಡುವುದರಲ್ಲಿಯೂ, ಮುಡುಪುಗಳು ಕಟ್ಟುವುದರಲ್ಲಿಯೂ, ಮದುವೆಯಲ್ಲಿ ಉಡುಗೊರೆ ಕೊಡುವುದರಲ್ಲಿಯೂ 108ಕ್ಕೆ ಬದುಲು 116 ಬಂದಿದೆ. ದೇವರ ಧರ್ಮಗಳಲ್ಲಿ ಮುಖ್ಯವಾದ ಆಯುಃಧರ್ಮವು ಹೀಗೆ ಅಧರ್ಮವಾಗಿ ಬದಲಾಗುವುದಕ್ಕೆ ಹತ್ತಿರವಾಗುತ್ತದೆ. ಈ ವಿಧವಾಗಿ 108 ಕೋಟಿ ವರ್ಷಗಳು ಜೀವಾತ್ಮನೊಂದಿಗೆ ಸಂಬಂಧ ಏರ್ಪಡಿಸಿಕೊಂಡಿವೆ. 108 ಕೋಟಿ ವರ್ಷಗಳು ಜಗತ್ತು ಇರುವ ಕಾಲಕ್ಕೆ ಹಗಲು, ಜಗತ್ತಿಲ್ಲದ ವಿರಾಮ ಕಾಲಕ್ಕೆ ರಾತ್ರಿ ಎನ್ನುವ ಹೆಸರು ಇಡುವುದರಲ್ಲಿ ಅಂತರಾರ್ಥವೇನೋ ನೋಡೋಣ.

**(7) ಶ್ಲೋ॥ 18 : ಅವ್ಯಕ್ತಾ ದ್ವ್ಯಕ್ತಯ ಸರ್ವಾಃ ಪ್ರಭವನ್ತ್ಯ ಹರಾಗಮೇ ।**

**ರಾತ್ರ್ಯಾಗಮೇ ಪ್ರಲೀಯನ್ತೇ ತತ್ರೈವಾ ಽವ್ಯಕ್ತ ಸಂಜ್ಞಕೇ ॥**

**(ಪರಮಾತ್ಮ, ಜೀವಾತ್ಮ)**

**ಭಾವಾರ್ಥ :** ಬ್ರಹ್ಮಹಗಲು ಜಗತಿಯಾಗಿ ಬದಲಾಗುತ್ತಾ ಕಾಣಿಸುವ ಸರ್ವವೂ ಅವ್ಯಕ್ತದಿಂದ ಹುಟ್ಟಿವೆ. ಹಾಗೆ ಬ್ರಹ್ಮರಾತ್ರಿಯಲ್ಲಿ ಜಗತ್ತೆಲ್ಲವೂ ಪ್ರಳಯಹೊಂದಿ ಕಾಣಿಸುತ್ತಿರುವವೆಲ್ಲವೂ ಕಾಣಿಸದಂತೆ ಹೋಗುತ್ತಿವೆ.

**ವಿವರ :** ಕಾಲಚಕ್ರದ ಮೇಲೆ ತಿರುಗುವ ಬ್ರಹ್ಮಚಕ್ರದಲ್ಲಿ ಅರ್ಧ ಹಗಲಾಗಿ ಪ್ರಾರಂಭವಾದಾಗ ಜಗತ್ತೆಲ್ಲವೂ ಏರ್ಪಟ್ಟು ಕಾಣಿಸುತ್ತಿದೆ. ಅಲ್ಲಿಯವರೆಗೂ ಅವ್ಯಕ್ತವಾಗಿ ಕಾಣಿಸದಂತಿರುವ ಜಗತೆಲ್ಲವೂ ಕಾಣಿಸುತ್ತಿದೆ. ಕಾಣಿಸದಿರುವುದೆಲ್ಲ ಕ್ರಮೇಪಿ ಕಾಣಿಸುತ್ತಾಬಂದು ಸ್ವಲ್ಪ ಕಾಲಕ್ಕೆ ಪೂರ್ತಿ ಪ್ರಪಂಚ ಏರ್ಪಡುತ್ತದೆ. ಹಾಗೆ ಏರ್ಪಟ್ಟ ಪ್ರಪಂಚವು ಸಾವಿರ ಯುಗಗಳ ಕಾಲ ಜೀವಾತ್ಮಗಳ ಸಂತತಿಯಿಂದ ತುಂಬಿಹೋಗುತ್ತದೆ. ಸಾಯುತ್ತಾ ಹುಟ್ಟುತ್ತಿರುವ ಜೀವಾತ್ಮಗಳ ಚರಿತ್ರೆ ಸಾವಿರಯುಗಗಳು ಕಳೆದಾಗ ಪ್ರಳಯವೇರ್ಪಟ್ಟು ಪ್ರಪಂಚವೆಲ್ಲವೂ ಕೊನೆಗೆ ಅದೃಶ್ಯವಾಗಿ ಹೋಗುತ್ತದೆ. **ಪ್ರ ಎಂದರೆ ವಿಶೇಷವಾಗಿರುವುದು. ಪಂಚವೆಂದರೆ ಐದು, ಪಂಚಭೂತಗಳಿಂದ ಏರ್ಪಟ್ಟಿರುವುದಾದ್ದರಿಂದ ಜಗತ್ತನ್ನು ಪ್ರಪಂಚ ಎಂದಿದ್ದಾರೆ.** ಹುಟ್ಟಿರುವುದೆಲ್ಲವೂ ನಾಶವಾಗುವುದನ್ನು ಪ್ರಳಯ ಎಂದಿದ್ದಾರೆ. ಪ್ರಭವ, ಪ್ರಳಯಗಳಿಂದ ಪರಮಾತ್ಮವೊಂದರ ಹಗಲು ರಾತ್ರಿಗಳು ಕಳೆಯುತ್ತಿವೆ.

**(7) ಶ್ಲೋ॥ 19 : ಭೂತಗ್ರಾಮಃ ಸ್ಸ ಏವಾಯಂ ಭೂತ್ವಾ ಭೂತ್ವಾ ಪ್ರಲೀಯತೇ ।**

**ರಾತ್ರ್ಯಾಗಮೇ ಽವಶಃ ಪಾರ್ಥ! ಪ್ರಭವ ತ್ಯಹರಾಗಮೇ ॥**

**(ಜೀವಾತ್ಮ)**

**ಭಾವಾರ್ಥ :** ಸರ್ವಜೀವರಾಶಿಗಳು ಬ್ರಹ್ಮ ಹಗಲಲ್ಲಿ ಹುಟ್ಟಿ ಹುಟ್ಟಿ ಕೊನೆಗೆ ರಾತ್ರಿಯಾದ ತಕ್ಷಣ ಪ್ರಳಯ ಹೊಂದಿ ನಾಶವಾಗಿ ಕಾಣಿಸದಂತಾಗಿ ಮತ್ತೆ ಹಗಲು ಪ್ರಾರಂಭವಾದ ತಕ್ಷಣ ಹುಟ್ಟುತ್ತಿವೆ.

**(7) ಶ್ಲೋ॥ 20 : ಪರಸ್ತಸ್ಮಾತ್ತು ಭಾವೋ ಽನ್ಯೋ ಽವ್ಯಕ್ತೋ ಽವ್ಯಕ್ತಾತ್ಸನಾತನಃ ।**

**ಯಸ್ಸಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ॥**

**(ಪರಮಾತ್ಮ)**

**ಭಾವಾರ್ಥ :** ನಾಶವಿಲ್ಲದ, ಬದಲಾಗದ, ಪ್ರಕೃತಿಗಿಂತ ಬೇರೆಯಾದ, ಶ್ರೇಷ್ಠವಾದ, ಜಗತ್ತು ನಾಶವಾದರು ತಾನು ನಾಶವಾಗದ ಅನ್ಯವಾಗಿರುವ ಸ್ಥಿತಿ ಒಂದು ಕಾಣಿಸದಂತಿದೆ.

**ವಿವರ :** ಪ್ರಳಯದಲ್ಲಿ ಸರ್ವ ಜಗತ್ತನ್ನು ಅದರಲ್ಲಿನ ಸರ್ವಜೀವರಾಶಿಗಳನ್ನು ಕಾಣಿಸುವುದು ಎಲ್ಲವೂ ನಾಶವಾಗಿ ಏನೂ ಇಲ್ಲದಂತೆ ಹೋಗುವುದು ಸಂಭವಿಸುತ್ತದೆ. ಪಂಚಭೂತಗಳಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿಯೂ ಸಹ ಇರುವುದಿಲ್ಲ. ನಿನಗೂ ನನಗೂ ಮಧ್ಯದಲ್ಲಿರುವ ಬಯಲು ಸಹ ಇಲ್ಲದ ಸ್ಥಿತಿ ಅಂದರೆ ಅದು ಹೇಗಿರುತ್ತದೋ ಊಹಿಸುವುದಕ್ಕೂ ಸಾಧ್ಯವಾಗುವುದಿಲ್ಲ. ಶೂನ್ಯವೂ ಸಹ ಅಲ್ಲದಿರುವುದು ಹೇಗೆ ಇರುತ್ತದೋ ಅಗಮ್ಯಗೋಚರ. ಆ ಸ್ಥಿತಿಯಲ್ಲಿಯೂ ಸಹ ನಾಶವಾಗದಿರುವುದು ಒಂದಿದೆ. ಪ್ರಪಂಚವೆಲ್ಲವೂ ಲಯವಾಗಿ ಹೋದರೂ ಲಯವಾಗದ ಅನ್ಯವಾದುದೇನೋ ಕೆಳಗಿನ ಶ್ಲೋಕದಲ್ಲಿ ನೋಡೋಣ.

**(7) ಶ್ಲೋ॥ 21 : ಅವ್ಯಕ್ತೋಽಕ್ಷರ ಇತ್ಯುಕ್ತ ಸ್ತಮಾಹುಃ ಪರಮಾಂ ಗತಿಮ್ ।**
**ಯಂ ಪ್ರಾಪ್ಯ ನ ನಿವರ್ತನ್ತೇ ತದ್ಧಾಮ ಪರಮಂ ಮಮ ॥**

**(ಪರಮಾತ್ಮ)**

**ಭಾವಾರ್ಥ :** ಅದನ್ನೇ ಕಾಣಿಸದ ನಾಶವಿಲ್ಲದ ಸ್ಥಿತಿ ಎನ್ನುತ್ತಿದ್ದೇವೆ. ಪರಮಗತಿ ಆದುದರಿಂದ ಅದನ್ನು ತಿಳಿಯಬೇಕು, ಹೊಂದಬೇಕು. ಅದು ಲಭಿಸಿದರೆ ಜನ್ಮಗಳು ಇಲ್ಲದಂತೆ ಹೋಗುತ್ತವೆ. ಅದನ್ನೇ ನನ್ನದಾಗುವ ನಿಯಮ ಸ್ಥಾನವೆಂದು, ಪರಂಧಾಮವೆಂದು ಹೇಳಬಹುದು.

**ವಿವರ :** ಪ್ರಪಂಚವೆಲ್ಲವೂ ನಾಶವಾದರು ನಾಶವಾಗದ ಕಾಣಿಸದ ಸ್ಥಿತಿಯನ್ನೇ ಮೋಕ್ಷ ಎನ್ನುತ್ತೇವೆ. ಶ್ರೇಷ್ಠವಾದ ಗತಿ ಅದೇ ಆಗಿರುವುದರಿಂದ ಅದನ್ನು ಹೊಂದುವುದೇ ಮಾನವನ ಲಕ್ಷ್ಯ. ಲಕ್ಷ್ಯವಾದುದ್ದನ್ನು ಎಷ್ಟೋ ಜನ್ಮಗಳು ಪ್ರಯತ್ನಮಾಡಿ ಹೊಂದಿದಂತಾದರೆ ಇನ್ನು ಜನ್ಮಗಳಿರುವುದಿಲ್ಲ. ಜನ್ಮಗಳಿಲ್ಲದ ಆ ಸ್ಥಾನವು ಅಥವಾ ಆ ಸ್ಥಿತಿಯನ್ನೇ ಪರಮಾರ್ಥ ಎನ್ನುತ್ತೇವೆ. ಅದೇ ಪರಮಾತ್ಮವೆಂದು ಅದಕ್ಕಿಂತ ಬೇರೆ ದೈವವು ಇಲ್ಲವೆಂದು ತಿಳಿಯಬೇಕು. ಪರಮಾತ್ಮ ತಾನಾಗಿ ಬದಲಾಗುವ ಸ್ಥಿತಿಗೆ ಯಾವುದೂ ಸಮಾನವಲ್ಲ. ಎಲ್ಲದಕ್ಕಿಂತ ದೊಡ್ಡದಾದ ಲಾಭವನ್ನು ಬಿಟ್ಟು ಸ್ವಲ್ಪ ಸಮಯ ಕಾಣಿಸಿ ತನ್ನ ಹಿಂದೆ ಬಾರದಿರುವ ಹಣ, ಬಂಗಾರದ ಮೇಲೆ ಆಸೆ ಇಟ್ಟುಕೊಳ್ಳುವುದು ತಿಳುವಳಿಕೆ ಇಲ್ಲದಿರುವುದಲ್ಲವೆ!

**(7) ಶ್ಲೋ॥ 22 : ಪುರುಷ ಸ್ಸ ಪರಃ ಪಾರ್ಥ! ಭಕ್ತ್ಯಾ ಲಭ್ಯ ಸ್ತ್ವನನ್ಯಯಾ ।**
**ಯ ಸ್ಯಾನ್ತಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಮ್ ॥**
**(ಪರಮಾತ್ಮ)**

**ಭಾವಾರ್ಥ :** ಸರ್ವ ಜೀವರಾಶಿಗಳು ಯಾರೊಳಗಿವೆಯೋ, ಈ ಜಗತ್ತೆಲ್ಲವೂ ಯಾರಿಂದ ವ್ಯಾಪಿಸಿದೆಯೊ ಅಂತಹ ಪುರುಷನನ್ನು ಅನನ್ಯವಾದ ಭಕ್ತಿಯಿಂದ ಹೊಂದಬಹುದು.

**ವಿವರ :** ಪರಮಾತ್ಮ ಅಣುಅಣುವಿನಲ್ಲಿ ಪ್ರಪಂಚವೆಲ್ಲ ವ್ಯಾಪಿಸಿರುವುದರಿಂದ ಸರ್ವಜೀವರಾಶಿಗಳು ಪರಮಾತ್ಮನಲ್ಲಿಯೇ ಇವೆ. ಪ್ರಪಂಚವೆಲ್ಲ ಸೂಕ್ಷ್ಮವಾಗಿ ಪರಮಾತ್ಮನೇ ವ್ಯಾಪಿಸಿದ್ದಾನೆ. ಅಷ್ಟು ದೊಡ್ಡ ಪರಮಾತ್ಮನನ್ನು ನಮಗಿರುವ ಚಿಕ್ಕ ಶರೀರದೊಳಗೆ ಅನ್ಯವಾದ ಚಿಂತೆ ಇಲ್ಲದ ಭಕ್ತಿಯಿಂದಲೇ ಹೊಂದಬಹುದು.

**(7) ಶ್ಲೋ॥ 23 : ಯತ್ರಕಾಲೇ ತ್ವನಾ ವೃತ್ತಿಮಾವೃತ್ತಿಂ ಚೈವ ಯೋಗಿನಃ ।**
**ಪ್ರಯಾತಾ ಯಾನ್ತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ! ॥**
**(ಜೀವಾತ್ಮ, ಮೋಕ್ಷ)**

**ಭಾವಾರ್ಥ :** ಯೋಗಿಗಳು ಯಾವ ಕಾಲದಲ್ಲಿ ಮರಣಿಸಿದರೆ ಪುನಃ ಹುಟ್ಟುತ್ತಿದ್ದಾರೋ, ಯಾವ ಕಾಲದಲ್ಲಿ ಮರಣಿಸಿದರೆ ಮತ್ತೆ ಹುಟ್ಟದೆ ಮೋಕ್ಷ ಹೊಂದುತ್ತಿದ್ದಾರೋ, ಅವರು ಶರೀರವನ್ನು ಬಿಟ್ಟುಹೋಗುವ ಆ ಕಾಲವನ್ನು ಹೇಳುತ್ತಿದ್ದೇನೆ.

**ವಿವರ :** ಒಂದು ಪಂದ್ಯದಲ್ಲಿ ಆಟವಾಡುವವನನ್ನು ಅವನು ಗೆದ್ದಿದ್ದಾನೋ ಇಲ್ಲವೋ ಎಂದು ನೋಡಬಹುದು. ಪಂದ್ಯಕ್ಕೆ ಸೇರದವನನ್ನು ಗೆದ್ದಿದ್ದಾನೋ ಇಲ್ಲವೋ ನೋಡಬೇಕಾದ ಅವಶ್ಯಕತೆ ಇಲ್ಲ. ಹಾಗೆ ನದಿಯಲ್ಲಿ ಇಳಿದವನನ್ನು ಆಚೆ ದಡಕ್ಕೆ ಸೇರಿದ್ದಾನಾ ಇಲ್ಲವಾ ಎಂದು ನೋಡಬೇಕು. ನದಿಯಲ್ಲಿ ಇಳಿಯದವನನ್ನು ಅಸಲಿಗೆ ನೋಡಬೇಕಾದ ಅಗತ್ಯವೇ ಇಲ್ಲ. ಆ ವಿಧವಾಗಿಯೆ ಮೋಕ್ಷವನ್ನು ಹೊಂದಬೇಕೆಂದು ಪ್ರಯತ್ನ ಮಾಡುವ ಯೋಗಿಗಳನ್ನು ಮರಣ ಸಮಯದಲ್ಲಿ ಮೋಕ್ಷ ಹೊಂದುತ್ತಿದ್ದಾನಾ ಇಲ್ಲವಾ ಎಂದು ನೋಡಬಹುದು. ಅಸಲು ಪ್ರಯತ್ನವೇ ಮಾಡದ ಯೋಗಿಗಳಲ್ಲದವರನ್ನು ಕುರಿತು ಅವರ ಮರಣ ಸಮಯ ಯಾವುದೆಂದು ನೋಡಬೇಕಾದ ಅಗತ್ಯವಿಲ್ಲ. ಶ್ಲೋಕದಲ್ಲಿಯೂ ಸಹ **'ಯೋಗಿನಃ'** ಎನ್ನುವ ಪದವನ್ನು ಉಪಯೋಗಿಸಿ ಇದು ಯೋಗಿಗಳಿಗೆ ಮಾತ್ರವೆ ಎಂದು ತಿಳಿದುಕೊಳ್ಳುವಂತೆ ಹೇಳಿದ್ದಾರೆ.

ಯೋಗಿಗಳಾದ ಮಾತ್ರಕ್ಕೆ ಆ ಜನ್ಮದಲ್ಲಿಯೇ ಮೋಕ್ಷ ಹೊಂದುತ್ತಾರೆಂದು ತಿಳಿಯುವುದು ತಪ್ಪು. ಎಷ್ಟೋ ಜನ್ಮಗಳು ಪ್ರಯತ್ನ ಮಾಡುವುದರಿಂದ, ಯೋಗಿಗಳಾದರೂ ಕೆಲವು ಜನ್ಮಗಳವರೆಗೂ ಕರ್ಮಸುಟ್ಟು ಹೋಗುವುದಕ್ಕೆ ಸಮಯ ಬೇಕಾಗುವುದರಿಂದ, ಅಲ್ಲಿಯವರೆಗೂ ಮೋಕ್ಷ ಹೊಂದಲಾರರು. ಆದ್ದರಿಂದಲೇ ಯೋಗಿಗಳು ಮೋಕ್ಷ ಹೊಂದುವ ಮರಣ ಕಾಲ ಯಾವುದೋ, ಹೊಂದದ ಮರಣ ಕಾಲ ಯಾವುದೋ ಹೇಳುತ್ತೇನೆಂದು ಭಗವಂತನು ಆ ಕಾಲವನ್ನು ತಿಳಿಸುತ್ತಿದ್ದಾನೆ. ಯೋಗಿಗಳು ಮೋಕ್ಷ ಹೊಂದಿ ಜನ್ಮಿಸದ ಮರಣಕಾಲವನ್ನು, ಯೋಗಿಗಳು ಮೋಕ್ಷ ಹೊಂದದೆ ಮತ್ತೆ ಜನ್ಮಿಸುವ ಮರಣಕಾಲವನ್ನು ತಿಳಿದುಕೊಳ್ಳೋಣ.

**(7) ಶ್ಲೋ॥ 24 : ಅಗ್ನಿರ್ಜ್ಯೋತಿ ರಹ ಶುಕ್ಲಷ್ಷಣ್ಮಾಸಾ ಉತ್ತರಾಯಣಮ್ ।**
**ತತ್ರಪ್ರಯಾತಾಗಚ್ಛನ್ತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥**
**(ಜೀವಾತ್ಮ, ಮೋಕ್ಷ)**

**ಭಾವಾರ್ಥ :** ಯೋಗಿ ಆದವನು ಯಾವ ಪ್ರಾಂತದಲ್ಲಿ ಇದ್ದು ಮರಣ ಹೊಂದುತ್ತಿದ್ದಾನೋ ಆ ಪ್ರಾಂತದ ಮೇಲೆ ಸೂರ್ಯಪ್ರಕಾಶ ಬೀರಬೇಕು. ಮೇಘಗಳ ನೆರಳು ಇರಬಾರದು. ಯೋಗಿ ಮರಣಿಸುವ ಸಮಯ ಹಗಲಾಗಿದ್ದು, ಆ ಹಗಲು ಶುಕ್ಲಪಕ್ಷ ದೊಳಗಿನದಾಗಿರಬೇಕು. ಆ ಶುಕ್ಲಪಕ್ಷವು ಉತ್ತರಾಯಣ ದೊಳಗಿನದಾಗಿರಬೇಕು. ಈ ವಿಧವಾಗಿ ಸೂರ್ಯ ತೇಜಸ್ಸು ಇರುವ ಹಗಲು, ಶುಕ್ಲಪಕ್ಷ, ಉತ್ತರಾಯಣ ಕೂಡಿದ ಕಾಲದಲ್ಲಿ ಮರಣಿಸಿದ ಯೋಗಿ ಜನ್ಮಿಸದೇ ಮೋಕ್ಷ ಹೊಂದಿ ಪರಮಾತ್ಮನಲ್ಲಿ ಐಕ್ಯವಾಗುತ್ತಿದ್ದಾನೆ.

**ವಿವರ :** ಸರ್ವ ಜೀವರಾಶಿಗಳಿಗೆ ಬ್ರಹ್ಮನಾಡಿಯಲ್ಲಿ ಆತ್ಮವಿದೆ. ಬ್ರಹ್ಮನಾಡಿವೊಂದರ ಸಪ್ತಸ್ಥಾನದಲ್ಲಿ ಆತ್ಮಶಕ್ತಿ ಕೇಂದ್ರೀಕೃತವಾಗಿದೆ. ಸಪ್ತಸ್ಥಾನದಲ್ಲಿ ಕೇಂದ್ರವಾಗಿ ಮಾಡಿಕೊಂಡು ಅದರ ಸುತ್ತ ಕರ್ಮ, ಕಾಲಚಕ್ರಗಳು ತಿರುಗುತ್ತಿವೆ. ಕಾಲಚಕ್ರದಲ್ಲಿ ರಾತ್ರಿಹಗಲು, ಶುಕ್ಲಕೃಷ್ಣ ಪಕ್ಷಗಳು, ಮಾಸಗಳು, ಉತ್ತರ ದಕ್ಷಿಣಾಯಣಗಳು, ಸಂವತ್ಸರಗಳು ನಡೆಯುತ್ತಲೇ ಇವೆ. ರಾತ್ರಿಹಗಲು ಪ್ರಾರಂಭಗೊಂಡು ಸಂವತ್ಸರ ಕಾಲದವರೆಗೂ ಕರ್ಮವನ್ನು ಜೀವರಾಶಿಗಳು ಅನುಭವಿಸುತ್ತಿವೆ. ಕಾಲಚಕ್ರದಲ್ಲಿ ರಾತ್ರಿಹಗಲು ಹೇಗೆ ಸಂಭವಿಸುತ್ತಿವೆ ಎಂದರೆ! ಕರ್ಮಚಕ್ರದಲ್ಲಿರುವ ಭಾಗಗಳನ್ನು ಸೂರ್ಯನು ದಾಟುತ್ತಾ ಪ್ರಯಾಣ ಮಾಡುತ್ತಿದ್ದಾನೆ. ಒಂದೊಂದು ಭಾಗವನ್ನು ದಾಟುವುದಕ್ಕೆ ಎರಡು ಗಂಟೆಗಳ ಕಾಲ ಬೇಕಾಗುತ್ತದೆ. ಸೂರ್ಯೋದಯದಿಂದ ಪ್ರಾರಂಭಗೊಂಡು ಆರು ಭಾಗಗಳು ದಾಟುವುದಕ್ಕೆ ಹನ್ನೆರಡು ಗಂಟೆಗಳು ಬೇಕಾಗುತ್ತದೆ. ಇದನ್ನು ನಾವು

ಹಗಲು ಎನ್ನುತ್ತಿದ್ದೇವೆ. ಹಾಗೆ ಉಳಿದ ಆರು ಭಾಗಗಳು ದಾಟುವುದಕ್ಕೆ ಹನ್ನೆರಡು ಗಂಟೆಗಳ ಕಾಲ ಬೇಕಾಗುತ್ತದೆ. ಇದನ್ನೇ ರಾತ್ರಿ ಎನ್ನುತ್ತಿದ್ದೇವೆ. ನಮ್ಮ ಕಪಾಳದಲ್ಲಿರುವ ಕರ್ಮಚಕ್ರವನ್ನು ದಾಟುತ್ತಾ ಸೂರ್ಯನು ಕಾಲಚಕ್ರದಲ್ಲಿ ಪ್ರಯಾಣಿಸುತ್ತಿದ್ದಾನೆ. ಹೀಗೆ ಕಾಲಚಕ್ರದಲ್ಲಿ ಪ್ರಯಾಣಿಸುತ್ತಾ ಕರ್ಮಚಕ್ರವು ಹನ್ನೆರಡು ಭಾಗಗಳನ್ನು ದಾಟುವುದಕ್ಕೆ 24 ಗಂಟೆಗಳ ಕಾಲ ಬೇಕಾಗುತ್ತದೆ. 24 ಗಂಟೆಗಳನ್ನು ಒಂದು ದಿನ ಎಂದು ಕರೆಯುತ್ತಿದ್ದೇವೆ. ಕರ್ಮಚಕ್ರದಲ್ಲಿ ಮಧ್ಯರೇಖೆ ಇದೆ. ಮಧ್ಯರೇಖೆಗೆ ಎಡಭಾಗದಲ್ಲಿ ಆರು ಭಾಗಗಳು ಹಗಲು, ಬಲಗಡೆ ಆರು ಭಾಗಗಳು ರಾತ್ರಿಯಾಗಿ ಸೂರ್ಯ ಭ್ರಮಣದಲ್ಲಿ ತಿಳಿಯುತ್ತಿದೆ. ಹಗಲು, ರಾತ್ರಿ ಕೆಳಗಿನ ಚಿತ್ರದಲ್ಲಿ ನೋಡಿರಿ.




**ಕರ್ಮಚಕ್ರ**

ಸೂರ್ಯನು ಕಾಲಚಕ್ರದಲ್ಲಿ ಪರಿಭ್ರಮಿಸುತ್ತಿದ್ದಾನೆ ಅಲ್ಲವೆ! ಕಾಲಚಕ್ರವು ಹನ್ನೆರಡು ಭಾಗಗಳು ಅಲ್ಲವೆ! ಸೂರ್ಯನು ಒಂದೊಂದು ಭಾಗವನ್ನು ದಾಟುವುದಕ್ಕೆ ಒಂದು ಮಾಸದ ಕಾಲ ಬೇಕಾಗುತ್ತದೆ. ಕಾಲಚಕ್ರವೊಂದರ ಹನ್ನೆರಡು ಭಾಗಗಳನ್ನು ಸೂರ್ಯನು ಪೂರ್ತಿ ದಾಟುವುದಕ್ಕೆ ಹನ್ನೆರಡು ಮಾಸಗಳು ಬೇಕಾಗುತ್ತದೆ. ಅದನ್ನೇ ಒಂದು ವರ್ಷ ಎಂದು ಕರೆಯುತ್ತಿದ್ದಾರೆ. ಕಾಲಚಕ್ರದಲ್ಲಿ ಮಧ್ಯೆ ಆತ್ಮ ರೇಖೆಯಿದೆ. ಆತ್ಮ ರೇಖೆಗೆ ಎಡಗಡೆ

ಇರುವ ಆರು ಭಾಗಗಳನ್ನು ಸೂರ್ಯನು ದಾಟುವುದಕ್ಕೆ ಆರು ಮಾಸಗಳು ಬೇಕಾಗುತ್ತದೆ. ಆ ಕಾಲವನ್ನೇ ಉತ್ತರಾಯಣವೆಂದು ಕರೆಯುತ್ತಿದ್ದಾರೆ. ಹಾಗೆ ಬಲಗಡೆ ಇರುವ ಆರು ಭಾಗಗಳನ್ನು ದಾಟುವುದಕ್ಕೆ ಆರು ಮಾಸಗಳು ಬೇಕಾಗುತ್ತದೆ. ಆ ಕಾಲವನ್ನೇ ದಕ್ಷಿಣಾಯಣವೆಂದು ಕರೆಯುತ್ತಿದ್ದೇವೆ. ಉತ್ತರ ದಕ್ಷಿಣಾಯಣಗಳನ್ನು ಕೆಳಗಿನ ಚಿತ್ರದಲ್ಲಿ ನೋಡಬಹುದು.




**ಕಾಲಚಕ್ರ**

ಕಾಲಚಕ್ರದಲ್ಲಿ ಚಂದ್ರನು ಒಂದೊಂದು ಭಾಗವನ್ನು ದಾಟುವುದಕ್ಕೆ ಎರಡೂವರೆ ದಿನಗಳು ಬೇಕಾಗುತ್ತದೆ. ಆತ್ಮ ರೇಖೆಗೆ ಒಂದು ಪಕ್ಕದಲ್ಲಿರುವ ಆರು ಭಾಗಗಳು ದಾಟುವುದಕ್ಕೆ 15 ದಿನಗಳು, ಮತ್ತೊಂದು ಪಕ್ಕದಲ್ಲಿರುವ ಆರು ಭಾಗಗಳು ದಾಟುವುದಕ್ಕೆ 15 ದಿನಗಳು ಬೇಕಾಗುತ್ತದೆ. ಚಂದ್ರನು 12 ಭಾಗಗಳು ದಾಟುವುದಕ್ಕೆ 30 ದಿನಗಳ ಕಾಲ ಬೇಕಾಗುತ್ತದೆ. ಕರ್ಮಚಕ್ರದ ಮೇಲೆ ಚಂದ್ರನು ಆತ್ಮರೇಖೆಗೆ ಎಡಗಡೆ ಇರುವ ಭಾಗಗಳು ದಾಟುವ ಕಾಲವನ್ನು ಶುಕ್ಲಪಕ್ಷ ಎಂದೂ, ಬಲಗಡೆ ಇರುವ ಭಾಗಗಳು ದಾಟುವಕಾಲವನ್ನು ಕೃಷ್ಣಪಕ್ಷ ಎಂದು ಕರೆಯುತ್ತಾರೆ. ಕೃಷ್ಣ ಶುಕ್ಲಪಕ್ಷಗಳನ್ನು ಕೆಳಗಿನ ಚಿತ್ರದಲ್ಲಿ ನೋಡಬಹುದು.




**ಕಾಲಚಕ್ರ**

ಈ ವಿಧವಾಗಿ ಕಾಲಚಕ್ರದಲ್ಲಿ ರಾತ್ರಿ ಹಗಲು, ಶುಕ್ಲ ಕೃಷ್ಣಪಕ್ಷಗಳು, ಆಯನಗಳು ನಡೆಯುತ್ತಿವೆ. ಜೀವಾತ್ಮಕ್ಕೆ ಯೋಗದಿಂದ ಲಭಿಸಿದ ಯೋಗ ಶಕ್ತಿ ಎಲ್ಲವೂ ಕರ್ಮ ಕಾಲಚಕ್ರಗಳ ಮಧ್ಯದಲ್ಲಿರುವ ಗುರುಕೇಂದ್ರವನ್ನು ಸೇರುತ್ತಿರುತ್ತದೆ. ಯಾರಿಗೆ ಯೋಗಶಕ್ತಿ ಪರಿಪೂರ್ಣಸ್ಥಿತಿಗೆ ಬರುತ್ತದೋ ಅವನಿಗೆ ಸೂರ್ಯನು ಆತ್ಮ ರೇಖೆಗೆ ಎಡಗಡೆ ಇದ್ದಾಗಲೆ, ಚಂದ್ರನೂ ಸಹ ಕಾಲಚಕ್ರದಲ್ಲಿ ಆತ್ಮರೇಖೆಗೆ ಎಡಗಡೆ ಇದ್ದಾಗಲೆ ಮರಣ ಸಂಭವಿಸುತ್ತದೆ. ಆ ವಿಧವಾಗಿ ಮರಣಿಸಿದ ಯೋಗಿ ಮಧ್ಯದಲ್ಲಿರುವ ಕೇಂದ್ರದೊಳಗೆ ಹೋಗುತ್ತಿದ್ದಾನೆ. ಅಂದರೆ ಆತ್ಮನಲ್ಲಿ ಲೀನವಾಗುತ್ತಿದ್ದಾನೆ. ಇತರೆ ಸಮಯಗಳಲ್ಲಿ ಮರಣಿಸಿದ ಯೋಗಿ ಕೇಂದ್ರದಲ್ಲಿರುವ ಪರಮಾತ್ಮನನ್ನು ಸೇರುವುದಿಲ್ಲ. ಹಗಲು, ಶುಕ್ಲಪಕ್ಷ ಉತ್ತರಾಯಣ ಕೂಡಿದ ಕಾಲದಲ್ಲಿ ಪರಮಾತ್ಮನನ್ನು ಸೇರುವುದಕ್ಕೆ ಯೋಗಿಗೆ ಮಾರ್ಗ ಏರ್ಪಡುತ್ತದೆ. ಹಗಲು, ಶುಕ್ಲಪಕ್ಷ, ಉತ್ತರಾಯಣದಲ್ಲಿ ಕಾಲಚಕ್ರದಲ್ಲಿ ಜೀವಾತ್ಮಕ್ಕೆ ಏರ್ಪಟ್ಟ ದಾರಿಯನ್ನು ಚಿತ್ರದಲ್ಲಿ ನೋಡಬಹುದು.




**(7) ಶ್ಲೋ॥ 25 : ಧೂಮೋ ರಾತ್ರಿ ಸ್ತಥಾ ಕೃಷ್ಣಃಷಣ್ಮಾಷಾ ದಕ್ಷಿಣಾಯನಮ್ ।**
**ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ॥**
**(ಜೀವಾತ್ಮ)**

**ಭಾವಾರ್ಥ :** ಯೋಗಿ ಮರಣಿಸುವ ಪ್ರಾಂತವು ಮೇಘಾವೃತವಾಗಿದ್ದರೂ, ರಾತ್ರಿ ಸಮಯವಾದರೂ, ಕೃಷ್ಣಪಕ್ಷ 15 ದಿನಗಳಾದರೂ, ದಕ್ಷಿಣಾಯನ ಆರುತಿಂಗಳ ಕಾಲದಲ್ಲಾದರು ಯೋಗಿ ಮರಣಿಸಿದ ಪಕ್ಷದಲ್ಲಿ ಆತನು ಮೋಕ್ಷ ಹೊಂದದೆ, ಜ್ಞಾನ ತೇಜಸ್ಸು ಇರುವವನಾಗಿ ಪುನಃ ಜನ್ಮಿಸುತ್ತಾನೆ. ಈ ಮರಣ ಸಮಯಗಳನ್ನು ಬಹಳ ಗೀತೆಗಳಲ್ಲಿ ತಪ್ಪುದಾರಿ ಹಿಡಿಸಿವೆ. **'ಪ್ರಯಾತಾ ಯಾನ್ತಿತಂ ಕಾಲಮ್'** ಎಂದು 23ನೇ ಶ್ಲೋಕದಲ್ಲಿ ಹೇಳಿದರೂ ಕಾಲವನ್ನು ಕುರಿತು ಹೇಳದೇ ಹಗಲು ದೇವತೆ, ಶುಕ್ಲಪಕ್ಷ ದೇವತೆ, ಉತ್ತರಾಯಣ ದೇವತೆ ಹೋಗುವ ದಾರಿಯಲ್ಲಿ ಹೋದರೆ ಮೋಕ್ಷ ಲಭಿಸುತ್ತದೆಂದು ಬರೆಯಲಾಗಿದೆ. ಹಾಗೆ ಹಗಲು ದೇವತೆ ಎಂದು ಶ್ಲೋಕದಲ್ಲಿ ಇಲ್ಲದ ವಿಷಯವನ್ನು ತಂದಿಡುವುದರಿಂದ ಬಹಳ ಜನರು ತಪ್ಪಾಗಿ ಅರ್ಥೈಸಿಕೊಳ್ಳುತ್ತಾರೆ. ಹಗಲು ದೇವತೆಯನ್ನು ಬರೆದವರೂ ಸಹ ನೋಡಿಲ್ಲ. ಕೇಳಿದವರು ಎಲ್ಲಿ ಹುಡುಕುತ್ತಾರೆ.

**ವಿವರ :** ರಾತ್ರಿ, ಶುಕ್ಲಪಕ್ಷ, ದಕ್ಷಿಣಾಯಣದಲ್ಲಿ ಮರಣಿಸಿದ ಯೋಗಿ ಆತ್ಮವನ್ನು ಸೇರುವುದಿಲ್ಲ. ಆ ಸಮಯದಲ್ಲಿ ಮರಣಿಸಿದ ಯೋಗಿಗೆ ಕಾಲಚಕ್ರದಲ್ಲಿ ಆತ್ಮವನ್ನು ಸೇರುವ ಮಾರ್ಗವು ಲಭಿಸುವುದಿಲ್ಲ. ರಾತ್ರಿ, ಶುಕ್ಲಪಕ್ಷ, ದಕ್ಷಿಣಾಯಣದಲ್ಲಿ ಕಾಲಚಕ್ರದಲ್ಲಿ ಮಾರ್ಗವು ಹೇಗಿದೆ ಕೆಳಗಿನ ಚಿತ್ರದಲ್ಲಿ ನೋಡಬಹುದು.




ಹಗಲು ಶುಕ್ಲಪಕ್ಷ, ದಕ್ಷಿಣಾಯಣದಲ್ಲಿ ಮರಣಿಸಿದ ಯೋಗಿ ಆತ್ಮವನ್ನು ಸೇರುವುದಿಲ್ಲ. ಆ ಸಮಯದಲ್ಲಿ ಮರಣಿಸಿದ ಯೋಗಿಗೆ ಕಾಲಚಕ್ರದಲ್ಲಿ ಆತ್ಮವನ್ನು ಸೇರುವ ಮಾರ್ಗ ಇರುವುದಿಲ್ಲ. ಹಗಲು, ಶುಕ್ಷಪಕ್ಷ, ದಕ್ಷಿಣಾಯಣದಲ್ಲಿ ಕಾಲಚಕ್ರದಲ್ಲಿ ಮಾರ್ಗ ಹೇಗೆ ಇರುವುದು ನಂತರ ಚಿತ್ರದಲ್ಲಿ ನೋಡಬಹುದು.

ಆತ್ಮವನ್ನು ಸೇರುವುದಕ್ಕೆ ಎಲ್ಲಾ ದ್ವಾರಗಳು ಒಂದೇ ಕಡೆ ಅಂದರೆ ಎಡಗಡೆಯೇ ಬಂದು ಇರಬೇಕು. ಹಾಗಲ್ಲದೆ ಕಾಲಚಕ್ರದಲ್ಲಿ ಯಾವ ದ್ವಾರವು ಬಲಗಡೆಗೆ ಹೋದರು ಯೋಗಿಗೆ ಎಡಗಡೆ ಮಾರ್ಗವು ಲಭಿಸದೇ ಪುನಃ ಬೇರೆ ಶರೀರವನ್ನು ಆಶ್ರಯಿಸಿ ಹುಟ್ಟುತ್ತಿದ್ದಾನೆ. ಇದು ಯೋಗಿಗಳಿಗೆ ಮಾತ್ರ ನಿರ್ಣಯಿಸಲ್ಪಟ್ಟಿದೆ.

ಯೋಗಿಯ ಉತ್ತರಾಯಣದಲ್ಲಿ, ಕೃಷ್ಣಪಕ್ಷದಲ್ಲಿ, ಹಗಲು ಮರಣಿಸಿದರೆ ಆತ್ಮವನ್ನು ಸೇರುವುದಿಲ್ಲ. ಆ ಸಮಯದಲ್ಲಿ ಮರಣಿಸಿದ ಯೋಗಿಗೆ ಕಾಲಚಕ್ರದಲ್ಲಿ ಆತ್ಮವನ್ನು ಸೇರುವ




ಮಾರ್ಗವು ಇರುವುದಿಲ್ಲ. ಆ ಸಮಯದಲ್ಲಿ ಕಾಲಚಕ್ರ ಹೇಗಿರುತ್ತದೆಂದರೆ ಕೆಳಗಿನ ಚಿತ್ರದಲ್ಲಿ ನೋಡಬಹುದು.




**(7) ಶ್ಲೋ॥ 26 : ಶುಕ್ಲ ಕೃಷ್ಣೇ ಗತೀ ಹ್ಯೇತೇ ಜಗತ ಶಾಶ್ವತೀ ಮತೇ ।**
**ಏಕಯಾ ಯಾ ತ್ಯನಾವೃತ್ತಿ ಮನ್ಯಯಾಽಽವರ್ತತೇ ಪುನಃ ॥**

**(ಜೀವಾತ್ಮ)**

**ಭಾವಾರ್ಥ :** ಜಗತ್ತಿನಲ್ಲಿ ಶುಕ್ಲ ಕೃಷ್ಣ ಗತಿಗಳು ಶಾಶ್ವತವಾಗಿ ಇವೆ. ಒಂದರಿಂದ ವೃತ್ತಿ, ಮತ್ತೊಂದರಿಂದ ಅನಾವೃತ್ತಿ ಉಂಟಾಗುತ್ತಿದೆ.

**ವಿವರ :** ಪ್ರಪಂಚದಲ್ಲಿ ಪಕ್ಷಗಳು ಬದಲಾಗದಂತೆ ಶಾಶ್ವತವಾಗಿ ಇರುವಂತೆ ಏರ್ಪಡಿಸಲಾಗಿದೆ. ಕೃಷ್ಣ, ಶುಕ್ಲಪಕ್ಷಗಳು ಎರಡು ಶಾಶ್ವತವಾಗಿದ್ದು ಯೋಗಿಗಳಿಗೆ ವೃತ್ತಿ ಅನಾವೃತ್ತಿ ಉಂಟು ಮಾಡುತ್ತಿವೆ. ಈ ವಿಷಯವನ್ನು ಯೋಗಿಗಳಿಗೆ ಹೊರತು ಸಾಧಾರಣ ವ್ಯಕ್ತಿಗಳಿಗೆ ಲೆಕ್ಕಿಸಬಾರದೆಂದು ಮತ್ತೊಂದು ಸಲ ಜ್ಞಾಪಕ ಮಾಡುತ್ತಿದ್ದೇವೆ.

**(7) ಶ್ಲೋ॥ 27 : ನೈತೇ ಸೃತೀ ಪಾರ್ಥ! ಜಾನನ್ ಯೋಗೀ ಮುಹ್ಯತಿಕಶ್ಚನ ।**
**ತಸ್ಮಾತ್ಸರ್ವೇಷು ಕಾಲೇಷು ಯೋಗಯುಕ್ತೋ ಭವಾರ್ಜುನ ॥**
**(ಜೀವಾತ್ಮ)**

**ಭಾವಾರ್ಥ :** ಈಗ ಕೇಳಿದ ಎರಡು ವಿಧಗಳ ಕಾಲಗಳನ್ನು ತಿಳಿದ ಯೋಗಿ ತಪ್ಪಾಗಿ ಅರ್ಥೈಸಿಕೊಳ್ಳುವುದಿಲ್ಲ. ಆದುದರಿಂದ ಅರ್ಜುನ ಎಲ್ಲಾ ಕಾಲದಲ್ಲಿಯೂ ನೀನು ಯೋಗ ಯುಕ್ತನಾಗಿರಬೇಕು.

**ವಿವರ :** ಯೋಗಿಯ ಮರಣದಲ್ಲಿ ವ್ಯತ್ಯಾಸಗಳಿವೆ ಎಂದು, ಯೋಗಿಯೊಂದರ ಕರ್ಮ ಪೂರ್ತಿಮುಗಿಯದೆ ಕೊನೆಯಕಾಲ ಶುಕ್ಲಪಕ್ಷವರ್ಗ ಆಗುವುದಿಲ್ಲವೆಂದು, ಹಾಗೆ ಕಾಲ ತಪ್ಪಿಹೋಗುವುದರಲ್ಲಿ ಪುನಃ ಜನ್ಮ ಉಂಟಾಗುತ್ತದೆಂದು, ತಿಳಿದವನು ಕರ್ಮ ಬೇಗನೇ ಮುಗಿಸಿಕೊಳ್ಳಲು ಎಲ್ಲಾಕಾಲದಲ್ಲಿಯೂ ಯೋಗದಿಂದ ಕೂಡಿಕೊಂಡಿರುವುದಕ್ಕೇ ಪ್ರಯತ್ನಿಸುವನು. ಆ ವಿಷಯವಾಗಿ ಭಗವಂತನು ಅರ್ಜುನನಿಗೆ ಎಲ್ಲಾಕಾಲದಲ್ಲಿ ಯೋಗಯುಕ್ತನಾಗಿರು ಎಂದಿದ್ದಾನೆ.

**(7) ಶ್ಲೋ॥ 28 : ವೇದೇಷು ಯಜ್ಞೇಷುತಪಸ್ಸುಚೈವದಾನೇಷುಯತ್ಪುಣ್ಯಫಲಂಪ್ರದಿಷ್ಟಂ ।**
**ಅತ್ಯೇತಿ ತತ್ಸರ್ವಮಿದಂ ವಿದಿತ್ವಾಯೋಗೀ ಪರಂಸ್ಥಾನ ಮುಪೈತಿ ಚಾದ್ಯಮ್ ॥**
**(ಜೀವಾತ್ಮ, ಮೋಕ್ಷ)**

**ಭಾವಾರ್ಥ :** ಈ ವಿಷಯವು ತಿಳಿದವನು ವೇದಾಧ್ಯಾಯನ, ಯಜ್ಞಾಚರಣೆ, ತಪಸ್ಸು, ದಾನದಿಂದ ಉಂಟಾಗುವ ಪುಣ್ಯಫಲಗಳನ್ನು ಅತಿಕ್ರಮಿಸಿ ಮೋಕ್ಷ ಹೊಂದುತ್ತಾನೆ.

**ವಿವರ :** ಯೋಗವಿಧಾನ ತಿಳಿದು ಇಂತಹ ಕಾಲದಲ್ಲಿ ಮರಣಿಸಿದರೆ ಮೋಕ್ಷ ಹೊಂದುವುದಕ್ಕೆ ಅವಕಾಶವು ಇದೆಯೆಂದು ತಿಳಿದವನು ದೊಡ್ಡಜ್ಞಾನಿ ಯೋಗಿ ಆಗಿರುತ್ತಾನೆ. ಅಂತಹವನು ವೇದ, ಯಜ್ಞ, ದಾನ, ತಪಸ್ಸುಗಳಿಂದ ಬರುವ ಸುಕರ್ಮವನ್ನು ಆಸೆಪಡುವುದಿಲ್ಲ. ಏಕೆಂದರೆ ಅವನು ಕರ್ಮವನ್ನು ಕಳೆದುಕೊಳ್ಳಬೇಕೆಂದು ಇರುವವನಾದ್ದರಿಂದ ಅಂತಹ

ಕರ್ಮಗಳೆಲ್ಲವನ್ನೂ ಅತಿಕ್ರಮಿಸಿ ಬೇಡವೆಂದು ತಿಳಿದವನಾಗಿ, ಆ ಕರ್ಮಗಳಿಂದ ಬರುವ ಸುಖಗಳಿಗಿಂತ ಮೋಕ್ಷವನ್ನೇ ಹೆಚ್ಚಾಗಿ ತಿಳಿದವನಾಗಿ ಯೋಗವನ್ನೇ ಎಲ್ಲಾ ಸಮಯಗಳಲ್ಲಿ ಆಚರಿಸಿ ಕಡೆಗೆ ಪರಮಪದ ಹೊಂದುತ್ತಾನೆ.

ಇಲ್ಲಿಗೆ ಅಕ್ಷರ ಪರಬ್ರಹ್ಮ ಯೋಗವೆಂಬ ಅಧ್ಯಾಯ ಮುಕ್ತಾಯ. ಈ ಅಧ್ಯಾಯದಲ್ಲಿನ ಶ್ಲೋಕಗಳ ವಿವರಗಳು ಕೆಳಗೆ ಇವೆ.

| | | | |
|---|---|---|---|
| 1. | ಪ್ರಕೃತಿ, ಆತ್ಮ, ಪರಮಾತ್ಮ | – | 1 |
| 2. | ಆತ್ಮ, ಪರಮಾತ್ಮ | – | 3 |
| 3. | ಪ್ರಕೃತಿ, ಪರಮಾತ್ಮ | – | 1 |
| 4. | ಆತ್ಮ, | – | 1 |
| 5. | ಜೀವಾತ್ಮ | – | 5 |
| 6. | ಆತ್ಮ, ಸಾಕಾರ | – | 1 |
| 7. | ಪರಮಾತ್ಮ | – | 8 |
| 8. | ಪರಮಾತ್ಮ, ಜಿವಾತ್ಮ, | – | 1 |
| 9. | ಜೀವಾತ್ಮ, ಮೋಕ್ಷ | – | 3 |
| 10. | ಜಿವಾತ್ಮ, ಆತ್ಮ, ಪರಮಾತ್ಮ | – | 4 |
| | **ಒಟ್ಟು ಶ್ಲೋಕಗಳು** | – | **28** |

ಭಾವ, ವಿವರವನ್ನು ಬದಲಾಯಿಸಿ ಬರೆದ ಶ್ಲೋಕಗಳು – 4, 13, 23, 24, 25.



**ಎಂಟನೆಯ ಅಧ್ಯಾಯ**

# ರಾಜವಿದ್ಯಾ ರಾಜಗುಹ್ಯ ಯೋಗ

**ಶ್ರೀ ಭಗವಂತನು ಹೀಗೆ ಹೇಳಿದನು :–**

**(8) ಶ್ಲೋ॥ 1 : ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನ ಸೂಯವೇ ।**
**ಜ್ಞಾನಂ ವಿಜ್ಞಾನ ಸಹಿತಂ ಯದ್‌ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥**
**(ಧರ್ಮಗಳು)**

**ಭಾವಾರ್ಥ :** ಇದು ಅತಿ ರಹಸ್ಯವಾದ ಜ್ಞಾನ. ಇದನ್ನು ವಿಜ್ಞಾನ ಸಹಿತವಾಗಿ ವಿಶದೀಕರಿಸುತ್ತೇನೆ. ಇದನ್ನು ತಿಳಿಯುವುದರಿಂದ ಅಶುಭಗಳಿಂದ ಮುಕ್ತನಾಗುತ್ತೀಯಾ.

**ವಿವರ :** ಬ್ರಹ್ಮವಿದ್ಯೆ ಎನ್ನುವುದು ರಹಸ್ಯವಾದುದೆ. ಯಾರಿಗೂ ತಿಳಿಯದಿರುವುದರಿಂದ ಅದು ರಹಸ್ಯವಾಗಿದೆ. ಅಂತಹ ಜ್ಞಾನವನ್ನು ಅನುಭವಪೂರ್ವಕವಾಗಿ ಮತ್ತು ವಿಜ್ಞಾನಸಹಿತವಾಗಿ ಅರ್ಥವಾಗುವಂತೆ ವಿಶದವಾಗಿ ತಿಳಿಸುತ್ತೇನೆಂದು ಭಗವಂತನು ತಿಳಿಸಿದ್ದಾನೆ. ಹಾಗೆ ತಿಳಿಯುವುದರಿಂದ ಕರ್ಮಗಳಿಂದ ಬಿಡುಗಡೆಯಾಗಿ ಮೋಕ್ಷ ಹೊಂದುತ್ತಾನೆಂದೂ ಸಹ ತಿಳಿಸಿದ್ದಾನೆ.

**(8) ಶ್ಲೋ॥ 2 : ರಾಜವಿದ್ಯಾ ರಾಜಗುಹ್ಯಂ ಪವಿತ್ರ ಮಿದ ಮುತ್ತಮಮ್ ।**
**ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತು ಮವ್ಯಯಮ್ ॥**
**(ಧರ್ಮಗಳು)**

**ಭಾವಾರ್ಥ :** ಎಲ್ಲ ವಿದ್ಯೆಗಳಲ್ಲಿ ದೊಡ್ಡದು, ಹಾಗೆ ಎಲ್ಲ ರಹಸ್ಯಗಳಲ್ಲಿ ದೊಡ್ಡದು, ಪವಿತ್ರವಾದ ಉತ್ತಮವಾದ ಪ್ರತ್ಯಕ್ಷವಾಗಿ ನಡೆಯುವ ಧರ್ಮ. ಒಳ್ಳೆಯ ಸುಖವಾದುದು ನಾಶ ಇಲ್ಲದಿರುವುದು.

**ವಿವರ :** ಈಗ ಹೇಳುವ ಜ್ಞಾನ ವಿದ್ಯೆಗಳಿಗೆಲ್ಲ ರಾಜನಿದ್ದಂತೆ. ಮನುಷ್ಯರಲ್ಲಿ ರಾಜ ದೊಡ್ಡವನು, ಇದು ದೊಡ್ಡ ವಿದ್ಯೆ ಆದ್ದರಿಂದ ರಾಜನಿಗೆ ಹೋಲಿಸಿ ಹೇಳಲಾಗಿದೆ. ಹಾಗೆ ರಹಸ್ಯಗಳಿಗೆಲ್ಲ ದೊಡ್ಡ ರಹಸ್ಯವಾದುದು. ಯಾರಿಗೂ ತಿಳಿಯದಿರುವುದು ರಹಸ್ಯವೇ. ಯಾರು ಹೇಳದಿರುವ ರಹಸ್ಯ ವಿಷಯವನ್ನು ಭಗವಂತನು ತಿಳಿಸುತ್ತಿದ್ದಾನೆ. ಅಂತಹ ರಹಸ್ಯವಾದ ಯಾರಿಗೂ

ತಿಳಿಯದ ವಿಷಯವನ್ನು ತಿಳಿದುಕೊಳ್ಳುವುದರಿಂದ ಅಶುಭಗಳು ಉಂಟುಮಾಡುವ ಗುಣಗಳ ಮೇಲೆ ಆಸಕ್ತಿ ಕಡಿಮೆಯಾಗುತ್ತದೆ. ಈ ಜ್ಞಾನವು ಪ್ರತ್ಯಕ್ಷ ಧರ್ಮವಾದದ್ದು, ನಾಶ ಇಲ್ಲದಾದ್ದರಿಂದ ಪತ್ಯಕ್ಷ ಕೆಲಸಗಳು ಮಾಡುವವನು ತಪ್ಪದೇ ತಿಳಿದು ಮಾಡಬೇಕಾಗಿದೆ. ಹಾಗಲ್ಲದೆ ಅವನು ಮಾಡುತ್ತಾನೆ ನಾನು ಮಾಡುತ್ತಿದ್ದೇನೆಂದರೆ ತಿಳಿವಳಿಕೆ ಇಲ್ಲದವನಾಗುತ್ತಾನೆ. ಹಾಗೆ ತಿಳಿವಳಿಕೆ ಇಲ್ಲದ ಕೆಲಸಗಳು, ಅರ್ಥವಿಲ್ಲದ ಕೆಲಸಗಳು ಮಾಡದಂತಿರುವುದಕ್ಕಾದರು ಧರ್ಮಗಳು ತಿಳಿಯಬೇಕು. ಉದಾಹರಣೆಗೆ ತೆಂಗಿನಕಾಯಿ ಎಲ್ಲರೂ ಹೊಡೆಯುತ್ತಿದ್ದರೆ ನಾವು ಹೊಡೆಯುತ್ತಿದ್ದೇವೆ, ಆದರೆ ಅರ್ಥ ತಿಳಿದಿಲ್ಲ. ಮದುವೆ ದಿನ ಅಕ್ಷತೆಕಾಳು ಹಾಕುತ್ತಿದ್ದಾರೆ. ಎಲ್ಲರೂ ಮಾಡುತ್ತಿದ್ದರೆ ನಾವು ಮಾಡುತ್ತಿದ್ದೇವೆ, ಆದರೆ ಅರ್ಥ ತಿಳಿದಿಲ್ಲ. ಎಲ್ಲರೂ ಬದುಕುತ್ತಿದ್ದಂತೆ ನಾವು ಬದುಕುತ್ತಿದ್ದೇವೆ, ಆದರೆ ನಮ್ಮ ಬದುಕಿನೊಂದರ ಅರ್ಥ ತಿಳಿದಿಲ್ಲ. ಇನ್ನೂ ನಾವು ಮಾಡುವ ಎಷ್ಟೋ ಕೆಲಸಗಳಿಗೆ, ಮಾತನಾಡುವ ಮಾತುಗಳಿಗೆ ಅರ್ಥ ತಿಳಿದಿಲ್ಲ. ಹೀಗೆ ಗುಂಪಿನಲ್ಲಿ ಗೋವಿಂದ ಎಂದು ಎಲ್ಲರೂ ಹೇಳುತ್ತಿದ್ದರೆ ನೀನು ಹಾಗೆ ಹೇಳದೇ ಗೋವಿಂದದಲ್ಲಿನ ಅರ್ಥವೇನೋ ತಿಳಿದುಕೊಳ್ಳಬೇಕು. ಎಲ್ಲದಕ್ಕೂ ಅರ್ಥ ಆಚರಣೆ ತಿಳಿಸುವವು ಧರ್ಮಗಳು. ಅವುಗಳನ್ನು ಕುರಿತು ತಪ್ಪದೇ ತಿಳಿಯಬೇಕು. ಧರ್ಮಗಳನ್ನು ತಿಳಿಯಿರೆಂದು ಕೆಳಗಿನ ಶ್ಲೋಕದಲ್ಲಿಯೂ ಸಹ ಹೇಳುತ್ತಿದ್ದಾನೆ.

**(8) ಶ್ಲೋ॥ 3 : ಅಶ್ರದ್ಧಧಾನಾಃ ಪುರುಷಾ ಧರ್ಮ ಸ್ಯಾಸ್ಯ ಪರನ್ತಪ ।**
**ಅಪ್ರಾಪ್ಯ ಮಾಂ ನಿವರ್ತನ್ತೇ ಮೃತ್ಯು ಸಂಸಾರ ವರ್ತ್ಮನಿ ॥**

**(ಧರ್ಮಗಳು)**

**ಭಾವಾರ್ಥ :** ಧರ್ಮಗಳ ಮೇಲೆ ಅಶ್ರದ್ಧೆ ಹೊಂದಿದವನು, ನನ್ನನ್ನು ತಿಳಿಯಲಾರದೆ ಮೃತ್ಯು ಸಂಸಾರದಲ್ಲಿಯೇ ವರ್ತಿಸುತ್ತಿರುತ್ತಾನೆ.

**ವಿವರ :** ನೀತಿ ನ್ಯಾಯಯುಕ್ತವಾದದು, ಜ್ಞಾನ ಧರ್ಮಯುಕ್ತವಾದದು. ನೀತಿ ನ್ಯಾಯ ಪ್ರಪಂಚದಲ್ಲಿ ನಡೆದುಕೊಳ್ಳುವುದಕ್ಕೆ ಅಗತ್ಯವಾದ ಸಕ್ರಮ ಪದ್ಧತಿಯನ್ನು ತೋರಿಸುತ್ತದೆ. ಜ್ಞಾನಧರ್ಮಗಳು ಪ್ರಪಂಚ ಸಂಬಂಧವಾದವಲ್ಲ. ಇವು ಪರಮಾತ್ಮ ಸಂಬಂಧವಾದವು. ಜ್ಞಾನಧರ್ಮಗಳಿಂದ ಪರಮಾತ್ಮನನ್ನು ಸೇರುವುದಕ್ಕೆ ಬೇಕಾದ ವಿಧಾನಗಳು ತಿಳಿಯುತ್ತವೆ. ಮುಖ್ಯವಾಗಿ ನೀತಿ ನ್ಯಾಯಗಳು ಯಾವುವೊ, ಜ್ಞಾನಧರ್ಮಗಳು ಯಾವುವೊ ಮೊದಲು ತಿಳಿದುಕೊಳ್ಳಬೇಕಾಗಿದೆ. ನಾವು ನೋಡಿದರಲ್ಲಿ ಜ್ಞಾನಧರ್ಮಗಳ ಸ್ಥಾನಗಳನ್ನು, ನೀತಿ ನ್ಯಾಯಗಳು ಆಕ್ರಮಿಸಿಕೊಂಡಿವೆ. ಜ್ಞಾನ ತಿಳಿಸಬೇಕಾದ ಹಿರಿಯರು ಜ್ಞಾನವೆಂದುಕೊಂಡು

ನೀತಿಯನ್ನು ಬೋಧಿಸುತ್ತಿದ್ದಾರೆ. ಹಾಗೆ ಧರ್ಮಗಳ ಸ್ಥಾನದಲ್ಲಿ ನ್ಯಾಯವನ್ನು ಬೋಧಿಸುತ್ತಿದ್ದಾರೆ. ನಿಜವಾದ ಜ್ಞಾನ ಧರ್ಮ ಅಗಮ್ಯ ಗೋಚರವಾಗಿ ಹೋಗಿ, ನಮಗೆ ನೀತಿ ನ್ಯಾಯಗಳೇ ದೊಡ್ಡವಾಗಿ ಹೋಗಿವೆ. ಸತ್ಯವನ್ನೇ ಹೇಳೆಂದು, ಪರೋಪಕಾರ ಮಾಡಿರೆಂದು, ಇತರರನ್ನು ಮೋಸಮಾಡ ಬೇಡವೆಂದು, ಒಳ್ಳೆಯದನ್ನೇ ಆಚರಿಸಿರೆಂದು, ಅನ್ಯಾಯವಾಗಿ ವರ್ತಿಸಬೇಡವೆಂದು ಬಹಳ ಜನರು ಬೋಧಿಸುತ್ತಿದ್ದಾರೆ. ಇವು ನೀತಿ ನ್ಯಾಯಕ್ಕೆ ಸಂಬಂಧಿಸಿದ ವಿಷಯಗಳು. ಹಿರಿಯರು ಇವುಗಳನ್ನು ಬೋಧಿಸಿದರೆ ಪರವಾಗಿಲ್ಲ. ಆದರೆ ಗುರುಗಳಾದವರು ಇವುಗಳನ್ನು ಬಿಟ್ಟು ಜ್ಞಾನ ಧರ್ಮಗಳನ್ನು ಬೋಧಿಸುವುದು ಒಳ್ಳೆಯದು.

ಧರ್ಮಗಳಾವುವೋ ತಿಳಿಯದ ಈ ಕಾಲದಲ್ಲಿ, ಜ್ಞಾನವೊಂದರ ಅರ್ಥವೇ ತಿಳಿಯದ ಈ ಪರಿಸ್ಥಿತಿಯಲ್ಲಿ, ನೀತಿ ನ್ಯಾಯಗಳು ತಿಳಿದವರೆ ದೊಡ್ಡ ಜ್ಞಾನಿಗಳಾಗಿ, ಯೋಗಿಗಳಾಗಿ, ಗುರುಗಳಾಗಿ ಚಲಾವಣೆಯಾಗುತ್ತಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ನಿಜವಾದ ಜ್ಞಾನ ಧರ್ಮ ತಿಳಿದು ಬಂದರೂ ಗುರ್ತಿಸದ ಸ್ಥಿತಿಯಲ್ಲಿ ಬಹಳ ಜನರು ಇದ್ದಾರೆ. **'ಕೇಳಬೇಕೆಂದುಕೊಂಡವನಿಗೆ ಹೇಳಲಾಗುತ್ತದೆ. ತಿಳಿಯಬೇಕೆಂದುಕೊಂಡವನಿಗೆ ತಿಳಿಸಲಾಗುತ್ತದೆ.'** ಎನ್ನುವ ಸೂತ್ರದ ಪ್ರಕಾರ ಶ್ರದ್ಧೆ ಇರುವವನಿಗೆ ಜ್ಞಾನ ಧರ್ಮಗಳು ತಿಳಿಯುತ್ತವೆ. ಶ್ರದ್ಧೆ ಇಲ್ಲದವನಿಗೆ ಒಂದುವೇಳೆ ತಿಳಿದರು ಅಶ್ರದ್ಧೆಯಿಂದ ಅವುಗಳನ್ನು ಆಚರಿಸುವುದಿಲ್ಲ. ಧರ್ಮಗಳು ತಿಳಿದರೂ ಅಶ್ರದ್ಧಪರನು ಅವುಗಳನ್ನು ವ್ಯರ್ಥಮಾಡಿಕೊಂಡರೆ, ಪರಮಾತ್ಮನನ್ನು ಅವನು ಎಂದಿಗೂ ತಿಳಿದುಕೊಳ್ಳುವುದಿಲ್ಲ. ಅಂತಹವರು ಮೃತ್ಯುವಿನಿಂದ ಕೂಡಿಕೊಂಡ ಈ ಜಗತ್ತಿನಲ್ಲಿಯೇ ಮುಳುಗಿ ತೇಲುತ್ತಿರುತ್ತಾನೆ. ಶ್ರದ್ಧೆ ಇರುವವನು ಧರ್ಮಯುಕ್ತವಾಗಿ ಆಚರಿಸುತ್ತಾ ಬೇಗನೇ ಪರಮಾತ್ಮನನ್ನು ಹೊಂದುತ್ತಾನೆ. ಈ ಜಗತ್ತಿನಿಂದ ಹೊರಬೀಳುತ್ತಾನೆ.

**(8) ಶ್ಲೋ॥ 4 : ಮಯಾ ತತ ಮಿದಂ ಸರ್ವಂ ಜಗದವ್ಯಕ್ತ ಮೂರ್ತಿನಾ ।**
**ಮತ್ ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವ ವಸ್ಥಿತಃ ॥**
**(ಪರಮಾತ್ಮ)**

**ಭಾವಾರ್ಥ :** ಅವ್ಯಕ್ತವಾಗಿ ಈ ಪ್ರಪಂಚವೆಲ್ಲವೂ ವ್ಯಾಪಿಸಿದ್ದೇನೆ. ನನ್ನಲ್ಲಿಯೇ ಸರ್ವಜೀವರಾಶಿಗಳು ಇವೆ. ನಾನು ಅವುಗಳಲ್ಲಿ ಇಲ್ಲ.

**ವಿವರ :** ಕಣ್ಣಿಗೆ ಕಾಣಿಸದಂತೆ ಪರಮಾತ್ಮ ಪ್ರಪಂಚವೆಲ್ಲ ವ್ಯಾಪಿಸಿದ್ದಾನೆ. ವ್ಯಕ್ತವಾಗದ ಪರಮಾತ್ಮ ಅಣುವಣುವಿನಲ್ಲಿ ವ್ಯಾಪಿಸಿದ್ದಾನೆ. ಪರಮಾತ್ಮ ಪದಾರ್ಥದಲ್ಲಿಯೇ ಅಲ್ಲದೆ ಶೂನ್ಯದಲ್ಲಿಯೂ ಸಹ ವ್ಯಾಪಿಸಿರುವುದರಿಂದ ಖಗೋಳದಲ್ಲಿ ಸಮಸ್ತ ಗೋಳಗಳು, ನಕ್ಷತ್ರಗಳು, ಸೂರ್ಯಚಂದ್ರಾದಿ ಗ್ರಹಗಳು ಮೊದಲಾದವೆಲ್ಲವೂ ಪರಮಾತ್ಮನಲ್ಲಿಯೇ ಇವೆ. ಭೂಗೋಳ ಅದರ ಮೇಲಿರುವ ಸಮಸ್ತವೆಲ್ಲ ಪರಮಾತ್ಮನಲ್ಲಿ ಇವೆ. ಸಮುದ್ರ ಸಹಿತ, ಸಮುದ್ರದಲ್ಲಿನ ಪ್ರಾಣಿಗಳು ಸಹಿತ, ಇದು ಇಲ್ಲ ಎನ್ನದಂತೆ ಎಲ್ಲವೂ ಪರಮಾತ್ಮನಲ್ಲಿ ವಾಸಿಸುವವೆಂದು ತಿಳಿಯುತ್ತಿದೆ. ಪ್ರದೇಶವೆಲ್ಲ ಪರಮಾತ್ಮದೇ ಆದಾಗ ಯಾವ ಜೀವರಾಶಿ ಎಲ್ಲಿದ್ದರೂ ಪರಮಾತ್ಮನ ಸ್ಥಳದಲ್ಲಿ ಇದ್ದಂತಾಗುತ್ತದೆ. ಆದ್ದರಿಂದ ***'ಮತ್‌ಸ್ಥಾನಿ ಸರ್ವಭೂತಾನಿ'*** ನನ್ನ ಸ್ಥಾನದಲ್ಲಿಯೇ ಜೀವರಾಶಿಗಳು ಇರುತ್ತಿವೆ ಎನ್ನುತ್ತಿದ್ದಾನೆ. ಯಾವ ಬಾಡಿಗೆಯನ್ನು ಕಟ್ಟದಂತೆ ಉಚಿತವಾಗಿ ಪರಮಾತ್ಮನ ಸ್ಥಾನದಲ್ಲಿ ಇದ್ದೇವೆಂದು ಜ್ಞಾಪಕ ಮಾಡಿಕೊಳ್ಳಿ. ನಾವು ಆತನ ಸ್ಥಾನದಲ್ಲಿ ಇದ್ದೇವೆ, ಆದರೆ ಆತನು ನಮ್ಮ ಸ್ಥಳದಲ್ಲಿ ಇಲ್ಲ.

ಅನಂತ ವಿಶ್ವವೆಲ್ಲಾ ಆತನೇ ಆದಾಗ ಸೂಕ್ಷ್ಮವಾದ ಭೂಗೋಳವೆಷ್ಟು? ಈ ಚಿಕ್ಕ ಭೂಗೋಳದಲ್ಲಿ ಸಮುದ್ರ ಶೇಕಡ 70 ಭಾಗ ಹೋದಾಗ ಶೇ.30 ಭಾಗ ಭೂಮಿ ಎಷ್ಟು? ಆ ಸ್ವಲ್ಪ ಭೂಮಿಯಲ್ಲಿ ಅಮೆರಿಕಾ, ರಷ್ಯಾ ಮೊದಲಾದ ನೂರಾರು ದೇಶಗಳಲ್ಲಿ ನಿನ್ನ ದೇಶವೆಷ್ಟು? ಅದರಲ್ಲಿ ನಿನ್ನ ದೇಹವೆಷ್ಟು? ನಿನ್ನ ದೇಹದಲ್ಲಿ ತಲೆಯಲ್ಲಿ ಒಂದುಕಡೆ ಇರುವ ನೀನೆಷ್ಟು? ಇಷ್ಟು ಚಿಕ್ಕದಾದ ನಾವು ಅಷ್ಟು ದೊಡ್ಡ ಪರಮಾತ್ಮನಲ್ಲಿ ವಾಸಿಸುತ್ತೇವೆ. ಅಷ್ಟು ದೊಡ್ಡ ಪರಮಾತ್ಮ ಇಷ್ಟು ಚಿಕ್ಕದಾದ ನಮ್ಮೊಳಗೆ ಹಿಡಿಸುತ್ತಾನಾ? ಹಿಡಿಸುವುದಿಲ್ಲ. ಎಷ್ಟೋ ಅನಂತವಾಗಿ ವಿಶಾಲವಾದ ಎಲ್ಲೆಗಳಿಲ್ಲದವನೇನು, ನಿನ್ನೊಳಗಿರುವುದೇನು. ಆತನು ನಮ್ಮಲ್ಲಿರುವುದು ಸಾಧ್ಯವಾಗುವುದಿಲ್ಲ. ನಾವು ಆತನಲ್ಲಿರುವುದು ಸಹಜವೇ. ಆದ್ದರಿಂದಲೇ ಈ ಶ್ಲೋಕದಲ್ಲಿ ಸರ್ವಜೀವರಾಶಿಗಳು ನನ್ನಲ್ಲಿವೆ, ಅವುಗಳಲ್ಲಿ ನಾನು ಇಲ್ಲ ಎಂದಿದ್ದಾನೆ.

ಅಣುಅಣುವಿನಲ್ಲಿ ಎಲ್ಲದರಲ್ಲಿ ಪರಮಾತ್ಮ ವ್ಯಾಪಿಸಿದೆ. ಜೀವರಾಶಿಗಳ ಶರೀರದಲ್ಲಿಯೂ ಸಹ ಪರಮಾತ್ಮ ವ್ಯಾಪಿಸಿದೆ ಎಂದು ಹೇಳಬಹುದು. ಈ ವಿಧವಾಗಿ ಜೀವರಾಶಿಗಳೆಲ್ಲ ಪರಮಾತ್ಮನಲ್ಲಿದ್ದು ಅದರೊಂದಿಗೆ ಬೆರೆತು ಇವೆಯೆಂದು ತಿಳಿಯುತ್ತಿದೆ. ಪರಮಾತ್ಮ ಇಲ್ಲದ ವಸ್ತುವಾಗಲಿ, ಜೀವರಾಶಿಯಾಗಲಿ ಜಗತ್ತಿನಲ್ಲಿ ಇಲ್ಲ. ಪರಮಾತ್ಮ ಹೇಗೆ ಎಲ್ಲರಲ್ಲಿ ವ್ಯಾಪಿಸಿದ್ದಾನೋ, ಎಲ್ಲಿ ತನ್ನನ್ನು ಹೇಳಬೇಕೋ, ಎಲ್ಲಿ ಹೇಳಬಾರದೋ ಕೆಳಗಿನ ಶ್ಲೋಕದಲ್ಲಿ ತಿಳಿಸುತ್ತಿದ್ದಾನೆ ನೋಡಿರಿ.

**(8) ಶ್ಲೋ॥ 5 : ನ ಚ ಮತ್‌ಸ್ಥಾನಿ ಭೂತಾನಿ ಪಶ್ಯಮೇ ಯೋಗ ಮೈಶ್ವರಮ್ ।**
**ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತ ಭಾವನಃ ॥**
**(ಪರಮಾತ್ಮ)**

**ಭಾವಾರ್ಥ :** ಸರ್ವ ಜೀವಿಗಳು ನನ್ನಲ್ಲಿ ಇಲ್ಲ. ನಾನು ಈಶ್ವರ(ಅಧಿಪತಿ)ನಾಗಿ ಹೇಗೆ ಬೆರೆತಿರುವುದು ನೋಡು. ಜೀವಿಗಳು ಧರಿಸುವ ಶರೀರದಲ್ಲಿನ ಆತ್ಮವಾಗಿ, ಭೂತಗಳಾಗಿ ಭಾವಿಸಲ್ಪಡುವ ಜೀವಾತ್ಮಗಳಾಗಿಯೂ ನಾನು ಇಲ್ಲ.

**ವಿವರ :** ಮುನಿಸಿದವನು ಅಡ್ಡ ತಿರುಗಿದಂತೆ ಮೊದಲ ಶ್ಲೋಕದಲ್ಲಿ **'ಎಲ್ಲಾ ಜೀವರಾಶಿಗಳು ನನ್ನಲ್ಲಿ ಇವೆ'** ಎಂದ ಪರಮಾತ್ಮ ಪಕ್ಕದ ಶ್ಲೋಕದಲ್ಲಿಯೇ ಇಲ್ಲಿ **'ಯಾವ ಜೀವರಾಶಿ ನನ್ನಲ್ಲಿ ಇಲ್ಲ.'** ಎಂದಿದ್ದಾನೆ. **'ಮತ್ ಸ್ಥಾನಿ ಭೂತಾನಿ'** ಎಂದವನು ಪಕ್ಕದಲ್ಲಿಯೇ **'ನಚಮತ್ಥಾನಿ ಭೂತಾನಿ'** ಎನ್ನುವುದೇನು, ಮನುಷ್ಯರಿಗಿಂತ ದೇವರು ಬಹಳ ಸ್ಪೀಡಾಗಿ ಮಾತು ಬದಲಾಯಿಸುತ್ತಾನೆ ಎಂದು ಅನುಮಾನ ಬರುತ್ತದೆ ಅಲ್ಲವೆ! ಹಾಗೆ ಏನು ಅಲ್ಲ. ತನ್ನನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಪರಮಾತ್ಮ ಇಷ್ಟು ವಿಧಾನಗಳು ಹೇಳಬೇಕಾಗಿ ಬಂದಿದೆ. ಹೀಗೆ ಹೇಳುವುದರಿಂದ ವಿವರವಾಗಿ ಅವಗಾಹನೆ ಮಾಡಿಕೊಳ್ಳಬಹುದು. ಹಾಗೆ ಆಗದೆಹೋದರೆ ಉದಾಹರಣೆಗೆ ಈಗಿನ ಬೋಧಕರು ಭಗವಂತನೆಂಬ ಪದವನ್ನು ಎಲ್ಲಿ ಉಪಯೋಗಿಸಬೇಕೆಂಬ ವಿವರ ತಿಳಿಯದೆ ಪರಮಾತ್ಮ ಎಂದು ಹೇಳಬೇಕಾದ ಕಡೆ ಭಗವಂತನೆಂದು, ಭಗವಂತನೆಂದು ಹೇಳಬೇಕಾದ ಕಡೆ ಪರಮಾತ್ಮನೆಂಬ ಪದವನ್ನು ಉಪಯೋಗಿಸಿದಂತೆ ಇರುತ್ತದೆ. ಭಗವಂತನು ಪರಮಾತ್ಮ ಇಬ್ಬರು ಒಬ್ಬರೇ ಆದರೂ ಸಾಕಾರ ರೂಪ ಭಗವಂತನು. ನಿರಾಕಾರ ರೂಪ ಪರಮಾತ್ಮ. ನಿರಾಕಾರವಾದ ಪರಮಾತ್ಮನನ್ನು ಕುರಿತು ಹೇಳಬೇಕಾದ ಕಡೆ, ಸಾಕಾರವಾದ ಭಗವಂತನನ್ನು ಹೇಳುವುದರಲ್ಲಿ ಬಹಳ ತಪ್ಪಾಗುತ್ತದೆ. ಉದಾಹರಣೆಗೆ ಬಹಳ ಹೆಸರುವಾಸಿಯಾದ ಸ್ವಾಮೀಜೀ ತನ್ನ ಉಪನ್ಯಾಸದಲ್ಲಿ 'ಭಗವಂತನು ಸರ್ವವ್ಯಾಪಿ ಎಲ್ಲಾ ಕಡೆ ನೋಡುತ್ತಿದ್ದಾನೆ' ಎಂದಿದ್ದಾನೆ. ಅಲ್ಲಿ ಹೇಳಬೇಕಾಗಿರುವುದು ಪರಮಾತ್ಮ ಸರ್ವವ್ಯಾಪಿ ಎಂದು ಹೇಳಬೇಕಾಗಿರುವಾಗ ತಪ್ಪಾಗಿ ಭಗವಂತನು ಸರ್ವವ್ಯಾಪಿ ಎಂದು ಹೇಳಲಾಗಿದೆ. ತಪ್ಪೇನೆಂದರೆ ಭಗವಂತನು ಒಂದು ಶರೀರದಲ್ಲಿ ಮಾತ್ರವಿದ್ದು, ಆ ಶರೀರದಲ್ಲಿನ ಕಣ್ಣಿನೊಂದರ ದೃಷ್ಟಿಯ ಪರಿಧಿಯಲ್ಲಿ ಮಾತ್ರವೇ ನೋಡುತ್ತಿದ್ದಾನೆ. ಇದರಿಂದ ಭಗವಂತನು ಎಲ್ಲಾಕಡೆ ನೋಡುವುದು ಅಸತ್ಯವಾಗುತ್ತದೆ. ಪರಮಾತ್ಮ ಸರ್ವವೂ ವ್ಯಾಪಿಸಿ ನೋಡುವುದು ನಿಜವಾಗುತ್ತದೆ. ಆ ಮಾತಿನಿಂದ ಆ

ಸ್ವಾಮೀಜಿಗೆ ಜ್ಞಾನ ಅಷ್ಟೊ ಇಷ್ಟೊ ತಿಳಿದಿದೆ, ಆದರೆ ಸೂಕ್ಷ್ಮವಾದ ವಿವರದವರೆಗೂ ತಿಳಿದಿಲ್ಲವೆಂದು ಹೇಳಿಕೊಳ್ಳಬಹುದು. ಹಾಗೆ ಹೇಳುವುದರಿಂದ ಕೇಳುವವರು ಆಲೋಚಿಸದೆ ನಂಬುವುದು ನಡೆಯುತ್ತದೆ. ಹಾಗೆಯೇ ಈಗ ಇಲ್ಲಿ ಪರಮಾತ್ಮ ನಾನು ಸರ್ವವೂ ನೋಡುತ್ತಿದ್ದೇನೆ, ಆದರೆ ನಾನು ಸರ್ವವೂ ನೋಡುತ್ತಿಲ್ಲ ಎನ್ನುವ ವಿಷಯ ಬಂದಿದೆಯೆಂದುಕೊಳ್ಳಿ. ಆಗ ಕೇಳಿದ ಪ್ರಜೆಗಳು ಏನೆಂದುಕೊಳ್ಳಬೇಕು. ಅವರು ಸಂದಿಗ್ಧಾವಸ್ಥೆಯಲ್ಲಿ ಬಿದ್ದು ಅನುಮಾನ ತೀರದೇ ಈ ಜ್ಞಾನವೇ ಬೇಡವೆಂದುಕೊಳ್ಳುವುದು ನಡೆಯುತ್ತದೆ. ಆದ್ದರಿಂದ ಜ್ಞಾನದಲ್ಲಿ ಪ್ರತಿ ವಿಷಯವನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಬೋಧಿಸಬೇಕೆಂದು ಬೋಧಕರಿಗೆ ನಮ್ಮ ಮನವಿ.

ಈಗ ಅಸಲು ವಿಷಯಕ್ಕೆ ಬರೋಣ. ಮೊದಲು ಹೇಳಿದ ಶ್ಲೋಕಗಳಲ್ಲಿ ನನ್ನಲ್ಲಿ ಎಲ್ಲರೂ ಇದ್ದಾರೆಂದು ಹೇಳಿ, ಈ ಶ್ಲೋಕದಲ್ಲಿ ನನ್ನಲ್ಲಿ ಯಾರು ಇಲ್ಲವೆಂದು ಹೇಳುವುದರಲ್ಲಿ ವಿವರ ಏನೆಂದು ಯೋಚಿಸಿದರು, ಅದೇ ಶ್ಲೋಕದಲ್ಲಿಯೇ 'ಈಶ್ವರನಾಗಿ ಬೆರೆತಿರುವುದು ನೋಡಿರಿ' ಎಂದಿದ್ದಾನೆ. ಅಷ್ಟೇ ಅಲ್ಲದೆ 'ಭೂತಗಳಾಗಿ ಭಾವಿಸಲ್ಪಡುವ ಭೂತಸ್ತನಾಗಿ ನಾನು ಇಲ್ಲ' ಎಂದಿದ್ದಾನೆ. ಇವುಗಳೆಲ್ಲವನ್ನು ಗಮನಿಸಿದರು ಒಂದೇ ಪರಮಾತ್ಮ ಮೂರಾಗಿ ವಿಭಜಿಸಲ್ಪಟ್ಟಿದೆ ಎಂದು ತಿಳಿಯುತ್ತಿದೆ. ಎರಡೂ ನಾನು ಅಲ್ಲ ಎನ್ನುತ್ತಿದ್ದಾನೆ. ಆತನು ಅಲ್ಲದ ಎರಡು **'ಮಮಾತ್ಮ ನಚ ಭೂತಸ್ಥೋ ಭೂತಭಾವನಃ** ಎನ್ನುವವು. **ಭೂತಸ್ಥೋ** ಎಂದರೆ ಭೂತಗಳಲ್ಲಿ ವಾಸಿಸುವವನಾದ ಆತ್ಮ, **ಭೂತ ಭಾವನಃ** ಎಂದರೆ ಭೂತಗಳೆನ್ನುವ ಜೀವಾತ್ಮಗಳು, **ಮಮಾತ್ಮ** ಎಂದರೆ ನಾನು, **ನಚ** ಎಂದರೆ ಅಲ್ಲವೆಂದು ಅರ್ಥ.

ಪರಮಾತ್ಮನಾದವನು ಆತ್ಮ ಜೀವಾತ್ಮಗಳಾಗಿ ನಾನು ಇಲ್ಲ ಎನ್ನುತ್ತಿದ್ದಾನೆ. ಇದರಿಂದ ಪರಮಾತ್ಮಕ್ಕೆ, ಆತ್ಮಕ್ಕೆ, ಜೀವಾತ್ಮಕ್ಕೆ ವಿಭಿನ್ನ ಬೇಧಗಳಿವೆ ಎಂದು ತಿಳಿಯುತ್ತಿದೆ. ಅದು ಯಾವುವೆಂದರೆ! **1) ಪರಮಾತ್ಮ ಎಂದರೆ ಎಲ್ಲಕಡೆ ವ್ಯಾಪಿಸಿರುವುದು. ಅಲ್ಲಿ ಇಲ್ಲಿ ಎಂಬ ಪ್ರಶ್ನೆ ಇಲ್ಲದಂತೆ ಎಲ್ಲಾಕಡೆ ಇರುವುದು. 2) ಆತ್ಮ ಎಂದರೆ ಸರ್ವ ಜೀವಿಗಳ ಶರೀರದಲ್ಲಿ ಮಾತ್ರ ವ್ಯಾಪಿಸಿರುವುದು. 3) ಜೀವಾತ್ಮ ಎಂದರೆ ಒಂದು ಶರೀರದಲ್ಲಿ ಒಂದು ಕಡೆ ಮಾತ್ರ ಇರುವುದು.** ಹೀಗೆ ಬೇರೆ ಬೇರೆಯಾಗಿ ಮೂರು ಆತ್ಮಗಳಿರುವುದರಿಂದ ಮೊದಲನೆಯದಾದ ಪರಮಾತ್ಮನೊಳಗೆ ಕಡೆಯದಾದ ಜೀವಾತ್ಮ ಸೇರಬೇಕೆಂದು ಪ್ರಯತ್ನ ಮಾಡಬೇಕಾಗಿ ಬಂದಿದೆ. ಪರಮಾತ್ಮನಿಗಿಂತ, ಆತ್ಮ, ಜೀವಾತ್ಮಗಳು ಬೇರೆಯಾಗಿ ಅವುಗಳ ಕೆಲಸಗಳು ಸಹ ಬೇರೆಯಾಗಿರುವುದರಿಂದ, ಅವು ನಾನಲ್ಲ ಎಂದಿದ್ದಾನೆ. ಪರಮಾತ್ಮ ಅಂಶವೇ ಆತ್ಮ

ಜೀವಾತ್ಮಗಳಾಗಿ ವಿಭಜಿಸಲಾಗಿವೆ. ಆ ಎರಡು ಆತ್ಮಗಳಿಗೆ ಪರಮಾತ್ಮನೇ ಅಧಿಪತಿ. ವಾಸ್ತವವಾಗಿ ಆತ್ಮ ಜೀವಾತ್ಮಗಳಲ್ಲಿರುವುದು ಪರಮಾತ್ಮನೇ, ಆದರೂ ಅವುಗಳಿಗೆ ಪರಿಧಿ ಏರ್ಪಟ್ಟಿದೆ. ಆದ್ದರಿಂದ ನಾನು ಅವುಗಳಲ್ಲಿ ಹೇಗೆ ಬೇರೆತು ಅಧಿಪತಿಯಾಗಿದ್ದೇನೋ ನೋಡು (ತಿಳಿ) ಎಂದು ಶ್ಲೋಕದಲ್ಲಿ **'ಪಶ್ಯನ್ತಿ ಯೋಗಮೈಶ್ವರಮ್'** ಎಂದಿದ್ದಾನೆ.

ಪರಮಾತ್ಮನನ್ನು ಒಂದೇ ಶಕ್ತಿಯಾಗಿ ನೋಡಿದಂತಾದರೆ ಮೊದಲ ಶ್ಲೋಕದಲ್ಲಿ ಹೇಳಿದಂತೆ ಎಲ್ಲಾ ಜೀವರಾಶಿಗಳು ಅದರಲ್ಲಿಯೇ ಇವೆ. ಆ ಮಾತು ಅಲ್ಲಿ ವಾಸ್ತವ. ಪರಮಾತ್ಮನನ್ನು ಮೂರಾಗಿ ವಿಭಜಿಸಿ ನೋಡಿದರೆ ಸರ್ವಜೀವರಾಶಿಗಳು ಆತ್ಮನಲ್ಲಿವೆಯಾಗಲಿ ಪರಮಾತ್ಮನಲ್ಲಿಲ್ಲ. ಶರೀರವೆಲ್ಲ ವ್ಯಾಪಿಸಿ ಚೈತನ್ಯವಾಗಿರುವುದು ಆತ್ಮ. ಶರೀರವೆಲ್ಲ ವ್ಯಾಪಿಸಿದ ಆತ್ಮನಲ್ಲಿಯೇ ಶರೀರದಲ್ಲಿನ ಜೀವಾತ್ಮವೂ ಸಹ ಇದೆ. ಶರೀರದಲ್ಲಿ ಒಂದುಕಡೆ ಇರುವ ಜೀವಾತ್ಮ ಶರೀರವೆಲ್ಲ ತುಂಬಿದ ಆತ್ಮನಲ್ಲಿದೆ ಎಂದು ಹೇಳಬಹುದು. ಆದ್ದರಿಂದ ಪರಮಾತ್ಮನಾಗಿ ಹೇಳಿರುವುದರಲ್ಲಿ ಜೀವಾತ್ಮಗಳು ಇಲ್ಲವೆಂಬುವುದು ಇಲ್ಲಿ ವಾಸ್ತವ.

ಒಂದೇ ಪರಮಾತ್ಮ ಮೂರಾಗಿ ವಿಭಜಿಸಲ್ಪಟ್ಟು ಇರುವುದಾದರೂ, ವಿಭಜಿಸಲ್ಪಡದೆ ನೋಡಿದ ಪಕ್ಷದಲ್ಲಿ ಸರ್ವಜೀವಿಗಳು ಪರಮಾತ್ಮನೊಳಗಿನವೆಂದು, ವಿಭಜಿಸಿ ನೋಡಿದರೆ ಸರ್ವಜೀವಿಗಳು ಪರಮಾತ್ಮನಲ್ಲಿ ಇಲ್ಲವೆಂದು ಸ್ಪಷ್ಟವಾಗಿ ಹೇಳಬಹುದು. ಉದಾಹರಣೆಗೆ ಒಬ್ಬನಿಗೆ ಆಸ್ತಿ 9 ಎಕರೆಗಳಿದೆಯೆಂದುಕೊಳ್ಳೋಣ. ಅವನಿಗೆ ಮೂವರು ಗಂಡುಮಕ್ಕಳು ಇದ್ದಾರೆಂದುಕೊಳ್ಳೋಣ. ಅವರಿಗೆ ಯುಕ್ತವಯಸ್ಸು ಬಂದ ನಂತರ ಒಬ್ಬೊಬ್ಬರಿಗೆ ಮೂರು ಎಕರೆಗಳ ಪ್ರಕಾರ ಹಂಚಿದ್ದಾನೆಂದುಕೊಳ್ಳೋಣ. ಅದರಲ್ಲಿ ಒಂದು ಮೂರು ಎಕರೆ ಸ್ಥಳವನ್ನು ತೋರಿಸಿ ಇದು ಯಾರದೆಂದು ಕೇಳಿದರೆ, ಅವನ ಮಗನದೆಂದು ಹೇಳಬಹುದು. ಹಂಚದ ಮೊದಲು ಕೇಳಿದಂತಾದರೆ ಒಟ್ಟಾರೆ ಆಸ್ತಿ ಎಲ್ಲಾ ತಂದೆಯದೆಂದು ಹೇಳಬಹುದು. ಆಗ ಅದು ನಿಜ. ಹಂಚಿದ ನಂತರ ಆಸ್ತಿ ತಂದೆಯದು ಅಲ್ಲ ಮಕ್ಕಳದು ಎಂದು ಹೇಳಬಹುದು. ಈಗ ಇದು ನಿಜ. ಈ ವಿಧವಾಗಿಯೇ ಏಕವಾಗಿರುವ ಪರಮಾತ್ಮನಲ್ಲಿ ಸಮಸ್ತ ಜೀವರಾಶಿಗಳಿವೆಯೆಂಬುವ ಮಾತು ನಿಜ. ವಿಭಜಿಸಲಾದ ಪರಮಾತ್ಮನಲ್ಲಿ ಯಾವ ಜೀವರಾಶಿ ಇಲ್ಲ ಎನ್ನುವ ಮಾತು ಸಹ ವಾಸ್ತವ ಎಂದು ಗ್ರಹಿಸಬೇಕು.

**(8) ಶ್ಲೋ॥ 6 : ಯಥಾಽಽಕಾಶಸ್ಥಿತೋನಿತ್ಯಂವಾಯುಃ ಸರ್ವತ್ರಗೋಮಹಾನ್ ।**
**ತಥಾ ಸರ್ವಾಣಿ ಭೂತಾನಿ ಮತ್‌ಸ್ಥಾನೀತ್ಯು ಪಧಾರಯ! ॥**

**(ಪರಮಾತ್ಮ)**

**ಭಾವಾರ್ಥ :** ಬಲ ಹೊಂದಿ ಸರ್ವತ್ರ ಸಂಚರಿಸುವ ಗಾಳಿ ನಿತ್ಯವು ಆಕಾಶದಲ್ಲಿ ಹೇಗಿದೆಯೋ, ಹಾಗೆ ಸರ್ವಜೀವರಾಶಿಗಳು ನನ್ನಲ್ಲಿವೆ ಎಂದು ಗ್ರಹಿಸು.

**ವಿವರ :** ಆಕಾಶ ಶೂನ್ಯವಾದದು. ಶೂನ್ಯದಲ್ಲಿ ಯಾವ ಪಟ್ಟು(ಆಧಾರ) ಇರುವುದಿಲ್ಲ. ಅಂತಹ ಯಾವ ಆಧಾರವಿಲ್ಲದ ಆಕಾಶದಲ್ಲಿ ಆಧಾರಹೊಂದಿ ಬಲವಾಗಿ ಏನನ್ನಾದರು ತಳ್ಳುವ ಮಹಾಶಕ್ತಿ ಹೊಂದಿರುವ ಗಾಳಿ ಎಲ್ಲಾಕಡೆ ಸಂಚರಿಸುತ್ತಿದೆ. ಆಧಾರವಿಲ್ಲದ ಆಕಾಶದಲ್ಲಿ ಆಧಾರ ಮಾಡಿಕೊಂಡು ಸಂಚರಿಸುವುದು, ಮತ್ತಷ್ಟು ಬಲಹೊಂದಿ ಸಂಚರಿಸುವುದು ದೊಡ್ಡ ವಿಧಾನವೇ ಅಲ್ಲವೆ! ಎಂದು ನಾವು ಅಂದಾಗ ಕೆಲವರು *'ಈ ದಿನ ಸ್ಕೈಲಾಬ್‌ಗಳನ್ನು, ಉಪಗ್ರಹಗಳನ್ನು ಮನುಷ್ಯ ತಯಾರುಮಾಡಿ ಬಿಟ್ಟಿದ್ದಾನೆ ಅಲ್ಲವೆ! ಅವುಗಳು ಆಧಾರವಿಲ್ಲದೆ ಆಕಾಶದಲ್ಲಿ ಎಗರುತ್ತಾ ಮುಂದಕ್ಕೆ ಹೋಗುತ್ತಿವೆ ಅಲ್ಲವೆ! ಹಾಗೆಯೇ ಅಲ್ಲವೆ ವಾಯುವೂ ಸಹ ಆಕಾಶದಲ್ಲಿದೆ'* ಎಂದು ಹೇಳಬಹುದು. ಮನುಷ್ಯ ಉಪಗ್ರಹಗಳಿಗೆ ಯಂತ್ರಗಳಿವೆ, ಕಾಣಿಸುವ ರೂಪವಿದೆ. ಗಾಳಿಗೆ ರೂಪವಿಲ್ಲ. ಆದ್ದರಿಂದ ಉಪಗ್ರಹಗಳಿಗೂ, ಗಾಳಿಗೂ ಹೋಲಿಕೆ ಇರುವುದಿಲ್ಲ.

ಕಾಣಿಸದ ಆಕಾಶದಲ್ಲಿ, ಕಾಣಿಸದ ಗಾಳಿ ಬಲಹೊಂದಿ ಹೇಗೆ ಕದಲುತ್ತಿದೆಯೋ, ಹಾಗೆ ಕಾಣಿಸದ ಪರಮಾತ್ಮನಲ್ಲಿ, ಕಾಣಿಸದ ಜಿವಾತ್ಮಗಳು ಬಲಹೊಂದಿ ಚಲಿಸುತ್ತಿವೆ. ಆಕಾಶದಲ್ಲಿ ಗಾಳಿಗೆ ಸ್ಥಾನ ಹೇಗಿದೆಯೋ, ಪರಮಾತ್ಮನಲ್ಲಿಯೂ ಸಹ ಜೀವಾತ್ಮಗಳಿಗೆ ಸ್ಥಾನವು ಹಾಗೇ ಇದೆ. ಇಲ್ಲಿ ಗ್ರಹಿಸಬೇಕಾದ ವಿಷಯ ಏನೆಂದರೆ! ಒಂದನೇ ಶ್ಲೋಕದಲ್ಲಿ ಜೀವರಾಶಿಗಳು ನನ್ನಲ್ಲಿವೆ ಎಂದಿದ್ದಾನೆ. ಎರಡನೇ ಶ್ಲೋಕದಲ್ಲಿ ಯಾವ ಜೀವರಾಶಿ ನನ್ನಲ್ಲಿ ಇಲ್ಲವೆಂದಿದ್ದಾನೆ. ಪುನಃ ಈಗ ಮೂರನೆ ಶ್ಲೋಕದಲ್ಲಿ ಆಕಾಶದಲ್ಲಿ ಗಾಳಿ ಇರುವಂತೆ, ಜೀವಾತ್ಮಗಳು ನನ್ನಲ್ಲಿವೆ ಎನ್ನುತ್ತಿದ್ದಾನೆ.

ವಿಭಜಿಸಿ ನೋಡಿದರು ಜೀವಾತ್ಮಗಳಿಗೆ ಆಧಾರವು ಆತ್ಮವೆಂದು ಸ್ಪಷ್ಟವಾಗಿ ತಿಳಿಯುತ್ತಿದೆ. ವಿಭಜಿಸದೆ ಹೋದಂತಾದರೆ ಜೀವಿಗಳಿಗೆ ಕಾಣಿಸದೆ ಪರಮಾತ್ಮ ಆಧಾರವಾಗಿ ಇದೆಯೆಂದು ಜ್ಞಾಪಕ ಇಟ್ಟುಕೊಳ್ಳಬೇಕು.

**(8) ಶ್ಲೋ॥ 7 : ಸರ್ವಭೂತಾನಿ ಕೌಂತೇಯ! ಪ್ರಕೃತಿಂಯಾನ್ತಿ ಮಾಮಿಕಾಮ್ ।**
**ಕಲ್ಪಕ್ಷಯೇ ಪುನಸ್ಥಾನಿ ಕಲ್ಪಾದೌ ವಿಸೃಜಾ ಮ್ಯಹಮ್ ॥**

**(ಪರಮಾತ್ಮ)**

**ಭಾವಾರ್ಥ :** ಸರ್ವಜೀವರಾಶಿಗಳು ಕಲ್ಪಕ್ಷಯದಲ್ಲಿ ನನ್ನ ಪ್ರಕೃತಿಯಲ್ಲಿಯೇ ಲೀನವಾಗುತ್ತಿವೆ. ಕಲ್ಪಾದಿಯಲ್ಲಿ ನಾನೇ ಮತ್ತೆ ಅವುಗಳನ್ನು ಹುಟ್ಟುಸುತ್ತಿದ್ದೇನೆ.

**ವಿವರ :** ಜೀವರಾಶಿಗಳ ತಲೆಯಲ್ಲಿ ನಾಲ್ಕು ಚಕ್ರಗಳ ಸಮೂಹವೊಂದು ಜೋಡಿಸಲ್ಪಟ್ಟಿದೆ. ಬ್ರಹ್ಮನಾಡಿ ಆಧಾರವಾಗಿರುವ ಆ ನಾಲ್ಕುಚಕ್ರಗಳು ಮೇಲಿಂದ ಕ್ರಮವಾಗಿ 1) ಬ್ರಹ್ಮಚಕ್ರ 2) ಕಾಲಚಕ್ರ 3) ಕರ್ಮಚಕ್ರ 4) ಗುಣಚಕ್ರ ಇವೆ. ಮೇಲಿಂದ ಬ್ರಹ್ಮಚಕ್ರ ಎರಡು ಭಾಗಗಳಾಗಿ ವಿಭಜಿಸಲಾಗಿದ್ದು ಅರ್ಧಭಾಗದಲ್ಲಿ ಪ್ರಪಂಚ ಇರುವಂತೆ, ಅರ್ಧಭಾಗದಲ್ಲಿ ಪ್ರಪಂಚ ಇಲ್ಲದಂತೆ ನಿರ್ಣಯಿಸಲ್ಪಟ್ಟಿದೆ. ಬ್ರಹ್ಮಚಕ್ರ ಅರ್ಧಭಾಗ ತಿರುಗುವಾಗ ಪ್ರಪಂಚವಿದೆ. ಅರ್ಧಭಾಗ ತಿರುಗುವುದಕ್ಕೆ ಬೇಕಾದ ಕಾಲ ಸಾವಿರಯುಗಗಳು. ಪ್ರಪಂಚ ವಿದ್ದರೂ ಸಾವಿರಯುಗಗಳ ಕಾಲ ಪರಮಾತ್ಮಕ್ಕೆ ಹಗಲಾಗಿ, ಪ್ರಪಂಚವಿಲ್ಲದ ಕಾಲ ಪರಮಾತ್ಮಕ್ಕೆ ರಾತ್ರಿಯಾಗಿ ಹೇಳಿಕೊಂಡಿದ್ದೇವೆ. ಹಗಲು ಸಾವಿರಯುಗಗಳ ಕಾಲವನ್ನು ಕಲ್ಪವು ಎನ್ನುತ್ತಿದ್ದೇವೆ. ಕಲ್ಪದ ಪ್ರಾರಂಭದಲ್ಲಿ ಪ್ರಪಂಚದ ಹುಟ್ಟುವಿಕೆ, ಕಲ್ಪದ ಕೊನೆಯಲ್ಲಿ ಪ್ರಪಂಚದ ಕ್ಷಯ ಎಂದರೆ ನಾಶವೆಂದು ತಿಳಿಯಬೇಕು. ಇದರಿಂದ ಪ್ರಪಂಚದಲ್ಲಿ ಮೊದಲಿನಿಂದ ಕೊನೆಯವರೆಗೂ ಸಾವಿರಯುಗಗಳ ಕಾಲದಲ್ಲಿ ಬ್ರಹ್ಮಚಕ್ರ ಅರ್ಧ ಸುತ್ತು ತಿರುಗುತ್ತಿದೆ. ಹಾಗೆಯೇ ಅದರ ಕೆಳಗಿನ ಚಕ್ರವಾದ ಕಾಲಚಕ್ರವು ವರ್ಷಕ್ಕೊಂದು ಸುತ್ತು ತಿರುಗುತ್ತದೆ. ಕಾಲಚಕ್ರಕ್ಕಿಂತ ಕೆಳಗಿರುವ ಕರ್ಮಚಕ್ರವು ದಿನಕ್ಕೊಂದು ಸುತ್ತು ತಿರುಗುತ್ತಿರುವಾಗ, ಅದಕ್ಕಿಂತ ಕೆಳಗಿರುವ ಗುಣಚಕ್ರವು ಗಂಟೆಗೊಂದು ಸುತ್ತು ತಿರುಗುತ್ತದೆ.

ಎಲ್ಲದಕ್ಕಿಂತ ಕೆಳಗಿರುವ ಗುಣಚಕ್ರ ಮೂರು ಭಾಗಗಳಾಗಿ ವಿಭಜಿಲ್ಪಟ್ಟಿದೆ. ಅದರಲ್ಲಿಯೇ ಯಾವುದೋ ಒಂದು ಭಾಗದಲ್ಲಿ ಜೀವಾತ್ಮ ನಿವಾಸವಿರುತ್ತಾನೆ. ಜೀವಾತ್ಮದ ನಿವಾಸ ಕೇಂದ್ರದಿಂದ ಯುಗಪರ್ಯಂತವು ಲೆಕ್ಕಾಚಾರವಿದೆ. ಜೀವಾತ್ಮ ನಿವಾಸಿಸುವ ಗುಣಭಾಗದಲ್ಲಿನ ಗುಣಗಳು ಒಳ್ಳೆಯವು ಆರು, ಕೆಟ್ಟವು ಆರು ಒಟ್ಟು 12 ಇವೆ. ಒಂದೊಂದು ಗುಣವು ನವಗ್ರಹಗಳ ಪ್ರಕಾರ ಒಂಭತ್ತು ಭಾಗಗಳಾಗಿ ವಿಭಜಿಸಲ್ಪಟ್ಟಿದೆ. 12 ಗುಣಗಳು 9 ಭಾಗಗಳಾಗಿ ವಿಭಜಿಸಲ್ಪಡುವುದರಿಂದ ಒಟ್ಟು 12X9=108 ಭಾಗಗಳಾಗಿ ವಿಭಜನಗೊಂಡಿವೆ. 108 ಗುಣಗಳಿರುವ ಗುಣಭಾಗದಲ್ಲಿ ಜೀವಾತ್ಮ ವಾಸಿಸುತ್ತಿದ್ದಾನೆಂದು ಮುಖ್ಯವಾಗಿ ಗುರುತಿಸಿಕೊಳ್ಳಬೇಕು. ಒಂದೊಂದು ಜೀವಾತ್ಮ ಶರೀರಗಳಲ್ಲಿ ಮೂರು ಗುಣ ಆವರಣಗಳಲ್ಲಿ ಯಾವುದೋ ಒಂದು ಭಾಗದಲ್ಲಿ ನಿವಾಸವಾಗಿರುವುದರಿಂದ, ಒಂದು ಗಂಟೆಗೆ ಗುಣಚಕ್ರ ಒಂದುಸುತ್ತು ತಿರುಗುವುದರಿಂದ, ಮೂರು ಗುಣ ಆವರಣಗಳಲ್ಲಿನ ಒಟ್ಟು ಮುಖ್ಯ

ಗುಣಗಳು 12X3=36 ಒಂದು ಗಂಟೆಗೆ ತಿರುಗಿದಂತಾಗುತ್ತದೆ. ಆದ್ದರಿಂದಲೇ ಪೂರ್ವದಲ್ಲಿ ಹಿರಿಯರು ಇತರರನ್ನು ಕುರಿತು ಹೇಳುವಾಗ ಅವನಿಗೆ ಗಂಟೆಗೆ ಮೂವತ್ತಾರು ಗುಣಗಳು ಬದಲಾಗುತ್ತಿರುತ್ತವೆಂದು ಹೇಳುವುದು ವಾಡಿಕೆ ಇದೆ. ಹಾಗೆ ಒಂದು ಗಂಟೆಗೆ ಗುಣಚಕ್ರದಲ್ಲಿನ ಮೂರು ಆವರಣಗಳಲ್ಲಿರುವ 36 ಗುಣಗಳು ತಿರುಗುತ್ತಿರುವಾಗ, ಒಂದು ದಿನಕ್ಕೆ ಅಂದರೆ 12 ಗಂಟೆಗಳ ಕಾಲಕ್ಕೆ 36X12=432 ಗುಣಗಳು ಬದಲಾದಂತಾಗುತ್ತದೆ.

ಮಾನವನ ಹಗಲಿನ ಕಾಲದಲ್ಲಿ 432 ಗುಣಗಳು ತಿರುಗುತ್ತಿವೆ. ಪರಮಾತ್ಮನ ಹಗಲು ಕಾಲ ಸಾವಿರಯುಗಗಳು ಆದ್ದರಿಂದ ಮಾನವನ ಹಗಲನ್ನು ಸಾವಿರಬಾರಿ ಹೆಚ್ಚಸಬೇಕಾಗಿ ಬಂದಿದೆ. ಅದರ ಪ್ರಕಾರ ಸಾವಿರ ಬಾರಿ ಮಾನವನ ಹಗಲನ್ನು ಹೆಚ್ಚು ಮಾಡಿಕೊಳ್ಳುವುದರಿಂದ ಮಾನವನ ಹಗಲಿನಲ್ಲಿ 432 ಗುಣಗಳನ್ನು ಸಾವಿರ ಸಲ ಹೆಚ್ಚಿಸಲಾಗಿಬಂದಿದೆ. ಅಲ್ಲಿಗೆ ಒಟ್ಟು 4,32,000 ಗುಣಗಳ ಸಂಖ್ಯೆ ಬಂದಿದೆ. ಗುಣಗಳಿಂದಲೇ ಈ ಪ್ರಪಂಚ ಬೆಳೆಯುವುದು ಇಳಿಯುವುದು ನಡೆಯುತ್ತಿರುವುದರಿಂದ ಆ ಗುಣಗಳ ಸಂಖ್ಯೆಯನ್ನೇ ಆಧಾರ ಮಾಡಿಕೊಂಡು ಒಂದು ಯುಗಕಾಲವನ್ನು ನಿರ್ಣಯಿಸ ಬೇಕಾಗಿ ಬಂದಿದೆ. ಈ ಲೆಕ್ಕ ಪ್ರಕಾರ ಮೊದಲ ಯುಗದಲ್ಲಿ 4,32,000 ವರ್ಷಗಳು. ಎರಡನೆಯದಾದ ದ್ವಾಪರಯುಗದಲ್ಲಿ ಅದಕ್ಕಿಂತ ಎರಡರಷ್ಟು 8,64,000 ವರ್ಷಗಳು, ಮೂರನೆಯದಾದ ತ್ರೇತಾಯುಗವು ಮೂರಷ್ಟು 12,96,000 ನಾಲ್ಕನೆಯದಾದ ಕೃತಯುಗ ನಾಲ್ಕರಷ್ಟು 17,28,000 ವರ್ಷಗಳು. ಈ ವಿಧವಾಗಿ ಯುಗಗಳ ಆಯಸ್ಸು ನಿರ್ಣಯಿಸಲಾಗಿದೆ. ನಾಲ್ಕನೆಯದಾದ ಕೃತಯುಗದಿಂದ ಪ್ರಪಂಚ ಪ್ರಾರಂಭಮಾಡಲಾಗಿದೆ. ನಾಲ್ಕು ಯುಗಗಳು 250 ಬಾರಿ ನಡೆದಂತಾದರೆ ಸಾವಿರಯುಗಗಳಾಗುತ್ತದೆ.

**ನಾಲ್ಕು ಯುಗಗಳ ಲೆಕ್ಕಪ್ರಕಾರ ಒಟ್ಟು ವರ್ಷಗಳು**

| | | |
|---|---|---|
| **1) ಕಲಿಯುಗ** | = | **4,32,000** |
| **2) ದ್ವಾಪರಯುಗ** | = | **8,64,000** |
| **3) ತ್ರೇತಾಯುಗ** | = | **12,96,000** |
| **4) ಕೃತಯುಗ** | = | **17,28.000** |
| **ಒಟ್ಟು ನಾಲ್ಕು ಯುಗಗಳು** | = | **43,20,000** |

**ಒಟ್ಟು ಕಾಲವು 43,20,000 ವರ್ಷಗಳು(ಸಂವತ್ಸರಗಳು)**

ನಾಲ್ಕು ಯುಗಗಳು 250 ಬಾರಿ ನಡೆದರೆ 43,20,000X250=108,00,00,000 ಒಟ್ಟು ವರ್ಷಗಳಾಗುತ್ತವೆ. ಪರಮಾತ್ಮನ ಹಗಲು 108 ಕೋಟಿ ವರ್ಷಗಳು 108 ಉಪ ಗುಣಗಳಿಗೆ ಪ್ರತೀಕವಾಗಿವೆ. ಮಾನವನ ಹಗಲಿನ ಕಾಲದಲ್ಲಿ 432 ಗುಣಗಳು ತಿರುಗಿದಾಗ ನಾಲ್ಕನೆ ಯುಗವಾದ ಕಲಿಯುಗ ಕಾಲವು 4,32,000 ವರ್ಷಗಳಾಗಿವೆ. ನಾಲ್ಕುಯುಗಗಳ ಒಟ್ಟು ಕಾಲ 43,20,000. ಜೀವಾತ್ಮನ ಗುಣ ಆವರಣದಲ್ಲಿ ಜೀವಾತ್ಮ ಇರುವ ಗುಣಗಳ ಸಂಖ್ಯೆಯಿಂದ ಯುಗಗಳವರೆಗೂ ಲೆಕ್ಕಿಸಿ ನಿರ್ಣಯಿಸಲ್ಪಟ್ಟಿದೆ. ಜೀವಾತ್ಮನ ಗುಣಗಳನ್ನು ಕೇಂದ್ರವಾಗಿ ಮಾಡಿಕೊಂಡು ನಿರ್ಣಯಿಸಲಾದ ಲೆಕ್ಕಾಚಾರವೇ ಯುಗಗಳು, ಯುಗಗಳಿಂದ ಕೂಡಿಕೊಂಡ ಕಲ್ಪವು ಈಗ ಅರ್ಥವಾಗಿದೆಯೆಂದುಕೊಳ್ಳುತ್ತೇವೆ. ಕಲ್ಪ ಎಂದರೆ 108 ಕೋಟಿ ವರ್ಷಗಳೆಂದು, ಈ ಕಲ್ಪ ಪ್ರಾರಂಭವಾದಾಗ ಜೀವಿಗಳು ಹುಟ್ಟುವುದು ಪ್ರಪಂಚ ಏರ್ಪಡುವುದು ನಡೆಯುತ್ತದೆಂದು, ಕಲ್ಪ ನಾಶವಾದಾಗ ಸರ್ವವು ನಾಶವಾಗುತ್ತದೆಂದು ತಿಳಿಯಬೇಕು. ಈ ವಿಷಯವನ್ನೇ ಭಗವಂತನು ತಿಳಿಸುತ್ತಾ ಕಲ್ಪ ಅಂತ್ಯದಲ್ಲಿ ಸರ್ವಜೀವಿಗಳು ನನ್ನ ಪ್ರಕೃತಿಯಲ್ಲಿ ಲೀನವಾಗುತ್ತವೆಂದು, ಕಲ್ಪಾದಿಯಲ್ಲಿ ಸರ್ವಜೀವಿಗಳನ್ನು ನಾನೇ ಪುನಃ ಹುಟ್ಟಿಸುತ್ತಿದ್ದೇನೆಂದಿದ್ದಾನೆ.

**(8) ಶ್ಲೋ॥ 8 : ಪ್ರಕೃತಿಂ ಸ್ವಾಮ ವಷ್ಟಭ್ಯ ವಿಸೃಜಾಮಿ ಪುನಃ ಪುನಃ ।**
**ಭೂತಗ್ರಾಮ ಮಿಮಂ ಕೃತ್ಸ್ನ ಮವಶಂ ಪ್ರಕೃತೇರ್ವಶಾತ್ ॥**

**(ಪರಮಾತ್ಮ)**

**ಭಾವಾರ್ಥ :** ಪ್ರಕೃತಿ ವಶದಿಂದ ಅಸ್ವತಂತ್ರವಾಗಿರುವ ಈ ಸಮಸ್ತ ಜೀವರಾಶಿಗಳನ್ನು ನನ್ನ ಅಧೀನದಲ್ಲಿರುವ ಪ್ರಕೃತಿಯಿಂದಲೇ ಪುನಃ ಪುನಃ ಹುಟ್ಟಿಸುತ್ತಿದ್ದೇನೆ.

**ವಿವರ :** ಪರಮಾತ್ಮ ತನಗೂ ಜೀವರಾಶಿಗಳಿಗೂ ಮಧ್ಯದಲ್ಲಿ ಪ್ರಕೃತಿಯನ್ನು ಇಟ್ಟುಕೊಂಡಿದ್ದಾನೆ. ಪ್ರಕೃತಿ ಅಧೀನದಲ್ಲಿ ಜೀವರಾಶಿಗಳಿರುವಂತೆ ಮಾಡಿ, ತನ್ನ ಅಧೀನದಲ್ಲಿ ಪ್ರಕೃತಿಯನ್ನು ಇರುವಂತೆ ಮಾಡಿಕೊಂಡಿದ್ದಾನೆ. ತನಗು ಜೀವಾತ್ಮಗಳಿಗು ಮಧ್ಯದಲ್ಲಿ ನೇರವಾದ ಸಂಬಂಧವಿಲ್ಲದಂತೆ ಮಾಡಿಕೊಂಡಿದ್ದಾನೆ. ಜೀವಾತ್ಮಗಳೆಲ್ಲ ಪ್ರಕೃತಿ ಅಧೀನದಲ್ಲಿರುವುದರಿಂದ ಅವುಗಳಿಗೆ ಸ್ವತಂತ್ರವಿಲ್ಲ. ಗುಣಗಳು, ಕರ್ಮ, ಮನಸ್ಸು, ಬುದ್ಧಿ, ಚಿತ್ತ, ಅಹಮ್ ಎನ್ನುವ ಎಷ್ಟೋ ಭಾಗಗಳಾಗಿ ವಿಭಜಿಸಲ್ಪಟ್ಟಿರುವ ಪ್ರಕೃತಿಯಲ್ಲಿ ಸಿಲುಕಿಕೊಂಡ ಜೀವಾತ್ಮ ಅವುಗಳ ಪ್ರಕಾರ ಹುಟ್ಟಬೇಕಾದ್ದೆ, ಆದರೆ ತನ್ನ ಇಷ್ಟ ಪ್ರಕಾರ ಹುಟ್ಟುವುದಕ್ಕೆ ಸಾಧ್ಯವಿಲ್ಲ. ತನ್ನ ಹುಟ್ಟು

ಸಹ ತನ್ನ ಕೈಯಲ್ಲಿಲ್ಲದ ಜೀವಾತ್ಮಗಳು ಶ್ಲೋಕದಲ್ಲಿ ಹೇಳಿದಂತೆ ಎಲ್ಲಾ ವಿಷಯಗಳಲ್ಲಿ ಅಸ್ವತಂತ್ರವಾಗಿವೆ. ಹಾಗೆ ಸ್ವತಂತ್ರವಿಲ್ಲದ ಜೀವರಾಶಿಗಳನ್ನು ಪರಮಾತ್ಮನೇ ತನ್ನ ಪ್ರಕೃತಿಯಿಂದ, ಅದರಲ್ಲಿರುವ ಕರ್ಮ ಭಾಗಗಳಿಂದ ವಿಧವಿಧಗಳಾಗಿ ಹುಟ್ಟಿಸುತ್ತಿದ್ದಾನೆ. ಜೀವರಾಶಿಗಳು ಹುಟ್ಟುವುದಕ್ಕೆ ಮೂಲಕರ್ತ ಪರಮಾತ್ಮನೇ ಆದರೂ ಮೇಲಕ್ಕೆ ಕಾಣಿಸುವಂತೆ ಪ್ರಕೃತಿಯನ್ನು ಇಟ್ಟಿದ್ದಾನೆ.

**(8) ಶ್ಲೋ॥ 9 : ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ! ।**
**ಉದಾಸೀನವ ದಾಸೀನ ಮಸಕ್ತಂ ತೇಷು ಕರ್ಮಸು ॥**

**(ಪರಮಾತ್ಮ)**

**ಭಾವಾರ್ಥ :** ಆಸಕ್ತಿಯಿಲ್ಲದವನು, ಉದಾಸೀನತೆ ಹೊಂದಿದವನಾದ ನನಗೆ ಆ ಕರ್ಮಗಳು ಅಂಟುವುದಿಲ್ಲ.

**ವಿವರ :** ಅವರವರ ಕರ್ಮಾನುಸಾರ ಪ್ರಕೃತಿಯೇ ಜೀವಿಗಳನ್ನು ಹುಟ್ಟಿಸುತ್ತಿದೆ. ಪ್ರಕೃತಿ ಮಾಡುವ ಕೆಲಸದಲ್ಲಿ ಆಸಕ್ತಿ ಇಲ್ಲದವನಾಗಿ ಸಾಕ್ಷಿಯಾಗಿ ನೋಡುತ್ತಿರುವುದರಿಂದ ಜೀವಿಗಳನ್ನು ಹುಟ್ಟಿಸುವುದರಲ್ಲಿನ ಕರ್ಮ ಪರಮಾತ್ಮನಿಗೆ ಅಂಟುವುದಿಲ್ಲ. ಇಲ್ಲಿ ಒಬ್ಬ ಸಾಧಾರಣ ಮನುಷ್ಯನಿಗೆ ಹೇಗೆ ಕರ್ಮ ಅಂಟುವುದಿಲ್ಲವೋ, ಅದೇ ಪದ್ಧತಿಯಲ್ಲಿ ಜಗತ್ತನ್ನು ಸೃಷ್ಟಿಸುವ ದೊಡ್ಡಕಾರ್ಯದಲ್ಲಿಯೂ ಸಹ ಕರ್ಮ ಅಂಟದಂತಿರಲು, ಪರಮಾತ್ಮನು ಸಹ ನಡೆದುಕೊಳ್ಳುವುದು ಮುಖ್ಯವಾಗಿ ಗಮನಿಸಬೇಕಾದ ವಿಷಯ. ಜಗತ್ತು ಸೃಷ್ಟಿಗೆ ಮೂಲಕರ್ತ ತಾನೇ ಆದರೂ ಪ್ರಕೃತಿ ಮೂಲಕ ಕೆಲಸ ಮಾಡಿಸುತ್ತಾ, ತನಗೇನು ಅಂಟದವನಂತೆ ಅನಾಸಕ್ತನಾಗಿ ಪರಮಾತ್ಮ ಇದ್ದಾನೆ. ಪ್ರಕೃತಿ ಮಾಡುವ ಕೆಲಸಗಳನ್ನು ನಾನು ಮಾಡಲಿಲ್ಲ ಎನ್ನುತ್ತಿದ್ದಾನೆ. ಆದ್ದರಿಂದ ಜಗತ್ತಿಗೆ ಉಂಟಾಗುವ ಪ್ರಳಯ ಸಂಭವಗಳ ಎರಡರ ಪಾಪಪುಣ್ಯಗಳು ನನಗಂಟುವುದಿಲ್ಲವೆಂದು ಹೇಳುತ್ತಿದ್ದಾನೆ. ಈ ವಿಧಾನವನ್ನೇ ಮನುಷ್ಯ ಅನುಸರಿಸಿದಂತಾದರೆ, ಅವನಿಗೂ ಸಹ ಕರ್ಮಗಳು ಅಂಟುವುದಿಲ್ಲವೆಂದು ಹಿಂದಿನ ಅಧ್ಯಾಯದಲ್ಲಿ ಹೇಳಿದ್ದಾನೆಂದು ಜ್ಞಾಪಕ ಮಾಡಿಕೊಳ್ಳಬೇಕು.

**(8) ಶ್ಲೋ॥ 10 : ಮಯಾಽಧ್ಯಕ್ಷೇಣ ಪ್ರಕೃತಿ ಸ್ಸೂಯತೇ ಸಚರಾಚರಮ್ ।**
**ಹೇತುನಾಽನೇನ ಕೌಂತೇಯ! ಜಗ ದ್ವಿಪರಿವರ್ತತೇ ॥**

**(ಪರಮಾತ್ಮ)**

**ಭಾವಾರ್ಥ :** ನನ್ನ ಅಧ್ಯಕ್ಷತೆಯಿಂದಲೇ ಚರಾಚರ ಪ್ರಪಂಚವೆಲ್ಲವನ್ನು ಪ್ರಕೃತಿ ಹುಟ್ಟಿಸುತ್ತಿದೆ. ಆ ಕಾರಣದಿಂದಲೇ ಜಗತ್ತು ಪರಿವರ್ತಿಸುತ್ತಿದೆ.

**ವಿವರ :** ಪರಮಾತ್ಮ ಪ್ರಕೃತಿಗೆ ಅಧ್ಯಕ್ಷತೆ ವಹಿಸಿರುವಾಗ ಪ್ರಕೃತಿ ಸಕಲ ಚರಾಚರ ಜೀವರಾಶಿಗಳನ್ನು ಸೃಷ್ಟಿಸುತ್ತಿದೆ. ಕಾರಣ ಪರಮಾತ್ಮನಾದರೆ, ಕಾರ್ಯವನ್ನು ಪ್ರಕೃತಿ ಮಾಡುತ್ತಿದೆ. ಈ ವಿಧಾನ ಶಾಶ್ವತವಾಗಿರುವುದರಿಂದ, ಸಾವು ಹುಟ್ಟುಗಳನ್ನು ಪ್ರಕೃತಿ ಮಾಡುತ್ತಿರುವುದರಿಂದ, ಜಗತ್ತು ಚಕ್ರದಂತೆ ತಿರುಗುತ್ತಿದೆ. ಒಂದು ಯಂತ್ರವನ್ನು ತಯಾರು ಮಾಡುವವನು ಯಂತ್ರ ತಯಾರಾಗುವವರೆಗೂ ಕಷ್ಟಪಟ್ಟು ತಯಾರುಮಾಡುತ್ತಾನೆ. ಯಂತ್ರವು ತನ್ನಷ್ಟಕ್ಕೆ ತಾನು ಕೆಲಸ ಮಾಡುವುದಕ್ಕೆ ಪ್ರಾರಂಭಿಸಿದ ನಂತರ ಅವನಿ ಗೇನು ಶ್ರಮ ಇರುವುದಿಲ್ಲ. ಮೊದಲು ಒಂದು ನಮೂನೆಯನ್ನು ತಯಾರು ಮಾಡಿದವನು ಆ ನಮೂನೆಯನ್ನು ಎಲ್ಲಿಯಾದರು ಉಪಯೋಗಿಸಿ ಕೆಲಸ ಮಾಡಿಸಬಹುದು. ಮೊದಲ ನಮೂನೆಯ ಪ್ರಕಾರವೇ ಎಲ್ಲಾ ಯಂತ್ರಗಳು ಅವಷ್ಟಕ್ಕೆ ಅವೇ ಕೆಲಸಮಾಡುತ್ತವೆ. ಮೊದಲು ಪ್ರಕೃತಿ ಎಂಬ ಯಂತ್ರವನ್ನು ಪರಮಾತ್ಮ ತಯಾರು ಮಾಡಿಟ್ಟಿದ್ದಾನೆ. ಆ ಯಂತ್ರವು ಯಾವಾಗಲು ತಿರುಗುತ್ತಾ ಕೆಲಸ ಮಾಡುತ್ತಲೆ ಇದೆ. ಪರಮಾತ್ಮ ಸಾಮರ್ಥ್ಯದಿಂದಲೇ ಯಂತ್ರವು ತಿರುಗುತ್ತಿದೆ ಎಂದು ಹೇಳಬಹುದು.

**(8) ಶ್ಲೋ॥ 11 : ಅವಜಾನನ್ತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ ।**
**ಪರಂ ಭಾವ ಮಜಾನನ್ತೋ ಮಮ ಭೂತ ಮಹೇಶ್ವರಮ್ ॥**
**(ಪರಮಾತ್ಮ, ಸಾಕಾರ)**

**ಭಾವಾರ್ಥ :** ಸರ್ವಜೀವರಾಶಿಗಳಿಗೂ ಅಧಿಪತಿಯಾದ ನಾನು ನರಶರೀರ ಧರಿಸುವುದರಿಂದ, ನನ್ನ ಶ್ರೇಷ್ಠವಾದ ಭಾವವನ್ನು ತಿಳಿಯಲಾರದೆ ಮೂಢರು ನನ್ನನ್ನು ಅವಮಾನಿಸುತ್ತಿದ್ದಾರೆ.

**ವಿವರ :** ಪರಮಾತ್ಮ ಯಾವುದೋ ಒಂದು ಸಮಯದಲ್ಲಿ ಮನುಷ್ಯನಾಗಿ ಶರೀರ ಧರಿಸುವುದು ತಪ್ಪುವುದಿಲ್ಲ. ಶರೀರ ಧರಿಸಿದ ಅಷ್ಟು ದೊಡ್ಡ ಪರಮಾತ್ಮ ಆ ಸಮಯದಲ್ಲಿ ಮಾನವನಂತೆ ಸಹಜವಾಗಿ ಇರಬೇಕಾದ್ದೆ. ಮಾನವನಿಗಿರುವ ಎಲ್ಲಾ ಕಷ್ಟಸುಖಗಳು ಆತನಿಗೂ ಸಹ ತಪ್ಪದೇ ಇರುತ್ತವೆ. ಕರ್ಮವಿಲ್ಲದ ಪರಮಾತ್ಮ ಶರೀರವನ್ನು ಧರಿಸಿದಾಗ ತನಗೊಂದು ಕರ್ಮವನ್ನು ತಾನೇ ಏರ್ಪಾಟು ಮಾಡಿಕೊಂಡು ಬರುತ್ತಾನೆ. ತಾನೇ ಸ್ವತಃವಾಗಿ ನಿರ್ಮಿಸಿಕೊಂಡ ಕರ್ಮ ಗ್ರಹಗಳ ಅಧೀನದಲ್ಲಿ ಇಲ್ಲ. ಗುಣಗಳಿಂದ ಹುಟ್ಟಿದ ಕರ್ಮ

ನವಗ್ರಹಗಳ ಅಧೀನದಲ್ಲಿರುತ್ತದೆ. ಪರಮಾತ್ಮನಿಗೆ ಮೊದಲ ಜನ್ಮದ ಕರ್ಮವಿಲ್ಲ. ಆದ ಕಾರಣ ಆ ಜನ್ಮದಲ್ಲಿ ತಾನೇ ಸೃಷ್ಟಿಸಿಕೊಂಡು ಬಂದಿರುವ ಕರ್ಮ ಯಾವ ಜ್ಯೋತಿಷ್ಯಶಾಸ್ತ್ರಕ್ಕು ಗೋಚರಿಸುವುದಿಲ್ಲ. ಹೀಗೆ ಗ್ರಹಗಳಿಗೆ ಸಂಬಂಧವಿಲ್ಲದ ಕರ್ಮವನ್ನು, ಒಂದು ಜೀವನಕ್ಕೆ ಸರಿಹೋಗುವುದನ್ನು ತಯಾರು ಮಾಡಿಕೊಂಡು ಹುಟ್ಟಿದ ಪರಮಾತ್ಮ, ಭಗವಂತನಾಗಿ ಶರೀರದಿಂದಿರುವುದು ಯಾರು ಗ್ರಹಿಸಲಾರರು. ಆದುದರಿಂದ ಆತನನ್ನು ಸಹ ಸಾಮಾನ್ಯ ಮಾನವನಂತೆ ಲೆಕ್ಕಿಸಿ, ಆತನ ಘನತೆಯನ್ನು ಯಾವ ಕಾರಣಕ್ಕು ಗುರ್ತಿಸಲಾರದ ಮೂಢ ಮಾನವರು ಭಗವಂತನನ್ನೂ ಸಹ ಅವಮಾನಿಸುತ್ತಾರೆ. ಭಗವಂತನು ಭೂಮಿ ಮೇಲೆ ಬಂದಿರುವುದು ಧರ್ಮಗಳನ್ನು ತಿಳಿಸುವ ನಿಮಿತ್ತ. ಆತನು ಏನು ಮಾಡುತ್ತಿದ್ದಾನೆಂದು ಗ್ರಹಿಸದ ಮನುಷ್ಯರು, ಆತನ ವಿಶಿಷ್ಟತೆಯನ್ನು ತಿಳಿಯದೇ ಎಷ್ಟೋ ಅವಮಾನಗಳಿಗೆ ಗುರಿಮಾಡುತ್ತಾರೆ.

**(8) ಶ್ಲೋ॥ 12 : ಮೋಘಾಶಾ ಮೋಘ ಕರ್ಮಾಣೋ ಮೋಘಜ್ಞಾನಾ ವಿಚೇತಸಃ ।**
**ರಾಕ್ಷಸೀ ಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥**
**(ಜೀವಾತ್ಮ, ಪ್ರಕೃತಿ)**

**ಭಾವಾರ್ಥ :** ರಾಕ್ಷಸ ಭಾವಗಳು ಇರುವವರು ಭ್ರಾಂತಿಯಿಂದ ಕೂಡಿದ ಪ್ರಕೃತಿ ಸ್ವಭಾವವನ್ನು ಆಶ್ರಯಿಸುತ್ತಾರೆ. ಅಂತಹವರಿಗೆ ವ್ಯರ್ಥವಾದ ಆಸೆ, ವ್ಯರ್ಥವಾದ ಕರ್ಮ ವ್ಯರ್ಥವಾದ ವಿಪರೀತ ಜ್ಞಾನ ಉಂಟಾಗುತ್ತದೆ.

**ವಿವರ :** ಪ್ರಕೃತಿ ಮಾರ್ಗ, ಪರಮಾತ್ಮ ಮಾರ್ಗ ಎನ್ನುವ ಎರಡು ಮಾರ್ಗಗಳಲ್ಲಿ ರಾಕ್ಷಸ ಭಾವ ಇರುವವರು ಪ್ರಕೃತಿ ಮಾರ್ಗವನ್ನೇ ಆಶ್ರಯಿಸುತ್ತಾರೆ. ಅಸುರಭಾವ ಇರುವವರಿಗೆ ಪರಮಾತ್ಮ ಮಾರ್ಗ ರುಚಿಸುವುದಿಲ್ಲ. ಪರಮಾತ್ಮ ಮಾರ್ಗ ಯಾವುದೆಂದು ಸ್ವಲ್ಪವಾದರು ಆಲೋಚಿಸುವುದಿಲ್ಲ. ಪ್ರಕೃತಿ ಸಂಬಂಧವಾದುದನ್ನೇ ದೊಡ್ಡದಾಗಿ ತಿಳಿಯುತ್ತಾ ಅದೇ ದೊಡ್ಡ ಜ್ಞಾನವೆಂದುಕೊಳ್ಳುತ್ತಾರೆ. ಅವರ ಬುದ್ಧಿಗೆ ನಿಷ್ಪ್ರಯೋಜನವಾದ ಕಾರ್ಯಗಳೇ ಒಳ್ಳೆಯದಾಗಿ ಕಾಣಿಸುತ್ತವೆ. ಅವರ ಜೀವನದಲ್ಲಿ ವ್ಯರ್ಥವಾದ ಕಾರ್ಯಗಳೇ ಮಾಡುತ್ತಿರುತ್ತಾರೆ.

**(8) ಶ್ಲೋ॥ 13 : ಮಹಾತ್ಮಾನಸ್ತು ಮಾಂ ಪಾರ್ಥ! ದೈವೀಂ ಪ್ರಕೃತಿ ಮಾಶ್ರಿತಾಃ ।**
**ಭಜನ್ತ್ಯ ನನ್ಯ ಮನಸೋ ಜ್ಞಾತ್ವಾ ಭೂತಾದಿ ಮವ್ಯಯಮ್ ॥**
**(ಜೀವಾತ್ಮ, ಪರಮಾತ್ಮ)**

**ಭಾವಾರ್ಥ :** ಮಹಾತ್ಮರಾದವರು ಪ್ರಕೃತಿಗೆ ದೈವವಾದ ನನ್ನನ್ನು ಆಶ್ರಯಿಸಿ, ಅವ್ಯಯನಾಗಿ ಭೂತಗಳ ಮೂಲಕಾರಕನಾಗಿ ನನ್ನನ್ನು ತಿಳಿದವರಾಗಿ, ಮನಸ್ಸಿನಲ್ಲಿ ಅನ್ಯಚಿಂತೆ ಇಲ್ಲದೆ ನನ್ನ ನ್ನು ಆರಾಧಿಸುತ್ತಾರೆ.

**ವಿವರ :** ಈ ಶ್ಲೋಕದಲ್ಲಿ **'ದೈವೀಂ ಪ್ರಕೃತಿ'** ಎನ್ನುವ ಪದಕ್ಕೆ ದೈವಪ್ರಕೃತಿ ಎಂದು ಅಥವಾ ಸತ್ವ ಪ್ರಕೃತಿ ಎಂದು ಬಹಳ ಜನರು ಬರೆಯುವುದು ನಡೆದಿದೆ. ಹಾಗೆ ಇನ್ನೊಂದು ಪ್ರಕೃತಿ ಇದೆಯೆಂದುಕೊಳ್ಳುವುದು ತಪ್ಪು. ಇರುವುದು ಒಂದೇ ಪ್ರಕೃತಿ, ಅದು ಪಂಚಭೂತ ನಿರ್ಮಿತವಾದುದು. ಪ್ರಕೃತಿ ಒಂದು, ದೈವ ಪ್ರಕೃತಿ ಮತ್ತೊಂದು ಇಲ್ಲ, 'ದೈವೀಂ ಪ್ರಕೃತಿ' ಎನ್ನುವ ಪದಕ್ಕೆ ಪ್ರಕೃತಿಗೆ ದೈವವಾದುದು ಎಂದು ಅರ್ಥ ಮಾಡಿಕೊಳ್ಳಬೇಕು. ಕಳೆದ ಜನ್ಮಗಳಲ್ಲಿ ಪರಮಾತ್ಮನನ್ನು ಆರಾಧಿಸಿದವರು ನಂತರ ಜನ್ಮಗಳಲ್ಲಿ ಮಹಾತ್ಮರಾಗುತ್ತಾರೆ. ಅವರ ಜೀವಾತ್ಮ ಜ್ಞಾನಾಗ್ನಿ ಎನ್ನುವ ದೊಡ್ಡ ಸಂಪತ್ತನ್ನು ಹೊಂದಿರುತ್ತದೆ. ಆದ್ದರಿಂದ ಅವರನ್ನು ಮಹಾತ್ಮರೆನ್ನುತ್ತಾರೆ. ಅಂತಹ ಮಹಾತ್ಮರು ಆ ಜನ್ಮದಲ್ಲಿಯೂ ಸಹ ಪ್ರಕೃತಿಗೆಲ್ಲಾ ದೈವನೊಬ್ಬನಿದ್ದಾನೆಂದು, ಆತನೇ ನಾಶವಿಲ್ಲದ ಪರಮಾತ್ಮನೆಂದು ತಿಳಿದವರಾಗಿ, ಅವರ ಮನಸ್ಸಿನಲ್ಲಿ ಅನ್ಯದೇವತೆಗಳೊಂದರ ಯೋಚನೆ ಇಲ್ಲದವರಾಗಿ, ಎಲ್ಲವನ್ನು ಮೀರಿದವನು ಪರಮಾತ್ಮನೇ ಎಂದು ಆತನನ್ನೇ ಆರಾಧಿಸುತ್ತಾರೆ.

**(8) ಶ್ಲೋ॥ 14 : ಸತತಂ ಕೀರ್ತ ಯನ್ತೋ ಮಾಂ ಯತಂತ ಶ್ಚ ದೃಢ ವ್ರತಾಃ ।**
**ನಮಸ್ಯಂತ ಶ್ಚ ಮಾಂ ಭಕ್ತ್ಯಾ ನಿತ್ಯ ಯುಕ್ತಾ ಉಪಾಸತೇ ॥**
**(ಜೀವಿಯು, ಪರಮಾತ್ಮ)**

**ಭಾವಾರ್ಥ :** ಯಾವಾಗಲು ನನ್ನನ್ನು ಕೀರ್ತಿಸಿ ಭಜಿಸುವವರು, ದೊಡ್ಡ ವ್ರತಗಳಿಂದ ಪ್ರಯತ್ನಿಸುವವರು, ನನ್ನನ್ನೇ ನಮಸ್ಕರಿಸುವವರು, ಭಕ್ತಿಯಿಂದ ನಿತ್ಯಯುಕ್ತರಾದವರು, ಎಲ್ಲರೂ ನನ್ನನ್ನು ಉಪಾಸಿಸುವವರೇ.

**ವಿವರ :** ಪರಮಾತ್ಮನನ್ನು ಮಾನವರು ತಮ್ಮ ತಮ್ಮ ಬುದ್ಧಿಗೆ ತೋಚಿದಂತೆ ಊಹಿಸಿ ಕೊಳ್ಳುತ್ತಿರುತ್ತಾರೆ. ಅವರು ಭಾವಿಸಿಕೊಂಡ ಭಾವವನ್ನು ದೊಡ್ಡದಾಗಿ ತಿಳಿದು ಕೀರ್ತನೆಗಳಿಂದ

ಯಾವಾಗಲು ಭಜನೆಗಳು ಮಾಡುವವರು ಕೆಲವರಿರುವಾಗ, ವತ್ರಗಳಿಂದಲೇ ದೈವವನ್ನು ತಿಳಿಯಬಹುದೆಂಬ ಬುದ್ದಿ ಇರುವವರು ಕೆಲವರು ಇದ್ದಾರೆ. ಅವರು ನಿಯಮನಿಷ್ಠೆಗಳಿರುವ ವ್ರತಗಳನ್ನೇ ಆಚರಿಸುತ್ತಿದ್ದಾರೆ. ಮತ್ತೆ ಕೆಲವರು ವಿಧೇಯತೆಯಿಂದ ನಮಸ್ಕರಿಸುವುದು ಒಳ್ಳೆಯದೆಂದು, ಪ್ರತಿದಿನ ನಿಯಮ ತಪ್ಪದೆ ನಮಸ್ಕರಿಸುವವರು ಇದ್ದಾರೆ. ಹಾಗೆ ಭಕ್ತಿಯಿಂದ ಅವರ ಮನಸುಗಳಲ್ಲಿ ನಿತ್ಯ ಸಂಬಂಧ ಇಟ್ಟುಕೊಳ್ಳುವವರು ಇದ್ದಾರೆ. ಇವರೆಲ್ಲರೂ ಎಷ್ಟು ವಿಧಗಳಾಗಿ ಯಾವ ದೇವತೆಗಳನ್ನು ಪೂಜಿಸಿದರು, ಎಲ್ಲರೂ ಪರಮಾತ್ಮನನ್ನು ಆರಾಧಿಸುವವರೇ ಎಂದು ತಿಳಿದುಕೊಳ್ಳಬಹುದು. ಏಕೆಂದರೆ ಪರಮಾತ್ಮ ಎಲ್ಲಾಕಡೆ ತುಂಬಿರುವವನಾದ್ದರಿಂದ ಅವರ ಆರಾಧನೆಗಳೆಲ್ಲ ಪರಮಾತ್ಮನಿಗೆ ಸೇರುತ್ತಿವೆ. ಆದರೆ ಅವರು ಮಾತ್ರ ಸೇರಲಾರರು. ಅವರು ಆರಾಧಿಸಿದವರನ್ನೇ ಸೇರುತ್ತಾರೆ.

**(8) ಶ್ಲೋ॥ 15 : ಜ್ಞಾನ ಯಜ್ಞೇನ ಚಾ ಪ್ಯನ್ಯೇ ಯಜನ್ತೋ ಮಾಮುಪಾಸತೇ ।**
**ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋ ಮುಖಮ್ ॥**

**(ಸಾಕಾರ, ಪರಮಾತ್ಮ)**

**ಭಾವಾರ್ಥ :** ಮತ್ತೆ ಕೆಲವರು ಜ್ಞಾನಯಜ್ಞದಿಂದ ಆರಾಧಿಸುವವರು, ವಿಶ್ವವ್ಯಾಪ್ತಿಯಾಗಿ ಅನೇಕ ರೂಪಗಳಾಗಿರುವ ನನ್ನನ್ನು ಏಕರೂಪವಾಗಿ ಸಾಕಾರವನ್ನು ಪೂಜಿಸುವವರು ಇದ್ದಾರೆ.

**ವಿವರ :** ಪರಮಾತ್ಮ ನಿರಾಕಾರವಾಗಿ ಎಲ್ಲಾಕಡೆ ವ್ಯಾಪಿಸಿದ್ದಾನೆ. ಮತ್ತು ವಿಶ್ವವ್ಯಾಪಿಯಾಗಿ ಅನೇಕ ರೂಪಗಳಾಗಿರುವ ಪರಮಾತ್ಮ ಒಂದು ಸಾಕಾರ ರೂಪವನ್ನು ಧರಿಸಿ ಭಗವಂತನಾಗಿಯೂ ಸಹ ಇದ್ದಾನೆ. ಹೀಗೆ ನಿರಾಕಾರನಾಗಿ, ಸಾಕಾರನಾಗಿರುವ ಪರಮಾತ್ಮನನ್ನು ಎಷ್ಟೋಜನ ಉಪಾಸಿಸುತ್ತಿದ್ದಾರೆ. ಕೆಲವರು ನಿರಾಕಾರವಾದ ಪರಮಾತ್ಮನನ್ನು ಸೇರುವುದಕ್ಕೆ ಜ್ಞಾನಾಗ್ನಿಯಿಂದ ಕರ್ಮವನ್ನು ಸುಟ್ಟುಹಾಕುತ್ತಾ ಜ್ಞಾನಯಜ್ಞ ಮಾಡುವವರಿದ್ದಾರೆ. ಮತ್ತೆ ಕೆಲವರು ಸಾಕಾರವಾದ ಭಗವಂತನನ್ನು ಭಕ್ತಿಯಿಂದ ಆರಾಧಿಸುವರು ಇದ್ದಾರೆ. ಪರಮಾತ್ಮ ಸಾಕಾರ ನಿರಾಕಾರವಾಗಿಯೇ ಅಲ್ಲದೆ ಇನ್ನೂ ಹೇಗಿರುತ್ತಾನೆಂದರೆ! ಕೆಳಗಿನ ಶ್ಲೋಕದಲ್ಲಿ ಹೇಳುತ್ತಿದ್ದಾನೆ ನೋಡಿರಿ.

**(8) ಶ್ಲೋ ॥ 16 : ಅಹಂ ಕ್ರತುರಹಂ ಯಜ್ಞಃ ಸ್ವಧಾಽಹ ಮಹ ಮೌಷಧಮ್ ।**
**ಮಂತ್ರೋಽಹ ಮಹಮೇ ವಾಽಜ್ಯ ಮಹಮಗ್ನಿರಹಂ ಹುತಮ್ ॥**

**(ಪರಮಾತ್ಮ)**

**ಭಾವಾರ್ಥ** : ನಾನೇ ಕ್ರತು, ನಾನೇ ಯಜ್ಞ, ನಾನೇ ಸ್ವದಯನು, ಔಷಧ ನಾನೇ, ಮತ್ತು ಮಂತ್ರ ನಾನೇ, ಆಜ್ಯ ನಾನೇ, ಅಗ್ನಿ ನಾನೇ, ಮೋಹವೂ ಸಹಿತ ನಾನೇ ಆಗಿದ್ದೇನೆ.

**ವಿವರ :** ಪರಮಾತ್ಮ ಅಣುವಣುವಿನಲ್ಲಿ ವಿಶ್ವವೆಲ್ಲ ವ್ಯಾಪಿಸಿರುವುದರಿಂದ ಮನುಷ್ಯರಿಂದ ಮಾಡಲಾದ ಕ್ರತು ಯಜ್ಞ ಆತನೇ ಆಗುತ್ತಾನೆ. ಪಿತೃದೇವತೆಗಳಿಗೆ ಇಡುವ ಶ್ರಾದ್ಧ, ನಾವು ತಿನ್ನುವ ಆಹಾರದಲ್ಲಿನ ಔಷಧಿಯೂ ಸಹ ಆತನೇ ಆಗುತ್ತಾನೆ. ಮತ್ತು ಹೋಮದಲ್ಲಿ ಉಚ್ಛರಿಸಲ್ಪಡುವ ಮಂತ್ರ, ಅಲ್ಲಿ ಹೋಮದಲ್ಲಿ ಹಾಕುವ ಆಜ್ಯ(ತುಪ್ಪ), ಹೋಮದಲ್ಲಿ ಉರಿಯುವ ಅಗ್ನಿ ಹೋಮ ಎಲ್ಲವೂ ಪರಮಾತ್ಮನೇ ಆಗಿದ್ದಾನೆ. ಇದರಿಂದ ಪರಮಾತ್ಮ ಸರ್ವಾಂತರ್ಯಾಮಿ ಎಂದು ತಿಳಿಯುತ್ತಿದೆ.

**(8) ಶ್ಲೋ॥ 17 : ಪಿತಾऽಹ ಮಸ್ಯ ಜಗತೋ ಮಾತಾ ಧಾತಾ ಪಿತಾ ಮಹಃ ।**
**ವೇದ್ಯಂ ಪವಿತ್ರ ಮೋಂಕಾರ ಋಕ್ಸಾಮ ಯಜುರೇವಚ ॥**
**(ಪರಮಾತ್ಮ)**

**ಭಾವಾರ್ಥ :** ಅಖಿಲ ಜಗತ್ತಿಗೆ ತಾಯಿ ತಂದೆಯಾಗುತ್ತೇನೆ, ಮತ್ತು ದಾತನು, ತಾತನು ನಾನೇ ಆಗುತ್ತೇನೆ. ತಿಳಿದುಕೊಂಡರೆ ಪವಿತ್ರ ಓಂಕಾರವು ನಾನೇ. ಋಗ್, ಸಾಮ, ಯಜುರ್ ವೇದಗಳು ನಾನೇ.

**(8) ಶ್ಲೋ॥ 18 : ಗತಿ ರ್ಭರ್ತಾ ಪ್ರಭುಸ್ಸಾಕ್ಷೀ ನಿವಾಸ ಶ್ಶರಣಂ ಸುಹೃತ್।**
**ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜ ಮವ್ಯಯಮ್ ॥**
**(ಪರಮಾತ್ಮ)**

**ಭಾವಾರ್ಥ :** ಗತಿ, ಪ್ರಭು, ಸಾಕ್ಷಿ, ಸುಹೃತ್ ಜನರನಿವಾಸ ಶರಣಗಳನ್ನು, ಹುಟ್ಟುವ ಸ್ಥಳ, ಲಯ ನಡೆಯುವ ಸ್ಥಳ, ನಿದಾನ, ಬೀಜ, ಅವ್ಯಯ ಎಲ್ಲವೂ ನಾನೇ.

**(8) ಶ್ಲೋ॥ 19 : ತಪಾಮ್ಯಹ ಮಹಂ ವರ್ಷಂ ನಿಗೃಹ್ಣಾ ಮ್ಯುತ್ಸೃಜಾಮಿ ಚ**
**ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹ ಮರ್ಜುನ ! ॥**
**(ಪರಮಾತ್ಮ)**

**ಭಾವಾರ್ಥ :** ನಾನು ತಪಿಸುವಂತೆ ಮಾಡುತ್ತೇನೆ. ನಾನು ವರ್ಷಜಲವನ್ನು ಸ್ವೀಕರಿಸಿ ಮತ್ತೆ ಬಿಡುತ್ತೇನೆ. ಮೃತ್ಯು ನಾನೇ ಮತ್ತು ಅಮೃತ ನಾನೇ. ಸತ್ತು (ಚೈತನ್ಯ) ನಾನೇ ಅಸತ್ತು ನಾನೇ.

**ವಿವರ :** ಜಗತ್ತಿನಲ್ಲಿ ಸೂರ್ಯರಶ್ಮಿ ಅಧಿಕಮಾಡಿ ಅದರಿಂದ ಮನುಷ್ಯರು ಬಿಸಿಲಿಗೆ ತಪಿಸುವಂತೆ ಮಾಡುವವನು ಪರಮಾತ್ಮನೇ. ಭೂಮಿ ಮೇಲೆ ಸುರಿದ ಜಲವನ್ನೆಲ್ಲವೂ ಆವಿಯಾಗಿ ಹೋಗುವಂತೆ ಮಾಡಿ ಇಲ್ಲದಂತೆ ಮಾಡುವವನು, ಮತ್ತು ಮಳೆಯ ರೂಪದಲ್ಲಿ ನೀರನ್ನು ಸುರಿಸುವವನು ಪರಮಾತ್ಮನೇ. ಸರ್ವಪ್ರಾಣಿಗಳಿಗೂ ಮೃತ್ಯುವು, ಹಾಗೂ ಮೃತ್ಯುವಿಲ್ಲದ ಮೋಕ್ಷ ಎರಡು ಪರಮಾತ್ಮನೇ. ಇನ್ನೂ ಆಲೋಚಿಸಿ ನೋಡಿದರೆ ಶರೀರದಲ್ಲಿನ ಆತ್ಮ ಚೈತನ್ಯಶಕ್ತಿ ಆದ ಸತ್ತು, ಚೈತನ್ಯವಿಲ್ಲದ ಅಸತ್ತಾದ ಶರೀರವು ಎರಡು ಪರಮಾತ್ಮನೇ. ಎಲ್ಲದಕ್ಕೂ ಮೂಲ ಕರ್ತ ಆತನೇ ಆದರೂ ತನ್ನ ಪ್ರಕೃತಿ ಮೂಲಕ ಕೆಲಸಗಳು ಮಾಡುತ್ತಾ ನಾನು ಮಾಡಲಿಲ್ಲ ಎನ್ನುತ್ತಿದ್ದಾನೆ. ಮಾಡದವನಂತಿದ್ದಾನೆ.

**(8) ಶ್ಲೋ॥ 20 : ತ್ರೈವಿದ್ಯಾಮಾಂಸೋಮಪಾಃಪೂತಪಾಪಾಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯನ್ತೇ ।**
**ತೇಪುಣ್ಯಮಾಸಾದ್ಯಸುರೇಂದ್ರಲೋಕಮಶ್ನನ್ತಿದಿವ್ಯಾನ್‌ದಿವಿದೇವಭೋಗಾನ್ ॥**
**(ಜೀವಾತ್ಮ, ಪರಮಾತ್ಮ)**

**(8) ಶ್ಲೋ॥ 21 : ತೇತಂಭುಕ್ತ್ವಾಸ್ವರ್ಗಲೋಕಂವಿಶಾಲಂಕ್ಷೀಣೇಪುಣ್ಯೇಮರ್ತ್ಯಲೋಕಂ ವಿಶನ್ತಿ ।**
**ಏವಂ ತ್ರಯೀಧರ್ಮಮನುಪ್ರಪನ್ನಾ ಗತಾಗತಂ ಕಾಮಕಾಮಾ ಲಭನ್ತೇ ॥**
**(ಜೀವಾತ್ಮ, ಪರಮಾತ್ಮ)**

**ಭಾವಾರ್ಥ :** ಮೂರು ವಿದ್ಯೆಗಳು ಕಲಿತವರು, ಸೋಮಪಾನರು, ಪಾಪಗಳಿಲ್ಲದವರು, ಯಜ್ಞಗಳಲ್ಲಿ ಇಷ್ಟ ಇರುವವರು, ಸ್ವರ್ಗವನ್ನು ಪಡೆಯುವುದಕ್ಕೆ ನನ್ನನ್ನು ಪ್ರಾರ್ಥಿಸುತ್ತಿದ್ದಾರೆ. ಅವರು ಪುಣ್ಯ ಇರುವವರಾಗಿ ಸುರೇಂದ್ರ ಲೋಕವನ್ನು ಹೊಂದಿ ಅಲ್ಲಿ ದಿವ್ಯವಾದ ದೇವಭೋಗಗಳನ್ನು ಹೊಂದುತ್ತಿದ್ದಾರೆ. ಅವರು ಅಲ್ಲಿ ಸ್ವರ್ಗಸುಖಗಳನ್ನು ಅನುಭವಿಸಿ ಪುಣ್ಯ ಮುಗಿದುಹೋದ ತಕ್ಷಣ ತಗ್ಗು ಸ್ಥಿತಿಗೆ ಬರುತ್ತಿರುತ್ತಾರೆ. ಹಾಗೆ ಆಸೆ ಪರರಿಗೆ ಮೂರು ವಿದ್ಯೆಗಳ ಧರ್ಮಗಳಲ್ಲಿರುವ ಸುಖಫಲಗಳು ಅಶಾಶ್ವತವಾದುವಾಗಿವೆ.

**ವಿವರ :** ಭೂಮಿ ಮೇಲೆ ಮನುಷ್ಯರಲ್ಲಿ ಕೆಲವರು ತಿಳಿವಳಿಕೆಯುಳ್ಳವರು ಇರುತ್ತಾರೆ. ಅವರಲ್ಲಿ ಜ್ಞಾನಿಗಳು ಪರಮಾತ್ಮ ವಿಷಯವನ್ನು ಮಾತ್ರ ತಿಳಿಯುತ್ತಾರೆ. ಜ್ಞಾನಿಗಳಲ್ಲದ

ತಿಳುವಳಿಕೆಯುಳ್ಳವರು ಮೂರುಗುಣಗಳಲ್ಲಿನ ಎಚ್ಚರಿಕೆಗಳೆಲ್ಲವೂ ಹೊಂದಿ ಎಲ್ಲಿ ಏನು ಮಾತನಾಡಬೇಕು, ಎಲ್ಲಿ ಏನು ಮಾಡಬೇಕು ಚೆನ್ನಾಗಿ ತಿಳಿದಿರುತ್ತಾರೆ. ಯಾವ ಯೋಗಗಳಿಗೆ ಜ್ಞಾನಿಗಳಿಗಿಲ್ಲದ ಗುಣಗಳ ತಿಳುವಳಿಕೆ ಇರುವುದರಿಂದ ಅವರು ಯೋಗಿಗಳು ಜ್ಞಾನಿಗಳಿಗಿಂತ ಚೆನ್ನಾಗಿ ಬದುಕುತ್ತಾರೆ. ಮೂರು ಗುಣಗಳ ವಿದ್ಯೆಗಳೆಲ್ಲ ಕಲಿತಿರುವುದರಿಂದ ಹೇಗೆ ಹಣ ಸಂಪಾದಿಸಬೇಕೆನ್ನುವುದು ಅವರಿಗೆ ಚೆನ್ನಾಗಿ ತಿಳಿದಿರುತ್ತದೆ. ಆದ್ದರಿಂದ ಅವರು ಬಹಳ ಧನಿಕರಾಗಿರುತ್ತಾರೆ. ಅವರು ಪಾಪದ ಕೆಲಸಗಳು ಮಾಡದೇ ಪುಣ್ಯ ಬರುವ ಕೆಲಸಗಳನ್ನೇ ತಿಳುವಳಿಕೆಯಿಂದ ಮಾಡುತ್ತಾರೆ. ಪೂರ್ವದಲ್ಲಿ ಸೋಮರಸವೆನ್ನುವ ಈ ದಿನ ಬೆಲೆಯುಳ್ಳ ಮತ್ತು ಪಾನೀಯವನ್ನು ಕುಡಿಯುತ್ತಿದ್ದರು. ಅವರು ಬಾಹ್ಯಯಜ್ಞಗಳಿಂದ ದೇವತಾ ಪೂಜೆ ಮಾಡಿಸುವವರಾಗಿ, ಅದರ ಮೂಲಕ ಸ್ವರ್ಗಸುಖಗಳು ಬೇಕೆಂದು ಪ್ರಾರ್ಥಿಸುತ್ತಿದ್ದರು. ಅಂತಹವರು ಅವರ ಕೋರಿಕೆಗಳ ಪ್ರಕಾರವೇ ಪುಣ್ಯಫಲ ವಿಶೇಷದಿಂದ ಜನರಲ್ಲಿ ಉನ್ನತ ಸ್ಥಿತಿ ಹೊಂದಿದ ಐಶ್ವರ್ಯವಂತರ ಮನೆಯಲ್ಲಿ ಹುಟ್ಟಿ, ಸ್ವರ್ಗಸುಖಗಳಾದ ದೇವತಾ ಭೋಗಗಳನ್ನು ಅನುಭವಿಸುತ್ತಿರುತ್ತಾರೆ. ಅವರ ಲೋಕವೇ ಬೇರೆ ಅವರು ಉಡುವ ಬಟ್ಟೆ. ತಿನ್ನುವ ತಿಂಡಿ, ಇರುವ ಸ್ಥಳ ಎಲ್ಲವೂ ಭೋಗಗಳಿಂದ ಕೂಡಿಕೊಂಡಿರುವವಾಗಿ ಇರುತ್ತವೆ. ಆ ಲೋಕದವರನ್ನು ಅಂದರೆ ಆ ಸೆಕ್ಷನ್‌ರವರನ್ನು ಭೂಮಿ ಮೇಲೆ ನೋಡಬಹುದು.

ಲೋಕಗಳೆಂದರೆ ಎಲ್ಲಿಯೋ ಇವೆಯೆಂದು, ಸ್ವರ್ಗಲೋಕ ಎಂದರೆ ಮೇಲೆ ಇದೆಯೆಂದು ಅಂದುಕೊಳ್ಳುವುದು ತಪ್ಪು. ಲೋಕಗಳೆಲ್ಲವೂ ಇಲ್ಲಿಯೇ ಭೂಮಿ ಮೇಲೆ ಇವೆ. ಸ್ವರ್ಗನರಕ ಲೋಕಗಳು ಇಲ್ಲಿಯೇ ಇವೆ. ಇಂದ್ರಲೋಕ ಅದರಲ್ಲಿನ ರಂಭೆ, ಊರ್ವಶಿಯರು ಸಹ ಇಲ್ಲಿಯೇ ಇದ್ದಾರೆ. ಪುಣ್ಯ ಮಾಡಿಕೊಂಡವನು ರಂಭೆ, ಊರ್ವಶಿಗಳೇನು ಅವರಿಗಿಂತ ಸುಂದರವಾಗಿರುವವರನ್ನು ಸಹ ಹೊಂದುತ್ತಿದ್ದಾನೆ. ದೇವತೆಗಳು ಎನ್ನುವವರು ಭೂಮಿ ಮೇಲೆ ಇದ್ದಾರೆಂದು ಮುಖ್ಯವಾಗಿ ತಿಳಿಯಬೇಕಾಗಿದೆ. ಮೇಲಿನ ಶ್ಲೋಕದಲ್ಲಿ ಹೇಳಿದ ಸುಖಗಳೆಲ್ಲ ಭೂಮಿ ಮೇಲೆ ಪುಣ್ಯಜನ್ಮಗಳನ್ನು ಅನುಭವಿಸಿ, ಆ ಪುಣ್ಯ ಮುಗಿದ ತಕ್ಷಣ ಕೆಳಗಿನ ಸ್ಥಿತಿಗೆ ಹೋಗುತ್ತಿದ್ದಾರೆ. ಎಷ್ಟೋ ಸುಖವನ್ನು ಅನುಭವಿಸಿದವರು ಕೊನೆಗೆ ಎಷ್ಟೋ ಕಷ್ಟಗಳನ್ನು ಅನುಭವಿಸಬೇಕಾಗುತ್ತದೆ. ಉನ್ನತ ಸ್ಥಿತಿಯಿಂದ ಕೆಳಗಿನ ಸ್ಥಿತಿಗೆ ಬರುವುದನ್ನೇ ಊರ್ಧ್ವ ಲೋಕದಿಂದ ಮರ್ತ್ಯ ಲೋಕಕ್ಕೆ ಬರುತ್ತಿರುತ್ತಾರೆಂದಿದ್ದಾರೆ. ಈ ವಿಧವಾಗಿ ಸುಖಗಳನ್ನು ಅನುಭವಿಸುವುದು, ಇವುಗಳಿಂದ ಕೆಳಗಿನ ಸ್ಥಾನಕ್ಕೆ ಹೋಗುವುದು, ಮೂರು ಗುಣಗಳ ವಿದ್ಯೆಗಳು ಕಲಿತವರಿಗೆ ಸಹಜವೇ ಆಗುತ್ತದೆ. ತ್ರಯಾ ಧರ್ಮ(ಮೂರು ಧರ್ಮ)ಗಳಲ್ಲಿ ಅಶಾಶ್ವತ ಸುಖಗಳು ಸಹಜವಾಗಿರುತ್ತವೆ.

ಜ್ಞಾನಿಗಳಿಗೂ ಯೋಗಿಗಳಿಗೂ ಮೂರುಗುಣಗಳ ವಿದ್ಯೆಯಲ್ಲಿ ಆಸಕ್ತಿ ಇಲ್ಲ. ಅವರಿಗೆ ಸ್ವರ್ಗಲೋಕ ಸುಖಗಳ ಪ್ರಾಪ್ತಿ ಇಲ್ಲ, ಅಂತಹವರನ್ನು ಕುರಿತು ಭಗವಂತನು ಹೇಳುವುದು ಏನೆಂದರೆ!

**(8) ಶ್ಲೋ॥ 22 : ಅನನ್ಯಾಶ್ಚಿನ್ತ ಯನ್ತೋಮಾಂ ಯೇಜನಾಃಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ ॥**
**(ಜೀವಾತ್ಮ, ಪರಮಾತ್ಮ)**

**ಭಾವಾರ್ಥ :** ಯಾವನಾದರೆ ಅನ್ಯಚಿಂತೆ ಇಲ್ಲದೆ ನನ್ನನ್ನು ಯಾವಾಗಲೂ ಉಪಾಸಿಸುತ್ತಾನೋ, ಅವನು ನಿತ್ಯವು ನನ್ನೊಂದಿಗೆ ಕೂಡಿಕೊಂಡಿದ್ದಾನೆ. ಅಂತಹವನ ಯೋಗವೊಂದರ ಕ್ಷೇಮವನ್ನು ನಾನು ವಹಿಸುತ್ತಿದ್ದೇನೆ.

**ವಿವರ :** ಮಾನವನಿಗೆ ಭಕ್ತಿ ಎನ್ನುವುದು ಇದ್ದರೆ ಅದು ಎಷ್ಟೋ ದೇವತೆಗಳಿಗೆ ಸಂಬಂಧಿಸಿರುವುದು ಸಹಜ. ಭೂಮಿ ಮೇಲೆ ಎಷ್ಟೋಜನ ದೇವತೆಗಳಿರುವುದು ಎಲ್ಲರಿಗೂ ತಿಳಿದಿರುವ ವಿಷಯವೇ. ಸಂಪೂರ್ಣ ಜ್ಞಾನ ತಿಳಿಯುವವರೆಗೂ ಮಾನವನು ದೇವರುಗಳನ್ನು ಆರಾಧಿಸುವುದು ಪರಿಪಾಟವಾಗಿದೆ. ದೇವರುಗಳಿಗೆಲ್ಲ ದೇವರಾದ ಪರಮಾತ್ಮ ಒಬ್ಬನಿದ್ದಾನೆಂದು ತಿಳಿಯದಿರುವುದೇ ಮುಖ್ಯಕಾರಣ. ಯಾರಿಗಾದರೆ ಸಂಪೂರ್ಣ ಜ್ಞಾನ ತಿಳಿಯುತ್ತದೋ ಅವನು ಆಗ ಭೂಮಿ ಮೇಲಿರುವ ದೇವತೆಗಳೆಲ್ಲ ತನ್ನಂತೆ ಜೀವಾತ್ಮಗಳೆಂದು, ತನ್ನ ಶರೀರದೊಳಗಿದ್ದಂತೆ ಅವರಿಗು ಆತ್ಮ ಜೀವಾತ್ಮಗಳಿವೆಯೆಂದು ತಿಳಿದವನಾಗಿ, ಎಲ್ಲಾರಿಗೂ ಅತೀತನಾದ ಪ್ರಪಂಚಕ್ಕೆ ಆದಿಕರ್ತನಾದ ಪರಮಾತ್ಮನನ್ನು ತಿಳಿಯಬೇಕೆಂಬ ಛಲದಿಂದ ಇರುತ್ತಾನೆ. ಅಂತಹವನು ಅವನ ಮನಸ್ಸಿನಲ್ಲಿ ಇತರ ದೇವತೆಗಳ ಆಲೋಚನೆ ಇಲ್ಲದೆ, ಆತ್ಮಗಿಂತ ಪರವಾದ ಪರಮಾತ್ಮನನ್ನು ಶ್ರದ್ದೆಯಿಂದ ಉಪಾಸಿಸುತ್ತಾನೆ. ಪರಮಾತ್ಮನನ್ನು ಉಪಾಸಿಸುವುದು ಎಂದರೆ ಎಲ್ಲರೂ ಆಚರಿಸಿದಂತೆ ಪ್ರತ್ಯೇಕವಾದ ಪೂಜಾ ವಿಧಾನವೇನು ಅಲ್ಲವೆಂದು ತಿಳಿಯಬೇಕು. ಜೀವಾತ್ಮವಾಗಿರುವವನು ತನ್ನ ಸ್ಥಿತಿಯನ್ನು ಕಳೆದುಕೊಂಡು ಪರಮಾತ್ಮನೊಳಗೆ ಐಕ್ಯವಾಗುವುದಕ್ಕೆ ಮಾಡುವ ಪ್ರಯತ್ನವೆಂದು ತಿಳಿಯಬೇಕು. ಅದನ್ನೇ ಯೋಗ ಎನ್ನುತ್ತೇವೆ. ಪರಮಾತ್ಮನೊಳಗೆ ಐಕ್ಯವಾಗುವುದಕ್ಕೆ ಮಾರ್ಗ ಯೋಗ. ಯೋಗದಿಂದ

ಲಭಿಸುವ ದೈವವನ್ನು ಸೇರಬೇಕೆಂದು ಪ್ರಯತ್ನಿಸುವವನಿಗೆ ಆರೋಗ್ಯ ಸರಿಯಾಗಿಲ್ಲದಂತೆ ಹೋಗಬಹುದು. ಆರ್ಥಿಕ ತೊಂದರೆಗಳು ಬರಬಹುದು. ಶತ್ರುಗಳ ಭಾದೆಗಳು ಉಂಟಾಗಬಹುದು. ಮನೆಯಲ್ಲಿ ಹೆಂಡತಿ ಮಕ್ಕಳೊಂದರ ವಿರುದ್ಧತೆ ಉಂಟಾಗಬಹುದು. ಹೀಗೆ ಪ್ರಪಂಚದಲ್ಲಿ ಅನೇಕ ಬಾಧೆಗಳು ಉಂಟಾದರೂ ಅವುಗಳಿಂದ ಎಂತಹ ರಕ್ಷಣೆಯಾಗಲಿ, ನೋವು ನಿವಾರಣೆಯಾಗಲಿ, ಆರ್ಥಿಕ ಸಹಾಯವಾಗಲಿ ಪರಮಾತ್ಮ ಒದಗಿಸುವುದಿಲ್ಲ. ಸಹಾಯವಾಗಲಿ, ರಕ್ಷಣೆಯಾಗಲಿ, ಬಾಧೆ ಉಪಸಂಹಾರಣೆಯಾಗಲಿ ಯೋಗಿಗೆ ಉಂಟುಮಾಡದಿರುವಾಗ ಅವನ ಕ್ಷೇಮವನ್ನು ಪರಮಾತ್ಮ ಹೇಗೆ ವಹಿಸಿದಂತಾಗುತ್ತದೆಂದು ನಮಗೆ ತಪ್ಪದೇ ಪ್ರಶ್ನೆ ಬರುತ್ತದೆ. ಈ ಪ್ರಶ್ನೆಗೆ ಉತ್ತರವನ್ನು ಹುಡಿಕಿ ನೋಡಿದಂತಾದರೆ, ಪರಮಾತ್ಮನನ್ನು ಆರಾಧಿಸುವವನ ಯೋಗಕ್ಷೇಮವನ್ನು ಪರಮಾತ್ಮ ನೋಡುತ್ತಿಲ್ಲ. ಅವನೊಂದರ ಅನಾರೋಗ್ಯದಿಂದಾಗಲಿ, ಎಲ್ಲಾ ತೊಂದರೆಗಳಿಂದಾಗಲಿ ಕಾಪಾಡುತ್ತಾನೆಂದು ಆತನು ಮೇಲಿನ ಶ್ಲೋಕದಲ್ಲಿ ಹೇಳಲೂ ಇಲ್ಲ. ಆತನು ಹೇಳಿರುವುದು ಕೇವಲ ತನ್ನನ್ನು ಆರಾಧಿಸುವವನ **'ಯೋಗ'**ವೊಂದರ ಕ್ಷೇಮವನ್ನು ಕಾಪಾಡುತ್ತೇನೆಂದು ಹೇಳಿದ್ದಾನಾಗಲಿ, ಆರಾಧಿಸುವವನ ಕ್ಷೇಮವನ್ನು ಕಾಪಾಡುತ್ತೇನೆಂದು ಹೇಳಲಿಲ್ಲ. ಮೇಲಿನ ಶ್ಲೋಕದಲ್ಲಿ **'ಯೋಗಕ್ಷೇಮ'** ಎಂದಿದ್ದಾನಾಗಲಿ ಯೋಗಿಕ್ಷೇಮವೆನ್ನಲಿಲ್ಲ.

ಭೂಮಿ ಮೇಲೆ ಯೋಗವಾಚರಿಸುವ ಉತ್ತಮ ಯೋಗಿಗಳಿಗೂ ಸಹ ಪ್ರಪಂಚದಲ್ಲಿನ ಮಾನವರಿಂದ ಕಷ್ಟಗಳು ತಪ್ಪುವುದಿಲ್ಲವೆಂಬುವುದಕ್ಕೆ ಗತ ಚರಿತ್ರೆಯಲ್ಲಿ, ವರ್ತಮಾನದಲ್ಲಿ ಎಷ್ಟೋ ಆಧಾರಗಳು ಇವೆ. ಸಕ್ರಮವಾದ ಯೋಗಿಗೆ ಎಷ್ಟು ಕಷ್ಟಗಳು ಬಂದರು, ಅನಾರೋಗ್ಯವಾದರೂ ಪರಮಾತ್ಮನ ಮೇಲೆ ದೃಷ್ಟಿ ಮಾತ್ರ ಕದಲುವುದಿಲ್ಲ ಎನ್ನುವುದಕ್ಕೂ ಸಹ ಚರಿತ್ರೆಯಲ್ಲಿ, ವರ್ತಮಾನ ಕಾಲದಲ್ಲಿ ಕೆಲವು ಆಧಾರಗಳು ಇವೆ. ಇವುಗಳೆಲ್ಲವನ್ನು ನೋಡಿದಂತಾದರೆ ತನಗೆ ಉಂಟಾಗುವ ಒಳಿತುಕೆಡುಕುಗಳೆಲ್ಲ ಕರ್ಮರೀತ್ಯ ಉಂಟಾಗುವವೆಂದು, ತನ್ನ ಶ್ರದ್ಧೆಯನ್ನು ಯಾವಾಗಲು ಪರಮಾತ್ಮನ ಮೇಲೆ ನಿಲ್ಲಿಸಿದರೂ ಯೋಗಿವೊಂದರ ಯೋಗಕ್ಕೆ ತೊಂದರೆಯಾಗದಂತೆ ಅದರ ಕ್ಷೇಮವನ್ನು ಪರಮಾತ್ಮನೇ ನೋಡುತ್ತಾನೆಂದು ತಿಳಿಯುತ್ತದೆ.

**(8) ಶ್ಲೋ॥ 23 : ಯೇಽಪ್ಯನ್ಯ ದೇವತಾ ಭಕ್ತಾ ಯಜನ್ತೇ ಶ್ರದ್ಧಯಾಽನ್ವಿತಾಃ ।**
**ತೇಽಪಿ ಮಾಮೇವ ಕೌಂತೇಯ! ಯಜ್ಯನ್ತ್ಯ ವಿಧಿಪೂರ್ವಕಮ್ ॥**
**(ಜೀವಾತ್ಮ, ಪರಮಾತ್ಮ)**

**ಭಾವಾರ್ಥ :** ಯಾರು ಶ್ರದ್ಧೆಯಿಂದ ಅನ್ಯದೇವತಾರಾಧನೆಗಳನ್ನು ಆಚರಿಸುತ್ತಾನೋ ಅವನೂ ಸಹ ನನ್ನನ್ನೇ ದಾರಿ ತಪ್ಪಿ ಆರಾಧಿಸಿದವನಾಗುತ್ತಿದ್ದಾನೆ.

**ವಿವರ :** ಮೂವತ್ತು ಮೂರು ಕೋಟಿ ದೇವತೆಗಳೆಂದು ನಾಣ್ನುಡಿ ಇದ್ದಂತೆ, ಎಷ್ಟೋ ದೇವತೆಗಳಿರುವ ಭೂಮಿ ಮೇಲೆ ಪರಮಾತ್ಮನನ್ನು ಬಿಟ್ಟು ಅನ್ಯ ದೇವತಾರಾಧನೆ ಮಾಡುವವರು ಬಹಳಜನ ಇದ್ದಾರೆ. ಪರಮಾತ್ಮನನ್ನು ಆರಾಧಿಸುವವರು ಕಡಿಮೆ. ಆದರೆ ದೇವತೆಗಳನ್ನು ಪೂಜಿಸುವವರು ಕಡಿಮೆ ಇಲ್ಲ. ಪಾಪಾತ್ಮರು, ದುಷ್ಟರು, ಕಳ್ಳರು, ಜ್ಞಾನಿಗಳಿಗೆ ವಿರೋಧಿಗಳು, ಪರಮಾತ್ಮ ಎಂದರೆ ಯಾವ ವಿಶ್ವಾಸವಿಲ್ಲದವರು, ಪರಮ ಮೂರ್ಖರೂ ಸಹ ಯಾವುದೋ ಒಂದು ದೇವತೆಯನ್ನು ನಿಷ್ಠೆಯಿಂದ ಪೂಜಿಸುತ್ತಿರುತ್ತಾರೆ. ಕೋರಿಕೆಗಳು ಕೋರುತ್ತಿರುತ್ತಾರೆ. ಅವರು ಯಾವ ದೇವತೆಯನ್ನು ಪೂಜಿಸಿದರು ಆ ಪೂಜೆ ಪರಮಾತ್ಮನಿಗೆ ಸೇರುತ್ತದೆ. ಎಲ್ಲಾಕಡೆ ಎಲ್ಲಾ ದೇವತೆಗಳಲ್ಲಿಯೂ ಇರುವವನಾದ ಪರಮಾತ್ಮನಿಗೆ ಆ ಪೂಜೆ ಸೇರಿದರೂ ಅವರು ಪರಮಾತ್ಮನನ್ನು ಸೇರುವುದಿಲ್ಲ. ಅವರ ಮನಸ್ಸಿನಲ್ಲಿ ಬೇರೆ ದೇವತಾ ಧ್ಯಾಸ ಇರುವುದರಿಂದ ಅವರು ಮಾರ್ಗ ತಪ್ಪಿದವರಾಗಿರುತ್ತಾರೆ. ಎಲ್ಲಿ ಯಾವ ದೇವರಿಗೆ ಮಾಡಿದ ಪೂಜೆಯಾದರು ಸ್ವೀಕರಿಸುವವನು ಎಲ್ಲಾಕಡೆ ವ್ಯಾಪಿಸಿದ ಪರಮಾತ್ಮನೇ, ಆದರೂ ಪೂಜೆ ಮಾಡುವವರು ಪರಮಾತ್ಮನನ್ನು ಸೇರಲಾರರು. ದೇವತೆಗಳನ್ನು ಪೂಜಿಸುವವರು ಕೊನೆಗೆ ದೇವತೆಗಳ ಹತ್ತಿರಕ್ಕೆ ಸೇರಬೇಕಾಗಿದ್ದೆ.

**(8) ಶ್ಲೋ॥ 24 : ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।**
**ನತುಮಾ ಮಭಿಜಾನನ್ತಿ ತತ್ತ್ವೇನಾಽತಶ್ಚ್ಯವನ್ತಿತೇ ॥**
**(ಪರಮಾತ್ಮ)**

**ಭಾವಾರ್ಥ :** ನಾನು ಸರ್ವ ಯಜ್ಞಗಳಿಗೂ ಭೋಕ್ತನೂ ಮತ್ತು ಪ್ರಭುವೂ, ನಾನು ಆತ್ಮವಾಗಿ ಇದ್ದೇನೆಂದು ತಿಳಿಯದವರು ದಾರಿ ತಪ್ಪಿದವರಾಗುತ್ತಾರೆ.

**ವಿವರ :** ಈ ಶ್ಲೋಕದಲ್ಲಿ **ತತ್ತ್ವೇನಾ** ಎನ್ನುವ ಪದಕ್ಕೆ **ಆತ್ಮವಾಗಿ** ಎನ್ನುವ ಪದವನ್ನು ಬಿಟ್ಟು ಯಥಾರ್ಥವಾಗಿ ಎಂದು ಬಹಳ ಗೀತೆಗಳಲ್ಲಿ ಬರೆಯುವುದರಿಂದ ನಿಜಾರ್ಥವು

ಮರೆಯಲ್ಲಿಬಿದ್ದು ಹೇಳಬೇಕಾದ ಪೂರ್ತಿ ಭಾವವು ಹೊರಬೀಳದೆ ಹೋಗಿದೆ. ನಿಜಭಾವನೆ ಕೆಡದಿದ್ದರು, ಪೂರ್ತಿ ವಿವರ ಹೊರಬೀಳದೆ ಹೋಗಿದೆ. ಆದ ಕಾರಣ ತತ್ತ್ವ ಎಂದರೆ **'ಆತ್ಮ'** ಎಂದು ಅರ್ಥ ಮಾಡಿಕೊಳ್ಳುವುದರಿಂದ ಪೂರ್ತಿ ಭಾವವು ಹೊರ ಬೀಳಬಲ್ಲದು. ಮನುಷ್ಯರು ಮಾಡುವ ಬಾಹ್ಯ ಪೂಜೆಗಳಿಗೆ ಸಂಬಂಧಿಸಿದ ಯಜ್ಞಗಳನ್ನು ಕುರಿತು ಇಲ್ಲಿ ಹೇಳಲಿಲ್ಲ. ಪರಮಾತ್ಮನು ಹೇಳಬೇಕಾದ ಎರಡು ಯಜ್ಞಗಳು ಈಗಾಗಲೆ ಹೇಳಿದ್ದಾನೆ. ಜ್ಞಾನ, ದ್ರವ್ಯ ಯಜ್ಞಗಳೆನ್ನುವವು ಶರೀರದಲ್ಲಿ ನಡೆಯುತ್ತಿವೆ ಎಂದು ಸಹ ತಿಳಿಸಿದ್ದಾನೆ. ಅಲ್ಲಿಯೇ ಶರೀರದಲ್ಲಿ ನಡೆಯುವ ಯಜ್ಞಗಳಿಗೆ ಭೋಕ್ತನೂ ಸಹ ನಾನೇ ಎಂದಿದ್ದಾನೆ. ಇಲ್ಲಿ ಯಜ್ಞಗಳಿಗೆ ಹಿರಿಯನು ಅಥವಾ ಅಧಿಪತಿ ಆದ ಪ್ರಭುವೂ ಸಹ ನಾನೇ ಎಂದಿದ್ದಾನೆ. ಆತನು ಹೇಗೆ ಭೋಕ್ತ, ಹೇಗೆ ಪ್ರಭುವಾಗಿದ್ದಾನೆಂದು ಯೋಚಿಸಿದರೆ. ಶರೀರದಲ್ಲಿ ಆತ್ಮ ಸರ್ವತ್ರ ವ್ಯಾಪಿಸಿದೆ. ಆತ್ಮಶಕ್ತಿಯಿಂದಲೇ ತಲೆಯಲ್ಲಿ ಜ್ಞಾನಯಜ್ಞವಾಗಲಿ, ಹೊಟ್ಟೆಯಲ್ಲಿ ದ್ರವ್ಯಯಜ್ಞವಾಗಲಿ ನಡೆಯುತ್ತಿವೆ. ಆತ್ಮ ಚೈತನ್ಯ ಇಲ್ಲದೆ ಎರಡು ಯಜ್ಞಗಳು ನಡೆಯುವುದಕ್ಕೆ ಸಾಧ್ಯವಿಲ್ಲ. ಪರಮಾತ್ಮವೇ ಆತ್ಮವಾಗಿದೆ. ಪರಮಾತ್ಮ ಆತ್ಮರೂಪವಾಗಿ ಯಜ್ಞಗಳಿಗೆ ಅಧಿಪತಿಯಾಗಿದ್ದಾನೆ. ನನ್ನನ್ನು ಆತ್ಮವಾಗಿ ತಿಳಿಯದೆಹೋದರೆ ಎನ್ನುತ್ತಾ **'ಅಭಿಜಾನಂತಿ ತತ್ತ್ವೇನ'** ಎಂದಿದ್ದಾನೆ. ಪರಮಾತ್ಮನನ್ನು ಆತ್ಮವಾಗಿ ತಿಳಿಯದೇ ಹೋದರೆ ಮೋಕ್ಷ ಮಾರ್ಗದಿಂದ ತಪ್ಪಿದವನಾಗುತ್ತಾನೆ.

ಇಲ್ಲಿಯವರೆಗೂ ಪರಮಾತ್ಮ, ಆತ್ಮ, ಜೀವಾತ್ಮಗಳ ವಿಭಜನೆ ಯಾವ ಗೀತೆಯಲ್ಲಿಯೂ ಬರೆದಿಲ್ಲ. ಆದುದರಿಂದ ಬಹಳ ಮಟ್ಟಿಗೆ ಗೀತೆ ಯಾರಿಗೂ ಇಲ್ಲಿಯವರೆಗು ಅರ್ಥವಾಗಲಿಲ್ಲವೆಂದು ಹೇಳಬಹುದು. ಆತ್ಮಗಳ ವಿವರ ತಿಳಿದಾಗ ಬಹಳ ಶ್ಲೋಕಗಳಿಗೆ ಅರ್ಥ ಹೊರಬೀಳುತ್ತದೆ. ಆತ್ಮಗಳ ವಿವರದಿಂದ ಕೂಡಿದ ಈ ಗ್ರಂಥ ಗೀತೆಗೆ ಹೊಸ ಜನ್ಮಕೊಟ್ಟಿದೆ ಎಂದು ಹೇಳಬಹುದು. ಅಸೂಯೆಪಡದೆ ಅರ್ಥಮಾಡಿಕೊಳ್ಳಿರೆನ್ನುತ್ತಿದ್ದೇವೆ. ಅಷ್ಟೇ ಅಲ್ಲದೆ ಅನೇಕರ ಭಾವಗಳಿಗೆ ವಿಭೇದವುಂಟುಮಾಡುವ ಭಾವವಿರುವ ಕೆಳಗಿನ ಶ್ಲೋಕವನ್ನು ನೋಡಿರಿ.

**(8) ಶ್ಲೋ॥ 25 : ಯಾನ್ತಿ ದೇವವ್ರತಾನ್ ದೇವಾನ್, ಪಿತೃನ್ ಯಾನ್ತಿ ಪಿತೃವ್ರತಾಃ।**
**ಭೂತಾನಿ ಯಾನ್ತಿ ಭೂತೇಜ್ಯಾಃ ಯಾನ್ತಿ ಮದ್ಯಾಜಿನೋಽಪಿ ಮಾಮ್ ॥**
**(ಪರಮಾತ್ಮ)**

**ಭಾವಾರ್ಥ** : ದೇವತಾ ಪೂಜೆ ಮಾಡುವವರು ದೇವತೆಗಳಲ್ಲೇ ಸೇರುತ್ತಾರೆ. ಪಿತೃದೇವತೆಗಳನ್ನು ಪೂಜಿಸುವವರು ಅವರಲ್ಲಿಯೇ ಸೇರುತ್ತಾರೆ. ಭೂತಗಳನ್ನು ಪೂಜಿಸುವವರು ಭೂತಗಳಲ್ಲಿಯೇ ಸೇರುತ್ತಾರೆ, ನನ್ನನ್ನು ಪೂಜಿಸುವವರು ನನ್ನಲ್ಲಿಯೇ ಸೇರುತ್ತಾರೆ.

**ವಿವರ** : ಎಲ್ಲಾ ವಿಧಗಳ ಪೂಜೆಗಳು ಮಾಡುವವರೆಲ್ಲ ಸೇರಿ ನಾಲ್ಕು ವಿಧಗಳಾಗಿ ವಿಭಜಿಸಿ ಹೇಳಿದ್ದಾರೆ. **1) ದೇವತಾ ಪೂಜೆ ಮಾಡುವವರು 2) ಪಿತೃದೇವತೆಗಳನ್ನು ಪೂಜಿಸುವವರು. 3) ಜೀವರಾಶಿಗಳನ್ನು ಪೂಜಿಸುವವರು 4) ಪರಮಾತ್ಮನನ್ನು ಆರಾಧಿಸುವವರು**. ಇದರಲ್ಲಿ ದೇವತಾ ಪೂಜೆ ಮಾಡುವವರನ್ನು ಎಲ್ಲರೂ ನೋಡಿಯೇ ಇರುತ್ತೇವೆ. ಉದಾಹರಣೆಗೆ ಒಂದು ಊರಿನಲ್ಲಿ ಒಬ್ಬ ವೆಂಕಟೇಶ್ವರಸ್ವಾಮಿ ದೇವಸ್ಥಾನ ಇದೆಯೆಂದುಕೊಳ್ಳೋಣ. ಒಬ್ಬನು ಆ ದೇವಸ್ಥಾನಕ್ಕೆ ನಿತ್ಯವು ಹೋಗಿ ಆ ವೆಂಕಟೇಶ್ವರ ಸ್ವಾಮಿಯನ್ನು ಶ್ರದ್ಧೆಯಿಂದ ಪೂಜಿಸುತ್ತಿದ್ದಾನೆಂದುಕೊಳ್ಳೋಣ. ಹಾಗೆ ಶ್ರದ್ಧೆಯಿಂದ ಪೂಜೆ ಮಾಡುತ್ತಾ, ಎಲ್ಲಾ ದೇವತೆಗಳಿಗಿಂತ ಆ ದೇವರನ್ನೇ ದೊಡ್ಡದಾಗಿ ಭಕ್ತಿಯಿಂದ ಆರಾಧಿಸುತ್ತಾ ಸ್ವಲ್ಪಕಾಲ ಕಳೆದಿದೆ. ಅವನಿಗೆ ಮರಣವಾಸನ್ನವಾಗಿ ಮರಣಿಸಿದ್ದಾನೆ. ನಂತರ ಆತನು ಮನುಷ್ಯರಲ್ಲಿ ಹುಟ್ಟುವುದು ನಡೆಯಲಿಲ್ಲ. ಹಾಗೆಂದು ಅವನು ಮೋಕ್ಷ ಹೊಂದಲಿಲ್ಲ. ಒಂದು ಗುಡಿಯಲ್ಲಿನ ದೇವತಾ ಪ್ರತಿಮೆಯಲ್ಲಿ ಜೀವಾತ್ಮನಾಗಿ ಜನ್ಮ ಉಂಟಾಗಿದೆ. ಈ ಮಾತು ವಿಚಿತ್ರವಾಗಿದೆ ಅಲ್ಲವೆ! ಆದರೂ ವಾಸ್ತವವೇ. ಪ್ರತಿ ದೇವಾಲಯದಲ್ಲಿನ ಪ್ರತಿಮೆಯಲ್ಲಿ ಒಬ್ಬ ಜೀವಾತ್ಮ ಇರುತ್ತಾನೆ, ಆ ಪ್ರತಿಮೆಯಲ್ಲಿನ ದೇವರು ಆತನೇ ಆಗುತ್ತಾನೆ. ದೇವಾಲಯದಲ್ಲಿ ಅನೇಕ ಭಕ್ತರಿಂದ ಪೂಜೆಗಳು ಸ್ವೀಕರಿಸುತ್ತಾ ಅವರು ಪೂಜಿಸುತ್ತಿರುವ ದೇವರು ತಾನೆ ಎಂದುಕೊಂಡ ಆ ಜೀವಾತ್ಮ, ಸ್ವಲ್ಪ ಕಾಲಕ್ಕೆ ವೃದ್ಧಾಪ್ಯಹೊಂದಿ ಮರಣಾವಸ್ಥೆಯನ್ನೂ ಸಹ ಹೊಂದಬೇಕಾಗುತ್ತದೆ. ಸಾಧಾರಣ ಮನುಷ್ಯನಲ್ಲಿ ನಡೆಯುವ ಶರೀರ ದಸೆಗಳು ಪ್ರತಿಮೆಯ ಶರೀರದಲ್ಲಿರುವವನಿಗೂ ಸಹ ನಡೆಯುತ್ತವೆ. ಹಾಗೆ ಮರಣಿಸಿದವನು ಎಲ್ಲಿಗೆ ಹೋಗುವುದು ನಮಗೆ ಅನವಶ್ಯಕ. ಇಲ್ಲಿ ನಮಗೆ ಅವಶ್ಯವಾದ ವಿಷಯ ಖಾಲಿಯಾದ ಜೀವಾತ್ಮ ಇಲ್ಲದ ಪ್ರತಿಮೆಯೊಳಗೆ ಒಬ್ಬ ಹೊಸ ಜೀವಾತ್ಮ ಬಂದು ಸೇರುತ್ತಿದ್ದಾನೆ. ಹಾಗೆ ಸೇರಿದಾಗಿನಿಂದ ಮನುಷ್ಯನ ಆಯುಸ್ಸಿನಂತೆ ಸುಮಾರು ನೂರು ವರ್ಷಗಳಿಗಾದರೂ ಆ ಪ್ರತಿಮೆಯಲ್ಲಿಯೇ ಆ ಜೀವಿಯು ಇರಬಹುದು. ನಾವು ಚಿಕ್ಕಂದಿನಿಂದ ಕರೆಯಲಾದ ಹೆಸರೆ ನಮ್ಮದೆಂದು, ಕುಟುಂಬಸ್ತರು ಅಂದುಕೊಳ್ಳುವ ಮತವೇ ತನ್ನ ಮತವೆಂದು, ತನ್ನ ಕುಲವೆಂದು ತಿಳಿದು, ನಾನು ಇಂತಹವನು, ನನ್ನ ಮತ ಇಂತಹದೆಂದು ಹೇಳಿಕೊಳ್ಳುವಂತೆ, ದೇವಾಲಯದಲ್ಲಿನ

ಪ್ರತಿಮೆಯಲ್ಲಿ ಜನ್ಮಹೊಂದಿದವನು ಅಲ್ಲಿನ ಭಕ್ತರು ಉಚ್ಛರಿಸುವ ಹೆಸರೇ ತನ್ನದೆಂದು, ತಾನು ಇಂತಹ ದೇವರೆಂದು ಭ್ರಮಿಸಿ ಭಾವಿಸಿಕೊಳ್ಳುತ್ತಾನೆ. ಹುಟ್ಟುವುದಕ್ಕಿಂತ ಪೂರ್ವದಲ್ಲಿ ಯಾವ ಮತವಿಲ್ಲದ ಜೀವಾತ್ಮ ಹುಟ್ಟಿದ ಕುಟುಂಬವನ್ನನುಸರಿಸಿ ನನ್ನದು ಇಂತಹ ಮತವೆಂದುಕೊಂಡು ಭ್ರಮಿಸುವಂತೆ, ಪ್ರತಿಮೆಯಲ್ಲಿನ ಜೀವಾತ್ಮವೂ ಸಹ ನಾನು ಇಂತಹ ದೇವರೆಂದು ಭ್ರಮಿಸುತ್ತಾನೆ. ಹಾಗೆ ಒಂದು ಪ್ರತಿಮೆಯಲ್ಲಿನ ಒಬ್ಬ ಜೀವಾತ್ಮ ಆ ದೇವರಾಗಿ ಚಲಾವಣೆಯಾಗುತ್ತಾ ತನ್ನ ಮುಡುಪು ಒಂದು ಪೈಸೆಯೂ ಸಹ ಪಕ್ಕಕ್ಕೆ ಹೋಗದಂತೆ ನೋಡಿಕೊಳ್ಳುತ್ತಾ, ಯಾರಾದರು ಆ ಹಣವನ್ನು ತೆಗೆದುಕೊಂಡವನಿಗೇನಾದರೂ ಒಂದು ಮಾಡಿ ಬಾಧೆ ಇಡುತ್ತಿದ್ದಾನೆಂದುಕೊಳ್ಳೋಣ. ಆ ದೇವರ ವಿಷಯದಲ್ಲಿ ಪ್ರಜೆಗಳು ಭಯಪಟ್ಟು ಸತ್ಯವಿರುವ ದೇವರೆಂದು ಒಂದು ಪೈಸೆಯನ್ನು ಅಪಹರಿಸಿದರು ಮುಪ್ಪು ತಪ್ಪುವುದಿಲ್ಲವೆಂದು ಭಯಪಡುತ್ತಿದ್ದರು. ಅಷ್ಟೇ ಅಲ್ಲದೆ ಆ ದೇವಾಲಯ ಪ್ರಾಂಗಣದಲ್ಲಿ ಯಾವ ತಪ್ಪು ಮಾಡಿದರು ಆ ದೇವರು ಅವರಿಗೆ ಕಷ್ಟ ಕೊಡುತ್ತಿದ್ದನು. ಆದ ಕಾರಣ ಅಲ್ಲಿ ಯಾರು ಯಾವ ತಪ್ಪು ಮಾಡದಂತೆ ಇದ್ದರು. ಸ್ವಲ್ಪ ಕಾಲಕ್ಕೆ ಆ ಜೀವಾತ್ಮ ಆ ಪ್ರತಿಮೆಯನ್ನು ಬಿಟ್ಟು ಮರಣಿಸಿ ಹೋದನು. ಆ ಸ್ಥಾನದಲ್ಲಿ ಮತ್ತೊಬ್ಬ ಜೀವಾತ್ಮ ಬಂದು ದೇವರಾಗಿ ಚಲಾವಣೆಯಾಗುತ್ತಿದ್ದಾನೆ. ಈ ಜೀವಿಯ ಮನಸ್ತತ್ವ ಮೊದಲಿದ್ದ ಜೀವಾತ್ಮಗಿಂತ ಭಿನ್ನವಾಗಿದೆ. ಯಾರೇನು ಮಾಡಿದರು ತಲೆಕೆಡಿಸಿಕೊಳ್ಳುವವನಲ್ಲ. ಆದ್ದರಿಂದ ಅಲ್ಲಿಗೆ ಬರುವ ಭಕ್ತರಿಗೆ ಆ ದೇವರೆಂದರೆ ಭಯ ಕಡಿಮೆಯಾಗಿದೆ. ಈ ವಿಧವಾಗಿ ಒಂದೇ ಪ್ರತಿಮೆಯಲ್ಲಿ ಸ್ವಲ್ಪ ಕಾಲವಿರುವ ಒಬ್ಬ ದೇವರಿಗೆ(ಜೀವಾತ್ಮಕ್ಕೆ) ನಂತರ ಬಂದುಸೇರಿ ಸ್ವಲ್ಪಕಾಲ ಇರುವ ಇನ್ನೊಬ್ಬ ದೇವರಿಗೆ (ಜೀವಾತ್ಮಕ್ಕೆ) ಬಹಳ ವ್ಯತ್ಯಾಸಗಳಿರಬಹುದು. ನಮ್ಮ ಅನುಭವದಲ್ಲಿ ಇಲ್ಲಿಗೆ ಸುಮಾರು 50 ವರ್ಷಗಳ ಕೆಳಗೆ ಹರಕೆ ಸಲ್ಲಿಸುವುದಕ್ಕೆ ಒಬ್ಬ ಭಕ್ತನು ಒಂದು ಭಕ್ತಿ ಬೃಂದದ ಜೊತೆ ಸೇರಿ ಬಡ್ಡಿಕಾಸಿನವನೆಂದು ಹೆಸರುವಾಸಿಯಾದ ದೇವರಿರುವ ದೇವಾಲಯಕ್ಕೆ ಹೋಗಿದ್ದಾನೆ. ಅಲ್ಲಿ ಹರಕೆ ಸಲ್ಲಿಸುವ ಸಮಯದಲ್ಲಿ ಪೂರ್ತಿ ಹಣವನ್ನು ಹುಂಡಿಯಲ್ಲಿ ಹಾಕದೆ ಮೂರುಬೊಟ್ಟುಗಳು(10ಪೈಸೆ) ತನ್ನ ಹತ್ತಿರವೇ ಬಚ್ಚಿಟ್ಟುಕೊಂಡಿದ್ದಾನೆ. ಆ ಭಕ್ತನದು ಚಿಕ್ಕ ವಯಸ್ಸು ಆಗಿರುವುದರಿಂದ ತಿಳಿದೋ ತಿಳಿಯದೆಯೋ ಚಿಕ್ಕ ತಪ್ಪು ಮಾಡಿದ್ದಾ ನೆಂದುಕೊಳ್ಳೋಣ. 14 ವರ್ಷಗಳ ಬಾಲಕನು ತಾನು ಧರಿಸಿದ ಅಂಗಿ ಕಾಲರಿನಲ್ಲಿ ಆ ಮೂರು ಬೊಟ್ಟುಗಳನ್ನು ಬಚ್ಚಿಟ್ಟುಕೊಂಡಿದ್ದಾನೆ. ದೇವಸ್ಥಾನದಿಂದ ಹೊರಗೆ ಬಂದನಂತರ ಊಟಕ್ಕೆ ಒಂದು ಸ್ಥಳದಲ್ಲಿ ಹಿಂದೆ ಬಂದಿರುವವರೆಲ್ಲರೂ ಬುತ್ತಿಬಿಚ್ಚಿ ಕುಳಿತಿದ್ದಾರೆ. ಆ

ಕಾಲದಲ್ಲಿ ಹೋಟೆಲ್‌ಗಳು ಬಹಳ ಕಡಿಮೆ. ಬಹಳ ಜನರು ಬುತ್ತಿ (ತಿನ್ನುವ ಪದಾರ್ಥಗಳು) ಕಟ್ಟಿಕೊಂಡು ಹೋಗುತ್ತಿದ್ದರು. ತಿನ್ನುವುದಕ್ಕೆ ಕುಳಿತುಕೊಂಡ ಆ ಬಾಲಕನಿಗೆ ಕಾಲು, ಕೈಗಳು ಸ್ವಾಧೀನದಲ್ಲಿ ಇಲ್ಲದಂತೆ ಹೋಗುವುದು, ಶರೀರವೆಲ್ಲ ನಡುಕ ಪ್ರಾರಂಭವಾಗುವುದು, ಬಾಯಿಂದ ನನ್ನ ಮೂರು ನಾಣ್ಯಗಳು ನನಗೆಕೊಡೆಂದು ಮಾತು ಮಾತಿಗೂ ಹೇಳುವುದನ್ನು ನೋಡಿ ಅಲ್ಲಿರುವವರಿಗೆ ಒಂದೇ ಬಾರಿಗೆ ಏನು ಅರ್ಥವಾಗಲಿಲ್ಲ. ಕೊನೆಗೆ ಆ ಬೃಂದದಲ್ಲಿರುವವರಿಗೆ ಆಲೋಚನೆ ಬಂದು ಶರೀರವೆಲ್ಲ ಹುಡಿಕಿದಾಗ ಮೂರು ಬೊಟ್ಟುಗಳು ಷರ್ಟ್‌ಕಾಲರಿನಲ್ಲಿ ಸಿಕ್ಕಿದವು. ಅವರು ಕೂಡಲೆ ಸ್ವಾಮಿ! ನಿನ್ನ ಮೂರು ಬೊಟ್ಟುಗಳಿಗೆ ಮತ್ತೆ ಮೂರು ನಾಣ್ಯಗಳನ್ನು ಬಡ್ಡಿಯಾಗಿ ಕೊಡುತ್ತೇವೆ. ನಮ್ಮನ್ನು ಕ್ಷಮಿಸೆಂದು ಕೋರಿದಾಗ ಆ ಬಾಲಕನಿಗೆ ಮತ್ತೆ ಪ್ರಜ್ಞೆ ಬಂದಿದೆ. ತಕ್ಷಣ ಆರು ಬೊಟ್ಟುಗಳನ್ನು ಹುಂಡಿಯಲ್ಲಿ ಹಾಕುವುದು ನಡೆದಿದೆ. ಬಾಲಕನೇನೋ ಪ್ರಜ್ಞೆಯೊಳಗೆ ಬಂದಿದ್ದಾನಾಗಲಿ, ಆ ದೇವರು ಶರೀರದ ಮೇಲೆ ಬಂದು ಮೂರು ನಾಣ್ಯಗಳು ಬೇಕೆಂದು ಮಾತನಾಡುವ ಸಮಯದಲ್ಲಿ ಬಂದಿರುವ ನಡುಕ ಜೀವನವೆಲ್ಲ ಶರೀರದಲ್ಲಿ ಹಾಗೆಯೇ ನಿಂತುಹೋಗಿದೆ.

ಆ ಪ್ರತಿಮೆಯಲ್ಲಿರುವ ಜೀವಿಯು ಮನುಷ್ಯರಿಗಿಂತ ಹಣದ ಮೇಲೆ ಹೆಚ್ಚಾಗಿ ಆಸೆ ಹುಟ್ಟಿ ಒಬ್ಬ ಬಾಲಕನ ಜೀವನವನ್ನೇ ನಾಶ ಮಾಡಿರುವುದು ನಡೆದಿದೆ. ಸ್ವಲ್ಪ ಕಾಲಕ್ಕೆ ಆ ದೇವರು ಸತ್ತುಹೋಗಿ ಮತ್ತೊಬ್ಬ ಜೀವಾತ್ಮ ಆ ಪ್ರತಿಮೆಯಲ್ಲಿ ಸೇರಿಕೊಂಡು ಆ ದೇವರಂತೆ ಚಲಾವಣೆ ಆಗುತ್ತಿದ್ದಾನೆ. ಈತನು ಆತನಂತೆ ಅಲ್ಲದೆ ತನ್ನ ಸ್ವತ್ತನ್ನು ಯಾರೆಷ್ಟು ತಿಂದರು, ಮೋಸ ಮಾಡಿ ತೆಗೆದುಕೊಂಡರು ಏನು ತಲೆಕೆಡಿಸಿಕೊಳ್ಳುವುದಿಲ್ಲ. ಈ ವಿಧವಾಗಿ ಒಂದೇ ಪ್ರತಿಮೆಯಲ್ಲಿ ನಿವಾಸವಿರುವ ಇಬ್ಬರು ದೇವರುಗಳಲ್ಲಿ ಅವರವರ ಮನಸ್ತತ್ವದಿಂದ ಒಬ್ಬರಿಗೊಬ್ಬರಿಗೆ ಭಿನ್ನವಾಗಿರುತ್ತದೆ. ಒಟ್ಟಿನಲ್ಲಿ ದೇವತಾ ಪೂಜೆ ಮಾಡುವವರು ಪ್ರತಿಮೆಗಳಲ್ಲಿ ಜೀವಿಗಳಾಗಿ ಹುಟ್ಟಿ ದೇವರುಗಳಾಗಿ ಚಲಾವಣೆ ಆಗುತ್ತಾರೆ.

ವರ್ಷಕ್ಕೊಂದು ಬಾರಿ ಹಿರಿಯರ ಹಬ್ಬವೆಂದು ಆ ದಿನ ಅವರ ಮನೆಯಲ್ಲಿ ಮರಣಿಸಿದವರನ್ನು ಪೂಜಿಸುವುದು, ಅವರಿಗೆ ಬಟ್ಟೆಗಳು ಸಮರ್ಪಿಸುವುದು ನಡೆಯುತ್ತಿರುತ್ತದೆ. ಆ ವಿಧವಾಗಿ ಬಹಳ ಜನರು ಮಾಡುತ್ತಿರುತ್ತಾರೆ. ಕೆಲವರು ಸತ್ತುಹೋದ ಹಿರಿಯರ ಪೂಜೆ ಹೊರತು ಉಳಿದ ದೇವತೆಗಳನ್ನು ಸಹ ಪೂಜಿಸುವುದಿಲ್ಲ. ಪರಮಾತ್ಮ ಎಂದರೇನೋ ಹೆಸರೂ ಸಹ ಅವರು ಕೇಳಿರುವುದಿಲ್ಲ. ಯಾವ ದೇವರ ಧ್ಯಾಸವೂ ಸಹ ಇಲ್ಲದಂತಹವರು

ತಪ್ಪದೆ ವಿಧಿಯಾಗಿ ಪಿತೃದೇವತೆಗಳನ್ನು ಆರಾಧಿಸುತ್ತಿರುತ್ತಾರೆ. ಆ ವಿಧವಾಗಿ ಪಿತೃದೇವತೆಗಳನ್ನೇ ದೊಡ್ಡದಾಗಿ ಪೂಜಿಸುತ್ತಿದ್ದರು, ಮರಣಿಸಿದ ನಂತರ ಜನ್ಮಗಳಿಗೆ ಹೋಗದೆ, ಪಿತೃದೇವತೆಗಳಾಗಿಯೇ ಬದಲಾಗಿ ತಮ್ಮ ಕುಟುಂಬದವರು ಆರಾಧಿಸಿದರೆ, ಬಟ್ಟೆಗಳು ಅರ್ಪಿಸಿದರೆ ಸ್ವೀಕರಿಸುತ್ತಿರುತ್ತಾರೆ. ಹಾಗೆ ಪೂಜಿಸದೆ ಹೋದರೆ ಬಟ್ಟೆಗಳು ಇಡದೆಹೋದರೆ ಇತರರ ಶರೀರದೊಳಗೆ ಬಂದು ನಮಗೆ ಬಟ್ಟೆಗಳು ಇಡಲಿಲ್ಲ, ವರ್ಷಕ್ಕೊಂದು ಸಲವಾದರು ತೆಂಗಿನಕಾಯಿ ಹೊಡೆಯಲಿಲ್ಲವೆಂದು ದಂಡಿಸುವವರೂ ಸಹ ಇದ್ದಾರೆ. ದೇವತಾ ಪ್ರತಿಮೆಗಳ ಜನ್ಮಗಳಿಗಿಂತ ಈ ಜನ್ಮಗಳು ನಿಕೃಷ್ಟವಾದವುಗಳೆಂದು ಹೇಳಬಹುದು. ಅವರಿಗೆ ಬಹಳ ಜನರು ಭಕ್ತರಿದ್ದರೆ ಇವರಿಗೆ ಅವರ ಕುಟುಂಬದವರು ಮಾತ್ರವೆ ಭಕ್ತರು ಅದೂ ಸಹ ವರ್ಷಕ್ಕೊಂದು ಸಲ.

ಭೂತಗಳನ್ನು ಪೂಜಿಸುವವರು ಭೂತಗಳೊಳಗೆ ಹೋಗುತ್ತಾರೆಂದು ಹೇಳಿದ್ದಾರೆ. ಭೂತಗಳೆಂದರೆ ಜೀವರಾಶಿಗಳೆಂದು ಅರ್ಥ. ಮಾನವರು ಎಷ್ಟೋ ಭೂತಗಳನ್ನು ಪೂಜಿಸುವುದು ವಾಸ್ತವವೆ, ಕಾಟಮಯ್ಯ ಎಂದು ನಾಯಿಯನ್ನು, ಪೋತುರಾಜನೆಂದು ಕೋಣವನ್ನು, ನಾಗರಾಜನೆಂದು ಹಾವನ್ನು, ನಂದೀಶ್ವರನೆಂದು ಎತ್ತನ್ನು, ಕಾಮಧೇನು ಎಂದು ಹಸುವನ್ನು, ಎಕ್ಕೆ ಗಿಡವನ್ನು, ಬನ್ನಿ ಮರವನ್ನು, ಬೇವಿನ ಮರವನ್ನು, ಗರುತ್ಮಂತನೆಂಬ ಗರುಡವನ್ನು ಹೀಗೆ ಒಂದೊಂದು ಪ್ರಾಂತದಲ್ಲಿ ಒಂದೊಂದು ವಿಧವಾಗಿ ಅನೇಕ ಜೀವರಾಶಿಗಳನ್ನು ದೇವತೆಗಳಾಗಿ ಭಾವಿಸಿ ಪೂಜಿಸುವರು ಇದ್ದಾರೆ. ಹಾಗೆ ಪೂಜಿಸುವುದರಿಂದ ಕೊನೆಗೆ ಆ ಜಂತುಗಳಾಗಿಯೋ, ಪಕ್ಷಿಗಳಾಗಿಯೋ, ಗಿಡಗಳಾಗಿಯೋ ಹುಟ್ಟಬೇಕಾಗಿ ಬರುತ್ತದೆ. ಆದ್ದರಿಂದ ಭೂತಗಳನ್ನು ಪೂಜಿಸುವವರು ಭೂತಗಳನ್ನೇ ಹೊಂದುತ್ತೀರೆಂದಿದ್ದಾರೆ.

ದೇವತೆಗಳನ್ನು, ಪಿತೃದೇವತೆಗಳನ್ನು, ಜೀವಿಗಳನ್ನು ಪೂಜಿಸದೆ ಪರಮಾತ್ಮನ ವಿಷಯ ಜ್ಞಾನ ತಿಳಿದು, ಮನಸ್ಸಿನಲ್ಲಿ ಅನ್ಯಚಿಂತೆ ಇಲ್ಲದೆ ಯೋಗಪದ್ಧತಿ ಅನುಸರಿಸುವುದರಿಂದ ಪರಮಾತ್ಮನನ್ನೇ ಸೇರಬಹುದು. ಅವನಿಗೆ ಜನ್ಮಗಳಿರುವುದಿಲ್ಲ.

**(8) ಶ್ಲೋ॥ 26 : ಪತ್ರಂ ಪುಷ್ಪಂ ಫಲಂ ತೋಯಂ ಯೋಮೇಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯು ಪಹೃತ ಮಶ್ನಾಮಿ ಪ್ರಯತಾತ್ಮನಃ ॥**
**(ಪರಮಾತ್ಮ)**

**ಭಾವಾರ್ಥ :** ಎಲೆಯಾದರು, ಪುಷ್ಪವಾದರು, ಹಣ್ಣಾದರು, ನೀರಾದರು ಯಾರು ಭಕ್ತಿಯಿಂದ ಸಮರ್ಪಿಸುತ್ತಾರೋ, ಪರಿಶುದ್ಧವಾದ ಆತ್ಮಕ್ಕೆ ಭಕ್ತಿ ಪೂರ್ವಕವಾಗಿ ಸಮರ್ಪಿಸಿರುವುದನ್ನು ನಾನು ಸ್ವೀಕರಿಸುತ್ತೇನೆ.

**ವಿವರ :** ಒಂದು ಮನೆಯಲ್ಲಿ ಆರು ಜನ ವ್ಯಕ್ತಿಗಳಿದ್ದಾರೆ. ಅವರ ಹೆಸರುಗಳು ಕ್ರಮವಾಗಿ 1) ಲಿಂಗ 2) ರಂಗ 3) ಭೀಮ 4) ಸೋಮ 5) ರಾಮ 6) ವೆಂಕಟರಾಮ. ಇವರನ್ನು ಗುರ್ತಿಸಿ ಕರೆಯುವುದಕ್ಕೆ ಆರು ಹೆಸರುಗಳು ಇಡಲಾಗಿದೆ. ರಾಮನನ್ನು ಕರೆದರೆ ರಾಮನೇ ಬರುತ್ತಾನೆ. ರಂಗನನ್ನು ಕರೆದರೆ ರಂಗನೇ ಬರುತ್ತಾನೆ. ಹಾಗಲ್ಲದೆ ರಾಮನನ್ನು ಕರೆದರೆ ಲಿಂಗನು ಬರುವುದು, ಲಿಂಗನನ್ನು ಕರೆದರೆ ಸೋಮನು ಬರುವುದು ನಡೆಯುವುದಿಲ್ಲ. ಹಾಗೆ ಬಂದರೆ ಅವರಿಗೆ ಹುಚ್ಚು ಹಿಡಿದಿದೆ ಎನ್ನುತ್ತೇವೆ. ಇವರಂತೆಯೇ ಶರೀರವೆಂಬ ಮನೆಯಲ್ಲಿ 1) ಮನಸ್ಸು 2) ಬುದ್ಧಿ 3) ಚಿತ್ತ 4) ಅಹಮ್ 5) ಭೂತ (ಜೀವಾತ್ಮ) 6) ತತ್ತ್ವ (ಆತ್ಮ) ಎನ್ನುವ ಹೆಸರಿರುವವರು ಇದ್ದಾರೆ. ಯಾರ ಹೆಸರು ಕರೆದರೆ ಅವರು ಮಾತನಾಡಿದರೆ ಪರವಾಗಿಲ್ಲ. ಹಾಗಲ್ಲದೆ ಒಬ್ಬರ ಹೆಸರು ಕರೆದಾಗ ಮತ್ತೊಬ್ಬರು ಮಾತನಾಡಿದರೆ ಅವರನ್ನು ತಿಳುವಳಿಕೆ ಇಲ್ಲದವರೆನ್ನುತ್ತೇವೆ. ಇಲ್ಲಿ ಮಾತನಾಡುವವರು ಸರಿಯಾಗಿ ಮಾತನಾಡಿದರು, ಕರೆಯುವವರು ಒಬ್ಬರ ಹೆಸರಿನಿಂದ ಇನ್ನೊಬ್ಬರನ್ನು ಕರೆದಿದ್ದಾರೆಂದುಕೊಳ್ಳೋಣ. ಆಗ ಕರೆಯುವವರೆ ಬುದ್ಧಿಹೀನರೆಂದು ಹೇಳಬಹುದು. ಇದೆಲ್ಲ ಏಕೆ ಹೇಳುತ್ತಿದ್ದೇವೆಂದರೆ! ಈ ಶ್ಲೋಕದಲ್ಲಿ ಹಾಗೆ ಬರೆಯಲಾಗಿದೆ. **'ಪ್ರಯತಾತ್ಮನಃ'** ಎನ್ನುವ ಮಾತಿಗೆ ಒಬ್ಬರೇನೋ ಪರಿಶುದ್ಧವಾದ ಬುದ್ಧಿ ಎಂದಿದ್ದಾರೆ. ಮತ್ತೊಬ್ಬರೇನೋ ಪರಿಶುದ್ದವಾದ ಮನಸ್ಸು ಎಂದಿದ್ದಾರೆ. ಶರೀರವೆಂಬ ಮನೆಯಲ್ಲಿ ತತ್ತ್ವವೆನ್ನುವವನು ಬೇರೆ, ಬುದ್ಧಿ ಎನ್ನುವವನು ಬೇರೆ, ಮನಸ್ಸು ಎನ್ನುವವನು ಬೇರೆ, ಬೇರೆಬೇರೆ ಯಾಗಿರುವವರನ್ನು ಶ್ಲೋಕದಲ್ಲಿ ತತ್ತ್ವವೆಂದು ಹೇಳಿದಾಗ ಅದನ್ನು ಬುದ್ಧಿಯೆಂದು ಒಬ್ಬರು ಹೇಳುವುದು, ಮನಸ್ಸೆಂದು ಮತ್ತೊಬ್ಬರು ಹೇಳುವುದು ನೋಡಿದರೆ ಏನನಿಸುತ್ತದೆ? ಅವರಿಗೆ ಹುಚ್ಚೆನಿಸುತ್ತದೆ ಅಲ್ಲವೆ! **'ಪ್ರಯತಾತ್ಮನಃ'** ಎಂದಾಗ ಪರಿಶುದ್ಧವಾದ ಆತ್ಮ ಎಂದು ಅರ್ಥ. ಆತ್ಮವನ್ನು ಬಿಟ್ಟು ಪಕ್ಕದವರನ್ನು ಹೇಳಿಕೊಳ್ಳುವುದು ತಪ್ಪು. ಇಂತಹ ಮಾತುಗಳನ್ನು ನೋಡಿ ಹೇತುವಾದಿಗಳು ಆಧ್ಯಾತ್ಮಿಕ, ಆತ್ಮ ಎಲ್ಲಾ ಬೂಟಾಟಿಕೆ ಎನ್ನುತ್ತಿದ್ದಾರೆ.

ಪತ್ರಮ್, ಪುಷ್ಪಮ್, ಫಲಮ್ ತೋಯಮ್ ಎನ್ನುವವುಗಳಲ್ಲಿ ದೇವರಿಗೆ ಯಾವ ಒಂದರಿಂದಲೂ ಅಗತ್ಯವಿಲ್ಲ. ಆದರೂ ಇವುಗಳ ಹೆಸರುಗಳು ಹೇಳುವುದರಲ್ಲಿ ಸ್ವಲ್ಪ ವಿಶೇಷವಿದೆ ಎಂದುಕೊಳ್ಳುತ್ತೇವೆ. ತೋಯ ಎಂದರೆ ನೀರು, ಪತ್ರ ಎಂದರೆ ಗಿಡಕ್ಕಿರುವ ಎಲೆ, ಹಾಗೆಯೆ ಪುಷ್ಪ, ಫಲ ನಾಲ್ಕು ಗಿಡಕ್ಕಿರುವವೆ. ಸಾಧಾರಣವಾಗಿ ಎಲೆ ಗಿಡದ ಮೇಲೆ ಒಂದು ವರ್ಷದವರೆಗೂ ಇದ್ದು ಉದುರುತ್ತದೆ. ಫಲ ಕೆಲವು ದಿನಗಳವರೆಗಿರುತ್ತದೆ. ಪುಷ್ಪ ಒಂದು ದಿನ ಮಾತ್ರ ಇರುತ್ತದೆ. ಈ ಮೂರರಲ್ಲಿರುವ ನೀರು ಮಾತ್ರ ಶಾಶ್ವತವಾಗಿರುತ್ತದೆ. ಈ ವಿಧವಾಗಿ ಒಂದು ದಿನ ಮಾತ್ರ ಇರುವ ಪುಷ್ಪವನ್ನಾಗಲಿ, ಒಂದು ವಾರದವರೆಗು ಇರುವ ಫಲವನ್ನಾಗಲಿ, ಒಂದು ವರ್ಷ ಕಾಲವಿರುವ ಎಲೆಯನ್ನಾಗಲಿ, ಶಾಶ್ವತವಾಗಿರುವ ನೀರನ್ನಾಗಲಿ ಹೇಳುವುದರಲ್ಲಿ ಅಶಾಶ್ವತವಾದವು ಮೂರು, ಶಾಶ್ವತವಾದುದು ಒಂದೆಂದು ಅರ್ಥವಾಗಿದೆ. ಅಶಾಶ್ವತವಾದವುಗಳಲ್ಲಿಯೂ ಸಹ ಒಂದು ದಿನ, ಒಂದು ವಾರ, ಒಂದು ವರ್ಷದವರೆಗೂ ಇರುವವುಗಳನ್ನು ಹೇಳಿದ್ದಾನೆ. ಈ ಮೂರು ಚರ ಪ್ರಕೃತಿಗೆ ಸಂಬಂಧಿಸಿರುವವು. ಶಾಶ್ವತವಾದ ನೀರು ಮಾತ್ರ ಅಚರ ಪ್ರಕೃತಿಗೆ ಸಂಬಂಧಿಸಿರುವುದು. ಈ ವಿಧವಾಗಿಯೇ ನಮ್ಮ ಶರೀರದಲ್ಲಿ ಸ್ವಲ್ಪ ವ್ಯತ್ಯಾಸಗಳಿಂದ ಬದಲಾಗುವ ಗುಣ ಭಾಗಗಳು, ಯಾವ ವ್ಯತ್ಯಾಸ ಇಲ್ಲದಂತೆ ಬದಲಾವಣೆ ಹೊಂದದ ಆತ್ಮ ಭಾಗವು ಇದೆ. ಮೂರು ಗುಣಗಳಲ್ಲಿನ ತಾಮಸ, ರಾಜಸ, ಸಾತ್ತ್ವಿಕ ಎನ್ನುವ ಜೀವಾತ್ಮ ಎಂದಿಗಾದರು ನಾಶವಾಗುವ ಅಶಾಶ್ವತವಾದವನೆಂದು, ಆತ್ಮ ಭಾಗದಲ್ಲಿರುವವನು ನಾಶವಾಗದವನೆಂದು ತಿಳಿಯುತ್ತಿದೆ. ಶಾಶ್ವತವಲ್ಲದ ಗುಣಗಳನ್ನು, ಶಾಶ್ವತವಾದ ಯೋಗವನ್ನು ಬಿಟ್ಟವನು ನನ್ನ ಹತ್ತಿರಕ್ಕೆ ಸೇರುತ್ತಾನೆಂದು ಹೇಳುವುದೇ ಈ ಶ್ಲೋಕದಲ್ಲಿನ ಅರ್ಥ.

ಆಳವಾಗಿ ಯೋಚಿಸದೆ ಹೋದರೆ ಈ ಶ್ಲೋಕವು ಬೇರೆ ವಿಧದಲ್ಲಿ ಅರ್ಥವಾಗಿ ಎಲೆ, ಹೂವು, ಕಾಯಿ, ನೀರು ಎಂದೇ ತಿಳಿಯುತ್ತದೆ. ಈ ನಾಲ್ಕರಲ್ಲಿನ ನಿಗೂಢಾರ್ಥವು ತಿಳಿಯುವುದಿಲ್ಲ. 1) ಇಲ್ಲಿ ನಾಲ್ಕನ್ನು ಮಾತ್ರವೇ ಏಕೆ ಹೇಳಿದ್ದಾನೆ? ಐದಾಗಲಿ, ಮೂರಾಗಲಿ ಏಕೆ ಹೇಳಲಿಲ್ಲ? 2) ಎಲ್ಲಾ ಗಿಡಕ್ಕಿರುವವೇ ಏಕೆ ಹೇಳಬೇಕು? 3) ನಾಲ್ಕನೆಯದಾದ ನೀರನ್ನು ಹೊಂದಿದ ಎಲೆ, ಹೂವು, ಹಣ್ಣನ್ನೇ ಏಕೆ ಹೇಳಿದ್ದಾನೆ? 4) ನಮಗಿರುವ ಧನವೋ, ಧಾನ್ಯವೋ, ವಸ್ತುವೋ ವಾಹನವೋ ಕೊಡು ಎಂದು ಕೇಳದೆ ಪ್ರತ್ಯೇಕಿಸಿ ಎಲೆ, ಕಾಯಿ, ಹೂವು, ನೀರು ಎಂದು ಕೇಳುವುದೇನು? 5) ಯಾವ ಗಿಡ ಇಲ್ಲದ ಕಡೆ ಮನುಷ್ಯ

ಇದ್ದರೆ ಅಲ್ಲಿ ಇವು ಯಾವುವು ಲಭಿಸುವುದಿಲ್ಲ ಅಲ್ಲವೆ! ಆಗ ಇವುಗಳಿಗಿಂತ ಕಡಿಮೆಗೆ ಅಗ್ಗದ ಧರದಲ್ಲಿ ಸಿಗುವ, ಎಲ್ಲಿಯಾದರು ಸಿಗುವ ಮಣ್ಣನ್ನಾದರು ಕೊಡಬಹುದೆಂದು ಏಕೆ ಅನ್ನಲಿಲ್ಲ? ಈ ವಿಧವಾಗಿ ಎಷ್ಟೋ ಪ್ರಶ್ನೆಗಳು ಹಾಕಿಕೊಂಡರೆ ದೇವರ ಉದ್ದೇಶ ನಮಗೆ ತಿಳಿಯುತ್ತದೆ. ಇಲ್ಲಿರುವ ಐದು ಪ್ರಶ್ನೆಗಳಿಗೆ ಉತ್ತರಗಳ ರೂಪದಲ್ಲಿ ಹೇಳಿಕೊಂಡರೆ ಈ ವಿಧವಾಗಿವೆ.

**1) ನಾಲ್ಕನ್ನು ಮಾತ್ರವೆ ಏಕೆ ಹೇಳಿದ್ದಾನೆ? ಐದಾಗಲಿ, ಮೂರಾಗಲಿ ಏಕೆ ಹೇಳಲಿಲ್ಲ?**

**ಉತ್ತರ** : ಮುಗಿಯುವವನಲ್ಲಿ ಸಮರ್ಪಿಸಿಕೊಳ್ಳುವವು ನಾಲ್ಕು ಮಾತ್ರವೇ ಇವೆ. ಪರಮಾತ್ಮನೊಳಗೆ ಐಕ್ಯವಾಗುವುದಕ್ಕೆ, ಮೋಕ್ಷವೆಂಬ ಐದನೆ ಸ್ಥಾನವನ್ನು ಹೊಂದುವುದಕ್ಕೆ, ಮನುಷ್ಯ ಬಿಡಬೇಕಾಗಿರುವವು ನಾಲ್ಕು ಸ್ಥಾನಗಳೆ, ಆದುದರಿಂದ ನಾಲ್ಕನ್ನು ಮಾತ್ರವೇ ಹೇಳಬೇಕಾಗಿ ಬರುತ್ತದೆ.

**2) ಎಲ್ಲಾ ಗಿಡಕ್ಕಿರುವವೇ ಏಕೆ ಹೇಳಬೇಕು?**

**ಉತ್ತರ** : ದೇವರಿಗೆ ಅರ್ಪಿಸಬೇಕಾಗಿರುವವು ಆರಾಧಿಸುವ ಮನುಷ್ಯನಲ್ಲಿಯೇ ಇವೆ. ಮನುಷ್ಯನಲ್ಲಿ ಇರುವಂತೆ ಸಮಾನ ಹೋಲಿಕೆ ಇರುವುದು ಭೂಮಿ ಮೇಲೆ ಗಿಡ ಮಾತ್ರವೆ ಇದೆ. ಶಾಶ್ವತ ಅಶಾಶ್ವತವಾದವು ಮನುಷ್ಯನಲ್ಲಿರುವಂತೆ ಅಶಾಶ್ವತವಾದ ಎಲೆಗಳು, ಹೂವುಗಳು, ಕಾಯಿಗಳೆ ಅಲ್ಲದೆ ಶಾಶ್ವತ ವಾದ ನೀರು ಸಹ ಗಿಡದಲ್ಲಿ ಇದೆ. ಆದ್ದರಿಂದಲೆ ಗಿಡಕ್ಕಿರುವವುಗಳನ್ನೇ ಶ್ಲೋಕದಲ್ಲಿ ಹೇಳಿದ್ದಾರೆ.

**3) ನಾಲ್ಕನೆಯದಾದ ನೀರು ಇರುವ ಎಲೆ, ಹೂವುಗಳು, ಹಣ್ಣನ್ನೇ ಏಕೆ ಹೇಳಿದ್ದಾರೆ?**

**ಉತ್ತರ** : ಮನುಷ್ಯನಲ್ಲಿ ಮೂರು ಗುಣಭಾಗಗಳು ಇವೆ. ಹಾಗೇ ಗುಣಾತೀತವಾದ ಗುಣಗಳು ಇಲ್ಲದ ಒಂದು ಭಾಗವು ಇದೆ. ಮೂರು ಗುಣಭಾಗಳಲ್ಲಿಯೂ ಒಂದು ಶಕ್ತಿ ವ್ಯಾಪಿಸಿದೆ. ಕಾಣಿಸದೆ ವ್ಯಾಪಿಸಿದ ಶಕ್ತಿ ಶರೀರದಲ್ಲಿ ಎಲ್ಲದಕ್ಕೂ ಆಧಾರವಾಗಿ ಕದಲಿಸುವ ಚೈತನ್ಯವಾಗಿದೆ. ಆತ್ಮಶಕ್ತಿ ಮೂರು ಗುಣಭಾಗಗಳಿಗೆ ಮಧ್ಯದಲ್ಲಿರುವ ನಾಲ್ಕನೆ ಸ್ಥಾನದಲ್ಲಿ ಇದೆ. ನಾಲ್ಕನೆ ಸ್ಥಾನದಲ್ಲಿರುವ ಆತ್ಮಶಕ್ತಿ ಮೂರು ಸ್ಥಾನಗಳಿಗೂ ಸಹ ಆಧಾರವಾಗಿದೆ. ಯಾವ ವಿಧವಾಗಿ ಎಲೆಯಲ್ಲಿಯೂ, ಹೂವಿನಲ್ಲಿಯೂ, ಹಣ್ಣಿನಲ್ಲಿಯೂ ತೇವಾಂಶ

ವ್ಯಾಪಿಸಿದೆಯೋ ಆ ವಿಧವಾಗಿಯೇ ಮನುಷ್ಯನೊಂದರ ತಾಮಸ, ರಾಜಸ, ಸಾತ್ವಿಕ ಎನ್ನುವ ಭಾಗಗಳಲ್ಲಿ ಆತ್ಮ ವ್ಯಾಪಿಸಿದೆ. ಗಿಡವೆಲ್ಲವೂ ನೀರು ವ್ಯಾಪಿಸಿರುವಂತೆ ಶರೀರವೆಲ್ಲವೂ ಆತ್ಮ ವ್ಯಾಪಿಸಿದೆ. ಎಲೆ, ಹೂವು, ಕಾಯಿಗಳಲ್ಲಿ ಯಾವ ವಿಧವಾಗಿ ನಾಲ್ಕನೆಯದಾದ ನೀರು ವ್ಯಾಪಿಸಿದೆಯೋ, ಅದೇ ವಿಧವಾಗಿ ನೀರಿನಂತೆ ಆತ್ಮ ವ್ಯಾಪಿಸಿದೆ. ಆದ್ದರಿಂದ ಗಿಡಕ್ಕಿರುವ ಎಲೆ, ಹೂವು, ಕಾಯಿಗಳನ್ನೇ ಹೇಳಿದ್ದಾರೆ.

**4) ನಮಗಿರುವ ಧನವೋ, ಧಾನ್ಯವೋ, ವಸ್ತುವನ್ನೋ, ವಾಹನವನ್ನೋ ಕೇಳದೆ ಪ್ರತ್ಯೇಕಿಸಿ ಎಲೆ, ಹೂವು, ಕಾಯಿ, ನೀರು ಎಂದು ಕೇಳುವುದೇನು?**

**ಉತ್ತರ :** ದೇವರು ಕೇಳಿದರೆ ಎಷ್ಟು ಬೆಲೆಯುಳ್ಳವಾದರು ಕೊಡುವುದಕ್ಕೆ ಸಿದ್ಧವಾಗಿರುವ ಮನುಷ್ಯರು ಭೂಮಿ ಮೇಲಿರುವಾಗ, ಕೇಳದೇ ಕೋಟಿಗಟ್ಟಲೆ ಹಣವನ್ನು, ಬೆಲೆಯುಳ್ಳ ವಜ್ರಗಳನ್ನು ಹುಂಡಿಯಲ್ಲಿ ಹಾಕುವ ಭಕ್ತರಿರುವಾಗ, ಕೇಳುವುದೇನೋ ದೊಡ್ಡವು ಕೇಳಬಹುದು ಅಲ್ಲವೆ! ಇಲ್ಲದಿದ್ದರೆ ಕೇಳದಂತಾದರು ಇರಬೇಕು. ಕೇಳಿ ಅದೂ ಅಷ್ಟು ಕಡಿಮೆಯಾದವುಗಳನ್ನು ಕೋರುವುದು ನೋಡಿದರೆ, ದೇವರು ಬಹಳ ತಿಳುವಳಿಕೆ ಇಲ್ಲದವನಾಗಿ ಕಾಣಿಸುತ್ತಾನೆ ಅಲ್ಲವೆ! **ಪ್ರಪಂಚದಲ್ಲಿನ ಬಹಳ ತಿಳುವಳಿಕೆ ಇರುವವರಲ್ಲಿನ ತಿಳುವಳಿಕೆಯೂ ನಾನೇ, ಎಂದವನು ತಿಳುವಳಿಕೆ ಇಲ್ಲದವನು ಹೇಗೆ ಆಗುತ್ತಾನೆ? ಆತನು ಹೇಳಿರುವುದನ್ನು ಅರ್ಥ ಮಾಡಿಕೊಳ್ಳದ ಮನುಷ್ಯರೇ ತಿಳುವಳಿಕೆ ಇಲ್ಲದವರು.** ದೇವರು ತಾನು ಗೀಚಿದ ದೇಹವೆಂಬ ಗೀತೆ(ಗೆರೆ)ಯೊಳಗಿನ ವಿಷಯವನ್ನೇ ಸೂತ್ರದ ಪ್ರಕಾರ ಕೋರುತ್ತಿದ್ದಾನಾಗಲಿ, ಶರೀರವೊಂದರ ಎಲ್ಲೆಗೆ ಹೊರಗಿರುವ ವಸ್ತುಗಳನ್ನು ಕೋರಲಿಲ್ಲ. ಎಲೆಗಳು, ಕಾಯಿಗಳು, ಹೂವು, ನೀರು ಶರೀರಕ್ಕೆ ಹೊರಗಿನವೇ ಅಲ್ಲವೆ! ಎಂದು ಕೆಲವರಿಗೆ ಪ್ರಶ್ನೆ ಬರಬಹುದು. ಅದಕ್ಕೆ ಉತ್ತರ, ಗಿಡವೂ ಸಹ ಒಂದು ಶರೀರವೇ ಎಂದು, ಅದರಲ್ಲಿಯೂ ಸಹ ಜೀವಾತ್ಮ ಇದೆಯೆಂದು ಮರೆಯಬಾರದು. ಜೀವಾತ್ಮ ದೇವರ ಹತ್ತಿರಕ್ಕೆ ಸೇರಬೇಕೆಂದರೆ, ಜೀವಾತ್ಮ ನಾಲ್ಕು ಸ್ಥಾನಗಳನ್ನು ದಾಟಿ ಹೋಗಬೇಕಾದ್ದೆ, ಆ ನಾಲ್ಕು ಸ್ಥಾನಗಳನ್ನು ಸಮಾನವಾಗಿ ತಿಳಿಸುವವು ಗಿಡದಲ್ಲಿನ ನಾಲ್ಕು ಭಾಗಗಳೆ, ಆಧ್ಯಾತ್ಮಿಕ ಪ್ರಮಾಣಕ್ಕೆ ಸರಿಹೋಗುವವು ಗಿಡದಲ್ಲಿನ ಎಲೆಗಳು, ಕಾಯಿಗಳು, ಹೂವು, ನೀರು ಆದುದರಿಂದ ಅವುಗಳನ್ನೇ ಹೆಸರಿಟ್ಟು ಹೇಳಬೇಕಾಗಿಬಂದಿದೆ. ದೇವರಿಗೆ ವಸ್ತುವಾಹನಗಳಿಂದಾಗಲಿ, ಧನಕನಕಗಳಿಂದಾಗಲಿ ಕೆಲಸವಿಲ್ಲ. ಆದುದರಿಂದ ದೇವರಿಗೆ ಅಗತ್ಯವಿಲ್ಲದ ಹಣವನ್ನು, ವಜ್ರಗಳನ್ನು, ಬಂಗಾರವನ್ನು ಸಮರ್ಪಿಸುವುದಕ್ಕಿಂತ ಗುಣಗಳಿರುವ ಮತ್ತು ಗುಣಗಳು ಇಲ್ಲದವುಗಳನ್ನು ಆತನಿಗೆ ಕೊಡುವುದು ಒಳ್ಳೆಯದು. ಆ ವಿಧಾನವನ್ನು

ತಿಳಿಸುವುದಕ್ಕೆ ಪ್ರತ್ಯೇಕಿಸಿ **"ಯಾಂತಿ ದೇವ ವ್ರತಾನ್ ದೇವಾನ್"** ಎನ್ನುವ ಶ್ಲೋಕದ ನಂತರ ಈ ವಿಷಯವನ್ನು ಹೇಳಿದ್ದಾನೆ. ಇದಕ್ಕಿಂತ ಮೊದಲ ಶ್ಲೋಕದಲ್ಲಿ ದೇವತೆಗಳನ್ನು ಪೂಜಿಸುವವನು, ದೇವತೆಗಳನ್ನೇ ಸೇರುತ್ತಾನೆ ನನ್ನನ್ನು ಹೊಂದುವುದಿಲ್ಲ ಎಂದಾಗ, ದೇವತೆಗಳೊಂದರ ಪೂಜೆಗಳನ್ನೇ ದೇವರು ಬೇಡವೆಂದು ಹೇಳಿದಂತೆ ಅಲ್ಲವೆ! ಅಂತಹದರಲ್ಲಿ ದೇವಸ್ಥಾನಕ್ಕೆ ಹೋಗಿ ಪೂಜೆಯಲ್ಲಿ ಎಲೆ, ಕಾಯಿ, ಹೂವು, ನೀರು ಇಡಲು ಹೇಳುತ್ತಾನಾ! ನೀವೇ ಆಲೋಚಿಸಿರಿ. ದೇವತಾರೂಪಗಳೇ ಆರಾಧನೆಯಲ್ಲಿ ಇಲ್ಲದಿರುವಾಗ ಹೂವು, ಕಾಯಿಗಳು ಎಲ್ಲಿ ಇಡಬೇಕೆಂದು ಯೋಚಿಸಿದ್ದೀರಾ? ಯೋಚಿಸಿದರೆ ಕಾಯಿ, ಹೂವು, ಎಲೆಗಳ ಹಿಂದೆ ದೊಡ್ಡ ರಹಸ್ಯವೇ ಅರ್ಥವಾಗುತ್ತದೆ.

**5) ಯಾವ ಗಿಡ ಇಲ್ಲದಕಡೆ ಮನುಷ್ಯ ಇದ್ದರೆ ಅಲ್ಲಿ ಇವು ಯಾವು ಲಭಿಸುವುದಿಲ್ಲವಲ್ಲ! ಆಗ ಇವುಗಳಿಗಿಂತ ಕಡಿಮೆಗೆ ಸಿಗುವ, ಎಲ್ಲಿಯಾದರು ಲಭಿಸುವ ಮಣ್ಣನ್ನಾದರು ಕೊಡಬಹುದೆಂದು ಏಕೆ ಅನ್ನಲಿಲ್ಲ?**

**ಉತ್ತರ** : ಕೆಲವು ಭಗವದ್ಗೀತೆಯಲ್ಲಿ ಕೆಲವರು ರಚನೆಕಾರರು ಇದು ಬಡಭಕ್ತರನ್ನು ಕುರಿತು ಹೇಳಿದ ಶ್ಲೋಕವೆಂದು ಬರೆದಿದ್ದಾರೆ. ಮತ್ತು "ಧನಿಕರು ಸಮರ್ಪಿಸುವ ನೈವೇದ್ಯಗಳು, ಧನ, ಬಂಗಾರ ನಮ್ಮ ಹತ್ತಿರ ಇಲ್ಲವೆ ಎಂದು ಚಿಂತಿಸಬಾರದು. ದೇವರಿಗೆ ಭಕ್ತಿಯಿಂದ ಪತ್ರ, ಪುಷ್ಪ, ಫಲ, ತೋಯಂ ಎನ್ನುವವುಗಳನ್ನು ಕೊಟ್ಟರೆ ಸರಿಹೋಗುತ್ತದೆ. ಇವು ಬೆಲೆ ಬಾಳದಿರುವವೆ ಎಂದು ಏನೂ ಅಂದುಕೊಳ್ಳದೆ ದೇವರು ಅವುಗಳನ್ನೂ ಸಹ ಪ್ರೇಮದಿಂದ ತೆಗೆದುಕೊಳ್ಳುತ್ತಾನೆ" ಎಂದು ಬರೆದಿದ್ದಾರೆ. ಈ ವಿಷಯವನ್ನು ಓದಿದ ಒಬ್ಬ ಹುಡುಗನು ಈ ವಿಧವಾಗಿ ಮಾತನಾಡುತ್ತಾ "ಧನಿಕರಾದ ಭಕ್ತರು ತಿರುಪತಿ ವೆಂಕಟೇಶ್ವರ ಸ್ವಾಮಿಗೆ ಪ್ರತಿದಿನ ಕೆಲವು ಕೋಟಿಗಳ ಹಣವನ್ನು, ಎಷ್ಟೋ ಬೆಲೆಯುಳ್ಳ ಬಂಗಾರವನ್ನು, ಖರೀದಾದ ವಜ್ರಗಳನ್ನು ಹುಂಡಿಯಲ್ಲಿ ಹಾಕಿ ಬರುತ್ತಿದ್ದಾರೆ ಅಲ್ಲವೆ! ಏನೂ ಇಲ್ಲದ ಬಡ ಭಕ್ತರು ತಿರುಪತಿಗೆ ಹೋದರೆ ಅವರನ್ನೂ ಸಹ ಬಿಡದಂತೆ ಹೂವುಗಳೋ, ಕಾಯಿಗಳೋ, ಎಲೆಗಳೋ ಕೊಡೆಂದು ಕೇಳುವುದು ನೋಡಿದರೆ ದೇವರು ಬಹಳ ಆಸೆ ಇರುವವನೆಂದು, ಬಡವರ ಹತ್ತಿರ ಸಹ ಏನೋ ಒಂದು ತೆಗೆದುಕೊಳ್ಳಬೇಕೆಂಬ ಆಸೆ ಇರುವವನೆಂದು ನಮಗೆ ಅರ್ಥವಾಗುತ್ತದೆ. ಬಜಾರಿನಲ್ಲಿ ಹೂವು ಮಾರುವವರೆ ಹೂವಿನ ಪಕ್ಕದಲ್ಲಿಯೇ ಎಲೆಗಳು ಮಾರುತ್ತಿದ್ದಾರೆ. ಕಾಯಿ ಮಾರುವ ಸ್ಥಳದಲ್ಲಿಯೇ ವಾಟರ್‌ಬಾಟಲ್‌ಗಳು ಮಾರುತ್ತಿದ್ದಾರೆ. ನೀರಾಗಲಿ, ಹಣ್ಣಾಗಲಿ, ಹೂವಾಗಲಿ, ಎಲೆಗಳಾಗಲಿ ಎಲ್ಲಾ

ಕೊಳ್ಳಬೇಕಾಗಿರುವವೇ, ಹಣವಿಲ್ಲದ ಭಕ್ತನಿಗೆ ಅವುಗಳನ್ನು ಕೊಳ್ಳಬೇಕೆಂದರೆ ತೊಂದರೆ ಅಲ್ಲವೆ! ಇದೆಲ್ಲಾ ನೋಡುತ್ತಿದ್ದರೆ ಬರುವಾಗ ಬರಿಕೈಯಲ್ಲಿ ಬರಬೇಡ ಏನೋ ಒಂದು ತೆಗೆದುಕೊಂಡು ಬಾ ಎಂದು ತವರು ಮನೆಯಿಂದ ಬರುವ ಸೊಸೆಗೆ ಅತ್ತೆಯವರು ಹೇಳಿದಂತೆ ಇದೆ. ಏನೋ ಒಂದು ಲಾಭ ಬರಬೇಕೆಂದು ಕೊನೆಗೆ ಹೂವು, ಕಾಯಿ, ಎಲೆ, ನೀರು ಕೇಳುತ್ತಿರುವ ದೇವರು ಬಹಳ ಆಸೆ ಇರುವವನೇ" ಎಂದು ಅಮಾಯಕವಾಗಿ ಕೇಳಿದನು. ಪಕ್ಕದಲ್ಲಿಯೇ ಇರುವ ಮತ್ತೊಬ್ಬ ಹುಡುಗನು ಏನೋ ಒಂದು ದೇವರು ನಮಗೆ ಕೊಡಬೇಕಾಗಲಿ, ದೇವರೆ ಏನೋ ಒಂದು ಕೊಡೆಂದು ನಮ್ಮನ್ನು ಕೇಳುವುದೇನೆಂದು ಪ್ರಶ್ನಿಸಿದ್ದಾನೆ. ಇಂತಹ ಪ್ರಶ್ನೆಗಳು ಇತರರಿಗೂ ಸಹ ಬಂದು ಅವರ ಮನಸ್ಸಿನಲ್ಲಿ ದೇವರಿಗಿರುವ ಗೌರವ ಹೋಗುವ ಅವಕಾಶ ಇದೆ. ಆದ್ದರಿಂದ ಇತರೆ ಭಗವದ್ಗೀತೆಯಲ್ಲಿ ಹೇಳಿದಂತೆ ಈ ಶ್ಲೋಕವು ಬಡಭಕ್ತರಿಗೆ ಹೇಳಿರುವುದು ಅಲ್ಲವೆಂದು, ಈ ಶ್ಲೋಕದಲ್ಲಿನ ವಿಷಯವನ್ನು ಮನುಷ್ಯರಿಗೆಲ್ಲರಿಗೂ ಹೇಳಿರುವುದೆಂದು ಗ್ರಹಿಸಿಕೊಳ್ಳಬೇಕು.

ಮೇಲೆ ಐದನೆ ಪ್ರಶ್ನೆಗೆ ಉತ್ತರವನ್ನು ನೋಡಿದರೆ ದೇವರ ದೃಷ್ಟಿಯಲ್ಲಿ ಖರೀದಾದವೆಂದು, ಬೆಲೆ ಕಡಿಮೆಯಾಗಿಯೂ ಲಭಿಸುವವೆಂಬ ಭಾವವಿಲ್ಲ. ಯಾವ ಗಿಡವಿಲ್ಲದ ಸ್ಥಳದಲ್ಲಿ ಮಣ್ಣು ಲಭಿಸುವುದು ವಾಸ್ತವವೇ ಆದರೂ, ಆತನು ಹೊರಗೆ ಕಾಣಿಸುವ ಗಿಡಗಳನ್ನು ಕುರಿತು, ಅವುಗಳಿಗೆ ಲಭಿಸುವ ಎಲೆಗಳು, ಹೂವು, ಕಾಯಿಗಳನ್ನು ಕುರಿತು ಹೇಳಲಿಲ್ಲ. ಎಲ್ಲರ ಶರೀರದಲ್ಲಿರುವ ಗಿಡವನ್ನು ಕುರಿತು ಹೇಳಿದ್ದಾನೆ. ಸ್ವಲ್ಪ ಜ್ಞಾನ ತಿಳಿದವನು ಶರೀರವನ್ನೇ ವೃಕ್ಷವಾಗಿ ತಿಳಿದು, ಅದರಲ್ಲಿನ ಆತ್ಮಶಕ್ತಿಯನ್ನೇ ನೀರಾಗಿ, ಹೂವುಗಳನ್ನು, ಕಾಯಿಗಳನ್ನು, ಎಲೆಗಳನ್ನು ನಮ್ಮೊಳಗಿರುವ ಗುಣಸ್ಥಾನಗಳಾಗಿ ತಿಳಿದು, ದೇವರು ಅವುಗಳನ್ನು ಬಿಡಬೇಕೆಂದಿದ್ದಾನೆಂದು ಗ್ರಹಿಸಬೇಕಾಗಿದೆ. ಒಳದೃಷ್ಟಿ ಇಲ್ಲದಂತೆ ಹೊರಗಿನ ದೃಷ್ಟಿಯಿಂದ ನೋಡಿದರೆ ಎಲ್ಲವು ಅಪಾರ್ಥವಾಗುತ್ತದೆ. ಕೊನೆಗೆ ದೇವರೂ ಸಹ ಮನುಷ್ಯರಂತೆ ಆಸೆ ಇರುವವನಾಗಿ ಅರ್ಥವಾಗುತ್ತದೆ. ಹಾಗಲ್ಲದೆ ದೇವರು ಹೇಳಿರುವುದು ಆತ್ಮಜ್ಞಾನವೆಂದು, ಆಧ್ಯಾತ್ಮಿಕದಿಂದ ತನ್ನ ಹತ್ತಿರಕ್ಕೆ ಸೇರುವ ಸೂತ್ರಗಳನ್ನು ತಿಳಿಸಿದ್ದಾನೆಂದು, ಜ್ಞಾನದಿಂದ ನೋಡಿದಾಗಲೇ ದೇವರ ಶ್ಲೋಕವು ಪೂರ್ತಿ ಅರ್ಥವಾಗುತ್ತದೆ. **ದೇವರಿಂದಲೇ ನಮಗೆ ಎಲ್ಲಾ ಲಭ್ಯವಾಗುತ್ತಿರುವಾಗ, ಎಲ್ಲವನ್ನು ದೇವರೇ ಸೃಷ್ಟಿಸುತ್ತಿರುವಾಗ, ದೇವರಿಗೆ ಅವುಗಳಿಂದ ಕೆಲಸವೇನು ಇರುತ್ತದೆಂದು ಯೋಚಿಸಿರಿ.** ಈ ಶ್ಲೋಕದ ಪ್ರಕಾರ ನಡೆದುಕೊಳ್ಳಬೇಕೆಂದರೆ ಯಾವ ವಿಧವಾಗಿರಬೇಕೋ ಆ ವಿಧಾನವನ್ನು ಕೆಳಗಿನ

ಶ್ಲೋಕದಲ್ಲಿಯೇ ಹೇಳಿದ್ದಾನೆ. ಈ ಶ್ಲೋಕಕ್ಕಿಂತ ಮೊದಲು ಹೇಳಿದ ಶ್ಲೋಕದಲ್ಲಿ ಏನು ಹೇಳಿದ್ದಾನೋ, ಈ ಶ್ಲೋಕದ ನಂತರ ಯಾವ ವಿಧವಾಗಿ ಹೇಳಿದ್ದಾನೋ, ಪರಿಶೀಲಿಸಿದರೆ ಮಧ್ಯದಲ್ಲಿರುವ ಈ ಶ್ಲೋಕವೊಂದರ ಅಸಲಾದ ಪೂರ್ತಿಭಾವವು ಅವಗಾಹನೆ ಆಗುತ್ತದೆ. ಆದ್ದರಿಂದ ಎಲ್ಲ ಭಗವದ್ಗೀತೆಗಳಲ್ಲಿ ಈ ಶ್ಲೋಕವನ್ನು ಓದಿದಂತೆ ಇಲ್ಲಿ ಇಲ್ಲವೆಂದು ತಿಳಿಸುತ್ತಿದ್ದೇವೆ. ಎಲ್ಲರದು ಅಲ್ಲಗಳೆದು ನೀವು ಹೇಳುವ ಅರ್ಥ ಯಾವ ನಿಘಂಟಿನಲ್ಲಿದೆ ಎಂದು ಮಾತ್ರ ಕೇಳಬೇಡಿ.

**(8) ಶ್ಲೋ॥ 27 : ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿಯತ್ ।**
**ಯತ್ತ ಪಸ್ಯಸಿ ಕೌಂತೇಯ! ತತ್ಕುರುಷ್ವ ಮದರ್ಪಣಮ್ ॥**
**(ಪರಮಾತ್ಮ, ಕರ್ಮಯೋಗ)**

**ಭಾವಾರ್ಥ :** ಏನನ್ನು ಮಾಡುತ್ತೀಯೋ, ಏನನ್ನು ತಿನ್ನುತ್ತೀಯೋ, ಏನನ್ನು ಸುಡುತ್ತೀಯೋ, ಏನನ್ನು ಕೊಡುತ್ತೀಯೋ, ಏನನ್ನು ತಪವು ಮಾಡುತ್ತೀಯೋ ಎಲ್ಲವೂ ನನಗೆ ಸಮರ್ಪಿಸು.

**ವಿವರ :** ಮಾಡುತ್ತಿರುವವನು ಪರಮಾತ್ಮನಿಗೆ ಸಮರ್ಪಿಸಿದರು ಸಮರ್ಪಿಸದಿದ್ದರು ಪರಮಾತ್ಮನಿಗೆ ಸೇರುತ್ತದೆ. ಸಮರ್ಪಿಸಿದ ಪಕ್ಷದಲ್ಲಿ ಮಾಡಿರುವುದರಲ್ಲಿನ ಕರ್ಮ ಅಂಟುವುದಿಲ್ಲ. ಸಮರ್ಪಿಸದೆ ಹೋದಂತಾದರೆ ಹೋದರೆ ಮಾಡುತ್ತಿರುವ ಕರ್ಮ ಅಂಟುತ್ತದೆ. ಹೇಗಾದರು ಪರಮಾತ್ಮನಿಗೆ ಸೇರುತ್ತದೆ. ಆದುದರಿಂದ ಆತನಿಗೇ ಎಲ್ಲಾ ಸಮರ್ಪಿಸುವುದು ಬುದ್ಧಿವಂತನ ಕೆಲಸವಾಗುತ್ತದೆ. ಹಾಗಲ್ಲದೆ ಉಳಿದ ದೇವತೆಗಳಿಗೆಂದೋ, ಅಥವಾ ಮನುಷ್ಯರಿಗೆಂದೋ, ದೈವಸಮರ್ಪಣೆ ಮಾಡಿದವನು ಬುದ್ಧಿ ಇಲ್ಲದವನಾಗುತ್ತಾನೆ.

**(8) ಶ್ಲೋ॥ 28 : ಶುಭಾಶುಭ ಫಲೈ ರೇವಂ ಮೋಕ್ಷ್ಯಸೇ ಕರ್ಮಬಂಧನೈ: ।**
**ಸನ್ಯಾಸಯೋಗ ಯುಕ್ತಾತ್ಮಾ ವಿಮುಕ್ತೋ ಮಾಪೈಷ್ಯಸಿ ॥**
**(ಪರಮಾತ್ಮ, ಕರ್ಮಯೋಗ)**

**ಭಾವಾರ್ಥ :** ಈ ಪ್ರಕಾರವಾಗಿ ಶುಭಾಶುಭ ಫಲಗಳಾದ ಕರ್ಮ ಬಂಧನಗಳಿಂದ ಹೊರಬಿದ್ದವನು, ಸನ್ಯಾಸಯೋಗ ಯುಕ್ತಾತ್ಮನಾದವನು ಅವನು ವಿಮುಕ್ತನಾಗಿ ನನ್ನನ್ನೇ ಹೊಂದುತ್ತಾನೆ.

**(8) ಶ್ಲೋ॥ 29 : ಸಮೋಹಂ ಸರ್ವಭೂತೇಷು ನಮೇದ್ವೇಷ್ಯೋಽಸ್ತಿನ ಪ್ರಿಯಃ ।**
**ಯೇ ಭಜನ್ತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಮ್ ॥**
**(ಪರಮಾತ್ಮ)**

**ಭಾವಾರ್ಥ :** ಸಮಾನವಾಗಿದ್ದೇನೆ ನಾನು ಸರ್ವ ಜೀವರಾಶಿಗಳಿಗೆ. ನನಗೆ ಶತ್ರುವೂ ಇಲ್ಲ ಮತ್ತು ಪ್ರಿಯನೂ ಇಲ್ಲ. ಭಕ್ತಿಯಿಂದ ಯಾರು ಭಜಿಸುತ್ತಾರೋ ಅವರಲ್ಲಿ ನಾನು, ನನ್ನಲ್ಲಿ ಅವರು ಇರುವರು.

**ವಿವರ :** ಸರ್ವ ಜೀವರಾಶಿಗಳಿಗೆ ಪರಮಾತ್ಮ ಸಮಾನವಾಗಿದ್ದಾನೆ. ಆತನಿಗೆ ಒಬ್ಬನು ಮಿತ್ರನೆಂದು ಮತ್ತೊಬ್ಬನು ಶತ್ರುವೆಂಬ ಭಾವ ಏನು ಇಲ್ಲ. ಆತನಿಗೆ ನಾವು ಸಮಾನವೇ ಆದರೂ ನಮಗೆ ಆತನು ಸಮಾನ ಅಲ್ಲವೆಂದು ಹೇಳಬಹುದು. ಪರಮಾತ್ಮ ಎಲ್ಲರನ್ನೂ ಒಂದೇ ದೃಷ್ಟಿಯಿಂದ ನೋಡುತ್ತಿದ್ದರೂ, ನಾವು ಆತನನ್ನು ಒಂದೇ ದೃಷ್ಟಿಯಿಂದ ನೋಡಲಿಲ್ಲ. ಒಬ್ಬೊಬ್ಬನು ಒಂದೊಂದು ವಿಧವಾಗಿ ಆತನನ್ನು ನೋಡುತ್ತಿದ್ದಾರೆ. ಆದುದ್ದರಿಂದ ಆತನಿಗೆ ಎಲ್ಲರೂ ಸಮಾನವೇ ಅದರೂ ಎಲ್ಲರಿಗೂ ಆತನು ಸಮಾನವಾಗಲಿಲ್ಲವೆಂದು ಹೇಳಬಹುದು. ಯಾರ್‍ಯಾರ ಭಾವವನ್ನನುಸರಿಸಿ ಅವನಿಗೆ ಪರಮಾತ್ಮ ಅಷ್ಟಷ್ಟೇ ಇರುತ್ತದೆ. ಹತ್ತಿರವಾಗಿ ಭಾವಿಸಿಕೊಂಡವನಿಗೆ ಹತ್ತಿರವಾಗಿರುತ್ತಾನೆ. ದೂರವಾಗಿ ಭಾವಿಸಿಕೊಂಡವನಿಗೆ ದೂರವಾಗಿರುತ್ತಾನೆ. ಹಾಗೆಯೇ ನೀನು ಯಾವ ದೃಷ್ಟಿಯಿಂದ ನೋಡಿದರು ಆ ದೃಷ್ಟಿಗೆ ತಕ್ಕಂತೆ ತಿಳಿಯುತ್ತದೆ. ಪರಮಾತ್ಮನಲ್ಲಿಯೇ ಧ್ಯಾಸಇರುವವರಿಗೆ ಪರಮಾತ್ಮನ ಧ್ಯಾಸವೂ ಸಹ ಅವರಲ್ಲಿಯೇ ಇರುತ್ತದೆ. ಯಾರಾದರೆ ಆತನ ಪ್ರತಿರೂಪವಾದ ಆತ್ಮದೊಂದಿಗೆ ಬೆರೆತಿದ್ದಾರೋ, ಅವರಲ್ಲಿಯೂ ಸಹ ಆತನು ಬೆರೆತಿದ್ದಾನೆ.

**(8) ಶ್ಲೋ॥ 30 : ಅಪಿ ಚೇತ್ಸುದುರಾಚಾರೋ ಭಜತೇ ಮಾ ಮನನ್ಯಭಾಕ್ ।**
**ಸಾಧು ರೇವಸ ಮನ್ತವ್ಯ ಸ್ಸಮ್ಯಗ್ವ್ಯ ವಸಿತೋ ಹಿಸಃ ॥**
**(ಜೀವಿಯು, ಪರಮಾತ್ಮ)**

**ಭಾವಾರ್ಥ :** ದೊಡ್ಡ ದುರಾಚಾರಪರನಾದರೂ ನನ್ನನ್ನು ಮನಸ್ಸಿನಲ್ಲಿ ಭಜಿಸುವುದರಿಂದ, ಅವನು ನಿಶ್ಚಯವಾಗಿ ನನ್ನನ್ನು ತಿಳಿದವನು, ಆದುದರಿಂದ ಅವನನ್ನು ಸಾಧುವೆಂದು ಹೇಳಬಹುದು.

**ವಿವರ :** ದುಷ್ಟನನ್ನು ಸಾಧು ಎನ್ನುವುದೇನು? ಕೆಟ್ಟವನನ್ನು ಒಳ್ಳೆಯವನೆನ್ನುವುದೇನೆಂದು ಇಲ್ಲಿ ಅನುಮಾನ ಬಾರದೆ ಇರುವುದಿಲ್ಲ. ಪರಮಾತ್ಮನನ್ನು ತಿಳಿಯಲು ಮನಸ್ಸಿನಲ್ಲಿ ಭಜಿಸುವವನನ್ನು, ಅಂದರೆ ಕರ್ಮ ಯೋಗಿ ಆಚರಣೆಹೊಂದಿ ಪರಮಾತ್ಮನನ್ನು ಸೇರಬೇಕೆಂದು ಧೃಡ ನಿಶ್ಚಯ ಇರುವವನು, ಅವನ ಪೂರ್ವದ ಕರ್ಮರೀತ್ಯ ಪ್ರಪಂಚದಲ್ಲಿ ಕೆಟ್ಟಕೆಲಸಗಳೇ ಮಾಡುತ್ತಾ ದುರಾಚಾರನೆಂದು ಹೆಸರು ಪಡೆದರೂ, ಪರಮಾತ್ಮ ದೃಷ್ಟಿಯಲ್ಲಿ ಅವನು ಸಜ್ಜನನೆಂದೇ ಹೇಳಬಹುದು. ಏಕೆಂದರೆ ಅವನಿಗೆ ದುರಾಚಾರ ಕರ್ಮವಾದ ಪಾಪ ಅಂಟಲಿಲ್ಲ. ಅವನಿಗೆ ಪರಮಾತ್ಮ ಒಳ್ಳೆಯವನಾಗಿದ್ದಾನೆ ಆದುದರಿಂದ ಪರಮಾತ್ಮನಿಗೆ ಅವನು ಒಳ್ಳೆಯವನೆಂದೇ ತಿಳಿಯಬೇಕು.

**(8) ಶ್ಲೋ॥ 31 : ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾನ್ತಿಂ ನಿಗಚ್ಛತಿ ।**
**ಕೌಂತೇಯ ! ಪ್ರತಿಜಾನೀಹಿ ನಮೇ ಭಕ್ತಃ ಪ್ರಣಶ್ಯತಿ ॥**
**(ಜೀವಿಯು, ಪರಮಾತ್ಮ)**

**ಭಾವಾರ್ಥ :** ಅಂತಹವನು ಶೀಘ್ರವಾಗಿ ಧರ್ಮಾತ್ಮನಾಗಿ ಶಾಶ್ವತ ಶಾಂತಿಯನ್ನು ಹೊಂದುತ್ತಿದ್ದಾನೆ. ನನ್ನ ಭಕ್ತನು ಕೆಟ್ಟುಹೋಗುವುದಿಲ್ಲವೆಂದು ಪ್ರತಿಜ್ಞೆಮಾಡಿ ಹೇಳುತ್ತಿದ್ದೇನೆ.

**ವಿವರ :** ಪ್ರಪಂಚದಲ್ಲಿ ಎಷ್ಟು ದುಷ್ಟನಾದರೂ ಪರಮಾತ್ಮನನ್ನು ಸೇರಬೇಕೆಂಬ ಕಾಂಕ್ಷೆ ಹೊಂದಿದವನು ಬೇಗನೆ (ಧರ್ಮಾತ್ಮನಾಗಿ) ಧರ್ಮಗಳಿಂದ ಕೂಡಿದ ಆತ್ಮ ಇರುವವನಾಗಿ, ಮುಕ್ತಿಹೊಂದಿ ಶಾಶ್ವತ ಶಾಂತಿಯಾದ ಪರಂಧಾಮವನ್ನು ಸೇರುತ್ತಾನೆ. ಪರಮಾತ್ಮನನ್ನು ಆತ್ಮ ಮೂಲವಾಗಿ ಆರಾಧಿಸಿದವನು ಎಂದಿಗೂ ಕೆಡುವುದಿಲ್ಲವೆಂದು ಒಳ್ಳೆಯ ಸ್ಥಿತಿಯನ್ನೇ ಹೊಂದುತ್ತಾನೆಂದು, ಆತ್ಮಪರವಾಗಿ ಅವನಿಗೆ ಮೀರಿದ ಲಾಭ ಹೊಂದುವವನು ಭೂಮಿ ಮೇಲೆ ಇಲ್ಲವೆಂದು ಪ್ರತಿಜ್ಞೆ ಮಾಡಿ ಹೇಳಬಹುದು. ಪ್ರಪಂಚ ರೀತ್ಯ ಹೇಗಿದ್ದರು ಪರಮಾತ್ಮ ರೀತ್ಯ ಧರ್ಮಾತ್ಮನಾದವನು ಕೆಡುವವನಲ್ಲವೆಂದು ಪ್ರತಿಜ್ಞೆಯಾಗಿ ದೇವರೇ ಹೇಳಿದ್ದಾನೆಂದರೆ ಅದೆಷ್ಟು ದೊಡ್ಡ ವಿಷಯವೋ ಆಲೋಚಿಸಿರಿ.

**(8) ಶ್ಲೋ॥ 32 : ಮಾಂಹಿಪಾರ್ಥ! ವ್ಯಪಾಶ್ರಿತ್ಯ ಯೇಽಪಿಸ್ಯುಃಪಾಪಯೋನಯಃ ।**
**ಸ್ತ್ರೀಯೋ ವೈಶ್ಯಾ ಸ್ತಥಾ ಶೂದ್ರಾಸ್ತೇಽಪಿ ಯಾನ್ತಿ ಪರಾಂಗತಿಮ್ ॥**
**(ಪರಮಾತ್ಮ)**

**ಭಾವಾರ್ಥ :** ಪಾಪಯೋನಿ ಸಂಭವರು, ವೈಶ್ಯ ಶೂದ್ರ ಜನರು ನನ್ನನ್ನಾಶ್ರಯಿಸಿ ಪರಮ ಗತಿಯನ್ನು ಹೊಂದುತ್ತಿದ್ದಾರೆ.

**ವಿವರ :** ಪರಮಾತ್ಮನನ್ನು ಸಾಧಿಸುವ ಯೋಗವು ಸ್ತ್ರೀಯರು ಮಾಡಬಾರದೆಂಬ ನಿಯಮ ಇಲ್ಲ. ಶರೀರ ಅಪರಿಶುದ್ಧವಾಗಿದ್ದರು ಮನಸ್ಸು ಪರಿಶುದ್ಧವಾಗಿರಬೇಕೆಂಬ ಸೂತ್ರದ ಪ್ರಕಾರ ಎಂತಹ ಪರಿಸ್ಥಿತಿಯಲ್ಲಿಯೂ ಸಹ ಸ್ತ್ರೀಯರು ಯೋಗವಾಚರಿಸಬಹುದು. ದೊಡ್ಡಕುಲವೆಂಬ ವೈಶ್ಯರು, ಕಡಿಮೆ ಕುಲವೆಂಬ ಶೂದ್ರರು ಪರಮಾತ್ಮನಿಗೆ ಸಮಾನವೇ. ಆದುದರಿಂದ ಯಾವ ಕುಲದವರಾದರು ಯೋಗವಾಚರಿಸಬಹುದು. ಅಷ್ಟೇ ಅಲ್ಲದೆ ನೀಚರ ಗರ್ಭದಲ್ಲಿ ಹುಟ್ಟಿದವರೂ ಸಹ ಯೋಗವನ್ನು ಆಚರಿಸಬಹುದು. ಇವರೆಲ್ಲರೂ ಪರಮಾತ್ಮನನ್ನು ಉಪಾಸಿಸಿ ಮೋಕ್ಷವನ್ನು ಹೊಂದಬಹುದು. ಇವರೇ ಮೋಕ್ಷ ಹೊಂದುತ್ತಿರುವಾಗ ಇವರಿಗಿಂತ ಉತ್ತಮವಾದ ಬ್ರಹ್ಮಜ್ಞಾನಿಗಳು, ರಾಜರ್ಷರನ್ನು ಕುರಿತು ಬೇರೆ ಹೇಳುವುದೇನಿದೆ ಎನ್ನುತ್ತಿದ್ದಾನೆ ನೋಡಿರಿ.

**(8) ಶ್ಲೋ॥ 33 : ಕಿಂ ಪುನ ರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ ।**
**ಅನಿತ್ಯ ಮಸುಖಂ ಲೋಕ ಮಿಮಂ ಪ್ರಾಪ್ಯ ಭಜಸ್ವಮಾಮ್ ॥**
**(ಪರಮಾತ್ಮ)**

**ಭಾವಾರ್ಥ :** ಪುಣ್ಯ ಮಾಡಿ ಹುಟ್ಟಿದ ಬ್ರಾಹ್ಮಣರನ್ನು, ರಾಜರ್ಷರನ್ನು ಕುರಿತು ಬೇರೆ ಹೇಳುವ ಅಗತ್ಯವಿಲ್ಲ. ಅನಿತ್ಯ ಅಸುಖವಿರುವ ಗುಣ(ಲೋಕ)ಗಳಲ್ಲಿದ್ದರೂ ನನ್ನನ್ನು ಭಜಿಸಿ ನನ್ನನ್ನೇ ಹೊಂದುತ್ತಾರೆ.

**ವಿವರ :** ಶೂದ್ರನು ಎಂದರೆ ಕ್ಷುದ್ರವಾದ ಕೆಲಸಗಳು ಮಾಡುವವನು. ನೀಚಯೋನಿಯಲ್ಲಿ ಹುಟ್ಟಿದವರು ಪರಮಾತ್ಮನನ್ನು ಆರಾಧಿಸಿ ಪರಮಪದವನ್ನು ಹೊಂದುತ್ತಿದ್ದರೆ ಬ್ರಾಹ್ಮಣರನ್ನು, ರಾಜರ್ಷಿಗಳನ್ನು ಕುರಿತು ಬೇರೆ ಹೇಳುವ ಅವಶ್ಯಕತೆ ಇಲ್ಲ. ಬ್ರಾಹ್ಮಣರು ಎಂದರೆ ಬ್ರಹ್ಮಜ್ಞಾನ ತಿಳಿದವರೆಂದು ಅರ್ಥ. ಅಷ್ಟೋ ಇಷ್ಟೋ ಬ್ರಹ್ಮಜ್ಞಾನ ತಿಳಿದವರು, ಪರಮಾತ್ಮ ಬೆಲೆ ತಿಳಿದವರು ಸುಲಭವಾಗಿ ಯೋಗವಾಚರಿಸಿ ಮೋಕ್ಷ ಹೊಂದಬಹುದು. ರಾಜರ್ಷಿಗಳೆನ್ನುವವರಿಗೆ, ಮೋಕ್ಷಕ್ಕೆ ಹತ್ತಿರವಾಗಿರುವವರಿಗೆ, ಮೋಕ್ಷಮಾರ್ಗದಲ್ಲಿ ಸ್ವಲ್ಪ ಪ್ರಯಾಣಿಸಿದವರಿಗೆ ಮತ್ತಷ್ಟು ಸುಲಭವಾಗಿ ಮುಕ್ತಿ ಲಭಿಸುತ್ತದೆ. ಅಷ್ಟಕ್ಕೂ ರಾಜರ್ಷಿಗಳೆಂದರೆ ಯಾರೆಂದು ಪೂರ್ತಿ ವಿವರಣೆ ತಿಳಿದುಕೊಳ್ಳೋಣ.

ಬ್ರಹ್ಮಜ್ಞಾನ ತಿಳಿದು ಅದರ ಪ್ರಕಾರ ಯೋಗವಾಚರಿಸುವವರಿಗೆ ಜ್ಞಾನಾಗ್ನಿ ಲಭಿಸುತ್ತದೆಂದು ಮೊದಲೇ ತಿಳಿದುಕೊಂಡಿದ್ದೇವೆ. ಹಾಗೆ ಲಭಿಸಿದ ಜ್ಞಾನಾಗ್ನಿ ಶಿರಸ್ಸಿನಲ್ಲಿ ಸೇರಿ ಅಲ್ಲಿ ನೆಲೆಯಿದ್ದು ಅಲ್ಲಿಯೇ ಇರುವ ಕರ್ಮವನ್ನು ಸುಡುತ್ತಿರುತ್ತದೆ. ಹಾಗೆ ಕರ್ಮವನ್ನು ಸುಡುವುದಕ್ಕೆ ಕೆಲವು ಜನ್ಮಗಳು ಬೇಕಾಗುತ್ತದೆಂದೂ ಸಹ ತಿಳಿದುಕೊಂಡಿದ್ದೇವೆ. ಮೊದಲು ಚಿಕ್ಕ ಕಣವಾಗಿ ಹುಟ್ಟಿದ ಜ್ಞಾನಾಗ್ನಿ ಕಾಲ ಕಳೆದಂತೆಲ್ಲವೂ, ಯೋಗವಾಚರಿಸಿದಂತೆಲ್ಲವೂ, ಬೆಳೆಯುತ್ತಾ ಹೋಗಿ ಕೊನೆಗೆ ದೊಡ್ಡ ಅಗ್ನಿಗೋಳವಾಗಿ ಬದಲಾಗುತ್ತದೆ. ಯೋಗಿಗಳ ಶರೀರದಲ್ಲಿರುವ **'ಜ್ಞಾನಾಗ್ನಿ ಬೆಳೆದ ಅಳತೆಯನ್ನು'** ಅನುಸರಿಸಿ ಯೋಗಿಗಳ ದೊಡ್ಡಸ್ತಿಕೆಯನ್ನು ಗುರುತಿಸಬಹುದು. ಯೋಗ ಸಮಯದಲ್ಲಿ ಲಭಿಸಿದ ಜ್ಞಾನಾಗ್ನಿ ಆ ಸಮಯದಲ್ಲಿ ಕರ್ಮವನ್ನು ಸುಡುತ್ತದೆ. ಯೋಗ ಮಾಡದಿರುವ ಸಮಯದಲ್ಲಿ ಕರ್ಮವನ್ನು ಸುಡದೆ ನಿಂತಿರುತ್ತದೆ. ಪುನಃ ಯೋಗ ಮಾಡುವ ಸಮಯದಲ್ಲಿ ಜ್ಞಾನಾಗ್ನಿ ಬೆಳೆಯುತ್ತಿರುತ್ತದೆ. ಕರ್ಮವನ್ನು ಸುಡುತ್ತಿರುತ್ತದೆ. ಯೋಗವಾಚರಿಸುತ್ತಾ ಆಚರಿಸುತ್ತಾ ಜ್ಞಾನಾಗ್ನಿ ಹೆಚ್ಚುತ್ತಾಹೋಗುತ್ತಿರುತ್ತದೆ. ಕರ್ಮ ತೀವ್ರತೆ ಹೆಚ್ಚಾಗಿದ್ದರೆ ಅಗ್ನಿ ಹೆಚ್ಚಾಗಿ ಖರ್ಚಾಗುತ್ತದೆ. ಅಂತಹವರಿಗೆ ಸಂಪೂರ್ಣ ಅಗ್ನಿ ನಿಲ್ಲುವುದಕ್ಕೆ ಬಹಳ ಕಾಲ ಬೇಕಾಗುತ್ತದೆ. ತೀವ್ರಕರ್ಮಗಳು ಇಲ್ಲದವರಿಗೆ ಅಗ್ನಿ ಕಡಿಮೆ ಖರ್ಚಾಗುತ್ತಾ ಉಳಿಯುತ್ತಾ ಹೋಗುತ್ತದೆ. ಅವರಿಗೆ ಅಗ್ನಿ ಸಂಪೂರ್ಣ ಸ್ಥಿತಿಗೆ ಸೇರುವುದಕ್ಕೆ ಕಡಿಮೆ ಕಾಲಾವಧಿ ಬೇಕಾಗುತ್ತದೆ. ಎಷ್ಟು ಕಡಿಮೆ ಕಾಲವಾದರು ವರ್ಷಗಳಲ್ಲಿ ಇರುತ್ತದೆ. ಜ್ಞಾನಾಗ್ನಿ ಶರೀರದಲ್ಲಿ ಎಷ್ಟು ಸಾಂದ್ರತೆಯಿಂದ ನಿಲ್ಲುತ್ತದೋ ಆ ಸಾಂದ್ರತೆ ಹೊಂದಿದವನನ್ನು ಸಂಪೂರ್ಣ ಯೋಗಿ ಎನ್ನಬಹುದು. ಸಂಪೂರ್ಣ ಯೋಗಿ ಆದ ನಂತರವೂ ಸಹ ಕರ್ಮ ಸ್ವಲ್ಪಕಾಲ ಸುಡಬಹುದು.

ಯೋಗಿಗಳ ಶರೀರದಲ್ಲಿನ ತಲೆಯಲ್ಲಿ ನೆಲೆ ಇರುವ ಜ್ಞಾನಾಗ್ನಿವೊಂದರ ಪೂರ್ಣತ್ವವನ್ನನುಸರಿಸಿ ಸಂಪೂರ್ಣಯೋಗಿಗಳು, ಅಸಂಪೂರ್ಣಯೋಗಿಗಳೆಂದು ಯೋಗಿಗಳನ್ನು ವಿಭಜಿಸಬಹುದು. ಜ್ಞಾನಾಗ್ನಿ ಸಾಂದ್ರತೆಯನ್ನನುಸರಿಸಿ ಯೋಗಿಗಳ ಯೋಗ್ಯತೆಯನ್ನು ಪೂರ್ವದಲ್ಲಿ ಹಿರಿಯರು ಮೊದಲೇ ನಿರ್ಣಯಿಸಿಟ್ಟಿದ್ದಾರೆ. ಆ ನಿರ್ಣಯದ ಪ್ರಕಾರ ಯೋಗಿಗಳು ನಾಲ್ಕು ಹಂತಗಳನ್ನು ಹೊಂದಿದ್ದಾರೆ. **1) ಮಹರ್ಷಿ 2) ರಾಜರ್ಷಿ 3) ದೇವರ್ಷಿ 4) ಬ್ರಹ್ಮರ್ಷಿ**. ಯೋಗಿಗಳ ತಲೆಯೊಳಗೆ ಜ್ಞಾನಾಗ್ನಿ ಪ್ರಕಾಶ ಒಂದರ ಸಂಪೂರ್ಣತ್ವದಲ್ಲಿ ***ಕಾಲುಭಾಗ ಇರುವವನನ್ನು ಮಹರ್ಷಿ ಎನ್ನಬಹುದು. ಅರ್ಧಭಾಗ ಇರುವವನನ್ನು ರಾಜರ್ಷಿ ಎನ್ನಬಹುದು. ಮುಕ್ಕಾಲುಭಾಗ ಇರುವವರನ್ನು ದೇವರ್ಷಿ***

***ಎನ್ನಬಹುದು. ಸಂಪೂರ್ಣತ್ವವಾಗಿ ಅಗ್ನಿ ಪ್ರಕಾಶ ಇರುವವನನ್ನು ಬ್ರಹ್ಮರ್ಷಿ ಎನ್ನಬಹುದು.*** ಇಲ್ಲಿ ವಿವರಿಸಲ್ಪಟ್ಟ ಮಹರ್ಷಿಗಳು, ರಾಜರ್ಷಿಗಳು, ದೇವರ್ಷಿಗಳು, ಬ್ರಹ್ಮರ್ಷಿಗಳು ಪೂರ್ವದಲ್ಲಿರುತ್ತಿದ್ದರೆಂದು ಚರಿತ್ರೆಯಲ್ಲಿ ತಿಳಿಯುತ್ತದೆ. ವಿಶ್ವಾಮಿತ್ರನು ಪಟ್ಟುಹಿಡಿದು ಒಂದೇ ಜನ್ಮದಲ್ಲಿ ಮಹರ್ಷಿ ಸ್ಥಾನದಿಂದ ರಾಜರ್ಷಿ, ದೇವರ್ಷಿ ಸ್ಥಾನಗಳು ಹೊಂದಿ ಕೊನೆಗೆ ಬ್ರಹ್ಮರ್ಷಿ ಸ್ಥಾನವನ್ನೂ ಸಹ ಹೊಂದಿದಂತೆ ತಿಳಿದ ವಿಷಯವೇ. ಜ್ಞಾನಾಗ್ನಿ ಇರುವವರು ಮಹರ್ಷಿಗಳು, ರಾಜರ್ಷಿಗಳು, ದೇವರ್ಷಿಗಳು, ಬ್ರಹ್ಮರ್ಷಿಗಳಾದರೆ ಎಷ್ಟು ಮಾತ್ರ ಜ್ಞಾನಾಗ್ನಿ ಇಲ್ಲದವರನ್ನು ಬೇವರ್ಷಿಗಳು ಎನ್ನುತ್ತಿದ್ದರು. ಸ್ವಲ್ಪವಾದರು ಜ್ಞಾನವಿಲ್ಲದ ಬೇವರ್ಷಿಗಳು ಸಹ ಪರಮಾತ್ಮನನ್ನು ಆರಾಧಿಸಿ ಕೊನೆಗೆ ಮೋಕ್ಷವನ್ನು ಹೊಂದುತ್ತಿರುವಾಗ ಬ್ರಹ್ಮಜ್ಞಾನ ತಿಳಿದವರನ್ನು, ರಾಜರ್ಷಿಗಳಾದವರನ್ನು ಕುರಿತು ಹೇಳಬೇಕಾದ ಅವಶ್ಯಕತೆ ಇಲ್ಲವೆಂದು ಈ ಶ್ಲೋಕದಲ್ಲಿ ಭಗವಂತನು ಹೇಳಿದ್ದಾನೆ.

**(8) ಶ್ಲೋ॥ 34 : ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾ ಮೇ ವೈಷ್ಯಸಿ ಯುಕ್ತ್ವೈವ ಮಾತ್ಮಾನಂ ಮತ್ಪರಾಯಣಃ ॥**
**(ಸಾಕಾರ, ನಿರಾಕಾರ)**

**ಭಾವಾರ್ಥ :** ನೀನು ನನ್ನ ಮೇಲೆ ಮನಸ್ಸಿಡು, ನನಗೆ ಭಕ್ತನಾಗಿರು. ನನ್ನನ್ನೇ ನಮಸ್ಕರಿಸು, ನನ್ನನ್ನೇ ಆರಾಧಿಸು. ನನ್ನ ಮೇಲೆ ಧ್ಯಾಸಹೊಂದಿ ಆತ್ಮನಲ್ಲಿ ಸೇರಿದರೆ ನನ್ನನ್ನೇ ಹೊಂದುತ್ತೀಯ.

**ವಿವರ :** ಈ ಶ್ಲೋಕದಲ್ಲಿ ಸಾಕಾರ ಭಗವಂತನನ್ನು, ನಿರಾಕಾರ ಪರಮಾತ್ಮನನ್ನು ಎರಡನ್ನು ಕುರಿತು ಹೇಳಲಾಗಿದೆ ಎಂದು ಗ್ರಹಿಸಬೇಕು. ***'ಯುಕ್ತ್ವೈವ ಮಾತ್ಮಾನಂ ಮತ್ಪರಾಯಣಃ'*** ಎನ್ನುವ ವಾಕ್ಯವು ನಿರಾಕಾರ ಪರಮಾತ್ಮಕ್ಕೆ ಸಂಬಂಧವಾದುದು. ಇದರಲ್ಲಿ 'ನನ್ನ ಧ್ಯಾಸದಿಂದ ಆತ್ಮನಲ್ಲಿ ಕೂಡಿಕೊಂಡವನು' ಎಂದು ಹೇಳಲಾಗಿದೆ. ಆತ್ಮ ನಿರಾಕಾರವಾದುದು ಆತ್ಮದೊಂದಿಗೆ ಕೂಡಿಕೊಳ್ಳುವುದು ಎಂದರೆ ಯೋಗ ಮಾಡುವುದು. ಕಾಣಿಸದ ಪರಮಾತ್ಮಗೋಸ್ಕರ ಕಾಣಿಸದ ಆತ್ಮವನ್ನು ಯೋಗದಿಂದ ಧ್ಯಾಸಹೊಂದಿರುವವನು ಕೊನೆಗೆ ಮೋಕ್ಷ ಹೊಂದುತ್ತಾನೆ. ಇದೊಂದು ಪದ್ಧತಿಯಾದರೆ, ಸಾಕಾರ ಸಂಬಂಧವಾದ ಮತ್ತೊಂದು ಪದ್ಧತಿ ಇದೆ. ಸಾಕಾರ ಪದ್ಧತಿ ಎಂದರೆ ಕಾಣಿಸುವ ವಿಗ್ರಹಗಳನ್ನು ಪೂಜಿಸುವುದು ಅಲ್ಲ. ಪರಮಾತ್ಮನೇ ಭಗವಂತನಾಗಿ ಹುಟ್ಟಿದಾಗ ಕಾಣಿಸುವ ಶರೀರವಿರುವ ಆ ಭಗವಂತನನ್ನು ಪೂಜಿಸುವುದು, ನಮಸ್ಕರಿಸುವುದು, ಆತನ ಮೇಲೇ ಮನೋಧ್ಯಾಸ ಹೊಂದಿರುವುದು. ಹಾಗೆ ಆತನಿಗೇ ನಾವು ಭಕ್ತರಾಗಿರುವುದು

ಸಾಕಾರಕ್ಕೆ ಸಂಬಂಧಿಸಿರುವುದಾಗಿರುತ್ತದೆ. ಸಾಕಾರ ಆರಾಧನೆ ಸಾಮಾನ್ಯವಾಗಿ ಲಭಿಸುವುದು ಅಲ್ಲ. ಪರಮಾತ್ಮ ಭಗವಂತನಾಗಿ ಬರುವ ಬರುವಿಕೆಯೇ ಯಾರಿಗೂ ತಿಳಿಯದು. ಆ ಬರುವಿಕೆಯನ್ನು ತಿಳಿಯುವುದೇ ಕಷ್ಟ. ಆತನು ಭೂಮಿ ಮೇಲೆ ಇರುವಾಗಲೇ ಸಾಕಾರ ಪೂಜೆ ಸಾಧ್ಯವಾಗುತ್ತದೆ. ಆತನು ಯಾವಾಗಲು ಭೂಮಿ ಮೇಲೆ ಇರುವವನು ಅಲ್ಲ. ಆದ್ದರಿಂದ ಯಾವಾಗಲು ಆಚರಿಸುವುದಕ್ಕೆ ಅನುವಾದುದು ನಿರಾಕಾರ ಆರಾಧನೆಯೇ ಎಂದು ತಿಳಿಯಿರಿ. ನಿರಾಕಾರವಾಗಿಯೋ, ಸಾಕಾರವಾಗಿಯೋ ಆತನನ್ನು ಆರಾಧಿಸುವುದರಿಂದ ಆತನನ್ನೇ ಹೊಂದುತ್ತೀರೆಂದು ತಿಳಿಸಿದ್ದಾರೆ. ಇದೇ ಅತಿ ರಹಸ್ಯವಾದುದು ಅತಿ ದೊಡ್ಡದಾದ ವಿದ್ಯೆಯೆಂದು ತಿಳಿಯಬೇಕು. ಇಲ್ಲಿಗೆ ಈ ರಾಜವಿದ್ಯಾ ರಾಜಗುಹ್ಯ ಯೋಗವೆಂಬ ಅಧ್ಯಾಯ ಮುಕ್ತಾಯವಾಗಿದೆ.

ಇದರಲ್ಲಿನ ಶ್ಲೋಕಗಳ ವಿವರವು ಕೆಳಗೆ ಇದೆ.

| | | | |
|---|---|---|---|
| 1. | ಧರ್ಮಗಳು | – | 3 |
| 2. | ಪರಮಾತ್ಮ | – | 17 |
| 3. | ಪರಮಾತ್ಮ, ಸಾಕಾರ | – | 2 |
| 4. | ಪರಮಾತ್ಮ, ಜೀವಾತ್ಮ | – | 8 |
| 5. | ಜೀವಾತ್ಮ, ಪ್ರಕೃತಿ | – | 1 |
| 6. | ಪರಮಾತ್ಮ, ಕರ್ಮಯೋಗ | – | 2 |
| 7. | ನಿರಾಕಾರ–ಸಾಕಾರ | – | 1 |
| | ಒಟ್ಟು ಶ್ಲೋಕಗಳು | – | 34 |

ಭಾವ, ವಿವರವನ್ನು ಬದಲಾಯಿಸಿ ಬರೆದ ಶ್ಲೋಕಗಳು– 13, 22, 24, 25, 26



### ಒಂಭತ್ತನೆ ಅಧ್ಯಾಯ

# ವಿಭೂತಿ ಯೋಗ

**ಶ್ರೀ ಭಗವಂತನು ಹೀಗೆ ಹೇಳಿದನು :-**

**(9) ಶ್ಲೋ॥ 1 : ಭೂಯ ಏವ ಮಹಾಬಾಹೋ ! ಶೃಣು ಮೇ ಪರಮಂ ವಚಃ ।**
**ಯತ್ತೇ ಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ ॥**

**(ಜ್ಞಾನ)**

**ಭಾವಾರ್ಥ :** ಯಾವುದನ್ನು ನಾನು ಪ್ರೀತಿಯಿಂದ ನಿನ್ನ ಹಿತವುಕೋರಿ ಹೇಳಿದ್ದೇನೋ ಪುನಃ ಶ್ರೇಷ್ಠವಾದ ಆ ಮಾತುಗಳನ್ನೇ ಕೇಳು.

**ವಿವರ :** ಪರಮಾತ್ಮನನ್ನು ಕುರಿತು ಭಗವಂತನು ಇಲ್ಲಿಗೇ ಬಹಳ ವಿಷಯಗಳು ತಿಳಿಸಿದ್ದಾನೆ. ಕೇಳುವವನ ಹಿತವು ಕೋರಿ ತಿಳಿಸಿದ್ದೇನೆ ಎಂದಿದ್ದಾನೆ. ಆದರೂ ಇನ್ನೂ ತಿಳಿಸುತ್ತಿದ್ದೇನೆ ಕೇಳು ಎಂದನು. ಈ ವಿಷಯಗಳೆಲ್ಲ ಅರ್ಜುನನಿಗೆ ಅಲ್ಲ ವಾಸ್ತವವಾಗಿ ನಮಗೇ ಎಂದು ತಿಳಿಯಬೇಕು. ಹಾಗೆಂದುಕೊಳ್ಳುವುದರಿಂದ ಭಗವಂತನು ಹೇಳುವ ವಿಷಯಗಳ ಮೇಲೆ ಧ್ಯಾಸ ಶ್ರದ್ಧೆ ಬೆಳೆಯುತ್ತದೆ.

**(9) ಶ್ಲೋ॥ 2 : ನ ಮೇ ವಿದು ಸ್ಸುರಗಣಾಃ ಪ್ರಭವಂ ನ ಮಹರ್ಷಯಃ ।**
**ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ ॥**

**(ಸಾಕಾರ)**

**ಭಾವಾರ್ಥ :** ದೇವತೆಗಳು, ಮಹರ್ಷಿಗಳು ನನ್ನ ಪ್ರಭವವನ್ನು ತಿಳಿಯರು. ದೇವತೆಗಳಿಗು, ಮಹರ್ಷಿಗಳಿಗು ನಾನು ಮುಂದಿರುವವನು, ದೊಡ್ಡವನು.

**ವಿವರ :** ಪುಣ್ಯಫಲ ಹೆಚ್ಚಾಗುವುದರಿಂದ ಭೂಮಿ ಮೇಲೆ ಇಷ್ಟಸುಖಗಳನ್ನು ಅನುಭವಿಸುವವರು ದೇವತೆಗಳು. ಹಾಗೆಯೇ ಭೂಮಿ ಮೇಲೇ ಜ್ಞಾನಾಗ್ನಿಯನ್ನು ಸಂಪಾದಿಸಿಕೊಂಡವರು ಮಹರ್ಷಿಗಳು. ದೇವತೆಗಳು, ಮಹರ್ಷಿಗಳು ಇಬ್ಬರು ಪರಮಾತ್ಮನ ಹುಟ್ಟುವಿಕೆಯನ್ನು ತಿಳಿಯರು. ದೇವತೆಗಳು ಮಹರ್ಷಿಗಳು ಭೂಮಿ ಮೇಲೆಯೇ ಇದ್ದಾರೆ. ಪರಮಾತ್ಮನ ಪ್ರಭವವು (ಹುಟ್ಟು) ಭಗವಂತನಾಗಿ ಭೂಮಿ ಮೇಲೆಯೇ ನಡೆಯುತ್ತದೆ. ಭೂಮಿ ಮೇಲೆ

ಭಗವಂತನಾಗಿ ಹುಟ್ಟುವ ಪರಮಾತ್ಮನನ್ನು ಇಲ್ಲಿಯೇ ಇರುವ ದೇವತೆಗಳು, ಮಹರ್ಷಿಗಳೂ ಸಹ ತಿಳಿಯದಂತೆ ಇದ್ದಾರೆ.

ದೇವತೆಗಳಿಗಿರುವ ಪುಣ್ಯದಲ್ಲಿಯೂ, ಮಹರ್ಷಿಗಳಿಗಿರುವ ಜ್ಞಾನಶಕ್ತಿಯಲ್ಲಿಯೂ ಇಬ್ಬರಿಗೂ ಮುಂದಿರುವವನು ಪರಮಾತ್ಮ. ಇಬ್ಬರಿಗಿಂತ ದೊಡ್ಡವನಾದ್ದರಿಂದ ಆತನನ್ನು ಕುರಿತು ತಿಳಿಯದಂತೆ ಇದ್ದಾರೆ. ತಿಳಿಯಬೇಕೆಂದು ಪ್ರಯತ್ನ ಮಾಡಿದರೆ ಹೊರತು ಪರಮಾತ್ಮ ಭಗವಂತನಾಗಿ ತಿಳಿಯುವವನಲ್ಲ. ಅದು ಕಷ್ಟಕರವಾದ ಕೆಲಸ. ಹಾಗೆ ತಿಳಿದವರು ಬಹಳ ಕಡಿಮೆ.

**(9) ಶ್ಲೋ॥ 3 : ಯೋ ಮಾ ಮಜ ಮನಾದಿಂ ಚವೇತ್ತಿ ಲೋಕಮಹೇಶ್ವರಮ್ ।**
**ಅಸಮ್ಮೂಢ ಸ್ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ ॥**
**(ಪರಮಾತ್ಮ)**

**ಭಾವಾರ್ಥ** : ನನಗೆ ಆದಿ ಎನ್ನುವುದು ಇಲ್ಲವೆಂದು, ಹಾಗೆ ಹುಟ್ಟು ಇಲ್ಲವೆಂದು, ಲೋಕಗಳಿಗೆಲ್ಲ ಮಹೇಶ್ವರನೆಂದು ಯಾರು ತಿಳಿಯುತ್ತಾರೋ ಅವನು ಮೂಢತ್ವದಿಂದ ಹೊರಬಿದ್ದು ಸರ್ವ ಪಾಪಗಳಿಂದ ಮುಕ್ತಿ ಹೊಂದುತ್ತಾನೆ.

**ವಿವರ** : ಪರಮಾತ್ಮನಿಗೆ ಮೊದಲ್ಯಾವುದೋ ಯಾರಿಗೂ ತಿಳಿದಿಲ್ಲ. ಅದು ಅಗಮ್ಯಗೋಚರ. ಎಲ್ಲರಂತೆ ಹುಟ್ಟುವುದೂ ಸಹ ಇಲ್ಲ. ಇಲ್ಲಿ ಭಗವಂತನಾಗಿ ಹುಟ್ಟುತ್ತಿದೆ ಅಲ್ಲವೆ ಎಂದು ಕೆಲವರು ಕೇಳಬಹುದು. ಪರಮಾತ್ಮ ನಿರಾಕಾರದಿಂದ ಸಾಕಾರಕ್ಕೆ ಬರುತ್ತಿದ್ದಾನೆ ಆದರೆ ಎಲ್ಲರಂತಹ ಜನ್ಮವಲ್ಲ. ಜನ್ಮಕ್ಕಿರುವ ಲಕ್ಷಣಗಳು ಅಲ್ಲಿಲ್ಲ. ಸ್ತ್ರಿ ಪುರುಷ ಸಂಬಂಧದಿಂದಲೇ ಎಲ್ಲರಿಗೂ ಜನ್ಮಗಳು ಉಂಟಾಗುತ್ತವೆ. ಪರಮಾತ್ಮ ಪುರುಷ ಸಂಬಂಧವಿಲ್ಲದ ಸ್ತ್ರೀಯಲ್ಲಿಯೂ ಸಹ ಹುಟ್ಟುತ್ತಾನೆ. ಅಂದರೆ ಎಲ್ಲರಂತೆ ಅದು ಜನ್ಮ ಅಲ್ಲವೆಂದು ತಿಳಿಯಬೇಕು. ಅಷ್ಟೇ ಅಲ್ಲದೆ ಸರ್ವಲೋಕಗಳಿಗೂ ಮಹೇಶ್ವರನೆಂದು ತಿಳಿದವರು, ಮೂಢತ್ವ ಇಲ್ಲದವರಾಗಿ ಸರ್ವ ಕರ್ಮಗಳಿಂದ ಹೊರಬೀಳುತ್ತಾರೆ. ಏಕೆಂದರೆ ಅವರಲ್ಲಿ ಜ್ಞಾನಾಗ್ನಿ ತಯಾರಾಗಿ ಅವರ ಕರ್ಮಗಳನ್ನು ಸುಟ್ಟುಹಾಕುತ್ತಿದೆ. ಜ್ಞಾನವು ಬೆಳೆದು ಮೂಢತ್ವವನ್ನು ಪಕ್ಕಕ್ಕೆ ತಳ್ಳುತ್ತದೆ.

**(9) ಶ್ಲೋ ॥ 4 : ಬುದ್ಧಿ ರ್ಜ್ಞಾನ ಮಸಮ್ಮೋಹಃ ಕ್ಷಮಾ ಸತ್ಯಂ ದಮ ಶ್ಯಮಃ ।**
**ಸುಖಂ ದುಃಖಂ ಭವೋಽಭಾವೋ ಭಯಂಚಾಽಭಯ ಮೇವಚ ॥**
**(ಪರಮಾತ್ಮ)**

**(9) ಶ್ಲೋ॥ 5 : ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ ।**
**ಭವನ್ತಿ ಭಾವಾ ಭೂತಾನಾಂ ಮತ್ತ ಏವ ಪೃಥ ಗ್ವಿಧಾಃ ॥**
**(ಪರಮಾತ್ಮ)**

**ಭಾವಾರ್ಥ** : ಬುದ್ಧಿ, ಜ್ಞಾನ, ನಿರ್ಮೋಹ, ಸಹನೆ, ಸತ್ಯ, ಇಂದ್ರಿಯ ನಿಗ್ರಹ, ಸುಖ, ದುಃಖ ಉಂಟಾಗುವುದು ಉಂಟಾಗದಿರುವುದು, ಭಯ, ನಿರ್ಭಯ, ಅಹಿಂಸೆ, ಸಮದೃಷ್ಟಿ, ತೃಪ್ತಿ, ತಪಸ್ಸು, ದಾನ, ಕೀರ್ತಿ, ಅಪಕೀರ್ತಿ ಅನೇಕ ವಿಧ ಭಾವಗಳು ಜೀವರಾಶಿಗಳಿಗೆ ನನ್ನಿಂದಲೇ ಉಂಟಾಗುತ್ತಿವೆ.

**(9) ಶ್ಲೋ॥ 6 : ಮಹರ್ಷಯ ಸ್ಸಪ್ತ ಪೂರ್ವೇ ಚತ್ವಾರೋ ಮನವ ಸ್ತಥಾ ।**
**ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃ ಪ್ರಜಾಃ ॥**
**(ಪರಮಾತ್ಮ)**

**ಭಾವಾರ್ಥ** : ಮೊದಲು ಪ್ರಪಂಚದಲ್ಲಿ ಸಪ್ತ ಮಹರ್ಷಿಗಳು, ಚತುರ್ ಮನುಗಳು ನನ್ನ ಸಂಕಲ್ಪದಿಂದಲೇ ತಯಾರಾಗಿವೆ. ನಂತರ ಅವುಗಳಿಂದ ಸಮಸ್ತ ಜೀವ ರಾಶಿಗಳನ್ನು ಸೃಷ್ಟಿಸಿದ್ದೇನೆ.

**ವಿವರ:** ಮೊಟ್ಟಮೊದಲು ಸೃಷ್ಟಿ ಹೇಗೆ ನಡೆದಿದೆ ಎಂದು ಭಗವಂತನು ಈ ಶ್ಲೋಕದಲ್ಲಿ ಸೂಚನಾ ಪ್ರಾಯವಾಗಿ ತಿಳಿಸಿದ್ದಾನೆ. ಸೈನ್ಯದಲ್ಲಿ ಸಿಗ್ನಲ್ ಸೆಕ್ಷನ್ ಎನ್ನುವ ವಿಭಾಗವು ಒಂದಿದೆ. ಅದರಲ್ಲಿ ಕೆಲವು ಸಿಗ್ನಲ್‌ಗಳಿಗೆ (ಗುರುತುಗಳಿಗೆ) ಕೆಲವು ಅರ್ಥಗಳು ನಿರ್ಣಯಿಸಲ್ಪಟ್ಟಿರುತ್ತವೆ. ಆ ವಿಭಾಗದಲ್ಲಿ ಶಿಕ್ಷಣ ಹೊಂದಿದವರಿಗೇ ಆ ಸಿಗ್ನಲ್ಸ್‌ಗೆ ಅರ್ಥ ತಿಳಿಯುತ್ತದೆ. ವಯರ್‌ಲೆಸ್ ಆಪರೇಟರ್‌ಗಳು ತಾವು ಮಾತನಾಡುವ ವಿಷಯವು ಶತ್ರುಗಳಿಗೆ ಅರ್ಥವಾಗದಂತೆ ಮಾತನಾಡುವುದಕ್ಕೆ ಒಂದು ದೊಡ್ಡ ವಿಷಯಕ್ಕೆ ಚಿಕ್ಕ ಕೋಡ್‌ನ್ನು (ಗುರುತನ್ನು) ಇಟ್ಟುಕೊಂಡು ಮಾತನಾಡುತ್ತಿರುತ್ತಾರೆ. ಆ ವಿಧವಾಗಿಯೇ ಈ ಶ್ಲೋಕದಲ್ಲಿ ದೊಡ್ಡ ವಿಷಯವನ್ನು ತಿಳಿಸುವ ಚಿಕ್ಕ ಕೋಡ್ ಕಾಣಿಸುತ್ತಿದೆ. ಆದ್ದರಿಂದ ಸೂಚನಾ ಪ್ರಾಯವಾಗಿ ತಿಳಿಸಿದ್ದಾನೆ ಎಂದಿದ್ದೇವೆ. ಇದರಲ್ಲಿನ ಗುಪ್ತವಾದ ವಿಷಯವು ತಿಳಿಯದೆ ಸಪ್ತ ಋಷಿಗಳು, ನಾಲ್ಕುಜನರು ಸನಕಸನಂದರು, ನಾಲ್ವರು ಮನುಗಳು ಒಟ್ಟು 15 ಜನರು ಸೃಷ್ಠಾದಿಯಲ್ಲಿ ಹುಟ್ಟಿದ್ದಾರೆಂದು ಕೆಲವರು ಬರೆದಿದ್ದಾರೆ. ಮತ್ತೆ ಕೆಲವರೇನೋ

ಏಳುಜನ ಋಷಿಗಳನ್ನು, ನಾಲ್ವರು ಮನುಜರನ್ನು ಒಟ್ಟು 11 ಜನರನ್ನು ದೇವರೇ ಸೃಷ್ಠಿಸಿದ್ದಾನೆಂದು ಬರೆದಿದ್ದಾರೆ. ಹಾಗೆ ತಯಾರಾದ ಅವರಿಂದಲೇ ಉಳಿದ ಮನುಷ್ಯರು ಜೀವರಾಶಿಗಳು ಹುಟ್ಟಿವೆಯೆಂದು ಬರೆದಿದ್ದಾರೆ. ಈ ವಿಷಯವನ್ನು ನೋಡಿದ ಹೇತುವಾದಿಗಳು ಮೊದಲು ಸ್ತ್ರೀಯರೆ ಇಲ್ಲದಂತೆ ಪುರುಷರಿಗೇ ಉಳಿದ ಸಂತತಿಯೆಲ್ಲವೂ ಹೇಗೆ ಹುಟ್ಟಿದೆ ಎಂದು ಪ್ರಶ್ನಿಸುತ್ತಿದ್ದಾರೆ. ಇಂತಹ ಕೆಲವು ಅರ್ಥವಾಗದ ವಿಷಯಗಳನ್ನು ಹಿಡಿದುಕೊಂಡು ಭಗವದ್ಗೀತೆ ಭೂಟಕವೆಂದು, ಮನುಷ್ಯರು ಕಲ್ಪಸಿಕೊಂಡ ಗ್ರಂಥವೆಂದು ಹೇಳನವಾಗಿ ಮಾತನಾಡುತ್ತಿದ್ದಾರೆ. ಅಂತಹ ಹೇತುವಾದಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಅವರಿಗೆ ನನ್ನ ಜ್ಞಾನದ ತೀರ (ಗಟ್ಟು) ಕೂಡ ಸಿಗದಂತೆ ಮಾಡುತ್ತೇನೆಂದು ಗೀತೆಯಲ್ಲಿಯೇ ದೇವರು ಹೇಳಿದ್ದಾನೆ. ಅಂತಹವರು ದೇವರ ಜ್ಞಾನಕ್ಕೆ ದೂರವಾಗಿ ಹೋಗುವಂತೆ, ಅವರಿಗೆ ಅರ್ಥವಾಗದಂತೆ, ಇಲ್ಲಿಯವರೆಗಿರುವ ಗೀತೆಯಲ್ಲಿ ಸ್ವಲ್ಪಮಟ್ಟಿಗೆ ವಿವರವನ್ನು ರಚಯಿತರ ಮೂಲಕ ದೇವರೆ ಬರೆಸಿದ್ದಾನೆಂದುಕೊಳ್ಳೋಣ.

ಈಗ ಇಲ್ಲಿ ನಾವು ಬರೆಯುವ ವಿಷಯವನ್ನೂ ಸಹ ಎಷ್ಟೋಜನ ವಿಮರ್ಶಿಸುವವರು ಇರುತ್ತಾರೆ. ಯಾವ ಆಧಾರದಿಂದ ಹೇಳಿದ್ದೀರೆಂದು ಪ್ರಶ್ನಿಸುವವರು ಇರಬಹುದು. ಮೊದಲೆ ಹೇಳಿದ್ದೇನಲ್ಲವೇ ಕೋಡ್ ತಿಳಿಯದೆಹೋದರೆ ವಿಷಯವೆ ಅರ್ಥವಾಗುವುದಿಲ್ಲವೆಂದು. ಆದ್ದರಿಂದ ಈ ವಿಷಯ ಕೆಲವರಿಗೆ ಮಾತ್ರ ಅವಗಾಹನೆಗೆ ಬರುತ್ತದೆ. ಇಲ್ಲಿ ಬುದ್ಧಿಯನ್ನು ಉಪಯೋಗಿಸಿ ಅವಗಾಹನೆಗಾಗಿ ಪ್ರಯತ್ನಿಸಿರಿ. ಆದಿಯಲ್ಲಿ ಸೃಷ್ಟಿಗೆ ಪೂರ್ವದಲ್ಲಿ ಕೆಳಗೆ ಭೂಮಿಯಾಗಲಿ, ಮೇಲೆ ಆಕಾಶವಾಗಲಿ, ಮಧ್ಯದಲ್ಲಿ ಗಾಳಿ, ಅಗ್ನಿ, ನೀರಾಗಲಿ ಯಾವುವು ಇಲ್ಲದ ಕಾಲವದು. ಪ್ರಪಂಚವೆಂಬ ಪಂಚಭೂತಗಳಾಗಲಿ, ಜಗತ್ತು ಎನ್ನುವ ಜೀವರಾಶಿಗಳಾಗಲಿ ಇಲ್ಲದಿರುವಾಗಲೂ ಸಹ ಕಾಲವೆನ್ನುವುದು ಇದೆ. ಆ ಕಾಲಕ್ಕೆ ಗಂಟೆಗಳಾಗಲಿ, ಘಡಿಯಗಳಾಗಲಿ ಇಲ್ಲ. ಎಷ್ಟು ಮಾತ್ರ ಯಾರಿಗೂ ವ್ಯಕ್ತವಾಗದ ಆ ಸಮಯದಲ್ಲಿ ಅವ್ಯಕ್ತವಾದ, ಅಗಮ್ಯವಾದ, ಅಗೋಚರವಾದ ಒಂದೇ ಒಂದು ಪರಮಾತ್ಮ ಮಾತ್ರ ಉಳಿದಿರುತ್ತಿತ್ತು. ಅಂತಹ ಪರಮಾತ್ಮನಿಂದ ಪರಮಾತ್ಮ ಇಷ್ಟದಿಂದಲೇ ಸುಮಾರು ಪರಮಾತ್ಮದಷ್ಟು ಬಲವನ್ನು ಹೊಂದಿದ ಪ್ರಕೃತಿ ಎನ್ನುವುದು ಪರಮಾತ್ಮ ನಿಂದಲೇ ಸೃಷ್ಟಿಸಲ್ಪಟ್ಟಿದೆ. ಏನೂ ಇಲ್ಲದ, ಯಾವುದು ಅಲ್ಲದ ಶೂನ್ಯದಿಂದ ಮೊಟ್ಟಮೊದಲು ತಯಾರಾಗಿರುವುದು ಪ್ರಕೃತಿ. ಪ್ರಕೃತಿ ಹುಟ್ಟಿದ ನಂತರ ಐದು ಭಾಗಗಳಾಗಿ ವಿಭಜನೆಯಾಗಿದೆ. ಆ ಐದು ಭಾಗಗಳೇ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ. ಈ ಐದನ್ನು ಪ್ರಪಂಚ ಎನ್ನುತ್ತಿದ್ದೇವೆ.

ಈ ವಿಧವಾಗಿ ಮೊದಲು ಜೀವರಾಶಿಗಳು ಇಲ್ಲದ ಪ್ರಪಂಚ ಏರ್ಪಟ್ಟಿದೆ. ಮೊದಲೇ ಪರಮಾತ್ಮ ಪುರುಷನಾಗಿದ್ದು, ತನ್ನಿಂದ ತಯಾರುಮಾಡಲಾದ ಪ್ರಕೃತಿಯನ್ನು ಸ್ತ್ರೀ ತತ್ತ್ವವು ಹೊಂದಿರುವುದಾಗಿ ಪರಮಾತ್ಮನೇ (ದೇವರೇ) ಇಟ್ಟಿದ್ದಾನೆ. ಹೆಣ್ತನ(ಸ್ತ್ರೀತತ್ವ) ಇರುವ ಪ್ರಕೃತಿಯನ್ನು ಐದು ಭಾಗಗಳಾಗಿ ಮಾರ್ಪಡಿಸಿದವನು ಪರಮಾತ್ಮನೇ. ಪಂಚದಿಂದ ಏರ್ಪಟ್ಟಿರುವುದನ್ನು ಪ್ರಪಂಚ ಎನ್ನಲಾಗಿದೆ. ಯಾವ ಜೀವರಾಶಿ ಇಲ್ಲದ ಆ ಪ್ರಪಂಚದಲ್ಲಿ ಮೊಟ್ಟಮೊದಲು ಪರಮಾತ್ಮನಿಂದ ಸ್ವಲ್ಪಭಾಗ ವಿಭಜನೆಯಾಗಿ ಬಂದಿದೆ, ಅದೇ ಆತ್ಮ ಎಂದು ಕರೆಯಲಾಗುತ್ತಿದೆ. ಮೊದಲು ಪ್ರಕೃತಿ ಒಂದಾಗಿ ತಯಾರಾಗಿ ಐದಾಗಿ ವಿಭಜನೆಯಾದಂತೆ, ಮೊದಲು ಪರಮಾತ್ಮನಿಂದ ಬಂದಿರುವ ಆತ್ಮ ಏಳು ಭಾಗಗಳಾಗಿ ವಿಭಜನೆಯಾಗಿದೆ. ಆತ್ಮವನ್ನು ಸುಖದುಃಖಗಳಿಗೆ ಅತೀತವಾದ ಆನಂದ ಎನ್ನುತ್ತಿದ್ದೇವೆ. ಆದ್ದರಿಂದ ಬ್ರಹ್ಮಾನಂದವೆಂದು, ಮಹರ್ಷಿ ಎಂದೂ ಆತ್ಮಕ್ಕೆ ಹೆಸರು ಇದೆ. ಮೊದಲು ಆತ್ಮ ಪರಮಾತ್ಮನಿಂದ ಹುಟ್ಟಿಬಂದ ನಂತರ ಏಳು ಭಾಗಗಳಾಗಿ ಪರಮಾತ್ಮನಿಂದಲೇ ವಿಭಜಿಸಲ್ಪಟ್ಟಿದೆ. ವಿಭಜಿಸಲಾದ ಆತ್ಮವೊಂದರ ಏಳು ಭಾಗಗಳನ್ನು ಮಹರ್ಷಯ ಸಪ್ತ ಎಂದು ಹೇಳಿದ್ದಾರೆ. **ಮಹರ್ಷಯ ಸಪ್ತ ಎಂದರೆ ಆತ್ಮದ ಏಳು ಭಾಗಗಳೆಂದು ಅರ್ಥ. ಈ ವಿಧವಾಗಿ ಮೊದಲು ಪರಮಾತ್ಮನಿಂದ ಏರ್ಪಟ್ಟಿರುವವೇ ಸಪ್ತ ಮಹರ್ಷಿಗಳು, ಇಲ್ಲಿಯವರೆಗೂ ಯಾರಿಗೂ ಅರ್ಥವಾಗದ ವಿಷಯ ಇದು.** ಸಪ್ತ ಮಹರ್ಷಿಗಳಾದ ಆತ್ಮ ಭಾಗಗಳು ಸಪ್ತಮಹರ್ಷಿಗಳೆಂಬ ಮನುಷ್ಯರೆಂದು ನಮಗೆ ಅರ್ಥವಾಗಿದೆ. ನಮಗೆ ಹೇಗೆ ಅರ್ಥವಾದರು ಮೊದಲು ತಯಾರಾಗಿರುವುದು ಸಪ್ತಮಹರ್ಷಿಗಳು ಅಲ್ಲ, ಸಪ್ತಮಹರ್ಷಗಳೆಂದು ತಿಳಿಯಬೇಕು.

ಪರಮಾತ್ಮ ಮೊದಲು ತನಗೆ ಸಮಾನವಾಗಿ ಇರುವಂತೆ ಪ್ರಕೃತಿಯನ್ನು ತಯಾರು ಮಾಡಿದ್ದಾನೆಂದು ತಿಳಿದುಕೊಂಡಿದ್ದೇವೆ. ಪ್ರಕೃತಿ ಐದು ಭಾಗಗಳಾಗಿ ತಯಾರಾಗಿ ಪ್ರಪಂಚವು ಏರ್ಪಟ್ಟ ನಂತರ ಆತ್ಮ ಎನ್ನುವುದು ಏರ್ಪಟ್ಟಿದೆ. ಪರಮಾತ್ಮನಿಗೆ ಜೊತೆಯಾಗಿ ಪ್ರಕೃತಿ ಇರುವಾಗ, ಆತ್ಮಕ್ಕೆ ಜೊತೆಯಾಗಿ ಮತ್ತೊಂದು ಪ್ರಕೃತಿ ಏರ್ಪಟ್ಟಿದೆ. ಪರಮಾತ್ಮನ ಅಂಶ ಆತ್ಮವಾದರೆ, ಪ್ರಕೃತಿಯ ಅಂಶ ಮತ್ತೊಂದು ಪ್ರಕೃತಿಯಾಗಿ ವಿಭಜಿಸಲ್ಪಟ್ಟಿದೆ. ಪರಮಾತ್ಮನಿಗೆ ಜೊತೆಯಾಗಿ ಏರ್ಪಟ್ಟಿರುವ ಮೊದಲ ಪ್ರಕೃತಿಗೆ ಬದಲಾವಣೆ ಹೊಂದದ ಪ್ರಕೃತಿ ಎಂದು ಹೆಸರು ಇದೆ. ಅದನ್ನೇ ಅಚರ ಪ್ರಕೃತಿ ಎನ್ನುತ್ತಿದ್ದೇವೆ. ಆತ್ಮಕ್ಕೆ ಜೊತೆಯಾಗಿ ಏರ್ಪಟ್ಟಿರುವ ಎರಡನೆ ಪ್ರಕೃತಿಗೆ ಬದಲಾವಣೆ ಹೊಂದುವ ಪ್ರಕೃತಿ ಎಂದು ಹೆಸರಿದೆ. ಅದನ್ನೇ ಚರ

ಪ್ರಕೃತಿ ಎನ್ನುತ್ತೇವೆ. ಈ ವಿಧವಾಗಿ ಪರಮಾತ್ಮ, ಆತ್ಮ ಎನ್ನುವ ಎರಡು ಆತ್ಮಗಳಾಗಿ, ಅಚರ ಪ್ರಕೃತಿ, ಚರ ಪ್ರಕೃತಿ ಎಂದು ಎರಡು ಪ್ರಕೃತಿಗಳು ತಯಾರಾಗಿವೆ.

ಪರಮಾತ್ಮನಿಂದ ತಯಾರಾಗಿ ಬಂದಿರುವ ಆತ್ಮ ಸಪ್ತ ಮಹರ್ಷಗಳಾಗಿ, ಎಂದರೆ ಏಳು ಆತ್ಮ ಭಾಗಗಳಾಗಿ ವಿಭಜಿಸಲ್ಪಟ್ಟಿದೆಯೆಂದು ಹೇಳಿಕೊಂಡಿದ್ದೇವೆ ಅಲ್ಲವೆ! ಪರಮಾತ್ಮ ಸಪ್ತ ಮಹರ್ಷಗಳನ್ನು ತಯಾರು ಮಾಡಿದ ನಂತರ ಚರ ಪ್ರಕೃತಿಯನ್ನು ಆಧಾರ ಮಾಡಿಕೊಂಡು ಮೊದಲು ಮನಸ್ಸನ್ನು ನಂತರ ಅಹಮ್‌ನ್ನು, ಚಿತ್ತವನ್ನು, ಬುದ್ಧಿಯನ್ನು ಕ್ರಮವಾಗಿ ತಯಾರು ಮಾಡಿದ್ದಾನೆ. ಈ ನಾಲ್ಕರಲ್ಲಿ ಮೊದಲು ತಯಾರಾದ ಮನಸ್ಸು ವಿನಹಃ ಅಹಮ್, ಚಿತ್ತ, ಬುದ್ಧಿ ಮೂರು ಸ್ವಲ್ಪ ಆತ್ಮ ಭಾಗವನ್ನು ಸುತ್ತಿಕೊಂಡು ಚೆಂಡಿನಂತೆ ಏರ್ಪಟ್ಟಿವೆ. ಮೂರು ಪೊರೆಗಳ ಮಧ್ಯದಲ್ಲಿ ಸ್ವಲ್ಪ ಆತ್ಮ ಭಾಗ ಸಿಲುಕಿಕೊಂಡಿರುವಾಗ ಅದೇ ಜೀವಾತ್ಮವಾಗಿದೆ. ಬುದ್ಧಿ, ಚಿತ್ತ, ಅಹಮ್‌ನ ಮಧ್ಯದಲ್ಲಿ ನಿಂತುಹೋದ ಆತ್ಮವೊಂದರ ಅಂಶವನ್ನು ಜೀವಾತ್ಮ ಎನ್ನುತ್ತಿದ್ದೇವೆ. ಈ ವಿಧವಾಗಿ ಜೀವಾತ್ಮ ತಯಾರಾದ ತಕ್ಷಣ ಪ್ರಕೃತಿ ಎರಡನೆ ಭಾಗದಿಂದ ಶರೀರವೆಲ್ಲ ಏರ್ಪಟ್ಟಿದೆ. ಹೀಗೆ ಏರ್ಪಟ್ಟ ಶರೀರವೆಲ್ಲ ಮನಸ್ಸು ವ್ಯಾಪಿಸಿದೆ. ಈ ವಿಧವಾಗಿ ಒಬ್ಬ ಮನುಷ್ಯನ ನಮೂನೆ ಮೊದಲು ತಯಾರಾಗಿದೆ. ಆತ್ಮದ ಏಳು ಭಾಗಗಳನ್ನು ದೇವರು **"ಮಹರ್ಷಯ ಸಪ್ತ"** ಎಂದಾಗ ಮಹರ್ಷಿಗಳು ಏಳು ಜನರೆಂಬ ತಪ್ಪು ಭಾವನೆ ಮನುಷ್ಯರಿಗೆ ಬಂದಂತೆ, **"ಚತ್ವಾರೋ ಮನವ"** ಎನ್ನುತ್ತಲೇ ನಾಲ್ವರು ಮನುಜರು ಎಂದು ಅರ್ಥ ಮಾಡಿಕೊಂಡಿದ್ದಾರೆ. ಇದು ಪೂರ್ತಿ ತಪ್ಪು ಭಾವ. ಮೊದಲು ಸಪ್ತ ಮಹರ್ಷಿಗಳನ್ನಾಗಲಿ, ನಾಲ್ವರು ಮನುಜರನ್ನಾಗಲಿ ದೇವರು ತಯಾರು ಮಾಡಲಿಲ್ಲ. ಪ್ರಪಂಚದೊಂದಿಗೆ ಏಳು ಆತ್ಮ ಭಾಗಗಳನ್ನು, ಅವುಗಳಿಗೆ ಆಧಾರವಾಗಿ ನಾಲ್ಕು ಪ್ರಕೃತಿ ಭಾಗಗಳನ್ನು ತಯಾರುಮಾಡಿದ್ದಾನೆ. ಇವುಗಳನ್ನೇ ಮಹರ್ಷಿಗಳಾಗಿ, ಮನುಜರನ್ನಾಗಿ ನಾವು ತಪ್ಪು ಅರ್ಥಮಾಡಿಕೊಳ್ಳುವುದರಿಂದ ಸೃಷ್ಟಿ ವಿಧಾನ ಅರ್ಥವಾಗದಂತೆಹೋಗಿ ರಹಸ್ಯವಾಗಿ ಉಳಿದು ಹೋಗಿದೆ. ಅದೇ ಸೃಷ್ಠಿ ರಹಸ್ಯ.

ಮೊದಲು ದೇವರು ಮನುಷ್ಯನ ನಮೂನೆಯನ್ನು ಪ್ರಕೃತಿಯನ್ನು, ಆತ್ಮವನ್ನು ಉಪಯೋಗಿಸಿ ತಯಾರುಮಾಡಿದ್ದಾನೆ. ನಂತರ ಅದರ ಪ್ರಕಾರ ಉಳಿದ ಜೀವರಾಶಿ ಗಳೆಲ್ಲವನ್ನೂ ಸೃಷ್ಟಿಸಿದ್ದಾನೆ. ಮೊದಲು 108 ಆತ್ಮಗಳನ್ನು ಪ್ರಪಂಚದೊಳಗೆ ದೇವರು ಕಳುಹಿಸಿ 108 ಜನ ಮನುಷ್ಯರನ್ನು ತಯಾರಾಗುವಂತೆ ಮಾಡಿದ್ದಾನೆ. ಆ 108 ಜನರಲ್ಲಿ 54 ಜನ ಪುರುಷರಾಗಿ, 54 ಜನರನ್ನು ಸ್ತ್ರೀಯರಾಗಿ ತಯಾರಾಗುವಂತೆ ಮಾಡಿದ್ದಾನೆ.

54 ಜನ ಪುರುಷರಲ್ಲಿ 27 ಜನರನ್ನು ಒಳ್ಳೆಯ ಗುಣಗಳು ಇರುವವರಾಗಿ, 27 ಜನರನ್ನು ಕೆಟ್ಟ ಗುಣಗಳು ಇರುವವರಾಗಿ ಸೃಷ್ಟಿಸಿದ್ದಾನೆ. ಅದೇ ವಿಧವಾಗಿ ಸ್ತ್ರೀಯರಲ್ಲಿಯೂ ಸಹ 27 ಜನ ಒಳ್ಳೆಯ ಗುಣಗಳು ಇರುವವರಾಗಿ, 27 ಜನ ಕೆಟ್ಟ ಗುಣಗಳು ಇರುವವರಾಗಿ ತಯಾರು ಮಾಡಿದ್ದಾನೆ. ಈ ಲೆಕ್ಕವನ್ನು ಮೂರರಷ್ಟು ಮಾಡಿ 108 ಸಾತ್ತ್ವಿಕರಾಗಿ, 108 ರಾಜಸರಾಗಿ, 108 ಮಂದಿ ತಾಮಸರಾಗಿ ಒಟ್ಟು 324 ಮಂದಿ ಮನುಷ್ಯ ಜಾತಿಯನ್ನು ತಯಾರು ಮಾಡಿದ್ದಾನೆ. ಅದರಲ್ಲಿ 162 ಜನ ಸ್ತ್ರೀಯರಾಗಿದ್ದು 162 ಜನ ಪುರುಷರೆಂದು ಅವರಲ್ಲಿ 81 ಜನ ಒಳ್ಳೆಯ ಸ್ತ್ರೀಯರು, 81 ಜನ ಕೆಟ್ಟ ಸ್ತ್ರೀಯರೆಂದು ತಿಳಿದುಕೊಳ್ಳಬೇಕು. ಹಾಗೆ ಪುರುಷರಲ್ಲಿಯೂ ಸಹ ಒಳ್ಳೆಯ ಕೆಟ್ಟವರು ಇದ್ದಾರೆಂದು ತಿಳಿದುಕೊಳ್ಳಬೇಕು. ಇದು ಒಂದು ಮಾನವ ಜಾತಿ ಗಣಿತವಾಗಿದ್ದು ಇಂತಹ ಉಳಿದ 323 ಜಾತಿಗಳನ್ನು ಮೊದಲು ದೇವರು ತಯಾರುಮಾಡಿದ್ದಾನೆ. ಪ್ರತಿ ಜಾತಿಯಲ್ಲಿಯೂ ಅರ್ಧ ಸಂಖ್ಯೆ ಸ್ತ್ರೀ, ಅರ್ಧಸಂಖ್ಯೆ ಪುರುಷರನ್ನಾಗಿ ಮಾಡಿದ್ದಾನೆ. ಮನುಷ್ಯರಲ್ಲದೆ ಉಳಿದ 323 ಜಾತಿಗಳಲ್ಲಿ ಒಂದೊಂದು ಜಾತಿಗೂ 324 ಸಂಖ್ಯೆ ಪ್ರಕಾರ ಒಟ್ಟು 1,04,652 ಜೀವರಾಶಿಗಳು ತಯಾರಾಗಿವೆ. ಈ ಲೆಕ್ಕಪ್ರಕಾರ ಆದಿಯಲ್ಲಿ ಹುಟ್ಟಿರುವ ಒಟ್ಟು ಜೀವರಾಶಿಗಳ ಸಂಖ್ಯೆ 1,04,976 ಎಂದು ತಿಳಿಯುತ್ತಿದೆ. ಈ ಸಂಖ್ಯೆಗಳನ್ನೆಲ್ಲ ಕೂಡಿಸಿದರೆ ಅಂತ್ಯದಲ್ಲಿ 7 ಸಂಖ್ಯೆ ಉಳಿಯುತ್ತದೆ. ಇದು ಮೊದಲು ತಯಾರಾದ ಆತ್ಮಕ್ಕೆ ಗುರುತೆಂದು ತಿಳಿಯಬೇಕು. ನಂತರ ಯಾವ ಜಾತಿಗೆ ಆ ಜಾತಿ ಸಂತತಿಯನ್ನು ಬೆಳೆಸಿಕೊಳ್ಳುವಂತೆ ದೇವರು ಮಾಡಿದ್ದಾನೆ. ಸೃಷ್ಟಿ ಆದಿಯಲ್ಲಿ 162 ಜನ ಪುರುಷರಿಂದ, 162 ಜನ ಸ್ತ್ರಿಯರಿಂದ ಪ್ರಾರಂಭವಾದ ಮಾನವಜಾತಿ ಈ ದಿನ ನೂರಾರುಕೋಟಿಗೆ ಸೇರಿದೆ. ಹಾಗೇ ಎಲ್ಲಾ ಜೀವ ಜಾತಿಗಳು ಬೆಳೆದಿವೆ. ಮೊದಲು 324 ಜಾತಿಗಳಿಂದ ಪ್ರಾರಂಭವಾದ ಜಗತ್ತು ಈ ದಿನ ವರ್ಣಸಂಕರದಿಂದ ಮತ್ತೆ ಕೆಲವು ಜಾತಿಗಳಾಗಿ ಬೆಳೆದಿದೆಯೇನೋ ಹೇಳಲಾರೆವು. ಕೆಲವರು 84 ಲಕ್ಷಗಳ ಜಾತಿಗಳು ಇವೆಯೆಂದು ಹೇಳುತ್ತಿದ್ದಾರೆ.

ಆದರೆ 84 ಲಕ್ಷಗಳ ಜಾತಿಗಳು ಶಾಸ್ತ್ರಬದ್ಧ ಅಲ್ಲವೇನೋ ಅನಿಸುತ್ತದೆ. ಮೊದಲು ತಯಾರಾದ ಜೀವರಾಶಿಗಳ ಜಾತಿಗಳು 324 ಆಗಿದ್ದು ಅದರಲ್ಲಿ 108 ಅಂಡಜಗಳಾಗಿ, 108 ಪಿಂಡಜಗಳಾಗಿ, 108 ಉದ್ಭಿಜಗಳಾಗಿ ತಯಾರು ಮಾಡಲಾಗಿದೆ. ಅದರಲ್ಲಿ ಪಿಂಡಜಗಳಾದ ಮಾನವರು ನಾಲ್ಕು ಜಾತಿಗಳಾಗಿದ್ದಾರೆ. ಮಾನವರ ನಾಲ್ಕು ಜಾತಿಗಳು ಹೋಗಿ 104 ಜಾತಿಗಳು ಪಿಂಡದಿಂದ ಹುಟ್ಟುವವು. 108 ಜಾತಿಗಳು ಅಂಡದಿಂದ

ಹುಟ್ಟುವವು, 108 ಜಾತಿಗಳು ಭೂಮಿಯಿಂದ ಹುಟ್ಟುವವು ಇವೆ. ಪಂಚಭೂತಗಳು ಸಹ 108 ಪದಾರ್ಥಗಳಾಗಿ ತಯಾರು ಮಾಡಲಾಗಿ, ಅವುಗಳಲ್ಲಿ ಹುಟ್ಟುವ ಮೂರು ವಿಧಗಳ ಜಾತಿಗಳು 108 ವಿಧಗಳಾಗಿಯೇ ಇವೆ. ಅಷ್ಟೇ ಅಲ್ಲದೆ ಮೇಲಕ್ಕೆ ಬೆಳೆಯುವವು, ಕೆಳಕ್ಕೆ ಬೆಳೆಯುವವು. ಅಡ್ಡವಾಗಿ ಬೆಳೆಯುವವು ಎಂದು ಮೂರು ವಿಧಗಳಾಗಿ 324 ಜಾತಿಗಳು ತಯಾರು ಮಾಡಲಾಗಿದೆ, 324 ಜಾತಿಗಳಲ್ಲಿ ಕೆಳಕ್ಕೆ ಬೆಳೆಯುವವು ಮಾನವಜಾತಿಗಳು ಕೇವಲ ನಾಲ್ಕು ವಿಧಗಳಾಗಿದ್ದು, 160 ವಿಧಗಳು ಮೇಲಕ್ಕೆ ಬೆಳೆಯುವ ಗಿಡದ ಜಾತಿಗಳು ಆಗಿದ್ದು, 160 ವಿಧಗಳು ಅಡ್ಡಲಾಗಿ ಬೆಳೆಯುವ ಕ್ರಿಮಿ, ಕೀಟಕ, ಜಂತು, ಮತ್ಸ್ಯ ಜಾತಿಗಳಾಗಿವೆ. ಜಾತಿಗಳ ಸಂಖ್ಯೆ ಬ್ರಹ್ಮವಿದ್ಯಾ ಶಾಸ್ತ್ರಬದ್ಧವಾಗಿ ಒಟ್ಟು 324 ಜಾತಿಗಳೆ ಆಗಿದ್ದು, ಒಂದೊಂದು ಜಾತಿ ಎಷ್ಟು ಸಂಖ್ಯೆಯಲ್ಲಿರುವುದು ಹೇಳಲಾರೆವು. ಜೀವರಾಶಿಗಳ ಸಂಖ್ಯೆ ಬದಲಾಗುವ ಪ್ರಕೃತಿಗೆ ಅಥವಾ ಪದಾರ್ಥಕ್ಕೆ ಸಂಬಂಧಿಸಿರುತ್ತದೆ. ಆದ್ದರಿಂದ ಭೌತಿಕ ಶಾಸ್ತ್ರಜ್ಞರು ಆ ಸಂಖ್ಯೆಯನ್ನು ಹೇಳಬಹುದು. ಜೀವರಾಶಿಗಳ ಜಾತಿಗಳನ್ನು ಹೇಳುವುದು ಬ್ರಹ್ಮಜ್ಞಾನ. ಜೀವ ರಾಶಿಗಳ ಸಂಖ್ಯೆಯನ್ನು ಹೇಳುವುದು ಪ್ರಪಂಚ ಜ್ಞಾನ ಎಂದು ತಿಳಿದುಕೊಳ್ಳಬೇಕು.

ಈ ಶ್ಲೋಕದಲ್ಲಿ **"ಮಹರ್ಷಯ ಸಪ್ತ"** ಎನ್ನುವ ಪದವನ್ನು ಏಳು ಆತ್ಮ ಭಾಗಗಳಾಗಿ, **"ಚತ್ವಾರೋ ಮನವ"** ಎನ್ನುವ ಪದವನ್ನು ಮನಸ್ಸು ಮೊದಲಾದವು ನಾಲ್ಕು ಎಂದು ಅರ್ಥಮಾಡಿಕೊಳ್ಳಬೇಕು. ಹಾಗೆ ಅಲ್ಲದೆ ಸಪ್ತ ಋಷಿಗಳು ಎಂದಾಗಲಿ, ನಾಲ್ವರು ಮನುಜರು ಎಂದಾಗಲಿ ಅರ್ಥಮಾಡಿಕೊಂಡರೆ ಶ್ಲೋಕದಲ್ಲಿನ ನಿಜ ಭಾವವು ಅರ್ಥವಾಗದಂತೆ ಹೋಗಿ ಅನೇಕ ಪ್ರಶ್ನೆಗಳು ಉದ್ಭವಿಸುತ್ತವೆ. ಅವುಗಳಿಗೆ ಉತ್ತರ ಸಿಗುವುದಿಲ್ಲ. ಈ ಶ್ಲೋಕದಲ್ಲಿ ಮೊದಲು ಏಳು, ನಂತರ ನಾಲ್ಕು ಹುಟ್ಟಿದ ನಂತರ ಎಲ್ಲಾ ಜೀವರಾಶಿಗಳು ಹುಟ್ಟಿವೆಯೆಂದು ಗ್ರಹಿಸಬೇಕು. ಮೊದಲು ಜೀವರಾಶಿಗಳಿಲ್ಲದ ಪಂಚಭೂತಗಳನ್ನು ಪ್ರಪಂಚ ಎಂದಿದ್ದೇವೆ. ನಂತರ ಹುಟ್ಟಿರುವ ಜೀವರಾಶಿಗಳೆಲ್ಲವನ್ನೂ ಜಗತ್ತು ಎನ್ನುತ್ತಿದ್ದೇವೆ. ಪ್ರಪಂಚವನ್ನು ಜಗತ್ತನ್ನು ಸೇರಿಸಿ ವಿಶ್ವವೆನ್ನುತ್ತಿದ್ದೇವೆ. ಪ್ರಪಂಚ ಬೇರೆ, ಜಗತ್ತು ಬೇರೆ ಎಂದು ತಿಳಿಯಬೇಕು. ಎರಡು ಸೇರಿರುವುದು ವಿಶ್ವವೆಂದು ತಿಳಿಯಬೇಕು. ನಂತರ ಅಧ್ಯಾಯದಲ್ಲಿ ಪ್ರಪಂಚ ಜಗತ್ತು ಸೇರಿ ವಿಶ್ವರೂಪವಾದ ದೇವರನ್ನು ಕುರಿತು ತಿಳಿದುಕೊಳ್ಳೋಣ.

**(9) ಶ್ಲೋ॥ 7 : ಏತಾಂ ವಿಭೂತಿಂ ಯೋಗಂಚ ಮಮಯೋ ವೇತ್ತಿ ತತ್ತ್ವತಃ ।**
**ಸೋಽವಿಕಂಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ ॥**

**(ಪರಮಾತ್ಮ)**

**ಭಾವಾರ್ಥ :** ನನ್ನ ಮಹಿಮೆಯನ್ನು, ಯೋಗವನ್ನು, ಆತ್ಮವನ್ನು ಯಾರು ತಿಳಿಯುತ್ತಾನೋ, ಅವನು ಚಲನೆಯಿಲ್ಲದ ನನ್ನಲ್ಲಿ ಕೂಡಿಕೊಳ್ಳುತ್ತಾನೆ. ಇದರಲ್ಲಿ ಅನುಮಾನವಿಲ್ಲ.

**ವಿವರ :** ಪರಮಾತ್ಮನ ದೊಡ್ಡತನವೇನೋ, ಆತನ ಮಹಿಮೆಯೇನೋ, ಆತನನ್ನು ಹೊಂದುವುದಕ್ಕಿರುವ ಯೋಗಗಳು ಯಾವುವೋ, ಆತನನ್ನು ಹೊಂದುವುದಕ್ಕೆ ಮಾರ್ಗವಾಗಿ, ಆಧಾರವಾಗಿರುವ ಆತ್ಮ ಏನೋ ತಿಳಿದುಕೊಂಡವನು, ಚಲನೆಯಿಲ್ಲದ ಬದಲಾವಣೆಯಿಲ್ಲದ ಪರಮಾತ್ಮನನ್ನು ಹೊಂದುತ್ತಾನೆ. ಜ್ಞಾನ ತಿಳಿದವನು, ಆತ್ಮವನ್ನು ತಿಳಿದವನು, ಪರಮಾತ್ಮ ವಿಶೇಷವನ್ನು ತಿಳಿದವನು ತಪ್ಪದೇ ಪರಮಾತ್ಮನನ್ನು ಹೊಂದುತ್ತಾನೆ. ಇದರಲ್ಲಿ ಯಾವ ಅನುಮಾನವಿಲ್ಲ.

**(9) ಶ್ಲೋ॥ 8 :** **ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ ।**
**ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವ ಸಮನ್ವಿತಾಃ ॥**
**(ಪರಮಾತ್ಮ)**

**ಭಾವಾರ್ಥ** : ನನ್ನಿಂದಲೇ ಸರ್ವವು ಹುಟ್ಟುತ್ತಿವೆ. ನನ್ನಿಂದಲೇ ಸರ್ವವು ನಡೆಯುತ್ತಿವೆ. ಈ ವಿಷಯವನ್ನು ತಿಳಿದ ಜ್ಞಾನಿಗಳು, ಸಮನ್ವಿತ ಭಾವದಿಂದ ನನ್ನನ್ನು ಆರಾಧಿಸುತ್ತಾರೆ.

**ವಿವರ :** ಸರ್ವ ಪ್ರಪಂಚ ಪರಮಾತ್ಮನಿಂದಲೇ ಹುಟ್ಟಿದೆ ಎಂದು, ಈ ಸರ್ವ ಜಗತ್ತು ಪರಮಾತ್ಮನಿಂದಲೇ ನಡೆಯುತ್ತಿದೆ ಎಂದು, ಪ್ರಪಂಚದಲ್ಲಿ ನಡೆಯುವ ಪ್ರತಿಯೊಂದಕ್ಕೂ ಪರಮಾತ್ಮನೇ ಮೂಲಕಾರಣವೆಂದು ತಿಳಿದ ಜ್ಞಾನಿಗಳು ಸಮತ್ವ ಉಂಟಾಗುವ ಸ್ಥಿತಿಯಾದ ಯೋಗದಿಂದಲೇ ಪರಮಾತ್ಮನನ್ನು ಆರಾಧಿಸುತ್ತಾರೆ.

**(9) ಶ್ಲೋ॥ 9 :** **ಮಚ್ಚಿತ್ತಾ ಮದ್ಗತ ಪ್ರಾಣಾ ಬೋಧಯನ್ತಃ ಪರಸ್ಪರಮ್ ।**
**ಕಥಯ ನ್ತಶ್ಚ ಮಾಂ ನಿತ್ಯಂ ತುಷ್ಯನ್ತಿ ಚ ರಮನ್ತಿ ಚ ॥**
**(ಪರಮಾತ್ಮ)**

**ಭಾವಾರ್ಥ** : ನನ್ನ ಭಕ್ತರು ಚಿತ್ತವನ್ನು, ಪ್ರಾಣವನ್ನು ನನ್ನಲಿಟ್ಟು, ನಿತ್ಯವು ನನ್ನನ್ನು ಕುರಿತ ವಿಷಯಗಳನ್ನು ಒಬ್ಬರಿಗೊಬ್ಬರು ಬೋಧಿಸಿಕೊಳ್ಳುತ್ತಾ ತೃಪ್ತರಾಗಿ ಆನಂದವಾಗಿರುತ್ತಾರೆ.

**ವಿವರ** : ಪರಮಾತ್ಮನ ಮಹತ್ವವನ್ನು ತಿಳಿದ ಭಕ್ತರು ಪ್ರಪಂಚ ವಿಷಯಗಳಲ್ಲಿ ಇಲ್ಲದ ಸಂತೋಷವನ್ನು ಪರಮಾತ್ಮ ವಿಷಯ ಮಾತನಾಡುವುದರಲ್ಲಿ ಪಡೆಯುತ್ತಿದ್ದಾರೆ. ಎಷ್ಟು

ದೊಡ್ಡ ಪ್ರಪಂಚ ವಿಷಯಗಳಿದ್ದರೂ ಅವುಗಳಿಗೆ ಬೆಲೆಕೊಡದೆ ಪರಮಾತ್ಮ ವಿಷಯಗಳಲ್ಲಿಯೇ ಹೆಚ್ಚಾಗಿ ಧ್ಯಾಸವಿಟ್ಟು ಮಾತನಾಡಿಕೊಳ್ಳುತ್ತಾರೆ. ಪರಮಾತ್ಮ ಜ್ಞಾನದ ವಿಷಯಗಳು ಮಾತನಾಡುವ ಸಮಯದಲ್ಲಿರುವ ತೃಪ್ತಿ, ಆನಂದ, ಉಳಿದ ವಿಷಯಗಳಲ್ಲಿ ಅವರಿಗೆ ಇರುವುದಿಲ್ಲ. ಆದ್ದರಿಂದ ಅವರ ಧ್ಯಾಸಗಳೆಲ್ಲವನ್ನು ಪರಮಾತ್ಮ ವಿಷಯಗಳಲ್ಲಿ ಲಗ್ನಮಾಡಿ, ಒಬ್ಬರಿಗೊಬ್ಬರು ಆ ವಿಷಯಗಳನ್ನು ಕುರಿತು ಹೇಳಿಕೊಳ್ಳುತ್ತಾ ಆನಂದಿಸುತ್ತಾರೆ.

**(9) ಶ್ಲೋ॥ 10 : ತೇಷಾಂ ಸತತ ಯುಕ್ತಾನಾಂ ಭಜತಾಂಪ್ರೀತಿ ಪೂರ್ವಕಮ್ ।**
**ದದಾಮಿ ಬುದ್ಧಿ ಯೋಗಂ ತಂ ಯೇನ ಮಾ ಮುಪಯಾನ್ತಿತೇ ॥**
**(ಪರಮಾತ್ಮ)**

**ಭಾವಾರ್ಥ** : ಯಾರಾದರೆ ಪ್ರೀತಿಕರವಾಗಿ ನನ್ನನ್ನೇ ಆರಾಧಿಸುತ್ತಾ ಯಾವಾಗಲೂ ನನ್ನೊಂದಿಗೆ ಕೂಡಿಕೊಂಡು ಇರಬೇಕೆಂದು ತಿಳಿಯುತ್ತಾನೋ, ಅಂತಹವನಿಗೆ ಬುದ್ಧಿಯೋಗವನ್ನು ನಾನು ಉಂಟುಮಾಡುತ್ತಿದ್ದೇನೆ. ಅದರಿಂದ ನನ್ನನ್ನು ತಿಳಿಯುತ್ತಾರೆ, ಹೊಂದುತ್ತಾರೆ.

**ವಿವರ** : ಪರಮಾತ್ಮ ವಿಷಯಗಳೇ ಆನಂದದಾಯಕವಾಗಿ ಇರುವವನು ಪ್ರೀತಿ ಪೂರ್ವಕವಾಗಿ ಯಾವಾಗಲೂ ಪರಮಾತ್ಮನೊಂದಿಗೇ ಸಂಬಂಧ ಇಟ್ಟುಕೊಳ್ಳಬೇಕೆಂದು ತಿಳಿಯುತ್ತಿರುತ್ತಾನೆ. ಅಂತಹವನಿಗೆ ಪರಮಾತ್ಮ ಬುದ್ಧಿಯೋಗವನ್ನು ಉಂಟು ಮಾಡುತ್ತಾನೆ. ಆ ಬುದ್ಧಿಯೋಗದಿಂದ ಪರಮಾತ್ಮನನ್ನು ಸುಲಭವಾಗಿ ತಿಳಿಯಲಾಗುತ್ತದೆ. ಇಲ್ಲಿ ಬುದ್ಧಿಯೋಗವೆಂದು ಹೇಳಲಾಗಿದೆ. ಬುದ್ಧಿಯೋಗವೆಂದರೆ ಬ್ರಹ್ಮಯೋಗವೆಂದು ಕೆಲವರು, ಕರ್ಮಯೋಗವೆಂದು ಕೆಲವರು ಹೇಳಿಕೊಳ್ಳುತ್ತಿದ್ದಾರೆ. ಅದರ ವಿವರ ಏನೆಂದರೆ! ಬ್ರಹ್ಮಯೋಗ ಆಚರಿಸುವ ಸಮಯದಲ್ಲಿ ಮನಸ್ಸು ಇತರೆ ಆಲೋಚನೆಯ ಮೇಲೆ ಹೋದಾಗ ಬುದ್ಧಿಯೆ ಮನಸ್ಸನ್ನು ಎಚ್ಚರಿಸಿ ಸಕ್ರಮ ಮಾರ್ಗದಲ್ಲಿ ಇರುವಂತೆ ಮನಸ್ಸನ್ನು ಆದೇಶಿಸುತ್ತದೆ. ಅದೇ ವಿಧವಾಗಿ ಕರ್ಮಯೋಗವನ್ನು ಆಚರಿಸುವಾಗ ಅಹಂಕಾರ ಕೆಲಸ ಮಾಡಿದರು, ಬುದ್ಧಿಯೆ ಗ್ರಹಿಸಿ ಅಹಂಕಾರವನ್ನು ನಿಯಂತ್ರಿಸುವಂತೆ ಆದೇಶಿಸುತ್ತದೆ. ಎರಡು ಯೋಗಗಳಲ್ಲಿ ಬುದ್ಧಿಯೆ ಮನಸ್ಸಿಗು, ಅಹಮ್‌ಗು ಹಿತವನ್ನು ಹೇಳುವುದರಿಂದ ಎರಡನ್ನು ಬುದ್ಧಿಯೋಗವೆನ್ನುತ್ತಿದ್ದೇವೆ. ಪರಮಾತ್ಮ ಬುದ್ಧಿಯೋಗವನ್ನು ಪ್ರಸಾದಿಸಿದ್ದಾನೆಂದರೆ ಎರಡು ಯೋಗಗಳಲ್ಲಿ ಯಾವುದಾದರು ಒಂದು ಆಗಬಹುದು. ಅಥವಾ ಎರಡು ಯೋಗಗಳಾದರು ಆಗಬಹುದು.

**(9) ಶ್ಲೋ॥ 11 : ತೇಷಾ ಮೇವಾನುಕಮ್ಪಾರ್ಥ! ಮಹ ಮಜ್ಞಾನಜಂ ತಮಃ ।**
**ನಾಶಯಾ ಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥**
**(ಪರಮಾತ್ಮ)**

**ಭಾವಾರ್ಥ** : ಅಂತಹವರನ್ನು ಉದ್ಧರಿಸುವುದಕ್ಕೋಸ್ಕರ ಅವರಲ್ಲಿ ಆತ್ಮವಾಗಿರುವ ನಾನು ಜ್ಞಾನದೀಪವನ್ನು ಬೆಳಗಿಸಿ ಅಜ್ಞಾನವೆಂಬ ಕತ್ತಲನ್ನು ಇಲ್ಲದಂತೆ ಮಾಡುತ್ತೇನೆ.

**ವಿವರ** : ತನ್ನನ್ನು ಇಷ್ಟಪೂರ್ವಕವಾಗಿ ಸೇರಬೇಕೆಂದು ಕೋರಿಕೆ ಇರುವವರಿಗೆ, ಯೋಗ ಲಭ್ಯವಾಗುವಂತೆ ಮಾಡಿದ ಪರಮಾತ್ಮ, ಅವರಲ್ಲಿ ಇರುವ ಅಜ್ಞಾನ ಸಂಶಯಗಳು ಯಾವುವು ಯೋಗಭಂಗ ಮಾಡದಂತೆ, ಆ ಸಂಶಯಗಳಿಗೆ ಉತ್ತರ ಅವನ ಶರೀರದಲ್ಲಿಯೇ ಹುಟ್ಟುವಂತೆ ಮಾಡುತ್ತಿದ್ದಾನೆ. ಅಜ್ಞಾನ ಅಂಧಕಾರವೆನ್ನುವ ಸಂಶಯಗಳಿಗೆ ಜ್ಞಾನದೀಪ ಕಾಂತಿಯಾಗುವ ಉತ್ತರಗಳನ್ನುಂಟುಮಾಡುತ್ತಿದ್ದಾನೆ. ಬೆಳಕಿನಿಂದ ಕತ್ತಲು ಹೇಗೆ ಮಾಯವಾಗುತ್ತದೋ ಹಾಗೆ ಸಂಶಯಗಳೆಲ್ಲ ಜ್ಞಾನದಿಂದ ಇಲ್ಲದಂತಾಗುತ್ತವೆ. ಸಂಶಯಗಳು ಇಲ್ಲದವರು ನಿರಾತಂಕವಾಗಿ ಮುಕ್ತಿ ಹೊಂದಬಹುದು.

ಈ ಮಾತು ಕೇಳಿದ ಅರ್ಜುನನು ಈ ವಿಧವಾಗಿ ಅನ್ನುತ್ತಿದ್ದಾನೆ.

**ಅರ್ಜುನನು ಹೀಗೆ ಹೇಳಿದನು :_**

**(9) ಶ್ಲೋ॥ 12 : ಪರಂ ಬ್ರಹ್ಮ ಪರಂಧಾಮ ಪವಿತ್ರಮ್ ಪರಮಂ ಭವಾನ್।**
**ಪುರುಷಂ ಶಾಶ್ವತಂ ದಿವ್ಯ ಮಾದಿದೇವ ಮಜಂ ವಿಭುಮ್ ॥**

**(9) ಶ್ಲೋ॥ 13 : ಆಹುಸ್ತ್ವಾ ಮೃಷಯ ಸ್ಸರ್ವೇ ದೇವರ್ಷಿ ರ್ನಾರದ ಸ್ತಥಾ !।**
**ಅಸಿತೋ ದೇವಲೋ ವ್ಯಾಸ ಸ್ಸ್ವಯಂ ಚೈವ ಬ್ರವೀಷಿ ಮೇ ॥**

**(9) ಶ್ಲೋ॥ 14 : ಸರ್ವಮೇತ ದೃತಂ ಮನ್ಯೇ ಯನ್ಮಾಂ ವದಸಿ ಕೇಶವಾ! ।**
**ನಹಿ ತೇ ಭಗವಾನ್ ವ್ಯಕ್ತಿಂ ವಿದುರ್ದೇವಾನ ದಾನವಾಃ !॥**

**(9) ಶ್ಲೋ॥ 15 : ಸ್ವಯಮೇವಾಽತ್ಮನಾಽತ್ಮಾನಂ ವೇತ್ಥತ್ವಂ ಪುರುಷೋತ್ತಮ! ।**
**ಭೂತ ಭಾವನ! ಭೂತೇಶ! ದೇವದೇವ! ಜಗತ್ಪತೇ! ॥**

**ಭಾವಾರ್ಥ** : ಪರಬ್ರಹ್ಮನು, ಪರಂಧಾಮನು, ಪವಿತ್ರನು, ಶ್ರೇಷ್ಠನು, ಪುರುಷನು, ಶಾಶ್ವತನು, ದಿವ್ಯವಾದವನು, ಆದಿದೇವನು, ವಿಭುವನು, ಅಜುನನು, ಎನ್ನುತ್ತಾ ನಾರದನು, ಆಸಿತನು, ದೇವಲನು, ಸಪ್ತಋಷಿಗಳು, ವ್ಯಾಸನು ಹೇಳುತ್ತಿದ್ದರು. ಈಗ ನೀನೇ ಸ್ವತಃವಾಗಿ ಹೇಳುತ್ತಿದ್ದರೆ ಕೇಳುತ್ತಿದ್ದೇನೆ.

ಏನು ನನಗೆ ಹೇಳಿದ್ದೀಯೊ ಅದೆಲ್ಲವೂ ಸತ್ಯವಾದುದೆಂದು ಮನಸ್ಸಿನಲ್ಲಿ ತಿಳಿಯುತ್ತಿದ್ದೇನೆ. ನಿನ್ನೊಂದರ ಅಸಲು ಸ್ವರೂಪವನ್ನು ದೇವತೆಗಳು, ದಾನವರೂ ಸಹ ತಿಳಿಯದಿದ್ದಾರೆ.

ಸಕಲ ಭೂತಗಳನ್ನು ಸೃಜಿಸುವವನು, ಸಕಲ ಜೀವಿಗಳನ್ನು ಪಾಲಿಸುವವನು, ದೇವತೆಗಳಿಗೆ ದೇವರು, ಜಗತ್ತಿಗೆ ಪತಿಯಾದ ಓ ಪುರುಷೋತ್ತಮಾ! ನಿನ್ನನ್ನು ನೀನೇ ತಿಳಿದುಕೊಳ್ಳಬಲ್ಲೆ.

**ವಿವರ** : ಪೂರ್ವದಲ್ಲಿ ದೊಡ್ಡವರಾದ ಸಪ್ತಋಷಿಗಳು, ನಾರದ ಮೊದಲಾದವರೆಲ್ಲರೂ ಪರಮಾತ್ಮನನ್ನು ಕುರಿತು ದೊಡ್ಡದಾಗಿ ಹೇಳಿದ್ದಾರೆ. ಆತನನ್ನು ಕುರಿತು ಯಾರು ಎಷ್ಟು ಹೇಳಿದರೂ ಅದು ಪೂರ್ತಿವಿಷಯ ಅಲ್ಲವೆಂದೇ ಹೇಳಬಹುದು. ಅವರು ಹೇಳಿರುವುದಕ್ಕಿಂತಲೂ ಸಹ ಎಷ್ಟೋ ಹಂತಗಳು ದೊಡ್ಡವನು ಪರಮಾತ್ಮ. ಆದ್ದರಿಂದ ಅರ್ಜುನನೂ ಸಹ ನಿನ್ನನ್ನು ಕುರಿತು ನಿನಗೇ ತಿಳಿಯುತ್ತದೆ. ನಿನ್ನನ್ನು ಕುರಿತು ನೀನು ಹೇಳಬೇಕಾದ್ದೇ ಎಂದಿದ್ದಾನೆ. ವಾಸ್ತವವಾಗಿ ಯಾರಿಗೂ ಅರ್ಥವಾಗದಂತಹ ಮಹಿಮೆ, ಹಿರಿಮೆ ಇರುವವನು ಪರಮಾತ್ಮ. ಆತನ ವಿಷಯವನ್ನು ಕುರಿತು ಆತನನ್ನೇ ಕೇಳಬೇಕಾದ್ದೇ ಆಗಲಿ ಯಾರನ್ನು ಕೇಳಿದರು ಲಾಭವಿಲ್ಲ. ಆದ್ದರಿಂದ ಅರ್ಜುನನೂ ಸಹ ಇದೇ ವಿಷಯವನ್ನು ಕೇಳುತ್ತಿದ್ದಾನೆ.

**(9) ಶ್ಲೋ॥ 16 : ವಕ್ತು ಮರ್ಹಸ್ಯ ಶೇಷೇಣ ದಿವ್ಯಾ ಹ್ಯಾತ್ಮ ವಿಭೂತಯಃ ।**
**ಯಾ ಭಿರ್ವಿಭೂತಿ ಭೀರ್ಲೋಕಾ ನಿಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ ॥**

**(9)ಶ್ಲೋ॥ 17 : ಕಥಂವಿದ್ಯಾ ಮಹಂ ಯೋಗಿನ್ ತ್ವಾಂ ಸದಾ ಪರಿಚಿನ್ತಯನ್ ।**
**ಕೇಷು ಕೇಷು ಚ ಭಾವೇಷು ಚಿಂತ್ಯೋಽಸಿ ಭಗವನ್ಮಯಾ ॥**

**(9) ಶ್ಲೋ॥ 18 : ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ! ।**
**ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಮ್ ॥**

**ಭಾವಾರ್ಥ** : ಯಾವ ಮಹಿಮೆಗಳಿಂದ ಎಲ್ಲಾ ಲೋಕಗಳನ್ನು ವ್ಯಾಪಿಸಿದ್ದಾನೋ, ಆ ದಿವ್ಯ ಮಹಿಮೆಗಳನ್ನು ಸಶೇಷವಾಗಿ ಹೇಳುವುದಕ್ಕೆ ನೀನೇ ಅರ್ಹನು.

ನಾನು ಯಾವಾಗಲೂ ನಿನ್ನ ಚಿಂತೆ ಮಾಡುತ್ತಾ ಯೋಗಿಯಾಗಿ ನಿನ್ನನ್ನು ತಿಳಿದುಕೊಳ್ಳುವುದು ಹೇಗೆ? ಯಾವ ಯಾವ ಭಾವಗಳಿಂದ ನಿನ್ನನ್ನು ಚಿಂತಿಸಬೇಕೊ ತಿಳಿಸೆಂದನು.

ವಿಸ್ತರಿಸಿರುವ ಆತ್ಮವನ್ನು, ಅದನ್ನು ಹೊಂದುವ ವಿಧಾನವನ್ನು, ಅದರ ಮಹಿಮೆಯನ್ನು ಪುನಃ ಹೇಳು. ಆ ಅಮೃತವಾಕ್ಯಗಳನ್ನು ಎಷ್ಟುಬಾರಿ ಕೇಳಿದರು ತೃಪ್ತಿತೀರದು.

**ವಿವರ** : ಪರಮಾತ್ಮ ವಿಷಯಗಳು ಪರಮಾತ್ಮ ಹೊರತು ಮತ್ತ್ಯಾರು ತಿಳಿಸಲಾರರೆಂಬ ಉದ್ದೇಶದಿಂದ ಹೀಗೆ ಪರಮಾತ್ಮನನ್ನು, ಮಹಿಮೆ ವಿಶೇಷಗಳನ್ನು ತಿಳಿಸೆಂದು ಅರ್ಜುನ ಬೇಡಿಕೊಂಡಾಗ, ಪರಮಾತ್ಮ ತನ್ನ ಮಹಿಮೆಯನ್ನು ತಿಳಿಸಲು ಪ್ರಾರಂಭ ಮಾಡಿದನು.

**ಶ್ರೀ ಭಗವಂತನು ಹೀಗೆ ಹೇಳಿದನು:–**

**(9) ಶ್ಲೋ॥ 19 : ಹನ್ತ ತೇ ಕಥಯಿಷ್ಯಾಮಿ ದಿವ್ಯಾ ಹ್ಯಾತ್ಮಾ ವಿಭೂತಯಃ ।**
**ಪ್ರಾಧಾನ್ಯತಃ ಕುರುಶ್ರೇಷ್ಠ ! ನಾಸ್ತ್ಯನ್ತೋ ವಿಸ್ತರಸ್ಯಮೇ ॥**
**(ಪರಮಾತ್ಮ, ಮಹತ್ಯಗಳು)**

**ಭಾವಾರ್ಥ** : ನನ್ನ ವಿಭೂತಿಗಳು (ಮಹಿಮೆಗಳು) ಅಂತ್ಯ ಇಲ್ಲದವುಗಳು. ಅವುಗಳಲ್ಲಿ ಮುಖ್ಯವಾದ ಕೆಲವನ್ನು ಮಾತ್ರ ಹೇಳುತ್ತೇನೆ.

**(9) ಶ್ಲೋ॥ 20 : ಅಹ ಮಾತ್ಮಾ ಗುಡಾಕೇಶ ! ಸರ್ವಭೂತಾಶಯಸ್ಥಿತಃ ।**
**ಅಹ ಮಾದಿಶ್ಚ ಮಧ್ಯಂಚ ಭೂತನಾ ಮನ್ತ ಏವ ಚ ॥**
**(ಪರಮಾತ್ಮ, ಮಹತ್ವಗಳು)**

**ಭಾವಾರ್ಥ** : ನಾನು ಆತ್ಮನಾಗಿರುವವನಾಗಿ ಸರ್ವ ಜೀವರಾಶಿಗಳಿಗೂ ಆಧಾರವಾಗಿದ್ದೇನೆ. ಸರ್ವ ಜೀವರಾಶಿಗಳಿಗು ಆದಿ, ಮಧ್ಯ, ಅಂತ್ಯವು ನಾನೇ.

**ವಿವರ** : ಸರ್ವಜೀವರಾಶಿಗಳ ಶರೀರಗಳಲ್ಲಿ ಆತ್ಮ ಎನ್ನುವುದು ಒಂದಿದೆ. ಅದು ಎಲ್ಲಾ ಶರೀರಗಳನ್ನು ಕದಲಿಸಿ ನಡೆಸುತ್ತಾ, ಕರ್ಮಾನುಸಾರ ಕೆಲಸಗಳು ಮಾಡಿಸುತ್ತಾ, ಪ್ರಪಂಚ ಮನುಗಡೆಗೆ ಕಾರಣವಾಗಿದೆ. ಶರೀರಗಳಲ್ಲಿ ಆ ವಿಧವಾಗಿರುವ ಆತ್ಮವೂ ಸಹ ನಾನೇ ಎಂದು ಪರಮಾತ್ಮ ಈ ಶ್ಲೋಕದಲ್ಲಿ **'ಅಹಮಾತ್ಮ'** ಎಂದಿದ್ದಾನೆ. ಜೀವಾತ್ಮ ಬೇರೆ, ಆತ್ಮಬೇರೆ, ಪರಮಾತ್ಮ ಬೇರೆ ಆದರೂ ಆತ್ಮ ಪರಮಾತ್ಮನಲ್ಲಿನ ಭಾಗವೇ, ಆದ್ದರಿಂದ ಆತ್ಮವನ್ನು ನಾನು ಎಂದಿದ್ದಾನೆ. ಅಷ್ಟೇ ಅಲ್ಲದೆ ಜೀವಾತ್ಮನೂ ಸಹ ಆತನೇ ಎಂದು ಹೇಳದೆಯೇ ನಾವು ತಿಳಿದುಕೊಳ್ಳಬೇಕು. ಜೀವಾತ್ಮಕ್ಕೆ ಆಧಾರವಾದುದು ಆತ್ಮ. ಆತ್ಮಗಾಧಾರವಾದವನು ಪರಮಾತ್ಮ. ಪರಮಾತ್ಮಕ್ಕೆ ಪರಮಾತ್ಮನೇ ಆಧಾರ. ಆತನನ್ನು ಮೀರಿದವನು ಮತ್ತೊಬ್ಬನು ಇಲ್ಲ. ಪರಮಾತ್ಮನನ್ನು ಕುರಿತು ಹೇಳಬೇಕೆಂದರೆ ಮಾತುಗಳು ಸಾಲವು. ಆತನು ಇಲ್ಲಿದ್ದಾನೆ, ಅಲ್ಲಿಲ್ಲ ಎನ್ನುವುದಕ್ಕೆ ಹೇಗೆ ಸಾಧ್ಯವಿಲ್ಲವೊ, ಆ ವಿಧವಾಗಿಯೇ ಇದು ಪರಮಾತ್ಮ ಅದು ಪರಮಾತ್ಮ ಅಲ್ಲವೆನ್ನುವುದಕ್ಕೆ ಸಾಧ್ಯವಿಲ್ಲ. ಸರ್ವವು ಆತನಾಗಿದ್ದಾನೆ. ಯಾವುದನ್ನು ಪರಿಶೀಲಿಸಿ ನೋಡಬೇಕಾದ ಅಗತ್ಯವಿಲ್ಲ, ಪ್ರತಿಯೊಂದು ಆತನೇ ಎಂದು ತಿಳಿಯಬೇಕು. ಆ ವಿಷಯವನ್ನು ತಿಳಿಸುವ ನಿಮಿತ್ತ ಜೀವರಾಶಿಗಳ ಮೊದಲು, ಮಧ್ಯಮ, ಕೊನೆ ಎಲ್ಲವೂ ನಾನೇ ಎಂದಿದ್ದಾನೆ.

**ಗಮನಿಕೆ** : ಪರಮಾತ್ಮ ಹಿರಿಮೆಯನ್ನು ತಿಳಿಸುವ ಈ ಅಧ್ಯಾಯದಲ್ಲಿ ಸರ್ವವು ನಾನೇ ಎಂಬ ಪರಮಾತ್ಮ ವಾಕ್ಕನ್ನು ಎಷ್ಟೋ ವಿಧಗಳಾಗಿ ವಿವರಿಸಿ ಹೇಳಲಾಗಿದೆ. ಎಷ್ಟು ವಿಧಗಳಾಗಿ ವಿವರಿಸಿ ಹೇಳಿಕೊಂಡರು ಕೊನೆಗೆ ನಮಗೆ ಅರ್ಥವಾಗುವುದು ಪರಮಾತ್ಮಕ್ಕೆ ಅತೀತವಾದುದಾಗಲಿ, ಪರಮಾತ್ಮಕ್ಕೆ ವಿನಹವಾಗಲಿ ಏನೂ ಇಲ್ಲ ಎನ್ನುವುದೇ. ಇಲ್ಲಿ 21ನೇ ಶ್ಲೋಕದಿಂದ 40ನೇ ಶ್ಲೋಕದವರೆಗೂ ಏಕಧಾಟಿಯಾಗಿ ಹೇಳಿದ ವಿಷಯವೂ ಸಹ ಅದೇ. ಆದ್ದರಿಂದ ಒಟ್ಟು 20 ಶ್ಲೋಕಗಳವರೆಗೂ ಒಂದೇ ವಿಷಯವಾದ್ದರಿಂದ ಎಲ್ಲವನ್ನು ಒಂದುಕಡೆ ಸೇರಿಸಿ ಬರೆಯುವುದು ನಡೆದಿದೆ. ಶ್ಲೋಕ ಶ್ಲೋಕಕ್ಕು ಬೇರೆ ಬೇರೆ ಬರೆಯದೆ 21 ರಿಂದ 40ರ ವರೆಗೂ ಬರೆದು ಒಂದೇ ಭಾವವನ್ನು ಹೇಳುವುದಾಗಿದೆ ಎಂದು ಗ್ರಹಿಸಬೇಕು.

**(9) ಶ್ಲೋ॥ 21 : ಆದಿತ್ಯಾನಾಮಹಂ ವಿಷ್ಣು ಜ್ಯೋತಿಷಾಂ ರವಿ ರಂಶುಮಾನ್ ।**
**ಮರೀಚಿ ರ್ಮರುತಾ ಮಸ್ಮಿ ನಕ್ಷತ್ರಾಣಾ ಮಹಂ ಶಶೀ ॥**

**(9) ಶ್ಲೋ ॥ 22 : ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ ।**
**ಇಂದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ ॥**

**(9) ಶ್ಲೋ॥ 23 :** ರುದ್ರಾಣಾಂ ಶಂಕರಶ್ಚಾಸ್ಮಿ ವಿತ್ತೇಶೋ ಯಕ್ಷರಕ್ಷಸಾಮ್ ।
ವಸೂನಾಂ ಪಾವಕಶ್ಚಾಸ್ಮಿ ಮೇರುಃ ಶ್ರಿಖರಿಣಾಮಹಮ್ ॥

**(9) ಶ್ಲೋ॥ 24 :** ಪುರೋಧಸಾಂಚಮುಖ್ಯಂ ಮಾಂವಿದ್ಧಿ ಪಾರ್ಥ! ಬೃಹಸ್ಪತಿಮ್ ।
ಸೇನಾನೀನಾ ಮಹಂ ಸ್ಕನ್ಧ ಸ್ಸರಸಾ ಮಸ್ಮಿಸಾಗರಃ ॥

**(9) ಶ್ಲೋ॥ 25 :** ಮಹರ್ಷೀಣಾಂ ಭೃಗು ರಹಂ ಗಿರಾ ಮಸ್ಮ್ಯೇಕ ಮಕ್ಷರಮ್ ।
ಯಜ್ಞಾನಾಂ ಜ್ಞಾನ (ಜಪ)ಯಜ್ಞೋಸ್ಮಿ ಸ್ಥಾವರಾಣಾಂ ಹಿಮಾಲಯಃ॥

**(9) ಶ್ಲೋ॥ 26 :** ಅಶ್ವತ್ಥ ಸ್ಸರ್ವವೃಕ್ಷಾಣಾಂ ದೇವರ್ಷೀಣಾಂ ಚ ನಾರದಃ ।
ಗನ್ಧರ್ವಾಣಾಂ ಚಿತ್ರರಥಃ ಸಿದ್ಧಾನಾಂ ಕಪಿಲೋ ಮುನಿಃ ॥

**(9) ಶ್ಲೋ॥ 27 :** ಉಚ್ಚೈಃಶ್ರವಸ ಮಶ್ವಾನಾಂ ವಿದ್ಧಿ ಮಾ ಮಮೃತೋದ್ಭವಮ್ ।
ಐರಾವತಂ ಗಜೇನ್ದ್ರಾಣಾಂ ನರಾಣಾಂ ಚ ನರಾಧಿಪಮ್ ॥

**(9)ಶ್ಲೋ॥ 28 :** ಆಯುಧಾನಾ ಮಹಂ ವಜ್ರಂ ಧೇನೂನಾ ಮಸ್ಮಿಕಾಮಧುಕ್ ।
ಪ್ರಜನ ಶ್ಚಾಸ್ಮಿ ಕಂದರ್ಪಃ ಸ್ಸರ್ಪಾಣಾ ಮಸ್ಮಿ ವಾಸುಕಿಃ ॥

**(9)ಶ್ಲೋ॥ 29 :** ಅನನ್ತಶ್ಚಾಸ್ಮಿ ನಾಗಾನಾಂ ವರುಣೊ ಯಾದಸಾ ಮಹಮ್ ।
ಪಿತೄಣಾ ಮರ್ಯಮಾ ಚಾಸ್ಮಿ ಯಮಃ ಸಂಯಮತಾಮಹಮ್ ॥

**(9) ಶ್ಲೋ॥ 30 :** ಪ್ರಹ್ಲಾದ ಶ್ಚಾಸ್ಮಿ ದೈತ್ಯಾನಾಂ ಕಾಲಃ ಕಲಯತಾ ಮಹಮ್ ।
ಮೃಗಾಣಾಂಚ ಮೃಗೇನ್ದ್ರೋಽಹಂ ವೈನತೇಯಶ್ಚ ಪಕ್ಷಿಣಾಮ್ ॥

**(9) ಶ್ಲೋ॥ 31 :** ಪವನಃ ಪವತಾ ಮಸ್ಮಿ ರಾಮಃಶಸ್ತ್ರಭೃತಾ ಮಹಮ್ ।
ಝಷಾಣಾಂ ಮಕರ ಶ್ಚಾಸ್ಮಿ ಸ್ರೋತಸಾ ಮಸ್ಮಿ ಜಾಹ್ನವೀ ॥

**(9) ಶ್ಲೋ॥ 32 :** ಸರ್ಗಾಣಾ ಮಾದಿ ರ ನ್ತಶ್ಚ ಮಧ್ಯಂ ಚೈವಾಹ ಮರ್ಜುನ !।
ಅಧ್ಯಾತ್ಮ ವಿದ್ಯಾ ವಿದ್ಯಾನಾಂ ವಾದಃ ಪ್ರವದತಾಮಹಮ್ ॥

**(9) ಶ್ಲೋ॥ 33 :** ಅಕ್ಷರಾಣಾ ಮಕಾ ರೋಽಸ್ಮಿ ದ್ವನ್ದ್ವಃ ಸಾಮಾಸಿಕಸ್ಯ ಚ ।
ಅಹಮೇ ವಾಕ್ಷಯಃಕಾಲೋ ಧಾತಾಽಹಂ ವಿಶ್ವತೋ ಮುಖಃ ॥

**(9) ಶ್ಲೋ॥ 34 :** ಮೃತ್ಯುಃ ಸರ್ವಹರ ಶ್ಚಾಹ ಮುದ್ಭವ ಶ್ಚ ಭವಿಷ್ಯತಾಮ್ ।
ಕೀರ್ತಿಃಶ್ರೀ ರ್ವಾಕ್ಚ ನಾರೀಣಾಂ ಸ್ಮೃತಿ ರ್ಮೇಧಾ ಧೃತಿಃಕ್ಷಮಾ ॥

**(9)ಶ್ಲೋ॥ 35 : ಬೃಹತ್ಸಾಮ ತಥಾ ಸಾಮ್ನಾಂ ಗಾಯತ್ರೀ ಛನ್ದಸಾ ಮಹಮ್ ।**
**ಮಾಸಾನಾಂ ಮಾರ್ಗಶೀರ್ಷೋಽಹ ಮೃತೂನಾಂ ಕುಸುಮಾಕರಃ ॥**

**(9) ಶ್ಲೋ॥ 36 : ದ್ಯೂತಂ ಛಲಯತಾ ಮಸ್ಮಿ ತೇಜಸ್ತೇ ಜಸ್ವಿನಾ ಮಹಮ್ ।**
**ಜಯೋಸ್ಮಿ ವ್ಯವಸಾ ಯೋಸ್ಮಿ ಸತ್ತ್ವಂ ಸತ್ತ್ವವತಾ ಮಹಮ್ ॥**

**(9)ಶ್ಲೋ॥ 37 : ವೃಷ್ಣೀನಾಂ ವಾಸುದೇವೋ೭ಸ್ಮಿ ಪಾಣ್ಡವಾನಾಂ ಧನಂಜಯಃ ।**
**ಮುನೀನಾ ಮ ಪ್ಯಹಂ ವ್ಯಾಸಃ ಕವೀನಾ ಮುಶನಾ ಕವಿಃ ॥**

**(9) ಶ್ಲೋ॥ 38 : ದಣ್ಡೋ ದಮಯತಾ ಮಸ್ಮಿ ನೀತಿ ರಸ್ಮಿ ಜಿಗೀಷತಾಮ್ ।**
**ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾ ಮಹಮ್ ॥**

**(9) ಶ್ಲೋ॥ 39 : ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹ ಮರ್ಜುನ !।**
**ನ ತದಸ್ತಿ ವಿನಾ ಯತ್ಸ್ಯಾನ್ಮಯಾ ಭೂತಂ ಚರಾಚರಮ್ ॥**

**(9) ಶ್ಲೋ॥ 40 : ನಾನ್ತೋ೭ಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರನ್ತಪ !।**
**ಏಷತೂದ್ದೇ ಶತಃ ಪ್ರೋಕ್ತೋ ವಿಭೂತೇ ರ್ವಿಸ್ತರೋ ಮಯಾ ॥**

**ಭಾವಾರ್ಥ** : ಸೂರ್ಯರೆಲ್ಲರಲ್ಲಿಯೂ ವಿಷ್ಣು ನಾನು. ಪ್ರಕಾಶವಾಗಿರುವ ಜ್ಯೋತಿಗಳಲ್ಲಿ ಸೂರ್ಯನು. ವಾಯುವುಗಳಲ್ಲಿ ಮರೀಚಿ ವಾಯುವು ನಾನು, ನಕ್ಷತ್ರಗಳಲ್ಲಿ ಚಂದ್ರನು ನಾನು. ವೇದಗಳಲ್ಲಿ ಸಾಮವೇದ, ದೇವತೆಗಳಲ್ಲಿ ದೇವೇಂದ್ರ, ಇಂದ್ರಿಯಗಳಲ್ಲಿ ಮನಸ್ಸು ನಾನು. ಜೀವರಾಶಿಗಳಲ್ಲಿನ ಚೈತನ್ಯ (ಆತ್ಮ) ನಾನೇ. ರುದ್ರರಲ್ಲಿ ಶಂಕರನು, ಯಕ್ಷರಾಕ್ಷಸರಲ್ಲಿ ಕುಬೇರನು ನಾನೇ. ಗಣಾಧಿ ದೇವತೆಗಳಲ್ಲಿ ಅಗ್ನಿಯೂ ನಾನು, ಶಿಖರಗಳಲ್ಲಿ ಮೇರು ಶಿಖರ ನಾನು, ಪುರೋಹಿತರಲ್ಲಿ ಬೃಹಸ್ಪತಿ ನಾನೇ ಎಂದು ತಿಳಿಯಿರಿ. ಸರ್ವ ಸೇನಾದಿಗಳಲ್ಲಿ ಷಣ್ಮುಖಂಡನಾಗಿ, ಸರಸ್ಸುಗಳಲ್ಲಿ ನಾನು ಸಾಗರುಂಡನಾಗುತ್ತೇನೆ.

ಋಷಿಗಳಲ್ಲಿ ನಾನಾಗುತ್ತೇನೆ ಭೃಗುಮಹರ್ಷಿಯೂ, ಶಬ್ದಗಳಲ್ಲಿ ಓಂಕಾರ ಶಬ್ದವು ನಾನೇ. ಯಜ್ಞಗಳಲ್ಲಿ ನಾನು ಜ್ಞಾನ(ಜಪ) ಯಜ್ಞವಾಗುತ್ತೇನೆ. ಪರ್ವತಗಳಲ್ಲಿ ಹಿಮಾಲಯವು ನಾನೇ ಆಗುತ್ತೇನೆ.

25ನೇ ಶ್ಲೋಕದಲ್ಲಿ **'ಯಜ್ಞಾನಾಂ ಜಪಯಜ್ಞೋಽಸ್ಮಿ'** ಎನ್ನುವ ವಾಕ್ಯವು ಇದೆ. ಯಜ್ಞಗಳಲ್ಲಿ ಜಪಯಜ್ಞ ನಾನೇ ಎಂದು ಇದರ ಅರ್ಥ. ಎಲ್ಲದರಲ್ಲಿಯೂ ಹೆಸರೆಸರಿ ನಲ್ಲಿಯೂ ಉತ್ತಮವಾದವುಗಳನ್ನೇ ಹೇಳಿ ಅವೆಲ್ಲವೂ ನಾನೆಂದವನು, ಇಲ್ಲಿ ಯಜ್ಞಗಳೆಲ್ಲದಕ್ಕಿಂತ ದೊಡ್ಡದಾದ ಜ್ಞಾನಯಜ್ಞ ನಾನು ಏನ್ನದೆ ಜಪಯಜ್ಞ ನಾನೇ ಎಂದಿದ್ದಾನೆ. ಇದು ನಿಜನಾ! ಎಂದು ನಾವು ಆಲೋಚಿಸಬೇಕಾಗಿದೆ. ದ್ರವ್ಯಯಜ್ಞಕ್ಕಿಂತ ಜ್ಞಾನಯಜ್ಞವೇ ಶ್ರೇಷ್ಠವಾದುದೆಂದು ಜ್ಞಾನಯಜ್ಞವೆಂಬ ಅಧ್ಯಾಯದಲ್ಲಿ ತಿಳಿಸಿ ಆ ಶ್ರೇಷ್ಠವಾದ ಯಜ್ಞವು ನಾನೆನ್ನದೆ ಜಪಯಜ್ಞವೆಂದು ಹೇಳುವುದೇನು? ಆದ್ದರಿಂದ ಇಲ್ಲಿ ಏನೋ ತಪ್ಪು ನಡೆದಿದೆ ಎಂದು ಅರ್ಥವಾಗುತ್ತದೆ. ವಾಸ್ತವವಾಗಿ ಎಲ್ಲದರಲ್ಲಿ ಶ್ರೇಷ್ಠವಾದವುಗಳನ್ನೇ ಸೂಚಿಸಿದ ಭಗವಂತನು ಇಲ್ಲಿ ಮಾತ್ರ ಶ್ರೇಷ್ಠವಾದ ಜ್ಞಾನಯಜ್ಞವನ್ನು ಬಿಟ್ಟು ಜಪಯಜ್ಞವೆಂದು ಹೇಳಿರುವುದಿಲ್ಲ. ಶ್ಲೋಕದಲ್ಲಿ ಜ್ಞಾನಯಜ್ಞ ಸ್ಥಳದಲ್ಲಿ ಜಪಯಜ್ಞವೆಂದು ಬದಲಾಗಿರಬಹುದು. ಆದುದರಿಂದ ಅಲ್ಲಿ ಜ್ಞಾನಯಜ್ಞವೆಂದೇ ಹೇಳಿಕೊಳ್ಳಬೇಕೆಂದು ಕೋರುತ್ತಿದ್ದೇವೆ. ಎಲ್ಲದಕ್ಕಿಂತ ಉತ್ತಮವಾದದ್ದು, ಕರ್ಮನಿರ್ಮೂಲನೆ ಮಾಡುವುದು ಜ್ಞಾನಯಜ್ಞ. ಆದ ಕಾರಣ **'ಯಜ್ಞಾನಂ ಜ್ಞಾನ ಯಜ್ಞೋಽಸ್ಮಿ'** ಎಂದು ತಿಳಿದುಕೊಳ್ಳಬೇಕು.

ಸರ್ವ ವೃಕ್ಷಗಳಲ್ಲಿ ಅಶ್ವರ್ಥವೃಕ್ಷ, ದೇವರ್ಷಿಗಳಲ್ಲಿ ನಾರದ, ಗಂಧರ್ವರಲ್ಲಿ ಚಿತ್ರರಥ, ಸಿದ್ಧರಲ್ಲಿ ಕಪಿಲಮುನಿಯೂ ನಾನು.

ಅಶ್ವಗಳಲ್ಲಿ ನಾನು ಉಚ್ಛೈಶ್ರವವನು, ಅಮೃತದಲ್ಲಿ ಹುಟ್ಟಿರುವುದರಿಂದ ಆನೆಗಳಲ್ಲಿ ಐರಾವತವು ನಾನು. ನರರಲ್ಲಿ ರಾಜನು ನಾನು.

ಆಯುಧಗಳಲ್ಲಿ ವಜ್ರಾಯುಧವು ನಾನು, ಹಸುಗಳಲ್ಲಿ ಕಾಮಧೇನು. ಹುಟ್ಟಿಸುವವರಲ್ಲಿ ಕಂದರ್ಪನು, ಸರ್ಪಗಳಲ್ಲಿ ವಾಸುಕಿ ಸರ್ಪವು ನಾನೇ ಆಗುತ್ತೇನೆ.

ನಾಗರಗಳಲ್ಲಿ ಸಾವಿರ ಶಿರಸ್ಸುಗಳ ಅನಂತನಾಗುತ್ತೇನೆ. ಜಲಚರಗಳಿಗೆ ವರುಣ ದೇವರು, ಪಿತರರಲ್ಲಿ ಆರ್ಯಮನು. ದಂಡಿಸುವವರಲ್ಲಿ ಯಮನು ನಾನು.

ರಾಕ್ಷಸರಲ್ಲಿ ಪ್ರಹ್ಲಾದನು, ಕಾದುಕೊಂಡವರಿಗೆ ಕಾಲವು ನಾನು, ಮೃಗಗಳಲ್ಲಿ ಸಿಂಹವು ನಾನು. ಪಕ್ಷಿಗಳಲ್ಲಿ ವೈನತೆ ಎಂಬ ಪಕ್ಷಿಯೂ ನಾನು.

ವೇಗವಾಗಿ ಚಲಿಸುವವರಲ್ಲಿ ಗಾಳಿ. ಶಸ್ತ್ರಗಳು ಧರಿಸಿದವರಲ್ಲಿ ರಾಮ ಚಂದ್ರ, ಮೀನುಗಳಲ್ಲಿ ಮೊಸಳೆ, ಪುಣ್ಯಜಲಗಳಲ್ಲಿ ಗಂಗಾನದಿಯೂ ನಾನು.

ಹುಟ್ಟುವುವುಗಳಿಗೆಲ್ಲಾ ಆದಿ, ಮಧ್ಯ, ಅಂತ್ಯಗಳು ನಾನು. ವಿದ್ಯೆಗಳಲ್ಲಿ ಆಧ್ಯಾತ್ಮಿಕ ವಿದ್ಯೆಯಾಗುತ್ತೇನೆ. ವಾದಿಸುವವರ ವಾದವು ನಾನು.

ಅಕ್ಷರಗಳಲ್ಲಿ **'ಅ'** ಕಾರವು, ಸಮಾಸಗಳಲ್ಲಿ ದ್ವಂದ್ವಸಮಾಸ, ನಾಶಗಳಲ್ಲಿ ಅಕ್ಷಯ, ವಿಶ್ವಮುಖನಾದ ವಿಧಿಯೂ ನಾನೇ.

ಎಲ್ಲರನ್ನೂ ಸಂಹರಿಸುವುದರಲ್ಲಿ ಮೃತ್ಯು. ಹುಟ್ಟುವವರಿಗೆ ಭವಿಷ್ಯತ್ತು, ಸ್ತ್ರೀಗಳಲ್ಲಿ ಲಕ್ಷೀ, ಕೀರ್ತಿ, ಸ್ಮೃತಿ, ಮೇಧಸ್ಸು. ಸಹನೆ ಎಲ್ಲಾ ನಾನೇ.

ಸಾಮಗಳಲ್ಲಿ ಬೃಹತ್ಸಾಮ, ಛಂಧಸ್ಸುಗಳಲ್ಲಿ ಗಾಯಿತ್ರಿ, ಮಾಸಗಳಲ್ಲಿ ಮಾರ್ಗ ಶಿರಮಾಸ, ಋತುಗಳಲ್ಲಿ ವಸಂತಋತು ನಾನೇ ಆಗಿದ್ದೇನೆ.

ಮೋಸಗಳಲ್ಲಿ ಜೂದವು ನಾನು. ಸರ್ವತೇಜಸ್ಸುಗಳಲ್ಲಿ ತೇಜಸ್ಸೂ ನಾನೇ. ಸಾತ್ವಿಕರಲ್ಲಿರುವ ಸತ್ಯವು ನಾನೇ, ಹಾಗೆ ಪ್ರಯತ್ನಿಸುವವರಲ್ಲಿನ ಪ್ರಯತ್ನ, ಜಯಶಾಲಿಗಳಲ್ಲಿನ ಜಯ ನಾನೇ.

ಯಾದವರಲ್ಲಿ ವಾಸುದೇವ, ಪಾಂಡವರಲ್ಲಿ ಅರ್ಜುನ, ಸಕಲ ಮುನಿಗಳಲ್ಲಿ ವ್ಯಾಸಮುನಿ, ಹಾಗೇ ಸರ್ವಕವಿಗಳಲ್ಲಿ ಶುಕ್ರಕವಿಯೂ ನಾನೇ.

ದಂಡಿಸುವವರ ದಂಡನೆ ನಾನಾಗುತ್ತೇನೆ. ರಾಜರಲ್ಲಿ ರಾಜನೀತಿ ರಹಸ್ಯಗಳಲ್ಲಿ ಮೌನ, ಜ್ಞಾನಗಳಲ್ಲಿನ ಜ್ಞಾನ ನಾನೇ ಆಗುತ್ತೇನೆ.

ಸರ್ವಜೀವಿಗಳಿಗೆ ಬೀಜವು ನಾನೇ. ನಾನು ಇಲ್ಲದಂತಹ ಜೀವರಾಶಿ ಯಾವುದು ಇಲ್ಲ. ಸರ್ವಚರಾಚರ ಭೂತಗಳು ನನ್ನಿಂದಲೇ ಹುಟ್ಟುತ್ತವೆ.

ಈ ವಿಧವಾಗಿ ಹೇಳುತ್ತಾಹೋದರೆ ನನ್ನ ಶುಭಕರವಾದ ವಿಭೂತ(ಮಹಿಮೆ)ಗಳಿಗೆ ಅಂತ್ಯ ಇಲ್ಲ, ಆದುದರಿಂದ ವರ್ಣಿಸಲು ಅಸಾಧ್ಯ. ವಿಸ್ತರಿಸದೆ ಮುಖ್ಯವಾದವುಗಳಲ್ಲಿ ಕೆಲವನ್ನು ಮಾತ್ರ ನಿನಗೆ ಹೇಳಿದ್ದೇನೆ.

**ವಿವರ :** ಪರಮಾತ್ಮ ವಿಷಯವನ್ನು ಒಂದು ಮಾತಿನಲ್ಲಿ ಹೇಳಬೇಕೆಂದರೆ ಇದು ಅದು ಎನ್ನುವ ಭೇದ ಇಲ್ಲದಂತೆ ಎಲ್ಲವೂ ತಾನಾಗಿರುವನೆಂದು ಹೇಳಬಹುದು. ಇಲ್ಲಿ ನೀವು ನನ್ನನ್ನೊಂದು ಪ್ರಶ್ನೆ ಕೇಳಬಹುದು. ಅದೇನೆಂದರೆ ಪರಮಾತ್ಮ ಎಲ್ಲವೂ ತಾನಾಗಿರುವಾಗ ಮೃಗಗಳಲ್ಲಿ ಸಿಂಹ, ರಾಕ್ಷಸರಲ್ಲಿ ಪ್ರಹ್ಲಾದ, ಶಬ್ಧಗಳಲ್ಲಿ ಓಂಕಾರ ನಾನು ಎನ್ನುವುದರಲ್ಲಿ ಅರ್ಥವೇನು? ಮೃಗಗಳಲ್ಲಿ ಸಿಂಹವನ್ನು ಹೊರತು ಉಳಿದವು ಜಂತುಗಳಲ್ಲವೆ? ಶಬ್ಧಗಳಲ್ಲಿ **'ಓಂ'** ಕಾರವನ್ನು ಹೊರತು ಉಳಿದ ಶಬ್ಧಗಳಾವುವು ಅಲ್ಲವಾ? ಎಂದು ಪ್ರಶ್ನಿಸಬಹುದು.

ನಮ್ಮ ಉತ್ತರ ಏನೆಂದರೆ! ಎಲ್ಲವೂ ನಾನೇ ಎನ್ನುವ ಒಂದು ಚಿಕ್ಕ ಮಾತಿಗೆ ಇಷ್ಟು ವಿವರವಾಗಿ ಹೇಳುವ ಅವಶ್ಯಕತೆಯಿಲ್ಲ. ಆದರೂ ವಿವರವಾಗಿ ಹೇಳಬೇಕೆಂದು ಇಷ್ಟು ಶ್ಲೋಕಗಳಾಗಿ ಹೇಳಿದ್ದಾರೆ. ಹಾಗೆ ಹೇಳಿದರೂ ವಿವರವಾಗಿ ಅರ್ಥವಾಗಲಿಲ್ಲ. ಆದರೆ ಅನುಮಾನಗಳು ಬೆಳೆಯುವಂತೆ ಮಾಡಿದ್ದಾರೆ. ನೀವು ಕೇಳಿದ ಪ್ರಶ್ನೆ ಇಲ್ಲಿ ಕೇಳುವುದಕ್ಕೆ ಯೊಗ್ಯವಾದುದೆ. ಈ ಶ್ಲೋಕಗಳು ಬರೆದವರು ಒಂದು ಜಾತಿಯಲ್ಲಿ ಹೆಸರು ಹೊಂದಿರುವುದು ಹೇಳಿದರೆ ಉಳಿದೆಲ್ಲವೂ ಹೇಳಿದಂತಾಗುತ್ತದೆಂದು ಅವರಂದುಕೊಳ್ಳುವುದು ತಪ್ಪೆಂದು ಒಪ್ಪಿಕೊಳ್ಳಬಹುದು. ಕೊನೆಗೆ ಯಾವುದು ಏನಾದರು ಈ ಶ್ಲೋಕಗಳ ಉದ್ದೇಶವು ಎಲ್ಲವೂ ಪರಮಾತ್ಮನೇ ಎಂದೂ ತಿಳಿಯುವುದಕ್ಕೋಸ್ಕರವೆಂದು ಗ್ರಹಿಸಬೇಕು.

**(9) ಶ್ಲೋ॥ 41 : ಯದ್ಯ ದ್ವಿಭೂತಿ ಮತ್ಸತ್ತ್ವಂ ಶ್ರೀ ಮದೂರ್ಜಿತ ಮೇವ ವಾ ।**
**ತತ್ತ ದೇ ವಾವಗಚ್ಛ ತ್ವಂ ಮಮ ತೇಜೋಽಂಶ ಸಮ್ಭವಮ್ ॥**
**(ಪರಮಾತ್ಮ)**

**ಭಾವಾರ್ಥ** : ಸರ್ವ ಜೀವರಾಶಿಗಳಲ್ಲಿ ಮಹಿಮೆ ಇರುವುದು, ಶುಭಕರವಾದುದು, ಹೆಸರು ಹೊಂದಿರುವುದೇನು ಇದೆಯೋ ಅದು ಎಲ್ಲ ನನ್ನ ತೇಜದಿಂದ ಹುಟ್ಟಿರುವುದೇ ಎಂದು ತಿಳಿಯಿರಿ.

**(9) ಶ್ಲೋ॥ 42 : ಅಥವಾ ಬಹು ನೈ ತೇನ ಕಿಂ ಜ್ಞಾತೇನ ತ ವಾರ್ಜುನ! ।**
**ವಿಷ್ಟಭ್ಯಾಹ ಮಿದಂ ಕೃತ್ಸ್ನ ಮೇಕಾಂಶೇನ ಸ್ಥಿತೋ ಜಗತ್ ॥**
**(ಪರಮಾತ್ಮ)**

**ಭಾವಾರ್ಥ** : ಹಾಗಲ್ಲದಿದ್ದರು ಇಷ್ಟು ವಿಧಗಳಲ್ಲಿ ನಾನು ಹೇಳಿ ಏನು ಪ್ರಯೋಜನ! ನನ್ನೊಂದರ ಎಷ್ಟೋ ಅಂಶಗಳಲ್ಲಿ ಒಂದು ಅಂಶದಿಂದಲೇ ಜಗತ್ತೆಲ್ಲವೂ ಇದೆಯೆಂದು ತಿಳಿಯಿರಿ.

**ವಿವರ :** ಎಲ್ಲದಕ್ಕಿಂತ ಹೆಚ್ಚಾಗಿ ಹೇಳುತ್ತಿದ್ದೇನೆಂದು ಕೊನೆಯದಾಗಿ ಒಂದು ಮಾತು ಹೇಳಿದ್ದಾನೆ. ಆತನಿಗಿರುವ ಅನಂತವಾದ ಅಂಶಗಳಲ್ಲಿ ಒಂದೇ ಅಂಶದಿಂದ ಈ ಚರಾಚರ ಪ್ರಪಂಚವೆಲ್ಲ ನಿಂತಿದೆ ಎಂದಿದ್ದಾನೆ. ಈ ಕೊನೆಯ ಮಾತಿನಿಂದ ಆತನೆಷ್ಟು ದೊಡ್ಡವನೋ ಗ್ರಹಿಸಬಹುದು. ವಿಶ್ವವನ್ನು ಕುರಿತು ಯೋಚಿಸಿದರು ಅಂತ್ಯಸಿಗದಂತೆ ಇದೆ. ಎಷ್ಟೋ ಗೋಳಗಳು ನಕ್ಷತ್ರಗಳಿಂದ ತುಂಬಿರುವ ಪ್ರಪಂಚದಲ್ಲಿ ನಾವು ಇರುವ ಭೂಮಿಯೇ ಚಿಕ್ಕದು. ಈ ಭೂಮಿ ಮೇಲೆಯೇ ಸಮಸ್ತ ಜೀವರಾಶಿಗಳಿವೆ. ಈ ಜೀವರಾಶಿಗಳು ಅನಂತ ವಿಶ್ವವೆಲ್ಲ ***"ಏಕಾಂಶೇನ ಸ್ಥಿತೋ"*** ಒಂದು ಅಂಶದಲ್ಲಿಯೇ ಇವೆ ಎಂದರೆ ಆಕಾಶ ಗಗನಂ ಶೂನ್ಯಂ ಎನ್ನುವಂತೆ ಪರಮಾತ್ಮ ಅನಂತನೂ, ಅನಿರ್ವಚನೀಯನು ಎನ್ನಬೇಕಾದ್ದೇ.

ಇಲ್ಲಿಗೆ ವಿಭೂತಿ ಯೋಗವೆಂಬ ಈ ಅಧ್ಯಾಯ ಮುಕ್ತಾಯವಾಗಿದೆ. ಈ ಅಧ್ಯಾಯದಲ್ಲಿನ ಶ್ಲೋಕಗಳ ವಿವರವನ್ನು ಕೆಳಗೆ ನೋಡೋಣ.

| | | | |
|---|---|---|---|
| 1. | ಪರಮಾತ್ಮ | – | 33 |
| 2. | ಆತ್ಮಜ್ಞಾನ | – | 1 |
| 3. | ಸಾಕಾರ | – | 1 |
| 4. | ಅರ್ಜುನ ಕೇಳಿರುವವು | – | 7 |
| | **ಒಟ್ಟು ಶ್ಲೋಕಗಳು** | – | **42** |

ಭಾವ, ವಿವರವನ್ನು ಬದಲಾಯಿಸಿ ಬರೆದ ಶ್ಲೋಕಗಳು 6.



### ಹತ್ತನೆಯ ಅಧ್ಯಾಯ

# ವಿಶ್ವರೂಪ ಸಂದರ್ಶನ ಯೋಗ

ಪ್ರತಿ ಅಧ್ಯಾಯಕ್ಕೂ ಒಂದು ಹೆಸರಿಟ್ಟು ಹೆಸರಿನ ಕೊನೆಯಲ್ಲಿ ಯೋಗ ಎಂದಿದ್ದಾರೆ. ಅಧ್ಯಾಯದಲ್ಲಿ ಯಾವ ವಿಷಯವನ್ನು ಕುರಿತು ಹೆಚ್ಚಾಗಿ ಹೇಳಿದ್ದಾರೋ, ಆ ವಿಷಯಕ್ಕೆ ಸಂಬಂಧಿಸಿದ ಹೆಸರು ಆ ಅಧ್ಯಾಯಕ್ಕೆ ಇಡಲಾಗಿದೆ. ಇಲ್ಲಿ ವಿಶ್ವರೂಪಕ್ಕೆ ಸಂಬಂಧಿಸಿದ ವಿಷಯ ಹೆಚ್ಚಾಗಿರುವುದರಿಂದ, ಈ ಅಧ್ಯಾಯವನ್ನು ವಿಶ್ವರೂಪ ಸಂದರ್ಶನಯೋಗ ಎಂದಿದ್ದಾರೆ. ಪ್ರತಿ ಅಧ್ಯಾಯದಲ್ಲಿ ಹೇಳುವ ವಿಷಯವೊಂದರ ಮೂಲ ಉದ್ದೇಶ ಜೀವಾತ್ಮ ಪರಮಾತ್ಮನಲ್ಲಿ ಬೆರೆಯುವುದೇ ಆಗಿರುತ್ತದೆ. ಬೆರೆತು ಹೋಗುವುದನ್ನು ಯೋಗ ಎನ್ನುತ್ತಾರೆ. ಬಿಟ್ಟುಹೋಗುವುದನ್ನು ವಿಯೋಗ ಎನ್ನುತ್ತಾರೆ. ಗೀತೆಯಲ್ಲಿ ಎಲ್ಲಾ ಅಧ್ಯಾಯಗಳು ಬೆರೆತು ಹೋಗುವ ವಿಷಯವನ್ನೇ ಹೇಳುತ್ತಿವೆ ಆದ್ದರಿಂದ ಎಲ್ಲಾ ಅಧ್ಯಾಯಗಳಿಗು ಕೊನೆಯಲ್ಲಿ **'ಯೋಗ'** ಎನ್ನುವುದು ಸಮಂಜಸವಾದುದ್ದೆ.

**ಅರ್ಜುನನು ಹೀಗೆ ಹೇಳಿದನು :–**

**(10) ಶ್ಲೋ॥ 1 : ಮದನುಗ್ರಹಾಯ ಪರಮಂ ಗುಹ್ಯ ಮಧ್ಯಾತ್ಮ ಸಂಜ್ಞಿತಮ್ ।**
**ಯತ್ತ್ವಯೋಕ್ತಂ ವಚಸ್ತೇನ ಮೋಹೋಽಯಂ ವಿಗತೋ ಮಮ ॥**
**(ಧರ್ಮಗಳು)**

**ಭಾವಾರ್ಥ** : ನನ್ನನ್ನು ಅನುಗ್ರಹಿಸಿ ನನಗೆ ಇಲ್ಲಿಯವರೆಗೂ ಹೇಳಿದ ವಿಷಯಗಳು ಆಧ್ಯಾತ್ಮಿಕಗಳಾಗಿವೆ ಆದ್ದರಿಂದ ನನ್ನಲ್ಲಿನ ಮೋಹವೆಲ್ಲ ಸವೆದುಹೋಗಿದೆ.

**(10) ಶ್ಲೋ॥ 2 : ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸ್ತರಶೋ ಮಯಾ ।**
**ತ್ವತ್ತಃ ಕಮಲಪತ್ರಾಕ್ಷ ! ಮಹಾತ್ಮ್ಯ ಮಪಿ ಚಾವ್ಯಯಮ್ ॥**
**(ಪರಮಾತ್ಮ)**

**ಭಾವಾರ್ಥ** : ಸರ್ವ ಜೀವರಾಶಿಗಳಿಗೂ ಸಾವು ಹುಟ್ಟುಗಳು ನಿನ್ನಿಂದ ಉಂಟಾಗುತ್ತವೆಂದೂ, ನಿನ್ನ ಮಹಿಮೆ ಅವ್ಯಯವಾದುದೆಂದೂ ವಿಸ್ತಾರವಾಗಿ ಇಲ್ಲಿಯವರೆಗೂ ಕೇಳಿದೆನು.

**(10) ಶ್ಲೋ॥ 3 : ಏವ ಮೇತ ದ್ಯಥಾಽಽತ್ಥತ್ವ ಮತ್ಮಾನಾಂ ಪರಮೇಶ್ವರ ।**
**ದ್ರಷ್ಟು ಮಿಚ್ಛಾಮಿ ತೇ ರೂಪ ಮೈಶ್ವರಂ ಪುರುಷೋತ್ತಮ ॥**
**(ಪರಮಾತ್ಮ, ನಿರಾಕಾರ)**

**ಭಾವಾರ್ಥ** : ಓ ಪುರುಷೋತ್ತಮ! ನಿನ್ನನ್ನು ಕುರಿತು ನೀನು ಹೇಳಿರುವುದೆಲ್ಲವೂ ಸತ್ಯವಾಗುತ್ತದೆ. ನಿನ್ನ ವಿಶ್ವರೂಪವನ್ನು ನೋಡಬೇಕೆಂದು ನನಗೆ ಕೋರಿಕೆಯಾಗಿದೆ.

**(10) ಶ್ಲೋ॥ 4 : ಮನ್ಯ ಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟು ಮಿತಿ ಪ್ರಭೋ ।**
**ಯೋಗೇಶ್ವರ ! ತತೋಮೇತ್ವಂ ದರ್ಶಯಾತ್ಮಾನ ಮವ್ಯಯಮ್ ॥**
**(ಪರಮಾತ್ಮ, ನಿರಾಕಾರ)**

**ಭಾವಾರ್ಥ** : ನಿನ್ನ ಆತ್ಮ ರೂಪವನ್ನು ನಾನು ನೋಡುವುದಕ್ಕೆ ಅರ್ಹನಾಗುತ್ತೇನೆಂದು ಭಾವಿಸಿದರೆ ಅವ್ಯಯವಾದ ಆ ರೂಪವನ್ನು ತೋರಿಸು.

**ವಿವರ** : ಇಲ್ಲಿಯವರೆಗೂ ಭಗವಂತನು ಹೇಳಿದ ಪರಮಾತ್ಮ ವಿಷಯಗಳೆಷ್ಟೋ ಕೇಳಿದ ಅರ್ಜುನನು, ತನ್ನ ಮನಸ್ಸಿನಲ್ಲಿ ಒಂದು ನಿಶ್ಚಯಕ್ಕೆ ಬಂದಿದ್ದಾನೆ. ಹೇಳುವವನು ಪರಮಾತ್ಮನೆ ಎಂದು, ಇಲ್ಲಿಯವರೆಗೂ ಕಾಣಿಸುತ್ತಾ ಹೇಳುತ್ತಿರುವವನು ನಿಜವಾದ ವಿಶ್ವವ್ಯಾಪಿಯೇ ಎಂದು, ವಿಶ್ವವ್ಯಾಪಿಯಾದವನೇ ಈ ಶರೀರದಿಂದ ಮಾತನಾಡುತ್ತಿದ್ದಾನೆಂದು ನಿಶ್ಚಯಕ್ಕೆ ಬಂದಿರುವ ಅರ್ಜುನನು ಕಿವಿಯಿಂದ ಕೇಳಿರುವುದಾಗಲಿ, ನಿಜವಾಗಲು ನೋಡದ ಆ ವಿಶ್ವರೂಪವೇನೋ ನೋಡಬೇಕೆಂದು, ಆ ದರ್ಶನ ತನಗೆ ಸಿಗುವಂತೆ ಮಾಡೆಂದು ಪ್ರಾರ್ಥೇಯಪಟ್ಟನು. ಆಗ ಭಗವಂತನಾದ ಶ್ರೀಕೃಷ್ಣನು ಏನು ಹೇಳುತ್ತಿದ್ದಾನೋ ಕೆಳಗೆ ನೋಡೋಣ.

**ಶ್ರೀ ಭಗವಂತನು ಹೀಗೆ ಹೇಳಿದನು :-**

**(10) ಶ್ಲೋ॥ 5 : ಪಶ್ಯ ಮೇ ಪಾರ್ಥ! ರೂಪಾಣಿ ಶತಶೋಽಥ ಸಹಸ್ರಶಃ ।**
**ನಾನಾವಿಧಾನಿ ದಿವ್ಯಾನಿ ನಾನಾವರ್ಣಾ ಕೃತೀನಿ ಚ ॥**
**(ಪರಮಾತ್ಮ, ನಿರಾಕಾರ)**

**(10) ಶ್ಲೋ॥ 6 : ಪಶ್ಯಾಽದಿತ್ಯಾನ್ ವಸೂನ್ ರುದ್ರಾ ನಶ್ವಿನೌ ಮರುತ ಸ್ತಥಾ ।**
**ಬಹೂ ನ್ಯದೃಷ್ಟ ಪೂರ್ವಾಣಿ ಪಶ್ಯಾಽಶ್ಚರ್ಯಾಣಿ ಭಾರತ! ॥**
**(ಪರಮಾತ್ಮ, ನಿರಾಕಾರ)**

**(10) ಶ್ಲೋ॥ 7 : ಇಹೈಕಸ್ಥಂ ಜಗತ್ ಕೃತ್ಸ್ನಂ ಪಶ್ಯಾದ್ಯ ಸಚರಾಚರಮ್ ।**
**ಮಮ ದೇಹೇ ಗುಡಾಕೇಶ ! ಯಚ್ಚಾನ್ಯ ದ್ದ್ರಷ್ಟು ಮಿಚ್ಛಸಿ ॥**
**(ಪರಮಾತ್ಮ, ನಿರಾಕಾರ)**

**ಭಾವಾರ್ಥ** : ಅರ್ಜುನಾ! ಅನೇಕ ವಿಧಗಳಾದ, ಅನೇಕ ವರ್ಣಗಳಾದ, ಅನೇಕ ಆಕಾರಗಳಾದ ನನ್ನ ದಿವ್ಯರೂಪವನ್ನು ನೂರಾರು, ಸಾವಿರಾರು, ಅಸಂಖ್ಯಗಳಾಗಿ ನೋಡು.

ಆದಿತ್ಯರನ್ನು, ವಸುರರನ್ನು, ರುದ್ರರನ್ನು, ಆಶ್ವನಿ ಕುಮಾರರನ್ನು, ಮರುತ್ತರನ್ನು ಮೊದಲಾದವರನ್ನು ನೋಡು. ಎಷ್ಟೋ ಜನ್ಮಗಳ ಪುಣ್ಯದಿಂದ ಕಾಣಿಸುವ ಆಶ್ಚರ್ಯವಾದ ಈ ರೂಪವನ್ನು ನೋಡು.

ಸರ್ವ ಜಗತ್ತು ಮತ್ತು ಅದರಲ್ಲಿನ ಚರಾಚರ ಜೀವಿಗಳ ಸಮೂಹವನ್ನು ಒಂದಾಗಿ ನನ್ನ ಶರೀರದಲ್ಲಿಯೇ ಇರುವಂತೆ ನೋಡುತ್ತೀಯಾ. ಇಷ್ಟ ಬಂದಿರುವುದು ಏನನ್ನಾದರೂ ನನ್ನಲ್ಲಿಯೇ ನೋಡು.

**(10) ಶ್ಲೋ॥ 8 : ನ ತು ಮಾಂ ಶಕ್ಯಸೇ ದ್ರಷ್ಟು ಮನೇನೈವ ಸ್ವಚಕ್ಷುಷಾ ।**
**ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಮ್ ॥**
**(ಪರಮಾತ್ಮ, ನಿರಾಕಾರ)**

**ಭಾವಾರ್ಥ** : ಆದರೆ ನಿನಗಿರುವ ಕಣ್ಣುಗಳಿಂದ ನನ್ನನ್ನು ನೋಡುವುದಕ್ಕೆ ಶಕ್ಯವಲ್ಲ. ನಿನಗೆ ದಿವ್ಯವಾದ ಕಣ್ಣುಗಳನ್ನು ಕೊಡುತ್ತೇನೆ. ನನ್ನೊಂದರ ಈಶ್ವರ ಸ್ವರೂಪವನ್ನು ಅವುಗಳಿಂದಲೇ ನೋಡು.

**ವಿವರ :** ಅರ್ಜುನನ ಕೋರಿಕೆಯ ಮೇರೆಗೆ ತನ್ನ ರೂಪವನ್ನು ತೋರಿಸುತ್ತೇನೆಂದು ಭಗವಂತನು ಒಪ್ಪಿಕೊಂಡಿದ್ದಾನೆ. ಆದರೆ ನಾನಾ ವಿಧಗಳಾದ ಪ್ರಪಂಚ ಸರ್ವವೂ ಒಂದಾಗಿ ತನ್ನ ದೇಹದಲ್ಲಿಯೇ ನೋಡುತ್ತೀಯೆಂದು ಹೇಳುತ್ತಾ, ಹಾಗೆ ನೋಡುವುದಕ್ಕೆ ನಿನ್ನ ಶರೀರಕ್ಕಿರುವ ಕಣ್ಣುಗಳು ಕೆಲಸಕ್ಕೆ ಬರುವುದಿಲ್ಲವೆಂದು ಹೇಳಿದ್ದಾನೆ. ನೋಡುವುದು ವಿಶ್ವರೂಪ, ನೋಡಬೇಕೆಂದುಕೊಂಡಿರುವುದು ಸಾಮಾನ್ಯ ಕಣ್ಣುಗಳು. ಕಣ್ಣುಗಳು ಸ್ವಲ್ಪ ದೂರದಲ್ಲಿ ಸ್ವಲ್ಪ ಪರಿಧಿಯಲ್ಲಿ ನೋಡುವುದಕ್ಕೆ ಯೋಗ್ಯವಾದವು. ವಿಶಾಲ ಪ್ರಪಂಚವನ್ನು ಒಂದೇ ಬಾರಿ ನೋಡುವುದಕ್ಕೆ ಕಣ್ಣುಗಳಿಗೆ ಶಕ್ತಿಯಿಲ್ಲ. ವಿಶ್ವರೂಪ ಎಂದರೆ ಭಗವಂತನು ಸೂಚನೆಯಾಗಿ ಹೇಳುತ್ತಾ ಎಷ್ಟೋ ಭೂಗೋಳಗಳು, ಎಷ್ಟೋ ಸೂರ್ಯಗೋಳಗಳು, ಎಷ್ಟೋ ಪ್ರಳಯಗಳು, ಎಷ್ಟೋ ಅಂತ್ಯವಿಲ್ಲದ ನಾನಾ ವರ್ಣಗಳು, ನಾನಾ ಆಕೃತಿಗಳಿರುವ ಜಗತ್ತು ಸರ್ವವೆಲ್ಲ ಎಂದಿದ್ದಾನೆ. 12 ಓಲ್ಟ್ಸ್ ಲೈಟಿನ ಪ್ರಕಾಶವನ್ನು ನೇರವಾಗಿ ಕಣ್ಣುಗಳು ನೋಡಲಾರವು. ಸ್ವಲ್ಪಮಟ್ಟಿನ ಪ್ರಕಾಶವನ್ನೇ ನೋಡಲಾರದ ಕಣ್ಣುಗಳು ಸೂರ್ಯಗೋಳವನ್ನು ನೋಡುತ್ತವೆಯಾ? ಅದು ಎಷ್ಟೋ ಸೂರ್ಯರು ಒಂದೇ ಬಾರಿ ಒಂದು ದೃಶ್ಯವಾಗಿ

ಕಾಣಿಸಿದರೆ ನಮಗಿರುವ ಕಣ್ಣುಗಳು ನೋಡುತ್ತವೆಯಾ? ನೋಡಲಾರವು. ಆದ್ದರಿಂದಲೇ ಶ್ರೀಕೃಷ್ಣನು ಅರ್ಜುನನ ಹತ್ತಿರ ನಿನ್ನ ಕಣ್ಣುಗಳು ನೋಡುವುದಕ್ಕೆ ಯೋಗ್ಯವಲ್ಲ ಎಂದನು. ಆದರೆ ಈ ಕಣ್ಣುಗಳು ಕೆಲಸಕ್ಕೆ ಬಾರದಿದ್ದಾಗ ಅರ್ಜುನನ ಕೋರಿಕೆ ನೆರವೇರುವುದು ಹೇಗೆ? ಅಷ್ಟು ಇಷ್ಟವಾಗಿ ಕೇಳಿದ ಕೋರಿಕೆ ನೆರವೇರಬೇಕೆಂದರೆ ಎಷ್ಟೋ ದೊಡ್ಡದಾದ ವಿಶ್ವರೂಪವನ್ನು ನೋಡುವಂತಹ ಪ್ರತ್ಯೇಕವಾದ ಕಣ್ಣುಗಳು ಬೇಕು. ಆ ಪ್ರತ್ಯೇಕವಾದ ಕಣ್ಣು ನಮಗಿದೆ ಅದು ಎಲ್ಲರಿಗೂ ಇದ್ದರೂ ಇಲ್ಲದಂತೆಯೇ ಎಂದು ಹೇಳಬಹುದು. ಏಕೆಂದರೆ! ಆ ಮೂರನೇ ಕಣ್ಣು ಎಲ್ಲರಿಗೂ ಮುಚ್ಚಲ್ಪಟ್ಟಿದೆ. ಎಲ್ಲಿಯೋ ಕೆಲವರಿಗೆ ತೆರೆಯಲ್ಪಟ್ಟು, ಶುಕ್ಲಗಳು ಬಂದು ಕೆಲವರಿಗೆ ಇದ್ದರೂ, ಪೊರೆಗಳು ಬಂದು ಕೆಲವರಿಗೆ ಕಾಯಿಗಳು ಕಾದು ಕೆಲವರಿಗೆ ಇದೆ. ಮೂರನೆ ಕಣ್ಣು ತೆರೆಯದವರು ತೆರೆದರೆ ಕಾಣಿಸುತ್ತದಾಗಲಿ ತೆರೆದವರ ಕುರುಡತನಕ್ಕೆ ಚಿಕಿತ್ಸೆ ಮಾಡಿದರಾಗಲಿ ಕಾಣಿಸುವುದಿಲ್ಲ. ಹೀಗೆ ಎಲ್ಲರಿಗೂ ಇದ್ದರು ಇಲ್ಲದಂತಿರುವ ಪ್ರತ್ಯೇಕವಾದ ಕಣ್ಣನ್ನು ತೆರೆಸಿ, ಅದಕ್ಕೆ ಸ್ವಚ್ಛವಾದ ದೃಷ್ಟಿಯನ್ನು ಪ್ರಸಾದಿಸಬೇಕಾಗಿರುವುದು ಪರಮಾತ್ಮನೇ. ಪ್ರತ್ಯೇಕವಾದ ದೃಷ್ಟಿಯಿಲ್ಲದ ಅರ್ಜುನನಿಗೆ ಪರಮಾತ್ಮನೇ ಕಣ್ಣು ತೆರೆಸಿ ಸ್ವಲ್ಪಸಮಯ ದೃಷ್ಟಿಯನ್ನು ಕೊಟ್ಟು ತನ್ನನ್ನು ನೋಡುವಂತೆ ಮಾಡಿದ್ದಾನೆ.

ದಿವ್ಯವಾದ ಕಣ್ಣನ್ನು ಕೊಡುತ್ತಿದ್ದೇನೆ ನೋಡು ಎಂದು ಶ್ರೀ ಕೃಷ್ಣನು ಏನು ತೋರಿಸಿದ್ದಾನೋ ಅದು ನೋಡಿದ ಅರ್ಜುನನು ಈ ವಿಧವಾಗಿ ಹೇಳುತ್ತಿದ್ದಾನೆ.

**ಸಂಜಯನು ಹೀಗೆ ಹೇಳಿದನು :–**

**(10) ಶ್ಲೋ॥ 9 : ಏವ ಮುಕ್ತ್ವಾತತೋ ರಾಜನ್! ಮಹಾಯೋಗೇಶ್ವರೋ ಹರಿಃ ।**
**ದರ್ಶಯಾಮಾಸ ಪಾರ್ಥಾಯ ಪರಮಂ ರೂಪ ಮೈಶ್ವರಮ್ ॥**

**(ಕಲ್ಪಿತ)**

**(10) ಶ್ಲೋ॥ 10 : ಅನೇಕ ವಕ್ತ್ರ ನಯನ ಮನೇಕಾದ್ಭುತ ದರ್ಶನಮ್ ।**
**ಅನೇಕ ದಿವ್ಯಾಭರಣಂ ದಿವ್ಯಾನೇಕೋದ್ಯತಾ ಯುಧಮ್ ॥**

**(ಕಲ್ಪಿತ)**

**(10) ಶ್ಲೋ॥ 11 : ದಿವ್ಯ ಮಾಲ್ಯಾಮ್ಬರಧರಂ ದಿವ್ಯಗನ್ಧಾನು ಲೇಪನಮ್ ।**
**ಸರ್ವಾಶ್ಚರ್ಯಮಯಂ ದೇವ ಮನನ್ತಂ ವಿಶ್ವತೋಮುಖಮ್ ॥**

**(ಕಲ್ಪಿತ)**

**(10) ಶ್ಲೋ॥ 12 : ದಿವಿ ಸೂರ್ಯಸಹಸ್ರಸ್ಯ ಭವೇ ದ್ಯುಗಪದುತ್ಥಿತಾ ।**
**ಯದಿ ಭಾಃ ಸದೃಶೀಸಾ ಸ್ಯಾ ದ್ಭಾಸಸ್ತಸ್ಯ ಮಹಾತ್ಮನಃ ॥**

**(ಕಲ್ಪಿತ)**

**(10) ಶ್ಲೋ॥ 13 : ತತ್ರೈಕಸ್ಥಂ ಜಗತ್ ಕೃತ್ಸ್ನಂ ಪ್ರವಿಭಕ್ತ ಮನೇಕಧಾ ।**
**ಅಪಶ್ಯದ್ದೇವದೇವಸ್ಯ ಶರೀರೇ ಪಾಣ್ಡವಸ್ತದಾ ॥**

**(ಕಲ್ಪಿತ)**

**(10) ಶ್ಲೋ॥ 14 : ತತಃ ಸ್ಸ ವಿಸ್ಮಯಾವಿಷ್ಟೋ ಹೃಷ್ಟರೋಮಾ ಧನಂಜಯಃ ।**
**ಪ್ರಣಮ್ಯ ಶಿರಸಾ ದೇವಂ ಕೃತಾಂಜಲಿ ರಭಾಷತ ॥**

**(ಕಲ್ಪಿತ)**

**ಅರ್ಜುನನು ಹೀಗೆ ಹೇಳಿದನು :**

**(10) ಶ್ಲೋ॥ 15 : ಪಶ್ಯಾಮಿ ದೇವಾಂಸ್ತವದೇವ! ದೇಹೇ ಸರ್ವಾಂಸ್ತಥಾ ಭೂತವಿಶೇಷ ಸಂಘಾನ್ ।**
**ಬ್ರಾಹ್ಮಣಮೀಶಂ ಕಮಲಾಸನಸ್ಥಂ ಋಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ॥**

**(ನಿರಾಕಾರ)**

**(10) ಶ್ಲೋ॥ 16 : ಅನೇಕಬಾಹೂದರವಕ್ತ್ರನೇತ್ರಂಪಶ್ಯಾಮಿತ್ವಾಂಸರ್ವತೋಽನನ್ತ ರೂಪಮ್ ।**
**ನಾನ್ತಂ ನ ಮಧ್ಯಂ ನ ಪುನಸ್ತವಾದಿಂ ಪಶ್ಯಾಮಿ ವಿಶ್ವೇಶ್ವರ! ವಿಶ್ವರೂಪ! ॥**

**(ನಿರಾಕಾರ)**

**ಭಾವಾರ್ಥ** : ದೇವದೇವಾ! ಸರ್ವದೇವತೆಗಳನ್ನು, ಸರ್ವಜೀವರಾಶಿಗಳ ಸಮೂಹಗಳನ್ನು, ಬ್ರಾಹ್ಮಣರನ್ನು, ಈಶ್ವರರನ್ನು ಮತ್ತು ಪದ್ಮಾಸನಗಳಲ್ಲಿ ಕುಳಿತುಕೊಂಡ ಋಷಿಗಳನ್ನು, ದೊಡ್ಡವಾದ ಎಷ್ಟೋ ಸರ್ಪಗಳನ್ನು ನಿನ್ನ ದೇಹದಲ್ಲಿ ನೋಡಿದೆನು.

ಓ ವಿಶ್ವೇಶ್ವರ! ವಿಶ್ವರೂಪ! ಅನೇಕವಾದ ಕೈಗಳು, ಹೊಟ್ಟೆಗಳು, ಮುಖಗಳು, ಕಣ್ಣುಗಳು ಹೊಂದಿ ಎಲ್ಲಾಕಡೆ ಅನಂತರೂಪವಾದ ಮತ್ತು ಆದಿ ಮಧ್ಯ ಅಂತ್ಯವು ಇಲ್ಲದ ನಿನ್ನನ್ನು ನೋಡಿದೆನು.

**ವಿವರ** : ಇಲ್ಲಿ ಎಂಟನೆ ಶ್ಲೋಕದಿಂದ ಹದಿನೈದನೆ ಶ್ಲೋಕಕ್ಕೆ ಬಂದಿದ್ದೇವೆ. ಮಧ್ಯದಲ್ಲಿರುವ ಆರು ಶ್ಲೋಕಗಳು ಸಂಜಯನು ಹೇಳಿದ್ದಾನೆಂದವುಗಳನ್ನು ನಾವು ಹೇಳಲಿಲ್ಲ. ಭಗದ್ಗೀತೆಯಲ್ಲಿ

ಧೃತರಾಷ್ಟ್ರನ, ಸಂಜಯನ ಪಾತ್ರ ಯಾವುದೂ ಇಲ್ಲವೆಂದು ಮೊದಲೇ ಹೇಳಿದ್ದೇವೆ. ಆದ್ದರಿಂದ ಸಂಜಯನ ಆರು ಶ್ಲೋಕಗಳು ಇಲ್ಲಿ ವರ್ಜಿತವಾಗಿವೆ ಎಂದು ಗ್ರಹಿಸಬೇಕು.

ಶ್ರೀಕೃಷ್ಣನು ಅರ್ಜುನನ ಜ್ಞಾನನೇತ್ರಕ್ಕೆ ದೃಷ್ಟಿ ಕೊಟ್ಟ ನಂತರ ಭೌತಿಕವಾದ ಕಣ್ಣುಗಳು ಮುಚ್ಚಿಕೊಂಡಿರುವಾಗ ಆ ಕಣ್ಣುಗಳಿಗೆ ಕತ್ತಲು ಏರ್ಪಟ್ಟಿದೆ. ಮೂರನೆ ಕಣ್ಣಿಗೆ ಬೆಳಕು ಬಂದು ನೋಡಿದ್ದಾನೆ. ಆಗ ಅರ್ಜುನನಿಗೆ ಕಾಣಿಸಿದ ದೃಶ್ಯವನ್ನು ಕುರಿತು ತಾನೇನು ನೋಡಿದ್ದಾನೋ, ಆ ವಿಷಯವನ್ನು ಅಲ್ಲಿಯೇ ಇರುವ ಶ್ರೀಕೃಷ್ಣನಿಗೆ ಹೇಳುತ್ತಿದ್ದನು. ಉದಾಹರಣೆಗೆ ಅಂಜನ ನೋಡುವವನು ಪಕ್ಕದಲ್ಲಿರುವವರಿಗೆ ಅಂಜನದಲ್ಲಿ ತಾನೇನು ನೋಡುತ್ತಿದ್ದಾನೋ ಅದನ್ನು ಹೇಳಿದಂತೆ, ಅರ್ಜುನನೂ ಸಹ ಆ ಸಮಯದಲ್ಲಿ ತಾನೇನು ನೋಡುತ್ತಿದ್ದಾನೋ ಅದನ್ನು ಹೇಳಿದನು.

ಸಮಸ್ತ ದೇವತೆಗಳನ್ನು, ಸಮಸ್ತ ಮನುಷ್ಯರನ್ನು, ಬ್ರಾಹ್ಮಣರಾದ ಈಶ್ವರರನ್ನು, ಪದ್ಮಾಸನದಲ್ಲಿರುವ ಸಮಸ್ತ ಋಷಿಗಳನ್ನು, ಎಷ್ಟೋ ದೊಡ್ಡ ಸರ್ಪಗಳನ್ನು ನೋಡಿದ್ದೇನೆಂದು ಒಂದುಮಾತು ಹೇಳಿದ್ದಾನೆ. ವಿಶ್ವರೂಪ ನೋಡಿದಾಗ ಅರ್ಜುನನು ಹೇಳಿದ ಮೊದಲ ಮಾತಿನಲ್ಲಿ ವಿಶ್ವರೂಪ ಒಂದರ ಘನತೆಯೇನೋ ಸ್ವಲ್ಪ ಅರ್ಥವಾಗುತ್ತದೆ. ಪೂಜಿಸಲ್ಪಡುವ ದೇವತೆಗಳು, ಪೂಜಿಸುವ ಮನುಷ್ಯರು ಎಲ್ಲರೂ ಒಬ್ಬನಲ್ಲಿಯೇ ಇದ್ದಾರೆ ಎಂದಾಗ ಆ ಒಬ್ಬನು ಎಲ್ಲರಿಗಿಂತ ವಿಶಾಲವಾದವನೆಂದು ತಿಳಿಯುತ್ತಿದೆ. ಅಷ್ಟೇ ಅಲ್ಲದೆ ಬ್ರಹ್ಮಜ್ಞಾನ ಇರುವ ಈಶ್ವರರು, ಪದ್ಮಾಸನದಲ್ಲಿರುವ ಋಷಿಗಳು ಇದ್ದಾರೆನ್ನುವುದರಲ್ಲಿ ಬ್ರಹ್ಮಜ್ಞಾನ ಎಲ್ಲಾ ಜ್ಞಾನಗಳಲ್ಲಿ ದೊಡ್ಡದು. ಈಶ್ವರರು ಎಂದರೆ ಅಧಿಪತಿಗಳು, ಕೋಟಿಶ್ವರರಿಂದ ಮೊದಲುಗೊಂಡು ಯೋಗೀಶ್ವರರವರೆಗೂ ಇರುವ ಈಶ್ವರರು, ಅದು ದೊಡ್ಡದಾದ ಬ್ರಹ್ಮಜ್ಞಾನ ಇರುವವರು ಆತನಲ್ಲಿ ಕಾಣಿಸಿದ್ದಾರೆ. ಋಷಿಗಳು ಯೋಗ ಮಾಡುವ ವೇಳೆ ಪದ್ಮಾಸನ ಧರಿಸುತ್ತಿದ್ದರು. ಹಾಗೆ ಕಮಲಾಸನವಿರುವ ದೊಡ್ಡ ಋಷೀಶ್ವರರೂ ಸಹ ಆ ರೂಪದಲ್ಲಿ ಭಾಗವಾಗಿ ಕಾಣಿಸಿದಾಗ ಬ್ರಹ್ಮಜ್ಞಾನಿಗಳಿಗಿಂತಲೂ, ಯೋಗೀಶ್ವರರಿಗಿಂತಲೂ, ಋಷೀಶ್ವರರಿಗಿಂತಲೂ ಆ ರೂಪವು ದೊಡ್ಡದೆಂದು, ಪವಿತ್ರವಾದುದೆಂದು ತಿಳಿಯುತ್ತಿದೆ. ವಿಶಾಲವಾದುದೆಂದು, ಪವಿತ್ರವಾದುದೆಂದು ಮೊದಲ ಮಾತಿನಲ್ಲಿಯೇ ವಿಶ್ವರೂಪವನ್ನು ಕುರಿತು ತಿಳಿಯುತ್ತಿದೆ. ಇನ್ನು ದೊಡ್ಡ ಸರ್ಪಗಳೂ ಸಹ ಇವೆಯೆಂದು ಹೇಳಿದ್ದಾರೆ. ಸರ್ಪಗಳನ್ನು ನೋಡುತ್ತಲೇ ಮರಣವನ್ನು ನೋಡಿದಂತಾಗುತ್ತದೆ. ಅವುಗಳ ಆಕಾರವೇ ಭಯವನ್ನು ಹುಟ್ಟಿಸುವುದಾಗಿರುತ್ತದೆ. ಅಂತಹ ಭಯಂಕರ ಸರ್ಪಗಳೂ ಸಹ ಅದರಲ್ಲಿ ಇವೆಯೆಂದರೆ ಆ ರೂಪವು ಯಾವುದಕ್ಕೂ ಭಯಪಡುವುದಿಲ್ಲವೆಂದು, ಯಾವುದಕ್ಕೂ

ಕಡಿಮೆಯಾದುದಲ್ಲವೆಂದು ತಿಳಿಯುತ್ತಿದೆ. ಮೊದಲ ಶ್ಲೋಕದಲ್ಲಿಯೇ ಪರಮಾತ್ಮ ನಿರಾಕಾರವನ್ನು ಕುರಿತು ಎಲ್ಲದಕ್ಕಿಂತ ವಿಶಾಲವಾದುದೆಂದು ಎಲ್ಲದಕ್ಕಿಂತ ಪವಿತ್ರವಾದುದೆಂದು, ಎಲ್ಲದಕ್ಕಿಂತ ಭಯಂಕರವಾದುದೆಂದೂ ಸಹ ತಿಳಿಯುತ್ತಿದೆ. ವಿಶಾಲವಾದ ಪವಿತ್ರವಾದ ಮತ್ತು ಭಯಂಕರವಾದ ಆ ರೂಪವನ್ನು ಕುರಿತು ಅರ್ಜುನನು ಎರಡನೇ ಮಾತು ಏನು ಹೇಳಿದ್ದಾನೋ ಕೆಳಗೆ ನೋಡೋಣ.

ವಿಶ್ವವೆಲ್ಲವೂ ಏಕರೂಪವಾದಾಗ ಅದರಲ್ಲಿ ಇರುವವೆಲ್ಲ ಆ ರೂಪದಲ್ಲಿನ ಭಾಗಗಳೇ ಆಗುತ್ತವೆ. ಸಮಸ್ತ ಪ್ರಾಣಿಗಳು ಆ ರೂಪದೊಳಗಿನವೇ ಆದಾಗ ಅವುಗಳಿಗಿರುವ ಕೈಗಳು, ಅವುಗಳಿಗಿರುವ ತಲೆಗಳು, ಅವುಗಳಿಗಿರುವ ಹೊಟ್ಟೆಗಳು, ಅವುಗಳಿಗಿರುವ ಕಣ್ಣುಗಳು ಎಲ್ಲವೂ ಆ ರೂಪಕ್ಕಿರುವವಾಗುತ್ತವೆ. ಎಲ್ಲಾ ಪ್ರಾಣಿಗಳ ಅವಯವಗಳು ಆ ಒಂದು ರೂಪವೇ ಆದಾಗ ಅನೇಕ ಕೈಗಳು, ಹೊಟ್ಟೆಗಳು, ಕಣ್ಣುಗಳು, ಕಾಲುಗಳು, ತಲೆಗಳು ಹೊಂದಿರುವ ಆ ರೂಪವನ್ನು ವಿಶ್ವರೂಪ ಎನ್ನುವುದರಲ್ಲಿ ತಪ್ಪಿಲ್ಲ. ಆಶ್ಚರ್ಯವನ್ನು ಉಂಟುಮಾಡುವ ಆ ರೂಪವನ್ನು ನೋಡಿದ ಅರ್ಜುನನು ಮೊದಲು, ಮಧ್ಯಮ, ತುದಿ ಯಾವುದು ತಿಳಿಯಲಿಲ್ಲವೆಂದು ಹೇಳಿದ್ದಾನೆ. ಎಲ್ಲಿ ನೋಡಿದರು ತಲೆಗಳು, ಕಾಲುಗಳು, ಹೊಟ್ಟೆಗಳು ಕಾಣಿಸುತ್ತಿವೆ. ಆಕಾರಕ್ಕೆ ಮೊದಲು ಕಾಲುಗಳೆಲ್ಲ ಒಂದುಕಡೆ ಮಧ್ಯಮವಾದ ಅದ ಹೊಟ್ಟೆಗಳೆಲ್ಲ ಒಂದುಕಡೆ, ಕೊನೆಯವಾದ ತಲೆಗಳೆಲ್ಲ ಒಂದುಕಡೆ ಕಾಣಿಸಿದ್ದರೆ ವಿಶ್ವರೂಪವು ಇದು ಮೊದಲೆಂದು, ಇಲ್ಲಿ ಮಧ್ಯಮವೆಂದು, ಇಲ್ಲಿ ಅಂತ್ಯವೆಂದು ಹೇಳಬಹುದು. ಹಾಗಲ್ಲದೆ ಎಲ್ಲಾಕಡೆ ಎಲ್ಲಾ ಅವಯವಗಳೊಂದಿಗೆ ವ್ಯಾಪಿಸಿರುವ ಆಕಾರವನ್ನು ಆದಿಮಧ್ಯಾಂತರಹಿತನೆಂದು ಹೇಳಬಹುದು.

ಅಳತೆ ಇಲ್ಲದಂತಹ, ಇಲ್ಲಿಯವರೆಗೇ ವ್ಯಾಪಿಸಿದೆಯೆಂದು ಹೇಳಲಾರದ ಆ ರೂಪವು ತೇಜಸ್ಸಿಗೆ ಕೇಂದ್ರವಾದಂತೆ ಪ್ರಕಾಶಿಸುತ್ತಾ, ನೋಡುವುದಕ್ಕೆ ಸಾಧ್ಯವಾಗದ ಸೂರ್ಯಪ್ರಕಾಶವನ್ನು ಹೋಲಿರುವ ಸಮಾನವಾಗಿ ವ್ಯಾಪಿಸಿದೆಯೆಂದೂ ಸಹ ಅರ್ಜುನ ಹೇಳಿದ್ದಾನೆ. ಈ ಮಾತಿನಲ್ಲಿ ಪರಮಾತ್ಮ ನಿರಾಕಾರ ಪರಿಧಿಯಿಲ್ಲದಿರುವುದೆಂದು ತಿಳಿಯುವುದಲ್ಲದೆ, ಪ್ರಕಾಶವನ್ನೂ ಸಹ ಹೊಂದಿದೆ ಎಂದು ತಿಳಿಯುತ್ತದೆ.

ಪರಿಧಿಯಿಲ್ಲದ ವಿಶಾಲವಾದ, ಸಮಸ್ತ ರೂಪಗಳು ತನ್ನವಾದ, ಭಯಂಕರವಾದ, ಪ್ರಕಾಶವಂತವಾದ, ವಿಶ್ವರೂಪನಾದ ಪರಮಾತ್ಮ ನಿರಾಕಾರವನ್ನು ನೋಡಿದ ನಂತರ ಅರ್ಜುನನಿಗೆ ಏನು ಅರ್ಥವಾಗಿದೆಯೋ ಆ ವಿಷಯವನ್ನು ಹೇಳುತ್ತಿದ್ದಾನೆ.

**(10) ಶ್ಲೋ॥ 17 : ಕಿರೀಟಿನಂ ಗದಿನಂ ಚಕ್ರಿಣಂ ಚ ತೇಜೋರಾಶಿಂ ಸರ್ವತೋದೀಪ್ತಿ ಮನ್ತಮ್ ।**
**ಪಶ್ಯಾಮಿ ತ್ವಾಂ ದುರ್ನಿರೀಕ್ಷಂ ಸಮನ್ತಾ ದ್ದೀಪ್ತಾನಲಾರ್ಕದ್ಯುತಿ ಮಪ್ರಮೇಯಮ್ ॥**
**(ಅಶಾಸ್ತ್ರೀಯ)**

**ಭಾವಾರ್ಥ** : ವಿಶ್ವರೂಪಕ್ಕೆ ಪ್ರತ್ಯೇಕಿಸಿ ಒಂದು ತಲೆ ಇಲ್ಲ. ಹಾಗೆ ಪ್ರತ್ಯೇಕಿಸಿ ಎರಡು ಕೈಗಳೂ ಸಹ ಇಲ್ಲ. ಆದ್ದರಿಂದ ಕಿರೀಟ ಧರಿಸುವುದು ಗದೆ, ಚಕ್ರವನ್ನು ಧರಿಸಿರುವುದೆಂಬ ಮಾತು ಅಶಾಸ್ತ್ರೀಯವಾಗಿ ಹೋಗುತ್ತಿದೆ. ಗದೆ, ಚಕ್ರ, ಕಿರೀಟ ದೇವತೆಗಳಲ್ಲಿನ ವಿಷ್ಣುವಿಗಿರಬಹುದು. ಆದರೆ ವಿಶ್ವರೂಪಕ್ಕೆ ಇರುವುದಿಲ್ಲ. ವಿಶ್ವರೂಪವನ್ನು, ವಿಷ್ಣುರೂಪವಾಗಿ ಗುರುತಿಸುವಂತೆ ಮಾಡುವ ಪ್ರಯೋಗವೇ ಈ ಶ್ಲೋಕವೆಂದು ಹೇಳಬಹುದು. ದೇವತೆಗಳಲ್ಲಿ ದೊಡ್ಡವನಾದ ವಿಷ್ಣುವಿಗು ದೇವತೆಗಳಿಗು ದೇವರಾದ ಪರಮಾತ್ಮನಿಗೆ ಬಹಳ ದೂರ ಭೇದವಿದೆಯೆಂದು ತಿಳಿಯಬೇಕು.

ಮೇಲೆ 16ನೇ ಶ್ಲೋಕದಲ್ಲಿ ಅನೇಕ ಬಾಹೂದರ ವಕ್ತ್ರನೇತ್ರಂ ಎಂದಾಗ ಅದಕ್ಕೆ ವಿರುದ್ಧವಾಗಿ ಕಿರೀಟನಂ ಗದಿನಂ ಚಕ್ರಿಣಂಚ ಎಂದು ಬರೆಯುವುದು ಸರಿ ಹೋಗುತ್ತದಾ? ಆದ್ದರಿಂದ ಈ ಶ್ಲೋಕವನ್ನು ತೆಗೆದುಹಾಕುವುದು ನಡೆದಿದೆ.

**(10) ಶ್ಲೋ॥ 18 : ತ್ವಮಕ್ಷರಂ ಪರಮಂ ವೇದಿತವ್ಯಂ ತ್ವ ಮಸ್ಯ ವಿಶ್ವಸ್ಯ ಪರಂ ನಿಧಾನಮ್ ।**
**ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ ಸನಾತನಸ್ತ್ವಂಪುರುಷೋ ಮತೋಮೇ ॥**
**(ನಿರಾಕಾರ)**

**ಭಾವಾರ್ಥ** : ನೀನು ಅಕ್ಷರನು. ಯೋಗ್ಯವಾದ ಪರನು ನೀನೇ. ವಿಶ್ವಕ್ಕೆ ಆಧಾರವಾದವನು ನೀನೆ. ಶಾಶ್ವತವಾದ ಅವ್ಯಯನು. ಧರ್ಮರಕ್ಷಕನು ನೀನೇ. ಪುರಾತನದಿಂದ ನೀನೆ ಪುರುಷನಾಗಿ ಇದ್ದೀಯೆಂದು ನಾನು ತಿಳಿಯುತ್ತಿದ್ದೇನೆ.

**ವಿವರ** : ಮೊದಲು ಒಳಗೆ ಕಾಣಿಸುವ ಆಕಾರವನ್ನು ಕುರಿತು ಹೇಳಿದ ಅರ್ಜುನನು, ಆ ಕಾಣಿಸುವುದು ಶ್ರೀಕೃಷ್ಣನೇ ಎಂದು ಒಂದುಬಾರಿ ಅನುಮಾನ ಇಲ್ಲದಂತೆ ನಿರ್ಣಯಕ್ಕೆ ಬಂದವನಾಗಿ, ನೀನು ನಾಶ ಇಲ್ಲದವನು ಎಂದನು. ಆ ದರ್ಶನದಲ್ಲಿಯೇ ಹೊರಗಿರುವ ಶ್ರೀಕೃಷ್ಣನೇ ಒಳಗೆ ಕಾಣಿಸುವ ವಿಶ್ವಾಕಾರ ಎಂದುಕೊಂಡ ಅರ್ಜುನನು, ಅಲ್ಲಿಯವರೆಗೂ ಕೇಳಿದ ಅಕ್ಷರನು ಈತನೇ ಎಂದು ತಿಳಿದವನಾಗಿ, ಮೋಕ್ಷವನ್ನು ಹೊಂದಲು ಕೋರಿದವರಿಗೆ ತಿಳಿಯುವಂತಹ ಪರಮಪದವು ನೀನೇ ಎಂದಿದ್ದಾನೆ. ಪರಮಾತ್ಮನಿಗಿರುವ ಅರ್ಹತೆಗಳೆಲ್ಲ

ಶ್ರೀಕೃಷ್ಣನಿಗೆ ಇವೆಯೆಂದು ತಿಳಿದವನಾಗಿ ನೀನೇ ಜಗತ್ತಿಗೆ ಆಧಾರ. ನೀನೇ ಧರ್ಮಸಂಸ್ಥಾಪಕನು, ಮೂಲಕರ್ತನು, ಪುರುಷೋತ್ತಮನು ಎಂದಿದ್ದಾನೆ.

**(10) ಶ್ಲೋ॥ 19 : ಅನಾದಿಮಧ್ಯಾನ್ತ ಮನನ್ತ ವೀರ್ಯಮನನ್ತ ಬಾಹುಂ ಶಶಿಸೂರ್ಯನೇತ್ರಮ್ ।**
**ಪಶ್ಯಾ ಮಿತ್ವಾಂ ದೀಪ್ತಹುತಾಶವಕ್ತ್ರಂ ಸ್ವತೇಜಸಾ ವಿಶ್ವಮಿದಂ ತಪನ್ತಮ್ ॥**
**(ನಿರಾಕಾರ)**

**ಭಾವಾರ್ಥ** : ಮೊದಲು, ಮಧ್ಯಮ, ಕೊನೆ ಇಲ್ಲದವನಾಗುತ್ತಾನೆ. ಅನಂತ ವೀರ್ಯನೂ (ಪುರುಷತ್ವವಿರುವವನು) ಅನಂತ ಬಾಹುಗಳುಳ್ಳವನೂ, ಸೂರ್ಯ ಚಂದ್ರರು ನೇತ್ರಗಳಾಗಿರುವವನಾಗುತ್ತಾನೆ, ಪ್ರಕಾಶಿಸುವ ಅಗ್ನಿಯಂತೆ ಮುಖ ಇರುವವನಾಗುತ್ತಾನೆ, ಸ್ವತೇಜಸ್ಸಿನಿಂದ ಜಗತ್ತನ್ನು ಸ್ತುತಿಸುವಂತೆ ಮಾಡುವವನಾದ ನಿನ್ನನ್ನು ನೋಡಿದೆನು.

**(10) ಶ್ಲೋ॥ 20 : ದ್ಯಾವಾಪೃಥಿವ್ಯೋರಿದಮನ್ತರಂಹಿ ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ**
**ದೃಷ್ಟ್ವಾ ಉದ್ಬುತಂರೂಪ ಮುಗ್ರಂತವೇದಂ ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ ॥**
**(ನಿರಾಕಾರ)**

**ಭಾವಾರ್ಥ** : ಭೂಮಿಗೂ, ಆಕಾಶಕ್ಕೂ, ಅವುಗಳೆರಡರ ಮಧ್ಯದಲ್ಲಿಯೂ ಮತ್ತು ದಿಕ್ಕುಗಳಿಗೆಲ್ಲವೂ ವ್ಯಾಪಿಸಿರುವೆ ನೀನು. ನೋಡುವುದಕ್ಕೆ ಅದ್ಭುತವಾಗಿಯು ಭಯಂಕರವಾಗಿರುವ ನಿನ್ನ ಆಕೃತಿಯಿಂದ ಮೂರು ಲೋಕಗಳು ಭಯಗೊಂಡಿವೆ.

**ವಿವರ** : ನೋಡುವುದಕ್ಕೆ ಭಯಂಕರವಾಗಿರುವ ವಿಶ್ವರೂಪದಿಂದ ಮೂರು ಲೋಕಗಳು ಭಯಗೊಂಡಂತೆ ಹೇಳಿದ್ದಾರೆ. ಇಲ್ಲಿ ನೋಡುವವನು ಅರ್ಜುನನೊಬ್ಬನೇ ಎಂದು ಮರೆಯಬಾರದು. ಮೂರುಲೋಕದಲ್ಲಿರುವವರು ನೋಡಲೂ ಇಲ್ಲ. ಯಾರು ಭಯಪಡಲೂ ಇಲ್ಲ. ಹಾಗಾದರೆ ಭಯಪಟ್ಟವರ್‍ಯಾರು? ಎನ್ನುವ ಪ್ರಶ್ನೆ ಬಾರದೆ ಇರುವುದಿಲ್ಲ. ಅದಕ್ಕೆ ಉತ್ತರ **ಲೋಕವೆಂದರೆ ಒಂದು ಗುಣಭಾಗವೆಂದು, ಮೂರುಲೋಕಗಳು ಎಂದರೆ ಮೂರು ಗುಣಭಾಗಗಳೆಂದು ತಿಳಿಯಬೇಕು**. ವಿಶ್ವರೂಪ ಜ್ಞಾನಸ್ವರೂಪವಾದುದು. ಆದ್ದರಿಂದ ಮೂರು ಗುಣಗಳ ಸಾರಾಂಶವಾದ **'ಮಾಯೆ'** ವಿಶ್ವರೂಪಕ್ಕೆ ಭಯಪಡುತ್ತದೆಂದೇ ಹೇಳಬಹುದು. ವಿಶ್ವರೂಪವು ಎಂದಿಗೂ ಇರುತ್ತದೆ ಮಾಯೆ ಎಂದಿಗೂ ಅದಕ್ಕೆ ಭಯಪಡುತ್ತಲೇ ಇರುತ್ತದೆ. ಅರ್ಜುನನು ಜ್ಞಾನನೇತ್ರದಿಂದ ನೋಡಿದ್ದಾನೆ ಆದ್ದರಿಂದ ಆ ವಿಷಯವೇ ಆತನಿಗೆ ಅರ್ಥವಾಗಿದೆ. ಅಷ್ಟೆಯಾಗಲಿ ಮೂರು ಲೋಕಗಳು ಎಂದರೆ ಯಾವೋ ಇವೆಯೆಂದು

ಊಹಿಸಿಕೊಳ್ಳಬಾರದು. ಅಷ್ಟೇ ಅಲ್ಲದೇ ಕೆಳಗಿನ ಶ್ಲೋಕದಲ್ಲಿ ಹೇಳುವ ಯಕ್ಷ, ಕಿನ್ನೆರ, ಕಿಂಪುರುಷ, ಗರುಡ, ಗಂಧರ್ವ, ಗುಣಾಧಿದೇವತೆಗಳು, ಸಿದ್ಧರು, ಸಾಧ್ವಿಗಳು, ದೇವತೆಗಳು, ರಾಕ್ಷಸರು ಎನ್ನುವ ಮೊದಲಾದ ಗುಂಪುಗಳೆಲ್ಲ ನಮಗೆ ಕಾಣಿಸುವ ಮಾನವ ಜಾತಿಯಲ್ಲಿರುವವೆ ಎಂದು ತಿಳಿಯಬೇಕು. ಇವರೆಲ್ಲರೂ ಅರ್ಜುನನು ನೋಡಿದಂತೆ ವಿಶ್ವರೂಪವನ್ನು ನೋಡಲಿಲ್ಲವೆಂದು ಮರೆಯಬಾರದು. ಕೆಳಗೆ 22ನೇ ಶ್ಲೋಕದಲ್ಲಿ **'ವೀಕ್ಷನ್ತೆ'** ಎಂಬ ಮಾತಿಗೆ ಪ್ರತ್ಯಕ್ಷವಾಗಿ ನೋಡುವುದೆಂದು ಅರ್ಥ ಮಾಡಿಕೊಳ್ಳಬಾರದು. ಜ್ಞಾನದ ಮೂಲಕ ತಿಳಿಯಲ್ಪಟ್ಟಿರುವುದು ಎಂದು ಅರ್ಥ ಮಾಡಿಕೊಳ್ಳಬೇಕು.

**(10) ಶ್ಲೋ॥ 21 : ಅಮೀಹಿತ್ವಾಂಸುರಸಂಘಾ ವಿಶನ್ತಿ ಕೇಚಿದ್ಭೀತಾಃ ಪ್ರಾಂಜಲಯೋ ಗೃಣನ್ತಿ**
**ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸಂಘಾಃ ಸ್ತುವನ್ತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ**
**(ನಿರಾಕಾರ)**

**(10) ಶ್ಲೋ॥ 22 : ರುದ್ರಾದಿತ್ಯಾವಸವೋಯೇಚಸಾಧ್ಯಾವಿಶ್ವೇಉಶ್ವಿನೌಮರುತಶ್ಚೋಷ್ಮಪಾಶ್ಚ।**
**ಗಂಧರ್ವ ಯಕ್ಷಾಸುರಸಿದ್ಧ ಸಂಘಾ ವೀಕ್ಷನ್ತೇ ತ್ವಾಂ ವಿಸ್ಮಿತಾಶ್ಚೈವಸರ್ವೇ ॥**
**(ನಿರಾಕಾರ)**

**ಭಾವಾರ್ಥ** : ದೇವತಾ ಸಮೂಹಗಳು ನಿನ್ನಲ್ಲಿ ಪ್ರವೇಶಿಸುತ್ತಿದ್ದಾರೆ. ಕೆಲವರು ಭಯದಿಂದ ನಿನ್ನನ್ನು ಮುಗಿಯುತ್ತಿದ್ದಾರೆ. ಸಿದ್ಧರಾದ ಮಹರ್ಷಿಗಳು ಸ್ವಸ್ತಿ ಹೇಳುತ್ತಾ ಸಂತಸವನ್ನು ಸ್ತುತಿಸುತ್ತಿದ್ದಾರೆ.

**ವಿವರ** : ದೇವತೆಗಳು ಕರ್ಮವೆಲ್ಲವನ್ನು ಮುಗಿಸಿಕೊಂಡು ಪರಮಾತ್ಮನಲ್ಲಿ ಸೇರುತ್ತಿದ್ದಾರೆ. ಕೆಲವರು ಮನುಜರು ದೇವರೊಬ್ಬನಿದ್ದಾನೆಂದು, ತಮ್ಮ ತಪ್ಪುಗಳಿಗೆ ಆತನು ಶಿಕ್ಷಿಸುತ್ತಾನೆಂದು ತಿಳಿದವರಾಗಿ, ಭಕ್ತಿಯಿಂದಲ್ಲದೆ ಭಯದಿಂದ ಮುಗಿಯುತ್ತಿದ್ದಾರೆ. ಮತ್ತೆ ಕೆಲವರು ಮೋಕ್ಷ ಹೊಂದುವುದಕ್ಕೆ ಆರ್ಹರಾದ ಋಷಿಗಳು **ಸ್ವಸ್ತಿ ಎಂದರೆ ಮುಗಿದು ಹೋಗಿರುವುದೆಂದು ಅರ್ಥಬರುವಂತೆ ಹೇಳುತ್ತಾ ಸ್ತುತಿಸುತ್ತಿದ್ದಾರೆ. ಸ್ವಸ್ತಿ ಎನ್ನುವ ಪದವು ಸ್ವಾಹ ಎಂಬ ಪದಕ್ಕೆ ಹತ್ತಿರ ಸಂಬಂಧವಾದುದು. ಇವುಗಳಿಗೆ ಸರಿಯಾದ ಪದ ಗೋವಿಂದ ಎಂದೂ ಸಹ ಹೇಳಬಹುದು.** ತಿಳಿದವರು ಇಹದಲ್ಲಿ ಎಲ್ಲಾ ಕರ್ಮಗಳು ಮುಗಿಸಿಕೊಂಡು ನಾವು ನಿನ್ನ ಹತ್ತಿರಕ್ಕೆ ಬರುವುದಕ್ಕೆ ಸಿದ್ಧವಾಗಿ ಇದ್ದೇವೆಂದು ತಿಳಿಸುತ್ತಾ ಸ್ವಸ್ತಿ ಎಂದಾಗಲಿ, ಗೋವಿಂದ ಎಂದಾಗಲಿ ಸ್ತುತಿಸುತ್ತಿದ್ದಾರೆ. ಕೆಲವರು ಹಾಗೆ ಇದ್ದರೆ ಮತ್ತು ಕೆಲವರಾದ ರುದ್ರರು, ಆದಿತ್ಯರು, ಗುಣಾಧಿ ದೇವತೆಗಳು, ಸಾಧ್ವಿಗಳು, ಅಶ್ವಿನಿದೇವತೆಗಳು, ಗಂಧರ್ವರು, ಯಕ್ಷರು,

ರಾಕ್ಷಸರು, ದೇವತೆಗಳು ಸಿದ್ಧರು ಎನ್ನುವವರು ಆಶ್ಚರ್ಯವಾಗಿ ಪರಮಾತ್ಮನನ್ನು ಕುರಿತು ಆತನ ಯೋಗವನ್ನು ಕುರಿತು ಆಲೋಚಿಸುತ್ತಿದ್ದಾರೆ.

**(10) ಶ್ಲೋ॥ 23 : ರೂಪಂಮಹತ್ತೇ ಬಹುವಕ್ತ್ರನೇತ್ರಂ ಮಹಾಬಾಹೋ! ಬಹುಬಾಹೂ ರುಪಾದಮ್।**
**ಬಹೂದರಂ ಬಹುದಂಷ್ಟ್ರಾಕರಾಳಂ ದೃಷ್ಟ್ವಾ ಲೋಕಾಹ ಪ್ರವ್ಯಥಿತಾ ಸ್ತಥಾಽಹಮ್ ॥**
**(ನಿರಾಕಾರ)**

**ಭಾವಾರ್ಥ :** ಬಹುಮುಖಗಳು, ನೇತ್ರಗಳು ಅನೇಕವಾದ ಬಾಹುಗಳು, ತೊಡೆಗಳು, ಪಾದಗಳು ಇರುವುದೆಂದು, ಅನೇಕ ಭಯಂಕರವಾದ ಕೋರೆಗಳಿರುವ ನಿನ್ನ ಮುಖವನ್ನು ನೋಡುವುದರಿಂದ ಲೋಕಸ್ತರೆಲ್ಲರೂ ಭಯಪಟ್ಟಿದ್ದಾರೆ. ಮತ್ತು ನಾನೂ ಸಹ ಭಯಪಡುತ್ತಿದ್ದೇನೆ.

**ವಿವರ :** ಪ್ರಪಂಚದಲ್ಲಿನ ಎಲ್ಲಾರ ಆಕಾರಗಳು ಪರಮಾತ್ಮನವೇ ಆಗಿ ಒಂದು ರೂಪದಲ್ಲಿ ಕಾಣಿಸುವುದರಿಂದ, ಸಹಜವಾಗಿ ಯಾರು ಎಲ್ಲಿಯೂ ನೋಡದ ಅಸಾಧಾರಣ ರೂಪವನ್ನು ನೋಡುವುದರಿಂದ ಅರ್ಜುನನಿಗೆ ಭಯ ಉಂಟಾಗಿದೆ. ಭಯಂಕರವಾದ ಕೋರೆಗಳಿರುವ ಮುಖವೆನ್ನುವುದರಲ್ಲಿ ಸ್ವಲ್ಪ ಅರ್ಥವಿದೆ. ಪರಮಾತ್ಮನಿಗೆ ಪ್ರತ್ಯೇಕಿಸಿ ಕೋರೆಗಳಿರುವ ಮುಖವಿಲ್ಲ. ಆತನಿಗೆ ನಮ್ಮಂತೆ ಮುಖವಿದ್ದರೆ ಕಾಲು ಕೈಗಳಿದ್ದು ಸ್ವಲ್ಪ ಪರಿಧಿ ಇರುವ ಆಕಾರವೇ ಏರ್ಪಡುತ್ತದೆ. ವಾಸ್ತವವಾಗಿ ಪರಮಾತ್ಮನಿಗೆ ಪರಿಧಿ ಇರುವ ರೂಪವಿಲ್ಲ. ಆದ್ದರಿಂದ ಆತನಿಗೆ ಮುಖ ಅದರಲ್ಲಿನ ಕೋರೆಗಳು ಅಸಲಿಗಿಲ್ಲ. ನೀವು ಮುಖವೇ ಇಲ್ಲ ಎನ್ನುತ್ತಿದ್ದೀರಾ ಶ್ಲೋಕದಲ್ಲಿ ***'ಬಹುದಂಷ್ಟ್ರಾಕರಾಳಂ'*** ಅನೇಕವಾದ ಭಯಂಕರ ಕೋರೆಗಳು ಎಂಬ ಮಾತನ್ನು ಉಪಯೋಗಿಸಿ ಹೇಳಲಾಗಿದೆ ಅಲ್ಲವೇ! ಎಂದು ಕೇಳಬಹುದು. ನಿಜವೇ ಆ ಮಾತು ಇಲ್ಲಿ ಉಪಯೋಗಿಸುವುದರಲ್ಲಿ ಸಾಮಾನ್ಯ ಅರ್ಥವಲ್ಲದೆ ವಿಶೇಷಾರ್ಥವಿದೆ ಎಂದು ತಿಳಿಯಬೇಕಾಗಿದೆ. ಆ ವಿಶೇಷಾರ್ಥ ಏನೆಂದರೆ!

ಸಾಧಾರಣವಾದ ಆಕಾರವಾಗಿ ಎಲ್ಲರಂತೆ ಕಾಲು, ಕೈಗಳು, ತಲೆ, ಮುಖವಿದ್ದರೆ ಅದು ಸಾಧಾರಣ ಕಣ್ಣುಗಳಿಗೇ ಕಾಣಿಸುವುದು. ಅಲ್ಲಿ ಕಾಣಿಸುವ ದೃಶ್ಯವು ಅಸಾಧಾರಣ ವಾದುದು. ಕಣ್ಣುಗಳಿಂದ ನೋಡುವ ದೃಶ್ಯ ಇರುವಂತಿರುವುದಿಲ್ಲ. ಆದ್ದರಿಂದ ಯಾರೂ ನೋಡಲಾರದ್ದನ್ನು ನಿನಗೆ ತೋರಿಸುತ್ತಿದ್ದೇನೆಂದು ಶ್ರೀಕೃಷ್ಣನು ಹೇಳಿದ್ದಾನೆ. ಆ ದೃಶ್ಯ ಕಾಲವು ಮತ್ತು ಪ್ರಪಂಚಪರಿಮಾಣಗಳ ಎರಡನ್ನೂ ಬೆರಸಿಕೊಂಡು ಇದೆಯೆಂದು ಮುಖ್ಯವಾಗಿ

ತಿಳಿಯಬೇಕು. ನಡೆಯುತ್ತಿರುವ ಪ್ರಸ್ತುತ ಕಾಲವು, ನಡೆಯುವ ಪ್ರಪಂಚ ಪ್ರಸ್ತುತ ಪರಿಮಾಣಗಳ ಕೂಡಿಕೆಯಾದ ಆ ಆಕೃತಿ ವರ್ಣನಾತೀತ. **ಪ್ರಪಂಚ ಅಳತೆಗಳ ಬಗ್ಗೆ ಯಾವ ಖಗೋಳಶಾಸ್ತ್ರಜ್ಞರು ಇದುವರೆಗೂ ಹೇಳಲಿಲ್ಲ. ಹೇಳುತ್ತಾರೆಂಬ ನಂಬಿಕೆಯೂ ಇಲ್ಲ. ಕಾಲಕ್ಕೆ ಸೆಕೆಂಡುಗಳಿಂದ ಗಂಟೆಗಳ ವರೆಗೂ ಅಳತೆಯನ್ನು ಕಂಡುಹಿಡಿದವರು ಅಸಲು ಕಾಲ ಎಂದರೆ ಏನೊ ಹೇಳಲಾರದೆ ಹೋಗಿದ್ದಾರೆ.** ಬೇರೆ ಬೇರೆಯಾಗಿ ಅವಗಾಹನೆ ಆಗದ ಪ್ರಪಂಚ ಅಳತೆ ಮತ್ತು ಕಾಲ ಎರಡು ಸೇರಿರುವುದನ್ನು ಒಂದೇಬಾರಿ ದೃಶ್ಯರೂಪವಾಗಿ ಕಾಣಿಸಿದರು ನೋಡಿ ಗ್ರಹಿಸುವುದಕ್ಕೆ ಸಾಧ್ಯವಾಗುತ್ತದಾ? ಪ್ರಪಂಚದಲ್ಲಿ ಯಾರಿಗೂ ಅವಗಾಹನೆಯಾಗದ ಆ ದೃಶ್ಯವನ್ನು ಅರ್ಜುನನು ನೋಡುವುದು ದೊಡ್ಡ ಅದೃಷ್ಟವೆಂದು ಹೇಳಬಹುದು.

ಈಗ ಅಸಲು ವಿಷಯಕ್ಕೆ ಬರೋಣ. ಯಾವ ಜೀವರಾಶಿಗಾದರು ಬಾಯಲ್ಲಿನ ಕೋರೆಗಳು ಅವುಗಳಿಗೆ ಪ್ರತ್ಯೇಕವಾದ ಅಯುಧಗಳೆಂದು ಹೇಳಬಹುದು. ಸುಮಾರು ಸಮಸ್ತ ಜಂತುಜಾಲಗಳಿಗೆ ಕೋರೆಗಳು ಆಯುಧಗಳಾಗಿ ಉಪಯೋಗಪಡುತ್ತಿವೆ. ಒಂದು ಪ್ರಾಣಿ ಮತ್ತೊಂದು ಪ್ರಾಣಿಯನ್ನು ಬೇಟೆಯಾಡಿ ಹಿಂಸಿಸುವುದರಲ್ಲಿ ಅವುಗಳ ಬಾಯಲ್ಲಿನ ಕೋರೆಗಳು ಪ್ರಧಾನ ಪಾತ್ರವಹಿಸುತ್ತಿವೆ. ಹಾಗೆ ಹೆಚ್ಚಾಗಿ ಹಿಂಸೆಗೆ ಉಪಯೋಗಪಡುವ ಕೋರೆಗಳು ಭಯಂಕರವಾದವೆಂದು ಹೇಳಬಹುದು. ಅಷ್ಟೇ ಅಲ್ಲದೆ ಒಂದು ಆಕಾರವನ್ನು ಪೂರ್ತಿಯಾಗಿ ನುಜ್ಜು ಮಾಡಿ, ಅದರ ಆಕೃತಿಯನ್ನು ಪೂರ್ತಿಯಾಗಿ ಬದಲಾಯಿಸುವವು ದಂತಗಳು. ಇರುವ ಆಕಾರವನ್ನು ಇಲ್ಲದಂತೆ ಮಾಡುವುದರಲ್ಲಿಯೂ, ಒಂದು ಜೀವರಾಶಿಯನ್ನು ಹಿಂಸಿಸುವುದರಲ್ಲಿಯೂ ಪ್ರಧಾನಪಾತ್ರ ಹೊಂದಿರುವ ದಂತಗಳು ಭಯಂಕರವಾದವೆ ಆಗುತ್ತವೆ. ಭೂಮಿ ಮೇಲೆ ಜೀವರಾಶಿಗಳಿಗಿರುವ ಸ್ವಲ್ಪ ಪರಿಮಾಣವಿರುವ ದಂತಗಳೆ ಭಯಂಕರವಾದವುಗಳಾಗಿರುವಾಗ, ಕಾಲದೊಂದಿಗೆ ಪರಿಮಾಣದೊಂದಿಗೆ ಬೆರೆತಿರುವ ಆ ಆಕೃತಿವೊಂದರ ದಂತಗಳೆಷ್ಟು ಭಯಂಕರವಾಗಿ ಇರುತ್ತವೊ! ವಿಶ್ವರೂಪಕ್ಕಿರುವ ಕಾಲಪರಿಮಾಣದೊಂದಿಗೆ ಸೇರಿರುವ ದಂತಗಳೇಗಿರುತ್ತವೊ, ಅವುಗಳ ಅವಗಾಹನೆ ಅರ್ಜುನನಿಗೆ ಹೇಗಾಗಿದೆಯೋ, ಸ್ವಲ್ಪ ಯೋಚಿಸಿ ನಮ್ಮ ಯೋಚನಾದೃಷ್ಟಿಗೆ ಸಿಕ್ಕಿರುವುದನ್ನು ತಿಳಿದುಕೊಳ್ಳೋಣ.

ಜೀವರಾಶಿಗಳು ಎಲ್ಲಿ ಮರಣಿಸುತ್ತಿವೆಯೋ ಅಲ್ಲಿ ಪರಮಾತ್ಮ ಕೋರೆಗಳಲ್ಲಿ ನಲುಗಿದಂತೆ. ಎಲ್ಲಿ ಜೀವರಾಶಿಗಳ ಶರೀರಗಳು ನಶಿಸಿ ಮೃತ್ಯು ಬಾಯಲ್ಲಿ ಬೀಳುತ್ತಿವೆಯೋ, ಅಲ್ಲಿ ಪರಮಾತ್ಮ ಕೋರೆಗಳಲ್ಲಿ ನಲುಗಿದಂತೆ. ಎಲ್ಲಿ ಅಪಘಾತಗಳ ಕಾರಣದಿಂದ ಜೀವಿಗಳ ಶರೀರಗಳು ನಲುಗಿ ಹೋಗುತ್ತಿವೆಯೋ, ತುಂಡು ತುಂಡುಗಳಾಗುತ್ತಿವೆಯೋ, ಅಲ್ಲಿ

ಪರಮಾತ್ಮ ಕೋರೆಗಳಲ್ಲಿ ನಲುಗಿಹೋದಂತೆ ಎಂದು ತಿಳಿಯಬೇಕು. ಒಂದು ಲೆಕ್ಕಪ್ರಕಾರ ಮೃತ್ಯುವನ್ನೇ ಪರಮಾತ್ಮನ ಬಾಯಿ ದಂತಗಳೆಂದುಕೊಳ್ಳೋಣ. ಎಷ್ಟೋ ವಿಧಗಳ ಮೃತ್ಯುಗಳು ಎಷ್ಟೋ ಭಯಂಕರವಾಗಿರುತ್ತವೆ. ಆದ್ದರಿಂದ ಆತನ ಕೋರೆಗಳು ಭಯಂಕರವಾಗಿವೆಯೆಂದು ತಿಳಿಯಬೇಕು. ಈ ಒಂದು ಆಧಾರವನ್ನನುಸರಿಸಿ ಅರ್ಜುನನು ನೋಡಿದ ರೂಪವು ಪ್ರತ್ಯೇಕವಾದುದೆಂದು ತಿಳಿಯುತ್ತಿದೆ. ಆ ರೂಪಕ್ಕೆ ನಮ್ಮಂತೆ ಶರೀರವಿಲ್ಲವೆಂದು, ನಮಗಿರುವಂತೆ ನಿಯಮಿತ ಸ್ಥಾನಗಳಂತೆ ಕಾಲು ಕೈಗಳಿಲ್ಲವೆಂದು ಅರ್ಥವಾಗುತ್ತಿದೆ, ಒಂದೊಂದು ಬಾರಿ ನಡೆಯುವ ದೊಡ್ಡ ಅಪಘಾತಗಳಲ್ಲಿ ಕೆಲವು ಸಾವಿರಾರು ಜನರು ನೂರಾರು ಜನರು ಮರಣಿಸುವ ಸಂಘಟನೆಗಳು ಭಯಂಕರವಾಗಿರುತ್ತವೆ. ಇಂತಹ ಭಯಂಕರಗಳನ್ನು ನೋಡಿ ಪ್ರಜೆಗಳು ಭಯಪಡುತ್ತಿದ್ದಾರೆನ್ನುವುದನ್ನೇ, ನಿನ್ನನ್ನು ನೋಡಿ ಪ್ರಜೆಗಳು ಭಯ ಪಡುತ್ತಿದ್ದಾರೆಂದು ಅರ್ಜುನೆಂದಿದ್ದಾನೆ.

**(10) ಶ್ಲೋ॥ 24 : ನಭಃಸ್ಪೃಶಂ ದೀಪ್ತಮನೇಕವರ್ಣಂ ವ್ಯಾತ್ತಾನನಂ ದೀಪ್ತವಿಶಾಲ ನೇತ್ರಮ್।**
**ದೃಷ್ಟ್ವಾ ಹಿತ್ವಾಂ ಪ್ರವ್ಯಥಿತಾ ನ್ತರಾತ್ಮಾಧೃತಿಂ ನ ವಿನ್ದಾಮಿ ಶಮಂ ಚ ವಿಷ್ಣೋ! ॥**
**(ನಿರಾಕಾರ)**

**(10) ಶ್ಲೋ॥ 25 : ದಂಷ್ಟ್ರಾಕರಾಳಾನಿಚತೇಮುಖಾನಿ ದೃಷ್ಟ್ವೈವಕಾಲಾನಲಸನ್ನಿಭಾನಿ**
**ದಿಶೋನ ಜಾನೇ ನ ಲಭೇ ಚ ಶರ್ಮ ಪ್ರಸೀದ ದೇವೇಶ !ಜಗನ್ನಿವಾಸ! ॥**
**(ನಿರಾಕಾರ)**

**ಭಾವಾರ್ಥ** : ಆಕಾಶದವರೆಗೂ ವ್ಯಾಪಿಸಿರುವ ಅನೇಕ ಬಣ್ಣಗಳಿರುವವನು, ತೆರೆದಬಾಯಿ ಇರುವವನು, ಪ್ರಕಾಶಿಸುತ್ತಿರುವ ವಿಶಾಲ ನೇತ್ರಗಳು ಇರುವವನಾದ ನಿನ್ನನ್ನು ನೋಡುವುದರಿಂದ ನನ್ನಲ್ಲಿ ಭಯ, ದುಃಖ ಉಂಟಾಗುತ್ತಿದೆ. ಶಾಂತಿ, ಧೈರ್ಯ ಇಲ್ಲದಂತೆಹೋಗಿದೆ. ಭಯಂಕರವಾಗುವ ಕೋರೆಗಳಿರುವ ನಿನ್ನ ಮುಖವು ಕಾಲಾಗ್ನಿಯಂತೆ ಕಾಣಿಸುತ್ತಿದೆ. ಅದನ್ನು ನೋಡುವುದರಿಂದ ದಿಕ್ಕು ತೋಚಲಿಲ್ಲ, ಸಂತೋಷ ತಿಳಿಯಲಿಲ್ಲ.

**ವಿವರ** : ಅಸಾಧಾರಣವಾದ ಆ ರೂಪವು ಅರ್ಜುನನಿಗೆ ಆಕಾಶದವರೆಗೂ ಕಾಣಿಸುತ್ತಿದೆ. ಆಕಾಶದವರೆಗೂ ವ್ಯಾಪಿಸುವ ಅನೇಕ ಬಣ್ಣಗಳು, ಕಾಂತಿಗಳು, ಇಂದ್ರಧನಸ್ಸು, ಮೇಘಗಗಳ ಆಕೃತಿಗಳು ಎಲ್ಲಾ ಆತನ ರೂಪವಾಗಿ ಕಾಣಿಸುತ್ತಿವೆ. ಆಕಾಶದಲ್ಲಿ ತುಫಾನ್(ಚಂಡಮಾರುತ) ಮುಂದಿನ ವಾತಾವರಣ, ಕಪ್ಪನೆಯ ಮೋಡಗಳು ಮುಚ್ಚಿಕೊಂಡು ಬರುವುದು, ಸೂರ್ಯಪ್ರಕಾಶವೇ ದೃಷ್ಟಿಯಾಗಿ, ಮೃತ್ಯುವನ್ನು ಆಹ್ವಾನಿಸುವ ಸಂಘಟನೆಗಳೇ ಮುಖದ್ವಾರವಾಗಿ ಮೊದಲಾದ ದೃಶ್ಯಗಳೆಲ್ಲ ಆ ರೂಪದಲ್ಲಿ ಕಾಣಿಸುವುದರಿಂದ ಅರ್ಜುನನು

ಭಯಪಡಸಾಗಿದನು. ಧೈರ್ಯ ಇಲ್ಲದಂತೆ ಹೋಗಿದೆ, ಆಪತ್ತಿನ ಸಮಯದಲ್ಲಿ ಉಂಟಾಗುವ ಭೀತಿ ಉಂಟಾಗಿದೆ. ಅನೇಕ ಭಯಂಕರ ಮೃತ್ಯು ಸಂಘಟನೆಗಳೆ ಅನೇಕ ಕೋರೆಗಳಾಗಿ ಕಾಣಿಸಿದಾಗ, ಕಾಲವೇ ಅಗ್ನಿಯಾಗಿ ತೋಚಿದಾಗ, ಮೃತ್ಯುವೇ ಮುಖದ್ವಾರವಾಗಿ, ತೆರೆದ ಬಾಯಿಯಂತೆ, ಜ್ಞಾನದೃಷ್ಟಿಗೆ ತಿಳಿದಾಗ ಅರ್ಜುನನಿಗೆ ಪೂರ್ತಿಭಯ ಏರ್ಪಟ್ಟಿದೆ. ಅಗ್ನಿ ಎಂದರೆ ಎಲ್ಲವನ್ನು ಸುಟ್ಟು ಅವುಗಳ ಹೆಸರು ರೂಪ ಇಲ್ಲದಂತೆ ಮಾಡುವುದು. ಕಾಲವು ಅಗ್ನಿಯಂತೆ ಇದೆ. ಈ ಕಾಲಾಗ್ನಿ ಈ ದಿನ ಇರುವವನನ್ನು ನಾಳೆಗೆ, ನಿನ್ನೆ ಇರುವವನನ್ನು ಈ ದಿನಕ್ಕೆ ಇಲ್ಲದಂತೆ ಮಾಡುತ್ತಿದೆ. ಕಾಲವೆಂಬ ಅಗ್ನಿಯಲ್ಲಿ ಎಷ್ಟೋಜನ ಸುಟ್ಟು ಕಣ್ಮರೆಯಾಗಿಹೋಗಿದ್ದಾರೆ. ನಡೆಯುವ ಕಾಲದಲ್ಲಿ ಪ್ರತಿದಿನ ಎಷ್ಟೋಜನ ಮೃತ್ಯು ಹೊಂದಿ ಕಾಣಿಸದೆ ಹೋಗುವ ವಿಧಾನವೇ ತೆರೆದ ಬಾಯಿಯಂತೆ, ಕಾಣಿಸುವ ಕೋರೆಗಳಾಗಿ ಅರ್ಥವಾಗುತ್ತಿದೆ. ಮೃತ್ಯು ಎಲ್ಲಾ ವೇಳೆಯಲ್ಲಿ ಕಾದುಕೊಂಡಿರುವುದೇ ತೆರೆದ ಬಾಯೆಂದು, ನಡೆಯುವ ಅಪಾಯಗಳೆ ಕೋರೆಗಳೆಂದು, ನಡೆದ ಕಾಲವೆ ಕಾಲಗರ್ಭವೆಂದು, ಆತನ ಜಠರ(ಹೊಟ್ಟೆ)ವೆಂದು ಅರ್ಜುನನಿಗೆ ಅರ್ಥವಾಗಿದೆ. ನಮ್ಮ ಕಣ್ಣೆದುರಿಗೆ ಅಪಘಾತ ನಡೆದು ಪ್ರಾಣನಷ್ಟವಾದರೇನೆ ನಾವು ನೋಡಲಾರೆವು ಅಲ್ಲವೆ! ಕಾಣಿಸುವ ಗಾಯಗಳಿಂದ ಬಾಧೆಪಡುವವರನ್ನು ನೋಡಿ ಮನಸ್ಸಿಗೆ ನೋವು ಉಂಟಾಗುವುದು ಸಹಜವೆ. ಚಿಕ್ಕ ಸಂಘಟನೆಗಳನ್ನೇ ನೋಡುವುದು ಕಷ್ಟವಾದಾಗ ಅರ್ಜುನನು ಜಗತ್ತಿನಲ್ಲಿ ನಡೆಯುತ್ತಿರುವ ಮೃತ್ಯು ಸಂಘಟನೆಗಳೆಲ್ಲವನ್ನೂ ಒಂದೇಬಾರಿ ನೋಡುವುದರಿಂದ ದಿಗ್ಭ್ರಾಂತನಾಗಿದ್ದಾನೆ. ಮನಸ್ಸು ಚಂಚಲವಾಗಿಹೋಗಿದೆ. ದಿಕ್ಕು ತಿಳಿಯಲಿಲ್ಲ ಎಂದನು. ಇನ್ನೂ ಏನೆನ್ನುತ್ತಿದ್ದಾನೆಂದರೆ! ಕೆಳಗಿನ ಶ್ಲೋಕದಲ್ಲಿ ನೋಡಿರಿ.

**(10) ಶ್ಲೋ॥ 26 : ಅಮೀಚತ್ವಾಂಧೃತರಾಷ್ಟ್ರಸ್ಯಪುತ್ರಾಃಸರ್ವೇಸಹೈವಾವನಿಪಾಲಸಂಘೈಃ ।**
**ಭೀಷ್ಮೋ ದ್ರೋಣಸ್ಸೂತಪುತ್ರಸ್ತಥಾಽಸೌ ಸಹಾಸ್ಮದೀಯೈರಪಿ ಯೋಧಮುಖ್ಯೈ॥**
**(ನಿರಾಕಾರ)**

**(10) ಶ್ಲೋ॥ 27 : ವಕ್ತ್ರಾಣಿತೇತ್ವರಮಾಣಾ ವಿಶನ್ತಿ ದಂಷ್ಟ್ರಾಕರಾಳಾನಿಭಯಾನಕಾನಿ ।**
**ಕೇಚಿದ್ವಿಲಗ್ನಾ ದಶನಾ ನ್ತರೇಷು ಸಂದೃಶ್ಯನ್ತೇ ಚೂರ್ಣಿತೈರುತ್ತಮಾಂಗೈಃ ॥**
**(ನಿರಾಕಾರ)**

**ಭಾವಾರ್ಥ** : ಧೃತರಾಷ್ಟ್ರ ಪುತ್ರರಾದ ದುರ್ಯೋಧನಾದಿಗಳೆಲ್ಲರೂ, ಉಳಿದ ರಾಜರ ಸಮೂಹ, ಭೀಷ್ಮನು, ದ್ರೋಣನು, ಕರ್ಣನು ಈ ಕಡೆ ನಮ್ಮ ಯುದ್ಧವೀರರಾದ ಮುಖ್ಯಸ್ಥರು

ಎಲ್ಲರೂ ವೇಗವಾಗಿ ಭಯಂಕರವಾಗಿರುವ ನಿನ್ನ ಮುಖಗಳ ಕೋರೆಗಳಲ್ಲಿ ಪ್ರವೇಶಿಸುತ್ತಿದ್ದಾರೆ. ಕೆಲವರೇನೋ ಕೋರೆಗಳ ಮಧ್ಯ ಸಿಕ್ಕಿಕೊಂಡು ನುಚ್ಚುನೂರು ಮಾಡಲ್ಪಟ್ಟವರಂತೆ ತಲೆಗಳು ಮಾತ್ರ ಕಾಣಿಸುತ್ತಿವೆ.

**ವಿವರ** : ಈ 27ನೇ ಶ್ಲೋಕದಲ್ಲಿ ಎಷ್ಟೋ ವಿವರ ತಿಳಿಯಬೇಕಾಗಿದೆ. ಈ ಅಧ್ಯಾಯದಲ್ಲಿ ಈ 27ನೇ ಶ್ಲೋಕವೇ ಬಹಳ ಮುಖ್ಯವಾದುದೆಂದು ಹೇಳಬಹುದು. ವಿಶ್ವರೂಪವೊಂದರ ಅವಗಾಹನೆ ಅಷ್ಟೋ ಇಷ್ಟೋ ಇದರಲ್ಲಿಯೇ ತಿಳಿಯಬೇಕಾಗಿದೆ. ಆದ್ದರಿಂದ ಜಾಗ್ರತೆಯಾಗಿ ತಿಳಿದುಕೊಳ್ಳಬೇಕೆಂದು ತಿಳಿಸುತ್ತಿದ್ದೇವೆ.

ಅಲ್ಲಿ ಯುದ್ಧದಲ್ಲಿರುವ ಎರಡುಕಡೆಯ ಸೈನ್ಯದಲ್ಲಿರುವವರು ಭೀಕರ ಭಯಾನಕವಾದ ಮುಖದಲ್ಲಿನ ಬಾಯಿಯಲ್ಲಿ ವೇಗವಾಗಿ ಪ್ರವೇಶಿಸುತ್ತಿರುವುದು ಅರ್ಜುನನು ತಿಳಿದುಕೊಂಡಿದ್ದಾನೆ. ಸೈನ್ಯಗಳು ಎರಡು ಯುದ್ಧ ಮಾಡುತ್ತಿರುವಾಗ, ಆಕಡೆ ಈಕಡೆಯಿಂದ ಎಷ್ಟೋಜನ ಸೈನಿಕರು ರಾಜರು ಮರಣಿಸುವುದು ನಡೆಯುತ್ತಿದೆ. ಇವರೇ ಅಲ್ಲದೆ ಭೂಮಿ ಮೇಲೆ ಎಷ್ಟೋಜನ ಆ ಸಮಯದಲ್ಲಿ ಮರಣಿಸುವುದು ನಡೆಯುತ್ತಿದೆ. ಮರಣಿಸುವವರೆಲ್ಲರೂ ಪರಮಾತ್ಮ ಬಾಯೊಳಗೆ ವೇಗವಾಗಿ ಹೋದಂತೆ ಅರ್ಜುನನಿಗೆ ತಿಳಿಯುತ್ತಿದೆ. ಮೃತ್ಯು ಗುಹೆಯಂತಿರುವ ಬಾಯಲ್ಲಿ ಭಯಂಕರವಾದ ಕೋರೆಗಳಲ್ಲಿ ಜಗಿದು ನುಜ್ಜುನುಜ್ಜಾದವರಾಗಿ, ಪರಮಾತ್ಮ ಗರ್ಭವಾದ ಕಾಲಗರ್ಭದೊಳಗೆ ಜಾರಿ ಕಾಣಿಸದಂತೆ ಹೋಗುತ್ತಿದ್ದಾರೆ. ಹಾಗೆಯೇ ಪ್ರತಿಕ್ಷಣ ಪರಮಾತ್ಮ ಕಾಲವಾಗಿ ತನ್ನ ಗರ್ಭದೊಳಗೆ ನುಂಗಿಹಾಕುತ್ತಿದ್ದಾನೆ. ಆಹರ್ನಿಶೆಗಳು ಹಾಗೆ ನಡೆಯುತ್ತಲೇ ಇದೆ. ಹಾಗೆ ಜೀವರಾಶಿಗಳು ಚೂರ್ಣವಾಗಿ ಕಾಣಿಸದಂತೆ ಹೋಗಿ ಈ ಪ್ರಕ್ರಿಯೆಯಲ್ಲಿ ಕೆಲವರು ಮೃತ್ಯು ಕೋರೆಗಳಲ್ಲಿ ನಲುಗಿ ಕಾಲಗರ್ಭದಲ್ಲಿ ಸೇರಿ ಹೋದರೂ, ಅವರ ಶರೀರಗಳು ಕಾಣಿಸದೇ ಹೋದರೂ, ಅವರ ತಲೆಗಳು ಕೋರೆಗಳ ಮಧ್ಯದಲ್ಲಿ ಸಿಕ್ಕಿಕೊಂಡು ಇಂತಹವರವೆಂದು ಗುರುತಿಸುವಂತೆ ಕಾಣಿಸುತ್ತಲೇ ಇವೆ. ಎಷ್ಟೋಜನ ಮೃತ್ಯು ಕುಹೂರದಲ್ಲಿ ಪ್ರವೇಶಿಸುತ್ತಾ ಕೋರೆಗಳಿಂದ ಜಗಿಯಲ್ಪಟ್ಟು ಏನೂ ತಿಳಿಯದಂತೆ ಅವರ ಅಡ್ರಸ್ ಇಲ್ಲದಂತೆ ಕಾಲಗರ್ಭದಲ್ಲಿ ಬೆರೆತುಹೋಗುತ್ತಿದ್ದಾರೆ. ಅಂತಹ ಭಯಂಕರ ಕಾಲದ ಮುಖದಲ್ಲಿ ಮೃತ್ಯುಕೋರೆಗಳ ಮಧ್ಯದಲ್ಲಿ ಸಿಲುಕಿಕೊಂಡು ಮರಣಿಸಿದರೂ, ಅವರ ಶರೀರಗಳು ಕಾಲಾಗ್ನಿಯಲ್ಲಿ ಸುಟ್ಟುಹೋದರೂ, ಹಲ್ಲಿನ ಮಧ್ಯದಲ್ಲಿ ಸಿಲುಕಿಕೊಂಡು ಗುರುತು ಹೊಂದಿದ ತಲೆಗಳು ಕೆಲವು ಇರುವುದು ವಿಶೇಷ. ಆ ದಿನ ಅರ್ಜುನನಿಗೆ ಅಲ್ಲದೆ ನಮಗೂ ಸಹ ಕೆಲವರು

ಕೋರೆಗಳ ಮಧ್ಯ ಸಿಲುಕಿಕೊಂಡವರು ಕಾಣಿಸುತ್ತಿದ್ದಾರೆ. ನನಗೇ ಅಲ್ಲ ಮನೋನೇತ್ರ ತೆರೆದು ನೋಡಿದರೆ ನಿಮಗೂ ಕಾಣಿಸುತ್ತಾರೆ.

ನಿತ್ಯವು ಕೋಟಿ ಸಂಖ್ಯೆಯಲ್ಲಿ ಜೀವಿಗಳು ಮರಣ ಹೊಂದುತ್ತಿವೆ. ಹೀಗೆ ನಿತ್ಯ ನಡೆಯುವುದು ಎಲ್ಲರ ದೃಷ್ಟಿಗೆ ತಿಳಿದ ವಿಷಯವೇ. ಮರಣಿಸುತ್ತಿರುವ ವಿಷಯ ತಿಳಿದರೂ ಎಷ್ಟುಜನ ಹೋಗಿದ್ದಾರೆ, ಯಾರು ಹೋಗಿದ್ದಾರೊ ತಿಳಿದಿಲ್ಲ. ಹುತ್ತದಲ್ಲಿನ ಗೆದ್ದಲು ಹುಟ್ಟುತ್ತವೆ ಸಾಯುತ್ತವೆ ಎನ್ನುವಂತೆ ಅಡ್ರಸ್ ಇಲ್ಲದವರು ಎಷ್ಟುಜನ ಸಾಯುತ್ತಿದ್ದಾರೋ ತಿಳಿದಿಲ್ಲ. ಹಾಗೆ ಕಾಲಾಗ್ನಿಯಲ್ಲಿ ಸುಟ್ಟುಹೋಗಿ ಕಾಣಿಸದಂತೆ ಹೋದವರಲ್ಲಿ 1948 ನೇ ವರ್ಷ ಮರಣಿಸಿ ಕಾಲಗರ್ಭದಲ್ಲಿ ಸೇರಿಹೋದ ಗಾಂಧಿ ಇಲ್ಲದಿದ್ದರೂ ಆತನ ಗುರುತಿಗಾಗಿ ಮೂಲಕಾರಣವಾದ ಆತನ ತಲೆಯೆಂಬ ಕೀರ್ತಿ ಕಾಲವೆನ್ನುವ ಕೋರೆಗಳಲ್ಲಿ ಸಿಲುಕಿಕೊಂಡು ಕಾಣಿಸುತ್ತಲೇ ಇದೆ. ಆದ್ದರಿಂದ ಆತನು ಎಲ್ಲರಿಗೂ ತಿಳಿದ ಅಡ್ರಸ್ ಆಗಿದ್ದಾನೆ. ನಿತ್ಯವು ಮೃತ್ಯು ಕೋರೆಗಳಲ್ಲಿ ಎಷ್ಟೋಜನ ನುಜ್ಜಾಗಿ ಕಾಣಿಸದಂತೆ ಹೋದರೂ ಕೆಲವರು ಕೋರೆಗಳ ಸಂಧಿನಲ್ಲಿ ಸಿಲುಕಿಕೊಂಡು ಕಾಣಿಸುತ್ತಿದ್ದಾರೆಂದು ಹೇಳುವುದಕ್ಕೆ ಗಾಂಧೀ ತಾತನೇ ಅಲ್ಲ ಇನ್ನು ಬಹಳ ಜನರು ಇದ್ದಾರೆ. ಅಂತಹವರಲ್ಲಿ ಮದರ್‌ಥೆರಿಸ್ಸಾ, ಸುಭಾಷ್‌ಚಂದ್ರಬೋಸ್, ಇಂದಿರಾಗಾಂಧಿ ಮೊದಲಾದ ಈ ಕಾಲದವರೇ ಅಲ್ಲದೆ ಪೂರ್ವಕಾಲದಲ್ಲಿ ಹೋದ ಹರಿಶ್ಚಂದ್ರನು, ಶಿಭಿಚಕ್ರವರ್ತಿ ಎಷ್ಟೋಜನ ಕಾಣಿಸುತ್ತಲೇ ಇದ್ದಾರೆ. ನಾನು ಹೇಳಿದವರು ನಿಮ್ಮ ದೃಷ್ಟಿಗೆ ತಿಳಿಯಲಿಲ್ಲವಾ? ಎಲ್ಲರಿಗೂ ತಿಳಿದಿದೆ. ಅಷ್ಟೋ ಇಷ್ಟೋ ಕೀರ್ತಿ ಸಂಪಾದಿಸಿಕೊಂಡವರು ಭೂಮಿ ಮೇಲೆ ಸ್ಥಿರಸ್ಥಾಯಿಯಾಗಿ ಹೆಸರಿರುವವರಾಗಿ ನಿಂತುಹೋಗುತ್ತಾರೆ. ಅವರು ಮರಣಿಸಿದರೂ ಗುರುತಾಗಿ ತಿಳಿಯುವಂತೆ ಇರುತ್ತಾರೆ.

ನಾಳೆ ನಾನು ಮರಣಿಸಿದರು, ಕಾಲಗರ್ಭದಲ್ಲಿ ಬೆರೆತುಹೋದರು, ಗೀತೆ ರಚನೆ ಮಾಡಿರುವುದರಿಂದ, ತಿಳಿಯದ ಧರ್ಮಗಳು ತಿಳಿಸಿರುವುದರಿಂದ, ಕೆಲವರಿಗೆ ಜ್ಞಾನಮಾರ್ಗ ದರ್ಶಕನಾದ್ದರಿಂದ, ಗುರುತಾಗಿ ಕೆಲವರಿಗಾದರು, ಸ್ವಲ್ಪ ಕಾಲವಾದರು, ಕಾಲದ ಕೋರೆಗಳಲ್ಲಿ ಸಿಲುಕಿಕೊಂಡು ಕಾಣಿಸುತ್ತಿರುತ್ತೇವೆ. ನಾನು ಹೋದ ನಂತರವೂ ಸಹ ನನಗೆ ಸ್ವಲ್ಪ ಅಡ್ರಸ್ ಇರುತ್ತದೆ. ಅಂತಹ ಅಡ್ರಸ್‌ಗಾಗಿ ನೀವೂ ಸಹ ಪ್ರಯತ್ನಿಸಿರಿ. ಎಷ್ಟೋಜನ ಧನಿಕರು, ರಾಜರು, ಚಕ್ರವರ್ತಿಗಳು, ನಿಯಂತರು ಕಾಲಗರ್ಭದಲ್ಲಿ ಸೇರಿಹೋಗಿದ್ದಾರೆ ಅವರಲ್ಲಿ ಕೆಲವರು ಹೊರತು ಉಳಿದವರೆಲ್ಲರೂ ಎಷ್ಟು ಜನ ಹೋಗಿದ್ದಾರೊ. ಯಾವಾಗ ಹೋಗಿದ್ದಾರೋ, ಏನು ಮಾಡಿದ್ದಾರೋ, ಎಲ್ಲಿದ್ದಾರೋ ತಿಳಿಯದಂತೆ ಅಡ್ರಸ್ ಇಲ್ಲದವರಾಗಿದ್ದಾರೆ. ಹಣ ಸಂಪಾದನೆ ಮುಖ್ಯವೆಂದುಕೊಂಡವರು ಎಂದಿಗೂ ಕಾಣಿಸುವುದಿಲ್ಲ.

ದಿನಕ್ಕೆ ಸಾವಿರಮಣಗಳ ಚಿನ್ನವನ್ನು ಸಂಪಾದಿಸಿದವನು ಸಹ ಕಾಲದಲ್ಲಿ ಕಾಣಿಸದಂತೆಹೋಗಿದ್ದಾನೆ. ಅಂತಹ ಸಂಪಾದಕನೆ ಕಾಣಿಸದಂತೆ ಹೋದರೆ ನಿನ್ನ ಸಂಪಾದನೆ ಎಷ್ಟು.? ಆದ್ದರಿಂದ ಧನ ಸಂಪಾದಿಸುವವನಾಗಲಿ, ಅಧಿಕಾರ ತೋರಿಸುವವನಾಗಲಿ, ಕಾಲದಲ್ಲಿ ಗುರುತು ಇಲ್ಲದವರೆಂದೇ ಗ್ರಹಿಸಬೇಕು. ಅಷ್ಟೋ ಇಷ್ಟೋ ಕೀರ್ತಿ ಹೊಂದಿದವರೇ ಸ್ವಲ್ಪ ಕಾಲವಾದರು ಕಾಣಿಸುತ್ತಾರೆ. ಇದು ನಮ್ಮ ದೃಷ್ಟಿಯಾಗಿದ್ದು ಅರ್ಜುನನ ಮನೋದೃಷ್ಟಿಗೆ ಇನ್ನು ಏನು ತಿಳಿದಿದೆಯೋ ಕೆಳಗೆ ನೋಡೋಣ.

**(10) ಶ್ಲೋ॥ 28 : ಯಥಾ ನದೀನಾಂ ಬಹವೋಽಮ್ಬುವೇಗಾ ಸ್ಸಮುದ್ರಮೇವಾಭಿ ಮುಖಾ ದ್ರವನ್ತಿ ।**
**ತಥಾ ತವಾಮೀ ನರಲೋಕವೀರಾ ವಿಶನ್ತಿ ವಕ್ತ್ರಾಣ್ಯಭಿವಿಜ್ವಲನ್ತಿ ॥**
**(ನಿರಾಕಾರ)**

**(10) ಶ್ಲೋ॥ 29 : ಯಥಾಪ್ರದೀಪ್ತಂ ಜ್ವಲನಂಪತಂಗಾ ವಿಶನ್ತಿ ನಾಶಾಯಸಮೃದ್ಧವೇಗಾಃ ।**
**ತಥೈವ ನಾಶಾಯ ವಿಶನ್ತಿಲೋಕಾ ಸ್ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ ॥**
**(ನಿರಾಕಾರ)**

**ಭಾವಾರ್ಥ** : ಯಾವ ವಿಧವಾಗಿ ನದಿಗಳೆಲ್ಲ ಸಮುದ್ರದ ಕಡೆಗೆ ಅತಿವೇಗವಾಗಿ ಪ್ರವಹಿಸುತ್ತಾ ಸಮುದ್ರವನ್ನು ಸೇರುವುದಕ್ಕೆ ಪ್ರಯತ್ನಿಸುತ್ತವೊ, ಹಾಗೇ ಈ ನರಲೋಕದಲ್ಲಿನವರೆಲ್ಲರೂ ಪ್ರಜ್ವಲಿಸುತ್ತಿರುವ ನಿನ್ನ ಮುಖದಕಡೆಗೆ ಓಡುತ್ತಾ ನಿನ್ನ ಮುಖದಲ್ಲಿ ಪ್ರವೇಶಿಸುತ್ತಿದ್ದಾರೆ. ಉರಿಯುತ್ತಿರುವ ಅಗ್ನಿಯಲ್ಲಿ ಮಿಡತೆಗಳು ವೇಗವಾಗಿ ಬಂದು ಬಿದ್ದು ಸುಟ್ಟುಹೋದಂತೆ, ಭೂಮಿ ಮೇಲಿನ ಜೀವರಾಶಿಗಳೆಲ್ಲವೂ ಆ ವಿಧವಾಗಿಯೇ ವೇಗವಾಗಿ ನಿನ್ನ ಮುಖಾಗ್ನಿಯಲ್ಲಿ ಬಿದ್ದು ಮರಣಿಸುತ್ತಿವೆ.

**ವಿವರ** : ಹುಟ್ಟಿದ ಪ್ರತಿ ಜೀವರಾಶಿ ಕೊನೆಗೆ ಮರಣ ಹೊಂದಬೇಕಾದ್ದೆ ಎಂದು ಎಲ್ಲರಿಗೂ ತಿಳಿದಿದೆ. ನಮ್ಮ ಹಿಂದೆ ನೆರಳಿನಂತೆ ಹಿಂಬಾಲಿಸುತ್ತಿರುವ ಮೃತ್ಯುವು ಎಲ್ಲಾ ವೇಳೆಯಲ್ಲಿ ತನ್ನ ಬಾಯಿ ತೆರೆದುಕೊಂಡೇ ಇದೆ. ನಾವು ಯಾವಾಗಾದರೂ ಆ ಬಾಯಲ್ಲಿ ಬೀಳಬೇಕಾದ್ದೆ. ಆದರೂ ಆ ವಿಷಯವನ್ನು ಎಲ್ಲರೂ ಮರೆತುಹೋಗಿದ್ದಾರೆ. ಎಲ್ಲಾ ವೇಳೆಗಳಲ್ಲಿ ಶಾಶ್ವತವಾಗಿ ಇರುವವರಂತೆ ಮೆರೆಯುತ್ತಿದ್ದಾರೆ, ಯಾರು ಹೇಗಿದ್ದರು ಮೃತ್ಯುವನ್ನು ಕುರಿತು ತಿಳಿದರೂ ಮತ್ತು ತಿಳಿಯದಿದ್ದರೂ ಪ್ರತಿಯೊಬ್ಬರು ಮೃತ್ಯುವನ್ನು ಹೊಂದಬೇಕಾದ್ದೆ. ಹಾಗೆ ಪ್ರತಿ ದಿನ ಮೃತ್ಯು ಹೊಂದುವವರು ಸಮುದ್ರದ ಕಡೆ ನದಿಗಳು ಪ್ರವಹಿಸುವ ರೀತಿಯಲ್ಲಿ, ಪರಮಾತ್ಮ ಬಾಯಲ್ಲಿ ಪ್ರವೇಶಿಸುವುದಕ್ಕೆ ಓಡುವಂತೆ ಅರ್ಜುನನಿಗೆ ಅರ್ಥವಾಗಿದೆ. ಅಲ್ಲಿ ಮೃತ್ಯು ಇದೆ

ಎಂದಾಗಲಿ, ಇಂತಹ ಕಾಲದಲ್ಲಿ ಮೃತ್ಯುವು ಬರುತ್ತದೆ ಎಂದಾಗಲಿ ತಿಳಿಯದ ಮಾನವರು ಇದ್ದಕ್ಕಿದ್ದಂತೆ ಮೃತಿ ಹೊಂದುತ್ತಿದ್ದಾರೆ. ಮಿಡತೆಗಳು ಬೆಂಕಿಯನ್ನು ನೋಡಿ ಸಾಯುತ್ತೇವೆಂದು ತಿಳಿಯದೆ ಪ್ರತಿ ದಿನ ಎಗರಿದಂತೆ ಎಗರಿ ಅಗ್ನಿಯಲ್ಲಿ ಬಿದ್ದು ಮರಣಿಸುತ್ತಿವೆ. ಅವುಗಳಿಗೆ ಆ ಆಘಾತದ ಬಗ್ಗೆಯಾಗಲಿ, ಅಲ್ಲಿ ಮರಣ ಇದೆಯೆಂದಾಗಲಿ ತಿಳಿದಿಲ್ಲ. ಕಾಣಿಸುವ ಆಕರ್ಷಣೆ ವಸ್ತುವಿನ ಮೇಲೆ ನಿತ್ಯವು ಎಗರಿದಂತೆ ಎಗರಿ ಅಗ್ನಿಯಲ್ಲಿ ಬಿದ್ದು ಮರಣಿಸುತ್ತಿವೆ. ಹಾಗೆಯೇ ಮಾನವರು ಅಥವಾ ಜೀವಿಗಳು ಪ್ರತಿದಿನ ಇದ್ದಂತೆ ಇದ್ದು, ಆಕಸ್ಮಿಕವಾಗಿ ಮಿಡತೆಗಳಂತೆ ಮರಣಿಸುತ್ತಿದ್ದಾರೆ. ಮಿಡತೆಗಳಿಗೆ ಉರಿಯುತ್ತಿರುವ ಅಗ್ನಿ ಅಂದವಾಗಿ ಕಾಣಿಸಿದಂತೆ, ಜೀವಿಗಳಿಗೆ ಮೃತ್ಯು ಸಂಘಟನೆಗಳೂ ಸಹ ಮೊದಲು ಅಂದವಾಗಿಯೆ ಕಾಣಿಸಿರುತ್ತವೆ. ಅಗ್ನಿಯಲ್ಲಿ ಬಿದ್ದರೆ ಮರಣಿಸುತ್ತೇವೆಂದು ಮಿಡತೆಗಳಿಗೆ ತಿಳಿಯದ ಹಾಗೆ, ಜೀವಿಗಳಿಗೂ ಸಹ ಆ ಕೆಲಸಗಳಲ್ಲಿ ಮರಣವಿದೆಯೆಂದು ತಿಳಿಯದು. ನರ ಸಮೂಹಗಳಿಗೆ ಪರಮಾತ್ಮ ಮುಖಾಗ್ನಿ ಎಷ್ಟು ಆಕಾರಗಳಲ್ಲಿದೆಯೋ ತಿಳಿದಿಲ್ಲ. ಒಂದು ವೇಳೆ ತಿಳಿದರು ತಿಳಿಯದಿದ್ದರೂ ಆ ಮುಖಾಗ್ನಿಯಲ್ಲಿ ಬೀಳಬೇಕಾದ್ದೆ, ಆ ಬಾಯಲ್ಲಿನ ಭೀಕರ ಕೋರೆಗಳ ಮಧ್ಯದಲ್ಲಿ ನಲುಗಿ ಹೋಗಬೇಕಾಗಿದ್ದೆ.

**(10) ಶ್ಲೋ॥ 30 : ಲೇಲಿಹ್ಯಸೇ ಗ್ರಸಮಾನಃ ಸಮನ್ತಾ ಲ್ಲೋಕಾನ್ ಸಮಗ್ರಾನ್ ವದನೈರ್ಜ್ವಲದ್ಭಿಃ।**
**ತೇಜೋಭಿ ರಾಪೂರ್ವಜ ಗತ್ಸಮಗ್ರಂ ಭಾಸಸ್ತ ವೋಗ್ರಾಃ ಪ್ರತಪನ್ತಿ ವಿಷ್ಣೋ! ॥**
**(ನಿರಾಕಾರ)**

**(10) ಶ್ಲೋ॥ 31 : ಆಖ್ಯಾಹಿಮೇಕೋಭವಾನುಗ್ರರೂಪೋನಮೋಽಸ್ತುತೇದೇವ!ವರಪ್ರಸೀದ।**
**ವಿಜ್ಞಾತು ಮಿಚ್ಛಾಮಿ ಭವನ್ತ ಮಾದ್ಯಂ ನಹಿ ಪ್ರಜಾನಾಮಿ ತವಪ್ರವೃತ್ತಿಮ್ ॥**
**(ನಿರಾಕಾರ)**

**ಭಾವಾರ್ಥ** : ಉರಿಯುತ್ತಿರುವ ಮುಖಗಳಿಂದ ಸಮಸ್ತ ಜೀವರಾಶಿಗಳನ್ನು ನುಂಗುತ್ತಿರುವವನಾಗಿ ಸಮಸ್ತವನ್ನು ಆಸ್ವಾಧಿಸುತ್ತಿದ್ದೀಯಾ. ನಿನ್ನೊಂದರ ಕಿರಣಗಳು ಜಗತ್ತೆಲ್ಲವೂ ವ್ಯಾಪಿಸಿ ತಪಿಸುವಂತೆ ಮಾಡುತ್ತಿವೆ. ಉಗ್ರರೂಪನು ನೀನು ಯಾರೋ ನನಗೆ ಹೇಳು. ನಿನ್ನ ಪ್ರವೃತ್ತಿ ನನಗೆ ತಿಳಿಯದಂತಿದೆ. ಆದಿ ಪುರುಷನಾದ ನಿನ್ನನ್ನು ನಮಸ್ಕರಿಸಿ ತಿಳಿಸೆಂದು ಕೋರುತ್ತಿದ್ದೇನೆ.

**ವಿವರ :** ಅರ್ಜುನನ ಜ್ಞಾನದೃಷ್ಟಿಗೆ ಪರಮಾತ್ಮನ ಔನತ್ಯವು ಪೂರ್ತಿಯಾಗಿ ಅರ್ಥವಾಗಲಿಲ್ಲ. ಉರಿಯುತ್ತಿರುವ ಮುಖಜ್ವಾಲೆಗಳಿಂದ ಸಮಸ್ತವನ್ನು ನುಂಗುವ ಪರಮಾತ್ಮ ಅರ್ಥವಾಗಲಿಲ್ಲ. ಆ ಪರಮಾತ್ಮ ಕಿರಣಗಳ ಶಾಖಕ್ಕೆ ಸಮಸ್ತ ಜಗತ್ತೆಲ್ಲವೂ ತಪಿಸುತ್ತಿರುವುದು, ಆ ಜ್ವಾಲೆಯಲ್ಲಿ ಸಮಸ್ತ ಅಂತ್ಯವಾಗುತ್ತಿರುವುದು ನೋಡಿದ ಅರ್ಜುನನಿಗೆ ಅಲ್ಲಿಯವರೆಗೂ ಇಂಥವನು ಇದ್ದಾನೆಂದು ತಿಳಿಯದೆ ಹೋಗಿರುವುದರಿಂದ ಈತನು ಶ್ರೀಕೃಷ್ಣನಾ! ಅಸಲು ಈ ಶ್ರೀಕೃಷ್ಣನು ಯಾರು? ಎನ್ನುವ ಸಂಶಯ ಏರ್ಪಟ್ಟಿದೆ. ತಕ್ಷಣ ಅಸಲು ನೀನು ಯಾರು? ನಿನ್ನ ಪ್ರವರ್ತನೆ ಏನೋ ನನಗೆ ಅರ್ಥವಾಗಲಿಲ್ಲ. ಮೊದಲು ನೀನ್ಯಾರೋ ನನಗೆ ತಿಳಿಸು? ಎಂದು ಪ್ರಶ್ನೆ ಹಾಕಿದನು. ನೀನು ಯಾರು ಎನ್ನುವ ಪ್ರಶ್ನೆಗೆ ಪರಮಾತ್ಮ ಕೆಳಗೆ ಉತ್ತರ ಕೊಟ್ಟಿದ್ದಾನೆ.

**ಪರಮಾತ್ಮ ಹೀಗೆ ಹೇಳಿದ್ದಾನೆ :–**

**(10) ಶ್ಲೋ॥ 32 : ಕಾಲೋಽಸ್ಮಿ ಲೋಕಕ್ಷಯಕೃ ತ್ಪ್ರವೃದ್ಧೋ ಲೋಕಾನ್ಸಮಾಹರ್ತು ಮಿಹ ಪ್ರವೃತ್ತಃ ।**
**ಋತೇಽಪಿ ತ್ವಾಂನಭವಿಷ್ಯಂತಿ ಸರ್ವೇಯೇಽವಸ್ಥಿತಾಃ ಪ್ರತ್ಯನೀಕೇಶು ಯೋಧಾಃ ॥**
**(ಪರಮಾತ್ಮ)**

**ಭಾವಾರ್ಥ :** ಲೋಕದಲ್ಲಿನ ಜೀವಾತ್ಮಗಳನ್ನು ನಾಶಮಾಡುವ ಬಲವಾದ ಕಾಲವು ನಾನು. ಜೀವಾತ್ಮಗಳನ್ನು ಸಂಹರಿಸುವುದೇ ನನ್ನ ಕೆಲಸ. ಈಗ ನೀನು ಇಲ್ಲದಿದ್ದರೂ ಯುದ್ಧ ಮಾಡದೆಹೋದರು ಇವರು ಸಂಹರಿಸಲ್ಪಡುತ್ತಾರೆ.

**ವಿವರ :** ಅರ್ಜುನನು ನೀನ್ಯಾರು ಎನ್ನುವ ಪ್ರಶ್ನೆಗೆ ಸಮಸ್ತವನ್ನು ನಾಶ ಮಾಡುವ ಕಾಲವು ನಾನೇ ಎಂದಿದ್ದಾನೆ. ಪರಮಾತ್ಮ ಇದಕ್ಕೂ ಮೊದಲೇ ತಾನೆಷ್ಟು ಮಹಿಮೆ ಯುಳ್ಳವನೊ ಹೇಳಿದ್ದಾನೆ. ಆದರೂ ವಿಶ್ವರೂಪದಲ್ಲಿ ಭಯಂಕರವಾಗಿ ಕಾಣಿಸುವುದರಿಂದ, ಮೊದಲು ಕೇಳಿರುವುದೆಲ್ಲವೂ ಮರೆತು ಹೋಗಿ ಅನುಮಾನ ಬಂದು ನೀನ್ಯಾರು ಹೇಳೆಂದನು. ಆ ಮಾತಿಗೆ ಕಾಲವು ನಾನೇ ಎಂದು ಪರಮಾತ್ಮ ಉತ್ತರ ಕೊಡುವುದಲ್ಲದೆ ನಿನ್ನ ಪ್ರವೃತ್ತಿ ಏನೆಂದು ಕೇಳಿರುವುದಕ್ಕೆ ಉತ್ತರ, ನನ್ನ ಕೆಲಸ ಜೀವಾತ್ಮಗಳ ಶರೀರಗಳನ್ನು ನಾಶಮಾಡುವುದೆ ಎಂದಿದ್ದಾನೆ. ಅಷ್ಟೇ ಅಲ್ಲದೆ ಕರ್ಮರೀತ್ಯ ಭೌತಿಕಶರೀರವನ್ನು ಬಿಡಬೇಕಾಗಿ ಬಂದಾಗ ತಪ್ಪದೇ ಯಾವುದೋ ಒಂದು ವಿಧವಾಗಿ ಮೃತ್ಯು ಹೊಂದಬೇಕಾದ್ದೆ. ಅಲ್ಲಿ ರಾಜರು,

ಸೈನಿಕರು ಕರ್ಮರೀತ್ಯ ಮರಣಿಸಬೇಕಾಗಿದೆ. ಆದ್ದರಿಂದ ಅರ್ಜುನನು ಯುದ್ಧ ಮಾಡದಿದ್ದರು ಸಂಹರಿಸಲ್ಪಡುವವರು ತಪ್ಪದೇ ಸಂಹರಿಸಲ್ಪಡಬೇಕಾದ್ದೇ. ಆದುದರಿಂದ ಪರಮಾತ್ಮ ಅರ್ಜುನನೊಂದಿಗೆ ನೀನು ಇಲ್ಲಿ ಯುದ್ಧ ಮಾಡದಿದ್ದರು ಅವರ ಆಯುವು ಮೂಡಿದೆ. ಅವರು ಮರಣಿಸುವುದು ತಪ್ಪುವುದಿಲ್ಲ ಎಂದಿದ್ದಾನೆ.

**(10) ಶ್ಲೋ॥ 33 : ತಸ್ಮಾತ್ವ ಮುತ್ತಿಷ್ಠ ಯಶೋಲಭಸ್ವ ಜಿತ್ವಾಶತ್ರೂನ್‌ಭುಂಕ್ಷ್ವರಾಜ್ಯಂ ಸಮೃದ್ಧಮ್**
**ಮಯೈವೈತೇ ನಿಹತಾಃ ಪೂರ್ವಮೇವ ನಿಮಿತ್ತಮಾತ್ರಂ ಭವಸವ್ಯಸಾಚಿನ್! ॥**
**(ಪರಮಾತ್ಮ)**

**(10) ಶ್ಲೋ॥ 34: ದ್ರೋಣಂ ಚ ಭೀಷ್ಮಂ ಚ ಜಯದ್ರಥಂಚ ಕರ್ಣಂ ತಥಾಽನ್ಯಾನಪಿ ಯೋಧವೀರಾನ್**
**ಮಯಾಹತಾಂಸ್ತ್ವಂ ಜಹಿಮಾವ್ಯಧಿಷ್ಠಾ ಯುದ್ಧ್ಯ ಸ್ವಜೇತಾಽಸಿರಣೇಸಪತ್ನಾನ್ ॥**
**(ಪರಮಾತ್ಮ)**

**ಭಾವಾರ್ಥ**: ಆದುದರಿಂದ ಶತ್ರುಗಳನ್ನು ಜಯಿಸುವುದಕ್ಕೆ ಎದ್ದೇಳು. ಅವರು ಇಲ್ಲಿಯವರೆಗೂ ನನ್ನಿಂದ ಸಂಹರಿಸಲ್ಪಟ್ಟವರಾಗಿದ್ದಾರೆ. ನೀನು ನಿಮಿತ್ತ ಮಾತ್ರನಾಗಿ ಯುದ್ಧವನ್ನು ಮಾಡಿ ಜಯಿಸಿದ ಕೀರ್ತಿಯನ್ನು, ರಾಜ್ಯವನ್ನು ಹೊಂದು.

ದ್ರೋಣ, ಭೀಷ್ಮ, ಕರ್ಣ ಮೊದಲಾದ ಯುದ್ಧ ವೀರರೆಲ್ಲರೂ ನನ್ನಿಂದ ಸಂಹರಿಸಲ್ಪಟ್ಟಿದ್ದಾರೆ. ನೀನು ಯುದ್ಧ ಮಾಡದಿದ್ದರೂ ಅವರು ಜೀವಿಸಿರುವುದಿಲ್ಲ. ಎಂದು ಪರಮಾತ್ಮ ಹೇಳಿದ ಮಾತುಗಳು ಕೇಳಿ ಅರ್ಜುನನು ಹೀಗೆ ಹೇಳತೊಡಗಿದನು.

**ಸಂಜಯ ಹೀಗೆ ಹೇಳಿದನು :–**

**(10) ಶ್ಲೋ॥ 35 : ಏತಚ್ಛ್ರುತ್ವಾ ವಚನಂ ಕೇಶವಸ್ಯ ಕೃತಾಂಜಲಿ ರ್ವೇಪಮಾನಃ ಕಿರೀಟೀ ।**
**ನಮಸ್ಕೃತ್ವಾ ಭೂಯ ಏವಾಹ ಕೃಷ್ಣಂ ಸಗದ್ಗದಂ ಭೀತಭೀತಃ ಪ್ರಣಮ್ಯ ॥**
**(ಕಲ್ಪಿತ)**

**ಅರ್ಜುನನು ಹೀಗೆ ಹೇಳಿದನು:–**

**(10) ಶ್ಲೋ॥ 36 : ಸ್ಥಾನೇಹೃಷೀಕೇಶ ! ತವಪ್ರಕೀರ್ತ್ಯಾ ಜಗತ್‌ಪ್ರಹೃಷ್ಯ ತ್ಯನುರಜ್ಯತೇ ಚ ।**
**ರಕ್ಷಾಂಸಿ ಭೀತಾನಿ ದಿಶೋ ದ್ರವನ್ತಿ ಸರ್ವೇ ನಮಸ್ಯನ್ತಿ ಚ ಸಿದ್ಧಸಂಘಾಃ ॥**
**(ನಿರಾಕಾರ)**

**(10) ಶ್ಲೋ॥ 37:ಕಸ್ಮಾಚ್ಚ ತೇನನಮೇರನ್ ಮಹಾತ್ಮನ್‌ಗರೀಯಸೇ ಬ್ರಹ್ಮ ಣೋ ಉಪ್ಯಾದಿಕರ್ತ್ರೇ।**
**ಅ ನನ್ತ ! ದೇವೇಶ ! ಜಗನ್ನಿವಾಸ ! ತ್ವ ಮಕ್ಷರಂ ಸದಸತ್ತತ್ಪರಂಯತ್ ॥**
**(ನಿರಾಕಾರ)**

**ಭಾವಾರ್ಥ** : ಓ ಪರಮಾತ್ಮ ! ನಿನ್ನ ಮಹಿಮೆ ಕೀರ್ತಿಯನ್ನು ಕೇಳಿ ಜಗತ್ತೆಲ್ಲವೂ ಸಂತೋಷದಲ್ಲಿರುವಾಗ, ರಾಕ್ಷಸರು ಭಯಪಟ್ಟು ದಿಕ್ಕಾಪಾಲಾಗಿ ಓಡುತ್ತಿದ್ದಾರೆ. ಸಿದ್ಧರೆಲ್ಲರೂ ನಮಸ್ಕರಿಸುತ್ತಿದ್ದಾರೆ. ಬ್ರಹ್ಮನಿಗೂ ಸಹ ಆದಿಕರ್ತನಾದ, ಮಹಾತ್ಮನಾದ ನಿನ್ನನ್ನು ಏಕೆ ನಮಸ್ಕರಿಸದಿದ್ದಾರೆ. ದೇವದೇವ! ಜಗನ್ನಿವಾಸ! ನೀನೇ ಆ ಅಕ್ಷರ ಮತ್ತು ಸತ್ತು ಅಸತ್ತು, ಅವುಗಳಿಗೆ ಪರವಾಗಿರುವವನು ಎಲ್ಲವೂ ನೀನೇ ಆಗಿರುವೆ.

**ವಿವರ** : ಪರಮಾತ್ಮನ ಘನತೆಯನ್ನು, ಮಹಿಮೆಯನ್ನು, ಎಲ್ಲವನ್ನೂ ಕೇಳಿದ ಜನರು ಕೆಲವರು ಎಷ್ಟೋ ಸಂತೋಷಪಡುತ್ತಿದ್ದಾರೆ. ಪ್ರಪಂಚ ವಿಷಯಗಳಿಗಿಂತ ಪರಮಾತ್ಮ ವಿಷಯಗಳಿಗೆ ಹೆಚ್ಚಾಗಿ ಬೆಲೆ ಕೊಡುವವರು ಎಷ್ಟೋ ಜನ ಭೂಮಿ ಮೇಲೆ ಇದ್ದಾರೆ. ಅಂತಹವರು ದೈವವಿಷಯಗಳು ಕಿವಿಯಲ್ಲಿ ಬಿದ್ದ ತಕ್ಷಣ ಸಂತೋಷ ಪಡುತ್ತಾರೆ. ಆ ವಿಷಯದಲ್ಲಿ ಹೊಸ ಅನುಭೂತಿ ಹೊಂದುತ್ತಿದ್ದಾರೆ. ಎಷ್ಟು ದೊಡ್ಡ ಪ್ರಪಂಚ ವಿಷಯಗಳಾದರು ಅವರಿಗೆ ರುಚಿಸುವುದಿಲ್ಲ. ಇಂಥವರು ಕೆಲವರಾದರೆ ಕೆಲವರು ರಾಕ್ಷಸಗುಣಗಳು ಇರುವವರು ಪರಮಾತ್ಮ ವಿಷಯವನ್ನು ಕೇಳಿ ಆತನು ಕರ್ಮದ ಪ್ರಕಾರ ಶಿಕ್ಷಿಸುತ್ತಾನೆಂದು, ಆ ಶಿಕ್ಷೆ ಭಯಂಕರವಾಗಿರುತ್ತದೆಂದು, ಅವುಗಳನ್ನು ತಪ್ಪಿಸಿಕೊಳ್ಳಬೇಕೆಂದು ಪ್ರಯತ್ನಿಸುತ್ತಾ ದಿಕ್ಕು ದಿಕ್ಕಿಗೂ ಪರದಾಡುತ್ತಿರುತ್ತಾರೆ. ವಿವಿಧ ಮಾರ್ಗಗಳಲ್ಲಿ ಅನೇಕ ದಿಕ್ಕುಗಳಿಗೆ ಪ್ರಯಾಣಿಸುತ್ತಿದ್ದಾರೆ. ಯಾವ ದಿಕ್ಕಿನಲ್ಲಿ ಯಾವ ಮಾರ್ಗದಲ್ಲಿಯಾದರು ಪಾಪಗಳಿಂದ ರಕ್ಷಿಸಿಕೊಳ್ಳುವ ಅವಕಾಶ ಇದೆಯೇನೋ ಎಂದು ಹುಡುಕುತ್ತಿದ್ದಾರೆ. ಮತ್ತೆ ಕೆಲವರು ಸಿದ್ಧರೆನ್ನುವವರು ಯಾವ ದಿಕ್ಕು ಇಲ್ಲದವರಾಗಿ, ಯಾವ ಮಾರ್ಗವು ಅನುಸರಿಸದವರಾಗಿ, ಕೇವಲ ಒಂದು ಪರಮಾತ್ಮನನ್ನೇ ನಂಬಿ ಆರಾಧಿಸುತ್ತಾ ಸಮಸ್ಕರಿಸುತ್ತಿದ್ದಾರೆ.

ಅಸತ್ತಾದ ಶರೀರದಲ್ಲಿ ಸತ್ತಾದ ಆತ್ಮ ಇದೆ. ಸತ್ತಲ್ಲದ ಶರೀರದಲ್ಲಿರುವ ಸತ್ತು (ಆತ್ಮ) ಹೋದಾಗ ಸತ್ತುಹೋಗಿದೆ ಎಂದು ಪೂರ್ವದಲ್ಲಿ ಎನ್ನುತ್ತಿದ್ದರು. ಒಂದು ಹಸು ಮರಣಿಸಿದಾಗ ಪೂರ್ವದಲ್ಲಿ ಹಸು ಸತ್ತು ಹೋಗಿದೆ ಎನ್ನುತ್ತಿದ್ದರು. ಆ ಪದ ಕಾಲಕ್ರಮೇಣ ಬದಲಾಗದಂತೆ ಇದೆ. ಈದಿನ ಸಹ ಹಸು ಸತ್ತೋಗಿದೆ ಎನ್ನುತ್ತಿದ್ದಾರೆ. ಹಾಗೆ ರಾಮಯ್ಯ

ಎನ್ನುವವನು ಮರಣಿಸಿದಾಗ ರಾಮಯ್ಯನ ಆತ್ಮ (ಸತ್ತು) ಹೋಗಿದೆಯೆಂದು ಪೂರ್ವದಲ್ಲಿ ಎನ್ನುತ್ತಿದ್ದರು. ಅಸತ್ತಾದ ಶರೀರದಲ್ಲಿರುವ ಸತ್ತಾದ ಆತ್ಮವೂ, ಆತ್ಮಗಿಂತ ಪರವಾಗಿರುವ ಪರಮಾತ್ಮನು ಎಲ್ಲವೂ ಆ ನಿರಾಕಾರವೇ ಎಂದು ತಿಳಿಯಬೇಕು. ಕಾಲವು ನಾನೇ ಎಂದ ನಂತರ ಅರ್ಜುನನಿಗೆ ಪರಮಾತ್ಮವೊಂದರ ಔನ್ನತ್ಯ ಪೂರ್ತಿ ಅರ್ಥವಾಗಿ ಆತನೊಂದರ ನಿಜತತ್ತ್ವವನ್ನು ಕುರಿತು ಹೀಗೆ ಹೇಳುತ್ತಿದ್ದಾನೆ.

**(10) ಶ್ಲೋ॥ 38 : ತ್ವಮಾದಿದೇವಃಪುರುಷಃಪುರಾಣಸ್ತ್ವಮಸ್ಯವಿಶ್ವಸ್ಯಪರಂ ನಿಧಾನಮ್ ।**
**ವೇತ್ತಾಽಸಿ ವೇದ್ಯಂಚ ಪರಂಚ ಧಾಮ ತ್ವಯಾತತಂ ವಿಶ್ವಮನನ್ತ ರೂಪ! ॥**
**(ನಿರಾಕಾರ)**

**ಭಾವಾರ್ಥ** : ಓ ಕೃಷ್ಣಾ! ಆದಿ ದೇವರು, ಪುರಾಣ ಪುರುಷನು, ವಿಶ್ವಮಯನು, ಪರಂಧಾಮ, ತಿಳಿದವನು, ತಿಳಿಯಲ್ಪಟ್ಟಿರುವವನು ಎಲ್ಲವೂ ನೀನೇ.

**ವಿವರ:** ಭೂಮಿ ಮೇಲೆ ಇರುವ ದೇವತೆಗಳೆಲ್ಲರಲ್ಲಿಯೂ ಮೊದಲನೆಯವನು, ಎಲ್ಲಾ ದೇವತೆಗಳಿಗಿಂತ ಉತ್ತಮವಾದವನು, ಪುರಾತನ ಕಾಲದಿಂದ ಪುರುಷನೆಂದು ಹೇಳಲ್ಪಟ್ಟವನು, ವಿಶ್ವವೆಲ್ಲವೂ ಅಣುಅಣುವು ವ್ಯಾಪಿಸಿರುವವನು, ಕೊನೆಗೆ ಹೊಂದುವಂತಹ ತಿಳಿಯುವಂತಹ ಮೋಕ್ಷ ಮತ್ತು ತಿಳಿದ ಜ್ಞಾನಿ, ತಿಳಿಯುವಂತಹ ಜ್ಞಾನವು, ತಿಳಿದ ಯೋಗಿ, ತಿಳಿಯಲ್ಪಟ್ಟ ಆತ್ಮ ಎಲ್ಲವೂ ಪರಮಾತ್ಮನೇ ಎಂದು ಅರ್ಜುನ ತಿಳಿದುಕೊಂಡಿದ್ದಾನೆ. ನಂತರ ಏನೆನ್ನುತ್ತಿದ್ದಾನೆಂದರೆ!

**(10) ಶ್ಲೋ॥ 39: ವಾಯುರ್ಯಮೋಽಗ್ನಿರ್ವರುಣಶ್ಶಶಾಂಕಃ ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ**
**ನಮೋ ನಮಸ್ತೇಽಸ್ತು ಸಹಸ್ರಕೃತ್ವಃ ಪುನಶ್ಚ ಭೂಯೋಽಪಿನಮೋ ನಮಸ್ತೇ ॥**
**(ನಿರಾಕಾರ)**

**ಭಾವಾರ್ಥ** : ಈ ಶ್ಲೋಕದಲ್ಲಿ ಪ್ರಜಾಪತಿ ಎನ್ನುವ ಪದವನ್ನು ಚತುರ್ಮುಖ ಬ್ರಹ್ಮ ಎಂದು ಬಹಳ ಗ್ರಂಥಗಳಲ್ಲಿ ಬರೆಯಲಾಗಿದೆ. ಪಕ್ಕದಲ್ಲಿಯೇ **'ಪ್ರಪಿತಾಮಹಶ್ಚ'** ಎಂಬ ಪದಕ್ಕೆ ಆತನ ತಂದೆಯನ್ನು ಹುಟ್ಟಿಸಿದವನು ತಾತ ಎಂದು ಅರ್ಥವಿದೆ. ಎಂದರೆ ಬ್ರಹ್ಮ, ಬ್ರಹ್ಮ ತಾತನು ನೀನೇ ಎಂದು ಬರೆಯಲಾಗಿದೆ. ಬ್ರಹ್ಮಗೆ ತಂದೆ ವಿಷ್ಣು ಹೊರತು ತಾತ ಇಲ್ಲವೆಂದು ಎಲ್ಲರಿಗೂ ತಿಳಿದಿದೆ. ಅಂತಹದರಲ್ಲಿ ಬ್ರಹ್ಮ, ಬ್ರಹ್ಮತಾತ ಎನ್ನುವುದು ತಪ್ಪಾಗುತ್ತದೆ. ಆದುದರಿಂದ

ಪ್ರಜಾಪತಿ ಎನ್ನುವ ಪದಕ್ಕೆ ಸೂರ್ಯ ಎನ್ನುವ ಅರ್ಥ ಸರಿಹೋಗುತ್ತದೆಂದು ಗ್ರಹಿಸಬೇಕು. ಸೂರ್ಯನು ಸೂರ್ಯನ ತಾತ ಎನ್ನುವುದು ಸಮಂಜಸ, ಸತ್ಯಬ್ರಹ್ಮ ಬ್ರಹ್ಮತಾತ ಎಂದು ಇಲ್ಲದ ತಾತನನ್ನು ಹೇಳುವುದು ಅಸಮಂಜಸ ಅಸತ್ಯವೆಂದು ತಿಳಿಯಬೇಕು.

ವಾಯು, ಅಗ್ನಿ, ಯಮ, ವರುಣ, ಚಂದ್ರ, ಬ್ರಹ್ಮ, ಬ್ರಹ್ಮ ತಂದೆ ತಾತ ಎಂದಿಗೂ ನೀನೇ ಆಗುತ್ತೀಯಾ. ಅಂತಹ ನಿನಗೆ ಮುಗಿಯುತ್ತಿದ್ದೇನೆ. ಮತ್ತೆ ಮತ್ತೆ ಸಾವಿರಾರು ಬಾರಿ ಮುಗಿಯುತ್ತಿದ್ದೇನೆ.

**(10) ಶ್ಲೋ॥ 40 : ನಮಃಪುರಸ್ತಾ ದಥಪೃಷ್ಠತಸ್ತೇ ನಮೋಽಸ್ತುತೇ ಸರ್ವತ ಏವಸರ್ವ । ಅನನ್ತ ವೀರ್ಯಾ ಮಿತ ವಿಕ್ರಮ ಸ್ತ್ವಂ ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ ॥**

**(ನಿರಾಕಾರ)**

**ಭಾವಾರ್ಥ** : ಮುಗಿಯುವೆನು ಮುಂದೆ, ಮುಗಿಯುವೆನು ಹಿಂದೆ, ಮುಗಿಯುವೆನು ಸರ್ವ ದಿಕ್ಕುಗಳಲ್ಲಿ, ಅಮಿತ ಪರಾಕ್ರಮವಂತನು ಮತ್ತು ಅಮಿತ ಪುರುಷತ್ವವಿರುವ ವೀರ್ಯನೂ. ಸರ್ವಕ್ಕೂ ವ್ಯಾಪಿಸಿರುವವನಾಗಿರುವುದರಿಂದ ಸರ್ವವೂ ನೀನೇ ಆಗುತ್ತೀಯಾ.

**ವಿವರ** : ಪರಮಾತ್ಮ ಸರ್ವವೂ ವ್ಯಾಪಿಸಿರುವವನು. ನಮಗೆ ಮುಂದೆ, ಹಿಂದೆ, ಪಕ್ಕದಲ್ಲಿ, ಸುತ್ತಾ, ಮೇಲೆ, ಕೆಳಗೆ ಎಲ್ಲಾಕಡೆ ವ್ಯಾಪಿಸಿರುವವನು. ಇಲ್ಲಿದ್ದಾನೆಂದು ಅಲ್ಲಿ ಇಲ್ಲ ಎಂಬುವುದು ಇಲ್ಲದೆ, ಎಲ್ಲಾ ತುಂಬಿರುವವನಾಗಿ ಪರಮಾತ್ಮ ಇದ್ದಾನೆ. ಆದ್ದರಿಂದ ಅರ್ಜುನ ಮುಂದೆ ಹಿಂದೆ ಸರ್ವ ದಿಕ್ಕುಗಳಲ್ಲಿ ಮುಗಿಯುತ್ತಿದ್ದೇನೆಂದು ಹೇಳಿದ್ದಾನೆ. ಎಲ್ಲಾಕಡೆ ವ್ಯಾಪಿಸಿ ಎಲ್ಲವೂ ತಾನಾಗಿರುವವನೇ ಪರಮಾತ್ಮನೆಂದು ಅಮಿತ ವೀರ್ಯ ಹೊಂದಿರುವ ಪುರುಷತ್ವವೂ ಸಹ ಆತನೇ ಎಂದು ಅರ್ಜುನನು ಹೇಳಿದ್ದಾನೆ.

**(10) ಶ್ಲೋ॥ 41 : ಸಖೇತಿಮತ್ವಾ ಪ್ರಸಭಂಯದುಕ್ತಂ ಹೇಕೃಷ್ಣ! ಹೇ ಯಾದವ!ಹೇಸಖೇತಿ । ಅಜಾನತಾ ಮಹಿಮಾನಂ ತವೇದಂ ಮಯಾ ಪ್ರಮಾದಾ ತ್ಪ್ರಣಯೇನ ವಾಽಪಿ ॥**

**(ಸಾಕಾರ)**

**(10) ಶ್ಲೋ॥ 42 : ಯಚ್ಚಾಪಹಾಸಾರ್ಥಮಸತ್ಕೃತೋಽಸಿವಿಹಾರಶಯ್ಯಾಸನ ಭೋಜನೇಷು। ಏಕೋಽಥವಾಪ್ಯಚ್ಯುತ!ತತ್ಸಮಕ್ಷಂ ತತ್‌ಕ್ಷಾ ಮಯೇತ್ವಾಮಹ ಮಪ್ರಮೇಯಮ್॥**

**(ಸಾಕಾರ)**

**ಭಾವಾರ್ಥ** : ಸ್ನೇಹಿತನೆಂದು ತಿಳಿದು ವಿನಯ ವಿಧೇಯತೆಗಳು ಇಲ್ಲದಂತೆ, ನಿನ್ನ ಮಹಿಮೆ ತಿಳಿಯದೇ ಓ ಸಖಾ! ಓ ಮಾಧವ! ಓ ಕೃಷ್ಣಾ ಎಂದು ವಿಹರಿಸುವಾಗ, ಮಲಗುವಾಗಲೋ, ಕುಳಿತುಕೊಂಡಾಗಲೋ, ಊಟಮಾಡುವಾಗಲೋ, ಒಂಟಿಯಾಗಿರುವಾಗಲೋ ಇತರರ ಬಳಿ ಹೇಳನವಾಗಿ ಮಾತನಾಡಿರುವವು ಎಲ್ಲವೂ ಕ್ಷಮಿಸಬೇಕು.

**(10) ಶ್ಲೋ॥ 43 : ಪಿತಾಽಸಿಲೋಕಸ್ಯ ಚರಾಚರಸ್ಯ ತ್ವಮಸ್ಯಪೂಜ್ಯಶ್ಚ ಗುರುರ್ಗರೀಯಾನ್।**
**ನತ್ವತ್ಸಮೋಽಸ್ತ್ಯಭ್ಯಧಿಕಃಕುತೋಽನ್ಯೋಲೋಕತ್ರಯೇಽಪ್ಯಪ್ರತಿಮಪ್ರಭಾವ! ॥**
**(ಸಾಕಾರ)**

**ಭಾವಾರ್ಥ** : ಚರಾಚರ ಜೀವರಾಶಿಗಳಿಗೆ ತಂದೆ ನೀನು, ಪೂಜ್ಯನು, ಗುರುವು ನೀನೇ. ದೇವದೇವ! ಮೂರುಲೋಕದಲ್ಲಿ ನಿನಗೆ ಸಮಾನವಾದವರು ಯಾರೂ ಇಲ್ಲ. ಎಲ್ಲರಿಗಿಂತಲೂ ನೀನೇ ಅಧಿಕನು.

**ವಿವರ** : ಇಲ್ಲಿಯವರೆಗೂ ಬಹಳ ಶ್ಲೋಕಗಳಲ್ಲಿ ಎಲ್ಲವೂ ನೀನೇ ಎಂದ ಅರ್ಜುನನು ಈಗ ಇಲ್ಲಿ ಪ್ರತ್ಯೇಕಿಸಿ ಪರಮಾತ್ಮನನ್ನು ತಂದೆಯಾಗಿ, ಪೂಜ್ಯ ಗುರುವಾಗಿ ಹೇಳಿದ್ದಾನೆ. ಈ ಶ್ಲೋಕದಲ್ಲಿ ಕೇವಲ ತಂದೆ ಗುರು ಇಬ್ಬರನ್ನು ಕುರಿತು ಹೇಳುವುದರಲ್ಲಿ ಒಂದು ವಿಶೇಷತೆ ಇದೆ. ಅದು ಏನೆಂದರೆ! ಪ್ರತಿ ಮಾನವನಿಗೆ ತಂದೆಯ ಮೂಲಕ ಜನ್ಮ ಉಂಟಾಗುವುದು ಸಹಜವೇ. ಇದನ್ನು ಭೌತಿಕ ಜನ್ಮವೆನ್ನುತ್ತೇವೆ. ಅಭೌತಿಕವಾದ ಜನ್ಮವೆನ್ನುವುದು ಮತ್ತೊಂದು ಇದೆ. ಆ ಜನ್ಮವನ್ನು ಪ್ರತಿಯೊಬ್ಬನು ಪಡೆಯಬಹುದು. ಪಡೆಯದೇ ಹೋಗಬಹುದು. ಭೌತಿಕ ಜನ್ಮಕ್ಕೆ ಕಾರಣ ಜನ್ಮಕೊಟ್ಟ ತಂದೆ, ಹಾಗೆ ಅಭೌತಿಕ ಜನ್ಮಕ್ಕೆ ಕಾರಣ ಪೂಜ್ಯ ಗುರುವು. ಜನ್ಮಕೊಟ್ಟ ತಂದೆಯ ವೀರ್ಯಬಿಂದುವಿನಿಂದ ಉಂಟಾಗುವ ಜನ್ಮ ಭೌತಿಕವಾದುದು, ಸ್ಥೂಲವಾದುದು. ಪೂಜ್ಯ ಗುರುವೊಂದರ ಜ್ಞಾನ ನಾದದಿಂದ ಉಂಟಾಗುವ ಜನ್ಮ ಅಭೌತಿಕವಾದುದು, ಸೂಕ್ಷ್ಮವಾದದು. **ತಂದೆಯಿಂದ ಉಂಟಾದವರನ್ನು ಬಿಂದುಪುತ್ರರೆಂದು, ಗುರುವಿನಿಂದ ಅಭಿವೃದ್ಧಿಯಾದವರನ್ನು ನಾದಪುತ್ರರೆಂದು ಕರೆಯುತ್ತಾರೆ. ತಂದೆಯಿಂದ ಉಂಟಾದ ಜನ್ಮ ಕಾಣಿಸುವುದು, ಕರ್ಮವೃದ್ಧಿ ಮಾಡುವುದಾಗಿದ್ದು, ಗುರುವಿನಿಂದ ಉಂಟಾಗಿರುವ ಜನ್ಮ ಕಾಣಿಸದಿರುವುದು, ಕರ್ಮನಾಶ ಮಾಡುವುದಾಗಿದೆ.**

ಹೀಗೆ ಒಂದು ಜೀವನದಲ್ಲಿ ಎರಡು ಜನ್ಮಗಳಿಗೆ ಅರ್ಹರಾದ ಮನುಷ್ಯರು ಬಹಳಜನರು ಕೇವಲ ಒಂದು ಜನ್ಮಕ್ಕೆ ಸರಿಮಾಡಿಕೊಂಡು, ಗುರುವಿನಿಂದ ಪಡೆಯುವ

ಎರಡನೇ ಜನ್ಮವನ್ನು ಹೊಂದದಂತೆ ಇದ್ದಾರೆ. ಇಲ್ಲಿ ಅರ್ಜುನನು ಈ ಎರಡು ಜನ್ಮಗಳ ವಿಷಯವನ್ನು ಗುರುತುಮಾಡಿಕೊಂಡು, ಎರಡು ಜನ್ಮಗಳಿಗೂ ಕಾರಣವಾದ ತಂದೆಯನ್ನು, ಗುರುವನ್ನು ಪರಮಾತ್ಮನನ್ನಾಗಿ ಹೇಳಿದ್ದಾನೆ. ಇವರಿಬ್ಬರನ್ನು ಹಾಗೆ ಹೇಳುವುದರಲ್ಲಿ ಕಾರಣ ಏನೆಂದರೆ! ಸ್ಥೂಲ ಜನ್ಮಗಳಿಗೆ ಕಾರಣವಾದ ತಂದೆ ಶರೀರದಲ್ಲಿ ಪುರುಷತ್ವವಾದ ಆ ಶರೀರದಲ್ಲಿ ವೀರ್ಯಕಣವಾಗಿಯೂ ಸಹ ಇರುವವನು ಪರಮಾತ್ಮನೇ ಎಂಬ ವಾಸ್ತವವನ್ನು ತಿಳಿದ ಅರ್ಜುನನು ಸರ್ವ ಜೀವಿಗಳು ಹುಟ್ಟುವುದಕ್ಕೆ ಕಾರಣವಾದವನು ಕಾಣಿಸದ ಪರಮಾತ್ಮನೇ ಎಂದು ಅರ್ಥ ಮಾಡಿಕೊಂಡಿದ್ದಾನೆ. ಹಾಗೆಯೇ ಸೂಕ್ಷ್ಮ ಜನ್ಮಕ್ಕೆ ಕಾರಣವಾದ ಗುರುವೊಂದರ ಶರೀರದಲ್ಲಿನ ಜ್ಞಾನ, ಜ್ಞಾನವೊಂದರ ವಿವರಣೆ ಪರಮಾತ್ಮನೇ ಎಂದು ತಿಳಿದ ಅರ್ಜುನನು ಸರ್ವಜೀವರಾಶಿಗಳಿಗೆ ಪೂಜ್ಯಗುರುವೂ ಪರಮಾತ್ಮನೇ ಎಂದು ತನ್ನ ಮನೋನೇತ್ರಗಳಿಂದ ತಿಳಿದುಕೊಂಡಿದ್ದಾನೆ. ಆದ್ದರಿಂದಲೇ ಜನ್ಮಕೊಟ್ಟ ತಂದೆಯಾಗಿರುವೆ. ಪೂಜ್ಯ ಗುರುವಾಗಿರುವೆ ಎಂದು ಪರಮಾತ್ಮನನ್ನು ಕೊಂಡಾಡಿದನು.

**(10) ಶ್ಲೋ॥ 44 : ತಸ್ಮಾತ್ಪ್ರಣಮ್ಯ ಪ್ರಣಿಧಾಯಕಾಯಂಪ್ರಸಾದಯೇತ್ವಾಮಹ ಮೀಶಮೀಡ್ಯಮ್।**
**ಪಿತೇವ ಪುತ್ರಸ್ಯ ಸಖೇವ ಸಖ್ಯುಃಪ್ರಿಯಃಪ್ರಿಯಾಯಾರ್ಹಸಿದೇವಸೋಢುಮ್ ॥**
**(ನಿರಾಕಾರ)**

**ಭಾವಾರ್ಥ** :ಆದ್ದರಿಂದ ನಿನಗೆ ಸಾಷ್ಟಾಂಗ ನಮಸ್ಕಾರ ಮಾಡುತ್ತಾ ಪೂಜಾರ್ಹನಾದ ಈಶ್ವರನಾದ ನಿನ್ನನ್ನು ಪ್ರಸನ್ನನಾಗೆಂದು ಪ್ರಾರ್ಥಿಸುತ್ತಿದ್ದೇನೆ. ಓ ದೇವದೇವ! ನೀನು ಕುಮಾರನಿಗೆ ತಂದೆಯಂತೆ, ಮಿತ್ರನಿಗೆ ಮಿತ್ರನಂತೆ, ಪ್ರಿಯತಮೆಗೆ ಪ್ರಿಯತಮನಂತೆ ನನ್ನನ್ನು ಮನ್ನಿಸುವುದಕ್ಕೆ ಅರ್ಹನು.

**(10) ಶ್ಲೋ॥ 45 : ಅದೃಷ್ಟಪೂರ್ವಂಹೃಷಿತೋಽಸ್ಮಿ ದೃಷ್ಟ್ವಾಭಯೇನಚಪ್ರವ್ಯಥಿತಂ ಮನೋಮೇ**
**ತದೇವ ಮೇ ದರ್ಶಯ ದೇವ ! ರೂಪಂ ಪ್ರಸೀದ ದೇವೇಶ ! ಜಗನ್ನಿವಾಸ ! ॥**
**(ಸಾಕಾರ, ನಿರಾಕಾರ)**

**ಭಾವಾರ್ಥ** : ಹಿಂದೆ ಎಲ್ಲಿಯೂ ನೋಡದ ಅದೃಷ್ಟಪೂರ್ವವಾದ ಈ ರೂಪವು ನೋಡಿ ಮೊದಲು ಸಂತೋಷವಾಗಿದೆ. ಆದರೂ ಈಗ ಮನಸ್ಸಿನಲ್ಲಿ ಭಯ ಉಂಟಾಗುತ್ತಿದೆ. ದೇವದೇವ ನೀನೇ ಪ್ರಸನ್ನನಾಗಿ, ಮೊದಲ ಸೌಮ್ಯವಾದ ಆಕಾರವನ್ನೇ ತೋರಿಸು.

**ವಿವರ :** ಅರ್ಜುನ ಅಲ್ಲಿಯವರೆಗೂ ಯಾರು ನೋಡದ ಆ ದೃಶ್ಯವನ್ನು ನೋಡಿ, ಅದೃಷ್ಟದಿಂದ ಲಭ್ಯವಾದ ಆ ದರ್ಶನ ಭಾಗ್ಯವನ್ನು ಕುರಿತು ಸಂತೋಷಿಸಿದರೂ, ಭಯಂಕರ ವಾದ ರೂಪ ಆತನ ಮನಸ್ಸಿನಲ್ಲಿ ಭಯವನ್ನುಂಟುಮಾಡಿದೆ. ಆ ವಿಶ್ವರೂಪವನ್ನು ಅರ್ಜುನ ನೋಡಲಾರದೆ ಮೊದಲ ಸೌಮ್ಯ ರೂಪವನ್ನು ತೋರಿಸೆಂದು ಕೋರಿದನು.

**(10) ಶ್ಲೋ॥ 46 : ಕಿರೀಟಿನಂ ಗದಿನಂ ಚಕ್ರಹಸ್ತಮಿಚ್ಛಾಮಿ ತ್ವಾಂದ್ರಷ್ಟುಮಹಂತಥೈವ ।**
**ತೇನೈವ ರೂಪೇಣ ಚತುರ್ಭುಜೇನ ಸಹಸ್ರಬಾಹೋ! ಭವ ವಿಶ್ವಮೂರ್ತೇ! ॥**
**(ಅಶಾಸ್ತ್ರೀಯ)**

**ಭಾವಾರ್ಥ :** ಈ ಅಧ್ಯಾಯದಲ್ಲಿ 17ನೇ ಶ್ಲೋಕವು ಇಲ್ಲಿ 46ನೇ ಶ್ಲೋಕವು ಎರಡು ಆಶಾಸ್ತ್ರೀಯ ಶ್ಲೋಕಗಳೇ. ಇವು ಕಲ್ಪಿತ ಶ್ಲೋಕಗಳೆಂದು ತಿಳಿಯಬೇಕು. ಏಕೆಂದರೆ ವಿಶ್ವರೂಪಕ್ಕೆ ಪರಿಮಿತಿಯಾಗಿ ಕೈಗಳು ಇಲ್ಲ. ಹಾಗೆ ಶ್ರೀಕೃಷ್ಣನಿಗೆ ನಾಲ್ಕು ಕೈಗಳು ಇಲ್ಲ. ಸಾಧಾರಣ ಮನುಷ್ಯನಾಗಿರುವ ಶ್ರೀಕೃಷ್ಣನಿಗೆ ನಾಲ್ಕು ಕೈಗಳಿವೆ ಎನ್ನುವುದು ಎಷ್ಟು ಸಮಂಜಸ. ಹಾಗೇ ನಾಲ್ಕು ಕೈಗಳು ಇದ್ದರೆ ವಿಶ್ವರೂಪ ತೋರಿಸಿ ನಾನು ದೇವರೆಂದು ಹೇಳಿಕೊಳ್ಳಬೇಕಾದ ಅವಶ್ಯಕತೆ ಇರುವುದಿಲ್ಲ ಎಂದುಕೊಳ್ಳುತ್ತೇವೆ. ನಾಲ್ಕು ಕೈಗಳಿದ್ದರೆ ಹೇಳದೇನೆ ದೇವರೆಂದು ಪ್ರಜೆಗಳೆ ಪೂಜಿಸುತ್ತಿದ್ದರು. ಅಪರಿಮಿತ ಅಸಂಖ್ಯೆಗಳಾದ ಕೈಗಳು ವಿಶ್ವರೂಪಕ್ಕಿರುವಾಗ ಕೇವಲ ಸಾವಿರ ಕೈಗಳೆಂದು ಹೇಳುವುದೇನು? ಅನೇಕ ಸಂಶಯಗಳಿಂದ ಕೂಡಿಕೊಂಡು ಎಲ್ಲಿ ನೋಡಿದರು ಶಾಸ್ತ್ರಬದ್ಧವಾದ ಉತ್ತರ ಸಿಗದ ಶ್ಲೋಕಗಳನ್ನು ಈ ಗೀತೆಯಲ್ಲಿ ಹೊರ ಹಾಕಲಾಗಿದೆ. **ಇದು ಶಾಸ್ತ್ರವೆಂಬ ಜಲದಿಂದ ತೊಳೆಯಲಾದ ಗೀತೆ. ಎಷ್ಟೋ ಭಾವನೆಗಳು ಸವರಿಸಲ್ಪಟ್ಟ ಗೀತೆ.** ಇದನ್ನು ಅಸೂಯೆಯಿಂದ ಅಡ್ಡವಾಗಿ ಮಾತನಾಡುವುದನ್ನು ಬಿಟ್ಟು ಎಲ್ಲರೂ ಸಮ್ಮತಿಸಬೇಕಾದುದೆಂದು ತಿಳಿಸುತ್ತಿದ್ದೇವೆ.

**ಪರಮಾತ್ಮ ಹೀಗೆ ಹೇಳಿದನು :–**

**(10) ಶ್ಲೋ॥ 47 : ಮಯಾ ಪ್ರಸನ್ನೇನತವಾರ್ಜುನೇದಂ ರೂಪಂ ಪರಂ ದರ್ಶಿತಮಾತ್ಮಯೋಗಾತ್ ।**
**ತೇಜೋಮಯಂ ವಿಶ್ವ ಮನನ್ತಮಾದ್ಯಂ ಯನ್ಮೇತ್ವದನ್ಯೇನ ನದೃಷ್ಟಪೂರ್ವಮ್॥**
**(ನಿರಾಕಾರ)**

**ಭಾವಾರ್ಥ :** ನನ್ನೊಂದರ ಪ್ರಸನ್ನತೆಯಿಂದ ಮೊದಲನೆಯದಾದ ವಿಶ್ವವ್ಯಾಪಕವಾದ, ತೇಜಸ್ಸಿನಿಂದ ಕೂಡಿದ ನನ್ನ ಶ್ರೇಷ್ಠವಾದ ರೂಪವನ್ನು ತೋರಿಸಲಾಗಿದೆ. ಪೂರ್ವದಿಂದ ಇಲ್ಲಿಯವರೆಗೂ ನೀನು ಹೊರತುಪಡಿಸಿ ಇತರರ್‍ಯಾರು ಇದನ್ನು ನೋಡಿದವರು ಇಲ್ಲ.

**ವಿವರ** : ಈ ಅಧ್ಯಾಯದಲ್ಲಿ 32ನೇ ಶ್ಲೋಕದಲ್ಲಿ ಇಲ್ಲಿ 47ನೇ ಶ್ಲೋಕವನ್ನು ಭಗವಂತನು ಹೀಗೆ ಹೇಳಿದನೆಂದು ಎಲ್ಲಾ ಗೀತೆಗಳಲ್ಲಿ ಬರೆಯಲಾಗಿದೆ. ಹಾಗೆ ಬರೆಯುವುದು ತಪ್ಪೆಂದು ತಿಳಿಯಬೇಕು. ಜ್ಞಾನದಿಂದ ಪ್ರತಿ ಸೂಕ್ಷ್ಮವನ್ನು ಸ್ಥೂಲವಾಗಿ ಹೇಳಬೇಕೆಂದುಕೊಂಡ ನಾವು ಈ ವಿಷಯವನ್ನೂ ಸಹ ಹೇಳದೇ ತಪ್ಪಲಿಲ್ಲ. ಈ ಎರಡು ಶ್ಲೋಕಗಳನ್ನು ಭಗವಂತನಾದ ಶ್ರೀಕೃಷ್ಣನು ಹೇಳಲಿಲ್ಲ. ಅರ್ಜುನನಿಗೆ ಜ್ಞಾನನೇತ್ರ ದೃಷ್ಟಿ ಇರುವ ಆ ಸಮಯದಲ್ಲಿ ಸ್ವತಃವಾಗಿ ವಿಶ್ವರೂಪನಾದ ಪರಮಾತ್ಮನೇ ಮಾತನಾಡಿದ ಮಾತುಗಳಿವು. ಆ ಸಮಯದಲ್ಲಿ ದೇಹಧಾರಿಯಾದ ಶ್ರೀಕೃಷ್ಣನು ಹೇಳಿದ್ದರೂ ಭೌತಿಕ ಕಿವಿಗಳಿಗೆ ಕೇಳಿಸುವುದಿಲ್ಲ. ಆದ್ದರಿಂದ ಆ ಶ್ಲೋಕಗಳ ಹತ್ತಿರ ಭಗವಂತನು ಹೀಗೆ ಹೇಳುತ್ತಾನೆ ಎಂದು ಬರೆಯಬಾರದು. ಪರಮಾತ್ಮ ಹೀಗೆ ಹೇಳಿದ್ದಾನೆ ಎಂದು ಬರೆಯುವುದು ಸಮಂಜಸ.

ಶರೀರದಿಂದಿರುವ ಕರ್ಮಯೋಗಿಯಾಗಲಿ, ಬ್ರಹ್ಮಯೋಗಿಯಾಗಲಿ ಪರಮಾತ್ಮ ಆಕೃತಿಯನ್ನು ತಿಳಿಯಲಾರರು. ಬ್ರಹ್ಮಯೋಗಿಗಳು ಮಾತ್ರ ತಮ್ಮ ಶರೀರದಲ್ಲಿನ ಆತ್ಮವನ್ನು ಅವರ ಮನೋನೇತ್ರದಿಂದ ನೋಡಿದರು ಪರಮಾತ್ಮನನ್ನು ನೋಡಲಾರರು. ಬದುಕಿರುವವರು ಯಾರು ಪರಮಾತ್ಮನನ್ನು ನೋಡಲಾರರು ಎಂದೇ ಹೇಳಬಹುದು. ಅರ್ಜುನನಿಗೆ ಪರಮಾತ್ಮನೇ ಸ್ವತಃವಾಗಿ ಕಲ್ಪಿಸಿದ ಅವಕಾಶದಿಂದ ನೋಡಿದ್ದಾನೆ. ಅಂತಹ ಅವಕಾಶ ಯಾರಿಗಾದರೂ ಬಂದರೆ ಹೊರತು ನೋಡಲಾರರೆಂದೇ ಹೇಳಬಹುದು. **ಸೃಷ್ಟ್ಯಾದಿಯಿಂದ ಯಾರು ನೋಡದ ರೂಪ ನೀನು ನೋಡಿದೆ ಎಂದು ಪರಮಾತ್ಮ ಎನ್ನುವುದರಿಂದ ಅದು ಯಾರಿಗೂ ಸಾಧ್ಯವಾಗದೆ ಇರುವುದೆಂದು ತಿಳಿಯುತ್ತಿದೆ.** ಪರಮಾತ್ಮ ಹೀಗೆ ಇದ್ದಾನೆಂದು ತಿಳಿಸುವ ನಿಮಿತ್ತವಾಗಿ ಒಂದುಬಾರಿ ಅರ್ಜುನನನ್ನು ಅಡ್ಡ ಇಟ್ಟುಕೊಂಡು ಬಹಿರ್ಗತ ಮಾಡಿರುವುದೆಂದು ತಿಳಿಯಬೇಕು. ಪರಮಾತ್ಮನ ರೂಪವನ್ನು ಪರಮಾತ್ಮ ತಿಳಿಸಬೇಕಾಗಿದ್ದೇ ಆಗಲಿ ಬೇರೆ ಯಾರಿಂದಲೂ ಆಗುವುದಿಲ್ಲವೆಂದು ತಿಳಿಯಬೇಕು. ಅರ್ಜುನನಿಗೆ ಪರಮಾತ್ಮನ ಅನುಗ್ರಹದಿಂದ ಉಂಟಾಗಿರುವುದರಿಂದ ನಮಗೆ ಸ್ವಲ್ಪ ಅರ್ಥವಾಗಿದೆ ಎಂದುಕೊಳ್ಳೋಣ.

**(10) ಶ್ಲೋ॥ 48 : ನವೇದಯಜ್ಞಾಧ್ಯಯನೈರ್ನದಾನೈರ್ನಚಕ್ರಿಯಾಭಿರ್ನತಪೋಭಿರುಗ್ರೈಃ।**
**ಏವಂರೂಪ ಶ್ಯಕ್ಯಅಹಂ ನೃಲೋಕೇ ದ್ರಷ್ಟುಂ ತ್ವದನ್ಯೇನ ಕುರುಪ್ರವೀರ ! ॥**
**(ನಿರಾಕಾರ)**

**ಭಾವಾರ್ಥ**: ವೇದಗಳಿಂದಾಗಲಿ, ಯಜ್ಞಗಳಿಂದಾಗಲಿ, ದಾನಗಳಿಂದಾಗಲಿ, ಉಗ್ರತಪಸ್ಸು ಗಳಿಂದಾಗಲಿ ಈ ರೂಪವಿರುವ ನನ್ನನ್ನು ತಿಳಿಯಲಾರರು. ಜಗತ್ತಿನಲ್ಲಿ ನೀನು ಹೊರತು ನನ್ನನ್ನು ನೋಡಿದವರು ಯಾರೂ ಇಲ್ಲ.

**ವಿವರ** : ಈ ಶ್ಲೋಕದಲ್ಲಿ ಯಾವುವಾದರೆ ಪರಮಾತ್ಮನನ್ನು ಆರಾಧಿಸುವ ಆರಾಧನೆಗಳು ಅಲ್ಲವೊ, ಯಾವುಗಳಿಂದ ಪರಮಾತ್ಮನನ್ನು ತಿಳಿಯಲಾರರೊ ಅವುಗಳನ್ನೇ ತಿಳಿಸಿದ್ದಾನೆ. ಈಗಿನ ಕಾಲದಲ್ಲಿ ವೇದಗಳು ತಿಳಿದ ಸ್ವಾಮಿಗಳು, ಯಜ್ಞಗಳು ಮಾಡುವ ಗುರುಗಳು, ಮಾಡಿಸುವ ಧನಿಕರು, ದೇವತೆಗಳ ಪ್ರಸನ್ನತೆಗೋಸ್ಕರ ತಪಸ್ಸುಗಳು ಮಾಡುವ ಸನ್ಯಾಸಿಗಳು, ದಾನ ಮಾಡುವ ಔದಾರಿಗಳು, ಉತ್ತಮ ಜ್ಞಾನಿಗಳಾಗಿ, ದೈವಜ್ಞರಾಗಿ ಚಲಾವಣೆಯಾಗುವುದು ಸಹಜವೇ. ವೇದಗಳು ತಿಳಿದವರು, ಯಜ್ಞಗಳು ಮಾಡುವವರು, ದಾನಗಳು ತಪಸ್ಸುಗಳು ಮಾಡುವವರು ದೇವರ ಮಾರ್ಗದಲ್ಲಿ ಇಲ್ಲವೆಂಬ ಸತ್ಯ ಸ್ವಲ್ಪ ಕಹಿಯಾಗಿದ್ದರೂ, ಪರಮಾತ್ಮನ ವಾಕ್ಯದ ಪ್ರಕಾರ ಇದು ಸತ್ಯವೇ. ದೈವಕ್ಕೆ ವಿರುದ್ಧವಾದುದು ಮಾಯೆ. ಮಾಯೆ ಪರಮಾತ್ಮನ ಕಡೆ ಯಾರನ್ನೂ ಹೋಗದಂತೆ ತನ್ನಲ್ಲಿಯೇ ಇರುವಂತೆ ಯಜ್ಞ, ದಾನ, ತಪಸ್ಸುಗಳನ್ನು ಸೃಷ್ಟಿಸಿ ಅವುಗಳಿಂದ ದೈವಮಾರ್ಗದಲ್ಲಿ ಇದ್ದಂತೆ ಭ್ರಮಿಸುವಂತೆ ಮಾಡಿದೆ. ದೇವರೇ ಸ್ವತಃವಾಗಿ ಇವು ನನ್ನನ್ನು ತಿಳಿಯುವ ಮಾರ್ಗಗಳು ಅಲ್ಲವೆಂದು ಹೇಳಿದ್ದರೂ, ನಂಬಲಾರದಷ್ಟು ಆಳಕ್ಕೆ ನಮ್ಮನ್ನು ತನ್ನಲ್ಲಿಯೇ ಮುಳುಗಿಸಿದೆ. ಆದುದರಿಂದ ಈಗಲಾದರೂ ಯಾವುವು ದೈವವನ್ನು ತಿಳಿಯುವ ಮಾರ್ಗಗಳೋ, ಯಾವುವು ಅಲ್ಲವೋ ತಿಳಿಯುವುದು ಮುಖ್ಯ. ಈ ವಿಷಯವನ್ನು ವಿಶ್ವರೂಪ ಶಾಂತಿಸಿದಾಗ ಹೇಳಿರುವುದು. ಊರಿಗೆ ಹೋಗುವವನು ಮುಖ್ಯವಾದ ವಿಷಯವನ್ನು ಕೊನೆಯದಾಗಿ ಹೇಳಿದಂತೆ, ಉತ್ತರ ಬರೆಯುವವನು ಕೊನೆಯಲ್ಲಿ ಮುಖ್ಯವಾದ ವಿಷಯವನ್ನು ಪುನಃ ಬರೆಯುವಂತೆ, ಪರಮಾತ್ಮ ತನ್ನ ವಿಶ್ವರೂಪವನ್ನು ಶಾಂತಿಸಿದ ನಂತರ ಹೇಳಿದ ವಿಷಯ ಮಾನವ ಜಾತಿಗೆ ಬಹಳ ಮುಖ್ಯವಾದುದು. ಭಗವಂತನಾಗಿ ಅಲ್ಲದೇ ಪರಮಾತ್ಮ ಸ್ವತಃವಾಗಿ ತನ್ನ ವಿಶ್ವರೂಪದಿಂದ ಕೊಟ್ಟಿರುವ ಸಂದೇಶವು ಬಹಳ ಮುಖ್ಯವಾದುದು. ಪರಮಾತ್ಮ ವಿಶ್ವರೂಪದಿಂದ ಹೇಳಿರುವವು ಎರಡೇ ವಿಷಯಗಳು.

1) **ನಾನು ಕಾಲವಾಗಿದ್ದು ಎಲ್ಲರ ಹುಟ್ಟುವಿಕೆಯನ್ನು ಉಂಟುಮಾಡಿ ಕೊನೆಗೆ ಮೃತ್ಯುವು ಆಗುತ್ತಿದ್ದೇನೆ.**

2) **ವೇದಗಳಿಂದ, ಯಜ್ಞಗಳಿಂದ, ದಾನಗಳಿಂದ, ತಪಸ್ಸುಗಳಿಂದ ನನ್ನನ್ನು ಯಾರು ತಿಳಿಯಲಾರರು.**

ಪರಮಾತ್ಮ ತಿಳಿಸಿದ ಈ ಎರಡು ವಿಷಯಗಳು ಜೀವರಾಶಿಗಳಿಗೆ ಬಹಳ ಮುಖ್ಯವೆಂದು ತಿಳಿಯಬೇಕು. ನಮ್ಮ ಆರಾಧನೆಗಳನ್ನನುಸರಿಸಿ ನಾವು ಪರಮಾತ್ಮನ ಕಡೆ ಇದ್ದೇವೋ ಪ್ರಕೃತಿ (ಮಾಯೆ ಅಥವಾ ಸಾತಾನ್, ಅಥವಾ ಸೈತಾನ್) ಕಡೆ ಇದ್ದೇವೊ ಆಲೋಚಿಸಿಕೊಳ್ಳಿ.

**(10) ಶ್ಲೋ॥ 49 : ಮಾತೇವ್ಯಥಾ ಮಾಚ ವಿಮೂಢಭಾವೋ ದೃಷ್ಟ್ವಾರೂಪಂ ಘೋರಮೀದೃಜ್ಮಮೇದಮ್**
**ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ ತದೇವಮೇ ರೂಪಮಿದಂ ಪ್ರಪಶ್ಯ॥**
**(ಸಾಕಾರ, ನಿರಾಕಾರ)**

**ಭಾವಾರ್ಥ** : ಈ ಭಯಂಕರ ರೂಪವನ್ನು ನೀನು ನೋಡಿ ಭಯಪಡಬೇಡ, ವಿಮೂಢ ಭಾವಗಳನ್ನು ಹೊಂದಬೇಡ. ನಿನಗೆ ಪ್ರೀತಿ ಉಂಟಾಗುವುದಕ್ಕೆ, ಭಯ ಬಿಟ್ಟುಹೋಗುವುದಕ್ಕೆ ಮೊದಲು ಸೌಮ್ಯವಾಗಿರುವ ರೂಪವನ್ನೇ ತೋರಿಸುತ್ತಿದ್ದೇನೆ ನೋಡು.

**ವಿವರ** : ವಿಶ್ವರೂಪ ಸಂದರ್ಶನದಲ್ಲಿ ಅರ್ಜುನನ ಮನೋನೇತ್ರಕ್ಕೆ ಪರಮಾತ್ಮನಲ್ಲದೇ ಯಾರೂ ಕಾಣಿಸಲಿಲ್ಲ. ಎಲ್ಲರೂ ಆತನಲ್ಲಿಯೇ ಕಾಣಿಸುವುದರಿಂದ, ಎಲ್ಲರನ್ನೂ ನಾಶ ಮಾಡುವ ಆ ರೂಪ ಭಯಂಕರವಾದುದು ಆದ್ದರಿಂದ ಅರ್ಜುನ ಭೀತಿಗೊಂಡ ಮಾತು ನಿಜವೇ. ಭಯಪಟ್ಟ ಅರ್ಜುನನಿಗೆ ಸಮಾಧಾನಪಡಿಸಲು ಸಾಧಾರಣ ಕಣ್ಣುಗಳಿಗೆ ದೃಷ್ಟಿಕೊಟ್ಟು, ಮನೋ ನೇತ್ರವನ್ನು ಇಲ್ಲದಂತೆಮಾಡಿ, ಪರಮಾತ್ಮ ಪುನಃ ಸಾಧಾರಣ ಮನುಷ್ಯನಂತೆ ಶ್ರೀಕೃಷ್ಣನಾಗಿ ಅರ್ಜುನನಿಗೆ ಕಾಣಿಸಿದನು. ಆಗ ಅರ್ಜುನ ಭಯದಿಂದ ಚೇತರಿಸಿ ಕೊಂಡವನಾಗಿ ಹೀಗೆ ಹೇಳಿದನು.

**ಸಂಜಯ ಹೀಗೆ ಹೇಳಿದನು. :–**

**(10) ಶ್ಲೋ॥ 50 : ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ ಸ್ವಕಂ ರೂಪಂ ದರ್ಶಯಾಮಾಸ ಭೂಯಃ।**
**ಆಶ್ವಾಸಯಾಮಾಸ ಚ ಭೀತಮೇನಂ ಭೂತ್ವಾ ಪುನಃ ಸೌಮ್ಯವಪುರ್ಮಹಾತ್ಮಾ ॥**
**(ಕಲ್ಪಿತ)**

**ಅರ್ಜುನನು ಹೀಗೆ ಹೇಳಿದನು :–**

**(10) ಶ್ಲೋ॥ 51 : ದೃಷ್ಟ್ವೇದಂ ಮಾನುಷಂ ರೂಪಂ ತವ ಸೌಮ್ಯಂ ಜನಾರ್ಧನ! ।**
**ಇದಾನೀಮಸ್ಮಿ ಸಂವೃತ್ತಸ್ಸಚೇತಾಃ ಪ್ರಕೃತಿಂ ಗತಃ ॥**

**(ಸಾಕಾರ)**

**ಭಾವಾರ್ಥ**: ಓ ಕೃಷ್ಣಾ! ಮನುಜರೂಪದಲ್ಲಿ ನಿನ್ನ ಸೌಮ್ಯ ಸ್ವಭಾವ ಆಕೃತಿಯನ್ನು ಕಂಡು ನನ್ನ ಅಂತರಂಗದಲ್ಲಿ ಸ್ವಸ್ಥತೆ ಏರ್ಪಟ್ಟಿದೆ. ಮನಸ್ಸು ಸ್ಥಿರವಾಗಿದೆ.

**ಶ್ರೀ ಭಗವಂತನು ಹೀಗೆ ಹೇಳಿದನು :–**

**(10) ಶ್ಲೋ॥ 52 : ಸುದುರ್ದರ್ಶ ಮಿದಂ ರೂಪಂ ದೃಷ್ಟವಾ ನಸಿ ಯನ್ಮಮ ।**
**ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನ ಕಾಂಕ್ಷಿಣಃ ॥**

**(ನಿರಾಕಾರ)**

**ಭಾವಾರ್ಥ** : ಅರ್ಜುನಾ! ನೀನು ನೋಡಿದ ಬ್ರಹ್ಮಾಂಡವಾದ ರೂಪವು ಇತರರು ನೋಡುವುದು ದುರ್ಲಭ. ದೇವತೆಗಳೆಷ್ಟೋ ನನ್ನ ದಿವ್ಯಾಕೃತಿಯನ್ನು ನೋಡುವುದಕ್ಕೆ ಯಾವಾಗಲೂ ಆಕಾಂಕ್ಷೆಹೊಂದಿದ್ದಾರೆ.

**ವಿವರ** : ಪರಮಾತ್ಮ ದರ್ಶನ ಹೊಂದಬೇಕೆಂದು ದೇವತೆಗಳೆಲ್ಲರು ಆಸೆಯಿಂದ ಇದ್ದಾರೆ. ಆದರೂ ಅವರಿಗೆ ದರ್ಶನವಾಗಲಿಲ್ಲ. ಇಲ್ಲಿ ಕೆಲವರಿಗೊಂದು ಪ್ರಶ್ನೆ ಹುಟ್ಟಬಹುದು. **ಮಾನವರಾದ ನಮಗೆ ಆ ದರ್ಶನ ಲಭಿಸದೆ ಹೋಗಬಹುದು. ಆದರೆ ದೇವತೆಗಳಿಗೂ ಸಾಧ್ಯವಾಗುವುದಿಲ್ಲವೆ'** ಎಂದು ಕೇಳಬಹುದು. ಅದಕ್ಕೆ ಉತ್ತರ ದೇವತೆಗಳು ಬೇರೆ. ಮನುಷ್ಯರು ಬೇರೆ ಎಂದುಕೊಳ್ಳಬಾರದು. ಮನುಷ್ಯರಲ್ಲಿ ಸ್ವಲ್ಪ ಹೆಚ್ಚಾಗಿ ಪುಣ್ಯ ಮಾಡಿದವರು ದೇವತೆಗಳಾಗುತ್ತಾರೆ. ಅಷ್ಟೇ ಆಗಲಿ ಅವರಿಗೂ ನಮಗೂ ದೊಡ್ಡ ವ್ಯತ್ಯಾಸವೇನು ಇರುವುದಿಲ್ಲ. ಅವರು ಜೀವಾತ್ಮಗಳೇ ನಾವು ಜೀವಾತ್ಮಗಳೇ. ಅವರಿಗೆ ನಮಗಿಂತ ಹೆಚ್ಚಾಗಿ ಜ್ಞಾನ ಇರುವುದರಿಂದ ಪರಮಾತ್ಮ ದರ್ಶನವನ್ನು ನಿತ್ಯವೂ ಕೋರಿಕೊಳ್ಳುತ್ತಿದ್ದಾರೆ. ಆದರೂ ಅದು ಸಾಧ್ಯವಾಗಲಿಲ್ಲ. ಪರಮಾತ್ಮನ ದಯೆಯಿಂದ ಅರ್ಜುನನಿಗೊಬ್ಬನಿಗೆ ಆ ದರ್ಶನ ಭಾಗ್ಯ ಲಭಿಸಿದೆ.

**(10) ಶ್ಲೋ॥ 53 : ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।**
**ಶಕ್ಯ ಏವಂ ವಿಧೋ ದ್ರಷ್ಟುಂ ದೃಷ್ಟವಾ ನಸಿ ಮಾಂ ಯಥಾ ॥**

**(ನಿರಾಕಾರ)**

**ಭಾವಾರ್ಥ** : ನೀನು ನನ್ನನ್ನು ಹೇಗೆ ನೋಡಿರುವೆಯೋ ಆ ದರ್ಶನ ಸಿಗಬೇಕೆಂದರೆ ವೇದಗಳಿಂದಲೂ, ದಾನಗಳಿಂದಲೂ ಮತ್ತು ಯಜ್ಞಗಳಿಂದಲೂ ಶಕ್ಯವಲ್ಲ.

**ವಿವರ** : ಈ ವಿಷಯವನ್ನು 48ನೇ ಶ್ಲೋಕದಲ್ಲಿ ವಿಶ್ವರೂಪದಲ್ಲಿಯೂ ಸಹ ಹೇಳಿದ್ದಾರೆ. ಮುಖ್ಯ ವಿಷಯವಾದ್ದರಿಂದ ಭಗವಂತನಾಗಿ ಮತ್ತೊಂದು ಬಾರಿ ಇಲ್ಲಿ ಒತ್ತಿ ಹೇಳಲಾಗಿದೆ. ಅರ್ಜುನ ನೋಡಿದ ಪರಮಾತ್ಮನ ದರ್ಶನ ವೇದಗಳು ಓದುವುದರಿಂದಾಗಲಿ, ದಾನಗಳಿಂದಾಗಲಿ, ಯಜ್ಞಗಳು ಮಾಡುವುದರಿಂದಾಗಲಿ, ತಪಸ್ಸುಗಳಿಂದಾಗಲಿ ಲಭಿಸುವುದಿಲ್ಲ. ಕೆಲವರಿಗೆ ತಪಸ್ಸುಗಳಿಂದ ಯಾರನ್ನಾದರು ಪ್ರತ್ಯಕ್ಷ ಮಾಡಿಕೊಳ್ಳಬಹುದೆಂಬ ಭಾವವಿರುತ್ತದೆ. ತಪಸ್ಸುಗಳಿಂದ ದೇವತೆಗಳು ಪ್ರತ್ಯಕ್ಷ ಆಗುತ್ತಾರೇನೋ ಆದರೆ ಪರಮಾತ್ಮ ದರ್ಶನ ಮಾತ್ರ ದಾನಗಳಿಂದಾಗಲಿ, ವೇದಧ್ಯಾಯನಗಳಿಂದಾಗಲಿ, ಯಜ್ಞಯಾಗಾದಿಗಳಿಂದಾಗಲಿ, ಉಗ್ರವಾದ ತಪಸ್ಸುಗಳಿಂದಾಗಲಿ ಸಾಧ್ಯವಾಗುವುದಿಲ್ಲವೆಂದು ತಿಳಿಯಬೇಕು. ಹಾಗಾದರೂ ಪರಮಾತ್ಮನನ್ನು ಹೊಂದುವವರೆಲ್ಲರೂ ಹೇಗೆ ಯಾವ ಮಾರ್ಗದಿಂದ ಹೊಂದುತ್ತಿದ್ದಾರೆಂದು ಪ್ರಶ್ನಿಸಿದಾಗ ಕೆಳಗಿನ ಶ್ಲೋಕದಲ್ಲಿ ಉತ್ತರ ನೋಡೋಣ.

**(10) ಶ್ಲೋ॥ 54 : ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂ ವಿಧೋಽರ್ಜುನ! ।**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರನ್ತಪ! ॥**
**(ಪರಮಾತ್ಮ, ಬ್ರಹ್ಮಯೋಗ)**

**ಭಾವಾರ್ಥ** : ಅರ್ಜುನಾ! ನನ್ನ ಆತ್ಮವನ್ನು ತಿಳಿಯುವುದಕ್ಕೆ, ನೋಡುವುದಕ್ಕೆ, ಪ್ರವೇಶಿಸುವುದಕ್ಕೆ ಅನನ್ಯವಾದ ಭಕ್ತಿಯಿಂದಲೇ ಸಾಧ್ಯವಾಗುತ್ತದೆ.

**ವಿವರ** : ಇತರ ದೇವತೆಗಳ ಮೇಲೆ ಧ್ಯಾಸವಿಲ್ಲದೇ ಪರಮಾತ್ಮನ ಮೇಲೆಯೇ ಭಕ್ತಿ ಹೊಂದಿರುವವನು, ಅನ್ಯಚಿಂತೆ ಇಲ್ಲದೆ ಮನಸ್ಸು ನಿಲ್ಲಿಸುವವನು, ತನ್ನ ಶರೀರದಲ್ಲಿನ ಪರಮಾತ್ಮ ಆಂಶವಾದ ಆತ್ಮವನ್ನು ತಿಳಿಯುತ್ತಾನೆ, ನೋಡುತ್ತಾನೆ. ನಂತರ ಪರಮಾತ್ಮನಲ್ಲಿ ಪ್ರವೇಶಿಸುತ್ತಾನೆ. ಈ ವಿಧವಾಗಿ ಪರಮಾತ್ಮನನ್ನು ಸೇರುವ ಮಾರ್ಗವು ಇದೆ.

**(10) ಶ್ಲೋ॥ 55 : ಮತ್ಕ ರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ ।**
**ನಿರ್ವೈರ ಸ್ಸರ್ವಭೂತೇಷು ಯಸ್ಸ ಮಾಮೇತಿ ಪಾಂಡವ ! ॥**
**(ಭಕ್ತಿಯೋಗ, ಬ್ರಹ್ಮಯೋಗ, ಕರ್ಮಯೋಗ)**

**ಭಾವಾರ್ಥ** : ಯಾರು ನನ್ನ ಕರ್ಮಗಳನ್ನೇ ಆಚರಿಸುತ್ತಿದ್ದಾನೋ, ಯಾರು ನನ್ನ ಸ್ಥಾನವನ್ನೇ

ಮುಖ್ಯಗತಿಯಾಗಿ ತಿಳಿಯುತ್ತಿದ್ದಾನೋ, ಯಾರು ಸಂಗವರ್ಜಿತನೋ, ಯಾರು ಸರ್ವಭೂತಗಳಲ್ಲಿ ವೈರ ಇಲ್ಲದವನಾಗಿ ಬ್ರಹ್ಮಯೋಗಿಯಾಗಿ ಇದ್ದಾನೋ ಆತನು ನನ್ನನ್ನೇ ಸೇರುತ್ತಾನೆ.

**ವಿವರ** : ಈ ಶ್ಲೋಕದಲ್ಲಿ ಮತ್‌ಕರ್ಮ= ನನ್ನ ಕೆಲಸವನ್ನು, ಕೃತ್ =ಮಾಡುವವನು. ನನ್ನ ಕೆಲಸವನ್ನು ಮಾಡುವವನೆಂದು ಪರಮಾತ್ಮ ಹೇಳಿದ್ದಾನೆ. ಪರಮಾತ್ಮ ಕೆಲಸ ಏನೆಂದುಕೊಂಡರೆ ಆತನು ಎಲ್ಲಾ ಮಾಡುತ್ತಿದ್ದಾನೆ. ಎಲ್ಲಾ ಕೆಲಸಗಳು ಆತನವೆಂದು ಕೆಲವರು ಹೇಳಬಹದು. ಎಲ್ಲದಕ್ಕೂ ಕಾರಣ ಆತನೇ ಆದರೂ ಅವು ನಮಗೆ ಕಾಣಿಸದಂತೆ, ನಮಗೆ ತಿಳಿಯದಂತೆ ಮಾಡುವವು. ಅವುಗಳನ್ನು ನಾವು ಲೆಕ್ಕಿಸಬಾರದು, ಉದಾಹರಣೆಗೆ ಸರ್ವ ಜೀವರಾಶಿಗಳನ್ನು ಹುಟ್ಟಿಸುತ್ತಿದ್ದೇನೆ ಮತ್ತು ಸಾಯಿಸುತ್ತಿದ್ದೇನೆಂದು ಹಿಂದಿನ ಅಧ್ಯಾಯಗಳಲ್ಲಿ ಹೇಳಿದ್ದಾನೆ. ಪರಮಾತ್ಮ ಮಾಡುವ ಆ ಕೆಲಸವನ್ನು ಜೀವಾತ್ಮಗಳಾಗಿರುವ ನಾವು ಮಾಡಲಾರೆವು. ನಮಗೆ ಪೂರ್ತಿಯಾಗಿ ತಿಳಿಯುವಂತೆ ಭಗವಂತನಾಗಿ ಸಾಕಾರರೂಪದಲ್ಲಿ ಮಾಡುವ ಕೆಲಸಗಳೇ ಮುಖ್ಯ. ಅಷ್ಟುದೊಡ್ಡ ಪರಮಾತ್ಮ ಕೇವಲ ಒಂದು ಚಿಕ್ಕ ಮಾನವ ಶರೀರವನ್ನು ಧರಿಸಿ ಹುಟ್ಟಿ ಮಾನವರಿಗೆ ಅಗತ್ಯವಾದ ಧರ್ಮಗಳನ್ನು ತಿಳಿಸುತ್ತೇನೆಂದಿದ್ದಾನೆ. ಧರ್ಮಗಳಿಗೆ ಮುಪ್ಪು ಏರ್ಪಟ್ಟು ಅವು ಇಲ್ಲದಂತೆ ಹೋದಾಗ ನಾನು ಹುಟ್ಟುತ್ತೇನೆಂದಿದ್ದಾನೆ. ಅಂತಹದರಲ್ಲಿ ಆತನ ಜೀವನ ಧ್ಯೇಯವಾದ ಕೆಲಸ ಧರ್ಮಗಳನ್ನು ಪುನಃ ನೆಲೆಗೊಳಿಸುವುದೇ. ಇಲ್ಲಿ ನನ್ನ ಕೆಲಸವೆಂದು ಅದನ್ನೇ ಹೇಳುತ್ತಿದ್ದಾನೆ. ಯಾರಾದರೆ ಮಾಸಿಹೋದ ಧರ್ಮಗಳನ್ನು ತಿಳಿಸುತ್ತಿದ್ದಾನೋ, ಅವನು ಪರಮಾತ್ಮನ ಕೆಲಸವನ್ನು ಮಾಡಿದಂತಾಗುತ್ತದೆ. ಆತನ ಕೆಲಸವನ್ನು ಮಾಡುವವನು ಪರಮಾತ್ಮನನ್ನು ಹೊಂದುವುದಕ್ಕೆ ಅವಕಾಶ ಇದೆಯೆಂದು ತಿಳಿಸುತ್ತಿದ್ದಾನೆ.

ಇಲ್ಲಿ ಕೆಲವರಿಗೊಂದು ಪ್ರಶ್ನೆ ಹುಟ್ಟುವುದಕ್ಕೆ ಅವಕಾಶ ಇದೆ. ಅದು ಏನೆಂದರೆ! ಪರಮಾತ್ಮನನ್ನು ಸೇರಬೇಕೆಂದರೆ ಎರಡೇ ಮಾರ್ಗಗಗಳೆಂದಿದ್ದಾರೆ ಅಲ್ಲವೆ! ಆ ಎರಡರಲ್ಲಿ ಒಂದು ಕರ್ಮಯೋಗ, ಎರಡನೆಯದು ಬ್ರಹ್ಮಯೋಗವೆಂದು ನೀವೇ ಹೇಳಿದ್ದೀರಾ ಅಲ್ಲವೆ! ಈಗ ಯಾವ ಯೋಗವು ಅಲ್ಲದಂತಹ ಈ ಕೆಲಸವನ್ನು ಮಾಡುವುದರಿಂದ ಮೋಕ್ಷ ಹೊಂದಬಹುದೆನ್ನುತ್ತಿದ್ದೀರ ಅಲ್ಲವೆ! ಅಸಲು ಪರಮಾತ್ಮನನ್ನು ಸೇರುವ ಮಾರ್ಗಗಗಳು ಎಷ್ಟು ಇವೆ? ಮೊದಲು ಹೇಳಿರುವವು ಎರಡೇನಾ! ಅಥವಾ ಬಹಳ ಇವೆಯಾ?

ಹೀಗೆ ಪ್ರಶ್ನಿಸುವುದರಿಂದ ಜ್ಞಾನಾಭಿವೃದ್ಧಿ ಚೆನ್ನಾಗಿ ನಡೆಯುತ್ತದೆಂದು ನಮ್ಮ ಅಭಿಪ್ರಾಯ. ಅನುಮಾನ ಬಂದಾಗ ಅರ್ಜುನನು ಶ್ರೀಕೃಷ್ಣನನ್ನು ಬಿಡದೆ ಪ್ರಶ್ನಿಸಿದ್ದಾನೆ. ಹಾಗೆಯೇ ಇಲ್ಲಿ ಈ ಪ್ರಶ್ನೆ ಸರ್ವಸಮ್ಮತವು. ಅದಕ್ಕೆ ಉತ್ತರ ಏನೆಂದರೆ! ಪರಮಾತ್ಮನನ್ನು ಸೇರುವುದಕ್ಕೆ ಮಾರ್ಗಗಗಳು ಎರಡೇ ಎಂದು ಈಗಲೂ ಸಹ ಹೇಳುತ್ತಿದ್ದೇವೆ. ಎಲ್ಲರಿಗೂ ಯೋಗ್ಯವಾದವು ಎರಡೇ ಮಾರ್ಗಗಗಳು. ಎಲ್ಲರಿಗೂ ಯೋಗ್ಯವಲ್ಲದಿರುವುದು, ಎಲ್ಲರಿಗೂ ಸಾಧ್ಯವಾಗದಿರುವುದು ಒಂದು ಮಾರ್ಗವಿದೆ. ಅದು ಹಿತ್ತಲುದಾರಿಯಂತೆ ಪರಮಾತ್ಮನನ್ನು ಬಹಳ ಬೇಗನೇ ಸೇರಿಸುವುದು. ಇದು ಮನಸ್ಸು ನಿಲ್ಲಿಸುವುದಕ್ಕಿಂತಲೂ ದುಸ್ಸಾಧ್ಯ ವಾದುದು. ಆದ್ದರಿಂದ ಪರಮಾತ್ಮ ಗೀತೆಯಲ್ಲಿಯೂ ಸಹ ಮೊದಲು ಎರಡೇ ಮಾರ್ಗಗಳೆಂದು ತಿಳಿಸಿ ನಂತರ ಸಂದರ್ಭಾನುಸಾರವಾಗಿ ಇದನ್ನು ಹೇಳಿದ್ದಾನೆ. ಈ ವಿಷಯ ಎಂದರೆ ಮೂರನೆಯದರ ವಿಷಯ ಆರನೆಯ ಅಧ್ಯಾಯವಾದ ವಿಜ್ಞಾನಯೋಗದಲ್ಲಿ 19ನೇ ಶ್ಲೋಕದಲ್ಲಿ ತಿಳಿಸಿರುತ್ತೇವೆ. ಆರನೇ ಅಧ್ಯಾಯದಲ್ಲಿಯೆ ಮೂರನೆ ದಾರಿಯನ್ನು ತಿಳಿಸಲಾಗಿದೆ. ಇದು ಬಹಳ ಹತ್ತಿರದ ದಾರಿ ಆದ್ದರಿಂದ ಸೂಕ್ಷ್ಮದಲ್ಲಿ ಮೋಕ್ಷ ಎನ್ನುತ್ತಿದ್ದೇವೆ. ನಿಜವಾಗಲು ಇದು ಕರ್ಮ, ಬ್ರಹ್ಮಯೋಗವಂತಹದ್ದಲ್ಲ. ಇದು ಭಕ್ತಿ ಯೋಗವೆಂಬ ಪ್ರತ್ಯೇಕವಾದ ಮಾರ್ಗ ಈ ಪ್ರತ್ಯೇಕವಾದ ಮಾರ್ಗದಲ್ಲಿಯೇ ಪರಮಾತ್ಮನ ಕೆಲಸಗಳನ್ನು ಆಚರಿಸುವುದು ಸಹ ಇದೆಯೆಂದು ತಿಳಿಯಬೇಕು. ಸಾಧಾರಣವಾಗಿ ತಂದೆಯ ಕೆಲಸವನ್ನು ಮಗ ಮಾಡಿದಂತೆ, ಪರಲೋಕ ರಾಜ್ಯ ತಂದೆಯಾದ ಪರಮಾತ್ಮನ ಕೆಲಸವನ್ನು ಆತನ ಸಂತತಿಯಾದ ನಾವು ಮಾಡುವುದು ಸಮುಚಿತ. ತಂದೆಯನ್ನು ಗುರುತಿಸಿ ಆತನ ಕೆಲಸಗಳನ್ನು ಗುರುತಿಸಿ ಅವುಗಳನ್ನು ಆಚರಿಸುವುದರಿಂದ ಸುಲಭವಾಗಿ ಮೋಕ್ಷವನ್ನು ಹೊಂದಬಹುದು. ಹಾಗಲ್ಲದೆ ಹೋದರೆ ಯೋಗಮಾರ್ಗಗಗಳು ಎರಡೇ ಗತಿ ಎಂದು ತಿಳಿಯಬೇಕು.

ಅಷ್ಟೇ ಅಲ್ಲದೆ ನನ್ನ ಭಕ್ತನಾಗಿ, ಸಂಗವರ್ಜಿತನಾಗಿ ಎಂದು ಸಹ ಹೇಳಿದ್ದಾನೆ. ಪಾಪಪುಣ್ಯಗಳನ್ನು ಅಂಟದಂತೆ ಯಾರು ಕೆಲಸಗಳು ಮಾಡುತ್ತಿದ್ದಾನೋ ಅವನು ಪರಮಾತ್ಮನನ್ನು ಸೇರುತ್ತಾನೆ. ಇದು ಪರಮಾತ್ಮನನ್ನು ಸೇರುವ ಎರಡು ಮಾರ್ಗಗಳಲ್ಲಿ ಒಂದಾದ ಕರ್ಮಯೋಗ. ಕರ್ಮಯೋಗದಲ್ಲಿ ಪಾಪಪುಣ್ಯಗಳ ಸಂಗಮ ಇರುವುದಿಲ್ಲ. ಕರ್ಮಗಳ ಸಂಗಮವನ್ನು ಬಿಟ್ಟವನು ಪರಮಾತ್ಮನನ್ನು ಸೇರುತ್ತಾನೆನ್ನುವುದೇ ಅಲ್ಲದೆ ಈ ಶ್ಲೋಕದಲ್ಲಿ ಮತ್ತೊಂದು ಮಾತು ಸಹ ಹೇಳಿದ್ದಾನೆ. ಸರ್ವಭೂತಗಳಿಗು ವೈರತ್ವ ಇಲ್ಲದಂತಹವನೂ ನನ್ನನ್ನು ಸೇರುತ್ತಾನೆ. ಈ ಮಾತು ಎರಡನೆಯ ಮಾರ್ಗವಾದ ಬ್ರಹ್ಮಯೋಗಕ್ಕೆ ಸಂಬಂಧಿಸಿರುವುದು. ಬ್ರಹ್ಮಯೋಗದಲ್ಲಿ ಸರ್ವಜೀವರಾಶಿಗಳಿಗೂ ಸಮಾನ

ವಾದ ಆತ್ಮಾನುಭವವನ್ನು ಹೊಂದುತ್ತಿದ್ದಾನೆ. ಆ ಸಮಯದಲ್ಲಿ ಅವನು ಯಾವ ಜೀವರಾಶಿಗು ಶತ್ರುವು ಅಲ್ಲದಿರುವಂತಹ ಆತ್ಮದೊಂದಿಗೆ ಸಂಬಂಧ ಹೊಂದಿದ್ದಾನೆ. ಅಂತಹ ಬ್ರಹ್ಮಯೋಗ ಆಚರಿಸುವವನು ಸರ್ವಜೀವರಾಶಿಗಳಿಗೂ ವೈರಿ ಇಲ್ಲದಂತಹವನೆಂದು ತಿಳಿಯಬೇಕು. ಇಲ್ಲಿ ಯೋಗಮಾರ್ಗಗಗಳು ಎರಡನ್ನೂ ಮತ್ತು ಪ್ರತ್ಯೇಕವಾದ ಮಾರ್ಗವೊಂದನ್ನು ಕುರಿತು ಹೇಳಿ ಆತ್ಮಾನುಭವವನ್ನು ಹೊಂದುತ್ತಿದ್ದಾನೆ. ಆ ಸಮಯದಲ್ಲಿ ಅವನು ಯಾವ ಜೀವರಾಶಿಗು ಶತ್ರುವು ಅಲ್ಲದಂತಹ ಆತ್ಮದೊಂದಿಗೆ ಸಂಬಂಧಹೊಂದಿದ್ದಾನೆ. ಅಂತಹ ಬ್ರಹ್ಮಯೋಗ ಆಚರಿಸುವವನು ಸರ್ವಜೀವರಾಶಿಗಳಿಗೂ ವೈರತ್ವ ಇಲ್ಲದಂತಹವನೆಂದು ತಿಳಿಯಬೇಕು. ಇಲ್ಲಿ ಯೋಗಮಾರ್ಗಗಳು ಎರಡನ್ನು ಮತ್ತು ಪ್ರತ್ಯೇಕವಾದ ಮಾರ್ಗ ಒಂದನ್ನು ಕುರಿತು ಹೇಳಿ ಅವುಗಳಿಂದ ವಿಶ್ವರೂಪನಾದ ಪರಮಾತ್ಮನನ್ನು ಸೇರುತ್ತಾರೆಂದು ತಿಳಿಸಿದ್ದಾನೆ. ಇಲ್ಲಿಗೆ ವಿಶ್ವರೂಪಸಂದರ್ಶನ ಯೋಗವೆಂಬ ಈ ಅಧ್ಯಾಯ ಮುಕ್ತಾಯ.

ಈ ಅಧ್ಯಾಯದಲ್ಲಿನ ಶ್ಲೋಕಗಳ ವಿವರವನ್ನು ಕೆಳಗೆ ನೋಡಬಹುದು.

| | | | |
|---|---|---|---|
| 1. | ಧರ್ಮಗಳು | – | 1 |
| 2. | ಪರಮಾತ್ಮ | – | 4 |
| 3. | ನಿರಾಕಾರ(ವಿಶ್ವರೂಪ) | – | 26 |
| 4. | ಪರಮಾತ್ಮ, ಬ್ರಹ್ಮಯೋಗ | – | 1 |
| 5. | ಭಕ್ತಿಯೋಗ, ಬ್ರಹ್ಮಯೋಗ, ಕರ್ಮಯೋಗ | – | 1 |
| 6. | ಅಶಾಸ್ತ್ರೀಯವಾದವು | – | 10 |
| 7. | ಸಾಕಾರ, ನಿರಾಕಾರ | – | 2 |
| 8. | ಸಾಕಾರ | – | 4 |
| 9. | ಪರಮಾತ್ಮ– ನಿರಾಕಾರ | – | 6 |
| | **ಒಟ್ಟು ಶ್ಲೋಕಗಳು** | – | **55** |

ಭಾವ, ವಿವರವನ್ನು ಬದಲಾಯಿಸಿ ಬರೆದ ಶ್ಲೋಕಗಳು – 23, 25, 27, 39.



## ಹನ್ನೊಂದನೆಯ ಅಧ್ಯಾಯ

# ಭಕ್ತಿ ಯೋಗ

**ಅರ್ಜುನನು ಹೀಗೆ ಕೇಳಿದನು :-**

**(11) ಶ್ಲೋ॥ 1 : ಏವಂ ಸತತ ಯುಕ್ತಾಯೇ ಭಕ್ತಾ ಸ್ತ್ವಾಂಪರ್ಯುಪಾಸತೇ ।**
**ಯೇಚಾಪ್ಯಕ್ಷರ ಮವ್ಯಕ್ತಂ ತೇಷಾಂ ಕೇಯೋಗವಿತ್ತಮಾಃ ॥**

**(ಬ್ರಹ್ಮ, ಕರ್ಮ, ಭಕ್ತಿಯೋಗಗಳು)**

**ಭಾವಾರ್ಥ** : ಆ ವಿಧವಾಗಿ ಯಾವಾಗಲೂ ಆತ್ಮನಲ್ಲಿ ಕೂಡಿಕೊಂಡವನು, ಭಕ್ತಿಯಿಂದ ನಿನ್ನನ್ನು ಉಪಾಸಿಸುವವನು, ಕಾಣಿಸದ ನಾಶವಿಲ್ಲದ ಸ್ಥಾನವನ್ನು ಕುರಿತು ಉಪಾಸಿಸುವವನು ಇದ್ದಾರೆ. ಇವರಲ್ಲಿ ಚೆನ್ನಾಗಿ ಯೋಗ ತಿಳಿದವರು ಯಾರು?

**ವಿವರ** : ವಿತ್= ತಿಳಿಯುವುದು, ಯೋಗ= ಕೂಡಿಕೆ, ಯೋಗವಿತ್ ಎಂದರೆ ಪರಮಾತ್ಮನೊಂದಿಗೆ ಸೇರುವುದಕ್ಕೆ ತಿಳಿದಿದೆಂದು ಅರ್ಥ. ಪರಮಾತ್ಮನಲ್ಲಿ ಸೇರುವುದಕ್ಕೆ ಹಿಂದಿನ ಅಧ್ಯಾಯದ ಕೊನೆಯ ಶ್ಲೋಕದಲ್ಲಿ ಹೇಳಿದಂತೆ ಮೂರು ಮಾರ್ಗಗಳು ಇವೆ. ಕರ್ಮಯೋಗ, ಬ್ರಹ್ಮಯೋಗ ಅಲ್ಲದೆ ಭಕ್ತಿಯೋಗವೆಂದು ಹೆಸರು ಇಟ್ಟಿರುವ ಮೂರನೆ ಮಾರ್ಗ ಇದೆಯೆಂದು ತಿಳಿದುಕೊಂಡ ಅರ್ಜುನನು, ಈ ಮೂರು ಮಾರ್ಗಗಗಳಲ್ಲಿ ಯಾವುದು ಪರಮಾತ್ಮನನ್ನು ಸೇರುವುದಕ್ಕೆ ಸರಿಯಾದ ಮಾರ್ಗವೆಂದು ಪ್ರಶ್ನಿಸಿದ್ದಾನೆ. 1) ಸತತ ಯುಕ್ತಾಯೇ 2) ಭಕ್ತಾಃ 3) ಅಕ್ಷರ ಮವ್ಯಕ್ತಂ ಎಂದು ಮೂರು ಭಾಗಗಳಾಗಿ ವಿಭಜಿಸಿ ಇವರಲ್ಲಿ ಯಾರು ನಿನ್ನೊಂದಿಗೆ ಸೇರುವುದನ್ನು ತಿಳಿದವರೆಂದು ಕೇಳಿದನು, ಅರ್ಜುನನು ಕೇಳಿದ ವಿವರ ಎಂದಿಗೂ ಆತ್ಮದೊಂದಿಗೆ ಕೂಡಿರುವವನಾದ ಬ್ರಹ್ಮಯೋಗಿ, ಭಗವಂತನ ಮೇಲೆ ಭಕ್ತಿಹೊಂದಿ ಎಲ್ಲಾ ವೇಳೆಯಲ್ಲಿ ಆತನು ಕರ್ಮಗಳಾಚರಿಸುವ ಭಕ್ತಿಯೋಗಿ. ಅವ್ಯಕ್ತವಾದ ಅಕ್ಷರವನ್ನು ಕರ್ಮನಾಶದಿಂದ ಹೊಂದಲು ಕೋರಿದ ಕರ್ಮಯೋಗಿಗಳಲ್ಲಿ ಯಾರು ಚೆನ್ನಾಗಿ ತಿಳಿದವರೆಂದು ಕೇಳಿದಾಗ ಭಗವಂತನು ಏನು ಸಮಾಧಾನ ಕೊಟ್ಟಿದ್ದಾನೋ ಕೆಳಗೆ ನೋಡೋಣ.

**ಶ್ರೀ ಭಗವಂತನು ಹೀಗೆ ಹೇಳಿದನು :-**

**(11) ಶ್ಲೋ॥ 2 : ಮಯ್ಯಾವೇಶ್ಯ ಮನೋಯೇಮಾಂ ನಿತ್ಯಯುಕ್ತಾಉಪಾಸತೇ ।**
**ಶ್ರದ್ಧಯಾ ಪರಯೋ ಪೇತಾಸ್ತೇ ಮೇ ಯುಕ್ತತಮಾ ಮತಾಃ ॥**

**(ಬ್ರಹ್ಮ, ಕರ್ಮ, ಭಕ್ತಿಯೋಗಗಳು)**

**ಭಾವಾರ್ಥ** : ಪರಮಶ್ರದ್ಧೆ ಇರುವವರಾಗಿ ನನ್ನಲ್ಲಿ ಮನಸ್ಸನ್ನಿಟ್ಟು, ನಿತ್ಯವೂ ನನ್ನೊಂದಿಗೆ ಯುಕ್ತವ ಕೋರಿ ಉಪಾಸಿಸುವವರೆಲ್ಲರೂ ಉತ್ತಮಯೋಗಿಗಳೆಂದು ನನ್ನ ಒಪ್ಪಿಗೆ.

**ವಿವರ** : ಇಲ್ಲಿ ಅರ್ಜುನನು ಕೇಳಿದ ಪ್ರಶ್ನೆಗಳಿಗೆ ಇವರು ಚೆನ್ನಾಗಿ ತಿಳಿದವರೆಂದು, ಇವರು ತಿಳಿಯದವರೆಂದು ಹೇಳದೇ ಶ್ರದ್ಧೆ ಇರುವವರು ಉತ್ತಮರೆಂದಿದ್ದಾರೆ. ಪರಮಾತ್ಮನನ್ನು ಸೇರಬೇಕೆಂಬ ಕೋರಿಕೆಯಿಂದ ಕರ್ಮ, ಬ್ರಹ್ಮ, ಭಕ್ತಿ ಎನ್ನುವ ಮೂರು ಮಾರ್ಗಗಳನ್ನು ಅನುಸರಿಸುವವರಲ್ಲಿ **'ಪರಯೋ ಶ್ರದ್ಧಯಾ ಉಪೇತಾ' 'ಶ್ರೇಷ್ಠವಾದ ಶ್ರದ್ಧೆ ಇರುವ'** ಅವರೆಲ್ಲರೂ ಶ್ರೇಷ್ಠರೇ ಎಂದು ಹೇಳಿದ್ದಾನೆ. ಇದನ್ನನುಸರಿಸಿ ಪ್ರತಿಯೊಂದಕ್ಕೂ ಶ್ರದ್ಧೆ ಎನ್ನುವುದು ಮುಖ್ಯವೆಂದು ತಿಳಿಯುತ್ತಿದೆ. ಶ್ರದ್ಧೆಯಿಲ್ಲದ ಭಕ್ತಿ ನಿರರ್ಥಕವೆಂದು ತಿಳಿಯುತ್ತಿದೆ.

ಈ ಕಾಲದಲ್ಲಿ ಎಷ್ಟೋಜನ ಹಣ ಇರುವವರು ಅವರ ಲೆಕ್ಕದಲ್ಲಿ ಸ್ವಲ್ಪಮಟ್ಟಿನ ಬೆಲೆಯುಳ್ಳ ಹಣವನ್ನು ಖರ್ಚುಮಾಡಿ ಪೂಜೆಗಳು ಮಾಡಿಸುತ್ತಿದ್ದಾರೆ. 200ರೂ॥ ಕೊಟ್ಟು ಅಭಿಷೇಕ, 300ರೂ॥ ಕೊಟ್ಟು ಮತ್ತೊಂದು ಪೂಜೆ, 500ರೂ॥ ಕೊಟ್ಟು ಮತ್ತೊಂದು ಅರ್ಚನೆ ಮಾಡಿಸಿ ಯಾರೂ ಮಾಡದ ಪೂಜೆಗಳೆಲ್ಲವನ್ನು ಮಾಡಿಸಿದ್ದೇನೆಂದುಕೊಂಡು ತೃಪ್ತಿಪಟ್ಟರೆ, ಅವುಗಳನ್ನು ದೇವರು ನೋಡದೆ ಅವನಲ್ಲಿ ಎಷ್ಟು ಭಕ್ತಿ ಶ್ರದ್ಧೆಗಳಿವೆಯೆಂದು ಮಾತ್ರವೇ ನೋಡುತ್ತಿದ್ದಾನೆ, ಆದರೆ ಎಷ್ಟು ಖರ್ಚು ಇಟ್ಟಿದ್ದಾನೆಂದು ನೋಡಲಿಲ್ಲ. ಒಬ್ಬನು ಮರಣಿಸಿದರೆ ಅವನಿಗೋಸ್ಕರ ದುಃಖ ಇಲ್ಲದವನು ಅಳುವುದಿಲ್ಲ. ದುಃಖ ಇರುವವನು ಮಾತ್ರವೇ ಅಳುತ್ತಾನೆ. ಕೆಲವು ಪ್ರಾಂತಗಳಲ್ಲಿ ಹಣ ಕೊಟ್ಟರೆ ಕೂಲಿಗಾಗಿ ಅಳುವವರಿದ್ದಾರೆ. ಅಳು ಬಾರದವರು, ದುಃಖ ಇಲ್ಲದವರು, ನಾಲ್ವರು ನೋಡುವುದಕ್ಕೆ ಕೂಲಿ ಮನುಷ್ಯರಿಗೆ ಅಳುವಂತೆ ಹೇಳುತ್ತಿದ್ದಾರೆ. ಹಾಗೆ ಅಳಿಸುವವರಲ್ಲಿ ದುಃಖವಿಲ್ಲ. ದುಃಖ ಇರುವವರಾದರೆ ಅವರೇ ಅಳುತ್ತಿದ್ದರು. ದುಃಖ ಇಲ್ಲವಾದ್ದರಿಂದ ಕೂಲಿಕೊಟ್ಟು ಅಳಿಸುತ್ತಿದ್ದಾರೆ. ಹಾಗೆಯೇ ಶ್ರದ್ಧೆಯಿಲ್ಲದ ಭಕ್ತರು ಕೂಲಿಕೊಟ್ಟು ಉಳಿದವರಿಂದ ಪೂಜೆಗಳು ಮಾಡಿಸುತ್ತಿದ್ದಾರೆ. ಶ್ರದ್ಧೆ ಇದ್ದರೆ ಅವರೇ ಸ್ವತಃವಾಗಿ ಎಲ್ಲಿಯಾದರೂ ಪೂಜೆ ಮಾಡುತ್ತಿದ್ದರು. ಆ ಶ್ರಮ ನಮಗೇಕೆ! ಇಷ್ಟು ಬೆಲೆಯೆಂದು ಹಣ ಕೊಟ್ಟರೆ ಆ ಪೂಜೆ ಏನೋ ಅವರೇ ಮಾಡುತ್ತಾರೆ ಎಂದು ಶ್ರದ್ಧೆಯಿಲ್ಲದ ಭಕ್ತರು ಬಹಳ ಜನರು ಇದ್ದಾರೆ.

ಯಾವುದು ಏನಾದರೂ ಯಾರು ಯಾವ ವಿಧ ಪೂಜೆಗಳು ಯೋಗಗಳು ಮಾಡಿದರು ಅದರಲ್ಲಿ ಶ್ರದ್ಧೆಯೇ ಮುಖ್ಯ. ಆದ್ದರಿಂದ ಪರಮಾತ್ಮನು ಇವರು ಅವರು ಎನ್ನದೇ ಶ್ರದ್ಧೆ ಇರುವ ಯೋಗಿಗಳೆಲ್ಲರೂ ಶ್ರೇಷ್ಠರೇ ಎಂದಿದ್ದಾನೆ.

**(11) ಶ್ಲೋ॥ 3 : ಯೇ ತ್ವಕ್ಷರ ಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ ।**
**ಸರ್ವತ್ರಗ ಮಚಿನ್ತ್ಯಚ ಕೂಟಸ್ಥ ಮಚಲಂ ಧ್ರುವಮ್ ॥**

**(ಮೋಕ್ಷ)**

**(11) ಶ್ಲೋ॥ 4 : ಸನ್ನಿಯ ಮ್ಯೇಂದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ ।**
**ತೇ ಪ್ರಾಪ್ನುವನ್ತಿ ಮಾ ಮೇವ ಸರ್ವಭೂತಹಿತೇ ರತಾಃ ॥**

**(ಬ್ರಹ್ಮಯೋಗ)**

**ಭಾವಾರ್ಥ** : ಅಕ್ಷರವಾದುದು, ನಿರ್ದೇಶಿಸಲಾಗದಿರುವುದು, ಕಾಣಿಸದಿರುವುದು, ಆಲೋಚನೆಗೆ ಸಿಗದಿರುವುದು, ಕೂಟಸ್ಥವಾದುದು, ಅಚಲವಾದುದು, ಶಾಶ್ವತವಾದುದು, ಎಲ್ಲಾಕಡೆ ವ್ಯಾಪಿಸಿರುವುದಾದ ಪರಮಾತ್ಮನನ್ನು ಉಪಾಸಿಸುವವರು.

ಇಂದ್ರಿಯಗಳನ್ನು ನಿಗ್ರಹಿಸಿ, ಎಲ್ಲವುದರಲ್ಲಿ ಬುದ್ಧಿ ಸಮಮಾಡಿ, ಸರ್ವಭೂತ ಹಿತರಾದವರು ನನ್ನನ್ನು ಹೊಂದುತ್ತಾರೆ.

**ವಿವರ** : ಮುಕ್ತಿಯನ್ನು ಕೋರುವವರು ಮೂರು ಮಾರ್ಗಗಳನ್ನು ಅನುಸರಿಸುತ್ತಾರೆಂದು ಕೊಂಡಿದ್ದೇವೆ ಅಲ್ಲವೆ! ಆ ಮೂರು ಮಾರ್ಗಗಳಲ್ಲಿ ಯಾವುದೋ ಒಂದು ಮಾರ್ಗವನ್ನು ಅನುಸರಿಸಿ ಪರಮಪದವಿ ಎಂಬ ಗಮ್ಯವನ್ನು ಸೇರಿದವನು ನಾಶ ಇಲ್ಲದವನಾಗಿ ಪಂಚಭೂತಗಳಿಗೆ ಅತೀತನಾಗುತ್ತಾನೆ. ಪಂಚಭೂತಗಳಲ್ಲಿ ಯಾವ ಶಕ್ತಿ ಅವನನ್ನು ಏನು ಮಾಡಲಾರದು. ಅವನು ಆಗ ಪರಮಾತ್ಮನೇ. ಗಮ್ಯವನ್ನು ಸೇರಿದವನು ಇಲ್ಲಿದ್ದಾನೆ ಅಲ್ಲಿಲ್ಲವೆಂದು, ಇಂತಹವನೆಂದು, ನಿರ್ಧರಿಸಲಾಗದವನಂತೆ ಬದಲಾಗಿದ್ದಾನೆ. ಆಗ ಅವನು ಸರ್ವವ್ಯಾಪಿಯಾದ ಪರಮಾತ್ಮನಾಗಿದ್ದಾನೆ. ಗಮ್ಯವನ್ನು ಸೇರಿದವನು ವ್ಯಕ್ತನು ಅಲ್ಲ, ಎಲ್ಲಿಯೂ ಕಾಣಿಸುವುದಿಲ್ಲ, ಯಾರ ಕಣ್ಣುಗಳು ಅವನನ್ನು ನೋಡಲಾರವು, ಆತನು ಅವ್ಯಕ್ತನಾದ ಪರಮಾತ್ಮನಾಗಿದ್ದಾನೆ. ಅಷ್ಟೇ ಅಲ್ಲದೆ ಯಾರ ಆಲೋಚನೆಗೆ ಸಿಗುವವನಲ್ಲ. ಯಾವ ಬುದ್ಧಿ ಆತನನ್ನು ಆಲೋಚಿಸಿ ತಿಳಿದುಕೊಳ್ಳುವುದಿಲ್ಲ. ಆತನು ಎಲ್ಲಾಕಡೆ ವ್ಯಾಪಿಸಿದವ ನಾಗಿ, ಅಚಲನಾಗಿ, ಶಾಶ್ವತನಾಗಿ, ಕೂಟಸ್ಥನಾಗಿ, ಪರಮಾತ್ಮನಾಗಿ ಬದಲಾದವನಾಗಿದ್ದಾನೆ.

ಹಾಗೆ ಪರಮಾತ್ಮನಾಗಿ ಬದಲಾಗಬೇಕೆಂದುಕೊಂಡವನು ಮೂರು ಮಾರ್ಗಗಳಲ್ಲಿ ಯಾವುದೋ ಒಂದು ಮಾರ್ಗವನ್ನನುಸರಿಸಬೇಕು. ಅದರಲ್ಲಿ ಒಬ್ಬನು ಬ್ರಹ್ಮಯೋಗವನ್ನು ಅನುಸರಿಸಿದ್ದಾನೆಂದುಕೊಳ್ಳೋಣ, ಅವನು ಇಂದ್ರಿಯಗಳ ಧ್ಯಾಸದೊಳಗೆ ಮನಸ್ಸನ್ನು ಹೋಗದಂತೆ ಮಾಡಿಕೊಳ್ಳಬೇಕು. ಅವನ ಬುದ್ಧಿಯನ್ನು ಸರ್ವಜೀವಿಗಳಲ್ಲಿ ಸಮವಾಗಿರುವ

ಆತ್ಮದ ಮೇಲೆ ಸಮ ಮಾಡಬೇಕು. ಸರ್ವಭೂತ ಸನ್ನಿಹಿತನಾದ ಆತ್ಮನಲ್ಲಿಯೇ ಧ್ಯಾಸದಿಂದ ನಿಂತು ಹೋಗಬೇಕು. ಬ್ರಹ್ಮಯೋಗವಾಚರಿಸಿದವನು ಪರಮಾತ್ಮನನ್ನು ಹೊಂದಬಲ್ಲನು.

**(11) ಶ್ಲೋ॥ 5 : ಕ್ಲೇಶೋಽಧಿಕತರಸ್ತೇಷಾ ಮವ್ಯಕ್ತಾಸಕ್ತ ಚೇತಸಾಮ್ ।**
**ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿ ರವಾಪ್ಯತೇ ॥**

**(ಬ್ರಹ್ಮಯೋಗ)**

**ಭಾವಾರ್ಥ** : ಹಾಗೆ ಆತ್ಮವನ್ನು ಉಪಾಸಿಸುವಂತಹ ಬ್ರಹ್ಮಯೋಗಿಗಳು ಅನುಸರಿಸುವ ಮಾರ್ಗ ಬಹಳ ಕಷ್ಟವಾದುದು ಪಾರ್ಥ! ಇಂದ್ರಿಯಗಳಿಗೆ ತಿಳಿಯದ ಆತ್ಮವನ್ನು ಪಡೆಯುವುದು ಅತಿ ಕಷ್ಟವಾದ ಮಾರ್ಗವೆಂದು ತಿಳಿಯಿರಿ.

**(11) ಶ್ಲೋ ॥ 6 : ಯೇತು ಸರ್ವಾಣಿ ಕರ್ಮಾಣಿ ಮಯಿ ಸನ್ನ್ಯಸ್ಯ ಮತ್ಪರಾಃ ।**
**ಅನನ್ಯೇನೈವ ಯೋಗೇನ ಮಾಂ ಧ್ಯಾಯನ್ತ ಉಪಾಸತೇ ॥**

**(ಕರ್ಮಯೋಗ)**

**ಭಾವಾರ್ಥ** : ಯಾರಾದರೆ ಸರ್ವಕರ್ಮಗಳು ನನಗೆ ಸಮರ್ಪಿಸಿದ್ದಾರೋ, ಅವರು ಇತರೆ ಯಾವ ಕರ್ಮಗಳು ಅಂಟದ ರೀತಿಯಲ್ಲಿ ಕರ್ಮ ಯೋಗವನ್ನಾಚರಿಸಿ ನನ್ನನ್ನು ಉಪಾಸಿಸುತ್ತಿದ್ದಾರೆ.

**(11) ಶ್ಲೋ॥ 7 : ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರ ಸಾಗರಾತ್ ।**
**ಭವಾಮಿ ನ ಚಿರಾ ತ್ಪಾರ್ಥ! ಮಯ್ಯಾವೇಶಿತ ಚೇತಸಾಮ್ ॥**

**(ಭಕ್ತಿಯೋಗ)**

**ಭಾವಾರ್ಥ** : ನನ್ನಲ್ಲಿಯೇ ಅವರ ಮನಸ್ಸನ್ನು ಲಗ್ನ ಮಾಡಿರುವ ನನ್ನ ಭಕ್ತಪರರಿದ್ದಾರೆ. ನಾನು ಶೀಘ್ರವಾಗಿ ಅವರೆಲ್ಲರನ್ನೂ ಮೃತ್ಯು ಸಂಸಾರ ಸಮುದ್ರದಿಂದ ಹೊರಹಾಕುತ್ತೇನೆ.

**ವಿವರ** : ಕ್ರಮವಾಗಿ 5, 6, 7 ಮೂರು ಶ್ಲೋಕಗಳಲ್ಲಿ ಬ್ರಹ್ಮಯೋಗ, ಕರ್ಮಯೋಗ, ಭಕ್ತಿಯೋಗ ಮೂರು ಹೇಳಲಾಗಿದೆ. ಈ ಮೂರು ವಿಧಾನಗಳನ್ನು ಅನುಸರಿಸಿ ಅವರನ್ನು ತಪ್ಪದೇ ಮೃತ್ಯುಮಯವಾಗಿ ಸಾರ ಇಲ್ಲದಂತಾದ ಜನ್ಮಕರ್ಮಗಳ ಜಲಮಯವಾದ ಸಮುದ್ರದಿಂದ ಹೊರಹಾಕುತ್ತೇನೆ. ಮೋಕ್ಷವನ್ನು ಕೊಡುತ್ತಿದ್ದೇನೆಂದು ಪರಮಾತ್ಮ ತಿಳಿಸಿದ್ದಾನೆ.

**(11) ಶ್ಲೋ॥ 8 : ಮಯ್ಯೇವ ಮನ ಆಧತ್ಸ್ವಮಯಿ ಬುದ್ಧಿಂ ನಿವೇಶಯ ।**
**ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ॥**
**(ಬ್ರಹ್ಮಯೋಗ)**

**(11) ಶ್ಲೋ॥ 9 : ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಮ್ ।**
**ಅಭ್ಯಾಸಯೋಗೇನ ತತೋ ಮಾ ಮಿಚ್ಛಾಽಪ್ತುಂ ಧನಂಜಯ! ॥**
**(ಬ್ರಹ್ಮಯೋಗ)**

**ಭಾವಾರ್ಥ** : ನನ್ನಲ್ಲಿಯೇ ಮನಸ್ಸನ್ನಿಟ್ಟು ಸದಾ ನನ್ನನ್ನೇ ನೆನಪಿಸುತ್ತಿರು. ನನ್ನಲ್ಲಿಯೇ ಬುದ್ಧಿಯನ್ನಿಡು. ಆ ನಂತರ ನನ್ನನ್ನೇ ಪಡೆದು ನನ್ನಲ್ಲಿಯೇ ಸ್ಥಿರವಾಗುತ್ತೀಯಾ. ಈ ವಿಷಯದಲ್ಲಿ ಅನುಮಾನವಿಲ್ಲ.

ನಿನ್ನ ಚಿತ್ತವನ್ನು ಸ್ಥಿರ ರೀತಿಯಲ್ಲಿ ನನ್ನಲ್ಲಿ ನಿಲ್ಲಿಸುವಶಕ್ತಿ ಇಲ್ಲದಿರುವಾಗ ಓ ಅರ್ಜುನಾ! ಅಂತಹ ಶಕ್ತಿ ಅಭ್ಯಾಸಯೋಗದಿಂದ ಹೊಂದುತ್ತೀಯಾ.

**ವಿವರ** : ಪರಮಾತ್ಮ ಅಂಶವಾದ ಆತ್ಮದ ಮೇಲೆಯೇ ಮನೋಧ್ಯಾಸ ಇಡಬೇಕು. ಆತ್ಮ ಯೋಚನೆ ಹೊರತು ಬೇರೆ ಯೋಚನೆ ಬುದ್ಧಿಗೆ ಇಲ್ಲದಂತೆ ಮಾಡಬೇಕು. ಮನೋ ಬುದ್ಧಿಗಳಿಗೆ ಇಂದ್ರಿಯ ಧ್ಯಾಸಗಳು ಇಲ್ಲದ ಕಾರಣ, ತದನಂತರ ಪರಮಾತ್ಮನನ್ನೇ ಹೊಂದಿ ಪರಮಾತ್ಮನಲ್ಲಿಯೇ ನಿಲ್ಲುವೆ.

ಮನಸ್ಸು ನಿಲ್ಲುವುದರಿಂದ ಬುದ್ಧಿ ನಿಲ್ಲುತ್ತದೆ, ಬುದ್ಧಿ ನಿಲ್ಲುವುದರಿಂದ ಚಿತ್ತ ನಿಲ್ಲುತ್ತದೆ. ಹೀಗೆ ಒಂದು ನಿಂತರೆ ಮತ್ತೊಂದು ನಿಲ್ಲುತ್ತದೆಂದು ಹಿಂದೆ ತಿಳಿದುಕೊಂಡಿದ್ದೇವೆ. ಚಿತ್ತವು ಸ್ಥಿರರೀತಿ ನಿಲ್ಲದೆ ಹೋದರೆ ಮನಸ್ಸು, ಬುದ್ಧಿ ನಿಲ್ಲುವುದಿಲ್ಲ ಎಂದೇ ಹೇಳಲಾಗುತ್ತದೆ. ಹಾಗೆ ಮನಸ್ಸಾಗಲಿ, ಬುದ್ಧಿಯಾಗಲಿ, ಚಿತ್ತವಾಗಲಿ ನಿಲ್ಲದವನಿಗೆ ಅಭ್ಯಾಸಯೋಗದಿಂದ ಅಂತಹ ನಿಲ್ಲಿಸುವ ಶಕ್ತಿ ಲಭಿಸುತ್ತದೆ. ಯೋಗಾಭ್ಯಾಸದಿಂದ ತಪ್ಪದೇ ಯೋಗ ಸಾಧ್ಯವಾಗುತ್ತದೆ.

**(11) ಶ್ಲೋ ॥ 10 : ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ ।**
**ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿ ಮವಾಪ್ಸ್ಯಸಿ ॥**
**(ಭಕ್ತಿಯೋಗ)**

**ಭಾವಾರ್ಥ** : ಮನಸ್ಸನ್ನು ನಿಲ್ಲಿಸುವ ಅಭ್ಯಾಸಕ್ಕೆ ಸಾಮರ್ಥ್ಯ ಇಲ್ಲದವನಾದರೆ ನನ್ನ ಕೆಲಸಗಳು ಮಾಡು. ನನಗೋಸ್ಕರ ಕೆಲಸಗಳು ಮಾಡುವುದರಿಂದ ಮೋಕ್ಷವನ್ನು ಪಡೆಯಬಹುದು.

**ವಿವರ** : ಎಷ್ಟು ಸಾಧನೆ ಮಾಡಿದರೂ ಮನಸ್ಸು ನಿಲುಗಡೆ ಹೊಂದದೇ ಪ್ರಾಪಂಚಿಕ ವಿಷಯಗಳ ಮೇಲೆ ಚಲಿಸುತ್ತಿರುವ ಪಕ್ಷದಲ್ಲಿ, ಇನ್ನೂ ಆ ಸಾಧನೆ ಕೈಲಾಗುವುದಿಲ್ಲವೆಂದೆನಿಸಿದರು, ಆ ಸಾಧನೆ ಬಿಟ್ಟು ಪರಮಾತ್ಮ ಕೆಲಸಗಳಾದ ಧರ್ಮಪ್ರಚಾರ ಕಾರ್ಯಗಳು ಮಾಡಬೇಕು. ಹಾಗೆ ಪರಮಾತ್ಮ ಕೆಲಸವಾದ ಧರ್ಮಪ್ರಚಾರ ಸಂಬಂಧ ಕಾರ್ಯಗಳು ಮಾಡುವುದರಿಂದ ಮುಕ್ತಿ ಪಡೆಯಬಹುದು.

**(11) ಶ್ಲೋ॥ 11 : ಅಥೈತ ದಪ್ಯಶಕ್ತೋ೭ಸಿ ಕರ್ತುಂ ಮದ್ಯೋಗ ಮಾಶ್ರಿತಃ ।**
**ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ ॥**

**(ಕರ್ಮಯೋಗ)**

**ಭಾವಾರ್ಥ** : ಭಕ್ತಿಯೋಗದಿಂದ ನನ್ನ ಕೆಲಸಗಳು ಮಾಡುವುದಕ್ಕೆ ಸಹ ಸಾಮರ್ಥ್ಯ ಇಲ್ಲದವನಾದರೆ ಅಖಿಲ ಕರ್ಮಫಲ ತ್ಯಾಗಿಯಾಗು. ಅಂತಹ ಕರ್ಮಯೋಗದಿಂದ ನನ್ನನ್ನು ಪಡೆಯುವೆ.

**ವಿವರ** : ಇಲ್ಲಿ ಕ್ರಮವಾಗಿ 9, 10, 11 ಶ್ಲೋಕಗಳಲ್ಲಿ ಬ್ರಹ್ಮ, ಭಕ್ತಿ, ಕರ್ಮಯೋಗಗಳನ್ನು ಕುರಿತು ಹೇಳಲಾಗಿದೆ. 9ನೇ ಶ್ಲೋಕದಲ್ಲಿ ಬ್ರಹ್ಮಯೋಗ ಕೈಲಾಗದಿದ್ದರೆ ಬ್ರಹ್ಮಯೋಗ ಸಾಧನೆ ಮಾಡೆಂದಿದ್ದಾನೆ. 10ನೇ ಶ್ಲೋಕದಲ್ಲಿ ಆ ಬ್ರಹ್ಮಯೋಗ ಸಾಧನೆ ಕೈಲಾಗದ ಪಕ್ಷದಲ್ಲಿ ಭಕ್ತಿಯೋಗವನ್ನು ಆಶ್ರಯಿಸಿ, ಪರಮಾತ್ಮ ಕಾರ್ಯಗಳಾದ ಧರ್ಮಪ್ರಚಾರ ಸಂಬಂಧ ಕಾರ್ಯಗಳು ಮಾಡೆಂದಿದ್ದಾನೆ. ಆ ಕಾರ್ಯಗಳು ಕೈಲಾಗದಿದ್ದಲ್ಲಿ 11ನೇ ಶ್ಲೋಕದಲ್ಲಿ ಕರ್ಮಯೋಗವಾಶ್ರಯಿಸಿ ಕರ್ಮಫಲತ್ಯಾಗಿಯಾಗಿ ಪಾಪಪುಣ್ಯಗಳನ್ನು ಪಡೆಯದೇ ಇರೆಂದಿದ್ದಾನೆ. ಹೀಗೆ ಒಂದರ ನಂತರ ಮತ್ತೊಂದಕ್ಕೆ ಅವಕಾಶ ಕೊಡೆಂದು ಪರಮಾತ್ಮ ತಿಳಿಸಿದ್ದಾನೆ.

**(11) ಶ್ಲೋ॥ 12 : ಶ್ರೇಯೋಹಿ ಜ್ಞಾನ ಮಭ್ಯಾಸಾತ್ ಜ್ಞಾನಾದ್ಧ್ಯಾನಂವಿಶಿಷ್ಯತೇ ।**
**ಧ್ಯಾನಾ ತ್ಕರ್ಮಫಲತ್ಯಾಗ ಸ್ತ್ಯಾಗಾಚ್ಛಾನ್ತಿ ರನನ್ತರಮ್ ॥**

**(ಬ್ರಹ್ಮ, ಕರ್ಮಯೋಗಗಳು)**

**ಭಾವಾರ್ಥ** : ಅಭ್ಯಾಸಕ್ಕಿಂತ ಜ್ಞಾನ ಮೇಲು. ಜ್ಞಾನಕ್ಕಿಂತ ಧ್ಯಾನ ಉತ್ತಮ, ಧ್ಯಾನವನ್ನು ಮೀರಿರುವುದು ಕರ್ಮಫಲತ್ಯಾಗ. ಮನುಷ್ಯನಿಗೆ ತ್ಯಾಗದಿಂದ ಶಾಂತಿ ಉಂಟಾಗುತ್ತದೆ.

**ವಿವರ** : ಪ್ರಸ್ತುತ ಕಾಲದಲ್ಲಿ ಬಹಳಜನರು ಜ್ಞಾನ ತಿಳಿಯದೇ ಅಭ್ಯಾಸ ಮಾಡುವುದಕ್ಕೆ ಪ್ರಾರಂಭ ಮಾಡುತ್ತಿದ್ದಾರೆ. ಒಂದು ಊರಿಗೆ ಹೋಗಬೇಕೆಂದುಕೊಂಡವನು ಆ ಊರಿಗೆ

ಹೋಗುವ ದಾರಿ ಯಾವುದೋ ಪೂರ್ತಿಯಾಗಿ ಇತರರ ಮೂಲಕ ತಿಳಿದುಕೊಂಡು, ಇದು ಸರಿಯಾದ ದಾರಿಯೆಂದು ನಿಶ್ಚಯಿಸಿಕೊಂಡು, ಆ ದಾರಿಯ ಮೂಲಕ ಪ್ರಯಾಣಿಸಿ ದಂತಾದರೆ ಗಮ್ಯವನ್ನು ಸೇರುತ್ತಾನೆ. ಹಾಗಲ್ಲದೆ ದಾರಿ ತಿಳಿಯದೇ ಪ್ರಯಾಣಿಸುವುದು ಮುಖ್ಯವೆಂದು ಹೋದರೆ, ಊರು ಬರುತ್ತದೆಂದುಕೊಂಡರೆ ಯಾವ ಊರು ಬರುತ್ತದೊ! ನೀನು ಸೇರಬೇಕಾದ ಊರು ಬಾರದೆ ಹೋಗಬಹುದು. ಹಾಗೆ ಮೋಕ್ಷವೆಂಬ ಗಮ್ಯವನ್ನು ಸೇರುವುದಕ್ಕೆ ಜ್ಞಾನವೆಂಬ ದಾರಿಯನ್ನು ಪೂರ್ತಿಯಾಗಿ ತಿಳಿದಿರಬೇಕು. ಜ್ಞಾನ ತಿಳಿಯದೇ ಸಾಧನೆ ಮಾಡುವವರು ವ್ಯರ್ಥ ಪ್ರಯಾಸ ಪಟ್ಟಂತಾಗುತ್ತದೆ. ಪೂರ್ತಿ ಜ್ಞಾನ ಹೇಳದೆಯೇ ಉಪದೇಶಕೊಡುವ ಗುರುಗಳು, ಜ್ಞಾನ ತಿಳಿದುಕೊಳ್ಳದೆ ಉಪದೇಶ ತೆಗೆದುಕೊಳ್ಳುವ ಶಿಷ್ಯರು ಮುಖ್ಯವಾಗಿ **"ಶ್ರೇಯೋಹಿ ಜ್ಞಾನ ಮಭ್ಯಾಸಾತ್**, ಎನ್ನುವ ವಿಷಯವನ್ನು ಜ್ಞಾಪಕದಲ್ಲಿಟ್ಟುಕೊಳ್ಳಬೇಕು.

ಜ್ಞಾನ ತಿಳಿದ ನಂತರ ಜ್ಞಾನದ ಪ್ರಕಾರ ಅಭ್ಯಾಸ ಮಾಡಬೇಕು. ಹಾಗೆ ಅಭ್ಯಾಸ ಮಾಡುವುದರಿಂದ ಕೊನೆಗೆ ಸಿದ್ಧಿ ಉಂಟಾಗುತ್ತದೆ. ಅಂತಹ ಮನೋಸಾಧನೆ ಮಾಡದಿದ್ದಲ್ಲಿ ಆ ಅಭ್ಯಾಸಕ್ಕಿಂತ ಕರ್ಮಫಲತ್ಯಾಗ ಶ್ರೇಷ್ಠವಾದದ್ದು. ಸಾಧನೆ ರೂಪವಾಗಿಲ್ಲದ ಕರ್ಮಯೋಗವನ್ನು ಆಚರಿಸುವುದರಿಂದ ಮೋಕ್ಷಸಿದ್ಧಿ ಪ್ರಾಪ್ತಿಸುತ್ತದೆ. ಮನೋಸ್ಥಿರತೆಯ ಮೇಲೆ ಆಧಾರ ಪಟ್ಟಿರುವ ಬ್ರಹ್ಮಯೋಗ ಸಾಧನೆಗಿಂತ ಕರ್ಮಯೋಗ ಸಾಧನೆ ಸುಲಭವಾದುದೆಂದು ತಿಳಿಯಬೇಕು.

**(11) ಶ್ಲೋ॥ 13 : ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವಚ ।**
**ನಿರ್ಮಮೋ ನಿರಹಂಕಾರಃ ಸಮದುಃಖಸುಖಃ ಕ್ಷಮೀ ॥**

**(ಕರ್ಮಯೋಗ)**

**(11) ಶ್ಲೋ॥ 14 : ಸನ್ತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।**
**ಮಯ್ಯರ್ಪಿತಮನೋಬುದ್ಧಿ ರ್ಯೋ ಮದ್ಭಕ್ತಃ ಸಮೇಪ್ರಿಯಃ ॥**

**(ಕರ್ಮಯೋಗ)**

**ಭಾವಾರ್ಥ** : ಸರ್ವ ಜೀವರಾಶಿಗಳಲ್ಲಿ ದ್ವೇಷವಿಲ್ಲದೆ, ಕರುಣೆ ಸ್ನೇಹಹೊಂದಿ, ಮಮತೆ ಬಿಟ್ಟು, ಅಹಂಕಾರ ಇಲ್ಲದಂತೆ, ಉಂಟಾಗುವ ಸುಖದುಃಖಗಳನ್ನು ಸಮವಾಗಿ ನೋಡುತ್ತಾ, ಸಹನೆ ಹೊಂದಿರುವವನು, ಎಂದಿಗೂ ಸಂತೃಪ್ತಿ ಹೊಂದಿರುವ ಕರ್ಮಯೋಗಿಯಾಗಿ ಮನೋಬುದ್ಧಿಯಲ್ಲಿ ಮೋಕ್ಷ ಪಡೆಯಬೇಕೆಂಬ ದೃಢ ನಿಶ್ಚಯ ಹೊಂದಿರುವ ಭಕ್ತನು ನನಗೆ ಅಧಿಕ ಪ್ರೀತಿ.

**ವಿವರ** : ಸಾಧ್ಯವಾದಷ್ಟು ಸರ್ವಜೀವರಾಶಿಗಳಲ್ಲಿ ಸ್ನೇಹ ಕರುಣೆಹೊಂದಿ, ದ್ವೇಷ ಮೋಹ ಇಲ್ಲದಂತೆ ಕೆಲಸಮಾಡುತ್ತಾ, ಅಹಂಕಾರ ಇಲ್ಲದಂತೆ ನಡೆಯುವ ಕೆಲಸಗಳಲ್ಲಿ ಬರುವ ಸುಖದುಃಖಗಳನ್ನು ಸಹನೆಯಿಂದ ಸಮವಾಗಿ ಲೆಕ್ಕಿಸುತ್ತಾ, ಸುಖಗಳಿಗೆ ಹಿಗ್ಗದೆ ದುಃಖಗಳಿಗೆ ಕುಗ್ಗದಂತಿದ್ದು, ಯಾವಾಗಲೂ ತನಗೆ ಲಭಿಸಿದವುಗಳಿಂದಲೇ ತೃಪ್ತಿಹೊಂದಿ, ಮೋಕ್ಷವನ್ನು ಸೇರಬೇಕೆಂಬ ಧೃಡ ಸಂಕಲ್ಪ ಮನಸ್ಸಿನಲ್ಲಿಹೊಂದಿ, ಬುದ್ದಿಯಿಂದ ಅದೇ ಅಭಿಪ್ರಾಯಹೊಂದಿ ಅಹಮ್‌ನ್ನು ಎಚ್ಚರಿಸುತ್ತಾ, ಆಗಿಂದಾಗ್ಗೆ ಅಹಂಕಾರವನ್ನು ಬುದ್ಧಿಯಿಂದ ಅಡಗಿಸಿಕೊಳ್ಳುವವನು ನನಗೆ ಬಹಳ ಪ್ರಿಯನೆಂದು ಪರಮಾತ್ಮ ಹೇಳಿದ್ದಾನೆ.

**(11) ಶ್ಲೋ॥ 15 : ಯಸ್ಮಾನ್ನೋದ್ವಿಜತೇ ಲೋಕೋಲೋಕಾನ್ನೋದ್ವಿಜತೇಚಯಃ ।**
**ಹರ್ಷಾಮರ್ಷ ಭಯೋದ್ವೇಗೈರ್ಮುಕ್ತೋ ಯಃಸಚಮೇ ಪ್ರಿಯಃ ॥**
**(ಬ್ರಹ್ಮಯೋಗ)**

**ಭಾವಾರ್ಥ** : ಅರ್ಜುನಾ! ಯಾರಿಂದ ಪ್ರಪಂಚಕ್ಕೆ ಭಯವಿಲ್ಲವೊ, ಪ್ರಪಂಚದಿಂದ ಯಾರು ಭಯಪಡುವುದಿಲ್ಲವೊ, ಅವನು ಕೋಪವನ್ನು, ಭಯವನ್ನು, ಸಂತೋಷವನ್ನು ಮನೋವ್ಯಾಕುಲತೆಯನ್ನು ಹೊಂದುವುದಿಲ್ಲ, ಅವನು ನನಗೆ ಪರಮಪ್ರಿಯನು.

**(11) ಶ್ಲೋ॥ 16 : ಅನಪೇಕ್ಷಃ ಶುಚಿರ್ದಕ್ಷ ಉದಾಸೀನೋ ಗತವ್ಯಥಃ ।**
**ಸರ್ವಾರಮ್ಭ ಪರಿತ್ಯಾಗೀ ಯೋ ಮದ್ಭಕ್ತಃ ಸಮೇ ಪ್ರಿಯಃ॥**
**(ಬ್ರಹ್ಮಯೋಗ)**

**ಭಾವಾರ್ಥ** : ಯಾವುದರಲ್ಲಿಯೂ ಆಸೆ ಇಲ್ಲದವನು, ಮನೋ ಶುಭ್ರತೆ ಹೊಂದಿರುವವನು, ಚಲ ಹೊಂದಿರುವವನು, ಯಾರ ಪಕ್ಷ ಇಲ್ಲದವನು, ಏನನ್ನು ಆರಂಭಿಸದೆ ಬಿಟ್ಟು ಹಾಕಿದ ಬ್ರಹ್ಮಯೋಗಿಯಾದ ಭಕ್ತನು ನನಗಧಿಕ ಪ್ರಿಯನು.

**(11) ಶ್ಲೋ॥ 17 : ಯೋನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ ।**
**ಶುಭಾಶುಭ ಪರಿತ್ಯಾಗೀ ಭಕ್ತಿಮಾನ್ ಯಸ್ಸ ಮೇ ಪ್ರಿಯಃ ॥**
**(ಕರ್ಮಯೋಗ)**

**ಭಾವ** : ಸಂತೋಷಪಡದೆ ಹಾಗೇ ದುಃಖವನ್ನೂ ಹೊಂದದೆ, ದ್ವೇಷಿಸದೆ, ಅಭಿಲಾಷಿಯು ಅಲ್ಲದೆ, ಒಳ್ಳೆಯಕೆಟ್ಟ ಪಾಪ ಪುಣ್ಯಗಳನ್ನು ಹೊಂದದೆ, ಅವುಗಳನ್ನು ಪರಿತ್ಯಜಿಸಿದವನು ಯಾರೋ ಅವನು ನನಗೆ ಹೆಚ್ಚಿನ ಪ್ರಿಯನು.

**(11) ಶ್ಲೋ॥ 18 : ಸಮಶ್ಶತ್ರೌ ಚ ಮಿತ್ರೇಚ ತಥಾ ಮಾನಾವಮಾನಯೋಃ ।**
**ಶೀತೋಷ್ಣ ಸುಖದುಃಖೇಷು ಸಮಃ ಸಂಗ ವಿವರ್ಜಿತಃ ॥**
**(ಬ್ರಹ್ಮಯೋಗ, ಕರ್ಮಯೋಗಗಳು)**

**(11) ಶ್ಲೋ॥ 19 : ತುಲ್ಯನಿನ್ದಾ ಸ್ತುತಿರ್ಮೌನೀ ಸನ್ತುಷ್ಟೋ ಯೇನ ಕೇನಚಿತ್ ।**
**ಅನಿಕೇತಃ ಸ್ಥಿರಮತಿ ರ್ಭಕ್ತಿಮಾನ್ ಮೇ ಪ್ರಿಯೋ ನರಃ ॥**
**(ಕರ್ಮಯೋಗ)**

**ಭಾವಾರ್ಥ** : ಮಿತ್ರರಲ್ಲಿ, ಶತ್ರುಗಳಲ್ಲಿ, ಮಾನಾವಮಾನಗಳಲ್ಲಿಯೂ, ಶೀತೋಷ್ಣ ಸುಖದುಃಖಗಳಲ್ಲಿಯೂ ಸಮಾನತೆ ಹೊಂದಿರುವವನು, ಪಾಪಪುಣ್ಯಗಳನ್ನು ಸಮಾನವಾಗಿ ವರ್ಜಿತಮಾಡಿದವನು, ಸ್ತುತಿಯನ್ನೂ, ನಿಂದನೆಯನ್ನು ಸಮವಾಗಿ ತಿಳಿದು ದೊರೆತಿರುವುದರಲ್ಲಿ ತೃಪ್ತಿಹೊಂದಿ ಗೃಹಗಳು ಮೊದಲಾದ ನಿವಾಸಸ್ಥಳಗಳ ಮೇಲೆ ಆಸೆ ಇಲ್ಲದ ಸ್ಥಿರಮನಸ್ಸಿರುವ ವನು ನನಗೆ ಪ್ರಿಯನು.

**(11) ಶ್ಲೋ॥ 20 : ಯೇತು ಧರ್ಮ್ಯಾಮೃತಮಿದಂಯಥೋಕ್ತಂಪರ್ಯುಪಾಸತೇ ।**
**ಶ್ರದ್ಧಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ ॥**
**(ಬ್ರಹ್ಮ, ಕರ್ಮಯೋಗ)**

**ಭಾವಾರ್ಥ** : ಯಾರು ನನ್ನ ಪರಮಪದದ ಮೇಲೆ ಶ್ರದ್ಧೆಯುಳ್ಳವರಾಗಿ, ಈ ಮೃತವಿಲ್ಲದ ಧರ್ಮಗಳನ್ನು ಯಾವ ವಿಧವಾಗಿ ಹೇಳಿದ್ದಾರೋ, ಆ ವಿಧವಾಗಿ ಉಪಾಸಿಸುವ ಭಕ್ತನು ನನಗೆ ಪರಮಪ್ರಿಯನು.

**ವಿವರ:** ಮೋಕ್ಷವೇ ಜೀವಿತಾಶಯವಾಗಿರುವವನು ಎಲ್ಲದಕ್ಕಿಂತ ಹೆಚ್ಚಾಗಿ ಶ್ರದ್ಧೆಯುಳ್ಳವನಾಗಿ ಪರಮಾತ್ಮ ಸಂಬಂಧವಾದ ಧರ್ಮಗಳನ್ನು ಪೂರ್ತಿಯಾಗಿ ತಿಳಿದುಕೊಳ್ಳುತ್ತಾನೆ. ಅಮೃತವಾದ ಧರ್ಮಗಳು ಹೇಗಿವೆಯೋ ಹಾಗೆಯೇ ಆಚರಿಸಿ ಪರಮಾತ್ಮನನ್ನು ಸೇರಬೇಕೆಂದು ಪ್ರಯತ್ನ ಮಾಡುವವರು ಯಾರಾದರೆ ಇದ್ದಾರೋ ಅವರು ಪರಮಾತ್ಮನಿಗೆ ಹೆಚ್ಚಿನ ಪ್ರೀತಿಪಾತ್ರ ರಾಗುತ್ತಾರೆ.

ಈ ಅಧ್ಯಾಯದಲ್ಲಿ ಪರಮಾತ್ಮನಿಗೆ ಪ್ರಿಯವಾದವರನ್ನು ಕುರಿತು ಹೇಳುತ್ತಾ, ಯಾರಾದರೆ ಧರ್ಮಾಚರಣೆಯಲ್ಲಿ ಶ್ರದ್ಧೆಯಿಂದಿದ್ದಾರೋ ಅವರೆಲ್ಲರೂ ಇಷ್ಟವಾದವ ರೆಂದಿದ್ದಾನೆ. ಅಷ್ಟೇ ಅಲ್ಲದೆ ಪರಮಾತ್ಮನನ್ನು ಸೇರುವ ಮಾರ್ಗಗಗಳು ಎರಡೇ ಅಲ್ಲ

ಮತ್ತೊಂದು ಮಾರ್ಗ ಇದೆಯೆಂದು ಗುರುತು ಮಾಡಿದ್ದಾನೆ. ಆತನಿಗೆ ಇಷ್ಟವಾದವರು ಕೆಲವರಿದ್ದಾರೆಂದರೆ, ಇಷ್ಟ ಇಲ್ಲದವರೂ ಸಹ ಇದ್ದಾರೆಂದು ಅರ್ಥವಾಗುತ್ತಿದೆ. ಪರಮಾತ್ಮನಿಗೆ ಎಲ್ಲರೂ ಸಮಾನವೇ ಅಲ್ಲವೆ! ಪ್ರಿಯರು, ಅಪ್ರಿಯರೂ ಇರುತ್ತಾರಾ! ಎಂದು ಕೆಲವರು ಕೇಳಬಹುದು. ವಾಸ್ತವವಾಗಿ ಆತನಿಗೆ ಎಲ್ಲರೂ ಸಮಾನರೇ, ಆದರೆ ನಾವೇ ಕೆಲವರು ಹತ್ತಿರಕ್ಕೆ ಹೋಗುತ್ತಿದ್ದೇವೆ. ಕೆಲವರು ದೂರವಾಗಿ ಹೋಗುತ್ತಿದ್ದೇವೆ. ಆದ್ದರಿಂದ ಒಂದು ಬಾರಿ ಹಿಂದಿನ ಅಧ್ಯಾಯಗಳಲ್ಲಿ **ಅಜ್ಞಾನಿಗಳಿಗೆ ದೂರ ಜ್ಞಾನಿಗಳಿಗೆ ಹತ್ತಿರ ಎಂದು** ಆತನೇ ಹೇಳಿದ್ದಾನೆ. ನಮಗಿರುವ ಜ್ಞಾನ ಅಜ್ಞಾನಗಳಿಂದ ನಾವೇ ಆತನನ್ನು ಪ್ರಿಯನನ್ನಾಗಿ, ಅಪ್ರಿಯನನ್ನಾಗಿ ಮಾಡಿಕೊಳ್ಳುತ್ತಿದ್ದೇವೆ. ಹುಟ್ಟಿದಾಗ ಸಾಮಾನ್ಯರಾದ ನಾವು ಬೆಳೆದ ನಂತರ ಮಾನ್ಯರಾಗುತ್ತಿದ್ದೇವೆ ಅಥವಾ ನೀಚರಾಗುತ್ತಿದ್ದೇವೆ. ಹಾಗೆ ಹುಟ್ಟಿದಾಗ ದೇವರ ದೃಷ್ಟಿಯಲ್ಲಿ ಸಮಾನರಾದ ನಾವು ಬೆಳೆದ ನಂತರ ಜ್ಞಾನಮಾರ್ಗವನ್ನು ಅನುಸರಿಸಿ ಪುರುಷೋತ್ತಮನಾದ ದೇವರಿಗೆ ಹತ್ತಿರ ಆಗಬಹುದು, ಅಥವಾ ಅಜ್ಞಾನ ಮಾರ್ಗವನ್ನು ಅನುಸರಿಸಿ ದೂರವಾಗಬಹುದು. ಅದು ನಮ್ಮ ಅನುಕರುಣೆಯನ್ನನುಸರಿಸಿ ಇರುತ್ತದೆಂದು ತಿಳಿಯಬೇಕು.

ಇಲ್ಲಿಗೆ ಭಕ್ತಿ ಯೋಗವೆಂಬ ಈ ಅಧ್ಯಾಯ ಮುಕ್ತಾಯವಾಗಿದೆ. ಈ ಅಧ್ಯಾಯದಲ್ಲಿನ ಶ್ಲೋಕಗಳ ವಿವರ ಕೆಳಗಿದೆ ನೋಡಿರಿ.

| | | | |
|---|---|---|---|
| 1. | ಕರ್ಮಯೋಗ | – | 6 |
| 2. | ಬ್ರಹ್ಮಯೋಗ | – | 6 |
| 3. | ಭಕ್ತಿಯೋಗ | – | 2 |
| 4. | ಬ್ರಹ್ಮಯೋಗ, ಕರ್ಮಯೋಗ | – | 3 |
| 5. | ಕರ್ಮ, ಬ್ರಹ್ಮ, ಭಕ್ತಿಯೋಗಗಳು | – | 2 |
| 6. | ಮೋಕ್ಷ | – | 1 |
| | ಒಟ್ಟು ಶ್ಲೋಕಗಳು | – | 20 |



## ಹನ್ನೆರಡನೆ ಅಧ್ಯಾಯ

# ಕ್ಷೇತ್ರ ಕ್ಷೇತ್ರಜ್ಞ ವಿಭಾಗಯೋಗ

**ಅರ್ಜುನನು ಹೀಗೆ ಹೇಳಿದನು :-**

**(12) ಶ್ಲೋ॥ 1 : ಪ್ರಕೃತಿಂ ಪುರುಷಂ ಚೈವ ಕ್ಷೇತ್ರಂ ಕ್ಷೇತ್ರಜ್ಞ ಮೇವಚ ।**
**ಏತ ದ್ವೇದಿತು ಮಿಚ್ಛಾಮಿ ಜ್ಞಾನಂ ಜ್ಞೇಯಂ ಚ ಕೇಶವ !॥**
**(ಪ್ರಕೃತಿ, ಪುರುಷನು)**

**ಭಾವಾರ್ಥ** : ಓಕೃಷ್ಣಾ! ಪ್ರಕೃತಿ ಎಂದರೆ ಯಾವುದು? ಪುರುಷನ್ಯಾರು? ಕ್ಷೇತ್ರ ಅಂದರೆ ಏನು? ಕ್ಷೇತ್ರಜ್ಞನು ಯಾರು? ಜ್ಞಾನ ಯಾವುದು? ಜ್ಞೇಯವಾದುದು ಏನು? ಇವುಗಳೆಲ್ಲವನ್ನೂ ತಿಳಿಯಬೇಕೆಂದು ಕೋರಿಕೆಯಾಗಿದೆ ತಿಳಿಸೆಂದನು.

**ವಿವರ** : ಇಲ್ಲಿ ಅರ್ಜುನನು ಕೇಳಿರುವುವು ಆರು ಪ್ರಶ್ನೆಗಳು ಇವೆ. ಇವು ಬಹಳ ಮುಖ್ಯವಾದ ಪ್ರಶ್ನೆಗಳು. ಆ ಪ್ರಶ್ನೆಗಳು ಮೂರು ಜೊತೆಗಳಾಗಿವೆ. 1) ಪ್ರಕೃತಿ, ಪುರುಷನ್ಯಾರು? 2) ಕ್ಷೇತ್ರ ಯಾವುದು, ಕ್ಷೇತ್ರಜ್ಞನ್ಯಾರು? 3) ಜ್ಞಾನ, ಜ್ಞೇಯ ಯಾವುವು? ಈ ಪ್ರಶ್ನೆಗಳಲ್ಲಿ ಕೆಲವುಗಳಿಗೆ ಹಿಂದೆ ಉತ್ತರಗಳು ಹೇಳಲಾಗಿದೆ. ತನಗಿರುವ ಅನುಮಾನಗಳ ನಿವೃತ್ತಿಗೋಸ್ಕರ ಪುನಃ ಪ್ರಕೃತಿ, ಪುರುಷರನ್ನು ಕುರಿತು ಕೇಳಿದ್ದಾನೆ. ಹಾಗೆ ಜ್ಞಾನ ಜ್ಞೇಯವನ್ನು ಕುರಿತು ಕೇಳಿದ್ದಾನೆ. ಇನ್ನು ಇದರಲ್ಲಿ ಹೊಸ ಪ್ರಶ್ನೆಗಳು ಕ್ಷೇತ್ರ, ಕ್ಷೇತ್ರಜ್ಞನು ಯಾರು ಎನ್ನುವವು. ಇವುಗಳನ್ನು ಕುರಿತು ಭಗವಂತನಾದ ಶ್ರೀಕೃಷ್ಣನು ಏನು ಹೇಳುತ್ತಿದ್ದಾನೋ ಕೆಳಗೆ ನೋಡೋಣ.

**ಶ್ರೀ ಭಗವಂತನು ಹೀಗೆ ಹೇಳಿದನು :-**

**(12) ಶ್ಲೋ॥ 2 : ಇದಂ ಶರೀರಂ ಕೌನ್ತೇಯ! ಕ್ಷೇತ್ರ ಮಿತ್ಯಬಿಧೀಯತೇ ।**
**ಏತದ್ಯೋ ವೇತ್ತಿತಂ ಪ್ರಾಹುಃಕ್ಷೇತ್ರಜ್ಞ ಇತಿ ತದ್ವಿದಃ ॥**
**(ಪ್ರಕೃತಿ, ಪುರುಷನು)**

**ಭಾವಾರ್ಥ** : ಅರ್ಜುನಾ ! ಈ ಶರೀರವೇ ಕ್ಷೇತ್ರವೆಂದು ಹೇಳಲಾಗುತ್ತಿದೆ. ಇದನ್ನು ಪೂರ್ತಿಯಾಗಿ ಯಾರು ತಿಳಿದಿದ್ದಾನೋ ಅವನನ್ನು ಜ್ಞಾನಿಗಳಾದವರು ಕ್ಷೇತ್ರಜ್ಞನೆಂದು ಹೇಳುತ್ತಿದ್ದಾರೆ.

**ವಿವರ** : ಕ್ಷೇತ್ರ ಎಂದರೆ ಭೂಮಿ ಎಂದು ಅರ್ಥ. ಕ್ಷೇತ್ರಜ್ಞನೆಂದರೆ ಭೂಮಿಯನ್ನು ತಿಳಿದವನೆಂದು ಅರ್ಥ. ಒಂದು ಮನೆಯ ಯಜಮಾನ ತನ್ನ ಮನೆ ವಿವರಗಳೆಲ್ಲವನ್ನು ತಿಳಿದಿರುತ್ತಾನೆ. ತನ್ನ ಮನೆಗೆ ಹಿಂದಿನ ಬಾಗಿಲು ಇರುವುದು ಇಲ್ಲದಿರುವುದು, ಆ ಮನೆ ಅಧಿಪತಿಗೆ ತಿಳಿದಿರುತ್ತದೆ. ಹಾಗೆ ಎಷ್ಟು ಕಿಟಕಿಗಳು, ಎಷ್ಟು ಬಾಗಿಲುಗಳು, ಎಷ್ಟು ಕೋಣೆಗಳಿರುವುದು ಪೂರ್ತಿಯಾಗಿ ತಿಳಿದಿರುವವನನ್ನೇ ಆ ಮನೆಯ ಬಗ್ಗೆ ತಿಳಿದವನೆನ್ನುತ್ತೇವೆ. ಹಾಗೆ ಒಂದು ಎಕರೆ ಹೊಲ ಒಬ್ಬನಿಗಿದೆ ಅಂದುಕೊಳ್ಳೋಣ. ಆ ಎಕರೆಯಲ್ಲಿ ಎಷ್ಟು ಕುಣಿಗಳಿರುವುದು, ಎಲ್ಲಿ ದಿನ್ನೆಗಳಿರುವುದು, ಎಲ್ಲಿ ಕಾಲುವೆ ಇರುವುದು ಆ ಎಕರೆ ಕ್ಷೇತ್ರದ ಯಜಮಾನನಿಗೆ ತಿಳಿದಿರುತ್ತದೆ. ಹಾಗೆಯೇ ನಮ್ಮ ಶರೀರವೂ ಒಂದು ಹೊಲ ಇದ್ದಂತೆ. ಇದಕ್ಕೊಬ್ಬ ಯಜಮಾನ ಇದ್ದಾನೆ. ಅವನಿಗೆ ಇದರ ಸವಿವರವೆಲ್ಲವೂ ತಿಳಿದಿದೆ. ಹೊಲದಲ್ಲಿ ಎಲ್ಲಿಯಾದರು ಕೆಲಸ ಮಾಡುವುದಕ್ಕೆ ಯಜಮಾನನಿಗೆ ಅಧಿಕಾರ ಇರುತ್ತದೆ. ಯಜಮಾನನಿಗೆ ಅಧಿಕಾರವು ಹೊಲದಲ್ಲೆಲ್ಲಾ ಇರುವಂತೆ. ಶರೀರವೆಂಬ ಕ್ಷೇತ್ರದಲ್ಲಿ ಶರೀರವೆಲ್ಲ ಶರೀರ ಯಜಮಾನನ ಅಧಿಕಾರ ವ್ಯಾಪಿಸಿರುತ್ತದೆ. ಶರೀರವೆಲ್ಲವೂ ಅಧಿಕಾರ ವ್ಯಾಪಿಸಿರುವವನು, ಶರೀರವೆಲ್ಲ ಅಣುಅಣುವನ್ನು ತಿಳಿದಿರುವವನು, ಶರೀರಕ್ಕೆ ಅಧಿಪತಿಯಾದ ಆತ್ಮ ಎನ್ನುವವನು ಒಬ್ಬನಿದ್ದಾನೆ. ಸಂಪೂರ್ಣ ಜ್ಞಾನ ತಿಳಿದವರು ಶರೀರದಲ್ಲಿ ಅಧಿಪತಿಯಾಗಿರುವ ಆತ್ಮವನ್ನೇ ಕ್ಷೇತ್ರಜ್ಞನೆಂದು ಹೇಳುತ್ತಿದ್ದಾರೆ. ಇಲ್ಲಿ ಗಮನಿಸಬೇಕಾದ ವಿಷಯ ಏನೆಂದರೆ? ಜೀವಾತ್ಮ ಆತ್ಮಗಳ ವಿಭಜನೆ ತಿಳಿಯದವರು ಗೀತೆಯನ್ನು ಬರೆಯುವುದರಲ್ಲಿ ಕ್ಷೇತ್ರಜ್ಞನೆಂದರೆ ಜೀವಾತ್ಮ ಎಂದು ಬರೆದಿದ್ದಾರೆ. ಅದು ಪೂರ್ತಿ ಧರ್ಮ ವಿರುದ್ಧವಾದ ವಿಷಯ. ಕ್ಷೇತ್ರಜ್ಞನು ಜೀವಾತ್ಮ ಅಲ್ಲ. ಆತ್ಮವೇ ಕ್ಷೇತ್ರಜ್ಞನೆಂದು ಗ್ರಹಿಸಬೇಕು.

**(12) ಶ್ಲೋ॥ 3 : ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ! ।**
**ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ತದ್ ಜ್ಞಾನಂ ಮತಂ ಮಮ ॥**
**(ಪ್ರಕೃತಿ, ಪುರುಷನು)**

**ಭಾವಾರ್ಥ** : ಸರ್ವ ಶರೀರಗಳಲ್ಲಿರುವ ಕ್ಷೇತ್ರಜ್ಞನು ನಾನೇಯೆಂದು ತಿಳಿದಿಕೋ. ಶರೀರವನ್ನು ಅದರಲ್ಲಿನ ಆತ್ಮವನ್ನು ತಿಳಿಸುವ ಜ್ಞಾನವೇ ನಿಜವಾದ ಜ್ಞಾನವೆಂದು ನನ್ನ ಭಾವವು.

**ವಿವರ** : ಕ್ಷೇತ್ರಜ್ಞನಾದ ಆತ್ಮ ಶರೀರವೆಲ್ಲವೂ ವ್ಯಾಪಿಸಿ ಶರೀರ ಕಾರ್ಯಗಳು ನಡೆಯುವಂತೆ ಮಾಡುತ್ತಿದ್ದಾನೆ. ಹಾಗೆಯೇ ಬೇರೆ ಬೇರೆ ಶರೀರಗಳಲ್ಲಿ ಬೇರೆ ಬೇರೆಯಾಗಿ ಆತ್ಮ ಎನ್ನುವುದು ಇದ್ದು ಆ ಶರೀರಕ್ಕೆ ತಕ್ಕಂತೆ ಚೈತನ್ಯವನ್ನು ಕೊಟ್ಟು ಕದಲಿಸುತ್ತಿದೆ. ಅನೇಕ ಜೀವಿರಾಶಿಗಳು

ಅನೇಕ ಶರೀರಗಳನ್ನು ಧರಿಸಿ ಕೋಟಿಗಟ್ಟಲೆ ಇರುವ ಜಗತ್ತಿನಲ್ಲಿ, ಪ್ರತಿ ಜೀವರಾಶಿ ಧರಿಸಿದ ಶರೀರದಲ್ಲಿ ಆತ್ಮ ಇದೆ. ಜಗತ್ತಿನಲ್ಲಿ ಎಷ್ಟೋ ಜೀವರಾಶಿಗಳಿವೆ. ಹಾಗೆ ಅವುಗಳ ಶರೀರಗಳಲ್ಲಿ ಎಷ್ಟೋ ಆತ್ಮಗಳಿವೆ. ಎಲ್ಲಾ ಶರೀರಗಳಲ್ಲಿ ಜೀವಾತ್ಮ ಎಂಬ ಹೆಸರಿರುವವನು ಒಬ್ಬನೇ ಆದರೂ, ಒಂದೊಂದು ಶರೀರದಲ್ಲಿ ಒಬ್ಬೊಬ್ಬ ಜೀವಾತ್ಮ ಇದ್ದಾನೆ. ಹಾಗೆಯೇ ಆತ್ಮ ಎನ್ನುವ ಹೆಸರಿರುವುದು ಒಂದೇ ಆದರೂ, ಅನೇಕ ಶರೀರಗಳಲ್ಲಿ ಅನೇಕ ಜೀವಾತ್ಮಗಳೊಂದಿಗೆ ಅನೇಕ ಆತ್ಮಗಳಿವೆಯೆಂದು ಗ್ರಹಿಸಬೇಕು. ಬಹಳಜನ ಜ್ಞಾನಿಗಳು ಎಲ್ಲಾ ಶರೀರಗಳಲ್ಲಿ ಒಂದೇ ಆತ್ಮ ಇದೆ ಎಂದು ತಪ್ಪಾಗಿ ಅರ್ಥೈಸಿಕೊಳ್ಳುತ್ತಿದ್ದಾರೆ, ಹಾಗೆ ಎಲ್ಲ ಶರೀರಗಳಲ್ಲಿ ಒಂದೇ ಆತ್ಮ ಇಲ್ಲವೆಂದು, ಎಲ್ಲಾ ಶರೀರಗಳಲ್ಲಿ ಒಂದೇ ಹೆಸರಿರುವ ಆತ್ಮ ಇದೆಯೆಂದು ಗ್ರಹಿಸಬೇಕು.

ಭೂಮಿ ಮೇಲೆ ಜೀವಾತ್ಮ ಧರಿಸಿದ ಶರೀರಗಳೆಷ್ಟು ಇದ್ದರೂ ಅವು ಎಲ್ಲವೂ ಪ್ರಕೃತಿಯಿಂದ ತಯಾರಾಗಿರುವವೆ. ಆದ್ದರಿಂದ ಶರೀರಗಳು ಪ್ರಕೃತಿಯ ಅಂಶದಿಂದ ತಯಾರಾಗಿವೆ ಎಂದು ಹೇಳುತ್ತೇವೆ. ಅದೇ ವಿಧವಾಗಿಯೇ ಜಗತ್ತಿನಲ್ಲಿ ಜೀವಾತ್ಮಗಳೆಷ್ಟು ಇದ್ದರು ಅವು ಎಲ್ಲವೂ ಪರಮಾತ್ಮನಿಂದ ತಯಾರಾಗಿರುವವೇ. ಆದುದರಿಂದ ಜೀವಾತ್ಮಗಳನ್ನು ಪರಮಾತ್ಮ ಅಂಶ ಎನ್ನುತ್ತೇವೆ. ಮತ್ತು ಅದೇ ವಿಧವಾಗಿ ಎಲ್ಲಾ ಶರೀರಗಳಲ್ಲಿರುವ ಆತ್ಮಗಳೆಲ್ಲವೂ ಪರಮಾತ್ಮನಿಂದ ತಯಾರಾಗಿರುವವೇ. ಆದುದರಿಂದ ಆತ್ಮಗಳೂ ಸಹ ಪರಮಾತ್ಮ ಅಂಶವೆಂದು ಹೇಳಲಾಗುತ್ತಿವೆ. ಒಂದು ಶರೀರ ಪ್ರಕೃತಿ ಅಂಶವಾದರೆ ಅದರಲ್ಲಿನ ಜೀವಾತ್ಮ, ಆತ್ಮ, ಪರಮಾತ್ಮ ಅಂಶವೆಂದು ತಿಳಿಯುತ್ತಿದೆ. ಈ ಜಗತ್ತಿನಲ್ಲಿ ಕಾರ್ಯಗಳು ನಡೆಯುವುದಕ್ಕೆ ಶರೀರ ಪರಿಕರದಂತೆ ಇರುವಾಗ, ಅದರಲ್ಲಿನ ಕೆಲಸಗಳು ಮಾಡಿಸುವ ಶಕ್ತಿಯಾಗಿ ಆತ್ಮ ಇದೆ. ಆತ್ಮ ಕೆಲಸಗಳು ಮಾಡಿಸುತ್ತಿರುವಾಗ, ಶರೀರವು ಮಾಡುತ್ತಿರುವಾಗ, ಆ ಕೆಲಸಗಳಲ್ಲಿ ಉಂಟಾಗುವ ಅನುಭೂತಿಗಳನ್ನು ಜೀವಾತ್ಮ ಅನುಭವಿಸುತ್ತಿದ್ದಾನೆ. ಈ ವಿಧವಾಗಿಯೇ ಸರ್ವಜಗತ್ತೆಲ್ಲವೂ ಶರೀರ, ಜೀವಾತ್ಮ, ಆತ್ಮ ಅವವುಗಳ ಪಾತ್ರಗಳು ನಿರ್ವಹಿಸುತ್ತಿವೆಯೆಂದು ತಿಳಿಯುವುದು ಉತ್ತಮವಾದ ಜ್ಞಾನ ಎನ್ನುತ್ತಾರೆ. ಶರೀರವೆಂಬ ಕ್ಷೇತ್ರದಲ್ಲಿ ಕ್ಷೇತ್ರಜ್ಞನೆಂಬ ಆತ್ಮ ಯಾವ ವಿಧವಾಗಿ ಕೆಲಸಗಳು ಮಾಡಿಸುತ್ತಿದೆಯೋ ತಿಳಿಸುವಂತ ಜ್ಞಾನವೇ ನಿಜವಾದ ಜ್ಞಾನವೆಂದು ಭಗವಂತನು ಹೇಳಿದ್ದಾನೆ.

ಇಲ್ಲಿ ಕೆಲವರಿಗೊಂದು ಅನುಮಾನ ಬರಬಹುದು. ಅದು ಏನೆಂದರೆ! 'ಎಲ್ಲರ ಶರೀರಗಳಲ್ಲಿ ಒಂದೇ ಹೆಸರಿರುವ ಒಂದೇ ಪರಮಾತ್ಮ ಅಂಶವಾದ ಆತ್ಮ ಇದೆಯೆಂದು

ಹೇಳಿದ್ದೀರ. ಎಲ್ಲಾ ಶರೀರಗಳಲ್ಲಿರುವ ಆತ್ಮಗಳು ಒಂದೇ ಅಂಶಹೊಂದಿ ಒಂದೇ ರೀತಿಯಲ್ಲಿರುತ್ತವೆಂದು ಹೇಳಿದ್ದೀರ. ಆತ್ಮಗಳು ಶರೀರಗಳಿಗೆ ಶಕ್ತಿಯನ್ನು ಕೊಟ್ಟು ಕೆಲಸ ಮಾಡಿಸುತ್ತಿವೆಯೆಂದೂ ಸಹ ಹೇಳಿದ್ದೀರ. ಜಗತ್ತಿನಲ್ಲಿ ಬೇರೆಬೇರೆ ಶರೀರಗಳಿಗೆ ಬೇರೆಬೇರೆ ಶಕ್ತಿಯಿದೆ. ಒಬ್ಬನು ಎತ್ತಿದ ಭಾರವನ್ನು ಮತ್ತೊಬ್ಬನು ಎತ್ತಲಾರನು. ತೆಳ್ಳಗಿರುವವನು ಬಲಿಷ್ಟವಾದ ಶರೀರ ಇರುವವನನ್ನು ಹೊಡೆಯುತ್ತಾನೆ. ಬಲಿಷ್ಟವಾದವನು ಕಡಿಮೆ ಬಾರವನ್ನೂ ಸಹ ಎತ್ತಲಾರದೆಹೋಗುತ್ತಿದ್ದಾನೆ. ಅಷ್ಟೇ ಅಲ್ಲದೇ ಒಂದೇ ತೂಕವಿರುವ ಇಬ್ಬರು ವ್ಯಕ್ತಿಗಳಲ್ಲಿ ಒಬ್ಬರು ಎತ್ತಿದ ಭಾರವನ್ನು ಮತ್ತೊಬ್ಬನು ಎತ್ತಲಾರನು, ಇಬ್ಬರಲ್ಲಿ ಒಂದೇ ವಿಧವಾದ ಆತ್ಮಗಳಿರುವಾಗ ಆ ಶರೀರಗಳಲ್ಲಿ ವ್ಯತ್ಯಾಸ ಏಕೆ ಬಂದಿದೆ?' ಎಂದು ಅವರ ಪ್ರಶ್ನೆ. ಕ್ಷೇತ್ರ, ಕ್ಷೇತ್ರಜ್ಞನನ್ನು ತಿಳಿಯುವುದು ಮುಖ್ಯ ಜ್ಞಾನವೆಂದು ಹೇಳಿರುವುದರಿಂದ ಇಲ್ಲಿ ಶರೀರ ಆತ್ಮವನ್ನು ಕುರಿತಾದ ಪ್ರಶ್ನೆ ಸಮಂಜಸವಾದುದೆಂದು ಹೇಳಬಹುದು. ಈ ಪ್ರಶ್ನೆಗೆ ಅಂತರಂಗದಿಂದ ಯಾವ ಉತ್ತರ ಬರುತ್ತದೋ ನೀವು ನಾವು ಎಲ್ಲರೂ ಕೆಳಗೆ ನೋಡೋಣ.

ಮನುಷ್ಯರಲ್ಲಿಯೇ ಶಾರೀರಿಕವಾಗಿ ಎಷ್ಟೋ ಜನ ಬಲವುಳ್ಳವರನ್ನು ಮತ್ತು ಬಲ ಹೀನರನ್ನು ನಾವು ನೋಡಿರುತ್ತೇವೆ. ಹಾಗೆಯೇ ಆರೋಗ್ಯ, ಅನಾರೋಗಿಗಳನ್ನೂ ನೋಡಿರುತ್ತೇವೆ. ಕೆಲವರು ಬೇಗನೇ ರೋಗಗ್ರಸ್ತರಾಗುವುದು. ಕೆಲವರು ಎಂತಹ ರೋಗಕ್ರಿಮಿಗಳ ಮಧ್ಯೆ ಇದ್ದರೂ ರೋಗ ಬಾರದಿರುವುದು ನೋಡಿರುತ್ತೇವೆ. ಹೆಚ್ಚಾಗಿ ತಿನ್ನುವವರು, ಬಲವಾದ ತಿಂಡಿ ತಿನ್ನುವವರು, ಬಲಹೀನರಾಗಿರುತ್ತಾರೆ. ಕೆಲವರು ಕಡಿಮೆ ತಿನ್ನುತ್ತಿದ್ದರೂ, ಬಲವಾದ ಆಹಾರ ಅಲ್ಲದಿದ್ದರು ಅವರು ಬಲವಾಗಿರುವುದು ನೋಡುತ್ತಿರುವ ವಿಷಯವೇ. ರೋಗಗಳ ಮಧ್ಯೆ ಇರುವವರಿಗೆ ರೋಗಗಳು ಬಾರದೆ ಆರೋಗ್ಯವಾಗಿರುವುದು, ಬಲಹೀನವಾದ ಆಹಾರ ತೆಗೆದುಕೊಂಡರೂ, ಸ್ವಲ್ಪಮಟ್ಟಿನ ಆಹಾರ ತಿಂದರೂ ಬಲವುಳ್ಳರಾಗಿರುವುದು, ಅಷ್ಟೇ ಅಲ್ಲದೆ ಕೆಲವು ಕಡೆ ಒಂದು ಹೊತ್ತು ಬಹಳ ಕಡಿಮೆ ಆಹಾರದಿಂದಲೇ ಬದುಕುತ್ತಾ ಎಲ್ಲ ಕೆಲಸಗಳು ಮಾಡಿಕೊಳ್ಳುತ್ತಾ ಆರೋಗ್ಯವಾಗಿರುವವರು ಇದ್ದಾರೆ. ಈ ವಿಧವಾಗಿ ಹೆಚ್ಚು ಕಡಿಮೆ ಭೇದಗಳು ಇರುವುದಕ್ಕೆ ಕಾರಣ, ಅವರ ಶರೀರದಲ್ಲಿರುವ ಆತ್ಮದ ಪಾತ್ರವೆಂದು ತಿಳಿಯುತ್ತಿದೆ. ಆತ್ಮ ಶರೀರವೆಲ್ಲಾ ವ್ಯಾಪಿಸಿ ಶರೀರದ ಮೂಲಕ ಕೆಲಸಗಳು ಮಾಡಿಸುತ್ತಿರುವುದೇ ಅಲ್ಲದೆ, ಆ ಶರೀರವು ಎಷ್ಟು ಎತ್ತರ ಬೆಳೆಯಬೇಕೋ, ಎಷ್ಟು ಕುಳ್ಳಗಿರಬೇಕೋ ನಿರ್ಣಯಿಸಿ ಬೆಳೆಸುವುದು ಆತ್ಮವೇ. ಶರೀರದ ಬೆಳವಣಿಗೆಯೇ ಅಲ್ಲದೆ, ಶರೀರದಲ್ಲಿನ ಮುಖದ ಅಂದ, ಮುಖದಲ್ಲಿನ ಮೂಗು ತುಟಿಗಳು ಉಳಿದ ಖಂಡರಗಳು, ಮುಖವರ್ಚಸ್ಸೌಂದರ ಅಂದವನ್ನು ಸರಿತಿದ್ದಿ ಬೆಳೆಸುವುದು

ಆತ್ಮವೇ. ಶರೀರದ ಸೋಗು ಸೊಬಗುಗಳನ್ನು ಕ್ರಮಬದ್ಧೀಕರಣ ಮಾಡುವುದಲ್ಲದೆ, ಶರೀರ ಆರೋಗ್ಯವನ್ನು ಅನಾರೋಗ್ಯವನ್ನು ಸರಿತಿದ್ದುವುದು ಆತ್ಮವೇ ಎಂದು ತಿಳಿಯಿರಿ. ಇನ್ನೂ ಶರೀರದಲ್ಲಿ ತನ್ನ ಶಕ್ತಿಯನ್ನು ನರಗಳ ಮೂಲಕ ಪ್ರಸಾರಮಾಡುತ್ತಾ ಶರೀರಕ್ಕೆ ಬಲ ಕೊಡುವುದು ಆತ್ಮವೇ. ತೆಳ್ಳಗಿರುವ ಶರೀರದಲ್ಲಿನ ಬಲವನ್ನು, ದೃಢ ಶರೀರದಲ್ಲಿನ ಬಲಹೀನತೆ ಎಲ್ಲವೂ ಆತ್ಮವೇ ಉಂಟುಮಾಡುತ್ತಿದೆ. ಶರೀರದಲ್ಲಿ ಎಲ್ಲದಕ್ಕೂ ಕಾರಣವಾದ ಆತ್ಮ ಬ್ರಹ್ಮನಾಡಿಯನ್ನು ಕೇಂದ್ರವಾಗಿ ಮಾಡಿಕೊಂಡು, ಉಳಿದ ನಾಡಿಗಳ ಮೂಲಕ ಶರೀರವೆಲ್ಲ ವ್ಯಾಪಿಸಿದೆ. ಆತ್ಮ ಶರೀರವೆಲ್ಲ ಚೈತನ್ಯ (ಶಕ್ತಿ) ರೂಪವಾಗಿ ವ್ಯಾಪಿಸಿ ಶರೀರವನ್ನು ಕದಲಿಸುವ ಕಾರ್ಯವೊಂದು ಮಾಡುತ್ತಾ, ಶರೀರದ ಬೆಳೆವಣಿಗೆ, ಆರೋಗ್ಯ ಮೊದಲಾದ ಕಾರ್ಯಗಳೂ ಸಹ ಮಾಡುತ್ತಿದೆ.

ಆತ್ಮ ಶರೀರದಲ್ಲಿ ಎರಡು ಭಾಗಗಳಾಗಿ ತನ್ನ ಕರ್ತವ್ಯವನ್ನು ಮಾಡುತ್ತದೆ. ಮುಖ್ಯವಾಗಿ ಶರೀರ ಬಲಾಬಲದ ಕೆಲಸ ನೋಡುವುದೊಂದು ಕಾರ್ಯವಾದರೆ, ಎರಡನೆಯದು ಶರೀರ ಆರೋಗ್ಯ ಅನಾರೋಗ್ಯಗಳ ವಿಷಯವಾದ ಕಾರ್ಯ. ಒಂದು ಶರೀರದಲ್ಲಿನ ಆತ್ಮವೊಂದರ ಕರ್ತವ್ಯ ಎರಡು ವಿಧಗಳಾಗಿ ನಿರ್ವಹಿಸುತ್ತದೆಂಬ ಮಾತು ವಾಸ್ತವವೇ ಆದರೂ, ಬಹಳ ಜನರಿಗೆ ಈ ವಿಷಯ ತಿಳಿಯದು. ಆತ್ಮ ಬ್ರಹ್ಮನಾಡಿಯನ್ನು ಕೇಂದ್ರವಾಗಿ ಮಾಡಿಕೊಂಡು, ಬ್ರಹ್ಮನಾಡಿಯಿಂದ ಪ್ರಾರಂಭವಾಗುವ ನಾಡಿಗಳ ಮೂಲಕ ಶರೀರವೆಲ್ಲ ಹರಡಿ, ಪ್ರತಿ ಧಾತುವಿನಲ್ಲಿಯೂ ಪ್ರತಿ ಚಿಕ್ಕ ಭಾಗದಲ್ಲಿಯೂ ಚೈತನ್ಯವಾಗಿದೆ. ಹಾಗೆ ಎಲ್ಲಾಕಡೆ ವ್ಯಾಪಿಸಿ, ಜೀವಿಯ ಕರ್ಮಾನುಸಾರ ನಡೆಯಬೇಕಾದ ಕೆಲಸಗಳಿಗೆ ಬೇಕಾದ ಚಲನೆ ಶಕ್ತಿಕೊಟ್ಟು, ಶರೀರವನ್ನು ಕದಲಿಸಿ ಕೆಲಸ ಮಾಡಿಸುತ್ತಿದೆ. ಇದು ಬಹಳಜನರಿಗೆ ತಿಳಿದ ವಿಷಯವೇಯೆಂದುಕೊಳ್ಳುತ್ತೇನೆ. ಶರೀರಕ್ಕೆ ಬಲವನ್ನುಕೊಟ್ಟು ಕದಲಿಸುವ ಆತ್ಮ, ಒಂದು ಶರೀರಕ್ಕೆ ಹೆಚ್ಚಾಗಿ ಬಲವನ್ನು ಕೊಡುತ್ತಾ, ಮತ್ತೊಂದು ಶರೀರಕ್ಕೆ ಕಡಿಮೆ ಬಲ ಕೊಡುವುದೇನೆಂದು ಕೇಳಬಹುದು. **ಶರೀರದ ಮೂಲಕ ಯಾವ ಕಾರ್ಯ ನಡೆಯಬೇಕೋ, ಅಲ್ಲಿ ಆ ಕಾರ್ಯ ನಡೆಯುವುದಕ್ಕೆ ಎಷ್ಟು ಬಲ ಬೇಕೋ, ಎಲ್ಲಾ ಕರ್ಮವನ್ನು ಅನುಸರಿಸಿ ಇರುತ್ತದೆ.** ಉದಾಹರಣೆಗೆ ಒಬ್ಬನು ಒಂದು ಮೂಟೆಯನ್ನು ಎತ್ತಬೇಕಾಗಿರುವಾಗ ಅಲ್ಲಿ ಎಷ್ಟು ಬಲ ಉಪಯೋಗಪಡಬೇಕು, ಆತನು ಪೂರ್ತಿಮೇಲಕ್ಕೆ ಎತ್ತುತ್ತಾನಾ, ಅಥವಾ ಮಧ್ಯದವರೆಗೂ ಎತ್ತುತ್ತಾನಾ, ಎತ್ತಿದ ಭಾರವನ್ನು ಎಷ್ಟುಸಮಯ ಹೊರುತ್ತಾನೆ ಎನ್ನುವ ವಿಷಯಗಳೆಲ್ಲಾ ಕರ್ಮವನ್ನನುಸರಿಸಿರುತ್ತದೆ. ಮಾಡಬೇಕಾದ ಕಾರ್ಯಗಳಲ್ಲಿ ಶಕ್ತಿ ಆತ್ಮದೇ ಆದರೂ, ಅದು ಕರ್ಮವನ್ನು ಅನುಸರಿಸಿ ಇರುವುದರಿಂದ ಒಂದೇ ಕಾರ್ಯದಲ್ಲಿ ಒಬ್ಬನು

ಬಲವಾಗಿ, ಒಬ್ಬನು ಬಲಹೀನನಾಗಿ ಕಾಣಿಸುತ್ತಿದ್ದಾರೆ. ಹಾಗೆ ವ್ಯತ್ಯಾಸಗಳು ಕಾಣಿಸದ ಕರ್ಮವೇಯೆಂದು ತಿಳಿದುಕೊಳ್ಳಬೇಕು. ಹಾಗೆ ಶರೀರದಲ್ಲಿನ ಆತ್ಮಬಲ ನಾಡಿಗಳ ಮೂಲಕ ವ್ಯಾಪಿಸಿ ಕೆಲಸಗಳಿಗೆ ಉಪಯೋಗಪಡುವುದು ಒಂದು ಕಾರ್ಯವಾಗಿದ್ದು, ಎರಡನೇ ಕಾರ್ಯದಲ್ಲಿ ಆತ್ಮಚೈತನ್ಯ (ಆತ್ಮಬಲ) ಶರೀರದಲ್ಲಿ ಹರಡಿ ಅಲ್ಲಲ್ಲಿ ಇರುವ ಕೆಲವು ಸ್ಥಾನಗಳಲ್ಲಿ ಪ್ರವೇಶಿಸಿ ಬದಲಾವಣೆಹೊಂದಿ ದ್ರವವಾಗುತ್ತದೆ, ಕಾಂತಿಯಿಂದ ಹೊರಟು ಶರೀರಕ್ಕೆ ಆರೋಗ್ಯ ಅನಾರೋಗ್ಯವನ್ನು ಮತ್ತು ಅಂದವನ್ನು ಅಂದಹೀನವನ್ನು ಉಂಟುಮಾಡುತ್ತಿದೆ.

ಬ್ರಹ್ಮನಾಡಿಯಲ್ಲಿರುವ ಏಳು ನಾಡಿಕೇಂದ್ರಗಳಿಂದ ಹೊರಡುವ ಶಕ್ತಿ ಚಲನೆಯಾಗಿ, ಆ ಚಲನೆಯಲ್ಲಿನ ಬಲವಾಗಿ, ಶರೀರಕ್ಕೆ ಉಪಯೋಗಪಡುತ್ತಿದೆಯೆಂದು ತಿಳಿದುಕೊಂಡಿದ್ದೇವೆ. ಹಾಗೆಯೇ ಆತ್ಮಶಕ್ತಿ ಶರೀರದಲ್ಲಿನ ಏಳು ಗ್ರಂಥಿಗಳಲ್ಲಿ ಪ್ರವೇಶಿಸಿ ಬದಲಾವಣೆಹೊಂದಿ ದ್ರವರೂಪವಾಗಿ, ಮತ್ತು ಕಾಣಿಸದ ಕಾಂತಿಕಿರಣಗಳ ರೂಪವಾಗಿ ಬದಲಾಗಿ ಗ್ರಂಥಿಗಳಿಂದ ಹೊರಬೀಳುತ್ತಾ ಶರೀರ ಆರೋಗ್ಯ ಅನಾರೋಗ್ಯಗಳನ್ನು, ಯೌವನ, ವೃದ್ಧಾಪ್ಯಗಳನ್ನು ಉಂಟು ಮಾಡುತ್ತಿದೆ. ಏಳು ಗ್ರಂಥಿಗಳಿಂದ ಹೊರಡುವುದು ಕಾಂತಿಯುಕ್ತವಾದ ದ್ರವವೆಂದು ತಿಳಿಯಬೇಕು. ಏಳು ನಾಡೀಕೇಂದ್ರಗಳಲ್ಲಿ ಮುಖ್ಯವಾದ ನಾಡೀಕೇಂದ್ರ ಎಲ್ಲದಕ್ಕಿಂತ ಮೇಲೆ ಶಿರೋಭಾಗದಲ್ಲಿರುವ ಸಹಸ್ರಾರ ಎನ್ನುವುದು. ಸಹಸ್ರಾರಗಳಲ್ಲಿರುವ ಆತ್ಮ ಕೆಳಗಿರುವ ಆರು ಕೇಂದ್ರಗಳಿಗೆ ಎಷ್ಟು ಶಕ್ತಿ ಬಿಡುಗಡೆಯಾಗಬೇಕೋ ನಿರ್ಣಯಿಸುತ್ತಿದೆ. ಹಾಗೆಯೇ ಗ್ರಂಥಿಗಳಿಗೆಲ್ಲ ಮುಖ್ಯವಾದ ಗ್ರಂಥಿ ಶಿರೋಭಾಗದಲ್ಲಿಯೇ ಇದೆ. ಇದು ಆಕಾರದಲ್ಲಿ ಎಲ್ಲ ಗ್ರಂಥಿಗಳಿಗಿಂತ ಚಿಕ್ಕದಾದರೂ ಗ್ರಂಥಿಗಳಿಗೆಲ್ಲ ರಾಜನಂತೆ, ಆದುದರಿಂದ ಇದಕ್ಕೆ ಗ್ರಂಥಿರಾಜನೆಂದು ಹೆಸರು ಇದೆ. ಹಿಟ್ಟಿನ ಗಿರಣಿಗಳಲ್ಲಿ ಕಾಳುಗಳು ಹಿಟ್ಟಾಗಿ ಬದಲಾಗಿ ಹೊರಗೆ ಬಂದಂತೆ, ಆತ್ಮಬಲ ಗ್ರಂಥಿಗಳಲ್ಲಿ ಪ್ರವೇಶಿಸಿ ದ್ರವರೂಪವಾಗಿ ಹೊರಗೆ ಬರುತ್ತಿದೆ. ನಾಡೀಕೇಂದ್ರಗಳಲ್ಲಿ ಮೇಲಿರುವ ನಾಡೀಕೇಂದ್ರದ ಕೆಳಗೆ ಆರು ಕೇಂದ್ರಗಳ ಮೇಲೆ ಅಧಿಕಾರ ಹೊಂದಿ ಶಕ್ತಿ ಬಹಿರ್ಗತವನ್ನು ನಿರ್ಣಯಿಸುವಂತೆ, ಗ್ರಂಥಿಗಳಲ್ಲಿ ಮೇಲಿರುವ ಗ್ರಂಥಿರಾಜನು ಕೆಳಗಿರುವ ಆರು ಗ್ರಂಥಿಗಳ ಮೇಲೆ ಅಧಿಕಾರಹೊಂದಿ ಅವುಗಳಿಂದ ಕೆಲಸ ಮಾಡಿಸುತ್ತಿದೆ. ಉದಾಹರಣೆಗೆ ಶರೀರದಲ್ಲಿ ನಮಗೆ ತಿಳಿದ ಒಂದು ಗ್ರಂಥಿ ವಿಷಯವನ್ನು ನೋಡೋಣ.

ಶರೀರದಲ್ಲಿ ಜೀರ್ಣಪ್ರಕಿಯೆ ಸಕ್ರಮವಾಗಿ ನಡೆಯಲು ಉಪಯೋಗಪಡುವ ರಸವನ್ನು ಸ್ಯಂದಿಸುವ ಲಾಲಾಜಲಗ್ರಂಥಿಯೆನ್ನುವ ಗ್ರಂಥಿಗಳು ನಮ್ಮ ಮುಖದಲ್ಲಿ ಎರಡುಕಡೆ ಕಿವಿಗಳಿಗೆ ಹತ್ತಿರವಾಗಿ ಸ್ವಲ್ಪ ಕೆಳಗಿವೆ. ಈ ಗ್ರಂಥಿ ಒಂದು ಸಣ್ಣ ಚಿಲುಮೆಯಂತಹದ್ದು.

ಇದರಲ್ಲಿ ಲಾಲಾಜಲವೆಂಬ ದ್ರವ ಊರುವಿಕೆ ಹೊಂದಿದೆ. ಈ ಊರುವಿಕೆ ನಿಂಬೆಹಣ್ಣನ್ನು, ಹುಣಿಸೆಕಾಯಿಯನ್ನು ನೆನಪಿಸಿಕೊಂಡಾಗ ಹೆಚ್ಚಾಗಿರುತ್ತದೆ. ಈ ಲಾಲಾಜಲಗ್ರಂಥಿ ಎನ್ನುವುದರಲ್ಲಿ ಊರುವ ಲಾಲಾಜಲವೆಂಬ ರಸ, ನಾವು ತಿನ್ನುವ ಆಹಾರದಲ್ಲಿನ ಸಕ್ಕರೆಯೆಂಬ ಸಿಹಿಪದಾರ್ಥ (ಗ್ಲೂಕೋಜ್)ವನ್ನು, ಅಥವಾ ಹಿಟ್ಟಿನ ಪದಾರ್ಥಗಳನ್ನು ಜೀರ್ಣಮಾಡುತ್ತದೆ. ಲಾಲಾಜಲಗ್ರಂಥಿಯಿಂದ ಲಾಲಾಜಲ ಎಷ್ಟು ತಯಾರಿ ಆಗಬೇಕೆನ್ನುವುದು ಮೇಲಿರುವ ಗ್ರಂಥಿರಾಜ ನಿರ್ಣಯಿಸುತ್ತದೆ. ಈ ರಸ ಒಂದರ ಸಾಮರ್ಥ್ಯದಿಂದ ಶರೀರದಲ್ಲಿನ ಜೀರ್ಣಶಕ್ತಿ ಇರುತ್ತದೆ. ಬಾಯಲ್ಲಿ ಊರುವ ಈ ರಸ ಹೆಚ್ಚಾಗಿ ತಯಾರಾದರೆ ಮೇಲೆ ಹೇಳಿರುವ ಪದಾರ್ಥಗಳು ಚೆನ್ನಾಗಿ ಜೀರ್ಣವಾಗುತ್ತವೆ. ಈ ರಸ ಕಡಿಮೆ ತಯಾರಾದರೆ ಮೇಲೆ ಹೇಳಿದ ಪದಾರ್ಥಗಳು ಸರಿಯಾಗಿ ಜೀರ್ಣ ಆಗುವುದಿಲ್ಲ. ಶರೀರಕ್ಕೆ ಶಾಖವನ್ನು ಶಕ್ತಿಯನ್ನು ಕೊಡುವ ಕಾರ್ಬೊಹೈಡ್ರೇಟ್ಸ್ ಎನ್ನುವವು ಹಿಟ್ಟಿನ ಪದಾರ್ಥಗಳಿಂದ ತಯಾರಾಗುತ್ತವೆ. ಹಿಟ್ಟಿನ ಪದಾರ್ಥಗಳನ್ನು ಜೀರ್ಣಮಾಡುವ ಲಾಲಾಜಲರಸ ಸ್ಯಂದನ ಕಡಿಮೆಯಾದರೆ ಹಿಟ್ಟಿನ ಪದಾರ್ಥಗಳ ಜೀರ್ಣ ಕಡಿಮೆಯಾಗುತ್ತದೆ. ಹಾಗೆ ಆದಾಗಲೇ ಶಾಖವನ್ನು ಕೊಡುವ ಕಾರ್ಬೊಹೈಡ್ರೇಟ್ಸ್ ಕಡಿಮೆಯಾಗುವುದರಿಂದ ಶರೀರ ನಿಸ್ಸಾರವಾಗುವುದರಿಂದ ಬಲಹೀನತೆ ಏರ್ಪಡುತ್ತದೆ. ಇಂತಹ ಆರೋಗ್ಯ ಅನಾರೋಗ್ಯಕ್ಕೆ ಮುಖ್ಯ ಕಾರಣ ಲಾಲಜಲಗ್ರಂಥಿಯೆಂದು ತಿಳಿಯುತ್ತಿದೆ. ಹೀಗೆ ಶರೀರದಲ್ಲಿರುವ ಉಳಿದ ಗ್ರಂಥಿಗಳ ರಸವೂ ಸಹ ಒಂದೊಂದು ಒಂದೊಂದು ವಿಧವಾಗಿ ತಮ್ಮ ಕೆಲಸಗಳು ಮಾಡುತ್ತಾ ಶರೀರದ ಆರೋಗ್ಯದೊಂದಿಗೆ ಸಂಬಂಧ ಇಟ್ಟುಕೊಳ್ಳುತ್ತಿವೆ. ಕಂಠಭಾಗದಲ್ಲಿರುವ ಥೈರಾಯಿಡ್ ಗ್ರಂಥಿ ಮುಖ ವರ್ಚಸ್ಸು, ಮೂಗು, ತುಟಿಗಳ ಬೆಳೆವಣಿಗೆಯನ್ನು ನಿರ್ಣಯಿಸಿ ಅವುಗಳ ಆರೋಗ್ಯಗಳನ್ನು ಪರ್ಯವೇಕ್ಷಿಸುತ್ತದೆ. ಹಾಗೆಯೇ ಪೈತ್ಯರಸಗ್ರಂಥಿ, ಕ್ಲೋಮರಸ ಗ್ರಂಥಿಗಳು ಎರಡು ಜೀರ್ಣಕ್ರಿಯೆಯಲ್ಲಿ ಉಪಯೋಗಪಡುತ್ತವೆ. ಕ್ಲೋಮರಸ ಗ್ರಂಥಿಯಲ್ಲಿ ತಯಾರಾಗುವ ಕ್ಲೋಮರಸ ಜೀರ್ಣಕ್ರೀಯೆಯಲ್ಲಿ ಉಪಯೋಗಪಡುವುದಲ್ಲದೆ, ಇನ್ಸುಲಿನ್ ಎನ್ನುವ ಹಾರ್ಮೋನ್‌ನ್ನು ತಯಾರುಮಾಡಿ ಇನ್ಸುಲಿನ್ ಮೂಲಕ ಶರೀರದಲ್ಲಿ ಗ್ಲೂಕೋಜ್ ಪರಿಮಾಣವನ್ನು ನಿರ್ಣಯಿಸಿ ಶುಗರ್‌ರೋಗದಿಂದ ಕಾಪಾಡುತ್ತಿದೆ. ಈ ಗ್ರಂಥಿ ಕೆಲಸ ಮಾಡದೆಹೋದರೆ ಶುಗರ್‌ರೋಗ ತಪ್ಪುವುದಿಲ್ಲ. ವೀರ್ಯಗ್ರಂಥಿಗಳಲ್ಲಿ ತಯಾರಾಗುವ ವೀರ್ಯದಿಂದಲೂ ಸಹ ಶರೀರ ಆರೋಗ್ಯವಾಗಿರುತ್ತದೆ. ವೀರ್ಯಗ್ರಂಥಿಗಳಿಂದ ತಯಾರಾದ ವೀರ್ಯವು ಶರೀರದಲ್ಲಿ ನೆಲೆ ಇರುತ್ತದೆ. ವೀರ್ಯದ ನೆಲೆಯು ಹೆಚ್ಚಾದರು ಕಡಿಮೆಯಾದರು ಆರೋಗ್ಯದಲ್ಲಿ ಬದಲಾವಣೆ ಇರುತ್ತದೆ. ಹೆಚ್ಚಾಗಿ ನೆಲೆ ಇದ್ದರೆ ಗ್ರಂಥಿಗಳ ಕೆಲಸ ನಿಧಾನವಾಗಿ

ಶರೀರದಲ್ಲಿ ಬದಲಾವಣೆ ಬಂದು ಸ್ವಲ್ಪ ಅನಾರೋಗ್ಯವಾಗುತ್ತದೆ. ಈ ವಿಧ ಅನಾರೋಗ್ಯ ಹೆಚ್ಚಾಗಿ ಮಾನಸಿಕವಾಗಿ, ಸ್ವಲ್ಪಮಟ್ಟಿಗೆ ಶಾರೀರಿಕವಾಗಿರುತ್ತದೆ. ಯುಕ್ತವಯಸ್ಸಿನಲ್ಲಿ ವೀರ್ಯದ ನೆಲೆ ಹೆಚ್ಚಾಗಿಲ್ಲದಂತೆ ಹೊರಗೆಹೋಗುವ ವಿಧಾನವೂ ಸಹ ಗ್ರಂಥಿರಾಜ ಮಾಡುತ್ತದೆ. ಹೆಚ್ಚಾಗಿ ವೀರ್ಯ ಹೊರಗೆಹೋದರೆ ತಯಾರು ಮಾಡುವುದಕ್ಕೆ ಗ್ರಂಥಿಗಳಿಗೆ ಕೆಲಸ ಹೆಚ್ಚಾದರು ಶರೀರ ಅನಾರೋಗ್ಯ ಹೆಚ್ಚಾಗುತ್ತದೆ. ಶರೀರದಿಂದ ಕ್ರಮ ಮೀರಿ ಹೆಚ್ಚಾಗಿ ವೀರ್ಯ ನಷ್ಟವಾದಾಗ ಕೂಡಲೇ ನಿಸ್ಪೃಹ, ನಿರುತ್ಸಾಹ ಏರ್ಪಡುತ್ತದೆ. ವೀರ್ಯಗ್ರಂಥಿಗಳಲ್ಲಿ ತಯಾರಾಗುವ ವೀರ್ಯದಲ್ಲಿರುವ ವೀರ್ಯಕಣಗಳಲ್ಲಿ ಕಣ್ಣಿಗೆ ಕಾಣಿಸುವ ನೀಲಿವರ್ಣವಾದ ಪ್ರಕಾಶವೂ ಸಹ ಇದೆ. ವೀರ್ಯಗ್ರಂಥಿಗಳಲ್ಲಿ ತಯಾರಾಗುವ ವೀರ್ಯ ಗ್ರಂಥಿರಾಜವೊಂದರ ಸಾಮರ್ಥ್ಯದ ಮೇಲೆ ಆಧಾರಪಟ್ಟಿರುತ್ತದೆ. ಕರ್ಮವನ್ನನುಸರಿಸಿ ಅವು ಕೆಲಸ ಮಾಡುವಂತೆ ನಿರ್ಮಾಣ ಇರುವುದರಿಂದ ಕೆಲವರಲ್ಲಿ ವೀರ್ಯಾಭಿವೃದ್ಧಿ ಹೆಚ್ಚಾಗಿ, ಕೆಲವರಲ್ಲಿ ಕಡಿಮೆ ಇರುತ್ತದೆ. ಇದನ್ನೇ ಮಗಸಿರಿ ಎನ್ನುವುದೂ ಸಹ ಇದೆ. ಸಿರಿಯಲ್ಲಿ ಬಡವ ಶ್ರೀಮಂತ ಇರುವಂತೆ ಮಗಸಿರಿಯಲ್ಲಿಯೂ ಸಹ ಇದ್ದಾರೆ. ಗ್ರಂಥಿಗಳೆಲ್ಲ ಒಂದಕ್ಕೊಂದು ಗ್ರಂಥಿರಾಜನೊಂದಿಗೆ ಸಂಬಂಧಹೊಂದಿವೆ. ಆತ್ಮಜ್ಞಾನ ಇರುವ ಯೋಗಿಗಳು ಮನಸ್ಸನ್ನು ಗ್ರಂಥಿರಾಜನಲ್ಲಿಯೇ ಲಗ್ನಮಾಡುತ್ತಿದ್ದಾರೆ. ಭೃಕುಟಿಗೆ ಮಧ್ಯದಲ್ಲಿ ಉಪಜಿಹ್ವೆಗೆ ಮೇಲ್ಭಾಗದಲ್ಲಿ ಗ್ರಂಥಿರಾಜವಿದೆ. ಹಿರಿಯರೆಲ್ಲರೂ ಇಲ್ಲಿಯೇ ಮನಸ್ಸನ್ನು ನಿಲ್ಲಿಸೆಂದಿದ್ದಾರೆ. ಹಾಗೆ ನಿಲ್ಲಿಸಿದ ಬ್ರಹ್ಮಯೋಗಿಗಳ ಶರೀರದಲ್ಲಿನ ಗ್ರಂಥಿಗಳೆಲ್ಲ ಪೂರ್ಣ ಮಟ್ಟದಲ್ಲಿ ಆರೋಗ್ಯವಾಗಿ ಕೆಲಸ ಮಾಡುತ್ತವೆ. ಬ್ರಹ್ಮಯೋಗಿಗಳಿಗೆ ಶುಗರ್‌ರೋಗ ಇಲ್ಲದಿರುವುದು ಗಮನಾರ್ಹ. ಅಷ್ಟೇ ಅಲ್ಲದೆ ಯೋಗಿಗಳ ಶರೀರದಲ್ಲಿನ ಗ್ರಂಥಿರಾಜದಿಂದ ಕಾಂತಿತರಂಗಗಳು ಹೆಚ್ಚಾಗಿ ಪ್ರಕಾಶವಂತವಾಗಿರುತ್ತವೆ. ಅದೇ ಸಾಮಾನ್ಯ ಮನುಷ್ಯರಲ್ಲಿ ಕಡಿಮೆ ಪ್ರಕಾಶ ಇರುವವಾಗಿರುತ್ತವೆ. ಶರೀರ ಆರೋಗ್ಯಗಳಲ್ಲಿಯೂ ಸಹ ಗ್ರಂಥಿರಾಜ ಮುಖ್ಯ ಪಾತ್ರವಹಿಸುತ್ತದೆ. ಈ ವಿಧವಾಗಿಯೇ ಉಳಿದ ಗ್ರಂಥಿಗಳೂ ಸಹ ಅವವುಗಳ ಕೆಲಸವನ್ನು ಮಾಡುತ್ತಾ ಶರೀರವನ್ನು ಆರೋಗ್ಯವಾಗಿಡುವುದರಲ್ಲಿ ಪಾತ್ರವಹಿಸುತ್ತವೆ. ಪ್ರತಿ ಗ್ರಂಥಿರಸದಲ್ಲಿಯೂ ಒಂದು ವಿಧದ ಕಾಂತಿ ಇರುವುದು ವಿಶೇಷ. ಎಲ್ಲದಕ್ಕೂ ದೊಡ್ಡದಾದ ಗ್ರಂಥಿರಾಜದಲ್ಲಿ ಕಾಂತಿ ತರಂಗಗಳಾಗಿ ಪ್ರಸಾರವಾಗುತ್ತಾ ಎಲ್ಲ ಗ್ರಂಥಿಗಳನ್ನು ಕೆಲಸ ಮಾಡಿಸುತ್ತಿದೆ. ಗ್ರಂಥಿರಾಜವೊಂದರ ಕಾಂತಿ ತರಂಗಗಳು ಯಾವ ಗ್ರಂಥಿಗು ಸರಿಯಾಗಿ ಲಭ್ಯವಾಗದೆ ಹೋದರೆ ಆ ಗ್ರಂಥಿ ಸಕ್ರಮವಾಗಿ ಕೆಲಸ ಮಾಡುವುದಿಲ್ಲ.

ಶರೀರದಲ್ಲಿ ಗ್ರಂಥಿಗಳ ವಿಧಾನದಿಂದ ಸ್ವಲ್ಪಕೆಲಸ, ನಾಡೀಕೇಂದ್ರಗಳ ವಿಧಾನದಿಂದ ಸ್ವಲ್ಪ ಕೆಲಸ ಮಾಡುತ್ತಾ ಆತ್ಮ, ಶರೀರವೆಂಬ ಕ್ಷೇತ್ರವನ್ನು ಪಾಲಿಸುವ ರಾಜನಾಗಿದೆ. ಶರೀರವೆಲ್ಲಾ ವ್ಯಾಪಿಸಿ ಅದರ ಮೇಲೆ ಅಧಿಕಾರ ಹೊಂದಿರುವ ಆತ್ಮವನ್ನು ತಿಳಿಯುವ ಜ್ಞಾನ ಬಹಳ ಮುಖ್ಯವಾದ ಜ್ಞಾನವೆಂದು ಭಗವಂತನು ಹೇಳಿದ್ದಾನೆ. ಆದ್ದರಿಂದ ಎಲ್ಲರೂ ಬಾಹ್ಯವಿಷಯ ಜ್ಞಾನವನ್ನು ಬಿಟ್ಟು, ಶರೀರಾಂತರಂಗದಲ್ಲಿರುವ ಜ್ಞಾನವನ್ನು ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸಬೇಕು.

**(12)ಶ್ಲೋ॥ 4 : ತತ್ಕ್ಷೇತ್ರಂ ಯಚ್ಚ ಯಾದೃಕ್ಚ ಯದ್ವಿಕಾರಿ ಯತಶ್ಚ ಯತ್ ।**
**ಸ ಚ ಯೋ ಯತ್ಪ್ರಭಾವಶ್ಚ ತತ್ಸಮಾಸೇನ ಮೇಶೃಣು ॥**

**(ಪ್ರಕೃತಿ, ಪುರುಷನು)**

**ಭಾವಾರ್ಥ** : ಅಂತಹ ಕ್ಷೇತ್ರ ಯಾವುದೋ, ಅದು ಎಂತಹದ್ದೋ, ಅದಕ್ಕೆ ಯಾವ ವಿಕಾರಗಳಿವೆಯೋ, ಆ ವಿಕಾರಗಳು ಯಾವುದರಿಂದ ಹುಟ್ಟುತ್ತಿವೆಯೋ, ಯಾರು ಕ್ಷೇತ್ರಜ್ಞನೋ, ಅವನಿಗೇನು ಪ್ರಭಾವಗಳಿವೆಯೋ ಅವುಗಳನ್ನು ಕ್ಲುಪ್ತವಾಗಿ ಹೇಳುತ್ತೇನೆ ಕೇಳು.

**ವಿವರ** : ಕ್ಷೇತ್ರ, ಕ್ಷೇತ್ರಜ್ಞನನ್ನು ಕುರಿತಾದ ಜ್ಞಾನವನ್ನು ತಿಳಿಸುತ್ತೇನೆಂದು ಭಗವಂತನು ಹೇಳಿದ್ದಾನೆ. ಕ್ಷೇತ್ರವೆಂದರೆ ಯಾವುದು? ಅದು ಎಷ್ಟು ವಿಧಗಳಾಗಿ ಇದೆ? ಅದಕ್ಕೆ ಏನೇನು ಬದಲಾವಣೆಗಳು ಇವೆ. ಆ ಬದಲಾವಣೆಗಳು ಯಾವುದರಿಂದ ಬರುತ್ತಿವೆ. ಕ್ಷೇತ್ರಜ್ಞನೆನ್ನುವವನು ಯಾರು? ಕ್ಷೇತ್ರಜ್ಞನಿಗಿರುವ ಪ್ರಭಾವವೇನು. ಆ ಪ್ರಭಾವವು ಶರೀರದಲ್ಲಿ ಯಾವ ವಿಧವಾಗಿ ಕೆಲಸಮಾಡುತ್ತಿದೆ. ಮೊದಲಾದ ವಿಷಯಗಳು ತಿಳಿದುಕೊಳ್ಳುವುದೇ ಜ್ಞಾನ.

**(12) ಶ್ಲೋ ॥ 5 : ಋಷಿಭಿರ್ಬಹುಧಾ ಗೀತಂ ಛನ್ದೋಭಿ ರ್ವಿವಿಧೈಃ ಪೃಥಕ್ ।**
**ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿ ರ್ವಿನಿಶ್ಚಿತೈಃ ॥**

**(ಪ್ರಕೃತಿ, ಪುರುಷನು)**

**ಭಾವಾರ್ಥ** : ಋಷಿಗಳಿಂದಲೂ, ವೇದಗಳಿಂದಲೂ, ಹೇತುಗಳಿಂದ ಸಿದ್ಧಾಂತ ಮಾಡಲಾದ ಬ್ರಹ್ಮಸೂತ್ರಗಳಿಂದಲೂ, ನಿರ್ಣಯಿಸಲ್ಪಟ್ಟು ಶರೀರ ಮತ್ತು ಆತ್ಮವೊಂದರ ವಿಷಯಗಳು ಹೇಳಲ್ಪಟ್ಟಿವೆ. ದೊಡ್ಡವರೆಲ್ಲರೂ ನಿರ್ಣಯಿಸಿದ ಜ್ಞಾನವನ್ನು ತಿಳಿದುಕೊಳ್ಳೋಣ.

**(12) ಶ್ಲೋ॥ 6 : ಮಹಾಭೂತಾ ನ್ಯಹಂಕಾರೋ ಬುದ್ಧಿ ರವ್ಯಕ್ತಮೇವ ಚ ।**
**ಇಂದ್ರಿಯಾಣಿ ದಶೈಕಂಚ ಪಂಚೇಂದ್ರಿಯ ಗೋಚರಾಃ ॥**
**(ಪ್ರಕೃತಿ)**

**(12) ಶ್ಲೋ॥ 7 : ಇಚ್ಛಾ ದ್ವೇಷ ಸ್ಸುಖಂ ದುಃಖಂ ಸಂಘಾತ ಶ್ಚೇತನಾ ಧೃತಿಃ ।**
**ಏತತ್‍ಕ್ಷೇತ್ರಂ ಸಮಾಸೇನ ಸವಿಕಾರ ಮುದಾಹೃತಮ್ ॥**
**(ಪ್ರಕೃತಿ)**

**ಭಾವಾರ್ಥ** : ದೊಡ್ಡ ಭೂತಗಳಾದ ಜೀವಾತ್ಮ, ಆತ್ಮ, ಅವ್ಯಕ್ತವಾದ ಬುದ್ಧಿ, ಅಹಮ್ ಮೊದಲಾದವೆಲ್ಲವೂ, ಒಂದಾಗಿರುವ ಹತ್ತು ಇಂದ್ರಿಯಗಳು, ಆಗೋಚರವಾದ ಐದು ಇಂದ್ರಿಯಗಳು.

ಪ್ರೇಮ, ಅಸೂಯೆ, ಸುಖದುಃಖ, ಧೈರ್ಯ, ಭಯ, ಶ್ರದ್ಧೆ ಎನ್ನುವ ಚೇತನವಾದ ಸಂಘ. ಎಷ್ಟೋ ವಿಕಾರಗಳಿರುವುದಾಗಿ ಈ ಶರೀರ ಕ್ಷೇತ್ರವನ್ನು ಹೇಳಲಾಗಿದೆ.

**ವಿವರ** : ಇಲ್ಲಿ ಆರನೇ ಶ್ಲೋಕದಲ್ಲಿ **'ಇಂದ್ರಿಯಾಣಿ ದಶೈಕಂಚ'** ಎನ್ನುವ ಪದದಲ್ಲಿ **'ದಶೈಕಂ'** ಎನ್ನುವ ಪದಕ್ಕೆ ಏಕವಾಗಿರುವ ಹತ್ತು ಎಂದು ಅರ್ಥವಿರಬೇಕು. ಗೀತೆಯಲ್ಲಿ ಬಹಳಜನರು ಹನ್ನೊಂದು ಎಂದು ಬರೆದಿದ್ದಾರೆ. **ಏಕಂ ದಶ ಎಂದಾಗ ಹನ್ನೊಂದು ಎನ್ನುವುದರಲ್ಲಿ ತಪ್ಪಿಲ್ಲ. ದಶ ಏಕಂ ಎಂದಾಗ ಹತ್ತು ಒಂದಾಗಿ ಎಂದರೆ ಹತ್ತು ಒಂದು ಗುಂಪಾಗಿ ಎಂದು ಗ್ರಹಿಸಿಕೊಳ್ಳಬೇಕು.** ಹತ್ತು ಇಂದ್ರಿಯಗಳನ್ನು ಒಂದು ಗುಂಪಾಗಿ, ಐದು ಇಂದ್ರಿಯಗಳನ್ನು ಒಂದು ಗುಂಪಾಗಿ ಇಲ್ಲಿ ಹೇಳುವುದಾಗಿದೆಯೆಂದು ತಿಳಿಯಬೇಕು. ಇಲ್ಲಿ ಮೇಲೆ ಕಾಣಿಸುವ ಹತ್ತು ಇಂದ್ರಿಯಗಳನ್ನು ಒಂದಾಗಿ ಹೇಳಿದ್ದಾರೆ. ಕಾಣಿಸದ ಐದು ಇಂದ್ರಿಯಗಳನ್ನು ಬೇರೆಯಾಗಿ ಹೇಳಿದ್ದಾರೆ. ಕಾಣಿಸುವ, ಕಾಣಿಸದವುಗಳನ್ನು ಬೇರೆಬೇರೆಯಾಗಿ ಹೇಳುವುದರಲ್ಲಿ ಈ ಹತ್ತು ಒಂದಾಗಿ, ಉಳಿದ ಐದು ಬೇರೆಯಾಗಿವೆ ಎನ್ನುವುದರಲ್ಲಿ **'ಇಂದ್ರಿಯಾಣಿ ದಶೈಕಂಚ, ಪಂಚೇಂದ್ರಿಯ ಗೋಚರಾಃ'** ಎಂದು ಭಗವಂತನು ಹೇಳಿದ್ದಾನೆ. ಅಷ್ಟೇ ಅಲ್ಲದೆ ಆರನೇ ಶ್ಲೋಕದಲ್ಲಿ ಮೊದಲು ಮಹಾಭೂತ ಎಂಬ ಪದವನ್ನು ಬಳಸಲಾಗಿದೆ. ಈ ಪದಕ್ಕೆ ಬಹಳ ಗೀತೆಗಳಲ್ಲಿ ತಪ್ಪು ಅರ್ಥಬರೆದಿದ್ದಾರೆ. ಮಹಾಭೂತ ಎನ್ನುವ ಪದಕ್ಕೆ ಪಂಚಭೂತಗಳು ಎಂದಿದ್ದಾರೆ. ಹಾಗೆ ಎನ್ನುವುದು ಪೂರ್ತಿ ತಪ್ಪೆಂದು ತಿಳಿಯಬೇಕು. ಏಕೆಂದರೆ ಪಂಚಭೂತಗಳು ಶರೀರದಲ್ಲಿ ಪ್ರತ್ಯೇಕವಾಗಿ ಇಲ್ಲ. ಪಂಚಭೂತಗಳ ವಿಭಜನೆಯಿಂದ

ತಯಾರಾದ ಭಾಗಗಳೇ ಶರೀರ ಭಾಗಗಳಾಗಿರುವಾಗ, ಪುನಃ ಪ್ರತ್ಯೇಕಿಸಿ ಪಂಚಭೂತಗಳೆಂದು ಹೇಳುವುದೇನು? ಪ್ರತ್ಯಕ್ಷವಾಗಿ ಪಂಚಭೂತಗಳಿಂದ ಬದಲಾವಣೆ ಯಾಗಿ ಹುಟ್ಟಿರುವ ಭಾಗಗಳು ಹೊರತು ಶರೀರದಲ್ಲಿ ಪಂಚಭೂತಗಳು ಪ್ರತ್ಯೇಕಿಸಿ ಇಲ್ಲ. ಆದ್ದರಿಂದ ಮಹಾಭೂತ ಎನ್ನುವ ಪದಕ್ಕೆ ಅರ್ಥ ಪಂಚಭೂತಗಳು ಅಲ್ಲವೆಂದು, ಮಹಾಭೂತಗಳಾದ ಜೀವಾತ್ಮ, ಆತ್ಮಗಳೆಂದು ಗ್ರಹಿಸಬೇಕು.

ಒಂದು ಶರೀರದಲ್ಲಿ ಅವ್ಯಕ್ತವಾಗಿ (ಕಾಣಿಸದೆ) ಇರುವಂತಹ ಎರಡು ಶ್ರೇಷ್ಠವಾದ ಭೂತಗಳೆಂದು ಕರೆಯಲ್ಪಡುವ ಜೀವಾತ್ಮ, ಆತ್ಮಗಳು ಇವೆ. ಹಾಗೇ ಒಂಭತ್ತು ಕಾಣಿಸದಂತಹ ಬುದ್ಧಿ, ಅಹಮ್, ಮನಸ್ಸು, ಚಿತ್ತ, ಪ್ರಾಣ, ಅಪಾನ, ಉದಾನ, ಸಮಾನ, ವ್ಯಾನ, ವಾಯುವುಗಳು ಇವೆ. ಇನ್ನು ಇಂದ್ರಿಯಗಳೆಂದು ಕರೆಯಲ್ಪಡುವ ಕಾಣಿಸುವ ಹತ್ತು ಕರ್ಮೇಂದ್ರಿಯ ಜ್ಞಾನೇಂದ್ರಿಗಳು, ಐದು ಕಾಣಿಸದ ಇಂದ್ರಿಯ ಶಕ್ತಿಗಳು ಇವೆ. ಕಾಣಿಸುವ ಭಾಗಗಳಾದ ಕಣ್ಣು, ಕಿವಿ, ನಾಲಿಗೆ, ಚರ್ಮ, ಮೂಗು, ಕಾಲು, ಕೈಗಳು, ಬಾಯಿ, ಗುದ, ಗುಹ್ಯ ಒಂದು ಗುಂಪಾಗಿ, ಕಾಣಿಸದ ಇಂದ್ರಿಯ ಶಕ್ತಿಗಳು ದೃಷ್ಟಿ, ಶ್ರವಣ (ಕೇಳುವಿಕೆ), ವಾಸನೆ, ಸ್ಪರ್ಶ, ರುಚಿ ಒಂದು ಗುಂಪು ಎಂದು ತಿಳಿಯಬೇಕು.

| | | |
|---|---|---|
| **ಮಹಾಭೂತಗಳೆಂದು ಕರೆಯಲ್ಪಡುವ ಜೀವಾತ್ಮ, ಆತ್ಮಗಳು** | – | **2** |
| **ಅವ್ಯಕ್ತವಾದ ಅಂತರಂಗಗಳು** | – | **9** |
| **ಕಾಣಿಸುವ ಇಂದ್ರಿಯಗಳು** | – | **10** |
| **ಕಾಣಿಸದ ಇಂದ್ರಿಯಗಳು** | – | **5** |
| **ಸಜೀವ ಶರೀರದಲ್ಲಿ ಒಟ್ಟು ಭಾಗಗಳು** | – | **26** |

ಈ ವಿಧವಾಗಿ ಕ್ಷೇತ್ರವೆನ್ನುವುದು 24 ಭಾಗಗಳಿಂದ ಮತ್ತು ಎರಡು ಆತ್ಮಗಳಿಂದ ಕೂಡಿದೆ. ಅಷ್ಟೇ ಅಲ್ಲದೆ ಪ್ರೇಮ ಅಸೂಯೆಗಳೆಂಬ ಗುಣಗಳು, ಸುಖದುಃಖಗಳೆಂಬ ಅನುಭೂತಿಗಳು, ಶ್ರದ್ಧೆ, ಧೈರ್ಯ, ಭಯ ಎನ್ನುವ ಚೇತನವಾದ ಸಂಘ ಮತ್ತು ಎಷ್ಟೋ ವಿಕಾರಗಳು ಹೊಂದಿ ಶರೀರವೆಂಬ ಕ್ಷೇತ್ರವಿದೆಯೆಂದು ತಿಳಿಯಬೇಕು.

**(12) ಶ್ಲೋ॥ 8 :** **ಅಮಾನಿತ್ವ ಮದಮ್ಭಿತ್ವ ಮಹಿಂಸಾ ಕ್ಷಾನ್ತಿ ರಾರ್ಜವಮ್ ।**
**ಆಚಾರ್ಯೋಽಪಾಸನಂ ಶೌಚಂ ಸ್ಥೈರ್ಯ ಮಾತ್ಮ ವಿನಿಗ್ರಹಃ ॥**

**(ಜ್ಞಾನ)**

**(12) ಶ್ಲೋ॥ 9 :** **ಇಂದ್ರಿಯಾರ್ಥೇಽಷು ವೈರಾಗ್ಯ ಮನಹಂಕಾರ ಏವಚ ।**
**ಜನ್ಮ ಮೃತ್ಯುಜರಾವ್ಯಾಧಿ ದುಃಖದೋಷಾನು ದರ್ಶನಮ್ ॥**

**(ಜ್ಞಾನ)**

**(12) ಶ್ಲೋ॥ 10 :** **ಅಸಕ್ತಿ ರನಬಿಷ್ವಂಗಃ ಪುತ್ರದಾರಗೃಹಾದಿಷು ।**
**ನಿತ್ಯಂ ಚ ಸಮಚಿ ತ್ತತ್ವ ಮಿಷ್ಟಾನಿಷ್ಟೋಽಪಪ ತ್ತಿ ಷು ॥**

**(ಜ್ಞಾನ)**

**(12) ಶ್ಲೋ॥ 11 :** **ಮಯಿ ಚಾನನ್ಯಯೋಗೇನ ಭಕ್ತಿ ರವ್ಯಭಿಚಾರಣೀ ।**
**ವಿವಿಕ್ತ ದೇಶಸೇವಿತ್ವ ಮರತಿ ರ್ಜನಸಂ ಸದಿ ॥**

**(ಜ್ಞಾನ)**

**(12) ಶ್ಲೋ॥ 12 :** **ಆಧ್ಯಾತ್ಮಜ್ಞಾನ ನಿತ್ಯತ್ವಂ ತತ್ತ್ವಜ್ಞಾನಾರ್ಥ ದರ್ಶನಮ್ ।**
**ಏತದ್ ಜ್ಞಾನ ಮಿತಿ ಪ್ರೋಕ್ತ ಮಜ್ಞಾನಂ ಯದತೋಽನ್ಯಥಾ ॥**

**(ಜ್ಞಾನ)**

**ಭಾವಾರ್ಥ** : ಗರ್ವ ಜಂಭಗಳೆನ್ನುವವು ಉಂಟಾಗದಂತೆ, ಶಾಂತಿ ನಿಷ್ಕಪಟವು, ಅಹಿಂಸೆ ಹೊಂದಿ, ಸದ್ಗುರುಗಳನ್ನು ಪೂಜಿಸುತ್ತಾ, ಧೈರ್ಯ, ಆತ್ಮನಿಗ್ರಹ ಹೊಂದಿ ಇಂದ್ರಿಯಗಳ ಮೇಲೆ ಆಸಕ್ತಿ ಇಲ್ಲದೆ, ನಾನೇ ಎಂಬ ಅಹಂಕಾರ ಭಾವ ಇಲ್ಲದಂತೆ, ಜನ್ಮ, ಮೃತಿ, ವೃದ್ಧಾಪ್ಯ, ರೋಗ, ದುಃಖಗಳು ಬಂದು, ಹೋಗುವವಾಗಿ ತಿಳಿಯುತ್ತಾ, ಹೆಂಡತಿಮಕ್ಕಳಲ್ಲಿ ಪ್ರೇಮ ಇಲ್ಲದಂತೆ ಗೃಹ, ಭೂಮಿ ಮೊದಲಾದವುಗಳ ಮೇಲೆ ಆಸಕ್ತಿ ಇಲ್ಲದೆ, ನಿತ್ಯ ಸಂಭವಿಸುವ ಇಷ್ಟಾಇಷ್ಟಗಳಲ್ಲಿ, ಕಷ್ಟಸುಖಗಳಲ್ಲಿ ಸಮಚಿತ್ತವನ್ನು ಹೊಂದಿ, ವ್ಯಭಿಚರಿಸದ ಭಕ್ತಿಹೊಂದಿ, ಅನನ್ಯವಾದ ಯೋಗವನ್ನು ಮಾಡುತ್ತಾ, ಮನುಷ್ಯರಿಲ್ಲದ ಸ್ಥಳದಲ್ಲಿ ಇರುವುದಕ್ಕೆ ಇಷ್ಟಪಡುತ್ತಾ, ಜನ ಸಮೂಹಗಳಲ್ಲಿ ಇಷ್ಟ ಇಲ್ಲದವನಾಗಿ ಆಧ್ಯಾತ್ಮಿಕ ಜ್ಞಾನವನ್ನು ನಿತ್ಯ ಹೊಂದಿ, ಆತ್ಮವನ್ನು ಜ್ಞಾನದಿಂದ ತಿಳಿದವನಾಗಿರಬೇಕು. ಅದನ್ನೇ ಜ್ಞಾನವೆಂದು ಹಾಗಲ್ಲದೆ ಅನ್ಯವೆಲ್ಲವೂ ಅಜ್ಞಾನವೆಂದು ತಿಳಿಯಬೇಕು.

**ವಿವರ** : ಇಲ್ಲಿ ಒಂದೇ ಬಾರಿ ಐದು ಶ್ಲೋಕಗಳ ಭಾವವೆಲ್ಲವೂ ಹೇಳಲಾಗಿದೆ. ಐದು ಶ್ಲೋಕಗಳಲ್ಲಿಯೂ ಜ್ಞಾನ ವಿಷಯವನ್ನು ಕುರಿತು ಹೇಳಿದ್ದಾರೆ. ಈ ವಿಧವಾಗಿರುವುದೇ ಜ್ಞಾನವೆಂದು ವಿವರಿಸಿದ್ದಾರೆ. 8ರಿಂದ ಪ್ರಾರಂಭವಾಗಿ 12ನೇ ಶ್ಲೋಕಕ್ಕೆ ಮುಗಿದ ಈ ವಿಷಯಗಳಲ್ಲಿ 11ನೇ ಶ್ಲೋಕದಲ್ಲಿ **'ಮಯಿಚಾ ನನ್ಯ ಯೋಗೇನ ಭಕ್ತಿ ರವ್ಯಭಿಚಾರಿಣೀ'** ಎಂಬ ಮಾತು ಬಹಳಜನರಿಗೆ ಚೆನ್ನಾಗಿ ಅರ್ಥವಾಗಿದೆ ಅಂದುಕೊಳ್ಳುತ್ತೇವೆ. **'ಭಕ್ತಿರವ್ಯಭಿಚಾರಿಣೀ'** ಎನ್ನುವ ಪದಕ್ಕೆ ಭಕ್ತಿಯಲ್ಲಿ ವ್ಯಭಿಚಾರ ಏನೆಂದು ಅರ್ಥವಾಗಿರುವುದಿಲ್ಲ. ವ್ಯಭಿಚಾರ ಎಂದರೆ ಒಬ್ಬರು ಶಾರೀರಿಕವಾಗಿ ಅನೇಕ ಜನರ ಜೊತೆ ಸಂಬಂಧ ಇಟ್ಟು ಕೊಳ್ಳುವುದು. ಇಲ್ಲಿ ಭಕ್ತಿ ಎನ್ನುವುದು ಮನಸ್ಸಿಗೆ ಸಂಬಂಧಿಸಿರುವುದು. ಆದ್ದರಿಂದ ಮನಸ್ಸಿನಿಂದ ಭಕ್ತಿಯ ಮೂಲಕ ಅನೇಕ ಮಂದಿ ದೇವತೆಗಳಲ್ಲಿ ಸಂಬಂಧ ಇಟ್ಟುಕೊಳ್ಳುವುದನ್ನು ಭಕ್ತಿಯಲ್ಲಿ ವ್ಯಭಿಚಾರ ಎನ್ನುತ್ತಿದ್ದೇವೆ. ಒಬ್ಬ ಸ್ತ್ರೀ ತನ್ನ ಗಂಡನನ್ನು ಬಿಟ್ಟು ಇತರರೊಂದಿಗೆ ಸಂಬಂಧ ಇರುವುದು ಹೇಗೆ ವ್ಯಭಿಚಾರವೋ, ಹಾಗೆಯೇ ಒಬ್ಬ ಜೀವಾತ್ಮನಿಗೆ ಪತಿಯಾದ ಪರಮಾತ್ಮನನ್ನು ಬಿಟ್ಟು ಇತರ ದೇವತೆಗಳನ್ನು ಪೂಜಿಸುವುದು ಭಕ್ತಿಯಲ್ಲಿ ವ್ಯಭಿಚಾರವಾಗುತ್ತದೆ. ಶರೀರ ವ್ಯಭಿಚಾರ ಎಷ್ಟು ತಪ್ಪೋ ಹಾಗೆಯೇ ಭಕ್ತಿ ಮೂಲಕ ಮಾಡುವ ಮಾನಸಿಕ ವ್ಯಭಿಚಾರ ಅಷ್ಟೇ ತಪ್ಪೆಂದು ಹೇಳಬಹುದು. ವೇಶ್ಯಳವಿಠನು ಕೊಡುವ ಹಣದ ಆಸೆಯಿಂದ ಎಷ್ಟೋ ಜನರು ವಿಠರನ್ನು ಆಶ್ರಯಿಸಿದಂತೆ, ಮನುಷ್ಯನು ದೇವತೆಗಳು ಕೊಡುವ ಫಲಿತಗಳಿಗೆ ಆಸೆಪಟ್ಟು ಎಷ್ಟೋ ಜನರು ದೇವತೆಗಳನ್ನು ಆಶ್ರಯಿಸಿ ಪೂಜಿಸುವುದು ನಡೆಯುತ್ತಿದೆ.

ಸರ್ವಕ್ಕೂ ಮೂಲಕರ್ತನಾಗಿ ಭರಿಸುವ ಪರಮಾತ್ಮನನ್ನು ಬಿಟ್ಟು ಅಲ್ಪವಾದ ದೇವತೆಗಳನ್ನು ಪೂಜಿಸುವುದು ಇಂದು ಹೆಚ್ಚಾಗಿ ನಡೆಯುತ್ತಿದೆ. ಪ್ರಪಂಚ ಜನಸಂಖ್ಯೆಯಲ್ಲಿ ಭಕ್ತಿ ಕಡಿಮೆ ಇರುವ ಈ ಕಾಲದಲ್ಲಿ, ಇರುವ ಭಕ್ತಿ ಸ್ವಲ್ಪ ಇತರ ದೇವತೆಗಳ ಮೇಲೆ ಇದೆ. ಸಾವಿರಮಂದಿ ಭಕ್ತರನ್ನು ಪರಿಶೀಲಿಸಿದಂತಾದರೆ ಅದರಲ್ಲಿ ಒಬ್ಬನೂ ಸಹ ಪರಮಾತ್ಮನ ಮೇಲೆ ಭಕ್ತಿ ಹೊಂದಿರುವುದು ಅಪರೂಪ. ಆ ಸಾವಿರಜನರಲ್ಲಿಯೂ ಎಲ್ಲರೂ ಸಹ ಒಂದೇ ದೇವರ ಮೇಲೆ ಭಕ್ತಿ ಹೊಂದಿರುವುದಿಲ್ಲ. ಸಾವಿರಜನರಿಗೆ ಹತ್ತು ಸಾವಿರಜನರು ದೇವತೆಗಳಿರುವುದು ಆಶ್ಚರ್ಯ. ಆಗಿರುವುದು ಅಜ್ಞಾನವೆಂದು ಅದು ಸರಿಯಾದ ಪದ್ಧತಿ ಅಲ್ಲವೆಂದು, ಪರಮಾತ್ಮನನ್ನು ವಿನಹಃ ಯಾವ ದೇವತೆಯನ್ನು ಆರಾಧಿಸಬಾರದೆಂದು, ದೇವತೆಗಳ ಮೇಲೆ ಧ್ಯಾಸಬಿಟ್ಟು ಪರಮಾತ್ಮನ ಮೇಲೆ ಧ್ಯಾಸ ಬೆಳೆಸಿಕೊಳ್ಳುವುದು ಜ್ಞಾನವೆಂದು ತಿಳಿಸಿದ್ದಾರೆ.

**(12) ಶ್ಲೋ॥ 13 : ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯದ್‌ಜ್ಞಾತ್ವಾಽಮೃತಮಶ್ನುತೇ ।**
**ಅನಾದಿ ಮತ್ಪರಂ ಬ್ರಹ್ಮ ನ ಸತ್ತ ನ್ನಾಽಸ ದುಚ್ಯತೇ ॥**
**(ಪರಮಾತ್ಮ)**

**ಭಾವಾರ್ಥ** : ಯಾವುದು ಜ್ಞೇಯವೋ ಅದನ್ನೇ ಹೇಳುತ್ತೇನೆ. ಅದನ್ನು ತಿಳಿಯುವುದರಿಂದ ಅಮೃತವನ್ನು ಪಡೆಯಬಹುದು. ಅದು ಅನಾದಿ, ಮತ್ಪರ, ಬ್ರಹ್ಮ. ಅದನ್ನು ಸತ್ತೆಂದು, ಅಸತ್ತೆಂದು ಕರೆಯಬಾರದು.

**ವಿವರ** : ಹೊಲಕ್ಕೆ ಬದುವು, ದಾರಿಗೆ ಗಮ್ಯವಿದ್ದಂತೆ ಜ್ಞಾನಕ್ಕೆ ಜ್ಞೇಯವೆಂದು ತಿಳಿಯಬೇಕು. ಹೊಲ ಬದುವಿನಿಂದ ಮುಗಿದಂತೆ, ದಾರಿ ಗಮ್ಯದಿಂದ ಮುಗಿದಂತೆ, ಜ್ಞಾನ ಜ್ಞೇಯದಿಂದ ಮುಗಿಯುತ್ತದೆ. ಹೊಲಕ್ಕೆ ಕಟ್ಟೆಯೆ ಬದುವಾದಂತೆ, ದಾರಿಗೆ ಊರು ಗಮ್ಯವಾದಂತೆ ಜ್ಞಾನಕ್ಕೆ ಪರಮಾತ್ಮ ಜ್ಞೇಯವಾಗುತ್ತದೆ. ಪರಮಾತ್ಮ ತಿಳಿಸುವ ಮಾರ್ಗವೇ ಜ್ಞಾನ. ಜ್ಞಾನದ ಮೂಲಕ ಕೊನೆಗೆ ತಿಳಿಯುವುದೇ ಪರಮಾತ್ಮ. ಪರಮಾತ್ಮನೇ ಅನಾದಿ ಎಂದೂ, ಪರಮ ಎಂದು, ಬ್ರಹ್ಮ ಎಂದು ಕರೆಯುತ್ತಾರೆ. ಆದಿ ಇಲ್ಲದವನು ಆದ್ದರಿಂದ ಅನಾದಿ ಎಂದು, ಎಲ್ಲದಕ್ಕಿಂತಲೂ ಮೀರಿರುವುದು ಪ್ರತ್ಯೇಕವಾದುದು ಆದುದರಿಂದ ಪರಮ ಎಂದು, ಎಲ್ಲದಕ್ಕಿಂತಲೂ ದೊಡ್ಡದು ಮೊದಲನೆಯದು ಆದ್ದರಿಂದ ಬ್ರಹ್ಮ ಎಂದು ಕರೆಯುತ್ತಾರೆ. ಜ್ಞಾನ ಗಮ್ಯವಾದ ಪರಮಾತ್ಮನನ್ನು ಸತ್ತೆಂದಾಗಲಿ, ಅಸತ್ತೆಂದಾಗಲಿ ಕರೆಯಬಾರದು. ಏಕೆಂದರೆ ಆತನು ಸತ್ತು ಅಲ್ಲ, ಅಸತ್ತು ಅಲ್ಲ. ಇಲ್ಲೊಂದು ಪ್ರಶ್ನೆ ಕೆಲವರಿಗೆ ಬರಬಹುದು. ಅದೇನೆಂದರೆ ಅಸಲು ಸತ್ತು ಯಾರು? ಅಸತ್ತು ಯಾರು? ಸತ್ತು, ಅಸತ್ತುಗಳ್ಯಾರೋ ತಿಳಿದುಕೊಂಡರೆ ಎರಡೂ ಅಲ್ಲದವನನ್ನು ಸುಲಭವಾಗಿ ತಿಳಿಯಬಹುದು? ಎಂದು ಕೇಳಬಹುದು. ಆ ವಿಷಯವನ್ನು ತಿಳಿದುಕೊಳ್ಳೋಣ.

ಸತ್ತು, ಅಸತ್ತು ಎನ್ನುವವು ಎರಡು ನಮ್ಮ ದೇಹದಲ್ಲಿಯೇ ಇವೆ. ಸತ್ತು ದೇಹವೆಲ್ಲವೂ ಇದೆ. ಅಸತ್ತು ದೇಹದಲ್ಲಿ ಒಂದುಕಡೆ ಸ್ಥಿರವಾಗಿದೆ. ವಿವರವಾಗಿ ಹೇಳಿಕೊಳ್ಳಬೇಕೆಂದರೆ **ಸತ್ತು ಎಂದರೆ ಆತ್ಮ, ಅಸತ್ತು ಎಂದರೆ ಜೀವಾತ್ಮ ಎಂದು** ತಿಳಿದುಕೊಳ್ಳಬೇಕು. ಮತ್ತೆ ಕೆಲವರು ಅಸತ್ತಾದ ಜೀವಾತ್ಮವನ್ನು ಚಿತ್ತು ಎಂದೂ ಕರೆಯುತ್ತಾರೆ. ಸತ್ತನ್ನು ಸತ್ ಎಂದು ಚಿತ್ತನ್ನು ಚಿತ್ ಎಂದೂ ಕರೆಯುತ್ತಾರೆ. ಇದನ್ನೇ ಸತ್‌ಚಿತ್ ಎಂದು ಸೇರಿಸಿ ಕರೆಯುತ್ತಾರೆ. ಬ್ರಹ್ಮಯೋಗ ಮಾಡುವವನು ಮನಸ್ಸಿನ ಮೂಲಕ ಆತ್ಮ ಅನುಭವ ಪಡೆಯುತ್ತಿದ್ದಾನೆ. ಅಂದರೆ ಸತ್‌ಚಿತ್ ಕೂಡಿರುವ ಅನುಭವವನ್ನು ಆನಂದವೆಂದು ಹೇಳುತ್ತಿದ್ದಾರೆ. ಅದನ್ನೇ

ಆತ್ಮಾನಂದವೆಂದು, ಸಚ್ಚಿದಾನಂದವೆಂದು ಕರೆಯುತ್ತಾರೆ. ಸಚ್ಚಿದಾನಂದವೆಂಬ ಮಾತಿಗೆ ಸತ್ತು ಚಿತ್ತು ಬೆರೆತಿರುವ ಆನಂದವೆಂದು ಅರ್ಥಮಾಡಿಕೊಳ್ಳಬೇಕು. ಬ್ರಹ್ಮಯೋಗಿಯನ್ನು ಆತ್ಮಾನಂದ ಎಂದೂ ಸಚ್ಚಿದಾನಂದ ಎಂದೂ ಹಿರಿಯರು ಕರೆಯುವುದರಲ್ಲಿ ಅರ್ಥ ಇದೆ.

ಅಷ್ಟೇ ಅಲ್ಲದೆ ತಿಳಿದವರು, ತಿಳಿಯದವರು ಸತ್ತಾದ ಆತ್ಮವನ್ನು ಸಚ್ಚು ಎಂದು ಕರೆಯಲಾಗುತ್ತದೆ. ಆತ್ಮ ಶರೀರವೆಲ್ಲಾ ವ್ಯಾಪಿಸಿದೆ ಎಂದು, ಆತ್ಮವೇ ಶರೀರಭಾಗದಲ್ಲಿ ಶಕ್ತಿಯಾಗಿ ಕದಲಿಸುತ್ತಿದೆಯೆಂದು ತಿಳಿದುಕೊಂಡಿದ್ದೇವೆ. ಶರೀರವೆಲ್ಲಾ ವ್ಯಾಪಿಸಿದ ಆತ್ಮಶಕ್ತಿ ಎಲ್ಲಿಯೋ ಒಂದು ಕಡೆ, ಯಾರಿಗೋ ಒಬ್ಬರಿಗೆ, ಶರೀರದಲ್ಲಿ ಕಾಲಿನಲ್ಲಿಯೋ, ಕೈಯಲ್ಲಿಯೋ ಇಲ್ಲದಂತೆ ಹೋಗುತ್ತದೆ. ಉದಾಹರಣೆಗೆ ಒಂದು ಕೈಯಲ್ಲಿ ಆತ್ಮ ವ್ಯಾಪಿಸದಂತೆ ಭುಜದವರೆಗೆ ವ್ಯಾಪಿಸಿ ನಿಂತುಹೋಗಿದೆಂದುಕೊಳ್ಳೋಣ. ಆಗ ಅವನ ಕೈ ಕದಲುವುದಿಲ್ಲ. ಮೆದಲುವುದಿಲ್ಲ. ಆ ಕೈಯಲ್ಲಿ ಯಾವ ಚೈತನ್ಯವಿಲ್ಲ. ಸತ್ತು ಭುಜದವರೆಗೆ ಇರುವುದರಿಂದ ಕೈ ಸಚ್ಚು ಬಂದಿದೆಂದು ಪೂರ್ವದಲ್ಲಿ ಎನ್ನುತ್ತಿದ್ದರು. ಕಾಲಕ್ರಮೇಪಿ ಆ ಪದ ಬದಲಾಗಿ ಕೈ ಸಚ್ಚು ಬಂದಿದೆ ಎನ್ನುತ್ತಿದ್ದಾರೆ. ಸತ್ತು ಸಚ್ಚಾಗಿ ಎಲ್ಲರಿಂದ ಕರೆಯಲ್ಪಡುತ್ತಿದೆ. ಹಾಗೆಯೇ ಮನುಷ್ಯ ಶರೀರದಲ್ಲಿನ ಆತ್ಮ ಪೂರ್ತಿಯಾಗಿ ಹೋಗಿ, ಯಾವ ಸ್ವಲ್ಪವೂ ಚೈತನ್ಯವಿಲ್ಲದೆ ಹೋದಾಗ, ಪೂರ್ವದಲ್ಲಿ ಮನುಷ್ಯ ಸತ್ತು ಹೋಗಿದ್ದಾನೆ ಎನ್ನುತ್ತಿದ್ದರು. ಹಾಗೆಯೇ ಹಸು ಶರೀರದಲ್ಲಿನ ಸತ್ತು ಪೂರ್ತಿ ಹೋದಾಗ ಹಸು ಸತ್ತೋಗಿದೆ ಎನ್ನುತ್ತಿದ್ದರು. ಪ್ರಸ್ತುತ ಕಾಲದಲ್ಲಿ ಹಸು ಸತ್ತು ಹೋಗಿದೆ ಎನ್ನುತ್ತಿದ್ದಾರೆ. ಹಾಗೆಯೇ ಯಾವುದು ಮರಣಿಸಿದರು ಅದರಲ್ಲಿನ ಆತ್ಮ ಶರೀರವನ್ನು ಬಿಟ್ಟು ಹೋಗುತ್ತಿದೆ. ಆದ ಕಾರಣ ಇಂತಹ ಪ್ರಾಣಿ ಸತ್ತು ಹೋಗಿದೆ ಎಂದೋ, ಇಂತಹ ಮನುಷ್ಯ ಸತ್ತು ಹೋಗಿದ್ದಾನೆಂದೋ ಹೇಳಲಾಗುತ್ತದೆ.

ಹೀಗೆ ಎಲ್ಲರಿಂದ ಸಚ್ಚು ಎಂದೂ ಕೆಲವರಿಂದ ಸತ್ತೆಂದು ಕರೆಯಲ್ಪಡುವ ಆತ್ಮ, ಹಾಗೆ ಕೆಲವರಿಂದ ಚಿತ್ತೆಂದು ಮತ್ತೆ ಕೆಲವರಿಂದ ಅಸತ್ತೆಂದು ಕರೆಯಲಾಗುವ ಜೀವಾತ್ಮ ಪರಮಾತ್ಮ ಅಲ್ಲ. ಆದ್ದರಿಂದ ಪರಮಾತ್ಮನನ್ನು ಸತ್ತೆಂದಾಗಲಿ, ಅಸತ್ತೆಂದಾಗಲಿ ಕರೆಯಬಾರದು. ಒಂದೇ ಶರೀರದಲ್ಲಿ ಸತ್ತು, ಅಸತ್ತು, ಎರಡೂ ಅಲ್ಲದವನು ಇದ್ದು ಬೇರೆಬೇರೆ ಕೆಲಸಗಳು ಹೊಂದಿರುವುದರಿಂದ ಮೂವರನ್ನು ಸೇರಿಸಿ ಕರೆಯಬಾರದು. ಸತ್ತು, ಅಸತ್ತುಗಳನ್ನು ಹುಟ್ಟಿಸಿದವನು ಪರಮಾತ್ಮ ಆದ್ದರಿಂದ ಜನ್ಮ ಇಲ್ಲದವನು ಪರಮಾತ್ಮ, ಜನ್ಮಗಳಿರುವವರು ಆತ್ಮ, ಜೀವಾತ್ಮಗಳು. ಆದಿ ಇಲ್ಲದ ಪರಮಾತ್ಮ ಹುಟ್ಟಿಸಿದ ಜೀವಾತ್ಮಗಳಾದ ನಾವು ಯಾವಾಗ ಹುಟ್ಟಿದ್ದೇವೋ ತಿಳಿಯದು. ಆದುದರಿಂದ ಜನ್ಮಗಳು ಹೊಂದಿರುವ ಅನಾದಿಗಳು ನಾವು.

ಜನ್ಮಗಳಿಲ್ಲದ ಪರಮಾತ್ಮ ಅನಾದಿಯಾಗಿದ್ದು, ಜನ್ಮಗಳಿರುವ ಅನಾದಿಗಳು ಜೀವಾತ್ಮಗಳೆಂದು ತಿಳಿಯಬೇಕು. ಈಗ ತಿಳಿದುಕೊಳ್ಳುವುದು ಏನು? ಪ್ರತಿದಿನ ನಾವು ಅನಾದಿಗಳೆನ್ನುವ ಮಾತು ಕೇಳುತ್ತಿದ್ದೇವೆ. ಎಲ್ಲಿ ಯಾರು ಎನ್ನುತ್ತಿದ್ದಾರೆಂದು ಆಲೋಚಿಸಬೇಕಾದ ಅವಶ್ಯಕತೆ ಇಲ್ಲ. **'ಅನಾದಿ ಜನ್ಮ ದಾನ ಮಾಡಿ'** ಎಂದೋ ಅಥವಾ **'ಅನಾದಿ ಜನ್ಮ ಅನ್ನ ನೀಡಿರೆಂದೊ'** ಅಲ್ಲಲ್ಲಿ ಬಿಕ್ಷುಕರು ಹೇಳುವುದು ಕೇಳಿರುತ್ತೇವೆ. ಪೂರ್ವದಲ್ಲಿ ತ್ರಿಜಟ ಎಂಬ ರಾಜ ತನ್ನ ಕಳೆದ ಜೀವನವನ್ನು ಕುರಿತು ಆಲೋಚಿಸಿ ಪಶು, ಪಕ್ಷಿ, ಮೃಗಾದಿಗಳಂತೆ ಮಾನವನ ಜೀವನವೂ ಸಹ ಕಳೆಯುತ್ತಿದೆ ಎಂದು, ಇದರಲ್ಲಿ ಪ್ರತ್ಯೇಕತೆ ಏನು ಇಲ್ಲವೆಂದು, ಪ್ರತ್ಯೇಕತೆ ಬೇಕೆಂದರೆ ಅವುಗಳಿಗಿಂತ ಉತ್ತಮವಾಗಿರುವ ಕೆಲಸ ಪರಮಾತ್ಮ ಜ್ಞಾನ ಸಂಪಾದಿಸುವುದೇ ಎಂದು ತಿಳಿದು, ಜ್ಞಾನಾರ್ಥಿಯಾಗಿ ಚಿತ್ರವರ್ಣ ಎಂಬ ಮಹರ್ಷಿ ಹತ್ತಿರಕ್ಕೆ ಹೋಗಿ ಆತನ ದರ್ಶನಾರ್ಥಕ್ಕೆ ಮಹರ್ಷಿ ಗೃಹದ ಹತ್ತಿರ ನಿಂತಿರುತ್ತಾನೆ. ಬಹಳ ಸಮಯ ಕಾದು ನೋಡಿದರು ಬಾಗಿಲು ತೆರೆಯಲಿಲ್ಲ. ಗುರುಗಳಾದ ಮಹರ್ಷಿ ಹೊರಗೆ ಬರಲಿಲ್ಲ. ಆಗ ರಾಜ ನಾನು "ತ್ರಿಜಟ ರಾಜನು, ಜ್ಞಾನಕ್ಕೋಸ್ಕರ ಬಂದಿದ್ದೇನೆ ಬಾಗಿಲು ತೆರೆಯಿರೆಂದು" ಮಹರ್ಷಿಯನ್ನು ಕರೆಯಲಿಲ್ಲ. ರಾಜನು ಕರೆಯದಿದ್ದರೆ ಒಳಗಿರುವವರಿಗೆ ತಿಳಿಯದು. ಆದುದರಿಂದ ರಾಜನು ತಪ್ಪದೆ ಕರೆಯಬೇಕಾಗಿಬಂದಿದೆ. ಆಗ ಏನೆಂದು ಕರೆದಿದ್ದಾನೆಂದರೆ! 'ಅಯ್ಯಾ ಅನಾದಿ ಜನ್ಮ ಧರ್ಮವನ್ನು ತಿಳಿಸಿ' ಎಂದು ಒಂದುಬಾರಿ 'ಅನಾದಿಯವನು ಬಂದಿದ್ದಾನೆ ಧರ್ಮ ಮಾಡಿ' ಎಂದು ಮತ್ತೊಂದು ಬಾರಿ ಕರೆದನು. ಆ ಮಾತುಗಳನ್ನು ಒಳಗಿರುವ ಚಿತ್ರವರ್ಣ ಮಹರ್ಷಿ ಕೇಳಿ ಪಕ್ಕದಲ್ಲಿರುವ ಶಿಷ್ಯನ ಹತ್ತಿರ ಬಂದಿರುವವನಿಗೆ ದಾನ ಬೇಕೋ ಧರ್ಮ ಬೇಕೋ ಕೇಳಿ ಬಾ ಎಂದು ಹೇಳಿದನು. ಆ ಶಿಷ್ಯನು ಹೊರಗೆ ಬಂದು ತ್ರಿಜಟ ರಾಜನನ್ನು ನೋಡಿ ನಿನಗೆ ಧರ್ಮ ಬೇಕಾ? ದಾನ ಬೇಕಾ? ಎಂದು ಕೇಳಿದನು. ಅದಕ್ಕೆ ರಾಜ 'ನಾನು ತ್ರಿಜಟ ಎನ್ನುವ ರಾಜನು. ನನಗೆ ವಸ್ತುವಾಹನ, ಧನಕನಕಾದಿಗಳು ಬಹಳ ಇವೆ. ಆದ್ದರಿಂದ ನೀವು ಕೊಡುವ ದಾನ ಬೇಡ. ನನ್ನ ಹತ್ತಿರ ಇಲ್ಲದಿರುವವು ತಿಳಿಯದಿರುವುವಾದ ಧರ್ಮಗಳು ನಿಮ್ಮ ಹತ್ತಿರ ಇವೆ. ಆ ಧರ್ಮಗಳು ನನಗೆ ಬೇಕು. ಅವುಗಳನ್ನು ದಾನ ಮಾಡಿ, ಆದಿ ತಿಳಿಯದ ಅನಾದಿ ಜನ್ಮ ನನ್ನದು, ಜನ್ಮವಿಲ್ಲದ ಅನಾದಿಯನ್ನು ಮಾಡಿರೆಂದು ಕೋರುತ್ತಿದ್ದೇನೆ' ಎಂದನು. ರಾಜನ ಮಾತುಗಳು ತಿಳಿದುಕೊಂಡ ಚಿತ್ರವರ್ಣ ಮಹರ್ಷಿ ಸಂತೋಷಿಸಿ ರಾಜನಿಗೆ ಧರ್ಮಗಳನ್ನು ತಿಳಿಸಿ ಜೀವಾತ್ಮವಾದ ರಾಜನು ಅಸತ್ತೆಂದು, ಚೈತನ್ಯವಾದ ಆತ್ಮ ಸತ್ತೆಂದು ಧರ್ಮಗಳಿಂದ ಸತ್ತು ಅಸತ್ತು ಅಲ್ಲದ ಪರಮಾತ್ಮನನ್ನು ತಿಳಿದುಕೋ ಎಂದು ಹೇಳಿದನು.

ಆ ದಿನ ಸರ್ವವು ಹೊಂದಿರುವ ದೊಡ್ಡರಾಜನು ಅನಾದಿ ಜನ್ಮ ನನ್ನದು ಧರ್ಮಮಾಡಿರೆಂದು ಕೇಳಿದಾಗ ಈ ದಿನ ಏನೂ ಇಲ್ಲದ ಬಿಕ್ಷುಕರು ಆ ಮಾತನ್ನು ಅನ್ನುತ್ತಿದ್ದಾರೆ. ಬಿಕ್ಷಕರ ಹತ್ತಿರವಾದರು ಗುರುತಿಗಾಗಿ ಉಳಿದ ಆ ಮಾತನ್ನು ಅವರೂ ಸಹ ಕೋರಿಕೆವೊಂದು ಮಾತು ಇನ್ನೊಂದಾಗಿ ಮಾತನಾಡುತ್ತಿದ್ದಾರೆ. ಅವರಿಗೆ ಬೇಕಾಗಿರುವುದು ದಾನ, ಅವರು ಕೇಳುವುದು ಧರ್ಮ. ಕೇಳುವವನ ಹತ್ತಿರವಾಗಲಿ ಕೊಡುವವನ ಹತ್ತಿರವಾಗಲಿ ಧರ್ಮ ಇಲ್ಲ. ಅಷ್ಟೇ ಅಲ್ಲದೇ ಅವರು ಅನಾದಿ ಜನ್ಮ ಅನ್ನುವುದರಲ್ಲಿ ದಿಕ್ಕಿಲ್ಲದ ಜನ್ಮವೆಂಬ ಭಾವದಿಂದ ಎನ್ನುತ್ತಿದ್ದಾರೆ ಹೊರತು, ಮೊದಲು(ಆದಿ) ತಿಳಿಯದ ಜನ್ಮ ನನ್ನದು ಎನ್ನುವ ಅರ್ಥದಿಂದ ಅಲ್ಲ. ಈಗಲಾದರು ನಾವು ಸರಿಯಾದ ಅರ್ಥ ತಿಳಿಸುವ ಜ್ಞಾನವನ್ನೇ ಆಶ್ರಯಿಸೋಣ. ಜ್ಞೇಯವನ್ನು ಕುರಿತು ಕೆಳಗೆ ತಿಳಿದುಕೊಳ್ಳೋಣ.

**(12)ಶ್ಲೋ॥ 14 : ಸರ್ವತಃ ಪಾಣಿ ಪಾದಂ ತ ತ್ಸರ್ವತೋಽಕ್ಷಿಶಿರೋಮುಖಮ್ ।**
**ಸರ್ವತ ಶ್ರುತಿಮ ಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥**

**(ಪರಮಾತ್ಮ)**

**ಭಾವಾರ್ಥ** : ಎಲ್ಲರಲ್ಲಿಯೂ ಕಾಲುಗಳು, ಕೈಗಳು, ಕಣ್ಣುಗಳು, ಮುಖ, ಕಿವಿಗಳು ಹೊಂದಿ ಪರಮಾತ್ಮ ಎಲ್ಲವನ್ನೂ ವ್ಯಾಪಿಸಿಕೊಂಡಿದೆ.

**ವಿವರ :** ಪರಮಾತ್ಮ ಎನ್ನುವುದು ಸ್ತ್ರೀಯು ಅಲ್ಲ ಪುರುಷನು ಅಲ್ಲ. ಒಂದು ವಿಧವಾಗಿ ಎಲ್ಲಾ ಆತನೇ ಆದ್ದರಿಂದ ಪುರುಷನಾಗಿ ಆತನು ಎಂದೂ, ಸ್ತ್ರೀಯಾಗಿ ಅದು ಎಂದು ಬರೆಯುವುದರಲ್ಲಿ ನಡೆಯುತ್ತಿರುತ್ತದೆ. ಒಂದುಕಡೆ ಅದು ಎಂದು, ಮತ್ತೊಂದು ಕಡೆ ಇದು ಎಂದು, ಆತನು ಈತನು ಎನ್ನುತ್ತಿದ್ದಾರೆಂದು ತಿಳಿದುಕೊಳ್ಳಬಾರದು. ಪರಮಾತ್ಮ ಏನು ಅಲ್ಲದವನೆಂದು ತಿಳಿಯುವುದಕ್ಕೋಸ್ಕರವೇ ಹಾಗೆ ಬರೆಯಬೇಕಾಗಿ ಬಂದಿದೆ. ಇಲ್ಲಿ ಈ ಶ್ಲೋಕದಲ್ಲಿಯೂ ಸಹ ಪ್ರಕೃತಿ ಪುರುಷರು ಎರಡೂ ಪರಮಾತ್ಮನೇ ಎಂದು. ಬೇರ್ಪಡಿಸಿ ನೋಡಿದರೆ ಬೇರೆ ಬೇರೆಯಾಗಿ ಇವೆಯೆಂದು ತಿಳಿಸುವುದೇ ಸಾರಾಂಶವೆಂದು ತಿಳಿಯಿರಿ. ಕಾಲು, ಕೈಗಳು, ಮುಖ, ಕಣ್ಣುಗಳು, ಕಿವಿಗಳು ಪ್ರಪಂಚದಲ್ಲಿನ ಜೀವರಾಶಿಗಳಿಗೆಲ್ಲಾ ಇರುವವೇ. ಸ್ಥೂಲವಾದ ಅವಯವಗಳು ಪ್ರಕೃತಿಯಲ್ಲಿ ತಯಾರಾಗಿರುವವೆಂದು, ಅವುಗಳಲ್ಲಿದ್ದು ಕದಲಿಸುವುದು ಆತ್ಮವೆಂದು ಮೊದಲೇ ತಿಳಿದುಕೊಂಡಿದ್ದೇವೆ. ಪ್ರಪಂಚದಲ್ಲಿನ ಸರ್ವ ಜೀವರಾಶಿಗಳ ಸ್ಥೂಲ ಅವಯವಗಳು, ಅದರಲ್ಲಿನ ಸೂಕ್ಷ್ಮಶಕ್ತಿ ಎರಡು ಪರಮಾತ್ಮನೇ ಆಗಿದ್ದಾನೆಂದು ಈ ಶ್ಲೋಕದಲ್ಲಿ ಹೇಳುವುದಾಗಿದೆ. ಸ್ಥೂಲ ಸೂಕ್ಷ್ಮಗಳಾದ ಪ್ರಕೃತಿ.

ಆತ್ಮಗಳೆರಡನ್ನೂ ಸೇರಿಸಿ ನೋಡಿದರೂ ಜಗತ್ತಿನಲ್ಲಿನ ಶರೀರಗಳೆಲ್ಲ ಪರಮಾತ್ಮನೇ ಎಂದು, ಎಲ್ಲಾ ಅವಯವಗಳು ಆತನೇ ಎಂದು ತಿಳಿಯುತ್ತಿದೆ. ಜ್ಞಾನದ ಮೂಲಕ ತಿಳಿಯುವ ಜ್ಞೇಯ ಜೀವರೂಪವಾದ ಪ್ರಪಂಚವಾಗಿ ವ್ಯಾಪಿಸಿ ಇದೆಯೆಂದು ತಿಳಿಯಬೇಕು. ಜ್ಞೇಯವಾದ ಪರಮಾತ್ಮ ಇನ್ನೂ ಹೇಗಿರುತ್ತದೆ ಎಂದರೆ!

**(12) ಶ್ಲೋ॥ 15 : ಸರ್ವೇನ್ದ್ರಿಯಗುಣಾಭಾಸಂ ಸರ್ವೇನ್ದ್ರಿ ಯವಿವರ್ಜಿತಮ್ ।**
**ಅಸ ಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ ॥**

**(ಪರಮಾತ್ಮ)**

**ಭಾವಾರ್ಥ** : ಪರಮಾತ್ಮ ಸರ್ವೇಂದ್ರಿಯಗಳ ಗುಣಗಳಲ್ಲಿ ಪ್ರಕಾಶಿಸುವುದಾಗಿದ್ದು ಸರ್ವೇಂದ್ರಿಯಗಳು ಇಲ್ಲದಾಗಿದೆ. ಎಲ್ಲವನ್ನೂ ಭರಿಸುವುದಾಗಿದ್ದು ಏನೂ ಇಲ್ಲದಿರುವುದೆಂದು, ಎಲ್ಲಾ ಗುಣಗಳನ್ನು ಅನುಭವಿಸುವುದಾಗಿ ಯಾವ ಗುಣ ಇಲ್ಲದಿರುವುದೆಂದು ಹೇಳಬಹುದು.

**ವಿವರ** : ಪರಮಾತ್ಮನನ್ನು ಯಾವಕಡೆಯೂ ತೀರ್ಮಾನಿಸಿ ಹೇಳಲಾರೆವೆಂದು ಮೊದಲೆ ಹೇಳಿದ್ದೇವೆ, ಅದು ವರ್ಣನಾತೀತವಾದುದು. ಆದ್ದರಿಂದ ಇಂತಹುದೆಂದು ಹೇಳುವುದಕ್ಕೆ ಕೈಲಾಗದೆ ಎರಡು ವಿಧಗಳು ಹೇಳಿದ್ದಾರೆ. ಸರ್ವೇಂದ್ರಿಯ ಭಾವಗಳಿಂದ ಇರುವುದಾಗಿದ್ದು ಯಾವ ಇಂದ್ರಿಯ ಇಲ್ಲದಿರುವುದು ಸರ್ವವನ್ನು ನಿಭಾಯಿಸುವುದಾಗಿದ್ದು ಏನು ಅಲ್ಲದಿರುವುದು ಮತ್ತು ಎಲ್ಲಾ ಗುಣಗಳು ಹೊಂದಿರುವುದಾಗಿ ಯಾವ ಗುಣ ಇಲ್ಲದಿರುವುದು ಪರಮಾತ್ಮ ಎಂದು ಹೇಳಿದ್ದಾರೆ. ಪರಮಾತ್ಮನನ್ನು ಏಕಸ್ತವಾಗಿ ನೋಡಿದ ಇಂದ್ರಿಯಗಳು, ಗುಣಗಳು ಇರುವುದಾಗಿದ್ದು ಪತಿ(ಭರ್ತ) ಯಾಗಿದ್ದಾನೆಂದು ಹೇಳಬಹುದು. ವಿಭಜಿಸಿ ನೋಡಿದರೆ ಏನೂ ಅಲ್ಲದಿರುವುದೆಂದು, ಏನೂ ಮಾಡದಿರುವುದೆಂದು ಹೇಳಬಹುದು. ಏಕವಾಗಿ ನೋಡಿದರು ಇರುವುದು ಒಂದೇ ಆಗುತ್ತದೆ. ವಿಭಜಿಸಿದರೆ ಪ್ರಕೃತಿ, ಪರಮಾತ್ಮ, ಆತ್ಮ, ಜೀವಾತ್ಮವೆಂದು ನಾಲ್ಕು ಇವೆ. ಏಕವಾಗಿ ನೋಡಿದರೆ ಎಲ್ಲಾ ಕೆಲಸಗಳಿಗೆ ಮೂಲಕರ್ತ ಪರಮಾತ್ಮನೆಂದು ಹೇಳಬಹುದು. ವಿಭಜಿಸಿ ನೋಡಿದರೆ ಪರಮಾತ್ಮ ಸಾಕ್ಷಿಭೂತನು, ಯಾವ ಕೆಲಸ ಮಾಡುವುದಿಲ್ಲ, ಮಾಡುವವು ಪ್ರಕೃತಿ ಆತ್ಮ ಎಂದು ಹೇಳಬಹುದು. ವಿಭಜಿಸದೇ ಪರಮಾತ್ಮನನ್ನು ಒಂದಾಗಿ ನೋಡಿದರೆ, ಕಾರ್ಯಕ್ಕೆ ಮೂಲ ಪರಮಾತ್ಮನೆಂದು ಹೇಳಬಹುದು. ವಿಭಜಿಸಿ ನೋಡಿದರೆ ಪ್ರಕೃತಿ ಮಾಡುವುದಾಗಿದ್ದು, ಮಾಡಿಸುವವನು ಆತ್ಮವಾಗಿದ್ದು, ಅನುಭವಿಸುವವನು ಜೀವಿಯೆಂದು ಹೇಳಬಹುದು. ಈ ವಿಧವಾಗಿ ಇರುವುದರಿಂದಲೇ ಎಲ್ಲದಕ್ಕೂ ನಾನೇ ಕಾರಣವೆಂದು ಒಂದುಕಡೆ ಹೇಳುವುದು. ಪ್ರಕೃತಿಯೇ

ಕಾರಣವೆಂದು ಮತ್ತೊಂದು ಕಡೆ ಹೇಳುವುದು ನಡೆದಿದೆ. ಆದ್ದರಿಂದ ಎಲ್ಲಿ ಪರಮಾತ್ಮನನ್ನು ವಿಭಜಿಸಿ ಅರ್ಥ ಮಾಡಿಕೊಳ್ಳಬೇಕೋ, ಎಲ್ಲಿ ವಿಭಜಿಸದೆ ಅರ್ಥ ಮಾಡಿಕೊಳ್ಳಬೇಕೋ ಚೆನ್ನಾಗಿ ತಿಳಿದಿರಬೇಕು.

**(12) ಶ್ಲೋ॥ 16 : ಬಹಿ ರನ್ತಶ್ಚ ಭೂತಾನಾ ಮಚರಂ ಚರ ಮೇವ ಚ ।**
**ಸೂಕ್ಷ್ಮತ್ವಾತ್ತ ದವಿಜ್ಞೇಯಂ ದೂರಸ್ಥಂ ಚಾನ್ತಿಕೇ ಚ ತತ್ ॥**
**(ಪರಮಾತ್ಮ)**

**ಭಾವಾರ್ಥ** : ಚರ ಅಚರ ಪ್ರಪಂಚವಾಗಿ ಜೀವರಾಶಿಗಳ ಒಳಗೂ ಹೊರಗೂ ಪರಮಾತ್ಮ ಇದೆ. ಅದು ಸೂಕ್ಷ್ಮವಾದುದ್ದರಿಂದ ತಿಳಿಯುವುದು ಅಲ್ಲ. ದೂರವಾಗಿ ಮತ್ತು ಸಮೀಪವಾಗಿದೆ ಎಂದು ತಿಳಿಯಿರಿ.

**ವಿವರ** : ಕಣ್ಣಿಗೆ ಕಾಣಿಸುವ ಪ್ರಪಂಚವೆಲ್ಲವನ್ನು ಪ್ರಕೃತಿ ಎನ್ನುತ್ತೇವೆ. ಚಲಿಸುವ ಪ್ರಕೃತಿ ಎಂದು, ಚಲಿಸದ ಪ್ರಕೃತಿ ಎಂದು ಎರಡು ವಿಧಗಳಾಗಿ ಪ್ರಕೃತಿ ಇದೆ. ಸಮಸ್ತ ಜಿವರಾಶಿಗಳ ಶರೀರಗಳು ಕದಲುವ ಪ್ರಕೃತಿ ಎಂದು (ಚರ ಪ್ರಕೃತಿಯೆಂದು) ಕರೆಯಲಾಗುತ್ತಿದೆ. ಜೀವರಾಶಿಗಳ ಶರೀರಗಳು ವಿನಃ ಇರುವ ಸಮಸ್ತವಾದ ಗಾಳಿ, ನೀರು, ಅಗ್ನಿ, ಭೂಮಿ, ಆಕಾಶ ಕದಲದ ಅಥವಾ ಬದಲಾಗದ ಪ್ರಕೃತಿ ಎಂದು (ಅಚರ ಪ್ರಕೃತಿಯೆಂದು) ಕರೆಯಲ್ಪಡುತ್ತಿದೆ. ಜೀವರಾಶಿಗಳ ಒಳಗೆ ಬದಲಾಗುತ್ತಾ ಕದಲುತ್ತಿರುವ ಚರ ಪ್ರಕೃತಿಯು, ಜೀವರಾಶಿಗಳ ಹೊರಗೆ ಬದಲಾಗದೆ ಕದಲದ ಅಚರ ಪ್ರಕೃತಿಯೂ ಎರಡು ಪರಮಾತ್ಮನೇ ಎಂದು ಹೇಳಲಾಗುತ್ತಿದೆ. ಏಕೆಂದರೆ ಅಣುಅಣುವುನಲ್ಲಿ ವ್ಯಾಪಿಸಿರುವುದು ಪರಮಾತ್ಮನೇ, ಆದ ಕಾರಣ ಚರಾಚರ ಪ್ರಪಂಚವೆಲ್ಲವೂ ಪರಮಾತ್ಮನೇ ಎಂದು ತಿಳಿಯಬೇಕು. ಪರಮಾತ್ಮ ಇಂದ್ರಿಯಗಳಿಗೆ ತಿಳಿಯದ ಸೂಕ್ಷ್ಮವಾದ್ದರಿಂದ ಅದು ದೃಷ್ಟಿಗೆ ತಿಳಿಯುವುದಲ್ಲ. ಜ್ಞಾನದಿಂದಲೂ ಸಹ ಸುಲಭವಾಗಿ ತಿಳಿಯುವುದಲ್ಲ. ಧರ್ಮಗಳು ತಿಳಿದವರಿಗೆ ಪರಮಾತ್ಮ ಬಹಳ ಹತ್ತಿರವಾಗಿದೆ. ಧರ್ಮಗಳು ತಿಳಿಯದವರಿಗೆ ಬಹಳ ದೂರವಾಗಿದೆ ಎಂದು ಹೇಳಬಹುದು. ಏಕೆಂದರೆ ಧರ್ಮಗಳು ತಿಳಿದವನು ಕೂಡಲೇ ಪರಮಾತ್ಮನನ್ನು ಸೇರುತ್ತಾನೆ. ಆದುದರಿಂದ ಅವನಿಗೆ ಬಹಳ ಹತ್ತಿರವಾಗಿ ಇದೆ ಎಂದು ಹೇಳಬಹುದು. ಹಾಗೆ ಧರ್ಮಗಳು ತಿಳಿಯದವನು ಪರಮಾತ್ಮನನ್ನು ಎಂದಿಗೂ ಸೇರವುದಿಲ್ಲ. ಆದ ಕಾರಣ ಅವನಿಗೆ ಬಹಳ ದೂರವಾಗಿ ಇದೆಯೆಂದು ಹೇಳಬಹುದು.

**(12) ಶ್ಲೋ॥ 17 : ಅವಿಭಕ್ತಂ ಚ ಭೂತೇಷು ವಿಭಕ್ತ ಮಿವ ಚ ಸ್ಥಿತಮ್ ।**
**ಭೂತಭರ್ತೃ ಚ ತದ್‌ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ॥**
**(ಪರಮಾತ್ಮ)**

**ಭಾವಾರ್ಥ** : ಪರಮಾತ್ಮ ವಿಭಜಿಸಲ್ಪಡದೆ ಒಂದಾಗಿದ್ದರೂ, ಜೀವರಾಶಿಗಳಲ್ಲಿ ವಿಭಜಿಸಲ್ಪಟ್ಟಿದೆ. ಸಮಸ್ತ ಜೀವಿಗಳನ್ನು ಭರಿಸುವುದು, ಸಮಸ್ತ ಜೀವಿಗಳನ್ನು ಲಯ ಮಾಡುವುದು, ಸಮಸ್ತ ಜೀವಿಗಳನ್ನು ಹುಟ್ಟಿಸುವುದಾಗಿ ಇದೆ.

**ವಿವರ** : ಈ ವಿಷಯವನ್ನು 15ನೇ ಶ್ಲೋಕದಲ್ಲಿಯೂ ಸಹ ಹೇಳಿಕೊಂಡಿದ್ದೇವೆ. ಪರಮಾತ್ಮ ಒಂದಾಗಿದೆ. ಇದಕ್ಕೆ ಮೀರಿದ ಶಕ್ತಿಯಾಗಲಿ, ಇದನ್ನು ಮೀರಿದ ಹೆಸರು ಹೊಂದಿರುವುದಾಗಲಿ ಇಲ್ಲ. ಸರ್ವಕ್ಕೂ ಮೂಲ ಕಾರಣವಾದ ಪರಮಾತ್ಮ ವಿಭಜಿಸಲಾಗದೆ, ಸರ್ವತ್ರ ವ್ಯಾಪಿಸಿ ಪರಮಾಣು ಸಹಿತ ತಾನಾಗಿದೆ. ಹೀಗೆ ಇತರ ಯಾವುದಕ್ಕೂ ಸ್ಥಾನ ಇಲ್ಲದ್ದಾಗಿ, ಎಲ್ಲವೂ ಅದೇ ತುಂಬಿರುವುದನ್ನು ಒಂದಾಗಿ ಹೇಳಿಕೊಳ್ಳಬಹುದು. ಒಂದು ವಿಧವಾಗಿ ಹೀಗೆ ಇದ್ದೂ ಪ್ರಪಂಚ ಕಾರ್ಯರೂಪವನ್ನು ಮಾಡುವುದಕ್ಕೆ ಪರಮಾತ್ಮ ಅನೇಕ ರೂಪಗಳಾಗಿ ವಿಭಜಿಸಲ್ಪಟ್ಟಿದೆ. ಪರಮಾತ್ಮನೇ ಅನೇಕ ಭಾಗಗಳಾಗಿದ್ದು, ಒಂದೊಂದು ಭಾಗ ಒಂದೊಂದು ಕಾರ್ಯವನ್ನು ಮಾಡುತ್ತಾ, ಪ್ರಪಂಚವನ್ನು ಕಾರ್ಯರೂಪವಾಗಿ ನಡೆಸುತ್ತಿದೆ. ಪ್ರಪಂಚವನ್ನು ಹುಟ್ಟಿಸುವುದಕ್ಕೂ, ನಿಭಾಯಿಸುವುದಕ್ಕೂ, ಲಯ ಮಾಡುವುದಕ್ಕೂ ಪರಮಾತ್ಮ ವಿಭಜಿಸಲ್ಪಟ್ಟಿದೆಯೆಂದು ಹೇಳಬಹುದು. ಪ್ರಪಂಚವನ್ನು ಹುಟ್ಟಿಸುವವನು, ಬೆಳೆಸುವವನು, ಲಯ ಮಾಡುವವನು, ಒಬ್ಬ ಪರಮಾತ್ಮನೇ ಆದರೂ ವಿಭಜಿಸಿ ಹೇಳಿಕೊಳ್ಳಬೇಕಾಗಿದೆ. ಪರಮಾತ್ಮ ವಿಭಜನೆ ರೂಪವಾಗಿಯು, ವಿಭಜನೆ ಇಲ್ಲದವನಾಗಿಯು ಇದ್ದೂ ಯಾವುದು ನಿರ್ಣಯಿಸಿ ಹೇಳದವನಾಗಿದ್ದಾನೆಂದು ಹೇಳಬಹುದು.

**(12) ಶ್ಲೋ॥ 18 : ಜ್ಯೋತಿಷಾ ಮಪಿ ತಜ್ಜ್ಯೋತಿ ಸ್ತಮಸಃ ಪರ ಮುಚ್ಯತೇ ।**
**ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ಧಿಷ್ಠಿತಮ್ ॥**
**(ಪರಮಾತ್ಮ)**

**ಭಾವಾರ್ಥ**: ಪರಮಾತ್ಮ ಪ್ರಕಾಶಿಸುವವುಗಳಿಗೆ ಪ್ರಕಾಶವಾಗಿದೆ. ಅಜ್ಞಾನಕ್ಕಿಂತ ಬೇರೆಯಾದುದು. ಜ್ಞಾನವು ಜ್ಞೇಯವಾದುದು. ಸರ್ವಜೀವರಾಶಿಗಳ ಹೃದಯದಲ್ಲಿ ಜ್ಞಾನ ಗಮ್ಯವಾಗಿದೆ.

**ವಿವರ** : ಪರಮಾತ್ಮ ಪ್ರಕಾಶಿಸುವ ಸೂರ್ಯಚಂದ್ರಾದಿಗಳಲ್ಲಿಯೇ ಅಲ್ಲದೆ, ಎಲ್ಲಾ ಜ್ಯೋತಿಗಳಲ್ಲಿ

ಪ್ರಕಾಶಕೊಡುವ ಮೂಲ ಪದಾರ್ಥವಾಗಿದೆ. ತಿಳಿಯದಿರುವುದಕ್ಕಿಂತ ಪ್ರತ್ಯೇಕವಾಗಿದೆ, ಎಂದರೆ ಎಲ್ಲದಕ್ಕೂ ಜ್ಞಾನ ವಿಜ್ಞಾನವಾಗಿದೆ. ಜ್ಞಾನ ಮತ್ತು ಜ್ಞೇಯ ಎರಡಾಗಿ ಇದೆ. ಅಷ್ಟೇ ಅಲ್ಲದೆ ಪರಮಾತ್ಮ ಜ್ಞಾನ ಗಮ್ಯವಾಗಿ ಸರ್ವಜೀವಿಗಳ ಶರೀರದಲ್ಲಿನ ಹೃದಯದಲ್ಲಿ (ಬ್ರಹ್ಮನಾಡಿಯಲ್ಲಿ) ಅಧಿಷ್ಠಿಸಿದೆ. ಹೃದಯವೆಂದರೆ ಗುಂಡಿಗೆ ಅಲ್ಲ. ಮೆದುಳಿನಿಂದ ಮೊದಲಗೊಂಡು ಕೊನೆಯವರೆಗೂ ಇರುವ ಸುಷುಮ್ನನಾಡಿ ಅಥವಾ ಬ್ರಹ್ಮನಾಡಿ ಎಂದು ಗ್ರಹಿಸಬೇಕು.

**(12) ಶ್ಲೋ॥ 19 : ಇತಿಕ್ಷೇತ್ರಂ ತಥಾಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ ।**
**ಮದ್ಭಕ್ತ ಏತ ದ್ವಿಜ್ಞಾಯ ಮದ್ಭಾವಾ ಯೋಪಪದ್ಯತೇ ॥**
**(ಪ್ರಕೃತಿ, ಪರಮಾತ್ಮ)**

**ಭಾವಾರ್ಥ** : ಈ ವಿಧವಾಗಿ ಕ್ಷೇತ್ರವನ್ನು, ಹಾಗೆ ಜ್ಞಾನವನ್ನು, ಜ್ಞೇಯವನ್ನು ಸಂಗ್ರಹವಾಗಿ ಹೇಳಲಾಗಿದೆ. ನನ್ನ ಭಕ್ತರು ಇದನ್ನು ಚೆನ್ನಾಗಿ ತಿಳಿದವರಾಗಿ ನನ್ನನ್ನು ಹೊಂದುವುದಕ್ಕೆ ಅರ್ಹರಾಗುತ್ತಾರೆ.

**(12) ಶ್ಲೋ॥ 20 : ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ ।**
**ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿ ಸಂಭವಾನ್ ॥**
**(ಪ್ರಕೃತಿ, ಪರಮಾತ್ಮ)**

**ಭಾವಾರ್ಥ** : ಪ್ರಕೃತಿ, ಪುರುಷರು ಎರಡು ಆದಿ ಇಲ್ಲದಿರುವವೆಂದು ತಿಳಿಯಿರಿ. ಗುಣ ವಿಕಾರಗಳೆಲ್ಲಾ ಪ್ರಕೃತಿಯಿಂದ ಹುಟ್ಟಿರುವವೆಂದು ತಿಳಿಯಬೇಕು.

**ವಿವರ** : ಆದಿ ಇಲ್ಲದವನು ಪರಮಾತ್ಮನೇ ಆದರೂ, ಪರಮಾತ್ಮ ಪ್ರಕೃತಿಯನ್ನು ಯಾವಾಗ ತಯಾರು ಮಾಡಿರುವುದು ನಮಗೆ ತಿಳಿಯದು. ಆದ ಕಾರಣ ಪ್ರಕೃತಿಯೂ ಅನಾದಿಯೇ ಎಂದು ಹೇಳಬಹುದು. ಹುಟ್ಟುವಿಕೆಯಿಲ್ಲದ ಅನಾದಿ ಪರಮಾತ್ಮವಾಗಿದ್ದು, ಹುಟ್ಟಿ ಅನಾದಿಯಾಗಿರುವುದು ಪ್ರಕೃತಿ. ಪ್ರಕೃತಿಯಲ್ಲಿರುವವರೇ ನಾವೆಲ್ಲರೂ. ನಾವೆಲ್ಲರೂ ಯಾವಾಗ ಹುಟ್ಟಿದ್ದೇವೊ! ಯಾವಾಗಿನಿಂದ ಸತ್ತು ಹುಟ್ಟುತ್ತಿದ್ದೇವೋ ತಿಳಿಯದು. ಆದ್ದರಿಂದ ನಾವೂ ಸಹ ಅನಾದಿಗಳೇ. ಇಂತಹ ನಮ್ಮಲ್ಲಿರುವ ಗುಣಗಳು ಪ್ರಕೃತಿಯಿಂದ ಹುಟ್ಟಿರುವವೇ, ಪ್ರಕೃತಿಯಿಂದ ಹುಟ್ಟಿರುವ ಗುಣಗಳಿಗೂ ಸಹ ನಾಂದಿ ನಮಗೆ ತಿಳಿದಿಲ್ಲ. ನಮ್ಮೊಂದರ ಮತ್ತು ನಮ್ಮೊಂದರ ಗುಣಗಳ ಮೊದಲು (ಆದಿ) ನಮಗೆ ತಿಳಿಯದಿದ್ದರೂ ಪರವಾಗಿಲ್ಲ.

ಆದರೆ ನಾವು ನಮ್ಮ ಗುಣಗಳ ಅಂತ್ಯನೋಡಬೇಕು, ನಂತರ ನಾವು ಅಂತ್ಯವಾಗಿಹೋಗಿ ಅಂತ್ಯವಿಲ್ಲದ ಪರಮಾತ್ಮನಾಗಿ ಬದಲಾಗಬೇಕು.

**(12) ಶ್ಲೋ॥ 21 : ಕಾರ್ಯ ಕಾರಣಕರ್ತೃತ್ವೇ ಹೇತುಃ ಪ್ರಕೃತಿ ರುಚ್ಯತೇ ।**
**ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತು ರುಚ್ಯತೇ ॥**
**(ಪ್ರಕೃತಿ, ಜೀವಾತ್ಮ)**

**ಭಾವಾರ್ಥ** : ಕಾರ್ಯ ಕಾರಣಗಳನ್ನು ಉಂಟುಮಾಡುವುದರಲ್ಲಿ ಪ್ರಕೃತಿ ಹೇತುವಾಗಿದೆ. ಪುರುಷನು ಸುಖದುಃಖಗಳನ್ನು ಅನುಭವಿಸುವುದಕ್ಕೆ ಕಾರಣಭೂತನಾಗಿದ್ದಾನೆಂದು ಹೇಳಬಹುದು.

**ವಿವರ** : ಪುರುಷನೆಂದರೆ ಪರಮಾತ್ಮನೆಂದು ಹೇಳಿಕೊಂಡಿದ್ದೇವೆ. ಪರಮಾತ್ಮ ಸರ್ವವೂ ತಾನಾಗಿದೆ ಎಂದೂ ಸಹ ಹೇಳಿಕೊಂಡಿದ್ದೇವೆ. ಅಂತಹ ಪರಮಾತ್ಮ ಕಾರ್ಯರೂಪವಾದ ಪ್ರಪಂಚದಿಂದ ವಿಭಜಿಸಲ್ಪಟ್ಟಿದ್ದಾನೆಂದು ಸಹ ತಿಳಿದುಕೊಂಡಿದ್ದೇವೆ. ಆ ವಿಭಜನೆ ಈ ಶ್ಲೋಕದಲ್ಲಿ ಕಾಣಿಸುತ್ತಿದೆ. ಕಾರ್ಯಗಳು ನಡೆಯುವುದಕ್ಕೆ ಪ್ರಕೃತಿಯಾಗಿ ವಿಭಜಿಸಲ್ಪಟ್ಟು, ಪ್ರಕೃತಿಯಿಂದ ಶರೀರದವರೆಗೂ ವಿಭಜನೆ ನಡೆದಿದೆ. ಕಾರ್ಯಗಳಿಗೆ ಪ್ರಕೃತಿಯಿಂದ ತಯಾರಾದ ಶರೀರ ಕಾರಣವಾಗಿದ್ದು, ಆ ಕಾರ್ಯಗಳಲ್ಲಿರುವ ಸುಖದುಃಖಗಳನ್ನು ಅನುಭವಿಸುವುದಕ್ಕೆ ಪರಮಾತ್ಮನಿಂದ ಜೀವಾತ್ಮ ವಿಭಜಿಸಲ್ಪಟ್ಟಿದೆ. ಪರಮಾತ್ಮ ಭಾಗವಾದ ಜೀವಾತ್ಮ ಶರೀರದಲ್ಲಿ ನಿವಾಸಿಸುತ್ತಾ, ಕೆಲಸಗಳಲ್ಲಿರುವ ಕಷ್ಟಸುಖಗಳನ್ನು ಅನುಭವಿಸುತ್ತಿದ್ದಾನೆ. ಈ ವಿಧವಾಗಿ ಕಾರ್ಯರೂಪ ಜಗತ್ತಿನಲ್ಲಿ ಪ್ರಕೃತಿ ಶರೀರವಾಗಿಯೂ, ಪರಮಾತ್ಮ ಜೀವಾತ್ಮನಾಗಿಯು ಪಾತ್ರ ವಹಿಸುತ್ತಿದ್ದಂತೆ ತಿಳಿಯುತ್ತಿದೆ.

**(12) ಶ್ಲೋ॥ 22 : ಪುರುಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್‌ಗುಣಾನ್ ।**
**ಕಾರಣಂ ಗುಣ ಸಂಗೋಽಸ್ಯ ಸದಸದ್ಯೋನಿಜನ್ಮಸು ॥**
**(ಪ್ರಕೃತಿ, ಜೀವಾತ್ಮ)**

**ಭಾವಾರ್ಥ** : ಪುರುಷನು ಪ್ರಕೃತಿಯಲ್ಲಿರುವವನಾಗಿ ಪ್ರಕೃತಿ ಸಂಭವಗಳಾದ ಗುಣಗಳನ್ನು ಅನುಭವಿಸುತ್ತಿದ್ದಾನೆ. ಗುಣಗಳೊಂದಿಗೆ ಸಂಬಂಧಪಟ್ಟಿರುವ ಕಾರಣದಿಂದ ಒಳ್ಳೆಯ ಕೆಟ್ಟ ಯೋನಿಗಳಲ್ಲಿ ಜನ್ಮಿಸುತ್ತಿದ್ದಾನೆ.

**ವಿವರ** : ಇಲ್ಲಿ ಪುರುಷನೆಂದರೆ ಜೀವಾತ್ಮನೆಂದು ತಿಳಿಯಬೇಕು. ಜೀವಾತ್ಮ ಶರೀರದಲ್ಲಿದ್ದಾನೆ. ಆದ ಕಾರಣ ಪ್ರಕೃತಿಯಲ್ಲಿದ್ದಾನೆಂದು ಹೇಳುತ್ತಿದ್ದಾರೆ. ಜೀವಾತ್ಮ ಶರೀರದಲ್ಲಿದ್ದು ಶರೀರದಲ್ಲಿ ಪ್ರಕೃತಿ ಜನಿತ ಗುಣಗಳಿಂದ ಮನಸ್ಸಿನ ಮೂಲಕ ಸಂಬಂಧಪಟ್ಟಿದ್ದು ಅವುಗಳ ಅನುಭವಗಳನ್ನು ಪಡೆಯುತ್ತಾ, ಪಾಪಪುಣ್ಯಗಳನ್ನು ಅಂಟಿಸಿಕೊಳ್ಳುತ್ತಿದ್ದಾನೆ. ಆದುದರಿಂದ ಪಾಪಪುಣ್ಯಗಳ ಫಲಿತಗಳನ್ನನುಸರಿಸಿ ಒಳ್ಳೆಯಕೆಟ್ಟ ಜನ್ಮಗಳು ಉಂಟಾಗುತ್ತಿವೆ ಎಂದು ಹೇಳಬಹುದು.

**(12) ಶ್ಲೋ॥ 23 : ಉಪದ್ರಷ್ಟಾಽನುಮನ್ತಾ ಚ ಭರ್ತಾ ಭೋಕ್ತಾ ಮಹೇಶ್ವರಃ ।**
**ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ ॥**
**(ಜೀವಾತ್ಮ, ಆತ್ಮ, ಪರಮಾತ್ಮ)**

**ಭಾವಾರ್ಥ** : ದೇಹವನ್ನು ಧರಿಸಿದ ಪುರುಷನು ದೇಹದಲ್ಲಿ ಸಾಕ್ಷಿಭೂತನಾಗಿಯು ಅಂದರೆ ಆತ್ಮವಾಗಿ, ಸಮ್ಮತಿಸುವವನಾದ ಜೀವಾತ್ಮನಾಗಿ, ಭರಿಸುವ ಭರ್ತನಾ(ಪತಿಯಾ)ಗಿರುವ ಪರಮಾತ್ಮನಾಗಿಯೂ, ಅನುಭವಿಸುವ ಜೀವಾತ್ಮನಾಗಿ, ಮಹೇಶ್ವರನಾಗಿ, ಆತ್ಮನಾಗಿ, ಪರಮಾತ್ಮ ನಾಗಿಯೂ ಹೇಳಲ್ಪಡುತ್ತಿದ್ದಾನೆ.

**ವಿವರ** : ಶರೀರದಲ್ಲಿ ಶರೀರಕ್ಕಿಂತ ಬೇರೆಯಾದ ಪರಮಾತ್ಮ ಶರೀರದಲ್ಲಿ ಮೂರು ವಿಧಗಳಾಗಿದ್ದು ಅನೇಕ ವಿಧಗಳಾಗಿ ಕರೆಯಲ್ಪಡುತ್ತಿದ್ದಾನೆ. ಸಾಕ್ಷಿ, ಸಮ್ಮತಿಸುವವನು, ಭರ್ತ (ಪತಿ), ಭೋಕ್ತ, ಮಹೇಶ್ವರನು, ಪರಮಾತ್ಮನೆಂದು ಅನೇಕ ವಿಧಗಳು ಕರೆಯಲ್ಪಡುತ್ತಿದ್ದಾನೆ. ಪರಮಾತ್ಮ ಶರೀರದಲ್ಲಿ ಜೀವಾತ್ಮ, ಆತ್ಮ, ಪರಮಾತ್ಮನಾಗಿದ್ದು ಬೇರೆ ಬೇರೆ ಪಾತ್ರಗಳು ವಹಿಸುತ್ತಾ ಅನೇಕ ವಿಧಗಳಿಂದ ಕರೆಯಲ್ಪಡುತ್ತಿದ್ದಾನೆ. ಇರುವುದು ಒಬ್ಬನೇ ಆದರೂ ವಿಭಜನೆಯ ಮೂಲಕ ಮೂರಾಗಿದ್ದು ಕಾರ್ಯರೂಪವಾದ ತಂತು ನಡೆಸುತ್ತಿದ್ದಾನೆ.

**(12) ಶ್ಲೋ॥ 24 : ಯ ಏವಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಃ ಸಹ ।**
**ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ ॥**
**(ಪ್ರಕೃತಿ, ಪುರುಷನು)**

**ಭಾವಾರ್ಥ** : ಯಾರಾದರೆ ಈ ಪ್ರಕಾರವಾಗಿ ಪುರುಷರನ್ನು, ಪ್ರಕೃತಿಯನ್ನು, ಗುಣಗಳನ್ನು ತಿಳಿದುಕೊಂಡಿದ್ದಾನೋ, ಅವನು ಯಾವಾಗಲೂ ಎಲ್ಲಾ ವಿಷಯಗಳಲ್ಲಿ ಪರಸ್ಪರ ಸಂಬಂಧ ಹೊಂದಿದ್ದರೂ ಪುನಃ ಹುಟ್ಟುವುದಿಲ್ಲ.

**ವಿವರ** : ಪ್ರಕೃತಿಯಿಂದ ಶರೀರ ತಯಾರಾಗಿದೆಯೆಂದು, ಶರೀರದಲ್ಲಿನ ಗುಣಗಳು ಸಹ ತಯಾರಾಗಿವೆ ಎಂದು ತಿಳಿದು, ಗುಣ ವಿಶೇಷಗಳನ್ನು ಪೂರ್ತಿಯಾಗಿ ತಿಳಿದು, ಸರ್ವಕಾರ್ಯಗಳಿಗೆ ಪ್ರಕೃತಿ ಜನಿತ ಗುಣಗಳೇ ಕಾರಣವೆಂದು ತಿಳಿದವನಾಗಿ, ಹಾಗೆಯೇ ಪುರುಷನಾದ ಪರಮಾತ್ಮನೂ ಸಹ ಮೂರು ಭಾಗಗಳಾಗಿ ವಿಭಜಿಸಲ್ಪಟ್ಟಿದ್ದಾನೆಂದು ತಿಳಿದು, ಗುಣಗಳಲ್ಲಿ ಸಿಲುಕಿಕೊಂಡು ಅವುಗಳ ಅನುಭವಗಳನ್ನು ಹೊಂದುತ್ತಿರುವುದು ಪರಮಾತ್ಮನಲ್ಲಿನ ಅಂಶವಾದ ಜೀವಾತ್ಮನೆಂದು, ಒಟ್ಟು ಎಲ್ಲಾ ಶರೀರಯಂತ್ರಾಂಗ ಕಾರ್ಯವನ್ನು ನಡೆಸುವುದು ಆತ್ಮಯೆಂದು, ಎಲ್ಲದಕ್ಕೂ ಸಾಕ್ಷಿಭೂತನಾಗಿ ಏನು ಮಾಡದೆ ಶರೀರದಲ್ಲಿ ತಟಸ್ಥನಾಗಿ ಇರುವವನು ಪರಮಾತ್ಮನೆಂದು ಯಾರು ತಿಳಿದಿದ್ದಾನೋ, ಅವನು ಜಗತ್ತಿನಲ್ಲಿ ಎಲ್ಲಿ ಯಾವ ಕಾರ್ಯಗಳು ಮಾಡುತ್ತಿದ್ದರೂ ಅವನಿಗೆ ಕರ್ಮಗಳು ಅಂಟುವುದಿಲ್ಲ. ಪುನರ್ಜನ್ಮಕ್ಕೆ ಕಾರಣವಾದ ಕರ್ಮಗಳು ತಯಾರಾಗದಿರುವುದರಿಂದ ಅವನಿಗೆ ಪುನರ್ಜನ್ಮ ಇರುವುದಿಲ್ಲ. ಇಲ್ಲಿ ಒಂದು ಪ್ರಶ್ನೆಗೆ ಅವಕಾಶ ಇದೆ. ಅದೇನೆಂದರೆ! "ಹಿಂದಿನ ಸಂಚಿತಕರ್ಮ ಹೆಚ್ಚಾಗಿರುವವನಿಗೆ ಪ್ರಸ್ತುತ ಹೊಸ ಆಗಾಮಿಕ ಕರ್ಮ ಬಾರದಿದ್ದರೂ, ಒಂದೇ ಜನ್ಮದಲ್ಲಿ ಅವನ ಕರ್ಮ ಎಲ್ಲವೂ ಮುಗಿದು ಮರುಜನ್ಮ ಇಲ್ಲದಂತೆ ಹೋಗುತ್ತಾನಾ? ಭಗವಂತನು ಹೇಳಿದಂತೆ ಪ್ರಕೃತಿ, ಪುರುಷರ ವಿವರವನ್ನು ತಿಳಿದವನು ಸಂಚಿತ ಕರ್ಮ ಎಲ್ಲವನ್ನೂ ಅನುಭವಿಸದೆ ಎರಡನೇ ಜನ್ಮ ಪಡೆಯದೇ ಆ ಜನ್ಮದಲ್ಲಿಯೇ ಮುಕ್ತಿ ಹೊಂದುತ್ತಾನಾ?" ಈ ವಿಧವಾಗಿ ಯಾರಿಗಾದರು ಸಂಶಯ ಬರಬಹುದು. ಅದಕ್ಕೆ ಉತ್ತರ ಈ ಶ್ಲೋಕದಲ್ಲಿ **'ಸರ್ವದಾ ವರ್ತಮಾನೋಪಿ ನಸಭೂಯೋಭಿಜಾಯತೇ'** ಎಂದಿದ್ದಾರಲ್ಲವೆ! ಸರ್ವಥಾ ವರ್ತಮಾನೋಪಿ ಎನ್ನುವುದರಲ್ಲಿ ಸಹಜವಾಗಿರುವ ಕರ್ಮರೀತ್ಯ ನಿನ್ನ ಕೆಲಸಗಳು ನೀನು ಮಾಡುತ್ತಾ, ನಿನ್ನ ಸಾವು ನೀನು ಸಾಯುತ್ತಾ, ನಿನ್ನ ಹುಟ್ಟು ನೀನು ಹುಟ್ಟುತ್ತಿದ್ದರೂ ಹೊಸಕರ್ಮ ಬರುವುದಿಲ್ಲ. ಹೊಸಜನ್ಮ ಬರುವುದಿಲ್ಲವೆಂದು ಅರ್ಥ. ಜನ್ಮಕ್ಕೆ ಕಾರಣವಾದುದು ಕರ್ಮ. ಕರ್ಮ ಸಿದ್ಧಾಂತದ ಪ್ರಕಾರ ಹಳೆ ಕರ್ಮ ಮುಗಿಯುವವರೆಗೂ ಅದರ ಕೆಲಸ ಅದು ಮಾಡುತ್ತಿರುತ್ತದೆ. ಆದುದರಿಂದ ಪೂರ್ತಿ ಸಂಚಿತ ಕರ್ಮವೆಲ್ಲ ಮುಗಿಯುವವರೆಗೂ ಅದರ ಪದ್ಧತಿ ಪ್ರಕಾರ ಜನ್ಮಗಳಿರುತ್ತವೆ. ಅದು ಮುಗಿದ ತಕ್ಷಣ ಭಗವಂತನು ಹೇಳಿದ ಪದ್ಧತಿ ಪ್ರಕಾರ ಜನ್ಮಗಳಿರುವುದಿಲ್ಲ. ಹಾಗಲ್ಲದೆ ಶ್ಲೋಕದಲ್ಲಿ ಹಳೆ ಕರ್ಮ ಇದ್ದರೂ ಒಂದೇ ಜನ್ಮದಲ್ಲಿ ಮೋಕ್ಷ ಹೊಂದುತ್ತೀಯೆಂದು ಪ್ರತ್ಯೇಕಿಸಿ ಹೇಳಲಿಲ್ಲವೆಂದು ತಿಳಿಯಬೇಕು.

**(12) ಶ್ಲೋ॥ 25 : ಧ್ಯಾನೇನಾತ್ಮನಿ ಪಶ್ಯನ್ತಿ ಕೇಚಿ ದಾತ್ಮಾನ ಮಾತ್ಮನಾ।**
**ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ ॥**
**(ಭಕ್ತಿ, ಬ್ರಹ್ಮ, ಕರ್ಮಯೋಗಗಳು)**

**(12) ಶ್ಲೋ॥ 26 : ಅನ್ಯೇ ತ್ವೇವ ಮಜಾನಂತಃ ಶ್ರುತ್ವಾನ್ಯೇಭ್ಯ ಉಪಾಸತೇ ।**
**ತೇಪಿ ಚಾತಿತರನ್ತ್ಯೇವ ಮೃತ್ಯುಂ ಶ್ರುತಿ ಪರಾಯಣಾಃ ॥**
**(ಜೀವಾತ್ಮ, ಮೋಕ್ಷ)**

**ಭಾವಾರ್ಥ** : ಮೃತ್ಯುವನ್ನು ಜಯಿಸಿ ಮೋಕ್ಷವನ್ನು ಹೊಂದಿ ಪರಮಾತ್ಮನಲ್ಲಿ ಐಕ್ಯವಾಗುವುದಕ್ಕೆ ಕೆಲವರು ಪರಮಾತ್ಮನ ಸಾಕಾರರೂಪವನ್ನು ಧ್ಯಾನಮಾಡಿ ಭಕ್ತಿಯೋಗ ಹೊಂದಿರುತ್ತಾರೆ. ಮತ್ತೆ ಕೆಲವರು ಬ್ರಹ್ಮಯೋಗವನ್ನು ಅನುಸರಿಸಿ ಆತ್ಮದರ್ಶನವನ್ನು ಮಾಡಿಕೊಳ್ಳುತ್ತಾರೆ. ಇನ್ನೂ ಕೆಲವರು ಕರ್ಮಯೋಗವನ್ನು ಅನುಸರಿಸುತ್ತಾರೆ. ಈ ವಿಷಯಗಳು ತಿಳಿಯದವರು ಇತರರ ಮೂಲಕ ಕೇಳಿ, ಅವರು ಹೇಳಿದ ಪ್ರಕಾರ ಉಪಾಸನೆ ಮಾಡಿ ಸಾಫಲ್ಯವನ್ನು ಪಡೆಯುತ್ತಿದ್ದಾರೆ.

**ವಿವರ** : ಇಲ್ಲಿ ಭಗವಂತನು ಹೇಳಿದಂತೆ ಲೋಕದಲ್ಲಿ ಈ ಪದ್ಧತಿಗಳನ್ನು ಅನುಸರಿಸುವವರು ಯಾರಾದರು ಇದ್ದಾರಾ! ಎಂದು ನೋಡಿದರು ಯಾವ ಗುರು ಹತ್ತಿರಕ್ಕೆ ಹೋದರು, ಯಾವ ಉಪನ್ಯಾಸಕರ ಬೋಧನೆಗಳನ್ನು ಕೇಳಿದರೂ, ಯಾವ ಉಪಾಸಕರನ್ನು ನೋಡಿದರೂ, ಅಲ್ಲಿ ಕಾಣಿಸುವುದು ಕೇಳಿಸುವುದು ಪ್ರಕೃತಿಗೆ ಸಂಬಂಧಿಸಿದ ಪೂಜೆಗಳು, ಪ್ರಕೃತಿಗೆ ಸಂಬಂಧಿಸಿದ ಬೋಧನೆಗಳು ಹೊರತು ಏನೂ ಇಲ್ಲ. ಯಾರನ್ನು ನೋಡಿದರೂ ಪರಮಾತ್ಮನನ್ನು ಬಿಟ್ಟು ಅನ್ಯದೇವತೆಗಳನ್ನು ಆರಾಧನೆ ಮಾಡುವವರೇ ಕಾಣಿಸುತ್ತಿದ್ದಾರೆ. ಯಾವ ಆಶ್ರಮದಲ್ಲಿ ನೋಡಿದರು ಅನ್ಯದೇವತಾ ಪ್ರತಿಷ್ಠೆ ಸ್ಪಷ್ಟವಾಗಿ ಕಾಣಿಸುತ್ತಿದೆ. ಯಾವ ಬೋಧನೆ ಕೇಳಿದರು ಅದರಲ್ಲಿ ದೇವತೆಗಳನ್ನು ಹೊಗಳುವುದೊ, ಆರಾಧಿಸುವುದೊ ಕುರಿತು ಹೇಳುವುದೇ ಇದೆ. ಯಾವ ಸ್ವಾಮಿಯನ್ನು ನೋಡಿದರು ಆತನು ಶಿವಭಕ್ತನಾದ ಶೈವನಾಗಿಯೋ, ಅಥವಾ ವಿಷ್ಣು ಭಕ್ತನಾದ ವೈಷ್ಣವನಾಗಿಯೋ ಮುದ್ರೆ ಹಾಕಿಕೊಂಡಿದ್ದಾರೆ. ಅಂತಹವರ ಬೋಧನೆಗಳು ಕೇಳಿ ಅವುಗಳ ಪ್ರಕಾರ ಉಪಾಸನೆ ಮಾಡಿದವರು ಎಲ್ಲಿಗೆ ಹೋಗಬಲ್ಲರು? ಆದ ಕಾರಣ ಬೋಧನೆಗಳು ಕೇಳುವವರು ಎಚ್ಚರ! ಮೇಲೆ ಹೇಳಿದಂತೆ ಇತರ ದೇವತೆಗಳನ್ನು ಆರಾಧಿಸುವವರ ಬಳಿ ಸೇರಬೇಡಿ. ಮೇಲಿನ ಶ್ಲೋಕದಲ್ಲಿ ಹೇಳಿದಂತೆ

ಪ್ರಕೃತಿ, ಪುರುಷರ ವಿಭಜನೆ ಮಾಡಿ, ಅವರನ್ನು ಕುರಿತು ಪೂರ್ತಿಯಾಗಿ ತಿಳಿದುಕೊಂಡವರ ಹತ್ತಿರ ಸೇರಿ, ಪರಮಾತ್ಮ ಸಂಬಂಧವಾದ ಬೋಧನೆಗಳನ್ನೇ ಕೇಳಿ, ಅದರ ಪ್ರಕಾರವೇ ಸಾಧನೆ ಮಾಡಿದಲ್ಲಿ ಮೋಕ್ಷ ಪಡೆಯುವುದಕ್ಕೆ ಅರ್ಹರಾಗುತ್ತೀರಾ. ಹಾಗಲ್ಲದೆ ದೇವತಾರಾಧನೆ ಸಂಬಂಧವಾಗಿ ಹೋದರೆ ದೇವತೆಗಳಲ್ಲಿಯೇ ಸೇರುತ್ತೀರಾ. ಪರಮಾತ್ಮನಲ್ಲಿ ಎಂದಿಗೂ ಸೇರಲಾರರು.

**(12) ಶ್ಲೋ॥ 27 : ಯಾವ ತ್ಸಂಜಾಯತೇ ಕಿಂಚಿತ್ಸತ್ತ್ವಂ ಸ್ಥಾವರಜಂಗಮಮ್ ।**
**ಕ್ಷೇತ್ರ ಕ್ಷೇತ್ರಜ್ಞ ಸಂಯೋಗಾ ತ್ತದ್ವಿದ್ಧಿ ಭರತರ್ಷಭ ॥**
**(ಪ್ರಕೃತಿ, ಪುರುಷನು)**

**ಭಾವಾರ್ಥ** : ಸ್ಥಾವರ ಜಂಗಮವಾದ ಪ್ರಾಣಿ ಯಾವುದು ಹುಟ್ಟಿದರು, ಹಾಗೆ ಏಕಿಂಚಿತ್ ವಸ್ತು ಹುಟ್ಟಿದರು ಅದು ಕ್ಷೇತ್ರ ಕ್ಷೇತ್ರಜ್ಞರ ಸಂಯೋಗದಿಂದ ಹುಟ್ಟುತ್ತಿದೆ ಎಂದು ತಿಳಿಯಬೇಕು.

**ವಿವರ** : ಇಲ್ಲಿ ಕ್ಷೇತ್ರ ಕ್ಷೇತ್ರಜ್ಞನೆಂಬ ಪದವನ್ನು ಉಪಯೋಗಿಸಲಾಗಿದೆ. ಕ್ಷೇತ್ರ ಎಂದರೆ ಶರೀರವೆಂದು, ಕ್ಷೇತ್ರಜ್ಞನೆಂದರೆ ಆತ್ಮ ಎಂದು ಮೊದಲೇ ತಿಳಿದುಕೊಂಡಿದ್ದೇವೆ. ಒಬ್ಬ ವ್ಯಕ್ತಿಯನ್ನು ವಿಭಜಿಸಿದಾಗ ಕ್ಷೇತ್ರ ಕ್ಷೇತ್ರಜ್ಞನೆಂದು ಹೇಳಿಕೊಳ್ಳುವುದು ಸಮಂಜಸ. ಅದೇ ವಿಶಾಲವಾಗಿ ಪ್ರಪಂಚವನ್ನು ಕುರಿತು ಹೇಳಿಕೊಂಡಾಗ, ಪ್ರಕೃತಿಯನ್ನು ಕ್ಷೇತ್ರವೆಂದು ಪುರುಷನಾದ ಪರಮಾತ್ಮನನ್ನು ಕ್ಷೇತ್ರಜ್ಞನೆಂದು ಹೇಳಬಹುದು. ಇಲ್ಲಿ ಮೇಲಿನ ಶ್ಲೋಕದಲ್ಲಿ ಪ್ರಕೃತಿ, ಪುರುಷನೆಂಬ ಭಾವನೆಯಿಂದ ಕ್ಷೇತ್ರ ಕ್ಷೇತ್ರಜ್ಞನೆಂದು ಹೇಳಿದ್ದಾರೆಂದು ತಿಳಿಯಬೇಕು. ಪ್ರಪಂಚದಲ್ಲಿ ಕದಲುವ ಜೀವಿಗಳಾದ ಮಾನವರು, ಕ್ರಿಮಿ, ಕೀಟಕ ಜಂತುಗಳು, ಸರ್ಪಗಳು, ಪಕ್ಷಿಗಳು, ಜಲಚರಗಳು ಮೊದಲಾದವೆಲ್ಲ ಮತ್ತು ಕದಲದ ವೃಕ್ಷಲತಾದಿಗಳು ಮೊದಲಾದವು, ಅಷ್ಟೇ ಅಲ್ಲದೆ ಹೊಸದಾಗಿ ಹುಟ್ಟಿಕೊಂಡು ಬರುತ್ತಿರುವ ನಕ್ಷತ್ರಗಳು ಮೊದಲುಗೊಂಡು ಏಕಿಂಚಿತ್ ವಸ್ತುವಾದರು ಹೊಸದಾಗಿ ಹುಟ್ಟಿದ ಪಕ್ಷದಲ್ಲಿ ಅವು ಪ್ರಕೃತಿ, ಪುರುಷರ ಸಂಯೋಗದಿಂದ ಹುಟ್ಟಿರುವವೇ ಆಗುತ್ತವೆ. ಪ್ರಕೃತಿ, ಪುರುಷನ ಸಂಯೋಗ ವಿಲ್ಲದ ವಸ್ತುವಾಗಲಿ, ಸ್ಥಾವರ ಜಂಗಮವಾದ ಜೀವಿಯಾಗಲಿ ಯಾವುದು ಪ್ರಪಂಚದಲ್ಲಿ ಇಲ್ಲವೆಂದು ಹೇಳಬಹುದು. ಉದಾಹರಣೆಗೆ ಒಂದು ಜೀವರಾಶಿಯನ್ನು ತೆಗೆದುಕೊಂಡರೆ ಅದರಲ್ಲಿ ಪ್ರಕೃತಿ ಸಂಬಂಧ ಶರೀರ, ಪರಮಾತ್ಮ ಸಂಬಂಧ ಆತ್ಮ ಜೀವಾತ್ಮಗಳು ಇವೆ. ಹಾಗೆಯೇ ಹೊಸದಾಗಿ ತಯಾರಾಗಿ ಬಂದಿರುವ ನಮ್ಮ ಮನೆಯಲ್ಲಿನ ಪ್ರಾಣವಿಲ್ಲದ ಒಂದು ಕುರ್ಚಿಯನ್ನು ತೆಗೆದುಕೊಂಡು ನೋಡಿದರೆ, ಅದರಲ್ಲಿ ಪ್ರಕೃತಿ ಸಂಬಂಧ ಪದಾರ್ಥ ಇರುವಾಗ ಆ

ಪದಾರ್ಥದಲ್ಲಿ ಅಣುಅಣುವಿನಲ್ಲಿ ಪರಮಾತ್ಮ ವ್ಯಾಪಿಸಿದೆ. ಈ ವಿಧವಾಗಿ ಯಾವ ಜೀವರಾಶಿಯಾಗಲಿ, ಯಾವ ಪದಾರ್ಥವಾಗಲಿ, ಪ್ರಕೃತಿ ಪುರುಷರ ಸಂಬಂಧ ಇಲ್ಲದಿರುವವು ಇಲ್ಲವೆಂದು ತಿಳಿಯಬೇಕು.

**(12) ಶ್ಲೋ॥ 28 : ಸಮಂ ಸರ್ವೇಷು ಭೂತೇಷು ತಿಷ್ಠನ್ತಂ ಪರಮೇಶ್ವರಮ್ ।**
**ವಿನಶ್ಯತ್ಸ್ವ ವಿನಶ್ಯನ್ತಂ ಯಃ ಪಶ್ಯತಿ ಸಪಶ್ಯತಿ ॥**
**(ಪರಮಾತ್ಮ)**

**ಭಾವಾರ್ಥ**: ಸರ್ವ ಜೀವರಾಶಿಗಳಲ್ಲಿ ಸಮಾನವಾಗಿ ನಿವಾಸವಿರುವ ಪರಮಾತ್ಮನನ್ನು, ಸಮಸ್ತವೂ ನಾಶವಾದರೂ ನಾಶವಾಗದವನಾಗಿ ಯಾರು ನೋಡುತ್ತಾರೋ ಅವನೇ ನೋಡಿದವನಾಗುತ್ತಾನೆ.

**ವಿವರ** : ಪರಮಾತ್ಮ ಸರ್ವಜೀವರಾಶಿಗಳಲ್ಲಿದ್ದು ಅವು ಮರಣಿಸಿದರೂ, ಪರಮಾತ್ಮನ ಮೂಲವು ಕೆಡದಂತೆ ಇರುವುದು ಆಶ್ಚರ್ಯವಲ್ಲವೆ! ಪರಮಾತ್ಮ ವ್ಯಾಪಿಸಿರುವ ಶರೀರಗಳು ಮರಣಿಸಿದರೂ, ಪರಮಾತ್ಮ ನಾಶ ಹೇಗೆ ಆಗಲಿಲ್ಲವೋ ಸವಿವರವಾಗಿ ತಿಳಿದುಕೊಳ್ಳೋಣ. ಹಾಗೆ ತಿಳಿದುಕೊಳ್ಳುವುದರಿಂದ ಶ್ಲೋಕದಲ್ಲಿ **'ಯಃ ಪಶ್ಯತಿ ಸಪಶ್ಯತಿ'** ಎನ್ನುವಂತೆ ಶರೀರಗಳು ನಾಶವಾದರು ಪರಮಾತ್ಮ ನಾಶವಾಗಲಿಲ್ಲವೆಂದು ನೋಡಿದವನು ನಿಜವಾಗಲು ನೋಡಿದವನಾಗುತ್ತಾನೆ.

ನಾವು ಒಂದು ಊರಿಗೆ ಹೊರಟಾಗ ಆ ಊರು ಎಷ್ಟು ದೂರ ಇರುವುದು, ನಾವೆಲ್ಲಿ ಇಳಿಯಬೇಕೋ, ಎಲ್ಲವೂ ಜ್ಞಾಪಕ ಇಟ್ಟುಕೊಂಡು ಪ್ರಯಾಣಿಸುತ್ತಿರುತ್ತೇವೆ. ಗಮ್ಯ ಬಹಳ ದೂರವಾದರೆ ದಾರಿಗೆ ಬೇಕಾದ ಖರ್ಚಿಗೋಸ್ಕರ ಎಷ್ಟು ಹಣಬೇಕೋ ಅಷ್ಟೇ ಹಣವನ್ನು ನಮ್ಮ ಹತ್ತಿರ ಇಟ್ಟುಕೊಳ್ಳುತ್ತೇವೆ. ಹಾಗೆ ಪ್ರಯಾಣದಲ್ಲಿ ಯಾರ ಹತ್ತಿರ ಸ್ನೇಹ ಮಾಡಿದರೂ, ಇಳಿದು ಹೋಗುವವರೆಗೆ ಸ್ನೇಹ ಇರುತ್ತದೆಂದು ತಿಳಿದು ಅಲ್ಲಿಯವರೆಗೆ ಪರಿಚಯ ಏರ್ಪಡಿಸಿಕೊಳ್ಳುತ್ತೇವೆ. ಅದು ಗಮ್ಯ ತಿಳಿದ ಪ್ರಯಾಣ, ಆದುದರಿಂದ ಆ ಪ್ರಯಾಣದಲ್ಲಿ ಬಂಧನಗಳು ಅನುಬಂಧನಗಳು ಏನು ಇಟ್ಟುಕೊಳ್ಳುವುದಿಲ್ಲ.

ಜೀವನದ ಪ್ರಯಾಣದಲ್ಲಿ ಮರಣವೆಂಬ ಗಮ್ಯ ಇದೆಯೆಂದು ಎಲ್ಲರಿಗೂ ತಿಳಿದಿದೆ. ಆದರೆ ಆ ಗಮ್ಯವೆಷ್ಟು ದೂರವಿದೆ ಎಂದು ತಿಳಿಯದು. ಅದು ಯಾವಾಗ ಬರುವುದು

ತಿಳಿಯದು. ಒಂದು ಊರಿಗೆ ಹೋಗಬೇಕೆಂದರೆ ಪ್ರಯಾಣಕಾಲ ತಿಂಗಳು ಬೇಕಾಗುತ್ತದೆಂದು ತಿಳಿದರೂ, ಸಾಟಿ ಪ್ರಯಾಣಿಕರೊಂದಿಗೆ ಅಂಟಿ ಅಂಟದ ಸ್ನೇಹ ಮಾಡುತ್ತೇವೆ. ಆದರೆ ನಮ್ಮ ಶರೀರ ವಾಹನ ಪ್ರಯಾಣ ಕಾಲ ಇಷ್ಟು ಎಂದು ಖಚಿತವಾಗಿ ತಿಳಿಯದಿದ್ದರು, ನಮ್ಮ ಪಕ್ಕದ ಪ್ರಯಾಣಿಕರೊಂದಿಗೆ ಪೂರ್ತಿ ಸಂಬಂಧಗಳು ಏರ್ಪಡಿಸಿಕೊಳ್ಳುವುದು ಜ್ಞಾನ ರಹಿತವೆಂದು, ಅರ್ಥರಹಿತವೆಂದು ತಿಳಿಯಬೇಕು. ಜ್ಞಾನಸಹಿತವಾಗಿ ಯೋಚಿಸಿದರೆ ಕೇವಲ ಪ್ರಯಾಣಿಕರಾಗಿ ಶರೀರದಲ್ಲಿ ಜೀವನ ಸಾಗಿಸುತ್ತಿದ್ದರೂ ಯಾರ ಗಮ್ಯ ಅವರದು. ಯಾರು ಯಾವ ಗಮ್ಯದವರೆಗೆ ಪ್ರಯಾಣಿಸಿ ನಿಂತುಹೋಗುತ್ತಾರೋ ಹೇಳಲಾರೆವು. ನಿನ್ನ ಹಿಂದೆ ನಿನ್ನ ಗಮ್ಯದವರೆಗೂ ಪ್ರಯಾಣಿಸಿ ನಿನ್ನೊಂದಿಗೆ ಇಳಿದು ಹೋಗುವವರು ಯಾರೂ ಇರುವುದಿಲ್ಲ. ನಮ್ಮ ಹಿಂದೆ ಯಾರೂ ಬರುವುದಿಲ್ಲವೆಂಬ ಮಾತು ವಾಸ್ತವವೇ. ಕೊನೆಗೆ ಸಹಚರಿಣಿ ಎಂದು ಹೆಸರಾದ ನಿನ್ನ ಪತ್ನಿಯೂ ಸಹ ನಿನ್ನ ಹಿಂದೆ ಸಾಯುವುದಿಲ್ಲ. ಈ ವಾಸ್ತವವನ್ನು ಎಲ್ಲರೂ ಒಪ್ಪಿಕೊಳ್ಳಬೇಕಾಗಿರುವುದೇ. ಆದರೆ ನಮಗೆ ತಿಳಿಯದ ವಾಸ್ತವವೊಂದಿದೆ. ಅದೇನೆಂದರೆ! ಸಹಜವಾಗಿ ಕಾಣಿಸುವ ನಿನ್ನೊಂದಿಗೆ, ನಿನ್ನ ಜೊತೆಗಿನ ಪ್ರಯಾಣಿಕರು ನಿನ್ನ ಗಮ್ಯದವರೆಗೂ ಬರದಿದ್ದರೂ, ನಿನಗೆ ಕಾಣಿಸದಂತೆ ನಿನ್ನೊಂದಿಗೆ ಪ್ರಯಾಣ ಮಾಡುವವರು ಇನ್ನೂ ಇಬ್ಬರಿದ್ದಾರೆ. ಅವರಲ್ಲಿ ಒಬ್ಬರು ಹೆಸರಿರುವವನು, ಮತ್ತೊಬ್ಬನು ಹೆಸರಿಲ್ಲದವನು, ಒಬ್ಬನ ಹೆಸರು ಆತ್ಮ. ಹೆಸರಿಲ್ಲದವನು ಆತ್ಮನಿಗೆ ಪರವಾಗಿದ್ದಾನೆ, ಆದುದರಿಂದ ಅವನನ್ನು ಪರಮಾತ್ಮ ಎನ್ನಲಾಗುತ್ತದೆ. ಆತನನ್ನೇ **'ಈಶ್ವರ' (ಅಧಿಪತಿ) ಎಂದೂ, 'ಶಿವ' ಎಂದೂ, ದೇವರೆಂದೂ** ಅನೇಕ ವಿಧಗಳಾಗಿ ಕರೆಯುತ್ತಿದ್ದೇವೆ.

ನೀನು ಜೀವಾತ್ಮನೆಂದು ನಿನಗೆ ತಿಳಿದಿದೆ. ಆದರೆ ನೀನು ಶರೀರದಲ್ಲಿ ಜೀವಯಾತ್ರೆ ಸಾಗಿಸುತ್ತಿದ್ದೀಯೆಂದು ಮರೆತುಹೋಗಿದ್ದೀಯಾ. ಅಷ್ಟೇ ಅಲ್ಲದೆ ನಿನ್ನೊಂದಿಗೆ ಶರೀರದಲ್ಲಿ ಎಲ್ಲವೇಳೆಯಲ್ಲಿಯೂ ಇನ್ನಿಬ್ಬರು ಪ್ರಯಾಣಿಸುತ್ತಿದ್ದಾರೆಂದು ಸಹ ತಿಳಿಯದು. ನಿನಗೆ ತಿಳಿದರೂ ತಿಳಿಯದೇ ಹೋದರೂ ಶರೀರದಲ್ಲಿ ನಿನ್ನೊಂದಿಗೆ ಮೂವರು ಪ್ರಯಾಣಿ ಸುತ್ತಿದ್ದಾರೆ. ಹಾಗೆ ಎಲ್ಲರ ಶರೀರದಲ್ಲಿಯೂ ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವ ಮೂವರು ಪ್ರಯಾಣಿಸುತ್ತಿದ್ದಾರೆ. ಆಲೋಚಿಸಿದರೆ ಒಂದೇ ವಾಹನವಾದ ಶರೀರದಲ್ಲಿ ಜೀವಾತ್ಮದೊಂದಿಗೆ ಪ್ರಯಾಣಿಸುತ್ತಿರುವ ಆತ್ಮ, ಪರಮಾತ್ಮಗಳೊಂದಿಗೆ ಯಾವ ಜೀವಿಯ ಸಂಬಂಧವಾಗಲಿ, ಸ್ನೇಹವಾಗಲಿ ಇಟ್ಟುಕೊಂಡಿಲ್ಲ. ನಮ್ಮ ಹಿಂದೆ ಬರುವ ಆತ್ಮ ಪರಮಾತ್ಮಗಳೊಂದಿಗೆ ಸ್ನೇಹ ಮಾಡದ ನಾವು, ನಮ್ಮಹಿಂದೆ ಬಾರದ ಪ್ರಜೆಗಳೊಂದಿಗೆ

ಎಷ್ಟೋ ಸಂಬಂಧ ಬಾಂಧವ್ಯಗಳು ಇಟ್ಟುಕೊಂಡಿದ್ದೇವೆ. ಹೊರಗಿನವರೊಂದಿಗೆ ಕಾಲಕಳೆಯುವ ನಮಗೆ, ಒಳಗಿರುವವರೊಂದಿಗೆ ಸ್ನೇಹ ಮಾಡುವ ಸಹನೆ ಸಮಯ ಇಲ್ಲದಂತೆ ಹೋಗಿದೆ. ನಾವು ಒಳಗಿರುವವರ ಕಡೆ ನೋಡದಿದ್ದರು, ನಿನ್ನ ಕಡೆ ಅವರು ನೋಡುತ್ತಿದ್ದಾರೆ. ಅವರೊಂದಿಗೆ ನಾವು ಸಂಬಂಧ ಇಟ್ಟುಕೊಳ್ಳದಿದ್ದರೂ, ಅವರ ಸಂಬಂಧ ಎಲ್ಲವೇಳೆಗಳಲ್ಲಿ ನಮ್ಮೊಂದಿಗೆ ಇದೆ. ಅವರ ಸಂಬಂಧ ಇಲ್ಲದಿದ್ದರೆ ಶರೀರದಲ್ಲಿ ನಾವೊಂದು ನಿಮಿಷವೂ ಸಹ ಇರುವುದಿಲ್ಲ. ಶರೀರ ವಾಹನದಲ್ಲಿ ಜೀವಾತ್ಮ, ಆತ್ಮ, ಪರಮಾತ್ಮ ಪ್ರಯಾಣಿಸುತ್ತಾ ಮರಣ ಗಮ್ಯವನ್ನು ಸೇರಿಕೊಳ್ಳುತ್ತಲೇ, ಶರೀರದಿಂದ ಜೀವಾತ್ಮ ಇಳಿದು ಹೋಗುತ್ತದೆ. ಜೀವಾತ್ಮ ಒಬ್ಬನೇ ಅಲ್ಲದೇ ಜೀವಾತ್ಮನೊಂದಿಗೆ ಆತ್ಮವೂ ಇಳಿದು ಹೋಗುತ್ತದೆ. ನಿನ್ನೊಂದಿಗೆ ಮೊದಲಿನಿಂದಿರುವ ಆತ್ಮ ಪರಮಾತ್ಮರಲ್ಲಿ ನಿನ್ನೊಂದಿಗೆ ಬರುವವನು ಆತ್ಮ ಒಬ್ಬನೇ. ಈ ವಿಷಯ ಪುರುಷೋತ್ತಮ ಪ್ರಾಪ್ತಿಯೋಗವೆಂಬ ಅಧ್ಯಾಯದಲ್ಲಿ 8ನೇ ಶ್ಲೋಕದಲ್ಲಿಯೂ ಹೇಳಲಾಗಿದೆ.

ನಿನ್ನ ಮರಣ ಗಮ್ಯದಲ್ಲಿ ನಿನ್ನೊಂದಿಗೆ ಶರೀರ ವಾಹನದಿಂದ ಇಳಿದು ಹೋಗುವವನು ಆತ್ಮವಾಗಿದ್ದು, ಆತ್ಮಗಿಂತ ಪ್ರತ್ಯೇಕವಾಗಿರುವ ಪರಮಾತ್ಮ ಹಾಗೆ ಶರೀರದಲ್ಲಿಯೇ ಇರುತ್ತದೆ.

ಸಜೀವ ಯಾತ್ರೆಯಲ್ಲಿ ಜೀವಾತ್ಮ ಸುಖ ದುಃಖಗಳನ್ನು ಅನುಭವಿಸುತ್ತಿರುತ್ತಾನೆ. ಸುಖ ದುಃಖಗಳನ್ನು ಅನುಭವಿಸುವುದಕ್ಕೆ ಬೇಕಾದ ಕಾರ್ಯಾಚರಣೆಗೆ ಚೈತನ್ಯಕೊಟ್ಟು ಶರೀರವನ್ನು ಕದಲಿಸುವವನು ಎರಡನೆಯವನಾದ 'ಆತ್ಮ', ಮೂರನೆಯವನಾದ ಪರಮಾತ್ಮ ಸಾಕ್ಷಿಯಾಗಿ ಎಲ್ಲವನ್ನೂ ನೋಡುತ್ತಾ ಏನೂ ಮಾಡದೆ ಮೌನವಾಗಿರುತ್ತಾನೆ. ಜೀವಿಯು ಶರೀರದಲ್ಲಿರುವಾಗ ಮತ್ತು ಇಲ್ಲದಿರುವಾಗ ಸ್ತಬ್ಧವಾಗಿರುವವನು ಶಿವ ಅಥವಾ ಈಶ್ವರ ಅಥವಾ ಪರಮಾತ್ಮ ಏನು ಅಲ್ಲದ ಈ ಮೂರನೆಯವನನ್ನು ಪರಮಾತ್ಮ ಎನ್ನುವುದರಲ್ಲಿ ಅರ್ಥ ತಿಳಿದುಕೊಂಡಿದ್ದೇವಲ್ಲವೆ! ಹಾಗೆ ಈಶ್ವರನೆಂದು ಏಕೆ ಕರೆಯುತ್ತಿದ್ದೇವೋ ವಿವರವಾಗಿ ತಿಳಿದುಕೊಳ್ಳೋಣ.

ಅಧಿಪತಿ ಎಂದರೆ ದೊಡ್ಡವನು, ಉತ್ತಮವಾದವನು, ಮೀರಿದವನೆಂದು ಅರ್ಥವಾಗುತ್ತಿದೆ. ಲಕ್ಷಾಧಿಪತಿ ಎಂದರೆ ಲಕ್ಷಕ್ಕೆ ಅಧಿಪತಿ ಎಂದು ಅಥವಾ ಲಕ್ಷಕ್ಕೆ ಮೀರಿದವನೆಂದು, ಲಕ್ಷಗಳು ಇರುವವನೆಂದು ಅರ್ಥವಾಗುತ್ತಿದೆ. ಆ ವಿಧವಾಗಿ ಲಕ್ಷಾಧೀಶ್ವರನು,

ಕೋಟ್ಯಾಧೀಶ್ವರನು ಎನ್ನುವುದರಲ್ಲಿ ಕೋಟಿಗೆ ಅಧಿಪತಿ ಎಂದು ಅವುಗಳಿಗಿಂತ ಉತ್ತಮವಾದವನೆಂದು ತಿಳಿಯುತ್ತಿದೆ. ಯಾವತ್ ಪ್ರಪಂಚಕ್ಕೆಲ್ಲ ಅಧಿಪತಿ ಆಗಿರುವವನು ಪರಮಾತ್ಮ ಒಬ್ಬನೇ, ಆದ್ದರಿಂದ ಸರ್ವಕ್ಕೂ ಅಧಿಪತಿಯಾಗಿರುವ ಪರಮಾತ್ಮನನ್ನೇ 'ಈಶ್ವರ' ಎನ್ನಲಾಗಿದೆ.

ಪರಮಾತ್ಮ ಎಲ್ಲಿಯೂ ಗುರುತಿಸದಂತಿರುವುದು, ಎಲ್ಲಾಕಡೆ ಇರುವುದು, ಯಾವುದಕ್ಕೂ ತಿಳಿಯದಿರುವುದು, ಬದುಕಿರುವವನಿಗು, ಜ್ಞಾನಿಗಳಿಗು, ಯೋಗಿಗಳಿಗೂ ತಿಳಿಯದಿರುವುದು, ಅಗಮ್ಯ ಅಗೋಚರವಾದುದು ಆದ್ದರಿಂದ ಅದನ್ನು 'ಶಿವ' ಎನ್ನುವುದೂ ನಡೆದಿದೆ. ಶಿವ ಎಂದರೆ ತಿಳಿಯದಿರುವುದೆಂದು ಅರ್ಥ. ಜ್ಞಾನಿಗಳಿಗೂ, ಯೋಗಿಗಳಿಗೂ ಶಿವ ಎನ್ನುವುದು ಒಂದಿದೆ ಎಂದು ತಿಳಿದಿದೆ. ಅದು ಯಾವುದೆಂದು ಮಾತ್ರ ತಿಳಿದಿಲ್ಲ. ಜೀವಿಯು ಬ್ರಹ್ಮಯೋಗದಿಂದ ಶರೀರದಲ್ಲಿರುವ ಆತ್ಮವನ್ನು ತಿಳಿಯಬಹುದಾಗಲಿ, ಶಿವವನ್ನು ಮಾತ್ರ ತಿಳಿಯಲಾರೆನು. ಕರ್ಮ ಮುಗಿದುಹೋದ ನಂತರ ಜನ್ಮವಿಲ್ಲದ ಸ್ಥಿತಿಯನ್ನು ಸೇರುವ ಯೋಗಿಗಳು, ಶಿವನಲ್ಲಿ ಐಕ್ಯವಾಗಿ ಹೋಗುತ್ತಾರೆ. ಆ ಶಿವವೇನೋ ಆಗಲೇ ತಿಳಿಯುತ್ತದಾಗಲಿ ಮೊದಲೇ ತಿಳಿಯುವುದಿಲ್ಲ.

ಶರೀರದಲ್ಲಿ ಜೀವ ಯಾತ್ರೆಯಲ್ಲಿ ಮರಣವೆಂಬ ಗಮ್ಯದಲ್ಲಿ ಆತ್ಮ ಜೀವಾತ್ಮಗಳು ಶರೀರದಿಂದ ನಿಷ್ಕ್ರಮಿಸಿದಾಗ, ಕೊನೆಗೆ ಶರೀರದಲ್ಲಿ ಉಳಿದು ಹೋಗುವುದು ಶಿವ. ಬದುಕಿರುವಾಗ ನೀಚವಾದ ಗುಣಗಳಿಂದ ಸಂಬಂಧವಿರುವ ಜೀವಾತ್ಮ ಶರೀರದಲ್ಲಿರುವಾಗ, ಆ ಶರೀರಕ್ಕೆ ಅಷ್ಟು ಪ್ರಾಮುಖ್ಯತೆ ಇಲ್ಲ. ಸತ್ತುಹೋದ ನಂತರ ಶರೀರದಲ್ಲಿ ಜೀವಾತ್ಮ ಇಲ್ಲ, ಯಾವ ನೀಚ ಗುಣಗಳು ಅದರಲ್ಲಿಲ್ಲ. ಆಗ ಅದು ಶುದ್ಧ 'ಶಿವ' ನಿಲಯ, ಅದರಲ್ಲಿ ಪರಮಾತ್ಮ ಹೊರತು ಮತ್ಯಾರು ಇಲ್ಲ. ಆದುದರಿಂದ ಆ ವಿಷಯ ತಿಳಿದ ಜ್ಞಾನಿಗಳು, ಯೋಗಿಗಳು ಮರಣಿಸಿದ ಶರೀರಗಳನ್ನು ವಿಭೂತಿ ನಾಮಗಳಿಂದ ಅಲಂಕರಿಸಿ ಗೋವಿಂದ ನಾಮಸ್ಮರಣೆಯಿಂದ ಪೂಜಿಸಿ ಎಲ್ಲರನ್ನು ಕೈ ಮುಗಿಯುವಂತೆ ಹೇಳುತ್ತಿದ್ದರು. ಅಂತಹ ಸಾಂಪ್ರದಾಯ ಈಗಲೂ ಇದ್ದರು, ಅದು ಅರ್ಥತಿಳಿಯದ ಆಚಾರವಾಗಿದೆ. ಈಗ ಕೈ ಮುಗಿಯುವವರು ಭಕ್ತಿಯಿಂದಲ್ಲದೆ ಭಯದಿಂದ ಮುಗಿಯುತ್ತಿದ್ದಾರೆ. ಒಂದುವೇಳೆ ಕೈ ಮುಗಿಯದಪಕ್ಷದಲ್ಲಿ ಸತ್ತು ಹೋದವರು ಪುನಃ ದೆವ್ವವಾಗಿ ಬರುತ್ತಾರೆಂದು, ಅವರ ಪೀಡೆ ಮನೆಯ ಸುತ್ತಾ ಇರುತ್ತದೆಂದು, ಕೈ ಮುಗಿದರೆ ಅವರ ಪೀಡೆ ಅಲ್ಲಿಗೆ ಹೋಗುತ್ತದೆಂದು ಮುಗಿಯುತ್ತಿದ್ದಾರೆ.

ಪೂರ್ವದಲ್ಲಿ ಹಾಗೆ ಮಾಡಲಿಲ್ಲ. ಪ್ರತಿ ಕೆಲಸ ಅರ್ಥ ತಿಳಿದು ಮಾಡುತ್ತಿದ್ದರು. ಜೀವಿ ಹೋದ ನಂತರ ಶರೀರದಲ್ಲಿ ಉಳಿದಿರುವುದು 'ಶಿವ' ಎಂದು ಅವರಿಗೆ ತಿಳಿದಿದೆ. ಆದ್ದರಿಂದ ಮರಣಿಸಲ್ಪಟ್ಟ ಶರೀರವನ್ನು (ಮೃತದೇಹವನ್ನು) ಶಿವ ಎನ್ನುತ್ತಿದ್ದರು. ಕಾಲಕ್ರಮೇಣ ಭಾವ ಹೋಗಿದೆ. ಶಿವವು ಶವವಾಗಿ ಕರೆಯುತ್ತಿದ್ದರೂ, ಪೂರ್ವದಿಂದ ಇರುವ ಪೂಜೆಗಳು ಮೊದಲಾದ ಆಚರಣೆಗಳು ಹಾಗೆಯೇ ಇವೆ. ಈ ವಿಧವಾಗಿ ಆಚರಣೆಗಳಿದ್ದು ಅರ್ಥಗಳು ಬದಲಾದರೂ, ನಿಜವಾದ ಜ್ಞಾನಿಗಳು, ಯೋಗಿಗಳು ಮರಣಿಸಿದರೂ ಶರೀರದಲ್ಲಿಯೂ ಸಹ ಕೆಡದ ಪರಮಾತ್ಮನ ಇರುವಿಕೆಯನ್ನು ಮನೋನೇತ್ರದಿಂದ ನೋಡುತ್ತಿದ್ದಾರೆ. ಈ ವಿಷಯವನ್ನು ಕುರಿತು ಶ್ಲೋಕದಲ್ಲಿ ಮರಣಿಸಿದ ದೇಹಗಳಲ್ಲಿ ಕೂಡ ನಾಶವಾಗದವನನ್ನು ನೋಡಿದವನೇ ನಿಜವಾಗಲು ನನ್ನನ್ನು ನೋಡಿದವನೆಂದು ಪರಮಾತ್ಮ ಹೇಳಿದ್ದಾನೆ.

**(12) ಶ್ಲೋ॥ 29 : ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತ ಮೀಶ್ವರಮ್ ।**
**ನ ಹಿನ ಸ್ತ್ಯಾತ್ಮನಾತ್ಮಾನಂ ತತೋ ಯಾತಿ ಪರಾಂ ಗತಿಮ್ ॥**
**(ಜೀವಾತ್ಮ, ಆತ್ಮ, ಪರಮಾತ್ಮ)**

**ಭಾವಾರ್ಥ** : ಸಮಸ್ತ ಪ್ರಾಣಿಗಳಲ್ಲಿ ಸಮವಾಗಿ ವಾಸಿಸುವ ಪರಮಾತ್ಮನನ್ನು ಸಮವಾಗಿ ನೋಡುವವನು, ಆತ್ಮನಿಂದ ಆತ್ಮವನ್ನು ಹಿಂಸಿಸುವುದಿಲ್ಲ. ಆದ್ದರಿಂದ ಆತನು ಉತ್ತಮಗತಿ ಯನ್ನು (ಮೋಕ್ಷ) ಹೊಂದುತ್ತಾನೆ.

**ವಿವರ** : ಇಲ್ಲಿ ಆತ್ಮನಿಂದ ಆತ್ಮವನ್ನು ಹಿಂಸಿಸುವುದು ಎನ್ನುವಮಾತು ಅರ್ಥವಾಗಿಲ್ಲ ಎಂದುಕೊಳ್ಳುತ್ತೇನೆ. ಅದನ್ನು ಕುರಿತು ಆಲೋಚಿಸಿ ಯಾರಾದರೆ ಪರಮಾತ್ಮ ಎಲ್ಲಾಕಡೆ ಎಲ್ಲರಲ್ಲಿಯೂ ಸಮಾನವಾಗಿದ್ದಾನೆಂದು ತಿಳಿಯುತ್ತಿದ್ದಾನೋ, ಪರಮಾತ್ಮ ಶರೀರದಲ್ಲಿ ಹೇಗಿರುವುದು ತಿಳಿದಿರುತ್ತಾನೋ, ಅವನು ಅಂದರೆ ಜೀವಾತ್ಮ ಆದವನು ತನ್ನ ಶರೀರದಲ್ಲಿರುವ ಆತ್ಮ, ಪರಮಾತ್ಮರನ್ನು ದೃಷ್ಟಿಯಲ್ಲಿಟ್ಟುಕೊಂಡು ತನ್ನ ಶರೀರಕ್ಕೆ ಯಾವ ಮುಪ್ಪು ತಂದಿಟ್ಟರು ಅದು ಆತ್ಮಕ್ಕೆ ಹಾನಿ (ಆಪತ್ತು) ತಂದಿಟ್ಟಂತಾಗುತ್ತದೆಂದು ತಿಳಿಯುತ್ತಾನೆ. ಏಕೆಂದರೆ ತನ್ನ ಶರೀರವೆಲ್ಲ ಚೈತನ್ಯವಾಗಿ ಆತ್ಮ, ಸೂಕ್ಷ್ಮವಾಗಿ ಪರಮಾತ್ಮ ವ್ಯಾಪಿಸಿದ್ದಾನೆಂದು ಆತನಿಗೆ ತಿಳಿದಿದೆ. ತನ್ನ ಶರೀರಕ್ಕೆ ನೇಣಾಕಿದರು ಅದು ಆತ್ಮವನ್ನು ಹಿಂಸಿಸಿ ಸಾಯಿಸಿದಂತಾಗುತ್ತದೆ ಎಂದು ತಿಳಿಯುತ್ತಾನೆ. ಹಾಗೆ ತನಗಿರುವ ಕೈಯನ್ನು ಕತ್ತರಿಸಿದರೂ ಅದು ಕೈಯಲ್ಲಿರುವ ಆತ್ಮನನ್ನು ಕತ್ತರಿಸಿದಂತಾಗುತ್ತದೆಂದು ತಿಳಿಯುತ್ತಾನೆ. ಈ ವಿಧವಾಗಿ ಶರೀರದಲ್ಲಿ ಸಮಾನವಾಗಿ

ವ್ಯಾಪಿಸಿರುವ ಆತ್ಮ ಪರಮಾತ್ಮಗಳನ್ನು ತಿಳಿದವನು, ಅವರ ಹಿಂದೆ ಜೀವಾತ್ಮವಾಗಿರುವ ತಾನು ತನ್ನ ಶರೀರವೆಲ್ಲ ಇರುವ ಆತ್ಮ ಪರಮಾತ್ಮರನ್ನು ಹಿಂಸಿಸಲಾರನು. ಈ ಒಳದೃಷ್ಟಿ ಹೊಂದಿ ಆತ್ಮ ಪರಮಾತ್ಮರ ವಿವರವನ್ನು ತಿಳಿದವನು ಮೋಕ್ಷವನ್ನು ಹೊಂದುವನು.

**(12) ಶ್ಲೋ॥ 30 : ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ ।**
**ಯಃ ಪಶ್ಯತಿ ತಥಾತ್ಮಾನ ಮಕರ್ತಾರಂ ಸ ಪಶ್ಯತಿ ॥**

**(ಪ್ರಕೃತಿ, ಪರಮಾತ್ಮ)**

**ಭಾವಾರ್ಥ** : ಎಲ್ಲಾ ವಿಧಗಳ ಕರ್ಮಗಳು ಅವುಗಳ ಕೆಲಸಗಳು ಪ್ರಕೃತಿಯಿಂದಲೇ ನಡೆಯುತ್ತಿವೆ ಎಂದು, ಪರಮಾತ್ಮ ಅಕರ್ತ ಎಂದು ತಿಳಿದವನೇ ನಿಜವನ್ನು ತಿಳಿದವನು.

**ವಿವರ** : ಸಜೀವ ಶರೀರದಲ್ಲಿ ಪ್ರಕೃತಿ ಪರಮಾತ್ಮ ಎರಡು ಇವೆಯೆಂದು ತಿಳಿದಿದೆ. ಆ ಎರಡನ್ನು ಸರ್ವ ಕರ್ಮಗಳ ಪ್ರಕಾರ ನಡೆಯುವ ಸರ್ವ ಕಾರ್ಯಗಳು ಪ್ರಕೃತಿಯಿಂದಲೇ ನಡೆಯುತ್ತಿವೆಯೆಂದು, ಕಾರ್ಯಾಚರಣೆಗೆ ಪ್ರಕೃತಿಯೇ ಜಾವಾಬ್ದಾರಿ ವಹಿಸುತ್ತಿದೆ ಎಂದು, ಶರೀರದಲ್ಲಿನ ಪರಮಾತ್ಮ ಏನೂ ಮಾಡದೆ ಕೇವಲ ಸಾಕ್ಷಿಯಾಗಿದ್ದು ಅಕರ್ತನಾಗಿದ್ದಾನೆಂದು ಯಾರು ತಿಳಿಯುತ್ತಿದ್ದಾನೋ, ಅವನೇ ನಿಜವನ್ನು ತಿಳಿದವನೆಂದು ಹೇಳಬಹುದು.

**(12) ಶ್ಲೋ॥ 31 : ಯದಾ ಭೂತಪೃಥಗ್ಭಾವಮೇಕಸ್ಥ ಮನುಪಶ್ಯತಿ।**
**ತತ ಏವಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ ॥**

**(ಪರಮಾತ್ಮ)**

**ಭಾವಾರ್ಥ** : ಭೂತ ಭೇದಗಳೆಲ್ಲವೂ ಪರಮಾತ್ಮ ಒಬ್ಬನವೇಯೆಂದು, ಪರಮಾತ್ಮನಿಂದಲೇ ಎಲ್ಲಾ ವಿಸ್ತರಿಸಲ್ಪಡುತ್ತಿವೆಯೆಂದು ಯಾವಾಗ ತಿಳಿಯುತ್ತಾನೋ ಆಗಲೇ ಪರಮಾತ್ಮನನ್ನು ಹೊಂದುತ್ತಿದ್ದಾನೆ.

**ವಿವರ** : ನಾನಾ ಆಕಾರಗಳು ಹೊಂದಿ ನಾನಾ ವಿಧಗಳಾಗಿ ಕಾಣಿಸುವ ಜೀವರಾಶಿಗಳೆಲ್ಲಾ ಒಂದೇ ಪರಮಾತ್ಮನಲ್ಲಿರುವವೇ ಎಂದು, ಅನೇಕವಿಧ ಜಾತಿಗಳಾಗಿ ಭೂಮಿ ಮೇಲೆ ಹುಟ್ಟಿ ವಿಸ್ತರಿಸುವ ಜೀವರಾಶಿಗಳೆಲ್ಲವೂ ಒಂದೇ ಪರಮಾತ್ಮನಿಂದ ಹುಟ್ಟುತ್ತಿವೆ ಎಂದು ಯಾವಾಗ ತಿಳಿಯುತ್ತಿದೆಯೋ, ಆಗಲೇ ಅವನು ಪರಮಾತ್ಮನನ್ನು ಹೊಂದಲು ಅರ್ಹನಾಗುತ್ತಾನೆ.

**(12) ಶ್ಲೋ॥ 32 : ಅನಾದಿತ್ವಾ ನ್ನಿರ್ಗುಣತ್ವಾತ್ಪ ರಮಾತ್ಮಾ ಯ ಮವ್ಯಯಃ ।**
**ಶರೀರಸ್ಥೋಽಪಿ ಕೌಂತೇಯ! ನ ಕರೋತಿ ನ ಲಿಪ್ಯತೇ ॥**

**(ಪರಮಾತ್ಮ)**

**ಭಾವಾರ್ಥ** : ಅನಾದಿಯು, ನಿರ್ಗುಣನು, ಅವ್ಯಯನಾದ ಪರಮಾತ್ಮ ಶರೀರದಲ್ಲಿದ್ದರೂ ಕರ್ಮಗಳನ್ನು ಮಾಡುವುದಿಲ್ಲ, ಕರ್ಮಗಳನ್ನು ಅಂಟಿಸಿಕೊಳ್ಳುವುದಿಲ್ಲ.

**ವಿವರ** : ಆದಿ ಇಲ್ಲದವನು, ಮೂರು ಗುಣಗಳು ಇಲ್ಲದವನು, ನಾಶ ಇಲ್ಲದವನಾದ ಪರಮಾತ್ಮ ಶರೀರದಲ್ಲಿದ್ದೂ ಸಹ ಯಾವ ಕಾರ್ಯಗಳನ್ನು ಮಾಡುವುದಿಲ್ಲ, ತನಗೆ ಯಾವ ಕರ್ಮಗಳು ಅಂಟಿಸಿಕೊಳ್ಳುವುದಿಲ್ಲ.

**(12) ಶ್ಲೋ॥ 33 : ಯಥಾ ಸರ್ವಗತಂ ಸೌಕ್ಷ್ಮ್ಯಾ ದಾಕಾಶಂ ನೋಪಲಿಪ್ಯತೇ ।**
**ಸರ್ವತ್ರಾವಸ್ಥಿತೋ ದೇಹೇ ತಥಾ ತ್ಮಾ ನೋಪಲಿಪ್ಯತೇ ॥**

**(ಪರಮಾತ್ಮ)**

**ಭಾವಾರ್ಥ** : ಯಾವ ವಿಧವಾಗಿ ಸರ್ವವೂ ವ್ಯಾಪಿಸಿ ಎಲ್ಲವನ್ನೂ ತಾಕಿರುವ ಆಕಾಶ ಸೂಕ್ಷ್ಮವಾಗಿರುವುದರಿಂದ ಅದನ್ನು ಯಾವುದೂ ಅಂಟದಂತೆ, ಹಾಗೇ ಸರ್ವದೇಹಗಳಲ್ಲಿ ವ್ಯಾಪಿಸಿ ತಾಕಿರುವ ಪರಮಾತ್ಮನನ್ನು ಯಾವಾಗಲಿ ಅಂಟದಂತಿವೆ.

**(12) ಶ್ಲೋ॥ 34 : ಯಥಾ ಪ್ರಕಾಶಯ ತ್ಯೇಕಃ ಕೃತ್ಸ್ನಂ ಲೊಕಮಿಮಂ ರವಿಃ ।**
**ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ! ॥**

**(ಪರಮಾತ್ಮ)**

**ಭಾವಾರ್ಥ** : ಸೂರ್ಯನೊಬ್ಬನೇ ಲೋಕವನ್ನೆಲ್ಲ ಹೇಗೆ ಪ್ರಕಾಶಿಸುವಂತೆ ಮಾಡುತ್ತಿದ್ದಾನೋ ಹಾಗೇ ಪರಮಾತ್ಮ ಸಮಸ್ತ ಕ್ಷೇತ್ರಗಳನ್ನೂ, ಕ್ಷೇತ್ರಜ್ಞರನ್ನು ಪ್ರಕಾಶಿಸುವಂತೆ ಮಾಡುತ್ತಿದ್ದಾನೆ.

**ವಿವರ** : ಸೂರ್ಯನು ತನ್ನ ಕಿರಣಗಳಿಂದ ಸಮಸ್ತ ಭೂಮಂಡಲಕ್ಕೆಲ್ಲಾ ಯಾವ ವಿಧವಾಗಿ ಬೆಳಕನ್ನು ಪ್ರಕಾಶಿಸುತ್ತಿರುವನೋ, ಅದೇ ವಿಧವಾಗಿ ಸಮಸ್ತ ಪ್ರಪಂಚದಲ್ಲಿನ ಜೀವರಾಶಿಗಳ ಶರೀರಗಳನ್ನು ಮತ್ತು ಶರೀರದಲ್ಲಿರುವ ಆತ್ಮನನ್ನು, ಪರಮಾತ್ಮ ತನ್ನ ಶಕ್ತಿಯಿಂದ ಚೈತನ್ಯವಂತನನ್ನಾಗಿ ಮಾಡಿ ಕದಲಿಸುತ್ತಿದ್ದಾನೆ. ಪರಮಾತ್ಮ ಸಮಸ್ತ ಶರೀರಗಳನ್ನು ತಯಾರು

ಮಾಡಿ ಅವುಗಳಲ್ಲಿ ಆತ್ಮವನ್ನು ನೆಲೆಗೊಳಿಸಿ ಆತ್ಮಕ್ಕೆ ಶಕ್ತಿಯನ್ನು ಕೊಟ್ಟು ಅದರಿಂದ ಶರೀರವನ್ನು ಕದಲುವಂತೆ ಮಾಡುತ್ತಿದ್ದಾನೆಂದು ತಿಳಿಯಬೇಕು.

**(12) ಶ್ಲೋ॥ 35 : ಕ್ಷೇತ್ರ ಕ್ಷೇತ್ರಜ್ಞಯೋ ರೇವ ಮನ್ತರಂ ಜ್ಞಾನಚಕ್ಷುಷಾ ।**
**ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾನ್ತಿ ತೇ ಪರಮ್ ॥**
**(ಪ್ರಕೃತಿ, ಪುರುಷನು)**

**ಭಾವಾರ್ಥ :** ಜ್ಞಾನನೇತ್ರದಿಂದ ಕ್ಷೇತ್ರ, ಕ್ಷೇತ್ರಜ್ಞರನ್ನು, ಅವುಗಳ ಭೇದಗಳನ್ನು, ಜೀವರಾಶಿಗಳನ್ನು, ಪ್ರಕೃತಿಯನ್ನು, ಮೋಕ್ಷವನ್ನು ಯಾರು ತಿಳಿಯುತ್ತಿದ್ದಾರೋ, ಅವರು ಪರಮ ಪದವನ್ನು ಪಡೆಯುತ್ತಾರೆ. ಇಲ್ಲಿಗೆ ಕ್ಷೇತ್ರ ಕ್ಷೇತ್ರಜ್ಞ ವಿಭಾಗ ಯೋಗವೆನ್ನುವ ಈ ಅಧ್ಯಾಯ ಮುಕ್ತಾಯವಾಗಿದೆ.

ಈ ಅಧ್ಯಾಯದಲ್ಲಿನ ಶ್ಲೋಕಗಳ ವಿವರವನ್ನು ಕೆಳಗೆ ನೋಡಬಹುದು.

| | | | |
|---|---|---|---|
| 1. | ಪ್ರಕೃತಿ. ಪರಮಾತ್ಮ (ಪುರುಷನು) | – | 11 |
| 2. | ಪ್ರಕೃತಿ | – | 2 |
| 3. | ಆತ್ಮಜ್ಞಾನ | – | 5 |
| 4. | ಪರಮಾತ್ಮ | – | 11 |
| 5. | ಪ್ರಕೃತಿ, ಜೀವಾತ್ಮ | – | 2 |
| 6. | ಜೀವಾತ್ಮ, ಆತ್ಮ, ಪರಮಾತ್ಮ | – | 2 |
| 7. | ಭಕ್ತಿ, ಬ್ರಹ್ಮ, ಕರ್ಮಯೋಗಗಳು | – | 1 |
| 8. | ಜೀವಾತ್ಮ, ಮೋಕ್ಷ | – | 1 |
| | **ಒಟ್ಟು ಶ್ಲೋಕಗಳು** | – | **35** |

ಭಾವ, ವಿವರವನ್ನು ಬದಲಾಯಿಸಿ ಬರೆದ ಶ್ಲೋಕಗಳು – 2, 6.



### ಹದಿಮೂರನೆಯ ಅಧ್ಯಾಯ

# ಗುಣತ್ರಯ ವಿಭಾಗ ಯೋಗ

**(13) ಶ್ಲೋ॥ 1 : ಪರಂ ಭೂಯಃ ಪ್ರವಕ್ಷ್ಯಾಮಿಜ್ಞಾನಾನಾಂಜ್ಞಾನಮುತ್ತಮಮ್ ।**
**ಯದ್‌ಜ್ಞಾತ್ವಾ ಮುನಯ ಸ್ಸರ್ವೇ ಪರಾಂ ಸಿದ್ಧಿಮಿತೋ ಗತಾಃ ॥**

**(ಜ್ಞಾನ)**

**ಭಾವಾರ್ಥ** : ಯಾವ ಜ್ಞಾನವನ್ನು ತಿಳಿದುಕೊಂಡು ಮುನಿಗಳೆಲ್ಲರೂ ಶ್ರೇಷ್ಟವಾದ ಮೋಕ್ಷವನ್ನು ಹೊಂದಿದ್ದಾರೋ, ಅಂತಹ ಜ್ಞಾನಗಳಿಗೆಲ್ಲ ಉತ್ತಮವಾದ ಜ್ಞಾನವನ್ನು ಮತ್ತೆ ಹೇಳುತ್ತಿದ್ದೇನೆ.

**(13) ಶ್ಲೋ॥ 2 : ಇದಂ ಜ್ಞಾನ ಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।**
**ಸರ್ಗೇಽಪಿ ನೋಪಜಾಯನ್ತೇ ಪ್ರಳಯೇ ನ ವ್ಯಥನ್ತಿ ಚ ॥**

**(ಜ್ಞಾನ)**

**ಭಾವಾರ್ಥ** : ಈ ಜ್ಞಾನವನ್ನು ತಿಳಿದು ಉಪಾಸಿಸಿದವರು, ನನ್ನ ಪರಮಪದವನ್ನು ಹೊಂದಿದವರಾಗಿ ಸೃಷ್ಟಿಕಾಲದಲ್ಲಿ ಹುಟ್ಟುವುದಿಲ್ಲ. ಮತ್ತು ಪ್ರಳಯ ಕಾಲದಲ್ಲಿ ಬಾಧೆಪಡುವುದಿಲ್ಲ.

**ವಿವರ** : ಪರಮಾತ್ಮ ಜ್ಞಾನವನ್ನು ಹೊಂದಿದವನು ಅದನ್ನು ಉಪಾಸಿಸುವುದರಿಂದ, ಪರಮಾತ್ಮನಲ್ಲಿಯೇ ಐಕ್ಯವಾಗಿ ಜೀವಸ್ವರೂಪವನ್ನು ಕಳೆದುಕೊಳ್ಳುತ್ತಾನೆ. ಮೋಕ್ಷ ಹೊಂದಿದ ನಂತರ ಒಬ್ಬ ಮನುಷ್ಯನಾಗಿಯೂ, ಅಥವಾ ಒಂದು ಪ್ರಾಣಿಯಾಗಿಯೂ ಇಲ್ಲದಂತೆ, ಯಾವ ಶರೀರವನ್ನು ಧರಿಸದಂತೆ, ಅಣುವಣುವಿನಲ್ಲಿ ವ್ಯಾಪಿಸಿದ್ದಾನೆ. ಆದ ಕಾರಣ ಅವನಿಗೆ ಪ್ರಳಯ ಕಾಲದಲ್ಲಿ ದುಃಖವಾಗಲಿ, ಸೃಷ್ಟಿಕಾಲದಲ್ಲಿ ಹುಟ್ಟುವುದೆಂಬ ಸಮಸ್ಯೆಯಾಗಲಿ ಇಲ್ಲ. ಪ್ರಳಯ ಸಂಭವಗಳಿಗೆ ಅತೀತನಾಗಿರುತ್ತಾನೆ.

**(13) ಶ್ಲೋ॥ 3 : ಮಮ ಯೊನಿ ರ್ಮಹದ್ಬ್ರಹ್ಮ ತಸ್ಮಿನ್‌ಗರ್ಭಂ ದಧಾಮ್ಯಹಮ್ ।**
**ಸಂಭವ ಸ್ಸರ್ವಭೂತಾನಾಂ ತತೋ ಭವತಿ ಭಾರತ! ॥**

**(ಪ್ರಕೃತಿ, ಪರಮಾತ್ಮ)**

**ಭಾವಾರ್ಥ** : ನನ್ನ ಯೋನಿ ದೊಡ್ಡದಾದ ವಿಶಾಲವಾದ ಪ್ರಕೃತಿ, ಅದನ್ನು ನಾನು ಗರ್ಭ ಧರಿಸುವಂತೆ ಮಾಡುತ್ತಿದ್ದೇನೆ. ಆದ್ದರಿಂದ ಸರ್ವಭೂತಗಳ ಹುಟ್ಟುವಿಕೆಗಳು ಸಂಭವಿಸುತ್ತಿವೆ.

**ವಿವರ** : ಸಮಸ್ತ ಪ್ರಪಂಚವೆಲ್ಲಾ ಅನ್ಯವಿಲ್ಲದಂತೆ ಏಕಸ್ತವಾಗಿರುವುದು ಪರಮಾತ್ಮ. ಅದಕ್ಕೂ ವಿನಹಃ ಏನೂ ಇಲ್ಲವೆಂದು ಹೇಳಿಕೊಂಡಿದ್ದೇವೆ. ಆದರೆ ಪ್ರಪಂಚ ಕಾರ್ಯ ಕಾರಣಗಳಿಗೆ ಪರಮಾತ್ಮನನ್ನು ವಿಭಜಿಸಿಕೊಳ್ಳಬೇಕೆಂದೂ ಹೇಳಿಕೊಂಡಿದ್ದೇವೆ. ಹಾಗೆ ವಿಭಜಿಸಿ ನೋಡಿಕೊಂಡರೆ ನಾಲ್ಕು ಮುಖ್ಯ ಭಾಗಗಳಾಗಿ ಇವೆ. ಅವು **1) ಜೀವಾತ್ಮ 2) ಆತ್ಮ 3) ಪರಮಾತ್ಮ 4) ಪ್ರಕೃತಿ**. ಈ ನಾಲ್ಕು ಭಾಗಗಳಲ್ಲಿ ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವವು ಹಾಗೆಯೇ ಇರುವಾಗ, ಪ್ರಕೃತಿಯಿಂದ ಕಾಣಿಸುವ ಮತ್ತು ಕಾಣಿಸದಿರುವವು ಎಷ್ಟೋ ಹುಟ್ಟಿವೆ. ಸಮಸ್ತ ಜೀವರಾಶಿಗಳು ಪ್ರಕೃತಿಯಿಂದ ಹುಟ್ಟಿರುವವೇ. ಸಮಸ್ತ ಜೀವರಾಶಿಗಳು ಪ್ರಕೃತಿಯಿಂದ ಹುಟ್ಟಿದಾಗ, ಅವುಗಳನ್ನು ಹುಟ್ಟಿಸಿದವನು ಪರಮಾತ್ಮ. ಒಬ್ಬ ಸ್ತ್ರೀಯಿಂದ ಕೆಲವರು ಜನ್ಮಿಸುವುದು ನಮಗೆ ತಿಳಿದಿರುವ ವಿಷಯವೇ. ಸ್ತ್ರೀಯಿಂದ ಹುಟ್ಟಿದವರನ್ನು ಹುಟ್ಟಿಸಿದವನು ಪುರುಷನೆಂದು ಸಹ ನಮಗೆ ತಿಳಿದಿರುವ ವಿಷಯವೇ. ಅದೇ ವಿಧವಾಗಿ ಸರ್ವ ಜೀವರಾಶಿಗಳ ಹುಟ್ಟುವಿಕೆಗೆ ಕಾರಣವಾದ ಬೀಜಧಾತನಾದ ಪರಮಾತ್ಮ ತಂದೆಯಾಗಿದ್ದು, ಯೋನಿ ಸ್ವರೂಪಿಯಾದ ಪ್ರಕೃತಿ ತಾಯಿ ಆಗುತ್ತಿದೆ. ಒಬ್ಬ ಮನುಷ್ಯನಿಗೆ ಸ್ಥೂಲವಾಗಿ ಕಾಣಿಸುವ ತಾಯಿತಂದೆಯರಿರುವಂತೆ, ಸರ್ವಜೀವರಾಶಿಗಳಿಗೂ ಕಾಣಿಸದ ತಾಯಿತಂದೆಯರು ಪ್ರಕೃತಿ, ಪರಮಾತ್ಮರಿದ್ದಾರೆಂದು ತಿಳಿಯಬೇಕು. ಈ ಲೆಕ್ಕ ಪ್ರಕಾರ ನಮ್ಮ ತಾಯಿ ಪ್ರಕೃತಿ, ತಂದೆ ಪರಮಾತ್ಮನೆಂದು ಹೇಳಬಹುದು.

**(13) ಶ್ಲೋ॥ 4 : ಸರ್ವಯೋನಿಷು ಕೌಂತೇಯ!ಮೂರ್ತಯಃಸಂಭವಂತಿಯಾಃ ।**
**ತಾಸಾಂ ಬ್ರಹ್ಮ ಮಹದ್ಯೋನಿಃ ಅಹಂ ಬೀಜಪ್ರದಃ ಪಿತಾ ॥**
**(ಪ್ರಕೃತಿ, ಪರಮಾತ್ಮ)**

**ಭಾವಾರ್ಥ** : ಸರ್ವಯೋನಿಗಳಲ್ಲೂ ಹುಟ್ಟುತ್ತಿರುವ ಅನೇಕ ವಿಧಗಳ ಆಕಾರಗಳಿರುವ ಜೀವರಾಶಿಗಳಿಗೆ ಪ್ರಕೃತಿ ತಾಯಿಯಾಗಿ, ಬೀಜದಾತನಾದ ನಾನು ತಂದೆಯಾಗುತ್ತೇನೆ.

**(13) ಶ್ಲೋ॥ 5 : ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ ।**
**ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಮ್ ॥**
**( ಜೀವಿಯು, ಮೂರು ಗುಣಗಳು)**

**ಭಾವಾರ್ಥ** : ಪ್ರಕೃತಿಯಿಂದ ಹುಟ್ಟಿದ ಸತ್ತ್ವ ರಜಸ್ತಮ ಎಂಬ ಗುಣಗಳು ದೇಹದಲ್ಲಿ ನಾಶವಾಗದ ಜೀವಾತ್ಮವನ್ನು ಬಂಧಿಸುತ್ತಿವೆ.

**ವಿವರ** : ಪ್ರಕೃತಿಗೆ ಜೀವರಾಶಿಗಳು ಹುಟ್ಟಿವೆ ಎಂದು ಹೇಳಿದ್ದೇವಲ್ಲವೆ! ಆ ಜೀವರಾಶಿಗಳ ಶರೀರಗಳನ್ನು ವಿಭಜಿಸಿ ನೋಡಿದರೆ ಅವುಗಳಲ್ಲಿ ಕಾಣಿಸುವ ಜ್ಞಾನೇಂದ್ರಿಯಗಳು ಕರ್ಮೇಂದ್ರಿಯಗಳು, ಕಾಣಿಸದ ವಾಯುವುಗಳು, ಅವಯವಗಳ ಶಕ್ತಿಗಳು, ಗುಣಗಳು ಮುಖ್ಯವಾದ ನಾಡೀಕೇಂದ್ರಗಳು, ಗ್ರಂಥಿಗಳು ಮೊದಲಾದವು ಇವೆ. ಶರೀರ ಎಲ್ಲವನ್ನು ಲೆಕ್ಕಿಸಿದರು, ಅದರಲ್ಲಿನ ಭಾಗಗಳೂ ಕೂಡ ಪ್ರಕೃತಿಗೆ ಹುಟ್ಟಿರುವವೇ ಎಂದು ಹೇಳಬಹುದು. ಇವುಗಳೆಲ್ಲವುಗಳಿಂದ ಕಾರ್ಯಗಳು ನಡೆಯುವುದಕ್ಕೆ, ಕರ್ಮವನ್ನು ಸಂಪಾದಿಸಿಡುವುದಕ್ಕೆ, ಮುಖ್ಯ ಪಾತ್ರವಹಿಸುವವು ಗುಣಗಳು. ಈ ಗುಣಗಳು ಮೂರು ಭಾಗಗಳಾಗಿವೆ. ಒಂದು ತಾಮಸಗುಣ ಭಾಗ. ಎರಡನೆಯದು ರಾಜಸಗುಣ ಭಾಗ. ಮೂರನೆಯದು ಸಾತ್ತ್ವಿಕ ಗುಣಭಾಗ. ಈ ಮೂರು ಗುಣಭಾಗಗಳಲ್ಲಿ ಒಂದೊಂದರಲ್ಲಿ ಆರು ಗುಣಗಳು ಒಂದು ಗುಂಪಾಗಿ, ಮತ್ತೊಂದು ಆರು ಗುಣಗಳು ಮತ್ತೊಂದು ಗುಂಪಾಗಿವೆ. ಆರು ಒಂದು ವರ್ಗ, ಮತ್ತೊಂದು ಆರು ಒಂದು ವರ್ಗವಾಗಿದ್ದು, ಈ ಗುಂಪುಗಳಿಗೆ ಸಂಬಂಧವಿಲ್ಲದ ಎರಡು ಮತ್ತು ಒಂದು ಸೇರಿ ಮೂರು ಗುಣಗಳು ಪ್ರತ್ಯೇಕವಾಗಿವೆ. ಇದರಿಂದ ಒಂದು ಗುಣಭಾಗದಲ್ಲಿ (6+6+2+1=15) ಒಟ್ಟು ಹದಿನೈದು ಗುಣಗಳು ಇವೆಯೆಂದು ತಿಳಿಯುತ್ತದೆ. ಇಲ್ಲಿಯವರೆಗೂ ಎಲ್ಲರೂ ಎಲ್ಲ ಪುಸ್ತಕಗಳಲ್ಲಿ ಬರೆದಿರುವವು ಹೇಳಿರುವವು ಆರು ಮಾತ್ರವೆ. ಅರಿಷಡ್ ವರ್ಗಗಳು ಎಂದು ಅವುಗಳ ಹೆಸರುಗಳು 1) **ಕಾಮ 2) ಕ್ರೋಧ 3) ಲೋಭ 4) ಮೋಹ 5) ಮಧ 6) ಮತ್ಸರಗಳು**. ಈ ವಿಧವಾಗಿ ಒಂದು ಗುಂಪಾದ ಆರು ಗುಣಗಳು ಮಾತ್ರ ಪ್ರಚಾರದಲ್ಲಿ ಇವೆ. ಈಗ ನಾವು ನಮ್ಮ ರಚನೆಯಲ್ಲಿ ಒಟ್ಟಾರೆ ಎಲ್ಲಾ ಗುಣಗಳನ್ನು ಬಹಿರ್ಗತ ಮಾಡಿ ಹೇಳುತ್ತಿದ್ದೇವೆ. ಹಾಗೆ ತಿಳಿದುಕೊಳ್ಳದೆ ಹೋದರೆ ಕ್ಷೇತ್ರವನ್ನು ಪೂರ್ತಿ ತಿಳಿದವರು ಅಲ್ಲ. ಎಲ್ಲಾ ಕಾರ್ಯಗಳಿಗೆ ಮೂಲವಾದ ಗುಣಗಳನ್ನು ತಿಳಿಯದೆ ಹೋದರೆ ಅವುಗಳಿಂದ ಏರ್ಪಡುವ ಕರ್ಮಗಳು ತಿಳಿಯುವುದಿಲ್ಲ.

ಈಗ ನಾವು ತಿಳಿಸುವ ಗುಣಗಳು ಎಲ್ಲರಲ್ಲಿಯೂ ಇರುವವೇ ಎಂದು ತಿಳಿಯಬೇಕು. ಒಂದು ಗುಣಭಾಗದಲ್ಲಿ ಅಥವಾ ಒಂದು ಗುಣ ಆವರಣದಲ್ಲಿರುವ ಒಟ್ಟು 15 ಗುಣಗಳಲ್ಲಿ ಕಣ್ಣಿಗೆ ತಿಳಿಯದಿರುವವಾದರು ಅವುಗಳಲ್ಲಿ ಒಂದು ವಿಧವಾಗಿ 12 ಮಾತ್ರ ಸ್ಥೂಲಗುಣಗಳಾಗಿಯೂ, ಮೂರನ್ನು ಸೂಕ್ಷ್ಮಗುಣಗಳಾಗಿ ಹೇಳಿಕೊಳ್ಳಬಹುದು. ಈ ವಿವರಣೆ ಅರ್ಥವಾಗುವುದಕ್ಕೆ ಮಾತ್ರವೇ ಎಂದು ತಿಳಿಯಬೇಕು. ಮುಖ್ಯವಾಗಿ ಹೇಳಿಕೊಳ್ಳುವ 12 ಗುಣಗಳಲ್ಲಿ ಆರು ಕೆಟ್ಟ ಗುಣಗಳೆಂದು, ಆರು ಒಳ್ಳೆಯ ಗುಣಗಳೆಂದು ಹೇಳಿಕೊಳ್ಳಬಹುದು. **ಅವುಗಳನ್ನೇ ರಾಕ್ಷಸ (ಕೆಟ್ಟ) ಗುಣಗಳೆಂದು, ದೈವ (ಒಳ್ಳೆಯ) ಗುಣಗಳೆಂದೂ ಸಹ ಹೇಳಬಹುದು**. ಇಲ್ಲಿಯವರೆಗೂ ರಾಕ್ಷಸ ಪ್ರಭಾವವಿರುವ ಕಾಮ, ಕ್ರೋಧ, ಲೋಭ,

ಮೋಹ, ಮಧ, ಮತ್ಸರಗಳೆಂದು ನಾವೆಲ್ಲರೂ ಕೇಳಿದ್ದೇವೆ. ನಾವು ಕೇಳದ, ಪ್ರಚಾರದಲ್ಲಿ ಇಲ್ಲದ ದೈವ ಪ್ರಭಾವವಿರುವ **1) ದಾನ 2) ದಯೆ 3) ಔದಾರ್ಯ 4) ವೈರಾಗ್ಯ 5) ವಿನಯ 6) ಪ್ರೇಮ** ಎಂದು ಹೆಸರಿರುವ ಈ ಗುಣಗಳು ಒಂದು ಗುಂಪಾಗಿವೆ. ಇವು ಮೊದಲ ಆರು ಗುಣಗಳಿಗೆ ವಿರುದ್ಧವಾದವು. ಕಾಮ ಅಥವಾ ಆಸೆ ಎನ್ನುವ ಗುಣಕ್ಕೆ ದಾನ ಎನ್ನುವುದು ವಿರುದ್ಧವಾದ ಗುಣವೆಂದು ತಿಳಿಯಬೇಕು. ಹಾಗೆ ಕೋಪಕ್ಕೆ ದಯೆ, ಲೋಭಕ್ಕೆ ಔದಾರ್ಯ, ಮೋಹಕ್ಕೆ ವೈರಾಗ್ಯ, ಮದ (ಗರ್ವ)ಕ್ಕೆ ವಿನಯ, ಮತ್ಸರ(ಅಸೂಯ) ಎನ್ನುವುದಕ್ಕೆ ಪ್ರೇಮ ಎನ್ನುವ ಗುಣಗಳು ವಿರುದ್ಧವಾದವು.

ಆರು ಕೆಟ್ಟವು, ಆರು ಒಳ್ಳೆಯವು ಎಂದಿದ್ದೇವಲ್ಲವೆ! ಆರು ಕೆಟ್ಟ ಗುಣಗಳು ಪಾಪ ಕರ್ಮವನ್ನು ಸಂಪಾದಿಸಿಡುತ್ತಿವೆ. ಹಾಗೆಯೇ ಆರು ಒಳ್ಳೆಯ ಗುಣಗಳು ಪುಣ್ಯವನ್ನು ಸಂಪಾದಿಸಿಡುತ್ತಿವೆ. ಉಳಿದ ಮೂರು ಗುಣಗಳನ್ನು ಸಂದರ್ಭಾನುಸಾರ ನಂತರ ಹೇಳುತ್ತೇವೆ. ಇವು 6+6=12 ಗುಣಗಳು ಪಾಪಪುಣ್ಯಗಳನ್ನು ಸಂಪಾದಿಸುತ್ತಿವೆ ಎಂದು ಹೇಳಿದ್ದೇವಲ್ಲವೆ! ಉದಾಹರಣೆಗೆ ಒಂದು ಕಾಮವೆಂಬ ಗುಣವನ್ನು ಅದಕ್ಕೆ ವಿರುದ್ಧವಾದ ದಾನವೆನ್ನುವ ಗುಣವನ್ನು ತೆಗೆದುಕೊಳ್ಳೋಣ. ಆಸೆಯೆಂಬ ಗುಣ ಯಾವುದೋ ಒಂದು ವಿಧವಾಗಿ ತನಗೆ ಇಲ್ಲದಿರುವುದನ್ನು ಇತರರಿಂದ ತಾನು ಸಂಪಾದಿಸಿಕೊಳ್ಳುವಂತೆ ಮಾಡುತ್ತದೆ. ಹಾಗೆ ಮಾಡುವುದರಲ್ಲಿ ಅಕ್ರಮಗಳು, ಅನ್ಯಾಯಗಳು, ಅಸತ್ಯಗಳು ಎಲ್ಲ ಕೂಡಿಕೊಂಡಿರುವುದು ಸಹಜ. ಅದರಿಂದ ಪಾಪ ಸಂಭವಿಸುತ್ತದೆ. ಅದಕ್ಕೆ ವಿರುದ್ಧವಾದ ದಾನಗುಣ ಇತರರಿಗೆ ಇಲ್ಲದಿರುವುದನ್ನು ತನ್ನ ಹತ್ತಿರದಿಂದ ಉಚಿತವಾಗಿ ಕೊಡಿಸುತ್ತದೆ. ಇದರಲ್ಲಿ ಅಕ್ರಮ, ಅನ್ಯಾಯ, ಅಸತ್ಯ ಎನ್ನುವವು ಯಾವುವು ಇರುವುದಕ್ಕೆ ಅವಕಾಶವಿಲ್ಲ. ಆದ್ದರಿಂದ ಈ ಕಾರ್ಯದಲ್ಲಿ ಪುಣ್ಯವೇ ಸಂಭವಿಸುತ್ತದೆ. ಈ ವಿಧವಾಗಿ ಸಂಭವಿಸುವ ಪಾಪಪುಣ್ಯಗಳು ಜೀವಾತ್ಮನನ್ನು ಬಂಧಿಸಿ ಮರುಜನ್ಮಗಳಿಗೆ ತೆಗೆದುಕೊಂಡು ಹೋಗುತ್ತವೆ. ಆದ್ದರಿಂದ ಗುಣಗಳಿಂದ ಏರ್ಪಡುವ ಕಾರ್ಯಗಳಲ್ಲಿ ಸಂಭವಿಸುವ ಪಾಪಪುಣ್ಯ ಫಲಿತಗಳನ್ನು ಕರ್ಮ ಬಂಧನಗಳು ಎಂದಿದ್ದಾರೆ. ಕರ್ಮ ಬಂಧನಗಳೆನ್ನುವವು ಆ ಶರೀರದಲ್ಲಿರುವ ಜೀವಾತ್ಮನನ್ನು ಬಂಧಿಸಿಡುತ್ತವೆ. ಮರುಜನ್ಮಕ್ಕೆ ಎಳೆದುಕೊಂಡು ಹೋಗುವ ಕರ್ಮಗಳನ್ನು ಜನ್ಮಬಂಧನಗಳೆಂದೂ ಸಹ ಕರೆಯುತ್ತಿದ್ದಾರೆ. ಈ ವಿಧವಾಗಿ ಜೀವಾತ್ಮವನ್ನು ಬಂಧಿಸುವ ಸೂತ್ರಗಳನ್ನು (ಹಗ್ಗಗಳನ್ನು) ಗುಣಗಳೆ ತಯಾರುಮಾಡುತ್ತಿವೆ. ಮುಖ್ಯವಾಗಿ ಜೀವಾತ್ಮಕ್ಕೆ ಬಂಧನಗಳನ್ನು ಉಂಟುಮಾಡುವವು ಗುಣಗಳು. ಆದ್ದರಿಂದ ಈ ಶ್ಲೋಕದಲ್ಲಿ ದೇಹದಲ್ಲಿರುವ ಜೀವಾತ್ಮವನ್ನು ಮೂರುಗುಣ ಭಾಗಗಳು ಬಂಧಿಸಿಟ್ಟಿವೆ ಎಂದಿದ್ದಾನೆ.

ಈ ಅಧ್ಯಾಯದಲ್ಲಿ ಇಲ್ಲಿಂದ ಗುಣಗಳು ಪ್ರೇರೇಪಿಸುವ ಕಾರ್ಯಗಳನ್ನು ಕುರಿತು ತಿಳಿಸುವುದಕ್ಕೆ ಪ್ರಾರಂಭವಾಗುತ್ತದೆ. ಆದ್ದರಿಂದ ಮೊದಲು ಗುಣಗಳ ವಿವರವೆಲ್ಲವೂ ತಿಳಿಯಬೇಕಾದ ಅವಶ್ಯಕತೆ ಇದೆ. ಆದ್ದರಿಂದ ಗುಣಗಳನ್ನು ಕುರಿತು ವಿವರವಾಗಿ ತಿಳಿದುಕೊಳ್ಳೋಣ. ಇಲ್ಲಿಯವರೆಗೂ ತಾಮಸ ಗುಣಭಾಗದಲ್ಲಿ 12 ಗುಣಗಳು, ರಾಜಸ ಗುಣಭಾಗದಲ್ಲಿ 12 ಗುಣಗಳು, ಸಾತ್ತ್ವಿಕ ಗುಣಭಾಗದಲ್ಲಿ 12 ಗುಣಗಳು ಒಟ್ಟು 36 ಗುಣಗಳು ಇವೆಯೆಂದು ತಿಳಿದುಕೊಂಡಿದ್ದೇವೆ. ಕೆಳಗಿನ ಚಿತ್ರದಲ್ಲಿ ಗುಣ ಭಾಗಗಳನ್ನು ಅವುಗಳಲ್ಲಿರುವ ಜೀವಾತ್ಮವನ್ನು ನೋಡಬಹುದು.




ಗುಣಚಕ್ರ

ಮೂರು ಆವರಣಗಳಾಗಿರುವ ಗುಣಭಾಗಗಳಲ್ಲಿ ಗುಣಗಳು ಯಾವ ವಿಧವಾಗಿ ಇರುವವು ಕೆಳಗಿನ ಚಿತ್ರದಲ್ಲಿ ನೋಡಬಹುದು.




ಗುಣಚಕ್ರ

ಒಂದೊಂದು ಭಾಗದಲ್ಲಿ ಒಟ್ಟು 12 ಗುಣಗಳಿರುವಾಗ, ತಾಮಸ ಗುಣ ಸ್ವಭಾವಗಳು, ರಾಜಸ ಗುಣಸ್ವಭಾವಗಳು, ಸಾತ್ತ್ವಿಕ ಗುಣಸ್ವಭಾವಗಳು ಬೇರೆ ಬೇರೆಯಾಗಿರುವುದರಿಂದ ಆಕಾರಗಳು ಸಹ ಬೇರೆ ಬೇರೆಯಾಗಿವೆಯೆಂದು ತಿಳಿಯಬೇಕು. ಒಂದು ಗುಣಭಾಗದಲ್ಲಿ ಒಂದೊಂದು ಗುಣ 9 ಭಾಗಗಳಾಗಿ ವಿಭಜಿಸಲಾಗಿದೆ. ಈ ವಿಧವಾಗಿ ಒಂದು ಗುಣಭಾಗದಲ್ಲಿ (12x9=108) ಒಟ್ಟು 108 ಗುಣಗಳು ಇವೆ. 108 ಗುಣಗಳೆಲ್ಲ ಒಂದೇ ವಿಧವಾಗಿರದೆ ಅವುಗಳ ಪ್ರಭಾವ ಪರಿಮಾಣಗಳಲ್ಲಿ ವ್ಯತ್ಯಾಸಗಳಿವೆ. ಅದು ಹೇಗೆಂದರೆ! ಉದಾಹರಣೆಗೆ ಆಸೆ ಎಂಬ ಗುಣವನ್ನು ತೆಗೆದುಕೊಳ್ಳೋಣ. ಆಸೆಯನ್ನು ದೊಡ್ಡ ಆಸೆ, ಚಿಕ್ಕ ಆಸೆ ಎನ್ನುವ 9 ವಿಧಗಳ ಆಸೆಗಳಿರುತ್ತವೆ. ಹಾಗೆ ಕೋಪವನ್ನು ತೆಗೆದುಕೊಂಡರೆ ಮೊದಲು ದೊಡ್ಡ ಕೋಪವಿರುತ್ತದೆ. ಅದರ ನಂತರ ಪರಿಮಾಣ ಕಡಿಮೆಯಾಗುತ್ತಾ ಕೊನೆಗೆ 9ನೆಯದು ಚಿಕ್ಕದಾಗಿರುತ್ತದೆ. ಇದೇ ಪ್ರಕಾರವಾಗಿ ಮೊದಲು ಆರು ಗುಣಗಳು ಮೊದಲು ದೊಡ್ಡದಾಗಿದ್ದು ಕೊನೆಗೆ ಚಿಕ್ಕದಾಗಿ ಬದಲಾಗುತ್ತದೆ. ಉಳಿದ ಒಳ್ಳೆಯ ಆರು ಗುಣಗಳು ಪರಿಮಾಣಗಳಲ್ಲಿಯೂ ಸಹ ಮೊದಲ ಆರು ಗುಣಗಳಂತೆ ವ್ಯತ್ಯಾಸ ಇರುತ್ತದೆ. ಆದರೆ ಇಲ್ಲಿ ಗಮನಿಸಬೇಕಾದ ವಿಷಯ ಏನೆಂದರೆ! ಮೊದಲ ಗುಣಗಳು ದೊಡ್ಡ ಪರಿಮಾಣದಿಂದ ಚಿಕ್ಕದಾಗಿ ಬದಲಾಗಿ ಎರಡನೇ ಗುಂಪಿನಲ್ಲಿನ ಗುಣಗಳು ಚಿಕ್ಕ ಪರಿಮಾಣದಿಂದ ದೊಡ್ಡ ಪರಿಮಾಣದವರೆಗೂ ಬದಲಾಗಿರುವುದು ಗಮನಿಸಬೇಕಾದ ವಿಷಯ. ಉದಾಹರಣೆಗೆ ದೊಡ್ಡ ಕೋಪದಿಂದ ಚಿಕ್ಕ ಕೋಪದವರೆಗೂ ಬದಲಾದಾಗ, ಅದಕ್ಕೆ ವಿರುದ್ಧವಾದ ದಯಾ ಗುಣ ಕೋಪ ಚಿಕ್ಕದಾಗಿ ಅಂತ್ಯವಾದ ಕಡೆಯಿಂದ ಚಿಕ್ಕ ಗುಣವಾಗಿ ಪ್ರಾರಂಭವಾಗಿ ಕೊನೆಗೆ ದೊಡ್ಡದಾಗಿ ಬದಲಾಗಿರುತ್ತದೆ. ಕೋಪ ದೊಡ್ಡದರಿಂದ ಚಿಕ್ಕದರವರೆಗೂ 9 ಭಾಗಗಳು ಬದಲಾಗಿರುವಾಗ, ಅದಕ್ಕೆ ವಿರುದ್ಧವಾದ ದಯಾ ಅಲ್ಲಿಂದ ಚಿಕ್ಕದಾಗಿ ಪ್ರಾರಂಭವಾಗಿ 9ನೇ ಭಾಗ ದೊಡ್ಡದಾಗಿ ಬದಲಾಗಿರುತ್ತದೆ. ಅವು ಹೇಗಿರುವುದು ಕೆಳಗಿನ ಚಿತ್ರದಲ್ಲಿ ನೋಡಬಹುದು.

ಈ ವಿಧವಾಗಿ ಮೂರು ಗುಣ ಆವರಣಗಳಲ್ಲಿಯೂ ಒಂದೊಂದು ಗುಣಭಾಗದಲ್ಲಿ 12 ಗುಣಗಳು 9 ಭಾಗಗಳಾಗಿ ಒಟ್ಟಾರೆ 108 ಆಗುತ್ತವೆ. ಈ ಸಂಖ್ಯೆಯೆ ಕೋಟಿಗಳ ಸಂಖ್ಯೆಯಲ್ಲಿ ಪ್ರಪಂಚ ಆಯಸ್ಸಾಗಿದೆ. ಒಟ್ಟು ಪ್ರಪಂಚದಲ್ಲಿನ ಜೀವರಾಶಿಗಳೆಲ್ಲವೂ ಮೂರು ಗುಣಭಾಗಗಳಲ್ಲಿನ 108 ಗುಣಗಳಲ್ಲಿಯೇ ಸಿಲುಕಿಕೊಂಡು ಇವೆ. ಚಿಕ್ಕ ದೊಡ್ಡ 108 ಗುಣಗಳೇ ಸರ್ವಜೀವಿಗಳನ್ನು ಶರೀರಗಳಲ್ಲಿ ಬಂಧಿಸಲ್ಪಟ್ಟಿವೆ. ಆದ್ದರಿಂದಲೇ ಪೂರ್ವದಲ್ಲಿ ಹಿರಿಯರು ಮಾನವನು ಮಾಡುವ ಮಂತ್ರಸಾಧನೆಯಾಗಲಿ, ದೈವನಾಮ ಜಪವಾಗಲಿ, ಪ್ರದಕ್ಷಣೆಗಳಾಗಲಿ, ಪೂಜಿಸುವ ಪೂಜೆಗಳಾಗಲಿ, ಎಲೆಗಳಾಗಲಿ. ಜಪಮಾಲೆಯಲ್ಲಿನ




**ಗುಣಚಕ್ರ**

ಮಣಿಗಳಾಗಲಿ 108 ಸಂಖ್ಯೆ ಇಟ್ಟಿರುವುದು ಗಮನಾರ್ಹ. ಪ್ರತಿಯೊಂದು 108 ಇಟ್ಟು ಒಂದೊಂದು ಜಪವಾಗಲಿ, ಪೂಜೆ ಯಾಗಲಿ ಒಂದೊಂದು ಗುಣಕ್ಕೆಂದು 108 ಗುಣಗಳು ಗುರುತಿರುವಂತೆ ಮಾಡಿದ್ದಾರೆ. ಆ ವಿವರ ನಮ್ಮೆಲ್ಲರಿಗೂ ತಿಳಿಯದೇ ಹೋದರೂ ಪೂರ್ವದಲ್ಲಿ ಹಿರಿಯರು ಸಂಪೂರ್ಣ ಜ್ಞಾನಿಗಳಾದ್ದರಿಂದ ಅವರೆಷ್ಟೋ ಮುಂದಾಲೋಚನೆಯಿಂದ ಈ ಪದ್ಧತಿಯನ್ನು ಇಟ್ಟಿದ್ದಾರೆಂದು ಗ್ರಹಿಸಬೇಕು. ಪ್ರತಿ ಜಪಮಾಲೆಯಲ್ಲಿಯೂ 108 ಮಣಿಗಳು ಗುಣಗಳಿಗೆ ಪ್ರತಿರೂಪಗಳಾಗಿ ಇಟ್ಟು, ಇವುಗಳಲ್ಲಿಯೇ ನೀನು ಬಂಧಿ ಯಾಗಿದ್ದೀಯಾ ಎನ್ನುವಂತೆ ಮಣಿಗಳನ್ನು ದುಂಡನೆ ಆವರಣವಾಗಿ ಏರ್ಪಡಿಸಿ ಇಟ್ಟಿದ್ದಾರೆ.

ಯಾವ ಜೀವಿಯಾದರೂ ಶರೀರದ ಗುಣಚಕ್ರದಲ್ಲಿ ಮೂರು ಗುಣ ಆವರಣಗಳಲ್ಲಿ ಒಂದೇ ಸಮಯದಲ್ಲಿ ಎಂದಿಗೂ ಇರುವುದಿಲ್ಲ. ಒಂದು ಸಮಯದಲ್ಲಿ ಒಂದು ಗುಣ ಆವರಣದಲ್ಲಿಯೇ ಇರುತ್ತಾನೆ. ಆದ್ದರಿಂದ ಒಂದು ಆವರಣದಲ್ಲಿರುವ 108 ಗುಣಗಳಲ್ಲಿಯೇ ಬಂಧಿಯಾಗಿದ್ದಾನೆಂದು ಹೇಳಲಾಗುತ್ತಿದೆ.

**(13) ಶ್ಲೋ॥ 6 : ತತ್ರ ಸತ್ತ್ವಂ ನಿರ್ಮಲತ್ವಾ ತ್ಪ್ರಕಾಶಕ ಮನಾಮಯಮ್ ।**
**ಸುಖಸಂಗೇನ ಬಧ್ನಾತಿ ಜ್ಞಾನಸಂಗೇನ ಚಾನಘ! ॥**

**(ಜೀವಿಯು, ಸಾತ್ತ್ವಿಕ)**

**ಭಾವಾರ್ಥ** : ಮೂರು ಭಾಗಗಳಲ್ಲಿ ಸಾತ್ತ್ವಿಕ ಗುಣಭಾಗದಲ್ಲಿರುವ ಗುಣಗಳು ನಿರ್ಮಲತ್ವ ಪ್ರಕಾಶತ್ವವನ್ನು ಹೊಂದಿ ಪ್ರಯಾಸ ಇಲ್ಲದವವಾಗಿ, ಸುಖಗಳಲ್ಲಾಸಕ್ತಿ ಉಂಟುಮಾಡುವ ವಾಗಿದ್ದು ಜ್ಞಾನಸುಖಗಳಲ್ಲಿಯೇ ಬಂಧಿಸುತ್ತವೆ.

**ವಿವರ** : ಸಾತ್ತ್ವಿಕ ಭಾಗದಲ್ಲಿನ ಗುಣಗಳು ಸುಖಗಳಲ್ಲಿ ಆಸಕ್ತಿ ತೋರಿಸಿ ಜ್ಞಾನಸುಖಗಳಲ್ಲಿಯೇ ಬಂಧಿಸುತ್ತವೆ. ಜ್ಞಾನಸುಖ ಎಂದರೆ ಇಲ್ಲಿ ದೈವಜ್ಞಾನವೇಯೆಂದು ಅಂದುಕೊಳ್ಳಬಾರದು. ಪ್ರಪಂಚ ವಿಷಯ ಜ್ಞಾನವೆಂದು ಅರ್ಥ ಮಾಡಿಕೊಳ್ಳಬೇಕು. ಉಳಿದ ಎರಡು ಗುಣಗಳು ಅವರಿಗಿಂತ ಸಾತ್ತ್ವಿಕರು ಹೊಸ ವಿಷಯವನ್ನು ಕಲಿತುಕೊಳ್ಳುವುದರಲ್ಲಿ ಹೆಚ್ಚಾಗಿ ಲಗ್ನವಾಗಿರುತ್ತಾರೆ. ಜೀವನವೆಲ್ಲಾ ಕಲಿತುಕೊಂಡರು ತಿಳಿಯಬೇಕಾಗಿರುವ ಸಮಾಚಾರಗಳೆಷ್ಟೋ ಇವೆ. ಅಂತಹವುಗಳನ್ನು ಒಂದರ ನಂತರ ಒಂದು ಕಲಿತುಕೊಳ್ಳುವುದಕ್ಕೆ ತನ್ನ ತಿಳುವಳಿಕೆಯನ್ನೆಲ್ಲ ಉಪಯೋಗಿಸುತ್ತಿರುತ್ತಾನೆ. ತಿಳಿಯದ್ದನ್ನು ತಿಳಿದುಕೊಳ್ಳುವುದು ಜ್ಞಾನ ಎನ್ನುತ್ತೇವೆ. ತಿಳಿಯದವುಗಳನ್ನು ತಿಳಿದುಕೊಳ್ಳುವುದರಲ್ಲಿ ಸಾತ್ತ್ವಿಕರಿಗೆ ಆಸಕ್ತಿ. ಆ ಆಸಕ್ತಿಯಲ್ಲಿಯೇ ಮುಳುಗಿ ಹೊಸದನ್ನು ತಿಳಿದುಕೊಂಡು ಇನ್ನು ಹೊಸದನ್ನು ತಿಳಿದುಕೊಳ್ಳುವ ಸುಖದಲ್ಲಿಯೇ ಮುಳುಗಿರುವುದನ್ನು ಸಾತ್ತ್ವಿಕ ಜ್ಞಾನ ಎನ್ನುತ್ತಾರೆ.




ಗುಣಚಕ್ರ

**(13) ಶ್ಲೋ॥ 7 :** **ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾ ಸಂಗ ಸಮುದ್ಭವಮ್ ।**
**ತನ್ನಿಬಧ್ನಾತಿ ಕೌಂತೇಯ! ಕರ್ಮಸಂಗೇನ ದೇಹಿನಮ್ ॥**

**(ಜೀವಿಯು, ರಾಜಸ)**

**ಭಾವಾರ್ಥ :** ರಾಜಸ ಗುಣಭಾಗದಲ್ಲಿನ ಗುಣಗಳು ಪ್ರಪಂಚ ವಿಷಯಗಳಲ್ಲಿ ಪ್ರೀತಿಯನ್ನು ಉಂಟುಮಾಡುವವಾಗಿ, ಅವುಗಳಲ್ಲಿ ಆಸಕ್ತಿ ಆಸೆಯನ್ನು ಹುಟ್ಟಿಸುವವಾಗಿ, ಆ ಕೆಲಸಗಳಲ್ಲಿಯೇ ಸಿಲುಕಿಕೊಳ್ಳುವಂತೆ ಮಾಡಿ ಜೀವಾತ್ಮವನ್ನು ಬಂಧಿಸುತ್ತಿವೆ.




ಗುಣಚಕ್ರ

**(13) ಶ್ಲೋ॥ 8 :** **ತಮಸ್ತ್ವ ಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಮ್ ।**
**ಪ್ರಮಾದಾಲಸ್ಯ ನಿದ್ರಾಭಿ ಸ್ತನ್ನಿಬಧ್ನಾತಿ ಭಾರತ! ॥**

**(ಜೀವಿಯು, ತಾಮಸ)**

**ಭಾವಾರ್ಥ :** ತಾಮಸ ಗುಣ ಆವರಣದಲ್ಲಿರುವ ಗುಣಗಳು ಅಜ್ಞಾನವನ್ನು ಉಂಟು ಮಾಡುವವಾಗಿ, ಮೋಹವನ್ನು ಹುಟ್ಟಿಸುವವಾಗಿ ಇವೆಯೆಂದು ತಿಳಿಯಿರಿ. ಅಷ್ಟೇ ಅಲ್ಲದೆ ಅಪಾಯದಿಂದ ಕೂಡಿಕೊಂಡ ಸೋಮಾರಿತನ, ನಿದ್ರೆಯಲ್ಲಿಯೇ ಜೀವಾತ್ಮನನ್ನು ಬಂಧಿಸುತ್ತಿದೆ.

**(13) ಶ್ಲೋ॥ 9 :** **ಸತ್ತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ! ।**
**ಜ್ಞಾನ ಮಾವೃತ್ಯ ತು ತಮಃ ಪ್ರಮಾದೇ ಸಂಜಯತ್ಯುತ ॥**

**(ಜೀವಿಯು, ಮೂರು ಗುಣಗಳು)**



ಗುಣಚಕ್ರ

**ಭಾವಾರ್ಥ** : ಸಾತ್ತ್ವಿಕ ಗುಣಭಾಗವೊಂದರ ಗುಣಗಳು ಸುಖಗಳಲ್ಲಾಸಕ್ತಿ ತೋರಿಸಿದಾಗ, ರಾಜಸಗುಣಭಾಗದಲ್ಲಿನ ಗುಣಗಳು ಆಸೆಯನ್ನು ಕಲ್ಪಿಸಿ ಲಾಭಕ್ಕೋಸ್ಕರ ಕೆಲಸಗಳು ಮಾಡಿಸಿದಾಗ, ತಾಮಸ ಆವರಣದಲ್ಲಿನ ಗುಣಗಳು ಜ್ಞಾನವನ್ನು ಮುಚ್ಚಿಟ್ಟು ಅಪಾಯಗಳಿಂದಲೇ ಆತಂಕವನ್ನು ಕಲ್ಪಿಸುವ ಕೆಲಸಗಳಲ್ಲಿಯೇ ಆಸಕ್ತಿ ಉಂಟುಮಾಡಿಸುತ್ತಿವೆ.

**(13) ಶ್ಲೋ॥ 10 : ರಜಸ್ತಮ ಶ್ಚಾಭಿಭೂಯ ಸತ್ತ್ವಂ ಭವತಿ ಭಾರತ ।**
**ರಜಃ ಸತ್ತ್ವಂ ತಮಶ್ಚೈವ ತಮ ಸ್ಸತ್ತ್ವಂ ರಜಸ್ತಥಾ ॥**

**(ಜೀವಿಯು, ಮೂರು ಗುಣಗಳು)**

**ಭಾವಾರ್ಥ** : ಮೂರು ಗುಣಭಾಗಗಳಲ್ಲಿ ಜೀವಾತ್ಮ ಒಂದು ಸಮಯದಲ್ಲಿ ಯಾವುದೋ ಒಂದು ಭಾಗದಲ್ಲಿ ಮಾತ್ರ ಇರುತ್ತಾನೆ. ತಾಮಸ ಭಾಗದಲ್ಲಿರುವಾಗ ರಾಜಸ ಭಾಗದಲ್ಲಿ, ಸಾತ್ತ್ವಿಕ ಭಾಗದಲ್ಲಿ ಇರುವುದಿಲ್ಲ. ಹಾಗೆಯೇ ರಾಜಸ ಭಾಗದಲ್ಲಿ ಇರುವಾಗ ತಾಮಸ ಭಾಗದಲ್ಲಿ, ಸಾತ್ತ್ವಿಕದಲ್ಲಿ ಇರುವುದಿಲ್ಲ. ಸಾತ್ತ್ವಿಕ ಭಾಗದಲ್ಲಿರುವಾಗ ರಾಜಸ ಭಾಗದಲ್ಲಿ, ತಾಮಸ ಭಾಗದಲ್ಲಿರುವುದಿಲ್ಲ.

**(13) ಶ್ಲೋ॥ 11 : ಸರ್ವದ್ವಾರೇಷು ದೇಹೇಽಸ್ಮಿನ್ ಪ್ರಕಾಶ ಉಪಜಾಯತೇ ।**
**ಜ್ಞಾನಂ ಯದಾ ತದಾ ವಿದ್ಯಾತ್ ವಿವೃದ್ಧಂ ಸತ್ತ್ವಮಿತ್ಯುತ ॥**

**(ಜೀವಾತ್ಮ, ಸಾತ್ತ್ವೀಕ)**

**ಭಾವಾರ್ಥ** : ಶರೀರದಲ್ಲಿರುವ ಜೀವಿಗೆ ಅನೇಕ ಮಾರ್ಗಗಳ ಮೂಲಕ ಜ್ಞಾನ ಯಾವಾಗ ತಿಳಿಯುವುದೋ, ಆಗಲೆ ಆ ಜೀವಿಯು ಸಾತ್ತ್ವಿಕ ಗುಣಭಾಗದಲ್ಲಿದ್ದಾನೆಂದು ತಿಳಿಯಬಹುದು.

**ವಿವರ** : ಇಲ್ಲಿ **'ಸರ್ವದ್ವಾರೇಷು'** ಎನ್ನುವ ಪದಕ್ಕೆ ಅನೇಕ ದಾರಿಗಳ ಮೂಲಕ ಅಥವಾ ಅನೇಕ ದ್ವಾರಗಳ ಮೂಲಕ ಅನೇಕ ರೀತಿಗಳ ಜ್ಞಾನ ಅಭಿವೃದ್ಧಿಯಾಗುವುದೆಂದು ಅರ್ಥಮಾಡಿಕೊಳ್ಳಬೇಕು. ಹಾಗಲ್ಲದೆ ಶರೀರಕ್ಕಿರುವ ಒಂಭತ್ತುದ್ವಾರಗಳ ಮೂಲಕ ಜ್ಞಾನ ತಿಳಿಯುವುದೆಂದು ಅಂದುಕೊಳ್ಳಬಾರದು. ಅದು ಅರ್ಥವಿಲ್ಲದ ಮಾತು ಆಗುತ್ತದೆ. ಗುದ, ಗುಹ್ಯದ ಮೂಲಕ ಜ್ಞಾನ ತಿಳಿಯುತ್ತದಾ ಎಂದು ಯಾರಾದರೂ ಪ್ರಶ್ನಿಸಿದರೆ ಉತ್ತರ ಇಲ್ಲದಂತಾಗುತ್ತದೆ. ಶ್ಲೋಕದಲ್ಲಿನ ನಿಜಭಾವದ ಪ್ರಕಾರ ಅನೇಕ ವಿಧಗಳ ಜ್ಞಾನ ಅಭಿವೃದ್ಧಿ ಯಾಗುವುದೇ ಎಂದು ತಿಳಿಯಬೇಕು. ಅನೇಕ ಮಾರ್ಗಗಳ ಮೂಲಕ ಜ್ಞಾನ ತಿಳಿಯುತ್ತಾ ಬೆಳೆಯುವುದು ಸಾತ್ತ್ವಿಕ ಗುಣಭಾಗದಲ್ಲಿ ಜೀವಿಯಿರುವಾಗ ನಡೆಯುತ್ತದೆ.

**(13) ಶ್ಲೋ॥ 12 : ಲೋಭಃ ಪ್ರವೃತ್ತಿ ರಾರಮ್ಭಃ ಕರ್ಮಣಾ ಮಶಮಃ ಸ್ಪೃಹಾ ।**
**ರಜಸ್ಯೇತಾನಿ ಜಾಯನ್ತೇ ವಿವೃದ್ಧೇ ಭರತರ್ಷಭ! ॥**

**(ಜೀವಾತ್ಮ, ರಾಜಸ)**

**ಭಾವಾರ್ಥ** : ಸಂಕುಚಿತ ಸ್ವಭಾವ, ಕಾರ್ಯಗಳಲ್ಲಿ ಆಸಕ್ತಿ, ಹಣದ ಮೇಲೆ, ಚಿನ್ನದ ಮೇಲೆ ಇಷ್ಟ, ಮನಸ್ಸಿಗೆ ಅಶಾಂತಿ ಯಾವಾಗ ಉಂಟಾಗುವುದೊ ಆಗಲೇ ರಾಜಸಗುಣ ಭಾಗದಲ್ಲಿನ ಗುಣಗಳು ಕೆಲಸ ಮಾಡುತ್ತಿವೆಯೆಂದು ತಿಳಿಯಬಹುದು.

**(13) ಶ್ಲೋ॥ 13 : ಅಪ್ರಕಾಶೋಽಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ ।**
**ತಮಸ್ಯೇತಾನಿ ಜಾಯನ್ತೇ ವಿವೃದ್ಧೇ ಕುರುನಂದನ! ॥**

**(ಜೀವಾತ್ಮ, ತಾಮಸ)**

**ಭಾವಾರ್ಥ** : ಅಜ್ಞಾನ, ಸೋಮಾರಿತನ, ಕೆಟ್ಟಕೆಲಸಗಳು ಮಾಡುವುದರಲ್ಲಿಯೇ ಮನಸ್ಸು ಲಗ್ನವಾಗುವುದು ಯಾವಾಗ ಕಾಣಿಸುತ್ತದೋ, ಆಗಲೇ ಜೀವಾತ್ಮ ತಾಮಸಭಾಗದಲ್ಲಿ ಇದ್ದಾನೆಂದು, ತಾಮಸ ಗುಣಗಳು ಜೀವಾತ್ಮದ ಮೇಲೆ ಕೆಲಸ ಮಾಡುತ್ತಿವೆ ಎಂದು ತಿಳಿಯಬಹುದು.

**(13) ಶ್ಲೋ॥ 14 : ಯದಾ ಸತ್ತ್ವೇ ಪ್ರವೃದ್ಧೇ ತು ಪ್ರಳಯಂಯಾತಿ ದೇಹಭೃತ್ ।**
**ತದೋತ್ತಮವಿದಾಂ ಲೋಕಾ ನಮಲಾನ್ ಪ್ರತಿಪದ್ಯತೇ ॥**

**(ಜೀವಾತ್ಮ, ಸಾತ್ತ್ವಿಕ )**

**ಭಾವಾರ್ಥ** : ದೇಹಧಾರಿಯಾದ ಜೀವಾತ್ಮ ಸತ್ತ್ವ ಗುಣಭಾಗದಲ್ಲಿರುವಾಗ ಮರಣಿಸಿದರೆ, ಅವನು ಉತ್ತಮ ಜ್ಞಾನವಂತರು ಹೊಂದುವ ಪರಿಶುದ್ಧವಾದ ಜನ್ಮವನ್ನು ಪಡೆಯುತ್ತಾನೆ.

**(13) ಶ್ಲೋ॥ 15 : ರಜಸಿ ಪ್ರಳಯಂ ಗತ್ವಾ ಕರ್ಮಸಂಗಿಷು ಜಾಯತೇ ।**
**ತಥಾ ಪ್ರಲೀನ ಸ್ತಮಸಿ ಮೂಢಯೋನಿಷು ಜಾಯತೇ ॥**
**(ಜೀವಾತ್ಮ,ರಾಜಸ,ತಾಮಸ)**

**ಭಾವಾರ್ಥ** : ರಾಜಸ ಭಾಗದಲ್ಲಿ ಜೀವಾತ್ಮನಿರುವಾಗ ಮರಣಿಸಿದ ಪಕ್ಷದಲ್ಲಿ ಕರ್ಮಗಳಿಂದ ಕೂಡಿದ ಜನ್ಮಗಳೇ ಬರುತ್ತವೆ. ತಾಮಸದಲ್ಲಿದ್ದು ಮರಣಿಸಿದವನಿಗೆ ಮೂಢ ಯೋನಿಗಳಲ್ಲಿ ಜನ್ಮ ಉಂಟಾಗುತ್ತದೆ.

**(13) ಶ್ಲೋ॥ 16 : ಕರ್ಮಣ ಸ್ಸುಕೃತ ಸ್ಯಾಽಹು ಸ್ಸಾತ್ತ್ವಿಕಂ ನಿರ್ಮಲಂ ಫಲಮ್ ।**
**ರಜಸ ಸ್ತು ಫಲಂ ದುಃಖ ಮಜ್ಞಾನಂ ತಮಸಃ ಫಲಮ್ ॥**
**(ಜೀವಿಯು, ಮೂರು ಗುಣಗಳು)**

**ಭಾವಾರ್ಥ** : ಸಾತ್ತ್ವಿಕ ಗುಣಭಾಗದಲ್ಲಿರುವ ಜೀವಿಗೆ ಪುಣ್ಯಕಾರ್ಯಗಳು ನಿರ್ಮಲವಾದ ಫಲಿತಗಳು ಸಿಗುತ್ತವೆ. ರಾಜಸ ಭಾಗದಲ್ಲಿರುವ ಜೀವಿಗೆ ದುಃಖ ಉಂಟಾಗುತ್ತದೆ. ತಾಮಸದಲ್ಲಿ ಅಜ್ಞಾನವೇ ಜೀವಿಗೆ ಉಂಟಾಗುತ್ತದೆ.

**(13) ಶ್ಲೋ॥ 17 : ಸತ್ತ್ವಾತ್ಸಂ ಜಾಯತೇ ಜ್ಞಾನಂ ರಜಸೋ ಲೋಭ ಏವಚ ।**
**ಪ್ರಮಾದಮೋಹೌ ತಮಸೋ ಭವತೋಽಜ್ಞಾನ ಮೇವ ಚ ॥**
**(ಜೀವಿಯು, ಮೂರು ಗುಣಗಳು)**

**ಭಾವಾರ್ಥ** : ಸತ್ತ್ವಗುಣ ಆವರಣದಲ್ಲಿ ಜೀವಿಗೆ ಜ್ಞಾನ ಉಂಟಾಗುತ್ತದೆ. ರಾಜಸ ಭಾಗದಲ್ಲಿ ಇತರರ ಒಡವೆ ನನ್ನದಾಗಬೇಕೆಂಬ ಆಕಾಂಕ್ಷೆ ಏರ್ಪಡುತ್ತಿರುತ್ತದೆ. ತಾಮಸ ಭಾಗದಲ್ಲಿ ತನಗೆ ಇಷ್ಟ ನಷ್ಟ ಕೈಗೂಡಿಸಿಕೊಳ್ಳುವುದು, ಭ್ರಾಂತಿ ಅಜ್ಞಾನ ಕೈಗೂಡುತ್ತದೆ.

**(13) ಶ್ಲೋ॥ 18 : ಊರ್ಧ್ವಂ ಗಚ್ಛನ್ತಿ ಸತ್ತ್ವಸ್ಥಾ ಮಧ್ಯೇ ತಿಷ್ಠನ್ತಿ ರಾಜಸಾಃ ।**
**ಜಘನ್ಯಗುಣವೃತ್ತಿಸ್ಥಾಃ ಅಧೋ ಗಚ್ಛನ್ತಿ ತಾಮಸಾಃ ।**
**(ಜೀವಿಯು, ಮೂರು ಗುಣಗಳು)**

**ಭಾವಾರ್ಥ** : ಸಾತ್ತ್ವಿಕರಿಗೆ ಉತ್ತಮವಾದ ಜನ್ಮಗಳು, ರಾಜಸರಿಗೆ ಮಧ್ಯಮವಾದ ಜನ್ಮಗಳು, ತಾಮಸರಿಗೆ ನೀಚವಾದ ಜನ್ಮಗಳು ಉಂಟಾಗುತ್ತವೆ.

**(13) ಶ್ಲೋ॥ 19 : ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾಽನುಪಶ್ಯತಿ ।**
**ಗುಣೇಭ್ಯ ಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ ॥**
**(ಜೀವಿಯು, ಮೂರು ಗುಣಗಳು)**

**ಭಾವಾರ್ಥ** : ಸರ್ವಕಾರ್ಯಗಳಿಗೆ ಗುಣಗಳೇ ಕರ್ತರೆಂದು ಯಾರು ತಿಳಿದುಕೊಳ್ಳುತ್ತಾನೋ, ಆ ಗುಣಗಳು ಬೇರೆ ತಾನು ಬೇರೆ ಎಂದು ಅವನು ತಿಳಿದುಕೊಂಡು ನನ್ನ ಸ್ಥಾನವಾದ ಪರಮಪದವಿಯನ್ನು ಪಡೆಯುತ್ತಿದ್ದಾನೆ.

**(13) ಶ್ಲೋ॥ 20 : ಗುಣಾನೇತಾನತೀತ್ಯ ತ್ರೀನ್‌ದೇಹೀದೇಹಸಮುದ್ಭವಾನ್ ।**
**ಜನ್ಮ ಮೃತ್ಯು ಜರಾದುಃಖೈರ್ವಿಮುಕ್ತೋಽಮೃತಮಶ್ನುತೇ ॥**
**(ಜೀವಿಯು, ಮೂರು ಗುಣಗಳು)**

**ಭಾವಾರ್ಥ** : ದೇಹದಲ್ಲಿರುವ ಜೀವಾತ್ಮ ದೇಹದಲ್ಲಿರುವ ಗುಣಗಳನ್ನು ತಿಳಿದುಕೊಂಡು, ಜನ್ಮ ಮೃತ್ಯುಜರಾ ದುಃಖಗಳನ್ನು ಬಿಟ್ಟವನಾಗಿ, ಮೃತವಿಲ್ಲದ ಮೋಕ್ಷವನ್ನು ಪಡೆಯುತ್ತಿದ್ದಾನೆ.

**ಅರ್ಜುನನು ಹೀಗೆ ಕೇಳುತ್ತಾನೆ :–**

**(13) ಶ್ಲೋ॥ 21 : ಕೈರ್ ಲಿಂಗೈಸ್ತ್ರೀನ್ ಗುಣಾನೇತಾನತೀತೋ ಭವತಿಪ್ರಭೋ! ।**
**ಕಿ ಮಾಚಾರಃ ಕಥಂ ಚೈತಾಂ ಸ್ತ್ರೀನ್ ಗುಣಾನತಿವರ್ತತೇ ॥**
**(ಯೋಗಿ)**

**ಭಾವಾರ್ಥ** : ಓ ಕೃಷ್ಣಾ! ಈ ತ್ರಿಗುಣ ಭಾಗದಲ್ಲಿರುವ ಗುಣಗಳೆಲ್ಲವನ್ನೂ ಅತಿಕ್ರಮಿಸಿದವನ ಆಚಾರ ಹೇಗಿರುತ್ತದೆ? ಅವನು ತ್ರಿಗುಣಗಳನ್ನು ಹೇಗೆ ಅತಿಕ್ರಮಿಸಿ ಆಚರಿಸುತ್ತಾನೆ?

**ಶ್ರೀ ಭಗವಂತನು ಹೀಗೆ ಹೇಳುತ್ತಾನೆ :–**

**(13) ಶ್ಲೋ॥ 22 : ಪ್ರಕಾಶಂ ಚ ಪ್ರವೃತ್ತಿಂಚ ಮೋಹಮೇವ ಚ ಪಾಣ್ಡವ! ।**
**ನ ದ್ವೇಷ್ಟಿ ಸಮ್ಪ್ರವೃತ್ತಾನಿ ನ ನಿವೃತ್ತಾನಿ ಕಾಂಕ್ಷತಿ ॥**
**(ಯೋಗಿ)**

**ಭಾವಾರ್ಥ** : ತೇಜಸ್ಸಾಗಿ ನಡೆಯುವ ಕಾರ್ಯಗಳನ್ನು ತನ್ನವೆಂದು ತಿಳಿದುಕೊಳ್ಳದವನು, ತನಗೆ ಸಂಪ್ರಾಪ್ತಿಯಾದವುಗಳ ಬಗ್ಗೆ ದ್ವೇಷ ಇಲ್ಲದವನು, ತನಗೆ ದೊರೆತವುಗಳಲ್ಲಿ ಕಾಂಕ್ಷೆಯಿಲ್ಲದವನು.

**(13) ಶ್ಲೋ॥ 23 : ಉದಾಸೀನ ವದಾಸೀನೋ ಗುಣೈರ್ಯೋನ ವಿಚಾಲ್ಯತೇ ।**
**ಗುಣಾವರ್ತನ್ತ ಇತ್ಯೇವ ಯೋಽವತಿಷ್ಠತಿ ನೇಂಗತೇ ॥**

**(ಯೋಗಿ)**

**ಭಾವಾರ್ಥ** : ಸರ್ವ ವಿಷಯಗಳಲ್ಲಿ ತಟಸ್ಥವಾಗಿ ಉದಾಸೀನನಾಗಿದ್ದು ಯಾರು ಗುಣಗಳಿಂದ ಚಲಿಸುವುದಿಲ್ಲವೋ, ಯಾರು ಪ್ರತಿಯೊಂದು ಗುಣಗಳ ಪ್ರವರ್ತನೆಯೇ ಎಂದು ತಿಳಿದು ಅವುಗಳಿಗೆ ಅಚಂಚಲನಾಗಿ ಬುದ್ಧಿ ನಿಶ್ಚಲತೆ ಹೊಂದಿರುತ್ತಾನೋ.

**(13) ಶ್ಲೋ॥ 24 : ಸಮದುಃಖಸುಖ ಸ್ಸ್ವಸ್ಥ ಸ್ಸಮಲೋಷ್ಟಾಶ್ಮ ಕಾಂಚನಃ ।**
**ತುಲ್ಯಪ್ರಿಯಾಪ್ರಿಯೋ ಧೀರ ಸ್ತುಲ್ಯನಿನ್ದಾತ್ಮಸಂಸ್ತುತಿಃ ॥**

**(ಯೋಗಿ)**

**ಭಾವಾರ್ಥ** : ಸುಖದುಃಖಗಳನ್ನು ಯಾರು ಸಮವಾಗಿ ನೋಡುತ್ತಾನೋ, ಚಿನ್ನ ಮಣ್ಣು ಕಲ್ಲಿಗೆ ಯಾರು ಸಮವಾಗಿ ಬೆಲೆಕೊಡುತ್ತಾನೋ, ಪ್ರಿತಿ ಅಪ್ರೀತಿ ಸ್ತುತಿ ನಿಂದನೆಗಳಲ್ಲಿ ಯಾರು ಸ್ಥಿರ ಬುದ್ಧಿ ಇರುವವನಾ,

**(13) ಶ್ಲೋ॥ 25 : ಮಾನಾವಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿಪಕ್ಷಯೋಃ ।**
**ಸರ್ವಾರಂಭ ಪರಿತ್ಯಾಗೀ ಗುಣಾತೀತ ಸ್ಸ ಉಚ್ಯತೇ ॥**

**(ಯೋಗಿ)**

**ಭಾವಾರ್ಥ** : ಯಾರು ಮಾನಾಪಮಾನಗಳಲ್ಲಿ ಸಮಬುದ್ಧಿಯುಳ್ಳವನೊ, ಮಿತ್ರ ಶತ್ರುಗಳಲ್ಲಿ ಸಮಬುದ್ಧಿ ಇರುವವನೋ, ಕಾಮ್ಯ ಕರ್ಮಗಳನ್ನೆಲ್ಲಾ ಪರಿತ್ಯಜಿಸಿದವನು ಯಾರೋ ಅಂತಹವನನ್ನು ಗುಣಾತೀತನೆಂದು ಹೇಳಬಹುದು.

**(13) ಶ್ಲೋ॥ 26 : ಮಾಂಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ ।**
**ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ ॥**

**(ಸಾಕಾರ, ನಿರಾಕಾರ)**

**ಭಾವಾರ್ಥ** : ವ್ಯಭಿಚರಿಸದ ಮನಸ್ಸಿನಿಂದ ಪರಮ ಭಕ್ತಿಯಿಂದ ಯಾರು ನನ್ನನ್ನು ಸೇವಿಸುತ್ತಿದ್ದಾನೋ, ಅವನು ತ್ರಿಗುಣಗಳನ್ನೆಲ್ಲಾ ಅತಿಕ್ರಮಿಸಿ ಪರಮಾತ್ಮನಲ್ಲಿ ಐಕ್ಯವಾಗುವುದಕ್ಕೆ ಅರ್ಹನಾಗುತ್ತಾನೆ.

**(13) ಶ್ಲೋ॥ 27 : ಬ್ರಹ್ಮಣೋಹಿ ಪ್ರತಿಷ್ಠಾಽಹ ಮಮೃತ ಸ್ಯಾವ್ಯಯಸ್ಯ ಚ ।**
**ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈ ಕಾನ್ತಿಕಸ್ಯ ಚ ॥**

**(ಸಾಕಾರ, ನಿರಾಕಾರ)**

**ಭಾವಾರ್ಥ** : ನಿತ್ಯನು ಅವ್ಯಯನಾದ ನಿರ್ಮಲಾತ್ಮ, ಶಾಶ್ವತ ಐಶ್ವರ್ಯ ಧರ್ಮವಾದ ಪರಮಪದ, ಜ್ಞಾನಿಗಳು ಪಡೆಯುವ ಮೋಕ್ಷಪದವಿ ಲಭಿಸಬೇಕೆಂದರೆ ನನ್ನನ್ನು ಆಶ್ರಯಿಸಬೇಕಾದ್ದೇ.

**ವಿವರ** : ಈ ಕೊನೆಯ ಎರಡು ಶ್ಲೋಕಗಳಲ್ಲಿಯೂ ನಿರಾಕಾರವಾದ ಪರಮಾತ್ಮನನ್ನು ಹೊಂದುವುದಕ್ಕೆ ಸಾಕಾರ ಪರಮಾತ್ಮನನ್ನು ಆಶ್ರಯಿಸಬೇಕಾಗಿದೆ ಎಂದು, ಸಾಕಾರವನ್ನು ಭಕ್ತಿ ಯೋಗದಿಂದ ಸೇವಿಸಬೇಕೇಂಬ ಭಾವವನ್ನು ಪ್ರಕಟಿಸಿದ್ದಾರೆ. ಸಾಕಾರ ಪರಮಾತ್ಮ ಪ್ರಸ್ತುತ ಇಲ್ಲದಿದ್ದರು ಆತನು ಸಾಕಾರವಾಗಿರುವಾಗ ಹೇಳಿದ ಜ್ಞಾನವನ್ನು ಆಶ್ರಯಿಸುವು ದರಿಂದ ನಿರಾಕಾರ ಪರಮಾತ್ಮನನ್ನು ಹೊಂದಬಹುದು. ಪರಮಾತ್ಮ ಭಗವಂತನಾಗಿರುವಾಗ ಹೇಳಿದ ಜ್ಞಾನವನ್ನು ಬಿಟ್ಟು ಅನ್ಯದೇವತೆಗಳ ಮಹಿಮೆಗಳನ್ನೋ, ಪುರಾಣ ಮಹಿಮೆಗಳನ್ನೋ ಆಶ್ರಯಿಸಿದರೆ, ಯಾರು ಎಂದಿಗೂ ಮೋಕ್ಷ ಹೊಂದಲಾರರು.

ಇಲ್ಲಿಗೆ ಗುಣತ್ರಯ ವಿಭಾಗಯೋಗವೆಂಬ ಈ ಅಧ್ಯಾಯ ಮುಕ್ತಾಯವಾಗಿದೆ. ಈ ಅಧ್ಯಾಯದಲ್ಲಿನ ಶ್ಲೋಕಗಳ ವಿವರ ಕೆಳಗೆ ಇದೆ.

| | | | |
|---|---|---|---|
| 1. | ಜ್ಞಾನ | – | 2 |
| 2. | ಪ್ರಕೃತಿ, ಪರಮಾತ್ಮ | – | 2 |
| 3. | ಜೀವಿಯು, ಮೂರು ಗುಣಗಳು | – | 8 |
| 4. | ಜೀವಿಯು, ಸಾತ್ತ್ವಿಕ | – | 3 |
| 5. | ಜೀವಿಯು, ರಾಜಸ | – | 2 |
| 6. | ಜೀವಿಯು, ತಾಮಸ | – | 2 |
| 7. | ಜೀವಿಯು, ರಾಜಸ, ತಾಮಸ | – | 1 |
| 8 | ಕರ್ಮಯೋಗ | – | 5 |
| 9 | ಸಾಕಾರ, ನಿರಾಕಾರ | – | 2 |
| | **ಒಟ್ಟು ಶ್ಲೋಕಗಳು** | – | **27** |

ಬ್ರಹ್ಮ, ಕಾಲ, ಕರ್ಮ, ಗುಣಚಕ್ರದಲ್ಲಿನ ಕರ್ಮಚಕ್ರವನ್ನು ಚಿತ್ರದಲ್ಲಿ ನೋಡಬಹುದು.

ಆತ್ಮ
1
ಪುಣ್ಯ
ಶರೀರ ಸಂಬಂಧ
ಅವಯವಗಳು
2
ಪಾಪ
ಪುಣ್ಯ
ವಾಕ್ಕು
ಆಯುಷ್ಯ
3
ಪಾಪ
ಧನ ಸಂಬಂಧ
ತಂದೆ ಸಂಬಂಧ
4
ಪಾಪ
ಪುಣ್ಯ
ಸ್ಥಿರಾಸ್ತಿಗಳು
5
ಪುಣ್ಯ
6
ಪಾಪ
ಪುಣ್ಯ
ಶತ್ರು
ಋಣ ರೋಗ
7
ಪಾಪ
ದಾಂಪತ್ಯ
8
ಪಾಪ
ಪುಣ್ಯ
9
ಪುಣ್ಯ
10
ಪಾಪ
ಪುಣ್ಯ
11
ಪಾಪ
12
ಪಾಪ
ಪುಣ್ಯ

**ಕರ್ಮಚಕ್ರ**





## ಹದಿನಾಲ್ಕನೆಯ ಅಧ್ಯಾಯ

# ಪುರುಷೋತ್ತಮ ಪ್ರಾಪ್ತಿ ಯೋಗ

**ಶ್ರೀ ಭಗವಂತನು ಹೀಗೆ ಹೇಳಿದನು :–**

**(14) ಶ್ಲೋ॥ 1 : ಊರ್ಧ್ವಮೂಲಮಧ ಶ್ಶಾಖಮಶ್ವತ್ಥಂ ಪ್ರಾಹುರವ್ಯಯಮ್ ।**
**ಛನ್ದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥**
**(ಪ್ರಕೃತಿ, ಪುರುಷನು)**

**ಭಾವಾರ್ಥ :** ಮೇಲೆ ಬೇರುಗಳು ಕೆಳಗೆ ಕೊಂಬೆಗಳುಳ್ಳ ಅಶ್ವರ್ಥವೆನ್ನುವ ವೃಕ್ಷವು ಅವ್ಯಯವಾದುದೆಂದು, ವೇದಗಳು ಎಲೆಗಳಾಗಿ ಇವೆಯೆಂದು ಯಾರು ತಿಳಿಯುತ್ತಾನೋ ಅವನು ವೇದಗಳು ತಿಳಿದವನೆಂದು ಹೇಳಬಹುದು.

**ವಿವರ :** ಒಂದು ವೃಕ್ಷಕ್ಕೆ ಬೇರುಗಳು, ಕಾಂಡ, ಕೊಂಬೆಗಳು, ಎಲೆಗಳು, ಫಲಗಳು ಇರುವುದು ಸಹಜ. ಇಲ್ಲಿ ನಾವು ಹೇಳಿಕೊಳ್ಳುವ ಅಶ್ವತ್ಥ ಎನ್ನುವುದಕ್ಕೆ ಬೇರುಗಳು (ಮೂಲ), ಕೊಂಬೆಗಳು (ಶಾಖೆಗಳು), ಎಲೆಗಳು, ಫಲಗಳು ಇವೆ ಆದ್ದರಿಂದ ವೃಕ್ಷದಂತಹ ಹೋಲಿಕೆಗಳಿವೆ. ಆದ ಕಾರಣ ಒಂದು ವಿಧವಾಗಿ ಅರ್ಥವಾಗುವುದಕ್ಕೆ ವೃಕ್ಷವೆಂದು ಹೇಳಿಕೊಳ್ಳಬಹುದು. ವಾಸ್ತವಕ್ಕೆ ಇದು ವೃಕ್ಷ ಅಲ್ಲವೆಂದು ತಿಳಿಯಬೇಕು. ಸಾಧಾರಣವಾಗಿ ವೃಕ್ಷಕ್ಕೆ ಬೇರುಗಳು ಕೆಳಗೆ ಭೂಮಿಯಲ್ಲಿ, ಕೊಂಬೆಗಳು ಮೇಲೆ ಇದ್ದು ಕೊಂಬೆಗಳಿಗೆ ಎಲೆಗಳು ಅಂದವಾಗಿ ಕಾಣಿಸುತ್ತಿರುತ್ತವೆ. ಹಾಗೆಯೇ ವೃಕ್ಷ ಬೆಳೆಯುವುದಕ್ಕೆ ಭೂಮಿಯಿಂದ ಬೇರುಗಳು ಆಹಾರವನ್ನು ಗ್ರಹಿಸಿ ಇಡುತ್ತಿವೆ. ಬೇರುಗಳಿಂದ ಗ್ರಹಿಸಿದ ಆಹಾರವನ್ನು ಎಲೆಗಳು ಉಪಯೋಗಿಸಿಕೊಂಡು ಗಿಡ ಬೆಳೆಯುತ್ತಾ ಮೇಲಕ್ಕು ಕೆಳಗಿನ ದಿಕ್ಕುಗಳಿಗೆ ಕೊಂಬೆಗಳು ಹರಡಿಕೊಂಡಿರುವುದು ನಾವು ನೋಡುತ್ತಲೇ ಇದ್ದೇವೆ. ಆದರೆ ಇಲ್ಲಿ ಹೇಳುವ ಅಶ್ವರ್ಥ ಎನ್ನುವ ವೃಕ್ಷಕ್ಕೆ ಮೇಲೆ ಬೇರುಗಳು, ಕೆಳಗೆ ಕೊಂಬೆಗಳು ಇರುವುದು ವಿಚಿತ್ರ. ಅಶ್ವರ್ಥ ಎನ್ನುವ ವೃಕ್ಷವು ಬೆಳೆಯುವುದಕ್ಕೆ ಬೇಕಾದ ಸದುಪಾಯಗಳೆಲ್ಲವೂ ಮೇಲಿರುವ ಮೂಲದಿಂದ ಲಭಿಸುತ್ತವೆ. ಎಲೆಗಳು, ಕಾಯಿಗಳಿಗೆ ಬೇಕಾದ ಆಹಾರ ಮೇಲಿರುವ ಮೂಲದಿಂದ ಲಭಿಸುತ್ತಾ ಗಿಡ ಬೆಳೆಯುತ್ತಾ ಹೋಗಿ ದೃಢವಾಗಿ ವ್ಯಾಪಿಸಿಕೊಂಡಿದೆ. ಗಿಡ ನಿರ್ಮಾಣದಲ್ಲಿಯೇ ವಿಚಿತ್ರವಾಗಿದ್ದು, ಫಲಗಳು ಬಿಡುವುದರಲ್ಲಿಯೂ ಸಹ ಸಾಧಾರಣ ಮರಕ್ಕಿಂತ ಮತ್ತಷ್ಟು ವಿಚಿತ್ರವಾಗಿರುತ್ತದೆ. ಸಾಧಾರಣವಾಗಿ ಮಾವಿನ ಮರಕ್ಕೆ ಮಾವಿನ ಕಾಯಿಗಳು ಬಿಡುವುದು ಸಹಜ. ಹಾಗೆಯೇ ಯಾವ ಜಾತಿ ಮರಕ್ಕೆ ಆ ಜಾತಿ ಕಾಯಿಗಳು

ಬಿಡುವುದು ಎಲ್ಲರಿಗೂ ತಿಳಿದ ವಿಷಯವೇ. ಆದರೆ ಅಶ್ವರ್ಥವೃಕ್ಷ ಎನ್ನುವುದಕ್ಕೆ ಒಂದು ವಿಧವಾದ ಕಾಯಿಗಳು ಬಿಡುವುದಿಲ್ಲ. ಈ ಮರಕ್ಕೆ ಅನೇಕ ವಿಧಗಳಾಗಿ ಫಲಗಳು ಬಿಡುತ್ತಿವೆ. ಈ ಅಶ್ವರ್ಥವೃಕ್ಷದಲ್ಲಿ ಆಕಾರದಲ್ಲಿಯೇ ಅಲ್ಲದೆ ಕಾಯಿಗಳಲ್ಲಿಯೂ ವಿಚಿತ್ರವಾಗಿರುವಾಗ, ಕಾಯಿಗಳಲ್ಲಿಯೇ ಅಲ್ಲದೆ ಎಲೆಗಳಲ್ಲಿಯೂ ವಿಚಿತ್ರವಾಗಿಯೇ ಇದೆಯೆಂದು ಹೇಳಬಹುದು. ಅದೇನೆಂದರೆ ಇದರ ಎಲೆಗಳು ವೇದಗಳಿಗೆ ಪ್ರತಿರೂಪಗಳು. ವೇದಗಳೇ ಎಲೆಗಳಾಗಿರುವ ಈ ಮರವನ್ನು ತಿಳಿದವನು ನಿಜವಾಗಲು ವೇದಗಳು ತಿಳಿದವನೆಂದು ಹೇಳಬಹುದು. ಇನ್ನೂ ಕೆಳಗಿನ ಶ್ಲೋಕದಲ್ಲಿ ಏನೆನ್ನುತ್ತಿದ್ದಾನೆಂದರೆ!



**ಅಶ್ವರ್ಥ ವೃಕ್ಷ**

**(14) ಶ್ಲೋ॥ 2 : ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯಶಾಖಾ ಗುಣಪ್ರವೃದ್ಧಾ ವಿಷಯಪ್ರವಾಲಾಃ ।**
**ಅಧಶ್ಚ ಮೂಲಾ ನ್ಯನುಸನ್ತ ತಾನಿ ಕರ್ಮಾನುಬನ್ಧೀನಿ ಮನುಷ್ಯಲೋಕೇ ॥**
**(ಪ್ರಕೃತಿ, ಪುರುಷ)**

**ಭಾವಾರ್ಥ** : ಆ ಅಶ್ವರ್ಥವೆಂಬ ವೃಕ್ಷವೊಂದರ ಕೊಂಬೆಗಳು ಗುಣ ವಿಷಯಗಳಿಂದ ವೃದ್ಧಿ ಆಗಿರುವವುಗಳಾಗಿ ಅನೇಕ ದಿಕ್ಕುಗಳಿಗೆ ವ್ಯಾಪಿಸಿವೆ. ಮತ್ತು ಅದರ ಬೇರುಗಳು ವಿಸ್ತರಿಸಿದವಾಗಿ ಮನುಷ್ಯ ಲೋಕದಲ್ಲಿ ವ್ಯಾಪಿಸಿವೆ.

**ವಿವರ** : ಈ ವೃಕ್ಷ ಅನೇಕ ವಿಧಗಳಾಗಿ ಪ್ರತ್ಯೇಕತೆಗಳು ಹೊಂದಿಯೆಂದುಕೊಂಡಿದ್ದೇವೆ ಅಲ್ಲವೆ! ಅವುಗಳಲ್ಲಿ ಇದು ಬೆಳೆಯುವುದಕ್ಕೆ ಆಹಾರ ಒಂದರ ಪ್ರತ್ಯೇಕತೆಯಿಂದ ಇದೆ. ಸಾಧಾರಣ ವೃಕ್ಷಕ್ಕೆ ಭೂಮಿಯಲ್ಲಿ ನತ್ರಜನಿ, ಭಾಸ್ವರ ಮೊದಲಾದ ಪದಾರ್ಥಗಳು ಆಹಾರವಾಗಿರುವಾಗ! ಈ ಮರಕ್ಕೆ ಗುಣ ವಿಷಯಗಳೇ ಆಹಾರಗಳಾಗಿವೆ. ಗುಣಗಳಿಂದ ಬೆಳೆದ ಕೊಂಬೆಗಳು, ಎಲೆಗಳು, ಆಹಾರ ಬಲವನ್ನೇ ಪ್ರದರ್ಶಿಸಿಕೊಳ್ಳುತ್ತಾ ಕಾಣಿಸುತ್ತಿವೆ. ಇಲ್ಲಿ ಬಹಳಜನರಿಗೆ ಕೆಲವು ಪ್ರಶ್ನೆಗಳು ಬರಬಹುದು. ಅವು ಯಾವುವು ಎಂದರೆ! ಗುಣಗಳೇ ಆಹಾರವಾಗಿರುವ ಮರ ಎಲ್ಲಿದೆ? ಅದರ ಎಲೆಗಳನ್ನು ಗಿಡಗಳನ್ನು ಎಲ್ಲಿಯೂ ನೋಡಲಿಲ್ಲವೆ! ನೀವು ನೋಡಿದ್ದೀರಾ? ವೇದಗಳೇ ಎಲೆಗಳಾಗಿ, ಗುಣ ವಿಷಯಗಳೇ ಆಹಾರವಾಗಿರುವ ಮರ ಭೂಮಿ ಮೇಲೆ ಇದೆಯಾ? ಇದ್ದರೆ ಎಲ್ಲಿದೆ? ಈ ವಿಧದ ಪ್ರಶ್ನೆಗಳಿಗೆ ಉತ್ತರಗಳು ನೋಡೋಣ!

ಈ ಶ್ಲೋಕದ ಕೊನೆಯಲ್ಲಿ ಮನುಷ್ಯಲೋಕೇ ಎಂಬ ಪದ ಬಳಸಲಾಗಿದೆ, ಆದ್ದರಿಂದ ಈ ಮರ ಮನುಷ್ಯರಿಗೆ ಸಂಬಂಧಿಸಿದೆ ಎಂದು ತಿಳಿಯುತ್ತಿದೆ. ಆ ದೃಷ್ಟಿಯಿಂದ ನೋಡಿದರು ಗುಣಗಳ ವಿಷಯಗಳು ಮನುಷ್ಯರಲ್ಲಿಯೇ ಇವೆ. ಆದುದರಿಂದ ಈ ಮರ ತಪ್ಪದೇ ಮನುಷ್ಯನಲ್ಲಿಯೇ ಅಡಗಿದೆಯೆಂದು ಹೇಳಬಹುದು. ಮನುಷ್ಯನಲ್ಲಿ ಸೂಕ್ಷ್ಮವಾಗಿ ಅಡಗಿರುವ ಅಶ್ವರ್ಥವೃಕ್ಷ ಎನ್ನುವುದನ್ನು ಪರಿಶೀಲಿಸಿ ನೋಡಿದರು ಮನುಷ್ಯನ ತಲೆ ಯಲ್ಲಿಯೇ ಮೂಲ, ಕೆಳಗೆ ಶರೀರವೆಲ್ಲ ಮರವಾಗಿ ವಿಸ್ತರಿಸಿದೆ ಎಂದು ತಿಳಿಯುತ್ತಿದೆ. ಒಬ್ಬ ಮಾನವ ಶರೀರವನ್ನು ಒಂದು ವೃಕ್ಷವಾಗಿ ಹೇಳಬಹುದು. ತಲೆಯಲ್ಲಿನ ಕರ್ಮ, ಕಾಲ, ಗುಣಚಕ್ರಗಳು ಮೂಲವಾಗಿರುವಾಗ, ಶರೀರವೆಲ್ಲ ವಿಸ್ತರಿಸಿದ ನಾಡಿಗಳು ಕೊಂಬೆಗಳಾಗಿದ್ದು, ಜ್ಞಾನೇಂದ್ರಿಯಗಳು ಎಲೆಗಳಾಗಿ, ಕರ್ಮೇಂದ್ರಿಯಗಳು ಕಾಯಿಗಳಾಗಿವೆ ಯೆಂದು ಗ್ರಹಿಸಬೇಕು.

ಮಾನವನ ಶಿರಸ್ಸಿನಲ್ಲಿ ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳೆಂಬ ನಾಲ್ಕುಚಕ್ರಗಳ ಜೋಡಣೆ ಬ್ರಹ್ಮನಾಡಿಯನ್ನು ಕೇಂದ್ರವಾಗಿ ಮಾಡಿಕೊಂಡಿದೆ. ಕಾಲ ಕರ್ಮ ಗುಣಚಕ್ರಗಳಲ್ಲಿ ಮಾನವನ ಆಯಸ್ಸು, ಜೀವನದಲ್ಲಿ ಮಾಡಬೇಕಾದ ಕೆಲಸಗಳು, ಕೆಲಸಗಳಿಗೆ ಸಂಬಂಧಿಸಿದ ಗುಣಗಳು ಎಲ್ಲವೂ ಅಡಗಿವೆ. ಮಾನವನ ಜೀವನಕ್ಕೆ ಸಂಬಂಧಿಸಿರುವವೆಲ್ಲವೂ ಅಲ್ಲಿ (ಶಿರಸ್ಸಿನಲ್ಲಿ) ಜೋಡಿಸಿರುವುದರಿಂದ ಊರ್ಧ್ವಮೂಲ ಎಂದಿದ್ದಾರೆ. ಜೀವನಕ್ಕೆ ಮೂಲವಾದುದು ಎಲ್ಲಾ ಶರೀರದ ಮೇಲ್ಭಾಗದ ಶಿರಸ್ಸಿನಲ್ಲಿ ಇರುವುದರಿಂದ ಮೇಲೆ ಮೂಲವೆನ್ನುವುದು ವಾಸ್ತವವೇ. ಮೇಲೆ ಇರುವುದೇನೋ ಅದರ ಕಾರಣದಿಂದಲೇ ಕೆಳಗಿನ ಶರೀರವೆಲ್ಲವೂ ಕದಲಿ ಕೆಲಸ ಮಾಡುತ್ತಿದೆ. ಒಂದು ಕೆಲಸ ಯಾವಾಗ ನಡೆಯಬೇಕೆನ್ನುವುದು ಕಾಲಚಕ್ರದಲ್ಲಿನ ಕಾಲ, ಹೇಗೆ ನಡೆಯಬೇಕೆಂಬ ವಿಧಾನವನ್ನು ಕರ್ಮಚಕ್ರದಲ್ಲಿನ ಕರ್ಮ, ಯಾವಗುಣದಿಂದ ನಡೆಯಬೇಕೆನ್ನುವುದನ್ನು ಗುಣಚಕ್ರದಲ್ಲಿನ ಗುಣಗಳು ಸೂಚಿಸುತ್ತಿವೆ. ಮೂರು ಚಕ್ರಗಳನ್ನು ಅನುಸರಿಸಿ ಶರೀರಕ್ಕಿರುವ ಅವಯವಗಳ ಮೂಲಕ ನಡೆಯುವ ಕೆಲಸಗಳಿಂದ ಹೊಸ ಕರ್ಮ ಹುಟ್ಟುತ್ತಿದೆ. ಆದುದರಿಂದ ಕೆಲಸಗಳು ಮಾಡುವ ಕರ್ಮೇಂದ್ರಿಯಗಳಿಗೆ ಕರ್ಮವೆಂಬ ಫಲಗಳು ಬಿಡುತ್ತಿವೆ ಎಂದಿದ್ದಾರೆ. ಮೇಲಿರುವ ಗುಣಗಳ ಪ್ರೇರಣೆಗೆ ಜ್ಞಾನೇಂದ್ರಿಯಗಳು ಕಾರಣವಾಗುವುದರಿಂದ ಅವುಗಳನ್ನು ಎಲೆಗಳಾಗಿ ವರ್ಣಿಸಿ, ಅವುಗಳನ್ನೇ ಗುಣಗಳಿಗೆ ಇನ್ನೊಂದು ಹೆಸರಾದ ವೇದಗಳಾಗಿ ಹೇಳಿದ್ದಾರೆ. ಕಾಲ ಕರ್ಮಗಳು ಪ್ರಸಾರವಾಗುವ ನಾಡಿಗಳನ್ನು ಕೊಂಬೆಗಳಾಗಿ ವರ್ಣಿಸಿ ಹೇಳಿದ್ದಾರೆ. ಈ ವಿಧವಾಗಿ ಮೇಲೆ ಎಲ್ಲದಕ್ಕೂ ಕಾರಣವಾದ ಕರ್ಮ ಗುಣಗಳಿರುವಾಗ ಕೆಳಗಿನವುಗಳನ್ನು ಪ್ರೇರೇಪಿಸುವ ಜ್ಞಾನೇಂದ್ರಿಯಗಳು, ಕರ್ಮಗಳನ್ನು ಸಂಪಾದಿಸಿ ಮತ್ತು ಆಚರಿಸುವ ಕರ್ಮೇಂದ್ರಿಯಗಳು ಇವೆ.

ಈ ವಿಧವಾದ ಶರೀರವನ್ನು ಅಶ್ವರ್ಥ ವೃಕ್ಷವೆಂದು ಹೇಳಲಾಗಿದೆ. ಪ್ರತಿ ಶರೀರ ಒಂದು ವೃಕ್ಷದಂತಹದೆಂದು ಹೇಳಬಹುದು. ಇದರ ಪ್ರಕಾರ ಜೀವಿಯು ಧರಿಸಿದ ಶರೀರಗಳೆಲ್ಲವೂ ವೃಕ್ಷಗಳೇ. ಜೀವಾತ್ಮನಾದ ನಾನು, ನೀನು ಧರಿಸಿದ ಶರೀರಗಳೂ ಸಹ ಅಶ್ವರ್ಥವೃಕ್ಷಗಳೇ ಎಂದು ತಿಳಿಯಬೇಕು.

**(14) ಶ್ಲೋ॥ 3 : ನ ರೂಪ ಮಸ್ಯೇಹ ತಥೋಪಲಭ್ಯತೇ ನಾನ್ತೋ ನ ಚಾದಿ ರ್ನಚ ಸಮ್ಪ್ರತಿಷ್ಠಾ।**
**ಅಶ್ವತ್ಥ ಮೇನಂ ಸುವಿರೂಢಮೂಲ ಮಸಂಗ ಶಸ್ತ್ರೇಣ ದೃಢೇನ ಛಿತ್ವಾ॥**
**(ಪ್ರಕೃತಿ, ಪುರುಷನು)**

**ಭಾವಾರ್ಥ** : ಅಶ್ವರ್ಥವೃಕ್ಷವೊಂದರ ರೂಪವಾಗಲಿ, ಅದರ ಕಾಂಡವಾಗಲಿ, ಕೊನೆಯಾಗಲಿ ಇರುವ ಸ್ಥಿತಿಯಾಗಲಿ ತಿಳಿಯುತ್ತಿಲ್ಲ. ದೃಢವಾದ ಮೂಲವಿರುವ ಈ ವೃಕ್ಷವನ್ನು ಅಸಂಗಶಸ್ತ್ರದಿಂದ ಕಡಿಯಬೇಕು.

**ವಿವರ** : ಎಷ್ಟೋ ಜ್ಞಾನದೃಷ್ಟಿ ಇದ್ದರಾಗಲಿ ಅಶ್ವರ್ಥವೃಕ್ಷದ ನಿಜಸ್ವರೂಪ ಅರ್ಥವಾಗುವುದಿಲ್ಲ. ಆದ್ದರಿಂದ ಶರೀರದೊಳಗೆ ಜೋಡಣೆಯಾಗಿರುವ ಇದರ ರೂಪ ಜ್ಞಾನದೃಷ್ಟಿ ಇಲ್ಲದವರಿಗೆ ಅರ್ಥವಾಗುವುದಿಲ್ಲ. ಸ್ವಲ್ಪ ಜ್ಞಾನ ಇರುವವರೂ ಸಹ ಇದನ್ನು ಹೋಲಿಸಿಕೊಳ್ಳಲಾರರು. ಒಬ್ಬ ಜೀವಾತ್ಮ ಶರೀರವನ್ನು ಧರಿಸುವುದು ಯಾವಾಗ ಮೊದಲು ಮಾಡಿದ್ದಾನೋ ತಿಳಿದಿಲ್ಲ. ಜೀವಿಯು ಹುಟ್ಟಿದಾಗ ಶರೀರವೃಕ್ಷವೂ ಸಹ ಹುಟ್ಟಿದೆ. ಆದ್ದರಿಂದ ಜೀವಿಯು ಅನಾದಿ ಆದಂತೆ ಶರೀರವೃಕ್ಷವೂ ಸಹ ಅನಾದಿಯಾದುದೆಂದೇ ಹೇಳಬಹುದು. ಶರೀರಾಂತರ್ಗತದಲ್ಲಿ ಸೂಕ್ಷ್ಮವಾಗಿ ಅಡಗಿರುವ ಅಶ್ವರ್ಥವೃಕ್ಷ ಶರೀರ ನಶಿಸಿದರೂ ತಾನು ನಶಿಸುವುದಿಲ್ಲ. ಕಾಲ, ಕರ್ಮ, ಗುಣಚಕ್ರಗಳೊಂದಿಗೆ ಜೋಡಣೆಯಾಗಿರುವ ಈ ವೃಕ್ಷವು ಮರಣದಲ್ಲಿ ಶರೀರವನ್ನು ಬಿಟ್ಟು ಮತ್ತೊಂದು ಹೊಸ ಶರೀರವನ್ನು ಆಶ್ರಯಿಸುತ್ತಿದೆ. ಈ ವೃಕ್ಷದ ಗುಣಚಕ್ರವೆಂಬ ಬೇರುಗಳಲ್ಲಿ ಜೀವಿಯು ಬಂಧಿಸಲ್ಪಟ್ಟಿದ್ದಾನೆ. ಒಂದು ಶರೀರವನ್ನು ಜೀವಾತ್ಮ ಬಿಟ್ಟಿದ್ದಾನೆಂದರೆ ವೃಕ್ಷದೊಂದಿಗೂ ಸಹ ಕದಲಿಹೋಗಿದ್ದಾನೆಂದು ಅರ್ಥಮಾಡಿ ಕೊಳ್ಳಬೇಕು. ಈ ವಿಧವಾಗಿ ಅನಾದಿಯಿಂದ ಶರೀರಗಳು ಬದಲಾಗುತ್ತಾ ಕರ್ಮವೆಂಬ ಬೇರುಗಳು ದೃಢವಾಗಿ ವ್ಯಾಪಿಸಿರುವುದರಿಂದ ಇದು ದೃಢಮೂಲವಾದುದೆಂದು ಶ್ಲೋಕದಲ್ಲಿ ಹೇಳಲಾಗಿದೆ. ಅದು ತಿಳಿಯದ ಅನಾದಿಯಾದ ಈ ವೃಕ್ಷವೊಂದರ ಅಂತ್ಯವೂ ಸಹ ಯಾರಿಗೂ ತಿಳಿದಿಲ್ಲ. ಹುಟ್ಟು ಅಂತ್ಯ ತಿಳಿಯದ ಇದು ಪ್ರಸ್ತುತ ಶರೀರದಲ್ಲಿ ಹೇಗಿರುವುದು ಸಹ ತಿಳಿಯದಂತಿದೆ. ಇಂತಹ ವೃಕ್ಷದ ಆದಿಯನ್ನು, ಪ್ರಸ್ತುತ ಸ್ಥಿತಿಯನ್ನು, ತಿಳಿದುಕೊಂಡು ಅದನ್ನು ಅಂತ್ಯವೂ ಸಹ ಮಾಡಬಹುದು. ಜ್ಞಾನದೃಷ್ಟಿಯಿಂದ ಅದು ಹೇಗಿರುವುದು ತಿಳಿದವನು ಅದನ್ನು ನಾಶಮಾಡಿ ಅಂತ್ಯ ನೋಡಬಲ್ಲನು. ಅದನ್ನು ತಿಳಿದುಕೊಂಡವನು ಸರ್ವವೇದಗಳು ತಿಳಿದವನೆಂದು ಮೊದಲ ಶ್ಲೋಕದಲ್ಲಿ ಹೇಳಿದಂತೆ ತಿಳಿದವನಾಗಿ ಅದಕ್ಕೆ ನೀರು, ಆಹಾರವಾದ ವಿಷಯಗಳನ್ನು, ಗುಣಗಳನ್ನು ಇಲ್ಲದಂತೆ ಮಾಡಿದ ಪಕ್ಷದಲ್ಲಿ, ಅದಷ್ಟಕ್ಕೆ ಅದು ಒಣಗಿಹೋಗಿ ನಶಿಸಿಹೋಗುತ್ತದೆ. ಗುಣಗಳೊಂದಿಗೆ ಸಂಗಮಿಸದವನು ಮರವನ್ನು ನಾಶ ಮಾಡಬಲ್ಲನು.

**(14) ಶ್ಲೋ॥ 4 : ತತಃ ಪದಂ ತತ್ಪರಿಮಾರ್ಗಿತವ್ಯಂ ಯಸ್ಮಿನ್ ಗತಾ ನ ನಿವರ್ತನ್ತಿ ಭೂಯಃ ।**
**ತಮೇವಚಾಽದ್ಯಂ ಪುರುಷಂ ಪ್ರಪದ್ಯೇಯತಃ ಪ್ರವೃತ್ತಿಃ ಪ್ರಸೃತಾಪುರಾಣೀ ॥**
**(ಪರಮಾತ್ಮ)**

**ಭಾವಾರ್ಥ** : ಯಾವ ಸ್ಥಿತಿಯನ್ನು ಹೊಂದಿದ ನಂತರ ಪುನಃ ಜನ್ಮಿಸುವುದಿಲ್ಲವೋ ಅದನ್ನು ತಿಳಿಯಬೇಕು. ಈ ಪ್ರಕೃತಿ ಜೀವರಾಶಿಗಳೆಲ್ಲ ಯಾರಿಂದ ಹುಟ್ಟಿ ವ್ಯಾಪಿಸಿವೆಯೋ ಅಂತಹ ಪುರಾಣ ಪುರುಷನನ್ನು ಶರಣು ಬೇಡಬೇಕು.

**ವಿವರ** : ಶರೀರದಲ್ಲಿರುವ ಅಶ್ವರ್ಥವೃಕ್ಷವನ್ನು ನಾಶ ಮಾಡಿದನಂತರ ಅದರಲ್ಲಿರುವ ಜೀವಾತ್ಮ ಎಲ್ಲಿಗೆ ಹೋಗುತ್ತದೊ ತಿಳಿದುಕೊಳ್ಳಬೇಕು. ಜೀವಾತ್ಮ ವೃಕ್ಷವನ್ನು ಬಿಟ್ಟ ನಂತರ ಪುನಃ ಹುಟ್ಟದ ಪರಮಾತ್ಮ ಸ್ಥಾನವನ್ನು ಅಲಂಕರಿಸಿ ಪರಮಾತ್ಮನಾಗಿ ಬದಲಾಗಿಹೋಗುತ್ತಾನೆ. ಮತ್ತೆ ಜನ್ಮ ಪಡೆಯದ ಆ ಸ್ಥಾನವನ್ನು ಹೊಂದಬೇಕೆಂದರೆ ಈ ಪ್ರಪಂಚಕ್ಕೆ ಆದಿ, ಪುರಾಣ ಪುರುಷನಾದ ಪರಮಾತ್ಮನನ್ನು ಶರಣು ಬೇಡುವುದರಿಂದಲೇ ಸಾಧ್ಯವಾಗುತ್ತದೆ. ಏನೂ ಅಲ್ಲದ ಪರಮಾತ್ಮನನ್ನು ನೇರವಾಗಿ ಯಾರೂ ಆರಾಧಿಸಲಾರರು. ಆದ ಕಾರಣ ಮೊದಲು ಜೀವಾತ್ಮಕ್ಕು, ಪರಮಾತ್ಮಕ್ಕು ಮಧ್ಯವರ್ತಿಯಾದ ಆತ್ಮವನ್ನು ಪೂಜಿಸಬೇಕಾಗಿದೆ.

**(14) ಶ್ಲೋ॥ 5 : ನಿರ್ಮಾನಮೋಹಾ ಜಿತಸಂಗದೋಷಾ ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ ।**
**ದ್ವನ್ದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈರ್ಗಚ್ಛನ್ತ್ಯಮೂಢಾಃ ಪದಮವ್ಯಯಂತತ್ ॥**
**(ಪರಮಾತ್ಮ)**

**ಭಾವಾರ್ಥ** : ಮಾನ, ಮೋಹಗಳನ್ನು ಬಿಟ್ಟವರು, ಪ್ರಪಂಚ ವಿಷಯಗಳೊಂದಿಗೆ ಸಂಗಮಿಸುವು ದರಿಂದ ಉಂಟಾಗುವ ಕರ್ಮವನ್ನು ಇಲ್ಲದಂತೆ ಮಾಡಿಕೊಂಡವರು, ನಿತ್ಯ ಆತ್ಮ ಚಿಂತನೆ ಮಾಡುವವರು, ಆಸೆಗಳನ್ನು ಇಲ್ಲದಂತೆ ಮಾಡಿದವರು, ಸುಖದುಃಖಗಳಿಗೆ ಕಾರಣವಾಗುವ ಪಾಪಪುಣ್ಯಗಳಿಂದ ಹೊರ ಬಿದ್ದವರಾದ ಜ್ಞಾನಿಗಳು, ನಾಶವಿಲ್ಲದ ಪರಮಪದವನ್ನು ಹೊಂದುತ್ತಿದ್ದಾರೆ.

**(14) ಶ್ಲೋ॥ 6 : ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।**
**ಯದ್ಗತ್ವಾ ನ ನಿವರ್ತನ್ತೇ ತದ್ಧಾಮ ಪರಮಂ ಮಮ ॥**
**(ಪರಮಾತ್ಮ)**

**ಭಾವಾರ್ಥ** : ಅದನ್ನು ಸೂರ್ಯನಾಗಲಿ, ಚಂದ್ರನಾಗಲಿ, ಅಗ್ನಿಯಾಗಲಿ ಪ್ರಕಾಶಿಸುವಂತೆ ಮಾಡಲಾರರು, ಏನನ್ನು ಹೊಂದಿದರೆ ಮತ್ತೆ ಜನ್ಮಿಸುವುದಿಲ್ಲವೋ ಅದೇ ನನ್ನ ಪರಂಧಾಮ.

**ವಿವರ** : ಶರೀರದಲ್ಲಿನ ಅಶ್ವರ್ಥ ವೃಕ್ಷವನ್ನು ನಾಶ ಮಾಡಿದವನು ಮೋಕ್ಷವನ್ನು ಹೊಂದಿ ಪರಮಾತ್ಮನಲ್ಲಿ ಐಕ್ಯವಾಗಿ ಹೋಗುತ್ತಿದ್ದಾನೆ. ಅಂತಹ ಪರಮಾತ್ಮ ಸ್ವಯಂಪ್ರಕಾಶವಾದುದು. ಅದನ್ನು ಸೂರ್ಯನಾಗಲಿ, ಅಗ್ನಿಯಾಗಲಿ, ಚಂದ್ರನಾಗಲಿ, ಪ್ರಕಾಶಿಸುವಂತೆ ಮಾಡಲಾರರು. ಏಕೆಂದರೆ ಕತ್ತಲಾಗಿರುವುದನ್ನು ಬೆಳಗಿಸುವುದು ಸೂರ್ಯಚಂದ್ರಾದಿಗಳಿಗೆ ಸಾಧ್ಯವಾಗುತ್ತದೆ. ಅವುಗಳಿಗಿಂತ ಬೆಳಕುಹೆಚ್ಚಾದ ಪರಮಾತ್ಮನನ್ನು ಯಾವುದು ಪ್ರಕಾಶಿಸುವಂತೆ ಮಾಡ ಲಾರದು. ಏನನ್ನು ಹೊಂದಿದವರು ಪುನಃ ಆಚರಿಸುವುದಕ್ಕೆ ಹುಟ್ಟುವುದಿಲ್ಲವೋ ಅದೇ ಶ್ರೇಷ್ಟವಾದ ಪರಮಪದವೆಂದು ತಿಳಿಯಬೇಕು.

**(14) ಶ್ಲೋ॥ 7 : ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ ।**
**ಮನಷ್ಷಷ್ಠಾ ಣೀನ್ದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ॥**

**(ಪರಮಾತ್ಮ)**

**ಭಾವಾರ್ಥ** : ಬದುಕಿರುವ ಜೀವರಾಶಿಗಳಲ್ಲಿ ಜೀವಾತ್ಮ ನನ್ನ ಅಂಶವಾಗಿ, ಪ್ರಕೃತಿ ಸಂಬಂಧವಾದ ಇಂದ್ರಿಯಗಳಲ್ಲಿ ಆರನೆಯದಾದ ಮನಸ್ಸನ್ನು ಆಕರ್ಷಿಸುತ್ತಿದೆ.

**ವಿವರ** : ಕಾರ್ಯರೂಪವಾದ ಪ್ರಪಂಚದಲ್ಲಿ ಪರಮಾತ್ಮ ಮೂರು ಭಾಗಗಳಾಗಿ ವಿಭಜಿಸಲ್ಪಟ್ಟಿದೆಯೆಂದು ಮೊದಲೇ ತಿಳಿದುಕೊಂಡಿದ್ದೇವೆ. ಅದರಲ್ಲಿ ಒಂದಾದ ಜೀವಾತ್ಮ ಪರಮಾತ್ಮದೊಂದಿಗೆ ಅನಾದಿ ಎಂದೇ ಹೇಳಬಹುದು. ಅನಾದಿಯಾದ ಜೀವಿಯು ಶರೀರದಲ್ಲಿದ್ದು ಅದರಲ್ಲಿ ಹೊರಗಿನ ವಿಷಯಗಳನ್ನು ತಿಳಿಸುವ ಜ್ಞಾನೇಂದ್ರಿಯಗಳ ನಂತರ ಇರುವ ಆರನೆಯದಾದ ಮನಸ್ಸನ್ನು ಆಕರ್ಷಿಸುತ್ತದೆ. ಭೂಮ್ಯಾಕರ್ಷಣೆಯಿಂದ ವಸ್ತುಗಳು ಕೆಳಗೆ ಬೀಳುವಂತೆ ಗುಣಚಕ್ರದಲ್ಲಿರುವ ಜೀವಿಯು ಆಕರ್ಷಣೆಯಿಂದ ಮನಸ್ಸು ತನಗೆ ತಿಳಿದ ವಿಷಯಗಳನ್ನು ಒಳಗಡೆಗೆ ಜಾರಿಬಿಟ್ಟಂತೆ ಕಳುಹಿಸುತ್ತಿದೆ. ಹಾಗೆ ಕಳಿಸುವುದರಿಂದ ಹೊರಗಿನ ವಿಷಯಗಳೊಂದಿಗೆ ಜೀವಾತ್ಮ ಮತ್ತು ಅದರ ಬುದ್ಧಿ ಸಂಬಂಧಪಡುತ್ತಿವೆ. ಜೀವಿಗಿರುವ ಆಕರ್ಷಣೆಯಿಂದಲೇ ಮನಸ್ಸಿನ ಮೂಲಕ ಪ್ರಪಂಚ ಸಂಬಂಧಗಳು ತಗಲಿಕೊಳ್ಳುತ್ತಿವೆ. ಜೀವಿಗಿರುವ ಆಕರ್ಷಣೆಯನ್ನು ಇಲ್ಲದಂತೆ ಮಾಡುವುದೇ ಬ್ರಹ್ಮಯೋಗ.

**(14) ಶ್ಲೋ॥ 8 : ಶರೀರಂ ಯದವಾಪ್ನೋತಿ ಯಚ್ಚಾ ಪ್ಯುತ್ಕ್ರಾ ಮತೀಶ್ವರಃ ।**
**ಗೃಹೀತ್ವೈತಾನಿ ಸಂಯಾತಿ ವಾಯುರ್ಗನ್ಧಾನಿ ವಾಶಯಾತ್ ॥**

**(ಆತ್ಮ, ಪ್ರಕೃತಿ)**

**ಭಾವಾರ್ಥ** : ಆತ್ಮ ಶರೀರವನ್ನು ಬಿಟ್ಟು ಯಾವಾಗ ಹೋಗುತ್ತಿದೆಯೋ, ಹೋಗಿ ಎಲ್ಲಿ ಪ್ರವೇಶಿಸುತ್ತಿದೆಯೋ, ಅಲ್ಲಿಗೆ ವಾಯು ವಾಸನೆಯನ್ನು ತೆಗೆದುಕೊಂಡು ಹೋದಂತೆ ಆತ್ಮ ಗುಣಗಳನ್ನು ತೆಗೆದುಕೊಂಡು ಹೋಗುತ್ತಿದೆ.

**ವಿವರ** : ಇಲ್ಲಿ ಬಹಳಜನರು ಜೀವಾತ್ಮ ಶರೀರವನ್ನು ಬಿಟ್ಟು ಹೋಗುವಾಗ ಎಂದು ತಪ್ಪಾಗಿ ತಿಳಿಯುತ್ತಾರೆ. ಈ ಶ್ಲೋಕದಲ್ಲಿ ಈಶ್ವರನೆಂದು ಸ್ಪಷ್ಟವಾಗಿ ಹೇಳಿರುವಾಗ ಜೀವಾತ್ಮನೆಂದು ಹೇಳಿಕೊಳ್ಳುವುದು ತಪ್ಪಾಗಿ ತಿಳಿಯುತ್ತಿದೆ. ಆತ್ಮಗಳ ವಿವರವನ್ನು ತಿಳಿಯದಿದ್ದರೆ ಬಹಳ ಕಡೆ ಇಂತಹ ತಪ್ಪುಗಳು ನಡೆಯುತ್ತಿರುತ್ತವೆ. ಇಲ್ಲಿ ಹೇಳಿರುವುದು ಶರೀರದಲ್ಲಿ ವಿಭಜಿಸಿರುವ ಜೀವಾತ್ಮ, ಆತ್ಮ, ಪರಮಾತ್ಮಗಳಲ್ಲಿ ಪರಮಾತ್ಮ ಶರೀರವನ್ನು ಬಿಟ್ಟುಹೋಗು ವುದಲ್ಲ. ಏಕೆಂದರೆ ಪರಮಾತ್ಮ ಮತ್ತೊಂದುಕಡೆ ಇಲ್ಲ ಎಂಬುವುದೇ ಇಲ್ಲ. ಆದುದರಿಂದ ಅಲ್ಲಿ ಇಲ್ಲದಿದ್ದರೆ ಅಲ್ಲವೆ ಹೋಗಬೇಕಾಗಿ ಬರುವುದು. ಸರ್ವವೂ ಇರುವ ಪರಮಾತ್ಮ ಹೋಗುವುದಿಲ್ಲ. ಆದ್ದರಿಂದ ಶರೀರವನ್ನು ಬಿಟ್ಟುಹೋಗುವವು ಎರಡೇ ಭೂತಗಳು. ಅವು ಜೀವಾತ್ಮ, ಆತ್ಮ. ಈ ಎರಡರಲ್ಲಿ ಶರೀರಕ್ಕೆಲ್ಲಾ ಅಧಿಪತಿ (ಈಶ್ವರನು) ಆಗಿದೆ, ಶರೀರವೆಲ್ಲವೂ ವ್ಯಾಪಿಸಿ ಕದಲಿಸುವ ಶಕ್ತಿಯಾಗಿರುವುದು ಆತ್ಮವೆ. ಮರಣದಲ್ಲಿ ಶರೀರವನ್ನು ಬಿಟ್ಟುಹೋಗುವುದು ಮೇಲಕ್ಕೆ ತಿಳಿಯುವಂತಿರುವುದು ಆತ್ಮವೆ. ಏಕೆಂದರೆ ಶರೀರವೆಲ್ಲವೂ ಚೈತನ್ಯವಾಗಿ ಕದಲಿಸುವ ಕದಲಿಕೆಗಳು ಆತ್ಮವೆ. ಆ ಕದಲಿಕೆಗಳು ಮರಣದಿಂದ ನಿಂತುಹೋಗುತ್ತಿವೆ. ಆದ್ದರಿಂದ ಶರೀರವನ್ನು ಆತ್ಮ ಬಿಟ್ಟುಹೋಗಿದೆ ಎಂದು ಹೇಳಬಹುದು. ಅಷ್ಟೇ ಅಲ್ಲದೆ ಸತ್ತಾದ ಆತ್ಮ ಮರಣದಲ್ಲಿ ಹೋಗುತ್ತಿದೆ ಆದ್ದರಿಂದ ಸತ್ತುಹೋಗಿದೆ ಎನ್ನುವುದು ಸಾಧಾರಣವಾಗಿ ಕೇಳುತ್ತಿದ್ದೇವೆ. ಶರೀರವನ್ನು ಬಿಟ್ಟು ಆತ್ಮ ಹೋಗುತ್ತಿರುವಾಗ ಆತ್ಮದಜೊತೆ ಇರುವ ಜೀವಾತ್ಮವೂ ಹೋಗಬೇಕಾಗಿಬರುತ್ತದೆ. ಈ ವಿಷಯವನ್ನು ಹಿಂದೆ ಹೇಳಲಾದ ಸಾಂಖ್ಯಯೋಗವೆಂಬ ಅಧ್ಯಾಯದಲ್ಲಿ 23, 24 ಶ್ಲೋಕಗಳಲ್ಲಿ ವಿವರವನ್ನು ಹೇಳಲಾಗಿದೆ.

ಆತ್ಮ ಜೀವಾತ್ಮದೊಂದಿಗೆ ಅಲ್ಲಿಯೇ ಇರುವ ಕಾಮಾದಿ ಗುಣಗಳನ್ನೂ ಸಹ ತೆಗೆದುಕೊಂಡು ಹೋಗುತ್ತಿದೆ. ಶರೀರವನ್ನು ಬಿಟ್ಟು ಹೋಗುವುದಕ್ಕೆ, ಎಲ್ಲಿಯೋ ಸೇರುವುದಕ್ಕೆ ಕಾರಣವಾದ ಕರ್ಮವೂ ಸಹ ಅವುಗಳೊಂದಿಗೆ ಹೋಗುತ್ತಿದೆ. ಜ್ಞಾನದೃಷ್ಟಿಯಿಂದ ನೋಡಿದಾಗ ಶಿರೋಭಾಗದಲ್ಲಿರುವ ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳು ನಾಲ್ಕು ಅವುಗಳಿಗೆ ಅನುಸಂಧಾನವಾದ ಅಶ್ವರ್ಥವೃಕ್ಷ ಎಲ್ಲವೂ ಶರೀರದಿಂದ ಹೊರಟು, ಸ್ಥೂಲಕಣ್ಣುಗಳಿಗೆ ಕಾಣಿಸದಂತೆ ಪ್ರಯಾಣಿಸಿ ಎರಡು ಸೆಕೆಂಡುಗಳಲ್ಲಿ ಮತ್ತೊಂದು ಹೊಸ ಶಿಶು ಶರೀರವನ್ನು

ಧರಿಸುತ್ತಿದೆ. ಪುಷ್ಪದಲ್ಲಿನ ಸುವಾಸನೆ ಗಾಳಿಯಲ್ಲಿ ಬೆರೆತು ಪ್ರಯಾಣಿಸುತ್ತಿರುವಾಗ ಕಣ್ಣಿಗೆ ಹೇಗೆ ಕಾಣಿಸುವುದಿಲ್ಲವೋ, ಹಾಗೆ ಆತ್ಮದೊಂದಿಗೆ ಪ್ರಯಾಣಿಸುತ್ತಿರುವ ಅಶ್ವರ್ಥವೃಕ್ಷ ಕಾಣಿಸುವುದಿಲ್ಲವೆಂದು ಗ್ರಹಿಸಬೇಕು.

**(14) ಶ್ಲೋ॥ 9 : ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।**
**ಅಧಿಷ್ಠಾಯ ಮನ ಶ್ಚಾಯಂ ವಿಷಯಾ ನುಪಸೇವತೇ ॥**

**(ಜೀವಾತ್ಮ)**

**ಭಾವಾರ್ಥ** : ಕಿವಿ, ಕಣ್ಣು, ಚರ್ಮ, ನಾಲಿಗೆ, ಮೂಗು ಎನ್ನುವ ಜ್ಞಾನೇಂದ್ರಿಯಗಳನ್ನು ಮತ್ತು ಮನಸ್ಸನ್ನು ಅಧಿಷ್ಠಿಸಿ ಅವುಗಳ ವಿಷಯಗಳನ್ನು ಅನುಭವಿಸುತ್ತಾ ಜೀವಾತ್ಮ ಶರೀರದಲ್ಲಿದ್ದಾನೆ.

**ವಿವರ** : ಶರೀರದೊಳಗೆ ಎಲ್ಲೋ ಗುಣಚಕ್ರದಲ್ಲಿರುವ ಮೂರುಭಾಗಗಳಲ್ಲಿ ಯಾವುದೋ ಒಂದು ಭಾಗದಲ್ಲಿ ವಾಸ ಮಾಡುತ್ತಿರುವ ಜೀವಾತ್ಮ ನಿಜವಾಗಲು ಅಂಧನು. ಆಗಲೇ ಹುಟ್ಟಿದ ಕಣ್ಣುಗಳು ತೆರೆಯದ ನಾಯಿಮರಿ ತನ್ನ ಹತ್ತಿರಕ್ಕೆ ಬಂದಿರುವವುಗಳನ್ನು ಮಾತ್ರ ವಾಸನೆಯಿಂದ ತಿಳಿದುಕೊಳ್ಳುತ್ತದಾಗಲಿ ನಿಜವಾಗಲು ನೋಡಲಿಲ್ಲ. ಹಾಗೆ ಮನಸ್ಸಿನಿಂದ ತನ್ನ ಹತ್ತಿರಕ್ಕೆ ಬಂದಿರುವ ವಿಷಯಗಳನ್ನು ಮಾತ್ರ ಬುದ್ಧಿಯಿಂದ ಜೀವಿಯು ತಿಳಿದುಕೊಳ್ಳು ತ್ತಾನೆ. ಮನಸ್ಸು ಶರೀರಕ್ಕೆ ಬಾಹ್ಯವಾಗಿರುವ ಕಣ್ಣು, ಕಿವಿ, ಮೂಗು, ಚರ್ಮ, ನಾಲಿಗೆ ಎನ್ನುವ ಪ್ರತ್ಯೇಕ ಶಕ್ತಿಗಳಿರುವ ಐದು ಇಂದ್ರಿಯಗಳಿಂದ ದೃಷ್ಟಿ, ಶ್ರವಣ, ವಾಸನೆ, ಸ್ಪರ್ಶ, ರುಚಿ ಎನ್ನುವ ಐದು ಅನುಭೂತಿಗಳನ್ನು ಗ್ರಹಿಸಿ ಒಳಗಿರುವ ಬುದ್ಧಿಗೆ ಜೀವಿಗೆ ತಿಳಿಸುತ್ತದೆ. ಬುದ್ಧಿ ಸೇರಿಸುವ ವಿವರದಿಂದಲೂ ಸಹ ಜೀವಾತ್ಮ ಬಂದಿರುವ ಅನುಭೂತಿಗಳನ್ನು ಸ್ವತಃವಾಗಿ ಅನುಭವಿಸುತ್ತಾನೆ. ಅನುಭೂತಿಗಳನ್ನು ಜೀವಾತ್ಮ ಅನುಭವಿಸಿದರೂ ಅವುಗಳ ವಿವರವನ್ನು ಬುದ್ಧಿ ಮೂಲಕವೇ ಹೊರಗೆ ಹೇಳಲಾಗುತ್ತದೆ. ಜೀವಾತ್ಮನೊಬ್ಬ ಕುರುಡನು, ಮೂಗನು, ಕಿವುಡನಿಗೆ ಸಮಾನವೆಂದು ಹೇಳಬಹುದು. ಸಾಧಾರಣವಾಗಿ ಪ್ರಪಂಚದಲ್ಲಿ ಕುರುಡ, ಕಿವುಡ, ಮೂಗ, ನೋಡಲಾರದೆ, ಕೇಳಲಾರದೆ, ಹೇಳಲಾರದೆ ಹೋದರೂ ಕೈಯಿಗೆ ಪೆಟ್ಟುಬಿದ್ದಿರುವ ನೋವನ್ನು ಅನುಭವಿಸುತ್ತಾನೆ. ಆದರೆ ನೋವನ್ನು ಕುರಿತು ಹೊರಗೆ ಹೇಳಲಾರನು. ಹಾಗೆ ಜೀವಾತ್ಮ ಸ್ವತಃವಾಗಿ ಕೇಳಲಾರದೆ, ನೋಡಲಾರದೆ, ಹೇಳಲಾರದೆ ಹೋದರೂ ಬಾಧೆಯನ್ನು ಅನುಭವಿಸುತ್ತಾನೆ. ಹಾಗೇ ಸುಖಗಳು ಅನುಭವಿಸುತ್ತಾನೆ. ಅನುಭವಿಸಿದವುಗಳ ವಿವರವನ್ನು, ಪಕ್ಕದಲ್ಲಿಯೇ ಜೀವಿಗೆ ಹತ್ತಿರದಲ್ಲಿರುವ

ಬುದ್ಧಿ ವಿವರಿಸಿ ಹೇಳುತ್ತಿರುತ್ತದೆ. ಬುದ್ಧಿ ವಿವರಿಸಿ ತಿಳಿಸಿದರಾಗಲಿ ಅನುಭವಿಸಿದ ಅನುಭವಗಳ ವಿವರ ಜೀವಿಗೆ ತಿಳಿಯುವುದಿಲ್ಲ. ಬುದ್ಧಿ ಇಲ್ಲದಿದ್ದರೆ ಜೀವಾತ್ಮ ಸ್ತಬ್ಧನಾಗಿ ಅನುಭವಿಸಬೇಕಾಗಿದ್ದೇ ಹೊರತು ಅನುಭವಿಸಿದ್ದನ್ನು ಕುರಿತು ಸಹ ಹೇಳಲಾರನು.

ಒಂದೊಂದು ಶರೀರದಲ್ಲಿ ಒಂದೊಂದು ಜೀವಾತ್ಮ ಅದಕ್ಕೆ ಹತ್ತಿರವಾಗಿ ಬುದ್ಧಿಯನ್ನು ಏರ್ಪಾಟು ಮಾಡಿ ಇಡಲಾಗಿದೆ. ಪ್ರತಿ ಶರೀರದಲ್ಲಿರುವ ಜೀವಾತ್ಮಗಳು ಒಂದೇ ಪರಮಾತ್ಮ ಅಂಶವಾದರೂ ಅವವುಗಳ ಬುದ್ಧಿಯನ್ನನುಸರಿಸಿ ಅವುಗಳಲ್ಲಿ ಅನೇಕ ವ್ಯತ್ಯಾಸಗಳು ಕಾಣಿಸುತ್ತಿವೆ. ಹಾಗೆ ಕಾಣಿಸಿರುವವು ಆ ಜೀವಿಗಳ ಬುದ್ಧಿ ಭೇದವೇ ಹೊರತು ಮತ್ತೆ ಬೇರೆಯಲ್ಲವೆಂದು ತಿಳಿಯಬೇಕು. ಉದಾಹರಣೆಗೆ ಒಂದೇ ಪದಾರ್ಥವನ್ನು ನಾಲ್ಕುಜನ ವ್ಯಕ್ತಿಗಳಿಗೆ ಕೊಟ್ಟು ಅವುಗಳನ್ನು ರುಚಿನೋಡಿ ಅವುಗಳ ರುಚಿಯನ್ನು ಕುರಿತು ತಿಳಿಸಿರೆಂದು ಹೇಳಿದ್ದೇವೆಂದುಕೊಳ್ಳೋಣ. ನಾಲ್ವರು ಒಂದೇ ವಿಧವಾಗಿ ಹೇಳುವುದಿಲ್ಲ. ನಾಲ್ವರು ಸ್ವಲ್ಪ ಸ್ವಲ್ಪ ವ್ಯತ್ಯಾಸಗಳಿಂದ ನಾಲ್ಕು ವಿಧಗಳಾಗಿ ಹೇಳುತ್ತಾರೆ. ಬೆಲ್ಲವನ್ನು ಕೊಟ್ಟುರುಚಿ ಹೇಳಿರೆಂದರು ಒಬ್ಬನು ಸ್ವಲ್ಪ ಹುಳಿ ಬೆರೆತಿದೆಯೆಂದೋ, ಮತ್ತೊಬ್ಬನು ಸಿಹಿ ಕಡಿಮೆ ಇದೆಯೆಂದೋ, ಮೂರನೆಯವನು ಬಹಳ ಸಿಹಿಯಾಗಿದೆಯೆಂದೊ, ನಾಲ್ಕನೆಯವನು ಇವರಿಗಿಂತ ವಿಭಿನ್ನವಾಗಿ ಹೇಳುತ್ತಾನೆ. ಒಂದೇ ಬೆಲ್ಲವನ್ನು ನಾಲ್ವರು ರುಚಿ ನೋಡಿ ಅವುಗಳ ಅನುಭವವನ್ನು ಆ ನಾಲ್ವರ ಜೀವಾತ್ಮಗಳು ಅನುಭವಿಸಿದರೂ, ಅವರಲ್ಲಿನ ಬುದ್ಧಿ ವಿವರಿಸುವುದರಲ್ಲಿ ಸ್ವಲ್ಪ ವ್ಯತ್ಯಾಸಗಳು ಕಾಣಿಸುತ್ತಿವೆ. ಇದರಿಂದ ಒಬ್ಬೊಬ್ಬ ಜೀವಿಗೆ ಒಂದೊಂದು ವಿಧವಾದ ಬುದ್ಧಿ ಇದೆಯೆಂದು ತಿಳಿಯುತ್ತಿದೆ. ಆದ್ದರಿಂದಲೇ ಪೂರ್ವದಲ್ಲಿ ಹಿರಿಯರು **'ತಲೆಗೊಂದು ಬುದ್ಧಿ'** ಎನ್ನುವ ಮಾತನ್ನು ಹೇಳಿದ್ದಾರೆ. ನಾವು ಇನ್ನೂ ವಿವರವಾಗಿ ಯೋಚಿಸಿದಂತಾದರೆ ನಮ್ಮ ಅನುಭವದಲ್ಲಿ ಒಬ್ಬನನ್ನು ಮಂದಬುದ್ಧಿ ಎಂದು ಹೇಳುವುದು, ಮತ್ತೊಬ್ಬನನ್ನು ಚುರುಕಾದ ಬುದ್ಧಿ ಎನ್ನುವುದು ನಡೆಯುತ್ತಿದೆ ಅಲ್ಲವೆ! ಅನೇಕ ವಿಧಗಳಾಗಿ ಅನೇಕ ಶರೀರಗಳಲ್ಲಿ ಬುದ್ಧಿಗಳಿವೆಯೆಂದು ತಿಳಿಯಬೇಕು. ಅವರವರ ಬುದ್ಧಿಯಿಂದ ಆಯಾ ಜೀವಾತ್ಮಗಳು ವಿವರವನ್ನು ತಿಳಿದುಕೊಳ್ಳುತ್ತಿವೆಯೆಂದು, ನಿಜವಾಗಲು ಜೀವಾತ್ಮ ಕರ್ಮಬಂಧನದಿಂದ ಅನುಭವಗಳನ್ನು ಅನುಭವಿಸುವವನೇ ಎಂದು, ತನಗೆ ಯಾವ ವಿವರ ತಿಳಿಯದ ಶುದ್ಧಾತ್ಮವೇಯೆಂದು ತಿಳಿಯಬೇಕು. ಗುಣಗಳಲ್ಲಿ ಸಿಲುಕಿರುವುದರಿಂದ, ಅವುಗಳ ವಿವರವನ್ನು ಬುದ್ಧಿ ತಿಳಿಸುತ್ತಿರುವುದರಿಂದ, ಬುದ್ಧಿಯ ಬಣ್ಣವೇ ಜೀವಾತ್ಮಕ್ಕೆ ಅಂಟಿಕೊಳ್ಳುತ್ತಿದೆ. ಶರೀರದಲ್ಲಿ ಜೀವಾತ್ಮ ಯಾವ ಆಕಾರದಿಂದ ಇದ್ದಾನೋ ಅವನಿಗೆ ಹತ್ತಿರ ಬುದ್ಧಿ ಹೇಗಿದೆಯೋ ತಿಳಿದುಕೊಳ್ಳಬೇಕೆಂದು ಆಸಕ್ತಿ ಇರುವವರಿಗೆ

ವಿವರವಾಗಿ ಅರ್ಥವಾಗುವಂತೆ ಹೇಳುವುದೇನೆಂದರೆ! ಜೀವಾತ್ಮ ಏನೂ ಅಲ್ಲದ ಶೂನ್ಯ. ಪರಮಾತ್ಮ ಅಂಶವಾಗಿರುವುದರಿಂದ ಅದು ಯಾವ ಪದಾರ್ಥವಲ್ಲದೆ ಶೂನ್ಯವಾಗಿ ಶರೀರದಲ್ಲಿದೆ ಯೆಂದು ತಿಳಿಯಬೇಕು. ಆದರೂ ಕರ್ಮಬಂಧನದಿಂದ ಅದಕ್ಕೆ ದುಂಡನೆಯ ಆಕಾರ ಏರ್ಪಟ್ಟಿದೆ. ಏನೂ ಅಲ್ಲದ ಶೂನ್ಯವನ್ನೇ ಒಂದು ದುಂಡನೆಯ ಪೊರೆ ಆವರಿಸಿರುವುದರಿಂದ ಚೆಂಡಿನಂತಹ ಆಕಾರದಲ್ಲಿ ಶೂನ್ಯ ಉಳಿದುಹೋಗಿದೆ. ಆವರಣೆಯಲ್ಲಿನ ಆ ಶೂನ್ಯವನ್ನೇ ಜೀವಾತ್ಮ ಎನ್ನುತ್ತಿದ್ದೇವೆ. ಸುತ್ತಲೂ ಇರುವ ಪೊರೆಯನ್ನು ಬುದ್ಧಿ ಎನ್ನುತ್ತಿದ್ದೇವೆ. ಬುದ್ಧಿ ಪೊರೆಯನ್ನು ಅಂಟಿಕೊಂಡು ಇನ್ನೂ ಎರಡು ಪೊರೆಗಳು ಇವೆ. ಅವು ಚಿತ್ತ, ಅಹಮ್, ಇದರಿಂದ ಜೀವಾತ್ಮ ಎನ್ನುವ ಖಾಲಿಸ್ಥಳಕ್ಕೆ ಮೂರು ಪೊರೆಗಳ ಆವರಣ ಏರ್ಪಟ್ಟಿದೆ ಎಂದು ತಿಳಿಯಿರಿ. ಅಂತಹ ಜೀವಾತ್ಮ ಆಕಾರವನ್ನು ಕೆಳಗಿನ ಚಿತ್ರದಲ್ಲಿ ನೋಡಬಹುದು.




**(14) ಶ್ಲೋ॥ 10 : ಉತ್ಕ್ರಾಮನ್ತಂ ಸ್ಥಿತಂವಾಪಿ ಭುಂಜಾನಂ ವಾ ಗುಣಾನ್ವಿತಮ್ ।**
**ವಿಮೂಢಾ ನಾನುಪಶ್ಯನ್ತಿ ಪಶ್ಯನ್ತಿ ಜ್ಞಾನಚಕ್ಷುಷಃ ॥**

**(ಜೀವಾತ್ಮ)**

**ಭಾವಾರ್ಥ** : ದೇಹ ಅಂತ್ಯವಾಗಿ ಅದನ್ನು ಬಿಟ್ಟುಹೋಗುವಾಗ, ದೇಹದಲ್ಲಿರುವಾಗ ಗುಣಗಳ ಅನುಭವಗಳನ್ನು ಹೊಂದುತ್ತಿರುವಾಗ. ಆ ಜೀವಿಗೆ ಹೇಗಿರುವುದು ಜ್ಞಾನಿಗಳು ಜ್ಞಾನನೇತ್ರದಿಂದ ನೋಡಬಲ್ಲರು. ಅಜ್ಞಾನಿಗಳು ನೋಡಲಾರರು.

**ವಿವರ** : ಜೀವಾತ್ಮ ಶರೀರವನ್ನು ಬಿಟ್ಟುಹೋಗುವಾಗ ಜನ್ಮಗಳಿಗೆ ಕಾರಣವಾದ ಕಾಲ,

ಕರ್ಮ, ಗುಣ ಸಮುದಾಯವಿರುವ ಚಕ್ರಗಳೊಂದಿಗೆ ಸಹ ಹೋಗುತ್ತಿರುವ ವಿಷಯವನ್ನು, ಶರೀರದಲ್ಲಿರುವ ಮೂರು ಗುಣಭಾಗಗಳಲ್ಲಿ ಯಾವುದೋ ಒಂದು ಭಾಗದಲ್ಲಿ ಅಂಧತ್ವದಲ್ಲಿ ಜೀವಾತ್ಮ ವಾಸಿಸುತ್ತಾ, ಆ ಗುಣ ಅನುಭವಗಳನ್ನು ಅನುಭವಿಸುತ್ತಾ, ಅವುಗಳ ವಿವರವನ್ನು ಬುದ್ಧಿಯ ಮೂಲಕ ತಿಳಿದುಕೊಳ್ಳುತ್ತಿರುವ ವಿಷಯವನ್ನು ಅಜ್ಞಾನಿಗಳು ತಿಳಿಯಲಾರರು. ಜ್ಞಾನನೇತ್ರ ಇರುವವರು ಮಾತ್ರ ನೋಡುತ್ತಾರೆ, ಜ್ಞಾನನೇತ್ರ ಎಲ್ಲಿರುವುದು ತಿಳಿದಿಲ್ಲ ಅಲ್ಲವೆ! **ನಮ್ಮ ಶರೀರದಲ್ಲಿರುವ ಗ್ರಂಥಿ ರಾಜವೇ ಜ್ಞಾನನೇತ್ರವಾಗಿ ಸಹ ಕೆಲಸಮಾಡುತ್ತಿದೆ.** ಗ್ರಂಥಿರಾಜನ ಸ್ಥಾನದಲ್ಲಿ ಮನಸ್ಸನ್ನು ಲಗ್ನ ಮಾಡುವುದಕ್ಕೆ ಅಭ್ಯಾಸವಾದವನಿಗೆ ಆತ್ಮ ವಿಷಯಗಳೆಲ್ಲವೂ ಗೋಚರವಾಗುತ್ತವೆ. ಹಾಗೆ ತಿಳಿದ ವಿಷಯದಲ್ಲಿ ಆತ್ಮನನ್ನು ಹೊರತು ಜೀವಾತ್ಮನನ್ನು ಕುರಿತು ಮತ್ತು ಉಳಿದ ಪ್ರಕೃತಿ ಜನಿತ ಭಾಗಗಳಾದ ಬುದ್ಧಿ, ಚಿತ್ತ, ಅಹಮ್, ಮನಸ್ಸನ್ನು ಕುರಿತು ಹೊರಗೂ ಸಹ ಹೇಳಲಾಗುತ್ತದೆ. ಆದ್ದರಿಂದಲೇ ಬುದ್ಧಿ, ಚಿತ್ತ, ಅಹಮ್ ಒಂದರ ಆಕಾರವನ್ನು, ಜೀವಾತ್ಮದ ಆಕಾರವನ್ನು ಹೊರಗೆ ಹೇಳುತ್ತಿದ್ದೇವೆ. ಗುಣಗಳನ್ನು ಅವುಗಳ ಮಧ್ಯದಲ್ಲಿರುವ ಜೀವಾತ್ಮವನ್ನೂ ಸಹ ಹೇಳುತ್ತಿದ್ದೇವೆ.

**(14) ಶ್ಲೋ॥ 11 : ಯತನ್ತೋ ಯೋಗಿನಶ್ಚೈನಂಪಶ್ಯನ್ತ್ಯಾತ್ಮ ನ್ಯವಸ್ಥಿತಮ್ ।**
**ಯತನ್ತೋಽಪ್ಯಕೃತಾತ್ಮಾನೋ ನೈನಂ ಪಶ್ಯನ್ತ್ಯಚೇತಸಃ ॥**

**(ಆತ್ಮ)**

**ಭಾವಾರ್ಥ**: ಪ್ರಯತ್ನ ಮಾಡುವ ಯೋಗಿಗಳು ದೇಹದಲ್ಲಿರುವ ಆತ್ಮವನ್ನು ನೋಡುತ್ತಾರೆ. ಅಚೇತಸ್ಕರು, ಅಕೃತಾತ್ಮರು ಎಷ್ಟು ಪ್ರಯತ್ನಿಸಿದರು ಆತ್ಮವನ್ನು ತಿಳಿಯಲಾರರು.

**ವಿವರ** : ಮೂರು ಆತ್ಮಗಳು ದೇಹದಲ್ಲಿವೆ. ಅದರಲ್ಲಿ ಜೀವಾತ್ಮ ಪ್ರಯತ್ನಮಾಡಿ ಆತ್ಮವನ್ನು ತಿಳಿದುಕೊಳ್ಳಬೇಕು. ಒಂದು ವಿಧಾನದ ಪ್ರಕಾರ ಯೋಗಪದ್ಧತಿಯಲ್ಲಿ ಜೀವಾತ್ಮ ಪರಮಾತ್ಮನನ್ನು ಸೇರಬೇಕೆಂದರೆ ಮಾರ್ಗ ಮಧ್ಯದಲ್ಲಿರುವುದು ಆತ್ಮವೇ, ಆದ್ದರಿಂದ ಆತ್ಮವನ್ನು ತಿಳಿಯದವರು ಪರಮಾತ್ಮನನ್ನು ತಿಳಿಯಲಾರರು. ಆದುದರಿಂದ ಎಷ್ಟೋಜನ ಬ್ರಹ್ಮ ಯೋಗಿಗಳು ಪ್ರಯತ್ನಮಾಡಿ ತಮ್ಮ ಶರೀರದಲ್ಲಿರುವ ಆತ್ಮವನ್ನು ತಿಳಿದುಕೊಳ್ಳುತ್ತಿದ್ದಾರೆ. ಮನಸ್ಸು ಸ್ವಾಧೀನಪಡದವರು, ಬ್ರಹ್ಮಯೋಗ ಸಾಧನೆಯಲ್ಲಿ ಕೃತಕೃತ್ಯರಾಗದವರು, ಎಷ್ಟು ಪ್ರಯತ್ನಿಸಿದರೂ ಆತ್ಮವನ್ನು ತಿಳಿಯಲಾರರು.

**(14) ಶ್ಲೋ॥ 12 : ಯದಾದಿತ್ಯಗತಂ ತೇಜೋ ಜಗ ದ್ಭಾಸಯತೇಽಖಿಲಮ್ ।**
**ಯಚ್ಚನ್ದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ॥**
**(ಪರಮಾತ್ಮ)**

**ಭಾವಾರ್ಥ** : ಸಮಸ್ತ ಜಗತ್ತನ್ನು ಪ್ರಕಾಶಗೊಳಿಸುವ ಸೂರ್ಯನಲ್ಲಿರುವ ತೇಜಸ್ಸು, ಚಂದ್ರನಿಗಿರುವ ತೇಜಸ್ಸು, ಅಗ್ನಿಗಿರುವ ತೇಜಸ್ಸು ನನ್ನೊಂದರ ತೇಜಸ್ಸೆಂದು ತಿಳಿಯಬೇಕು.

**ವಿವರ** : ಸಮಸ್ತದಲ್ಲಿಯೂ ಮೂಲ ವಸ್ತುವಾಗಿ ಪರಮಾತ್ಮ ಇದೆ. ಯಾವುದರಲ್ಲಾದರು ಯಾರಲ್ಲಾದರೂ ಒಂದು ಪ್ರತ್ಯೇಕತೆ ಇದೆಯೆಂದರೆ, ಆ ಪ್ರತ್ಯೇಕತೆ ಪರಮಾತ್ಮನಿಂದ ಉಂಟಾಗಿರುವುದೆಂದು ತಿಳಿಯಬೇಕು. ಹಾಗೆಯೆ ಸೂರ್ಯನಿಗೆ ಪ್ರತ್ಯೇಕವಾದ ಪ್ರಕಾಶವನ್ನು, ಚಂದ್ರನಿಗಿರುವ ಪ್ರತ್ಯೇಕವಾದ ಬೆಳದಿಂಗಳನ್ನು, ಅಗ್ನಿಗಿರುವ ಪ್ರತ್ಯೇಕವಾದ ಸುಟ್ಟುಹಾಕುವ ಶಾಖ ಪರಮಾತ್ಮನವೇ ಎಂದು ತಿಳಿಯಬೇಕು. ಈ ವಿಷಯ ವಿಭೂತಿ ಯೋಗವೆಂಬ ಅಧ್ಯಾಯದಲ್ಲಿ ಮೊದಲೇ ಹೇಳಿದ್ದರೂ ಸಂದರ್ಭಾನುಸಾರ ಹೇಳಬೇಕಾಗಿ ಬಂದಿದೆ.

**(14) ಶ್ಲೋ॥ 13 : ಗಾ ಮಾವಿಶ್ಯ ಚ ಭೂತಾನಿ ಧಾರಯಾ ಮ್ಯಹ ಮೋಜಸಾ ।**
**ಪುಷ್ಣಾಮಿ ಚೌಷಧೀ ಸ್ಸರ್ವಾ ಸ್ಸೋಮೋ ಭೂತ್ವಾ ರಸಾತ್ಮಕಃ ॥**
**(ಪರಮಾತ್ಮ)**

**ಭಾವಾರ್ಥ** : ಭೂಮಿಯಲ್ಲಿದ್ದು ನನ್ನ ಬಲದಿಂದ ಸಮಸ್ತ ಜೀವರಾಶಿಗಳನ್ನು ನಾನೇ ಧರಿಸುತ್ತಿದ್ದೇನೆ. ರಸಮಯನಾದ ಚಂದ್ರನಾಗಿದ್ದೂ ಸಮಸ್ತ ಔಷಧಿಗಳನ್ನು ಪೋಷಿಸುತ್ತಿದ್ದೇನೆ.

**ವಿವರ** : ಅಣುಅಣುವಿನಲ್ಲಿ ವ್ಯಾಪಿಸಿರುವವನು ಪರಮಾತ್ಮ. ಆತನು ಭೂಮಿಯಲ್ಲಿಯೂ ಇದ್ದಾನೆ. ಭೂಮಿಯಲ್ಲಿದ್ದು ಭೂಮಿಯಿಂದ ಸಮಸ್ತ ಆಹಾರ ಪದಾರ್ಥಗಳ ಉತ್ಪತ್ತಿಗೆ ಬೇಕಾದ ಬಲವನ್ನು ಕೊಡುತ್ತಿದ್ದಾನೆ. ಆಹಾರ ಪದಾರ್ಥಗಳನ್ನು ಭೂಮಿಯಿಂದ ತಯಾರು ಮಾಡಿ ಸಮಸ್ತ ಜೀವಿಗಳನ್ನು ಪೋಷಿಸುತ್ತಿದ್ದಾನೆ. ಅಷ್ಟೇ ಅಲ್ಲದೆ ಆಕಾಶದಲ್ಲಿ ಚಂದ್ರನಾಗಿದ್ದು, ಭೂಮಿ ಮೇಲೆ ಸಸಿಗಳಾಗಿ ಮತ್ತು ವೃಕ್ಷಗಳಾಗಿರುವ ಔಷಧಗಳಿಗೆ ಚಂದ್ರನ ಬೆಳಕಿನ ಮೂಲಕ ರಾಸಾಯನಗಳನ್ನು ಒದಗಿಸಿ, ಅವುಗಳಲ್ಲಿ ಔಷಧಿಶಕ್ತಿ ಉಂಟಾಗುವಂತೆ ಮಾಡುತ್ತಿದ್ದಾನೆ. ಭೂಮಿ ಮೇಲೆ ಬೆಳೆಯುತ್ತಿರುವ ಸಸಿಗಳನ್ನು ವೃಕ್ಷಗಳನ್ನು ಎರಡು

ಭಾಗಗಳಾಗಿ ವಿಭಜಿಸಿ, ಒಂದು ಭಾಗ ಸಮಸ್ತ ಜೀವರಾಶಿಗಳ ಶರೀರಗಳನ್ನು ಪೋಷಿಸುವ ಪೋಷಕಪದಾರ್ಥಗಳಾದ ಆಹಾರಗಳಾಗಿ, ಎರಡನೇ ಭಾಗವನ್ನು ಸಮಸ್ತ ಜೀವರಾಶಿಗಳಿಗೆ ಉಂಟಾಗುವ ರೋಗಗಳ ನಿವೃತ್ತಿಗೆ ಬೇಕಾದ ರಾಸಾಯನಗಳಿರುವ ಔಷಧಿಗಳಾಗಿ, ಪರಮಾತ್ಮನೇ ತನ್ನ ಶಕ್ತಿಯ ಮೂಲಕ ತಯಾರುಮಾಡಿ ಇಡುತ್ತಿದ್ದಾನೆ.

**(14) ಶ್ಲೋ॥ 14 : ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।**
**ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಂ ॥**
**(ಆತ್ಮ)**

**ಭಾವಾರ್ಥ** : ನಾನು ಸಕಲ ಜೀವಿಗಳ ಶರೀರದಲ್ಲಿ ವೈಶ್ವಾನರನೆಂಬ ಅಗ್ನಿಯಾಗಿದ್ದು, ಪ್ರಾಣ ಅಪಾನ ವಾಯುಗಳಿಂದ ಉರಿಯುತ್ತಾ, ನಾಲ್ಕು ವಿಧಗಳಾಗಿ ಆಹಾರಗಳನ್ನು ಪಚನ ಮಾಡುತ್ತಿದ್ದೇನೆ.

**ವಿವರ** : ಸರ್ವ ಶರೀರಗಳಲ್ಲಿ ಪರಮಾತ್ಮ ಆತ್ಮದ ಮೂಲಕ ಚೈತನ್ಯವನ್ನು ಕೊಟ್ಟು ಅವುಗಳ ಕದಲಿಕೆಗೆ ಮೂಲವಾಗಿದ್ದಾನೆ. ಆತ್ಮ, ಜೀವಾತ್ಮಗಳು, ಪರಮಾತ್ಮ ಅಂಶವಾಗಿದ್ದು ಅವುಗಳ ಕೆಲಸ ಅವು ಮಾಡುತ್ತಿವೆ. ಆತ್ಮ ತನ್ನ ಕೆಲಸದಲ್ಲಿನ ಭಾಗವಾದ ಶರೀರಗಳನ್ನು ಕದಲಿಸುವುದಲ್ಲದೆ, ತನ್ನ ಶಕ್ತಿಯನ್ನು ಗ್ರಂಥಿಗಳ ಮೂಲಕ ಪ್ರಸಾರಮಾಡಿ ಅವುಗಳ ಮೂಲಕ ಅತೀತವಾದ ಶಕ್ತಿಯನ್ನು ಬಿಡುಗಡೆ ಮಾಡುತ್ತಿದೆ. ಆತ್ಮ ಚೈತನ್ಯ ಶರೀರವೆಲ್ಲ ಒಂದು ವಿಧವಾಗಿ ಕೆಲಸಮಾಡುತ್ತಾ, ಗ್ರಂಥಿಗಳಿಂದ ತೂರಿ ಮತ್ತೊಂದು ಶಕ್ತಿಯಾಗಿ ಹೊರಗೆ ಬಂದು ಮತ್ತೊಂದು ವಿಧವಾಗಿ ಕೆಲಸಮಾಡುತ್ತಿದೆ. ಲಾಲಾಜಲ ಗ್ರಂಥಿಯಿಂದ ಬಂದಿರುವ ಲಾಲಾಜಲವೆಂಬ ಮಹಿಮೆ ಇರುವ ರಸವು, ಕ್ಲೋಮರಸಗ್ರಂಥಿಯಿಂದ ಹೊರಗೆ ಬಂದಿರುವ ಕ್ಲೋಮರಸ, ಹಾಗೆಯೇ ಪೈತ್ಯರಸಗ್ರಂಥಿಯಿಂದ ಬಂದಿರುವ ಪೈತ್ಯರಸಗಳು ಮೂರು ಶಕ್ತಿಯುಕ್ತವಾದವು. ಈ ಮೂರು ರಸಗಳು ಒಂದುಕಡೆ ಜೀರ್ಣಾಶಯದಲ್ಲಿ ಬೆರೆತಾಗ ಒಂದು ವಿಧವಾದ ಅಗ್ನಿ ಏರ್ಪಡುತ್ತಿದೆ. ಅದರ ಹೆಸರೇ **'ವೈಶ್ವಾನರ'** ಎನ್ನುತ್ತಿದ್ದಾರೆ. ಈ ಮೂರು ರಸಗಳ ಕೂಡುವಿಕೆಯ ಶಕ್ತಿ ತೀಕ್ಷಣವಾಗಿದೆ. ಆದ್ದರಿಂದ ಜೀರ್ಣಾಶಯದಲ್ಲಿರುವ ನಾಲ್ಕುವಿಧಗಳಾದ ಆಹಾರಗಳು ಜೀರ್ಣವಾಗುತ್ತಿವೆ. ನೀರು ತಾಕಿದ ತಕ್ಷಣ ಗಟ್ಟಿ ಸುಣ್ಣದಕಲ್ಲು ಮೃದುವಾಗಿ ಬಿಡಿಬಿಡಿಯಾದಂತೆ ರಸಗಳ ಪ್ರಭಾವಕ್ಕೆ ಗಟ್ಟಿ ಆಹಾರವೂ ಸಹ ಮೃದುವಾಗಿ ಬದಲಾವಣೆಯಾಗುತ್ತಿದೆ.

ನಾವು ಭುಜಿಸುವ ಆಹಾರಗಳು ನಾಲ್ಕು ಭಾಗಗಳಾಗಿವೆ. 1) ಹಿಟ್ಟಿನ ಪದಾರ್ಥಗಳು (ಕಾರ್ಭೋರ್ಹೈಡ್ರೇಟ್ಸ್) 2) ಮಾಂಸದ ಪದಾರ್ಥಗಳು (ಪ್ರೋಟೀನ್ಸ್) 3) ಖನಿಜ ಲವಣಗಳು (ಮಿನರಲ್ಸ್) 4) ಎಣ್ಣೆ, ಕೊಬ್ಬಿನ (ಲಿಪಿಡ್ಸ್, ಆಯಿಲ್ಸ್) ಪದಾರ್ಥಗಳು. ನಾವು ನಿತ್ಯ ಭುಜಿಸುವವುಗಳಲ್ಲಿರುವ ಈ ನಾಲ್ಕು ವಿಧಗಳ ಪದಾರ್ಥಗಳನ್ನು ಆತ್ಮಶಕ್ತಿಯಿಂದ ತಯಾರಾದ ರಸಗಳೇ ಜೀರ್ಣ ಮಾಡುತ್ತಿವೆ.

**ಗಮನಿಕೆ** : ನಾಲ್ಕು ವಿಧ ಆಹಾರಗಳನ್ನು ಕುರಿತು ಬಹಳಜನರು ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯ ಎಂದು ಬರೆದಿದ್ದಾರೆ. ದಂತಗಳಿಂದ ಜಗಿದು ತಿನ್ನುವವು, ದಂತಗಳಿಂದ ಜಗಿಯದೇ ತಿನ್ನುವವು, ನಾಲಿಗೆಯಿಂದ ಚಪ್ಪರಿಸುತ್ತಾ ತಿನ್ನುವವು, ನಾಲಿಗೆಯಿಂದ ಚಪ್ಪರಿಸದೆಯೇ ಕುಡಿಯುವವು ಎಂಬ ನಾಲ್ಕು ವಿಧಗಳಾಗಿ ತಿನ್ನುವಪದ್ಧತಿಯನ್ನು ಹೇಳಿದ್ದಾರೆ. ತಿನ್ನುವ ಪದ್ಧತಿಯನ್ನು ಅನುಸರಿಸಿ ವಿಭಜಿಸಿದ ಅದು ಮಾನವರಿಗೊಬ್ಬರಿಗೇ ಸರಿಹೋಗುತ್ತದೆ. ದಂತಗಳಿಲ್ಲದ ಹಲ್ಲಿ, ಕಪ್ಪೆಗಳಿಗೆ ಸರಿಹೋಗುವುದಿಲ್ಲ. ಗೀತೆಯಲ್ಲಿ ಹೇಳಿದ ವಿಷಯಗಳೆಲ್ಲವೂ ಸರ್ವಜೀವರಾಶಿಗಳಿಗೂ ಅನ್ವಯಿಸುವವಾಗಿರಬೇಕು. ಮನುಷ್ಯರಿಗೆ ಸರಿಹೋಗಿ ಜಂತುಗಳಿಗೆ ಸರಿಹೋಗದ ಬೋಧನೆ ಜಗತ್ತಿಗೆಲ್ಲವೂ ಅನ್ವಯಿಸುವುದಿಲ್ಲ. ಹಾಗೆ ಹೇಳುವವನು ಜಗದ್ಗುರು ಅಲ್ಲ. ಜಗತ್ತಿನಲ್ಲಿನ ಸಮಸ್ತ ಜೀವಿಗಳಿಗೆಲ್ಲಾ ಅನ್ವಯಿಸುವ ಬೋಧನೆ ಹೇಳುವವನೇ ಜಗದ್ಗುರು. ಶಿಷ್ಯರ ಸಂಖ್ಯೆಯನ್ನನುಸರಿಸಿ ಜಗದ್ಗುರು ಅಲ್ಲ, ಬೋಧನೆಗಳನ್ನನುಸರಿಸಿ ಜಗದ್ಗುರು ಇರುತ್ತಾನೆ. **ಶ್ರೀಕೃಷ್ಣನು ಹೇಳಿದ ಗೀತಾ ಶಾಸ್ತ್ರವೆಲ್ಲವೂ ಸರ್ವಜೀವಗಳಿಗೂ ಅನ್ವಯಿಸುವುದಾದ್ದರಿಂದ ಆತನಿಗೆ ಶಿಷ್ಯರು ಇಲ್ಲದಿದ್ದರೂ ಜಗದ್ಗುರು ಆಗಿದ್ದಾನೆ.** ಆತನ ಬೋಧನೆಯನ್ನು ಯಾರು ಸಂಕುಚಿತ ಬೋಧನೆ ಮಾಡಬಾರದು. ನಾವು ಹೇಳಿದ ನಾಲ್ಕು ವಿಧಗಳ ಆಹಾರಪದಾರ್ಥಗಳು ಸರ್ವಜೀವಿಗಳ ಶರೀರಗಳಿಗೆ ಅವಶ್ಯಕವಾದವು. ಅವುಗಳ ಆಹಾರದಲ್ಲಿರುವವು. ಹಾಗೆ ಹೇಳಿಕೊಳ್ಳದೆಹೋದರೆ ಮಾಂಸ ತಿನ್ನುವ ಜಂತುಗಳು ದಂತಗಳಿಂದ ತಿನ್ನುವ ಭಕ್ಷ್ಯಗಳನ್ನೇ ತಿನ್ನುತ್ತವಾಗಲಿ ಅವುಗಳಿಗೆ ಲೇಹ್ಯಗಳು, ಭೋಜ್ಯ, ಚೋಷಣಗಳಿರುವುದಿಲ್ಲ.

**(14) ಶ್ಲೋ॥ 15 : ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋಮತ್ತಃ ಸ್ಮೃತಿರ್ಜ್ಞಾನ ಮಪೋಹನಂಚ।**
**ವೇದೈಶ್ಚ ಸೈರ್ವರಹ ಮೇವ ವೇದ್ಯೋ ವೇದಾನ್ತಕೃ ದ್ವೇದವಿ ದೇವ ಚಾಹಮ್ ॥**
**(ಆತ್ಮ)**

**ಭಾವಾರ್ಥ** : ಸರ್ವಜೀವರಾಶಿಗಳ ಹೃದಯ ಸ್ಥಾನದಲ್ಲಿಯೂ ನಾನಿದ್ದೇನೆ. ಸ್ಮೃತಿ, ಜ್ಞಾನ, ಊಹೆ ಅದರ ಮರೆವು ನನ್ನಿಂದಲೇ ಆಗುತ್ತಿವೆ. ವೇದವೇದಾಂತಗಳು ನನ್ನನ್ನೇ ತಿಳಿಸುತ್ತಿವೆ. ವೇದಗಳನ್ನು ತಿಳಿದವನು ನಾನೇ.

**ವಿವರ** : ಹೃದಿ ಎಂದರೂ ಮತ್ತು ಹೃದಯ ಎಂದರೂ ಎರಡು ಒಂದೇ. ಹೃದಯ ಎಂದರೆ ಗುಂಡಿಗೆ (ಹಾರ್ಟ್) ಎಂದು ಬಹಳಜನರ ಭಾವದಲ್ಲಿದೆ. ಆ ಭಾವ ಬಹಳ ತಪ್ಪು. ಹೃದಯ ಎಂದರೆ ಗುಂಡಿಗೆ ಅಲ್ಲವೆಂದು ಬಹಳ ಸಲ ಹೇಳಿದ್ದೇವೆ. ಆಧ್ಯಾತ್ಮಿಕ ವಿದ್ಯೆಯಲ್ಲಿ ಹೃದಯ ಎಂದರೆ ಬ್ರಹ್ಮನಾಡಿ ಎಂದು ಅರ್ಥ. ಶರೀರ ಮಧ್ಯದಲ್ಲಿರುವ ಬ್ರಹ್ಮನಾಡಿಯಲ್ಲಿ ಆತ್ಮ ನಿವಾಸ ಮಾಡುತ್ತಿದೆ. ಎಲ್ಲಾ ಜೀವರಾಶಿಗಳ ಶರೀರದಲ್ಲಿನ ಬ್ರಹ್ಮನಾಡಿಯಲ್ಲಿಯೇ ಆತ್ಮ ನಿವಾಸಿಸುತ್ತಿದೆ. ಆದ ಕಾರಣ ಮೇಲಿನ ಶ್ಲೋಕದಲ್ಲಿ **"ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ"** ಎಂದು ಹೇಳಲಾಗಿದೆ. ಶರೀರದಲ್ಲಿ ಜೀವಾತ್ಮ ಆತ್ಮಗಳು ಬೇರೆ ಬೇರೆಯಾಗಿವೆ. ಶರೀರದಲ್ಲಿನ ಜೀವಾತ್ಮ ಯಾವ ಕೆಲಸ ಮಾಡುವುದಿಲ್ಲ. ಆದರೂ ಎಲ್ಲ ತಾನೇ ಮಾಡಿದಂತೆ ಭ್ರಾಂತಿ ಹೊಂದುತ್ತಿದೆ. ವಾಸ್ತವಕ್ಕೆ ಎಲ್ಲಾ ಕೆಲಸಗಳು ಆತ್ಮವೇ ಮಾಡುತ್ತಿದೆ. ಶರೀರದಲ್ಲಿ ಸ್ಮೃತಿ, ಜ್ಞಾನ, ಊಹೆ ಮತ್ತು ಮರೆವು ಆತ್ಮನಿಂದಲೇ ಉಂಟಾಗುತ್ತವೆ. ಶರೀರದಲ್ಲಿ ಆತ್ಮ ಎಷ್ಟೋ ಕಾರ್ಯಗಳನ್ನು ಮಾಡುತ್ತಿದ್ದರು ಇಲ್ಲಿ ಪ್ರತ್ಯೇಕಿಸಿ ಮೂರು ಕಾರ್ಯಗಳನ್ನು ಮಾಡುತ್ತಿದ್ದಂತೆ ಹೇಳಲಾಗಿದೆ. ಒಂದು ಸ್ಮೃತಿ, ಎರಡನೆಯದು ಜ್ಞಾನ, ಮೂರನೆಯದು ಊಹೆ. ಈ ಮೂರನ್ನು ಆತ್ಮ ಬುದ್ಧಿಗೆ ತಿಳಿಸುತ್ತಿದೆ. ಊಹೆ ಎಂದರೆ ಆಲೋಚನೆ ಎಂದು, ಜ್ಞಾನ ಎಂದರೆ ಪ್ರಪಂಚ ಜ್ಞಾನ ಎಂದೂ, ಸ್ಮೃತಿ ಎಂದರೆ ಜ್ಞಾಪಕ ಎಂದೂ ಈ ಮೂರು ಮನಸ್ಸಿನಿಂದ ಉಂಟಾಗುತ್ತಿವೆ ಎಂದೂ ಎಲ್ಲರೂ ಅಂದುಕೊಳ್ಳುವುದು ನಡೆಯುತ್ತಿದೆ. ಈ ಮೂರು ವಾಸ್ತವವಾಗಿ ಮನಸ್ಸಿಗೆ ಉಂಟಾಗುವವು ಅಲ್ಲ. ಸ್ಮೃತಿ, ಜ್ಞಾನ, ಊಹೆಯನ್ನು ಮೊದಲು ಆತ್ಮ ಬುದ್ಧಿಗೆ ತಿಳಿಸುತ್ತಿದೆ. ಆತ್ಮದ ಮೂಲಕ ಬುದ್ಧಿಗೆ ಹುಟ್ಟುವ ಸ್ಮೃತಿ ಪ್ರತ್ಯೇಕವಾದುದು. ಮನುಷ್ಯ ನಿದ್ರಾವಸ್ಥೆಯಲ್ಲಿದ್ದು ಶರೀರದಲ್ಲಿ ಮನಸ್ಸು ಬುದ್ಧಿ ಸ್ತಬ್ದತೆಯಾಗಿರುವಾಗ ಆತ್ಮನಿಂದ ಬುದ್ಧಿಯ ಮೂಲಕ ಬರುವ ಎಚ್ಚರಿಕೆಯನ್ನು ಸ್ಮೃತಿ ಎನ್ನುತ್ತಿದ್ದೇವೆ. ಪ್ರತಿದಿನ ನಿದ್ರೆಯಿಂದ ಬರುವ ಎಚ್ಚರವನ್ನು ಸ್ಮೃತಿ ಎನ್ನುತ್ತಿದ್ದೇವೆ. ಹಾಗೆಯೇ ಶರೀರದಲ್ಲಿ ಪರಮಾತ್ಮನ ಜ್ಞಾನವನ್ನು ತಿಳಿಸುವುದು ಆತ್ಮ. ಪ್ರಪಂಚ ಜ್ಞಾನವನ್ನು ಐದು ಇಂದ್ರಿಯಗಳಿಂದ ತಿಳಿಸುವುದು ಮನಸ್ಸು. ಪರಮಾತ್ಮನ ವಿವರವು ಆತ್ಮಕ್ಕೆ ತಿಳಿಯುತ್ತದೆ ಆದ್ದರಿಂದ ಪರಮಾತ್ಮ ಜ್ಞಾನವನ್ನು ತಿಳಿಸುವುದು ಆತ್ಮ ಎಂದು ತಿಳಿಯಬೇಕು.

ಊಹೆ ಆತ್ಮದಿಂದ ಹುಟ್ಟುತ್ತಿದೆ. ಹಾಗೆಯೇ ಆಲೋಚನೆ ಮನಸ್ಸಿಗೆ ಉಂಟಾಗುತ್ತಿದೆ. ಊಹೆ ಹೃದಯದಿಂದ ಹೊಸದಾಗಿ ಹುಟ್ಟುತ್ತಿದೆ. ಹಾಗೆ ಹುಟ್ಟಿದ ಊಹೆ ಪುನಃ ಅಡಗಿಹೋಗುತ್ತಿದೆ. ಎಲ್ಲಿಲ್ಲದ ವಿವರ ಮೊದಲು ಆತ್ಮನಿಂದ ಹುಟ್ಟುತ್ತಿದೆ. ಉದಾಹರಣೆಗೆ ಮೊದಲು ಯಾರಿಗೂ ತಿಳಿಯದ ಟೆಲಿವಿಜನ್ ಎನ್ನುವ ಯಂತ್ರದ ವಿವರವನ್ನು ಆತ್ಮ ಮೊದಲು ಒಬ್ಬ ಮನುಷ್ಯನ ಬುದ್ಧಿಗೆ ತಿಳಿಸಿದಾಗ, ಅದನ್ನು ಆ ಮನುಷ್ಯ ಕಂಡುಹಿಡಿ ದಿದ್ದಾನೆಂದು ಪ್ರಚಾರವಾಗಿದೆ. ರೇಡಿಯೋವನ್ನು ಮಾರ್ಕೋನಿ ಎಂಬ ವ್ಯಕ್ತಿ ಕಂಡುಹಿಡಿದಿದ್ದಾನೆ ಎನ್ನುತ್ತಿದ್ದೇವೆ. ವಾಸ್ತವಕ್ಕೆ ಮಾರ್ಕೋನಿ ಎಂಬ ವ್ಯಕ್ತಿ ಶರೀರದಲ್ಲಿನ ಆತ್ಮ ಆತನ ಬುದ್ಧಿಗೆ ಊಹೆ ಮೂಲಕ ತಿಳಿಸಿದ ವಿಷಯವೇ ರೇಡಿಯೋ. ಆತನ ಆತ್ಮ ತಿಳಿಸಿದ ವಿಷಯವು ಆತನಿಗು ತಿಳಿಯದು. ಹಾಗೇ ಪಕ್ಕದ ಮನುಷ್ಯರಿಗೂ ತಿಳಿಯದು. ಆದ ಕಾರಣ ನಾನೇ ರೇಡಿಯೋವನ್ನು ಕಂಡುಹಿಡಿದಿದ್ದೇನೆಂದು ಆತನು ಅಂದುಕೊಂಡಾಗ, ಮಾರ್ಕೋನಿ ಕಂಡುಹಿಡಿದಿದ್ದಾನೆಂದು ಪ್ರಜೆಗಳು ಅಂದುಕೊಳ್ಳುತ್ತಿದ್ದಾರೆ. ಹೀಗೆಯೆ ಈ ದಿನ ಭೂಮಿ ಮೇಲೆ ಪ್ರಚಾರಕ್ಕೆ ಬಂದಿರುವ ವಿಮಾನಗಳು, ರೈಲುಗಳು, ಕಂಪ್ಯೂಟರ್‌ಗಳು ಮೊದಲಾದ ಅನೇಕ ಪರಿಕರಗಳನ್ನು ಆತ್ಮ ತಿಳಿಸಿರುವವೇ, ಆದರೂ ಆ ವಿವರ ನಮಗೆ ತಿಳಿಯದಂತೆಹೋಗಿದೆ. ಆದ್ದರಿಂದ ಮೇಲಿನ ಶ್ಲೋಕದಲ್ಲಿ ನನ್ನಿಂದಲೇ ಊಹೆ ಉಂಟಾಗುತ್ತಿದೆ ಎಂದು ಹೇಳಲಾಗಿದೆ. ಮಾನವನ ಹೃದಯದಲ್ಲಿ ಕದಲಿದ ಮೆದಲದ ಊಹೆ ಪುನಃ ಮರೆತುಹೋಗುವುದೂ ಸಹ ನಡೆಯುತ್ತಿದೆ. ಕೆಲವು ಜನರು ಮಾತ್ರ ಬಂದಿರುವ ಊಹೆಯನ್ನು ಮನಸ್ಸಿನಲ್ಲಿ ಲಗ್ನಮಾಡುತ್ತಿದ್ದಾರೆ. ಹಾಗೆ ಮನಸ್ಸಿನಲ್ಲಿ ಲಗ್ನ ಮಾಡಲಾದ ಊಹೆ ಪುನಃ ಮನೋಜ್ಞಾಪಕಕ್ಕೆ ಬಂದರೆ ಆಗ ಅದು ಆಲೋಚನೆಯಾಗುತ್ತದೆ. ಮನುಷ್ಯನಿಗೆ ಬರುವ ಊಹೆಗಳೆಲ್ಲವೂ ಆಲೋಚನೆಗಳು ಆಗುವುದಿಲ್ಲ. ಏಕೆಂದರೆ ಬಂದಿರುವ ಊಹೆ ಬುದ್ಧಿಯಲ್ಲಿಯೇ ಅಡಗಿಹೋಗುತ್ತಿದೆ. ಮನಸ್ಸಿನಲ್ಲಿ ಅಡಗಿ ಹೋದರೆ ಯಾವಾಗಾದರು ಆಲೋಚನೆ ರೂಪದಲ್ಲಿ ಬರುತ್ತದೆ. ಹಾಗಾಗದೆಹೋದರೆ ಶಾಶ್ವತವಾಗಿ ಮರೆತುಹೋಗು ವುದೂ ನಡೆಯುತ್ತದೆ. ಆದ್ದರಿಂದ ಊಹೆ ಮರೆವೂ ಸಹ ನನ್ನಿಂದಲೇ ಉಂಟಾಗುತ್ತಿವೆಯೆಂದು ಮೇಲಿನ ಶ್ಲೋಕದಲ್ಲಿ ಹೇಳಲಾಗಿದೆ.

**(14) ಶ್ಲೋ॥ 16 : ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವಚ ।**
**ಕ್ಷರ ಸ್ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥**
**(ಆತ್ಮ, ಜೀವಾತ್ಮ)**

**ಭಾವಾರ್ಥ** : ಲೋಕದಲ್ಲಿ ಎರಡು ವಿಧದ ಪುರುಷರು ಇದ್ದಾರೆ. ಅವರು ಕ್ಷರನೆಂದು, ಅಕ್ಷರನೆಂದೂ ಹೇಳಲಾಗುತ್ತಿದೆ. ಕ್ಷರನು ಸರ್ವಭೂತಗಳಲ್ಲಿ ಇದ್ದಾನೆ. ಕ್ಷರನೊಂದಿಗೆ ಕೂಟಸ್ತನಾಗಿರುವವನು ಅಕ್ಷರನೆಂದು ಹೇಳುತ್ತಿದ್ದಾರೆ.

**ವಿವರ** : ಪ್ರಪಂಚ ತಯಾರಾದ ನಂತರ ಮೊಟ್ಟಮೊದಲು ಹುಟ್ಟಿರುವುದು ಆತ್ಮ. ಆತ್ಮ ಹುಟ್ಟಿದ ನಂತರ ಬದಲಾವಣೆಹೊಂದುವ ಪ್ರಕೃತಿ ತಯಾರಾಗಿದೆ. ಆತ್ಮ ಪುರುಷತತ್ತ್ವವಾಗಿದ್ದು, ಪ್ರಕೃತಿ ಸ್ತ್ರೀ ತತ್ತ್ವವಾಗಿದೆ. ಆತ್ಮವನ್ನು ಪುರುಷತತ್ತ್ವವಾಗಿ, ಪ್ರಕೃತಿಯನ್ನು ಸ್ತ್ರೀ ತತ್ತ್ವವಾಗಿ ಏಕೆ ಹೇಳಬೇಕು ಎಂಬ ಪ್ರಶ್ನೆಯೂ ಬರುತ್ತದೆ. ಅದಕ್ಕೆ ಸಮಾಧಾನ ಮೊದಲು ಏನಾದರು ಹುಟ್ಟುವುದಕ್ಕೆ ಬೀಜ ಅಗತ್ಯ. ಬೀಜವಿದ್ದರೆ ಅದಕ್ಕೆ ಸಂಬಂಧಿಸಿರುವುದು ಹುಟ್ಟುತ್ತದೆ. ಮೊದಲು ಪ್ರಪಂಚ ಹುಟ್ಟುವುದಕ್ಕೆ ಬೀಜವೊಂದು ಇದೆ. ಅದೇ ಏನು ಅಲ್ಲದಿರುವುದು, ಯಾವ ಹೆಸರು ಇಲ್ಲದಿರುವುದು. ಅದರಿಂದ ಹುಟ್ಟಿರುವುದು ಪ್ರಕೃತಿ. ಉತ್ಪತ್ತಿ ಮಾಡಿದ ಬೀಜವು ಪುರುಷನಾಗಿ, ಉತ್ಪತ್ತಿ ಮಾಡಲ್ಪಟ್ಟ ಪ್ರಕೃತಿ ಸ್ತ್ರೀಯಾಗಿ ಲೆಕ್ಕಿಸಲ್ಪಟ್ಟಿದೆ. ಈ ವಿಷಯವನ್ನೇ ಹಿಂದೆ ಗುಣತ್ರಯ ವಿಭಾಗಯೋಗದಲ್ಲಿ 3, 4 ಶ್ಲೋಕಗಳಲ್ಲಿ ಸ್ಪಷ್ಟವಾಗಿ ತಿಳಿಸಲಾಗಿದೆ ನಿಭಾಯಿಸುವವನು ಪತಿ, ನಿಭಾಯಿಸಲ್ಪಡುವವಳು ಪತ್ನಿ ಎನ್ನುವಂತೆ ಉತ್ಪತ್ತಿ ಮಾಡುವುದು ಪುರುಷನು, ಉತ್ಪತ್ತಿ ಮಾಡಲ್ಪಡುವುದು ಸ್ತ್ರೀಯಾಗಿ ಲೆಕ್ಕಿಸಿ ಹೇಳುತ್ತಿದ್ದೇವೆ. ಇದರಿಂದ ಆತ್ಮ ಯಾವ ವಿಧವಾಗಿದ್ದರು ಪುರುಷನಾಗಿ, ಪ್ರಕೃತಿ ಯಾವ ರೂಪದಲ್ಲಿದ್ದರು ಸ್ತ್ರೀಯಾಗಿ ಹೇಳಿಕೊಳ್ಳಬೇಕಾಗಿ ಬಂದಿದೆ.

ಪುರುಷನಿಂದ ಹುಟ್ಟಿರುವುದು ಪ್ರಕೃತಿ. ವಿಶ್ವ ಇರುವವರೆಗೂ ಪುರುಷತತ್ತ್ವವಿರುವ ಆತ್ಮ ಸ್ತ್ರೀತತ್ತ್ವವಿರುವ ಪ್ರಕೃತಿ ಇರುತ್ತದೆ. ಮೊಟ್ಟ ಮೊದಲು ಪ್ರಪಂಚ ತಯಾರಾದ ನಂತರ ಪುರುಷನೆಂದು ಹೇಳಿಕೊಳ್ಳುವುದರಿಂದ ಆತ್ಮ ಬಹಿರ್ಗತವಾಗಿದೆಯೆಂದು ವಿಭೂತಿಯೋಗದಲ್ಲಿ ಆರನೇ ಶ್ಲೋಕದಲ್ಲಿ ತಿಳಿದುಕೊಂಡಿದ್ದೇವೆ. ಬಹಿರ್ಗತವಾದ ಆತ್ಮ ಏಳು ಭಾಗಗಳಾಗಿ ವಿಭಜಿಸಲಾಗಿದೆ ಎಂದೂ ಸಹ ತಿಳಿದುಕೊಂಡಿದ್ದೇವೆ. ಏಳು ಭಾಗಗಳಲ್ಲಿ ಮೇಲಿನ ಭಾಗದಲ್ಲಿರುವ ಆತ್ಮ ಭಾಗ ಸ್ವಲ್ಪ ಚರ ಪ್ರಕೃತಿ ಭಾಗಗಳಿಂದ ಬೇರೆ ಮಾಡಲಾಗಿದೆ. ಆ ವಿಧವಾಗಿ ಬೇರೆ ಮಾಡಲಾದ ಸ್ವಲ್ಪ ಆತ್ಮವನ್ನು ಪ್ರತ್ಯೇಕವಾದ ಹೆಸರಿನಿಂದ ಕರೆಯುತ್ತಿದ್ದೇವೆ. ಅದರ ಹೆಸರೇ **"ಜೀವಾತ್ಮ". ಏನು ಅಲ್ಲದಿರುವುದರಿಂದ ಅದರ ಅಂಶದಿಂದ ಬಿಡುಗಡೆಯಾದ ಅದರ ಹೆಸರು ಆತ್ಮವಾಗಿದ್ದು, ಆತ್ಮನಿಂದ ಬೇರೆಯಾಗಿ ಪ್ರತ್ಯೇಕವಾದ ಭಾಗವಾಗಿರುವುದು**

**ಜೀವಾತ್ಮವೆಂದು ಜ್ಞಾಪಕ ಇಟ್ಟುಕೊಳ್ಳಬೇಕು.** ಇಲ್ಲಿ ಇನ್ನೂ ಸ್ವಲ್ಪ ವಿವರವಾಗಿ ತಿಳಿದುಕೊಂಡರೆ, ಮೊದಲು ತಯಾರಾದ ಆತ್ಮ ಏಳು ಭಾಗಗಳಾಗಿದೆ ಎಂದು ಹೇಳಿಕೊಂಡಿದ್ದೇವೆ. ಆ ಏಳು ಭಾಗಗಳು ಹೇಗಿವೆ ಎಂದರೆ! ಮೊದಲು ಆತ್ಮ ಎರಡು ಸಮಾನ ಭಾಗಗಳಾಗಿ ವಿಭಜಿಸಲಾಗಿದೆ. ಆ ಎರಡರಲ್ಲಿ ಒಂದು ಹಾಗೆಯೇ ನಿಂತುಹೋಗಿ ಎರಡನೆಯದು ಪುನಃ ಎರಡು ಸಮಾನ ಭಾಗಗಳಾಗಿ ಸೀಳಿಹೋಗಿದೆ. ಈ ವಿಧವಾಗಿ ಸೀಳಿಹೋಗಿರುವವು ಒಂದು ಹಾಗೆಯೇ ಇರುವಾಗ ಎರಡನೆಯದು ಸಮಾನವಾಗಿ ಸೀಳಿಹೋಗುತ್ತಾ ಕೊನೆಗೆ ಏಳು ಭಾಗಗಳಾಗಿ ತಯಾರಾಗಿದೆ. ಉದಾಹರಣೆಗೆ ನಂತರ ಪುಟದಲ್ಲಿನ ಚಿತ್ರ ನೋಡಬಹುದು.

ಈ ವಿಧವಾಗಿ ಆತ್ಮ ಏಳು ಭಾಗಗಳಾಗಿ ವಿಭಜಿಸಲಾಗಿದೆ. ಉದಾಹರಣೆಗೆ ಸಂಖ್ಯೆಗಳಲ್ಲಿ ಗುರುತಿಸಲಾಗಿದೆ. ಆತ್ಮ ಎರಡು ಸಾವಿರ ಯೂನಿಟ್‌ಗಳ ಶಕ್ತಿಯಾಗಿರುವಂತೆ ತಿಳಿಯುತ್ತಿದೆ. ಅದರಲ್ಲಿ ಸಾವಿರ ಯೂನಿಟ್‌ಗಳು ಮೊದಲ ಭಾಗವಿರುವಾಗ, ಉಳಿದ ಆರು ಭಾಗಗಳು ಸಾವಿರ ಯೂನಿಟ್‌ಗಳಾಗಿ ವಿಭಜಿಸಲಾಗಿದೆ ಎಂದು ಗ್ರಹಿಸಬಹುದು. ಪ್ರಥಮದಲ್ಲಿರುವ ಮೊದಲ ಭಾಗ ಸಾವಿರಯೂನಿಟ್‌ಗಳ ಶಕ್ತಿ ಹೊಂದಿದೆ ಎನ್ನುವುದಕ್ಕೆ ಗುರುತಾಗಿ ಆ ಮೊದಲ ಭಾಗವನ್ನು ಸಹಸ್ತ್ರಾರವೆಂದು ಹೆಸರು ಇಟ್ಟುಕೊಂಡಿದ್ದೇವೆ. ಇದು ತಿಳಿದು ಇಟ್ಟಿರುವ ಹೆಸರು ಅಲ್ಲದಿದ್ದರೂ ಕಾಕತಾಳೀಯವಾಗಿ ಸಹಸ್ತ್ರಾರವೆಂದೇ ಹೆಸರು ಬಂದಿದೆ. ಇದೆಲ್ಲಾ ಯಾವ ಶಾಸ್ತ್ರಪ್ರಮಾಣದಿಂದ ಹೇಳುತ್ತಿದ್ದೀರೆಂದು ಕೇಳುವವರು ಇರಬಹುದು. **ಅದಕ್ಕೆ ನಮ್ಮ ಉತ್ತರ ಏನೆಂದರೆ! ಇದೆಲ್ಲವೂ ಬ್ರಹ್ಮವಿದ್ಯಾ ಶಾಸ್ತ್ರಪ್ರಮಾಣದಿಂದ ಹೇಳಲಾಗಿದೆ ಎಂದು ತಿಳಿಸುತ್ತಿದ್ದೇವೆ. ಇದೆಲ್ಲಿಯ ಶಾಸ್ತ್ರ ಎಂದುಕೊಳ್ಳಬೇಡಿ ಪ್ರಪಂಚದಲ್ಲಿರುವ ಷಟ್ ಶಾಸ್ತ್ರಗಳಲ್ಲಿ ದೊಡ್ಡ ಶಾಸ್ತ್ರ ಇದೇ.** ಉಳಿದ ಐದು ಇದಕ್ಕಿಂತ ಚಿಕ್ಕವು. ಐದು ಶಾಸ್ತ್ರಗಳು ಪ್ರಕೃತಿಗೆ ಸಂಬಂಧಿಸಿರುವವಾಗಿದ್ದು, ಆರನೆಯದಾದ ಬ್ರಹ್ಮವಿದ್ಯಾಶಾಸ್ತ್ರ ಪರಮಾತ್ಮನಿಗೆ ಸಂಬಂಧಿಸಿರುವುದು. ಬ್ರಹ್ಮವಿದ್ಯಾಶಾಸ್ತ್ರದ ಪ್ರಕಾರ ಆತ್ಮ ಏಳು ಭಾಗಗಳಾಗಿ ವಿಭಜಿಸಲಾಗಿದ್ದು, ನಂತರ ಚರಪ್ರಕೃತಿಯಿಂದ ತಯಾರು ಮಾಡಲಾದ ಬುದ್ಧಿ, ಚಿತ್ತ, ಅಹಮ್, ಮನಸ್ಸಿನಿಂದ ಜೀವಾತ್ಮ ತಯಾರಾಗಿದೆ. ಜೀವಾತ್ಮ ಆತ್ಮದಲ್ಲಿನ ಸ್ವಲ್ಪ ಭಾಗವೇ ಎಂದು ತಿಳಿದುಕೊಂಡಿದ್ದೇವೆ ಅಲ್ಲವೆ! ಆತ್ಮನಲ್ಲಿನ ಎಷ್ಟು ಭಾಗದಿಂದ ಜೀವಾತ್ಮ ತಯಾರಾಗಿದೆ ಎಂದು ಪ್ರಶ್ನೆ ಬಂದರೆ ಅದಕ್ಕೆ ಉತ್ತರವನ್ನೂ ಸಹ ನೋಡಬೇಕಾಗಿದೆ. ಆತ್ಮ ಏಳು ಭಾಗಗಳಲ್ಲಿ ಮೊದಲ ಭಾಗ ಸಾವಿರ ಯೂನಿಟ್‌ಗಳಾಗಿ ಇದೆಯೆಂದುಕೊಂಡಿದ್ದೇವೆ ಅಲ್ಲವೆ! ಆ ಸಾವಿರ ಯೂನಿಟ್‌ಗಳಲ್ಲಿ ಅರ್ಧ ಐನೂರು ಯೂನಿಟ್‌ಗಳನ್ನು ಚರ ಪ್ರಕೃತಿ ಸೀಳಿಸಿಕೊಂಡು ಬುದ್ಧಿ ಚಿತ್ತ ಅಹಂಕಾರ ರೂಪಗಳಿಂದ ಸುತ್ತಿಕೊಂಡಾಗ ಜೀವಾತ್ಮವಾಗಿದೆ.


ಪರಮಾತ್ಮನಿಂದ ಆತ್ಮ ವಿಭಜನೆಯ ಚಿತ್ರ
2000 ಪರಮಾತ್ಮನಿಂದ ಬಂದಿರುವ ಆತ್ಮ
1000
1000 → ಮೊದಲ ಆತ್ಮ ಭಾಗ
500
500 → ಎರಡನೆ ಆತ್ಮ ಭಾಗ
250
250 → ಮೂರನೆ ಆತ್ಮ ಭಾಗ
125
125 → ನಾಲ್ಕನೆ ಆತ್ಮ ಭಾಗ
$62\frac{1}{2}$
$62\frac{1}{2}$ → ಐದನೆಯ ಆತ್ಮ ಭಾಗ
$31\frac{1}{4}$
$31\frac{1}{4}$ → ಆರನೆಯ ಆತ್ಮ ಭಾಗ
$31\frac{1}{4}$ → ಏಳನೆಯ ಆತ್ಮ ಭಾಗ

ಅಂದರೆ ಮೊದಲ ಆತ್ಮ ಭಾಗದಲ್ಲಿ ಅರ್ಧ ಜೀವಾತ್ಮವಾಗಿ ತಯಾರಾಗಿದೆ. ಆ ವಿವರ ಅರ್ಥವಾಗುವಂತೆ ನಂತರ ಪುಟದಲ್ಲಿ ಚಿತ್ರ ರೂಪದಲ್ಲಿ ನೋಡೋಣ.

ಈ ವಿಧವಾಗಿ ಮೊದಲ ಭಾಗದಲ್ಲಿ ಅರ್ಧ ಜೀವಾತ್ಮವಾಗಿದ್ದು, ಮೊದಲ ಸ್ಥಾನದಲ್ಲಿ ಆತ್ಮ 500 ಯೂನಿಟ್‌ಗಳಾಗಿರುವಾಗ, ಎರಡನೇ ಸ್ಥಾನದಲ್ಲಿಯೂ ಸಹ 500 ಯೂನಿಟ್‌ಗಳೆ ಆತ್ಮ ಭಾಗವಿದೆ. ಹೀಗೆ ಮೇಲೆ ಎರಡು ಸ್ಥಾನಗಳಲ್ಲಿ ಆತ್ಮ ಸಮಾನ ಬಲ ಹೊಂದಿರುವಾಗ, ಕೆಳಗೆ ಆರು, ಏಳು ಸ್ಥಾನಗಳಲ್ಲಿ $31\frac{1}{4}$ (31.25) ಯೂನಿಟ್‌ಗಳಾಗಿ ಸಮಾನವಾಗಿದೆ. ಈ ಏಳು ಭಾಗಗಳ ಆತ್ಮಸ್ಥಾನಗಳನ್ನೆ ಸಪ್ತಸ್ಥಾನಗಳೆಂದು ಗುರುತು ಹೊಂದಿದ ಹೆಸರುಗಳನ್ನು ಸಹ ಆ ಸ್ಥಾನಗಳಿಗಿಡುವುದು ನಡೆದಿದೆ. ಮೇಲಿರುವ ಮೊದಲ ಸ್ಥಾನವನ್ನು ಸಹಸ್ರಾರವೆಂದು ಕರೆದರೆ, ಎರಡನೆಯದನ್ನು ಅಗ್ನೇಯ ಸ್ಥಾನ, ಮೂರನೆಯದು ವಿಶುದ್ಧ, ನಾಲ್ಕನೆಯದು ಅನಾಹತ, ಐದನೆಯದು ಮಣಿಪೂರಕ, ಆರನೆಯದು ಸ್ವಾಧೀಷ್ಠಾನ, ಏಳನೆಯದು ಆಧಾರ ಎಂದು ಹೇಳಲಾಗಿದೆ.

ಏಳು ಆತ್ಮಭಾಗಗಳು ಶರೀರದಲ್ಲಿ ಏಳು ನಾಡೀಕೇಂದ್ರಗಳನ್ನು ಆಕ್ರಮಿಸಿಕೊಂಡಿವೆ. ಮೊದಲ ನಾಡೀಕೇಂದ್ರವಾದ ಮೆದಳನ್ನು (ಸಹಸ್ರಾರವನ್ನು) ಆತ್ಮ ಮೊದಲನೆ ಭಾಗ 500 ಯೂನಿಟ್‌ಗಳು ಆಕ್ರಮಿಸಿಕೊಂಡಾಗ, ಎರಡನೆ ನಾಡೀಕೇಂದ್ರವಾದ ಮೆದುಳು ಕೆಳಗಿನ ಭಾಗವನ್ನು (ಆಗ್ನೇಯವನ್ನು) ಆತ್ಮ ಎರಡನೆ ಭಾಗ 500 ಯೂನಿಟ್‌ಗಳು ಆಕ್ರಮಿಸಿಕೊಂಡಿದೆ. ಈ ವಿಧವಾಗಿ ಉಳಿದ ಐದು ನಾಡೀಕೇಂದ್ರಗಳಲ್ಲಿ ಆತ್ಮದ ಐದು ಭಾಗಗಳು ಆಕ್ರಮಿಸಿಕೊಂಡಿವೆ. ಏಳು ನಾಡೀಕೇಂದ್ರಗಳಿಗೆ ಆತ್ಮ ಭಾಗಗಳ ಹೆಸರುಗಳೇ ನಿರ್ಣಯಿಸಲ್ಪಟ್ಟಿವೆ. ಶರೀರದ ಏಳು ನಾಡೀಕೇಂದ್ರಗಳಿಂದ ಆತ್ಮದ ಏಳು ಭಾಗಗಳು ತಮ್ಮ ತಮ್ಮ ಕಾರ್ಯಗಳನ್ನು ಮಾಡುತ್ತಿವೆ. ಇವುಗಳನ್ನೇ ಶರೀರದಲ್ಲಿನ ಸಪ್ತಸ್ಥಾನಗಳೆಂದು ಕೆಲವರನ್ನುತ್ತಿದ್ದಾರೆ. ಮತ್ತೆ ಕೆಲವರು ಸಪ್ತಚಕ್ರಗಳೆಂದೂ ಸಹ ಎನ್ನುತ್ತಿದ್ದಾರೆ. ಇವುಗಳನ್ನೇ ಪದ್ಮಗಳೆಂದು ಅವುಗಳಿಗೆ ಕೆಲವು ರೇಖೆಗಳಿವೆ ಎಂದು ಕೆಲವರು ಹೇಳಿದಾಗ, ಮತ್ತೆ ಕೆಲವರು ಒಂದೊಂದು ಸ್ಥಾನವನ್ನು ಒಂದು ಮಂತ್ರವಾಗಿ ಕೆಲವು ಬೀಜಾಕ್ಷರ ಇರುವಂತೆ ಸಹ ಹೇಳಿದ್ದಾರೆ. ಈ ವಿಧವಾಗಿ ಅಲ್ಲಿರುವ ಸತ್ಯವನ್ನು ಬಿಟ್ಟು ಬಹಳಜನರು ಬಹಳ ವಿಧಗಳಾಗಿ ಹೇಳಿದಾಗ ಹೇತುವಾದಿಗಳು ಇದೆಲ್ಲಾ ಪೂರ್ತಿ ಅಸತ್ಯವೆಂದು ಹೇಳಿದ್ದಾರೆ. ಏಳು ನಾಡೀಕೇಂದ್ರಗಳಿರುವುದು ಸತ್ಯವೇ, ಅದರಲ್ಲಿ ಆತ್ಮಶಕ್ತಿಗಳು ಏಳು ವಿಧಗಳಾಗಿರುವುದು ಸತ್ಯವೇ. ಹೇತುವಾದಿಗಳು ಏಳು ಭಾಗಗಳ ಆತ್ಮವನ್ನು ಒಪ್ಪಿಕೊಳ್ಳದೇ ಹೋದರೂ ಅವರಿಗೆ ತಿಳಿದ ವಿಜ್ಞಾನದ ಪ್ರಕಾರ ಏಳು ನಾಡೀಕೇಂದ್ರಗಳು ಇಲ್ಲವೆಂದು ಹೇಳಲಾರರು.


ಪರಮಾತ್ಮನಿಂದ ಆತ್ಮ, ಆತ್ಮನಿಂದ ಜೀವಾತ್ಮ ವಿಭಜನೆ ಚಿತ್ರ
2000 ಪರಮಾತ್ಮನಿಂದ ಬಂದು ಆತ್ಮ
1000
1000
500 → ಜೀವಾತ್ಮ
500 → ಆತ್ಮದ ಮೊದಲಭಾಗ
500
500 → ಆತ್ಮದ ಎರಡನೆಯ ಭಾಗ
250
250 → ಆತ್ಮದ ಮೂರನೆಯ ಭಾಗ
125
125 → ಆತ್ಮದ ನಾಲ್ಕನೆಯ ಭಾಗ
62½
62½ → ಆತ್ಮದ ಐದನೆಯ ಭಾಗ
31¼
31¼ → ಆತ್ಮದ ಆರನೆಯ ಭಾಗ
31¼ → ಆತ್ಮದ ಏಳನೆಯ ಭಾಗ


ಶರೀರದಲ್ಲಿ ಆತ್ಮ ಭಾಗಗಳು ಇರುವ ವಿಧಾನ.
500
500
ಜೀವನು
ಕ್ಷರನು
ಸಹಸ್ರಾರ (1)
ಅಗ್ನೇಯ (2)
ಅಕ್ಷರನು
250
ವಿಶುದ್ದವು (3)
ಅಕ್ಷರನು
125
ಅನಾಹತ (4)
ಅಕ್ಷರನು
62½
ಮಣಿಪೂರಕ (5)
ಅಕ್ಷರನು
31¼
ಸ್ವಾಧಿಷ್ಟ (6)
31¼
ಆಧಾರ (7)
ಅಕ್ಷರನು

ಇಲ್ಲಿ ಇನ್ನೊಂದು ವಿಶೇಷ ಏನೆಂದರೆ 500 ಯೂನಿಟ್‌ಗಳಾಗಿರುವ ಮೊದಲ ಸಹಸ್ತ್ರಾರನಾಡೀಕೇಂದ್ರ, ಎರಡನೇ ಆಗ್ನೇಯ ನಾಡೀಕೇಂದ್ರ ಎರಡು ಒಂದೇ ಮೆದುಳು ಸ್ಥಾನದಲ್ಲಿ ಮೇಲೆ ಕೆಳಗೆ ಇರುವಾಗ, 31 1/4 ಯೂನಿಟ್‌ಗಳಾಗಿರುವ ಆರನೇ ಸ್ವಾಧಿಷ್ಠಾನ ನಾಡೀಕೇಂದ್ರ, ಏಳನೇ ಆಧಾರ ನಾಡೀಕೇಂದ್ರ ಎರಡು ಬೆನ್ನುಮೂಳೆಯ ಕೊನೆಯ ಭಾಗದಲ್ಲಿ ಒಂದೇ ಕಡೆ ಮೇಲೆ ಕೆಳಗೆ ಇವೆ. ಉಳಿದ ಮೂರು ಆತ್ಮಭಾಗಗಳು 250,125,62 1/2 ಯೂನಿಟ್‌ಗಳಾಗಿ ವ್ಯತ್ಯಾಸಗಳು ಹೊಂದಿದ್ದು ಒಂದಕ್ಕೊಂದು ಸುಮಾರು ಗೇಣು ದೂರದಲ್ಲಿರುವ ನಾಡೀಕೇಂದ್ರಗಳಲ್ಲಿವೆ. ಒಂದುಕಡೆ ಇರುವ ಮೇಲಿನ ಎರಡು ಕೇಂದ್ರಗಳ ಆತ್ಮದ ಕೆಲಸ ಸುಮಾರು ಒಂದೇ ವಿಧವಾಗಿರುತ್ತದೆ. ಹಾಗೆಯೇ ಕೆಳಗೆ ಒಂದೇ ಕಡೆಯಲ್ಲಿರುವ ಎರಡು ನಾಡೀಕೇಂದ್ರಗಳಲ್ಲಿನ ಆತ್ಮ ಕೆಲಸವು ಸುಮಾರು ಒಂದೇ ವಿಧವಾಗಿರುತ್ತದೆ. ಮೇಲಿನ ಎರಡು ನಾಡೀಕೇಂದ್ರಗಳು ಒಂದೇಕಡೆ ಇವೆಯಾದ್ದರಿಂದ ಅವೆರಡನ್ನು ಒಂದಾಗಿ ಲೆಕ್ಕಿಸಿ, ಕೆಳಗೆ ಎರಡು ನಾಡೀಕೇಂದ್ರಗಳು ಸಹ ಒಂದೇ ಕಡೆಗಿರುವವೆ ಆದ್ದರಿಂದ ಅವುಗಳನ್ನೂ ಸಹ ಒಂದಾಗಿ ಲೆಕ್ಕಿಸಿದಂತಾದರೆ, ಮಧ್ಯದಲ್ಲಿ ಮೂರನ್ನು ಲೆಕ್ಕಿಸಿ ನೋಡಿದರು ಒಟ್ಟು ಐದು ಭಾಗಗಳಾಗಿ ತಿಳಿಯುತ್ತವೆ. ಒಂದೇಕಡೆ ಇದ್ದು ಒಂದೇ ವಿಧವಾಗಿ ಕೆಲಸಮಾಡುವ ಮೇಲಿನ ಎರಡು ಆತ್ಮಭಾಗಗಳು ಸಮಾನಶಕ್ತಿಯಿದ್ದು, ಎರಡು ಒಂದಾಗಿ ಗುರುತಿಸಲ್ಪಟ್ಟು **"ಸಹಸ್ತ್ರಾಗ್ನೇಯ'** ಎಂದು ಹೆಸರುಪಡೆದು, ಹಾಗೆಯೇ ಕೆಳಗಿನ ಎರಡು ಆತ್ಮಭಾಗಗಳು ಸಮಾನಶಕ್ತಿ ಹೊಂದಿದ್ದು ಒಂದಾಗಿ ಗುರುತಿಸಲ್ಪಟ್ಟು **"ಸ್ವಾಧಿಷ್ಠಾಧಾರ"** ಎಂದು ಹೆಸರುಪಡೆದಿವೆ. ಈ ವಿಧವಾಗಿ 1) ಸಹಸ್ತ್ರಾಗ್ನೇಯ 2) ವಿಶುದ್ದ 3) ಅನಾಹತ 4) ಮಣಿಪೂರಕ 5) ಸ್ವಾಧಿಷ್ಠಾಧಾರ ಎಂಬ ಐದು ಹೆಸರುಗಳು ಹೊಂದಿವೆ. ಶರೀರದಲ್ಲಿನ ಪ್ರಕೃತಿ ಆದ ಪಂಚಭೂತಗಳಿಗೆ ಇವು ಅಧಿಪತಿಯಾಗಿವೆ. ಸಹಸ್ರಾಗ್ನೇಯ ಆಕಾಶತತ್ತ್ವಕ್ಕೆ, ವಿಶುದ್ಧ ಗಾಳಿತತ್ತ್ವಕ್ಕೂ, ಅನಾಹತ ಅಗ್ನಿತತ್ತ್ವಕ್ಕೂ, ಮಣಿಪೂರಕ ನೀರಿನ ತತ್ತ್ವಕ್ಕೂ, ಸ್ವಾಧಿಷ್ಠಾಧಾರ ಭೂಮಿ ತತ್ತ್ವಕ್ಕೂ ಅಧಿಪತಿಯಾಗಿ ಇವೆಯೆಂದು ತಿಳಿಯಬೇಕು.

ಇಲ್ಲಿ ಕೆಲವರಿಗೆ ಇನ್ನೊಂದು ಪ್ರಶ್ನೆಬರಬಹುದು. ಅದು ಏನೆಂದರೆ! ಆತ್ಮ 2000 ಸಾವಿರ ಯೂನಿಟ್‌ಗಳ ಶಕ್ತಿ ಹೊಂದಿದೆಂದು ಹೇಳಿದ್ದೀರ ಅಲ್ಲವೆ! ಅದು ಎಲ್ಲರಲ್ಲಿಯೂ 2000 ಯೂನಿಟ್‌ಗಳೆ ಇದ್ದರೆ ಎಲ್ಲರೂ ಒಂದೇ ಬಲವನ್ನು ಹೊಂದಿರಬೇಕಲ್ಲವೆ! ಆ ವಿಧವಾಗಿ ಎಲ್ಲರೂ ಒಂದೇ ಬಲಹೊಂದಿರುವಂತೆ ಎಲ್ಲಿಯೂ ಇಲ್ಲ. ಒಬ್ಬೊಬ್ಬರು ಒಂದೊಂದು ಬಲವನ್ನು ಹೊಂದಿದ್ದಾರೆ ಅಲ್ಲವೆ! ಇದನ್ನನುಸರಿಸಿ 2000 ಯೂನಿಟ್‌ಗಳು ಎಲ್ಲರಲ್ಲಿ ಇಲ್ಲದಂತೆ ಅಲ್ಲವೆ! ಎಂದು ಕೇಳಬಹುದು. ಅಷ್ಟೇ ಅಲ್ಲದೆ ಯೂನಿಟ್ ಎಂದರೆ

ಎಷ್ಟು ಅಳತೆ ಎಂದೂ ಸಹ ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ಒಂದೇ ಉದ್ದ, ಒಂದೇ ಅಗಲಹೊಂದಿರುವ ವಿಸ್ತೀರ್ಣದಲ್ಲಿರುವ ಶಕ್ತಿಯನ್ನು ಒಂದು ಯೂನಿಟ್ ಎನ್ನುತ್ತಿದ್ದೇವೆ. ಉದ್ದ ಅಗಲ ಒಂದೇ ಅಳತೆಯಿಂದಿರುವ ಚತುರಸ್ತ್ರಶಕ್ತಿಯನ್ನು ಒಂದು ಯೂನಿಟ್ ಎನ್ನುತ್ತಿದ್ದೇವೆ. ಒಂದು ಆತ್ಮ 2000 ಯೂನಿಟ್‌ಗಳ ಶಕ್ತಿಯಾಗಿ ವಿಭಜಿಸಲಾಗಿದೆ ಎಂದು ಅರ್ಥ. ಎಲ್ಲಾ ಶರೀರಗಳಲ್ಲಿ ಆತ್ಮ ಒಂದೇ ಅಳತೆಯಿಂದ ಇಲ್ಲ. ಒಂದೊಂದು ಶರೀರದಲ್ಲಿನ ಆತ್ಮ ಒಂದೊಂದು ಪರಿಮಾಣದಿಂದ ಇದೆ. ಯಾವ ಶರೀರದಲ್ಲಿ, ಯಾವ ಪರಿಮಾಣದಲ್ಲಿದ್ದರು ಅದು ಮಾತ್ರ 2000 ಸಮಾನಶಕ್ತಿ ಭಾಗಗಳಾಗಿ ವಿಭಜಿಸಲಾಗಿದೆ. ಆತ್ಮ ಅದು ಇರುವ ಶರೀರವೆಲ್ಲವೂ ವ್ಯಾಪಿಸಿದೆ. ಶರೀರವೆಲ್ಲಾ ವ್ಯಾಪಿಸಿರುವುದರಿಂದ ಆತ್ಮ ಶರೀರ ಆಕೃತಿಯನ್ನು ಹೊಂದಿದೆ. ಶರೀರವೆಲ್ಲ ವ್ಯಾಪಿಸಿರುವ ಆತ್ಮ ಪ್ರತ್ಯೇಕ ಸಮಯದಲ್ಲಿ (ಬ್ರಹ್ಮಯೋಗದಲ್ಲಿ) 1500 ಯೂನಿಟ್‌ಗಳು 500 ಯೂನಿಟ್‌ಗಳಾಗಿ ಬದಲಾಗಿಹೋಗ ಬಲ್ಲದು. ಒಂದು ಯೂನಿಟ್‌ನಲ್ಲಿ ಎರಡು ಯೂನಿಟ್‌ಗಳ ಪ್ರಕಾರ ಅಡಗಿಹೋಗುತ್ತದೆ. ಪುನಃ ಬೇರ್ಪಟ್ಟು ಶರೀರವೆಲ್ಲ ವ್ಯಾಪಿಸಿ 1500 ಯೂನಿಟ್‌ಗಳಾಗಿ ಬದಲಾಗಿ ಹೋಗುತ್ತದೆ. ಆತ್ಮದ ಮೊದಲ ಸ್ಥಾನವಾದ 500 ಯೂನಿಟ್‌ಗಳಲ್ಲಿ ಕೆಳಗೆ ಆರು ಸ್ಥಾನಗಳಲ್ಲಿನ 1000 ಯೂನಿಟ್‌ಗಳು ಸೇರಿಹೋಗುತ್ತವೆ. ಮೇಲಿನವು ಕೆಳಗಿನವು ಎಲ್ಲಾ 1500 ಯೂನಿಟ್‌ಗಳು 500 ಯೂನಿಟ್‌ಗಳಾಗಿಯೆ ಇರುತ್ತದೆ.

ಯೂನಿಟ್ ಎನ್ನುವುದು ಪರಿಮಿತವಾದ ಅಳತೆಯಿಂದಿಲ್ಲ. ಆತ್ಮ ಒಂದೇ ಪರಿಮಾಣದಲ್ಲಿ ಇಲ್ಲ. ಒಂದೊಂದು ಶರೀರದಲ್ಲಿ ಒಂದೊಂದು ಪರಿಮಾಣದಲ್ಲಿದೆ. ಆದ್ದರಿಂದ ಒಂದೊಂದು ಶರೀರಕ್ಕೆ ಒಂದೊಂದು ಶಕ್ತಿ ಇರುತ್ತದೆ. ಪರಮಾತ್ಮನಿಂದ ಬಂದಿರುವ ಆತ್ಮ ಒಂದೇ ಅಳತೆಯಲ್ಲಿ ಇಲ್ಲದಿರುವುದರಿಂದ ಶರೀರಗಳಿಗೆ ವ್ಯತ್ಯಾಸ ಬಲಗಳಿವೆ. ಪರಮಾತ್ಮನಿಂದ ಬಂದಿರುವ ಯಾವ ಆತ್ಮವಾದರು 2000 ಯೂನಿಟ್ ಗಳಾಗಿಯೇ ಸಮಾನವಾಗಿ ವಿಭಜಿಸಲಾಗಿದೆ. ಅಷ್ಟೇ ಅಲ್ಲದೆ ಎಲ್ಲರಿಗೂ ತಿಳಿಯದ ವಿಷಯವೊಂದಿದೆ. ಅದು ಏನೆಂದರೆ! ಮೇಲಿರುವ ಮೊದಲ ಎರಡು ಕೇಂದ್ರಗಳಾದ ಸಹಸ್ತ್ರಾಗ್ನೇಯಗಳಲ್ಲಿರುವ 500+500=1000 ಯೂನಿಟ್‌ಗಳ ಆತ್ಮ ಹೊರತು ಉಳಿದ ಕೆಳಗಿರುವ ಐದು ಕೇಂದ್ರಗಳ ಆತ್ಮ ಭಾಗಗಳಲ್ಲಿನ 500 ಯೂನಿಟ್‌ಗಳ ಶಕ್ತಿ ಒಂದುಬಾರಿ ಹೆಚ್ಚಿನ ಸಾಂದ್ರತೆಯಾಗಿ, ಒಂದುಬಾರಿ ಕಡಿಮೆ ಸಾಂದ್ರತೆ ಇರುತ್ತದೆ. ಕೆಳಗಿನ ಸ್ಥಾನದಲ್ಲಿನ 500 ಆತ್ಮ ಯೂನಿಟ್‌ಗಳು ಸ್ವಲ್ಪಕಾಲ ಬಲವಾಗಿದ್ದು, ಸ್ವಲ್ಪಕಾಲ ಬಲಹೀನಪಡುವುದೂ ಸಹ ನಡೆಯುತ್ತಿರುತ್ತದೆ. ಆದ್ದರಿಂದ ಶರೀರದಲ್ಲಿ ಒಂದು ಸಮಯದಲ್ಲಿರುವ ಬಲ ಒಂದು ಸಮಯದಲ್ಲಿ ಇರುವುದಿಲ್ಲವೆಂದು ತಿಳಿಯಬೇಕು.

ಏಳು ಸ್ಥಾನಗಳನ್ನು ಆಧಾರಮಾಡಿಕೊಂಡು ಚರ ಪ್ರಕೃತಿಯಿಂದ ಶರೀರವೆಲ್ಲ ತಯಾರಾಗಿದೆ. ಶರೀರವೆಲ್ಲವೂ ಸ್ತ್ರೀತತ್ತ್ವವಾದ ಪ್ರಕೃತಿಯಾಗಿದ್ದು, ಆತ್ಮ, ಜೀವಾತ್ಮ ಎರಡು ಪುರುಷತತ್ತ್ವವಾದ ಆತ್ಮಗಳಾಗಿವೆ. ಆದ್ದರಿಂದ ಆತ್ಮ ಜೀವಾತ್ಮಗಳನ್ನು ಈ ಶ್ಲೋಕದಲ್ಲಿ ಇಬ್ಬರು ಪುರುಷರಾಗಿ ವರ್ಣಿಸಿ ಹೇಳಲಾಗಿದೆ. ಈ ಇಬ್ಬರು ಪುರುಷರನ್ನೇ ಒಬ್ಬನು ಕ್ಷರಪುರುಷನೆಂದು, ಮತ್ತೊಬ್ಬನು ಅಕ್ಷರಪುರುಷನೆಂದೂ ಸಹ ಹೇಳುವುದಾಗಿದೆ. ಕ್ಷರಪುರುಷನೆಂದರೆ! ನಾಶ ಆಗುವವನೆಂದು, ಅಕ್ಷರ ಪುರುಷನೆಂದರೆ! ನಾಶ ಆಗದವನೆಂದು ಅರ್ಥ. ಇವರಲ್ಲಿ ನಾಶವಾಗುವವನು ಜೀವಾತ್ಮ, ನಾಶ ಆಗದವನು ಆತ್ಮ, ಶರೀರದಲ್ಲಿನ ಬುದ್ಧಿ, ಚಿತ್ತ, ಅಹಮ್ ಇರುವವರೆಗೂ ಜೀವಾತ್ಮ ಇರುತ್ತದೆ. ಆ ಮೂರು ಪೊರೆಗಳು ಇಲ್ಲದಂತೆಹೋದಾಗ ಜೀವಾತ್ಮ ಯಥಾ ವಿಧಿಯಾಗಿ ಆತ್ಮನಲ್ಲಿ ಸೇರಿಹೋಗುತ್ತದೆ. ಆಗ ಜೀವಾತ್ಮ ಇರುವುದಿಲ್ಲ. ಆದ್ದರಿಂದ ಜೀವಾತ್ಮ ಕ್ಷರನೆಂದು, ಆತ್ಮ ಅಕ್ಷರನೆಂದು ಹೇಳಲಾಗಿದೆ. ಕ್ಷರಾಕ್ಷರರಾಗಿರುವ ಆತ್ಮ, ಜೀವಾತ್ಮಗಳೆರಡು ಒಂದು ಶರೀರದಲ್ಲಿಯೇ ವಾಸಿಸುತ್ತಿವೆ. ಆತ್ಮ ಇಲ್ಲದೆ ಜೀವಾತ್ಮವಾಗಲಿ, ಜೀವಾತ್ಮ ಇಲ್ಲದೆ ಆತ್ಮ ವಾಗಲಿ ಇರುವುದಿಲ್ಲ. ಆದ್ದರಿಂದ ಆತ್ಮವನ್ನು ಶ್ಲೋಕದಲ್ಲಿ ಕೂಟಸ್ಥನೆಂದಿದ್ದಾರೆ.

ಈ ಶ್ಲೋಕದವರೆಗೂ ಭಗವದ್ಗೀತೆಯಲ್ಲಿ ಎಲ್ಲಿಯಾಗಲಿ ಆತ್ಮ, ಜೀವಾತ್ಮಗಳ ವಿಭಜನೆ ಮಾಡಿ ಹೇಳಲಿಲ್ಲ. ಪ್ರತ್ಯೇಕಿಸಿ ಈ ಶ್ಲೋಕದಲ್ಲಿಯೇ ಆತ್ಮ, ಜೀವಾತ್ಮಗಳ ವಿಭಜನೆಯನ್ನು ಶಾಸ್ತ್ರಬದ್ಧವಾಗಿ ಭಗವಂತನು ತಿಳಿಸಿದ್ದಾನೆ. ಈ ಶ್ಲೋಕವು ಭಗವದ್ಗೀತೆಯಲ್ಲಿ ಎಷ್ಟೋ ಮಹತ್ವವಾದುದಾಗಿದ್ದು, ಬಹಳ ಜನರು ಈ ಶ್ಲೋಕದಲ್ಲಿನ ಭಾವವನ್ನು ಅವಗಾಹನೆ ಮಾಡಿಕೊಳ್ಳದೆ ಹೋಗಿದ್ದಾರೆ. ಕ್ಷರ ಪುರುಷನೆಂದು ಹೇಳಿದ ಜೀವಾತ್ಮವನ್ನು ಸ್ತ್ರೀತತ್ತ್ವವಾದ ಶರೀರದಿಂದ ಹೋಲಿಸಿಕೊಂಡು ಅರ್ಥ ಹೇಳಿಕೊಳ್ಳುವುದು ನಡೆದಿದೆ. ಆದ್ದರಿಂದ ಗೀತೆಗೆ ಮುಖ್ಯ ಆಧಾರವಾದ ಈ ಅಧ್ಯಾಯದಲ್ಲಿನ 16, 17 ಶ್ಲೋಕಗಳು ಪೂರ್ತಿ ಅರ್ಥಶೂನ್ಯ ವಾಗಿವೆ. ಗುಣತ್ರಯ ವಿಭಾಗ ಯೋಗದಲ್ಲಿ ಮೂರನೇ ಶ್ಲೋಕದಲ್ಲಿ ಪ್ರಕೃತಿ ಸ್ತ್ರೀ ಎಂದೂ, ಅದಕ್ಕೆ ನಾನು ಬೀಜದಾತನಾದ ಪುರುಷನೆಂದು ಹೇಳಿದಾಗ ಪ್ರಕೃತಿ ಸಂಬಂಧ ಶರೀರವಾಗಿ ಜೀವಾತ್ಮನನ್ನು ಹೋಲಿಸುವುದು ಬಹಳ ತಪ್ಪು. ಈ ಶ್ಲೋಕದಲ್ಲಿ ಕ್ಷರನು ಅಕ್ಷರನೆಂದು ಇಬ್ಬರು ಪುರುಷರಾದ ಜೀವಾತ್ಮ, ಆತ್ಮವನ್ನು ತಿಳಿಸಿ, ನಂತರ ಶ್ಲೋಕದಲ್ಲಿ ಇಬ್ಬರು ಪುರುಷರಿಗಿಂತ ಉತ್ತಮವಾದ ಪುರುಷನಿದ್ದಾನೆಂದು, ಅವನನ್ನೇ ಪುರುಷೋತ್ತಮ ಎನ್ನುತ್ತಿದ್ದೇವೆಂದೂ ಹೇಳಿದ್ದಾರೆ. ಇಲ್ಲಿ ಮೂವರು ಪುರುಷರನ್ನು ತಿಳಿಸಿ **"ತ್ರೈತಸಿದ್ಧಾಂತವನ್ನು"** ಶಾಸ್ತ್ರಪದ್ಧತಿಯಲ್ಲಿ ಭಗವಂತನು ತಿಳಿಸಿದ್ದಾನೆ. ಭಗವಂತನ ಮಾತನ್ನು ತೆಗೆದುಹಾಕಿ ಪ್ರಕೃತಿಯಿಂದ

ಕೂಡಿಕೊಂಡ ಶರೀರವನ್ನು ಕ್ಷರಪುರುಷನೆಂದು ಹೇಳಿದವರು, ದೇವರ ಭಾವಕ್ಕೆ ಪೂರ್ತಿ ವಿರುದ್ಧವಾಗಿ ಹೇಳಿದವರಾಗುತ್ತಾರೆ. ಅದರಿಂದ ದೊಡ್ಡ ಪಾಪವೇ ಬರುತ್ತದೆ. ಈಗಿನಿಂದಾದರೂ ಬಹಳಜನರು ತಪ್ಪಾಗಿ ಬರೆದ ಬರಹಗಳನ್ನು ಬಿಟ್ಟು, ಸರಿಯಾದ ಪದ್ಧತಿಯಲ್ಲಿ ದೇವರ ಭಾವದ ಪ್ರಕಾರ ಮೂರು ಆತ್ಮಗಳ ತ್ರೈತವನ್ನು ತಿಳಿದುಕೊಳ್ಳೋಣ. 16ನೇ ಶ್ಲೋಕದಲ್ಲಿ ಜೀವಾತ್ಮ, ಆತ್ಮಗಳ ವಿವರ ಹೇಳಿದ ಭಗವಂತನು 17ನೇ ಶ್ಲೋಕದಲ್ಲಿ ಮೂರನೆ ಆತ್ಮವನ್ನು ಕುರಿತು ಏನು ಹೇಳುತ್ತಿದ್ದಾನೋ ಗಮನಿಸೋಣ.

**(14) ಶ್ಲೋ॥ 17 : ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।**
**ಯೋ ಲೋಕತ್ರಯ ಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥**
**(ಪರಮಾತ್ಮ)**

**ಭಾವಾರ್ಥ** : ಉತ್ತಮನಾದ ಪುರುಷನು ಅನ್ಯವಾದವನೊಬ್ಬನಿದ್ದಾನೆ. ಅವನೇ ಪರಮಾತ್ಮನೆಂದು ಹೇಳಲ್ಪಡುತ್ತಿದ್ದಾನೆ. ಆತನೇ ಮೂರು ಲೋಕಗಳನ್ನು ಆವರಿಸಿ ಅವ್ಯಯನಾಗಿ, ಅಧಿಪತಿಯಾಗಿ, ಪತಿಯಾಗಿ ಇದ್ದಾನೆ.

**ವಿವರ** : ವಿಶ್ವವೆಲ್ಲವನ್ನೂ ಭರಿಸುವ ಭರ್ತನಾದವನು (ಪತಿಯಾದವನು), ಪ್ರಪಂಚ, ಜಗತ್ತು ಎರಡೂ ನಾಶವಾದರೂ ನಾಶ ಆಗದವನು, ಎಲ್ಲದಕ್ಕೂ ಎಲ್ಲರಿಗೂ ಅಧಿಪತಿಯಾದವನು, ಜೀವಾತ್ಮ ಆತ್ಮಗಳಿಗೆ ಪರವಾಗಿರುವವನು ಆದರೂ ಅವನಿಗೆ ಆತ್ಮ ಜೀವಾತ್ಮಗಳಂತೆ ಹೆಸರಿಲ್ಲ. ಹೆಸರೇ ಅಲ್ಲ, ರೂಪವೂ ಇಲ್ಲ. ಆಕಾರವಾಗಲಿ, ಹೆಸರಾಗಲಿ ಇಲ್ಲದವನನ್ನು ಏನೆಂದು ಕರೆಯಬೇಕೋ ಅರ್ಥವಾಗದೆ ಕೊನೆಗೆ ಒಂದು ಮಾರ್ಗವನ್ನು ಅನ್ವೇಷಿಸಿದವರು ಆತನು ಯಾವ ಪದ್ಧತಿಯಲ್ಲಿ ಇದ್ದಾನೋ, ಆ ಪದ್ಧತಿ ಇರುವವನೆಂದು ಹೇಳಲಾರಂಭಿಸಿದ್ದಾರೆ. ಜೀವಾತ್ಮ ಆತ್ಮಗಳು ಇಬ್ಬರು ಪುರುಷರೇ ಎಂದಿದ್ದೇವೆ ಅಲ್ಲವೆ! ಇಬ್ಬರಿಗಿಂತ ಉತ್ತಮನಾಗಿ ಇರುವವನಾದ್ದರಿಂದ **"ಪುರುಷೋತ್ತಮ."** ಎನ್ನಲಾಗಿದೆ. ಅಷ್ಟೇ ಅಲ್ಲದೆ ಆತ್ಮಗಿಂತ ಬೇರೆ ಯಾಗಿರುವವನು ಆದ್ದರಿಂದ **"ಪರಮಾತ್ಮ"** ಎಂದೂ ಹೇಳಲಾಗಿದೆ. ಪರ ಎಂದರೆ ಬೇರೆ ಎಂದು ಅರ್ಥ. ಆತ್ಮಗಿಂತ ಪರಮವಾಗಿದ್ದಾನಾದ್ದರಿಂದ ಪರಮಾತ್ಮ ಎನ್ನಲಾಗಿದೆ. ಪರಮಾತ್ಮ ಎಂದರೂ, ಪುರುಷೋತ್ತಮ ಎಂದರೂ ಅವು ಹೆಸರುಗಳಲ್ಲ. ಆತನಿರುವ ವಿಧಾನವನ್ನು ತಿಳಿಸುವ ಅರ್ಥದಿಂದ ಕೂಡಿಕೊಂಡ ಗುರುತಿನ ಪದಗಳೆಂದು ತಿಳಿಯಬೇಕು. ಹಾಗೆಯೇ ಈ ಶ್ಲೋಕದಲ್ಲಿ ಹೇಳಲಾದ ಪತಿ (ಭರ್ತ), ಅವ್ಯಯ, ಈಶ್ವರ ಎನ್ನುವ ಪದಗಳು ಅರ್ಥದಿಂದ ಕೂಡಿಕೊಂಡು ದೇವರ ವಿಧಾನವನ್ನು ತಿಳಿಸುವವೆಂದು ಗ್ರಹಿಸಬೇಕು. ಎಲ್ಲರೂ ಹೇಳಿಕೊಳ್ಳುವ

ದೇವರು ಎನ್ನುವ ಪದವೂ ಅಂತಹದ್ದೆ. ದೇವರನ್ನು ಕರೆಯುವ ಯಾವ ಪದವಾಗಲಿ ಹಾಗೆಯೇ ಇರುತ್ತದೆಂದು ತಿಳಿಯಬೇಕು.

ಪರಮಾತ್ಮ ಎಂದು ಕರೆಯಲ್ಪಡುವವನು ಜೀವಾತ್ಮ ಆತ್ಮಗಳಿಗಿಂತ ಅನ್ಯ ವಾಗಿರುವವನಾಗಿ, ಇನ್ನೂ ಹೇಗಿದ್ದಾನೆಂದರೆ! ಜೀವಾತ್ಮ ಆತ್ಮಗಳಿರುವುದಕ್ಕಿಂತ ಅಧಿಕವಾಗಿ, ಅನ್ಯವಾಗಿದ್ದಾನೆಂದು ತಿಳಿಯುತ್ತಿದೆ. ಜೀವಾತ್ಮ ಒಂದು ಶರೀರದಲ್ಲಿ ಆತ್ಮದ ಮೊದಲ ಸ್ಥಾನವಾದ ತಲೆಯಲ್ಲಿ ಒಂದುಕಡೆ ಮಾತ್ರ ಇದೆ. ಆತ್ಮ ಮಾತ್ರ ಏಳು ಭಾಗಗಳಾಗಿದ್ದೂ ಶರೀರವೆಲ್ಲ ತನ್ನ ಶಕ್ತಿಯನ್ನು ವ್ಯಾಪಿಸುವಂತೆ ಮಾಡಿ ಶರೀರವೆಲ್ಲವೂ ನಖಶಿಖ ಪರ್ಯಂತ ಇದೆ. ಇದರಿಂದ ಆತ್ಮ ವ್ಯಾಪಿಸದ ಶರೀರಭಾಗ ಇಲ್ಲವೆಂದು ತಿಳಿಯುತ್ತಿದೆ. ಆತ್ಮ ಶರೀರದಲ್ಲಿ ಅಣುಅಣುವಿನಲ್ಲಿದ್ದು ಶರೀರವೆಲ್ಲವನ್ನೂ ಚೈತನ್ಯಮಾಡಿ ಕದಲುವಂತೆ ಮಾಡುತ್ತಿದೆ. ಆತ್ಮ ವ್ಯಾಪಿಸದ ಶರೀರಭಾಗ ಇದ್ದರೆ ಅದು ಕದಲುವುದಿಲ್ಲ. ಆರೋಗ್ಯವಾಗಿರುವುದಿಲ್ಲ. ಆತ್ಮ ವ್ಯಾಪಿಸದ ಶರೀರಭಾಗ ಇರುವವರನ್ನು ನಷ್ಟಾತ್ಮರೆನ್ನಬಹುದು. ಸರ್ವಸಾಧಾರಣವಾಗಿ ಶರೀರವೆಲ್ಲ ಆತ್ಮ ವ್ಯಾಪಿಸಿರುವಾಗ, ಜೀವಾತ್ಮ ಮಾತ್ರ ಶರೀರವೆಲ್ಲ ಇಲ್ಲದೆ ಒಂದುಕಡೆ ಮಾತ್ರ ಇದೆ. ಶರೀರವೆಲ್ಲಾ ವ್ಯಾಪಿಸಿದ ಆತ್ಮ ಒಂದು ಜೀವಾತ್ಮನಲ್ಲಿ ಮಾತ್ರವಿಲ್ಲ, ಜೀವಾತ್ಮ ಬೇರೆ ಆತ್ಮ ಬೇರೆಯಾಗಿವೆ. ಆದ್ದರಿಂದ ಆತ್ಮ, ಜೀವಾತ್ಮ ವಿನಹ: ಶರೀರವೆಲ್ಲ ಇದೆ. ಒಂದುಕಡೆ ಇರುವ ಜೀವಾತ್ಮವನ್ನು, ಶರೀರವೆಲ್ಲ ವ್ಯಾಪಿಸಿರುವ ಆತ್ಮವನ್ನು ಸೃಷ್ಟಿಸಿದ ಪರಮಾತ್ಮ ಮಾತ್ರ ಇಲ್ಲಿ ಇಲ್ಲ ಅನ್ನದಂತೆ ಎಲ್ಲಾಕಡೆ ವ್ಯಾಪಿಸಿದೆ. ಎಲ್ಲಾಕಡೆ ಎಂದರೆ ಆತ್ಮವಿಲ್ಲದ ಜೀವಾತ್ಮನಲ್ಲಿಯೂ ಸಹ ಇದೆ. ಆತ್ಮವ್ಯಾಪಿಸಿದ ಶರೀರವೆಲ್ಲವೂ ವಿಸ್ತರಿಸಿ ಇದೆ. ಶರೀರದೊಳಗೆ ಅಲ್ಲದೆ ಶರೀರದ ಹೊರಗೆ ಅಣುವಣುವಿನಲ್ಲಿ ಇರುವುದು ಪರಮಾತ್ಮ ಒಂದೇ ಎಂದು ತಿಳಿಯಬೇಕು. ಆತ್ಮ ಶರೀರದೊಳಗೆ ಮಾತ್ರವೇ ಇದ್ದು, ಶರೀರದ ಹೊರಗಿಲ್ಲ. ಶರೀರವೆಲ್ಲ ಇಲ್ಲದಂತೆ ಒಂದುಕಡೆ ಇರುವ ಜೀವಾತ್ಮನಲ್ಲಿಯೂ, ಜೀವಿಯಲ್ಲಿ ಇಲ್ಲದಂತೆ ಶರೀರವೆಲ್ಲ ಇರುವ ಆತ್ಮನಲ್ಲಿಯೂ, ಜೀವಾತ್ಮ ಆತ್ಮಗಳು ಇಲ್ಲದ ಪ್ರಕೃತಿಯಲ್ಲಿಯೂ, ಪ್ರತಿ ಅಣುವಿನಲ್ಲಿಯೂ ವ್ಯಾಪಿಸಿರುವುದು ಒಂದೇ ಒಂದು ಪರಮಾತ್ಮ. ಆದ್ದರಿಂದ ಪರಮಾತ್ಮನನ್ನು ಸರ್ವವ್ಯಾಪಿ ಎಂದಿದ್ದಾರೆ. ಜೀವಾತ್ಮ ಆತ್ಮಗಳನ್ನು ತಯಾರು ಮಾಡಿದ ಪರಮಾತ್ಮ ಆ ಎರಡು ಆತ್ಮಗಳಿಗಿಂತ ಉತ್ತಮನಾಗಿದ್ದು ಪುರುಷೋತ್ತಮನೆಂದು ಗುರುತನ್ನು ಹೊಂದುವುದಲ್ಲದೆ, ಎರಡು ಆತ್ಮಗಳಲ್ಲಿಯೂ ಸಹ ವ್ಯಾಪಿಸಿ ಆ ಎರಡಕ್ಕೂ ಅಧಿಪತಿಯಾಗಿದ್ದಾನೆ. ಆದ್ದರಿಂದ ಆ ಪುರುಷೋತ್ತಮನನ್ನು ಈಶ್ವರನೆಂದೂ ಸಹ ಕರೆಯಲಾಗಿದೆ. ಎರಡು ಆತ್ಮಗಳಿಗು ಅವುಗಳ ಇರುವಿಕೆಗೆ ಕಾರಣವಾದವುಗಳನ್ನು

ಪೋಷಿಸುತ್ತಿದ್ದಾನೆ ಆದ್ದರಿಂದ ಪತಿ (ಭರ್ತ) ಎಂದೂ, ಜಗದ್ಭರ್ತ (ಜಗತಿಗೆ ಪತಿ) ಎಂದೂ ಹೊಗಳಲ್ಪಡುತ್ತಿದ್ದಾನೆ.

ಇಲ್ಲಿರುವ 16, 17 ಶ್ಲೋಕಗಳು ಎರಡು ಕೇವಲ ಮೂರು ಆತ್ಮಗಳ ವಿವರವನ್ನು ಮಾತ್ರವೇ ತಿಳಿಸಿವೆ. ಆದ್ದರಿಂದ ಈ ಎರಡು ಶ್ಲೋಕಗಳು ಭಗವದ್ಗೀತೆಯಲ್ಲಿ ಅತ್ಯಂತ ಪ್ರಾಮುಖ್ಯವಾದವೆಂದು ಹೇಳುತ್ತಿದ್ದೇವೆ. ಜಗತ್ತಿನಲ್ಲಿ ಬ್ರಹ್ಮವಿದ್ಯೆಗೆ ಮೂಲ ಕಾರಣವಾದ ಮೂರು ಆತ್ಮಗಳ ವಿವರ ಇಲ್ಲಿಯೇ ಇದೆ. ಈ ಮೂರು ಆತ್ಮಗಳಿರುವ ಎರಡು ಶ್ಲೋಕಗಳು ಅರ್ಥವಾದರೇ ಉಳಿದ ಭಗವದ್ಗೀತೆ ಶ್ಲೋಕಗಳೆಲ್ಲ ಅರ್ಥವಾಗುತ್ತವೆ. ಈ ಶ್ಲೋಕಗಳು ಅರ್ಥವಾಗದಿರುವುದು ಇತ್ತ ಆಸ್ತಿಕರಿಗಾಗಲಿ, ಅತ್ತ ಹೇತುವಾದಿಗಳಿಗಾಗಲಿ ಗೀತೆ ಅರ್ಥವಾಗುವುದಿಲ್ಲ. ದೇವರಿದ್ದಾನೆಂದು ಹೇಳುವ ಆಸ್ತಿಕರಿಗಾಗಲಿ, ದೇವರು ಹೇಗಿದ್ದಾನೆಂದು ವಾದಿಸುವ ಹೇತುವಾದಿಗಳಿಗಾಗಲಿ, ದೇವರ ವಾಸ್ತವಿಕತೆ ತಿಳಿಯದೇ ಹೋಗುವುದಕ್ಕೆ ಪ್ರಧಾನ ಕಾರಣ ತ್ರೈತವಾದ ಮೂರು ಆತ್ಮಗಳು ತಿಳಿಯದಿರುವುದೆಂದು ತಿಳಿಯಬೇಕು.

**ಗಮನಿಕೆ :** ಬಹಳಜನರು ಬರೆದ ಗೀತೆಗಳ ಮೂವರು ಪುರುಷರ ವಿಭಜನೆ ಅರ್ಥವಾಗದೆ ಪ್ರಕೃತಿಯಿಂದ ಕೂಡಿದ ಶರೀರವನ್ನು ಕ್ಷರನೆಂದು, ಜೀವಾತ್ಮ ಅಕ್ಷರನೆಂದು, ದೇವರು ಪುರುಷೋತ್ತಮನೆಂದು ಹೇಳುತ್ತಿದ್ದಾರೆ. ಪ್ರಕೃತಿಯನ್ನು ಭಾಗವಾಗಿ ಸೇರಿಸಿಕೊಳ್ಳುವುದು ತಪ್ಪಾಗಿ ತಿಳಿದುಕೊಳ್ಳಬೇಕು. ಇಲ್ಲಿ ಹೇಳಿರುವುದು ಕೇವಲ ಪುರುಷನಿಗೆಂದು ತಿಳಿಯಬೇಕು.

**(14) ಶ್ಲೋ॥ 18 : ಯಸ್ಮಾತ್ ಕ್ಷರಮತೀತೋಹ ಮಕ್ಷರಾದಪಿ ಚೋ ತ್ತಮಃ ।**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥**
**(ಪರಮಾತ್ಮ)**

**ಭಾವಾರ್ಥ** : ಕ್ಷರನಿಗಿಂತ ಅತೀತನು, ಅಕ್ಷರನಿಗಿಂತಲೂ ಉತ್ತಮನು ಆಗಿರುವುದರಿಂದ ಲೋಕದಲ್ಲಿ ವೇದಗಳಲ್ಲಿ ನಾನು ಪುರುಷೋತ್ತಮನೆಂದು ಪ್ರಸಿದ್ಧಿಯಾಗಿದ್ದೇನೆ.

**ವಿವರ** : ಪರಮಾತ್ಮ ಕ್ಷರ ಪುರುಷನಿಗಿಂತ ಅಧಿಕನು, ಅಕ್ಷರ ಪುರುಷನಿಗಿಂತ ಉತ್ತಮನಾಗಿರುವುದರಿಂದ ಪುರುಷೋತ್ತಮನೆಂದು ಕರೆಯಲಾಗುತ್ತಿದೆ. ಆತ್ಮಗಿಂತ ಬೇರೆಯಾದವನಾದ್ದರಿಂದ ಅಂದರೆ ಆತ್ಮಗಿಂತ ಪರವಾಗಿರುವುದರಿಂದ ಪರಮಾತ್ಮನೆಂದು ಕರೆಯಲ್ಪಡುವವನು, ಇಲ್ಲಿ ಕ್ಷರಾಕ್ಷರರಾದ ಇಬ್ಬರು ಪುರುಷರಿಗಿಂತ ಉತ್ತಮನಾದ್ದರಿಂದ ಪುರುಷೋತ್ತಮ ಎಂದೂ ಸಹ ಕರೆಯಲಾಗುತ್ತಿದೆ. ಈ ಪ್ರಪಂಚದಲ್ಲಿ ಯಾವುದಾದರೆ ದೊಡ್ಡ ಶಕ್ತಿಯೋ, ಈ ಪ್ರಪಂಚವನ್ನು ಯಾರಾದರೆ ಹುಟ್ಟಿಸಿ ಪಾಲಿಸುತ್ತಿದ್ದಾನೋ, ಈ

ಪ್ರಪಂಚದಲ್ಲಿ ದೇವತೆಗಳಿಗೆಲ್ಲ ದೇವರಾಗಿ ಸರ್ವಲೋಕಗಳಿಗೆ ಅಧಿಪತಿಯಾಗಿ ಯಾರಾದರೆ ಇದ್ದಾರೋ, ಈ ಪ್ರಪಂಚವೆಲ್ಲವೂ ಒಂದು ಅಣುವೂ ಸಹ ಬಿಡದೆ ಎಲ್ಲವೂ ವ್ಯಾಪಿಸಿ ಎಲ್ಲದಕ್ಕೂ ಮೃತ್ಯುವಾಗಿ ಯಾರಾದರೆ ಇದ್ದಾನೋ, ಆ ಏಕೈಕ ಶಕ್ತಿಯೇ ಹೆಸರಿಲ್ಲದವನು ಮತ್ತು ರೂಪವಿಲ್ಲದವನು. ಈಗ ಇಲ್ಲಿ ಪುರುಷೋತ್ತಮನೆಂದು, ಪರಮಾತ್ಮನೆಂದು ಕರೆಯಲ್ಪಡುವವನೇ ಸೃಷ್ಠಿ, ಸ್ಥಿತಿ, ಲಯ ಕಾರಣ ಕರ್ತನಾಗಿದ್ದಾನೆ. ಅವನಿಗೆ ಹೆಸರಿಲ್ಲವೆಂದು ಹೇಳಿ ಪರಮಾತ್ಮ, ಪುರುಷೋತ್ತಮ ಎನ್ನುತ್ತಿದ್ದಾರೆಂದುಕೊಳ್ಳಬೇಡಿ. ಅವು ಹೆಸರುಗಳಲ್ಲ. ಆತನಿಗೆ ಹೆಸರು ಇಡುವುದಕ್ಕೆ ಸಾಧ್ಯವಿಲ್ಲ. ಆದ್ದರಿಂದ ಆತನಿಗಿರುವುವು ಹೆಸರುಗಳಲ್ಲವೆಂದು, ಇತರರೊಂದಿಗೆ ಹೋಲಿಸಿ ಕರೆಯುವುದರಲ್ಲಿನ ಹೋಲಿಕೆಗಳೆ ಪರಮಾತ್ಮ ಎನ್ನುವುದು ಮತ್ತು ಪುರುಷೋತ್ತಮ ಎನ್ನುವುದೆಂದು ತಿಳಿಯಬೇಕು. ಶರೀರದಲ್ಲಿನ ಆತ್ಮಕ್ಕೆ ಹೋಲಿಸಿ ಆತ್ಮಗಿಂತ ಬೇರೆಯಾದ್ದರಿಂದ ಪರಮಾತ್ಮ ಎಂದು ಕರೆಯುತ್ತಿದ್ದೇವೆ. ಪರಮಾತ್ಮ ಎನ್ನುವುದರಲ್ಲಿ ಆತ್ಮಗಿಂತ ಪರವಾಗಿ ಇರುವವನೆಂದು ಅರ್ಥ ಇದೆ. ಹಾಗೆ ಪುರುಷರಿಗೆ ಹೋಲಿಸಿ ಹೇಳಿದಾಗ ಪುರುಷೋತ್ತಮ ಎಂದಿದ್ದಾರೆ. ಪುರುಷೋತ್ತಮ ಎನ್ನುವುದರಲ್ಲಿರುವ ಇಬ್ಬರ ಪುರುಷರಲ್ಲಿ ಉತ್ತಮವಾದವನು ಎಂದು ಅರ್ಥವಿದೆ. ಇತರರೊಂದಿಗೆ ಹೋಲಿಸಿ ಹೇಳಿಕೊಳ್ಳುವುದೇ ಆಗಲಿ ಅವು ಹೆಸರುಗಳು ಅಲ್ಲವೆಂದು ಗ್ರಹಿಸಬೇಕು. ಹತ್ತುಜನ ಕಪ್ಪಗಿರುವವರಲ್ಲಿ ಒಬ್ಬ ಬೆಳ್ಳಗಿರುವವನು ಇದ್ದಾಗ ಅವನನ್ನು ಬಿಳಿಯ (ಬೆಳ್ಳಗಿರುವವನು) ಎನ್ನುತ್ತೇವೆ. ಬಿಳಿಯ ಎಂಬ ಮಾತು ಇತರರೊಂದಿಗೆ ಹೋಲಿಸುವ ಹೋಲಿಕೆಯಾಗಲಿ ಹೆಸರು ಅಲ್ಲತಾನೆ! ಹಾಗೇ ಕ್ಷರಾಕ್ಷರರೊಂದಿಗೆ ಹೋಲಿಸುವ ಹೋಲಿಕೆಗಳೇ ಪರಮಾತ್ಮ, ಪುರುಷೋತ್ತಮ ಎಂಬ ಮಾತುಗಳು, ನಿಜವಾಗಲು ಆತನಿಗೆ ಹೆಸರಾಗಲಿ ಆಕಾರವಾಗಲಿ ಇಲ್ಲ.

**(14) ಶ್ಲೋ॥ 19 : ಯೋ ಮಾ ಮೇವ ಮಸಮ್ಮೂಢೋ ಜಾನಾತಿ ಪುರುಷೋತ್ತಮಮ್ ।**
**ಸ ಸರ್ವವಿ ದ್ಭಜತಿ ಮಾಂ ಸರ್ವಭಾವೇನ ಭಾರತ! ॥**

**(ಪರಮಾತ್ಮ)**

**ಭಾವಾರ್ಥ** : ಯಾರು ಅಜ್ಞಾನರಹಿತನಾಗಿ ಜ್ಞಾನಸಹಿತನಾಗಿ ಪುರುಷೋತ್ತಮನಾಗಿ ನನ್ನನ್ನು ತಿಳಿದವನಾಗಿದ್ದಾನೋ, ಅವನು ಸರ್ವವು ತಿಳಿದವನಾಗಿ ಎಲ್ಲಾ ಭಾವನೆಗಳಿಂದ ನನ್ನನ್ನು ಆರಾಧಿಸಿದವನಾಗುತ್ತಿದ್ದಾನೆ.

**ವಿವರ:** ಯಾರಾದರೆ ಪೂರ್ಣಮಟ್ಟದ ಜ್ಞಾನ ತಿಳಿದುಕೊಳ್ಳುತ್ತಿದ್ದಾನೋ, ಅವನು

ಪುರುಷೋತ್ತಮನಾದ ಪರಮಾತ್ಮನನ್ನು ಕ್ಷರ ಅಕ್ಷರಗಳಿಗಿಂತ ಬೇರೆಯಾಗಿ ನೋಡುತ್ತಿದ್ದಾನೆ. ಕ್ಷರ ಅಕ್ಷರರನ್ನು ಶರೀರದಲ್ಲಿಯೇ ನೋಡುತ್ತಾ, ಪರಮಾತ್ಮ ಎಲ್ಲಾಕಡೆ ಇರುವಂತೆ ತಿಳಿಯುತ್ತಾನೆ. ಪರಮಾತ್ಮನ ನಿಜ ಸ್ವರೂಪವನ್ನು ಅರ್ಥಮಾಡಿಕೊಳ್ಳುತ್ತಿದ್ದಾನೆ ಸರ್ವವಿಧಗಳ ಪರಮಾತ್ಮನನ್ನು ಅರ್ಥಮಾಡಿಕೊಂಡವನನ್ನು ಸರ್ವಜ್ಞನೆಂದು ಹೇಳಬಹುದು. ಅವನು ಪರಮಾತ್ಮನನ್ನು ಸರ್ವ ವಿಧಗಳಲ್ಲಿ ಆರಾಧಿಸಿದವನಾಗುತ್ತಾನೆ.

**(14) ಶ್ಲೋ॥ 20 : ಇತಿ ಗುಹ್ಯತಮಂ ಶಾಸ್ತ್ರ ಮಿದಮುಕ್ತಂ ಮಯಾಽನಘ! ।**
**ಏತ ದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ಕೃತಕೃತ್ಯಶ್ಚ ಭಾರತ ! ॥**
**(ಜೀವಾತ್ಮ,ಆತ್ಮ,ಪರಮಾತ್ಮ)**

**ಭಾವಾರ್ಥ** : ಈ ಪ್ರಕಾರವಾಗಿ ರಹಸ್ಯಾತಿ ರಹಸ್ಯವಾದ ಶಾಸ್ತ್ರ ನಿನಗೆ ನಾನು ಹೇಳಿದ್ದೇನೆ. ಇದನ್ನು ತಿಳಿದುಕೊಂಡವನು ಬುದ್ಧಿವಂತನು ಹಾಗೂ ಕೃತಕೃತ್ಯನಾಗುತ್ತಾನೆ.

**ವಿವರ** : ಈ ಅಧ್ಯಾಯದಲ್ಲಿ ಕೊನೆಯದಾದ ಈ ಶ್ಲೋಕದಲ್ಲಿ ರಹಸ್ಯವಾದ ಶಾಸ್ತ್ರ ನನ್ನಿಂದ ನಿನಗೆ ಹೇಳಲಾಗಿದೆ ಎಂದು ಹೇಳಿದ್ದಾರೆ. ರಹಸ್ಯವಾದುದು ಎಂದರೆ ಯಾರಿಗೂ ತಿಳಿಯದಿರುವುದೆಂದು ಅರ್ಥ. ಇಲ್ಲಿಯವರೆಗೂ ತಿಳಿಯದಿರುವ ವಿಷಯ ಏನೆಂದರೆ! ಒಬ್ಬನೇ ಪುರುಷನು ಮೂರಾಗಿ ವಿಭಜಿಸಲ್ಪಟ್ಟಿರುವುದು, ಮತ್ತು ಆ ಮೂವರು ಯಾರೆನ್ನುವುದು. ಈ ವಿಷಯದಲ್ಲಿ ಭಗವಂತನು ರಹಸ್ಯವೆನ್ನುವಂತೆ ದೊಡ್ಡದಾಗಿ ತಿಳಿದವರೂ ಸಹ ಮೂವರನ್ನು ತಿಳಿಯಲಾರದೆ, ಒಬ್ಬರ ಸ್ಥಾನದಲ್ಲಿ ಪ್ರಕೃತಿಯನ್ನು ಅವುಗಳ ಶರೀರಗಳನ್ನು ಇಟ್ಟುಕೊಂಡಿದ್ದಾರೆ. ಬೇರೆ ಬೇರೆಯಾದ ಪ್ರಕೃತಿ ಪುರುಷರಲ್ಲಿ ಒಬ್ಬ ಪುರುಷನಿಗೆ ಸಂಬಂಧಿಸಿದ ವಿಷಯವಿದು ಎಂದು ತಿಳಿಯದೇ, ಪುರುಷನಿಗೆ ವಿಭಿನ್ನವಾಗಿರುವ ಪ್ರಕೃತಿಯನ್ನು ಆ ಸ್ಥಾನದಲ್ಲಿ ಇಟ್ಟುಕೊಂಡಿದ್ದಾರೆ. ಇದರಿಂದ ಈ ವಿಷಯ ಯಾರಿಗೂ ಅರ್ಥವಾಗಲಿಲ್ಲ ಎನ್ನುವುದಕ್ಕೆ ನಿದರ್ಶನವಾಗಿದೆ. ಇದು ರಹಸ್ಯವಾದುದೆಂದು ಭಗವಂತನು ಹೇಳುವುದರಿಂದ ನಮಗೆ ತಿಳಿಯದ ರಹಸ್ಯವೇನೋ ಇದರಲ್ಲಿ ಇದೆಯೆಂದು ಪರಿಶೀಲಿಸಿ ನೋಡಬೇಕಾದ ಅವಶ್ಯಕತೆಯಿದೆ.

ಇಷ್ಟೇ ಅಲ್ಲದೆ ಇದು ಶಾಸ್ತ್ರಬದ್ಧವಾದ ವಿಷಯವೆಂದು ಸಹ ಹೇಳಲಾಗಿದೆ. ಎಂದರೆ ಇದು ಶಾಸನ ರೂಪವಾದುದೆಂದು, ಇದರಲ್ಲಿ ಹೇಳಿದ ವಿಷಯ ಚಾಚೂ ತಪ್ಪದೆ ನಡೆಯುವ ವಿಷಯಗಳು ಮತ್ತು ಇರುವ ವಿಷಯಗಳೆಂದು ತಿಳಿಯಬೇಕು. ಶಾಸ್ತ್ರಬದ್ಧವಾದ ಲೆಕ್ಕಾಚಾರಗಳಿಂದ ಕೂಡಿಕೊಂಡಿರುವ ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳ ವಿವರ,

ಅವುಗಳ ಬೆಳವಣಿಗೆಯಾದ ಅಶ್ವರ್ಥವೃಕ್ಷದ ನಿಜಸ್ವರೂಪವನ್ನು ತಿಳಿಯಲಾರದೆ ಸಂಸಾರ ವೃಕ್ಷವೆಂದು ಊಹಿಸಿಕೊಳ್ಳುವುದು ಶಾಸ್ತ್ರಬದ್ಧತೆಯನ್ನು ಘೋಷಿಸಿ ಹೇಳಲಿಲ್ಲ. ಇಷ್ಟು ವರ್ಷಗಳೆಂದು ಜಗತ್ತಿನ ಸೃಷ್ಟಿಯನ್ನು ತಿಳಿಸುವ ಬ್ರಹ್ಮಚಕ್ರ, ಇಷ್ಟುಕಾಲ ಮಾನವನ ಜೀವನವೆಂದು ತಿಳಿಸುವ ಕಾಲಚಕ್ರ, ಇಷ್ಟೇ ಕಷ್ಟ ಇಷ್ಟೇ ಸುಖವೆಂದು ತಿಳಿಸುವ ಕರ್ಮಚಕ್ರ, ಇವೇ ಗುಣಗಳೆಂದು ತಿಳಿಸುವ ಗುಣಚಕ್ರ ಅಶ್ವರ್ಥಮೂಲವಾಗಿವೆ ಎಂದು ಶಾಸ್ತ್ರಬದ್ಧವಾಗಿ ತಿಳಿದವನು ಬುದ್ಧಿವಂತನಾಗುತ್ತಾನೆ, ಕೃತಕೃತ್ಯನಾಗುತ್ತಾನೆ ಎಂದು ಕೊನೆಯ ಶ್ಲೋಕದಲ್ಲಿ ತಿಳಿಸಿದ್ದಾರೆ. ಆದ್ದರಿಂದ ನಾವು ಏನನ್ನು ಓದುತ್ತಿರುವಾಗಲಾದರು ಅದರಲ್ಲಿ ಮುಖ್ಯವಾಗಿ ಶಾಸ್ತ್ರೀಯತೆ ಗಮನಿಸಬೇಕು. ಶಾಸ್ತ್ರೀಯತೆ ಇಲ್ಲದ ವಿಷಯ ಅಗ್ನಿಯಿಲ್ಲದ ಅಡಿಗೆಯಂತೆ. ಹೇತುವಾದಿಗಳ ಪ್ರಶ್ನೆಗಳಿಗೆ ನಿಲ್ಲುವುದಿಲ್ಲ.

ಇಲ್ಲಿಗೆ ಪುರುಷೋತ್ತಮ ಪ್ರಾಪ್ತಿ ಯೋಗವೆಂಬ ಈ ಅಧ್ಯಾಯ ಮುಕ್ತಾಯವಾಗಿದೆ. ಇದರಲ್ಲಿನ ಶ್ಲೋಕಗಳ ವಿವರವನ್ನು ಕೆಳಗೆ ಕೊಡಲಾಗಿದೆ.

| | | | |
|---|---|---|---|
| 1. | ಪ್ರಕೃತಿ, ಪುರುಷರು | – | 3 |
| 2. | ಪರಮಾತ್ಮ | – | 9 |
| 3. | ಆತ್ಮ, ಪ್ರಕೃತಿ | – | 1 |
| 4. | ಜೀವಾತ್ಮ | – | 2 |
| 5. | ಆತ್ಮ | – | 3 |
| 6. | ಜೀವಾತ್ಮ, ಆತ್ಮ | – | 1 |
| 7. | ಜೀವಾತ್ಮ, ಆತ್ಮ, ಪರಮಾತ್ಮ | – | 1 |
| | **ಒಟ್ಟು ಶ್ಲೋಕಗಳು** | – | **20** |

ಭಾವ, ವಿವರವನ್ನು ಬದಲಿಸಿ ಬರೆದ ಶ್ಲೋಕಗಳು – 2, 14, 15, 16, 17.



ಹದಿನೈದನೆಯ ಅಧ್ಯಾಯ

# ದೈವಾಸುರ ಸಂಪದ್ವಿಭಾಗ ಯೋಗ

**ಶ್ರೀ ಭಗವಂತನು ಹೀಗೆ ಹೇಳಿದನು :–**

**(15) ಶ್ಲೋ॥ 1 : ಅಭಯಂ ಸತ್ತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ ।**
**ದಾನಂ ದಮ ಶ್ಚ ಯಜ್ಞ ಶ್ಚ ಸ್ವಾಧ್ಯಾಯ ಸ್ತಪ ಆರ್ಜವಮ್ ॥**

**(ದೈವಗುಣ)**

**(15) ಶ್ಲೋ॥ 2 : ಅಹಿಂಸಾ ಸತ್ಯ ಮಕ್ರೋಧಸ್ತ್ಯಾಗ ಶ್ಶಾನ್ತಿ ರಪೈಶುನಮ್ ।**
**ದಯಾ ಭೂತೇಷ್ವಲೋಲುಪ್ತ್ವಂ ಮಾರ್ದವಂ ಹ್ರೀ ರಚಾಪಲಮ್ ॥**

**(ದೈವಗುಣ)**

**(15) ಶ್ಲೋ॥ 3 : ತೇಜಃ ಕ್ಷಮಾ ಧೃತಿಃ ಶೌಚ ಮದ್ರೋಹೋ ನಾತಿಮಾನಿತಾ ।**
**ಭವನ್ತಿ ಸಮ್ಪದಂ ದೈವೀ ಮಭಿಜಾತಸ್ಯ ಭಾರತ! ॥**

**(ದೈವಗುಣ)**

**ಭಾವಾರ್ಥ** : ಭಯ ಇಲ್ಲದಿರುವುದು, ಸತ್ತ್ವಗುಣದಲ್ಲಿ ಒಳ್ಳೆಯವಾದ ಆರು ಗುಣಗಳು ಹೊಂದಿರುವುದು, ಜ್ಞಾನ ಯೋಗದಲ್ಲಿನ ವ್ಯವಹಾರಗಳೆಲ್ಲ ತಿಳಿದಿರುವುದು, ದಾನ ಕೊಡುವುದು, ಇಂದ್ರಿಯಗಳನ್ನು ಸ್ವಾಧೀನದಲ್ಲಿಡುವುದು, ದ್ರವ್ಯ ಜ್ಞಾನಯಜ್ಞಗಳು ತಿಳಿದು ವೇದಾಧ್ಯಯನಗಳು ಮಾಡಿರುವುದು, ತಪಸ್ಸು ಹೊಂದಿ ಕಪಟ ಇಲ್ಲದಿರುವುದು, ಅಹಿಂಸೆ, ಸತ್ಯವನ್ನೇ ಮಾತನಾಡುವುದು, ಕ್ರೋಧ ಇಲ್ಲದಿರುವುದು, ತ್ಯಾಗ, ಶಾಂತಿಹೊಂದಿ ಚಾಡಿಗಳನ್ನು ಹೇಳದಿರುವುದು, ಜೀವರಾಶಿಗಳ ಮೇಲೆ ದಯೆ, ವಿಷಯಗಳಲ್ಲಿ ಆಸಕ್ತಿ ಇಲ್ಲದಿರುವುದು, ಮೃದುವಾಗಿರುವುದು, ಗಂಭೀರಭಾವ ಹೊಂದಿರುವುದು ಮನಸ್ಸು ಚಲಿಸದಂತಿರುವುದು, ತೇಜಸ್ಸು, ಕ್ಷಮಿಸುವ ಸ್ವಭಾವ, ಧೈರ್ಯ, ಶುಭ್ರತೆ, ಪರರಿಗೆ ದ್ರೋಹ ಮಾಡದಿರುವುದು, ಅಭಿಮಾನ ಇಲ್ಲದಿರುವುದು ದೈವಾಂಶದಲ್ಲಿ ಹುಟ್ಟಿದವರಿಗೆ ಇರುತ್ತವೆ.

**(15)ಶ್ಲೋ॥ 4 : ದಂಭೋ ದರ್ಪೋऽಭಿಮಾನ ಶ್ಚ ಕ್ರೋಧಃ ಪಾರುಷ್ಯಮೇವ ಚ ।**
**ಅಜ್ಞಾನಂ ಚಾಭಿಜಾತಸ್ಯ ಪಾರ್ಥ! ಸಂಪದ ಮಾಸುರೀಮ್ ॥**

**(ಅಸುರ ಗುಣ)**

**ಭಾವಾರ್ಥ** : ಗರ್ವ, ಅಧಿಕಾರವನ್ನು ಚಲಾಯಿಸುವುದು, ಅಭಿಮಾನ ಹೊಂದಿರುವುದು, ಕ್ರೋಧ, ಕಠಿಣತ್ವ ಹೊಂದಿರುವುದು, ಅಜ್ಞಾನ ಹೊಂದಿರುವುದು ರಾಕ್ಷಸಾಂಶದಲ್ಲಿ ಹುಟ್ಟಿದವರಿಗೆ ಇರುತ್ತದೆ.

**(15) ಶ್ಲೋ॥ 5 : ದೈವೀ ಸಮ್ಪದ್ವಿ ಮೋಕ್ಷಾಯ ನಿಬನ್ಧಾಯಾಸುರೀ ಮತಾ ।**
**ಮಾಶುಚಃ ಸಮ್ಪದಂ ದೈವೀ ಮಭಿಜಾತೋಽಸಿ ಪಾಂಡವ! ॥**

**(ದೈವ ಅಸುರ ಗುಣಗಳು)**

**ಭಾವಾರ್ಥ** : ದೈವ ಅಂಶ ಮೋಕ್ಷವನ್ನು ಉಂಟುಮಾಡುತ್ತದೆ. ಅಸುರಾಂಶ ಬಂಧನವನ್ನು ಉಂಟುಮಾಡುತ್ತದೆ. ನೀನು ದೈವಾಂಶ ಸಂಭೂತನಾಗಿರುವುದರಿಂದ ದುಃಖ ಪಡಬೇಕಾದ ಕೆಲಸವಿಲ್ಲ.

**ವಿವರ** : ದೈವಾಂಶ, ರಾಕ್ಷಸಾಂಶ ಎನ್ನುವ ಎರಡು ಭಾಗಗಳಲ್ಲಿ ದೈವಾಂಶ ದೈವದ ಕಡೆ, ರಾಕ್ಷಸಾಂಶ ಜನ್ಮಗಳಕಡೆ ಮಾರ್ಗಗಳಾಗಿವೆ. ದೈವಾಂಶ ಎನ್ನುವುದರಲ್ಲಿ ಹುಟ್ಟಿದವರು ದೈವಕ್ಕೂ ಜ್ಞಾನಕ್ಕೂ ವಿರುದ್ಧವಾದ ಕೆಲಸಗಳು ಮಾಡದಂತಿರುತ್ತಾರೆ. ಒಳ್ಳೆಯ ಕೆಲಸಗಳು ಮಾಡುತ್ತಾ, ಅವುಗಳನ್ನು ಕುರಿತು ಸ್ವಲ್ಪ ಸ್ವಲ್ಪ ಆಲೋಚಿಸುತ್ತಾ, ಆ ಆಲೋಚನೆಗಳಿಂದ ಸ್ವಲ್ಪ ಸ್ವಲ್ಪವಾಗಿ ಜ್ಞಾನದ ಮೇಲೆ ಧ್ಯಾಸ ಉಂಟಾಗುತ್ತಾ, ಗುರು ಸನ್ನಿಧಿಗೆ ಸೇರುತ್ತಾರೆ. ಅಲ್ಲಿ ಗುರು ಬೋಧಿಸುವ ಜ್ಞಾನದಿಂದ ಕೆಲವು ಜನ್ಮಗಳಿಗಾದರೂ ಮೋಕ್ಷವನ್ನು ಹೊಂದುತ್ತಾರೆ. ರಾಕ್ಷಸಾಂಶದಲ್ಲಿ ಹುಟ್ಟಿದವರು ದೈವಕ್ಕೂ ಜ್ಞಾನಕ್ಕೂ ವಿರುದ್ಧವಾದ ಕೆಲಸಗಳು ಮಾಡುವುದರಿಂದ ಅವರಿಗೂ ಜ್ಞಾನಕ್ಕೂ ಮಧ್ಯ ಅಂತರ ಏರ್ಪಡುತ್ತದೆ. ಜ್ಞಾನದ ಮೇಲೆ ಧ್ಯಾಸವಿಲ್ಲದವರು ಗುರುಗಳನ್ನೂ ಸಹ ಅವಹೇಳನವಾಗಿ ಮಾತನಾಡುತ್ತಾರೆ. ಅಂತಹವರಿಗೆ ಜ್ಞಾನದ ಗಟ್ಟು (ದಡ) ಸಿಗದೆ ಜನ್ಮ ಜನ್ಮಗಳಿಗೂ ದೇವರಿಗೆ ದೂರವಾಗುತ್ತಾ ಜನ್ಮಕರ್ಮಗಳನ್ನು ಹೊಂದುತ್ತಲೇ ಇರುತ್ತಾರೆ. ದೈವಿಕವಾದ ವಿಷಯಗಳಲ್ಲಿ ಬೆಲೆ, ಗೌರವ ಕೊಡುವ ಸಜ್ಜನರು (ದೈವಾಂಶಪರರು) ದೈವಿಕವಾದ ಶ್ರದ್ಧೆಯನ್ನು ಹೊಂದುತ್ತಾ ಕೆಲವು ಜನ್ಮಗಳ ನಂತರ ದೈವವನ್ನು ಕುರಿತಾದ ಸಮಾಚಾರವನ್ನು ತಿಳಿಯುತ್ತಾರೆ. ಇಂತಹವರನ್ನು ಕುರಿತು ಜ್ಞಾನ ವಿಜ್ಞಾನ ಯೋಗದಲ್ಲಿ 19ನೇ ಶ್ಲೋಕದಲ್ಲಿ **'ಬಹೂನಾಮ್ ಜನ್ಮನಾಮಂತೇ ಜ್ಞಾನವಾನ್ಮಾಂ ಪ್ರಪದ್ಯತೇ'** ಎಂದು ಹೇಳಿದ್ದಾರೆ. ರಾಕ್ಷಸಾಂಶ ಇರುವವರು ದೈವಿಕ ವಿಷಯಗಳನ್ನು ಹೀಯಾಳಿಸುತ್ತಾ ಜ್ಞಾನಿಗಳನ್ನು ಶತ್ರುಗಳಾಗಿ ಲೆಕ್ಕಿಸುತ್ತಾರೆ. ಅಂತಹವರು ದೇವತೆಗಳಿಗೆ ಭಕ್ತರಾಗಬಹುದು ಆದರೆ ಪರಮಾತ್ಮ ವಿಷಯಗಳ ಬಗ್ಗೆ ತಿಳಿಯಲಾರರು. ಜನ್ಮ ಜನ್ಮಗಳಿಗೂ

ಜ್ಞಾನವೊಂದರ ತೀರಕ್ಕೆ ದೂರವಾಗುತ್ತಾ ಎಂದಿಗೂ ಜ್ಞಾನವನ್ನು ತಿಳಿಯಲಾರರು. ಅರ್ಜುನನು ದೈವಾಂಶದಲ್ಲಿ ಹುಟ್ಟಿದವನಾದ್ದರಿಂದ ಎಷ್ಟೋ ಜನ್ಮಗಳ ಶ್ರದ್ಧೆಯಿಂದ ಗುರುವಾಗಿ ಭಗವಂತನೇ ಲಭಿಸಿದ್ದಾನೆ. ದೈವಾಂಶದಲ್ಲಿ ಹುಟ್ಟಿದವರನ್ನು ದೇವತೆಗಳೆಂದು, ರಾಕ್ಷಸಾಂಶದಲ್ಲಿ ಹುಟ್ಟಿದವರನ್ನು ರಾಕ್ಷಸಾಂಶರೆಂದು ಕರೆಯುತ್ತಿದ್ದೇವೆ. ಪುರಾಣಗಳಲ್ಲಿ ಹೇಳಿದಂತೆ ಅವರು ಎಲ್ಲೋ ಇಲ್ಲ. ಭೂಮಿ ಮೇಲೆ ಮಾನವಾಕಾರದಲ್ಲಿಯೇ ಇದ್ದಾರೆ. ಇದರ ವಿಷಯ ಕೆಳಗಿನ ಶ್ಲೋಕದಲ್ಲಿ ನೋಡಿರಿ.

**(15) ಶ್ಲೋ॥ 6 : ದ್ವೌ ಭೂತಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವ ಚ ।**
**ದೈವೋ ವಿಸ್ತರಶಃ ಪ್ರೋಕ್ತ ಆಸುರಂ ಪಾರ್ಥ! ಮೇ ಶೃಣು ॥**
**(ದೈವ, ಅಸುರ ಗುಣಗಳು)**

**ಭಾವಾರ್ಥ** : ಲೋಕದಲ್ಲಿ ದೈವ ಅಸುರ ಎನ್ನುವ ಎರಡು ವಿಧಗಳ ಜೀವಿಗಳು ಹುಟ್ಟುತ್ತಿದ್ದಾರೆ. ದೈವ ವಿಷಯಗಳು ಅವುಗಳ ಗುಣಗಳನ್ನು ಕುರಿತು ಹೇಳಿದ್ದೇನೆ. ಅಸುರರನ್ನು ಕುರಿತು ಹೇಳುತ್ತೇನೆ ಕೇಳು.

**ವಿವರ :** ದೇವತೆಗಳು, ರಾಕ್ಷಸರು ಎನ್ನುವ ಎರಡು ವಿಧದವರು ಭೂಮಿಯ ಮೇಲೆ ಇದ್ದಾರೆ ಎಂದರೆ ನಂಬಲಾರದ ವಿಷಯವಾಗಿರುತ್ತದೆ. ಆದರೆ ಭಗವಂತನು ಹೇಳಿದ ಮಾತು ನಿಜ. ದೇವತೆಗಳೆನ್ನುವವರು ಎಲ್ಲಿಯೋ ಮೇಲಿನ ಲೋಕಗಳಲ್ಲಿ ಇದ್ದಾರೆಂದುಕೊಳ್ಳುವುದು ತಪ್ಪು. ದೇವತೆಗಳು ರಾಕ್ಷಸರು ನಿಜವಾಗಲು ಭೂಮಿ ಮೇಲೆಯೇ ಇದ್ದಾರೆ. ಸ್ವಲ್ಪ ಜ್ಞಾನ ಇರುವವರು ಇವರನ್ನು ಭೂಮಿ ಮೇಲೆಯೇ ಗುರುತಿಸಬಹುದು. ಈ ಎರಡು ಜಾತಿಗಳು ಗುಣಗಳಿಂದ ಏರ್ಪಡುತ್ತಿವೆ. ಇಲ್ಲಿ **'ದ್ವೌ ಭೂತಸರ್ಗೌ ಲೋಕೇಽಸ್ಮಿನ್ ದೈವ ಅಸುರ ಏವಚ'** ಎನ್ನುವುದರಲ್ಲಿ ಲೋಕಗಳಿಗೆ ನಿಲಯವಾದ ಭೂಮಿ ಮೇಲೆಯೇ ದೇವತೆಗಳು, ರಾಕ್ಷಸರು ಹುಟ್ಟುತ್ತಿದ್ದಾರೆಂದು ಹೇಳುವುದು ಚೆನ್ನಾಗಿ ಗ್ರಹಿಸಬಹುದು.

ದೇವತೆಗಳು ಮೂವತ್ತುಮೂರು ಕೋಟಿ ಇದ್ದಾರೆಂದು ವದಂತಿ ಇದೆ. ಅವರೆಷ್ಟು ಮಂದಿಯಾದರೂ ವಿಷ್ಣು, ಈಶ್ವರ, ಬ್ರಹ್ಮ ಮೊದಲುಗೊಂಡು ಚಿಕ್ಕ ಚಿಕ್ಕ ದೇವತೆಗಳವರೆಗೂ ಭೂಮಿ ಮೇಲೆ ವಿಸ್ತರಿಸಿ ಮನುಷ್ಯರ ರೂಪದಲ್ಲಿದ್ದಾರೆ. ಇಲ್ಲಿ ಕೆಲವರಿಗೊಂದು ಅನುಮಾನ ಬರಬಹುದು. ಭೂಮಿ ಮೇಲೆ ದೇವತೆಗಳು ಇದ್ದಂತೆ ಅಲ್ಲವೆ! ಕಾಣಿಸಲಿಲ್ಲವೆ! ಅವರೆಲ್ಲಿ ಇದ್ದಾರೆ? ಅವರು ಹೇಗಿದ್ದಾರೆ? ಎಂದು ಕೇಳಬಹುದು. ಅದಕ್ಕೆ ಸಮಾಧಾನ ಭಗವಂತನು

ಹೇಳಿದಂತೆ ದೇವತೆಗಳು ರಾಕ್ಷಸರು ಭೂಮಿ ಮೇಲೆಯೇ ಇದ್ದಾರೆ. ಆದರೂ ಅವರನ್ನು ನಾವು ಗುರುತಿಸಲಾರದೆ ಹೋಗುತ್ತಿದ್ದೇವೆ. ಹಾಗೆ ಎದುರುಗಿರುವವರನ್ನು ಗುರುತಿಸುವುದಕ್ಕೆ ಸ್ವಲ್ಪವಾದರು ಜ್ಞಾನದೃಷ್ಟಿ ಅಗತ್ಯ. ಎದುರಿಗಿರುವವರನ್ನು ಗುರುತಿಸದೆ ಹೋಗುವುದಲ್ಲದೆ ಮಾನವರಲ್ಲಿ ದೇವತೆಗಳಾದವರು ಅವರನ್ನು ಅವರೂ ಸಹ ಗುರುತಿಸಲಾರರು. ಎದುರಿಗಿರುವವರನ್ನು ಗುರುತಿಸುವುದಕ್ಕೆ ಅವಕಾಶ ಇದೆಯಾಗಲಿ ಯಾರನ್ನವರು ಗುರುತಿಸುವುದಕ್ಕೆ ಅವಕಾಶವಿಲ್ಲ. ಎದುರಿಗಿರುವವರನ್ನು ದೇವತೆಗಳೆಂದು ಗುರುತಿಸುವುದಕ್ಕೆ ಜ್ಞಾನದೃಷ್ಟಿ ಅಗತ್ಯ ಎಂದಿದ್ದೇವಲ್ಲವೆ! ಅಂತಹ ದೃಷ್ಟಿ ಇಲ್ಲದವರಿಗೆ ಎಲ್ಲರೂ ಮನುಷ್ಯರಾಗಿಯೇ ಕಾಣಿಸುತ್ತಾರೆ. ಮನುಷ್ಯರಲ್ಲಿರುವ ತಾರತಮ್ಯಗಳು ತಿಳಿಯುವುದಿಲ್ಲ. ಚಿಕ್ಕ ಚಿಕ್ಕ ದೇವತೆಗಳಿಂದ ಮೊದಲುಗೊಂಡು ವಿಷ್ಣುವಿನವರೆಗೂ ಇರುವ ದೇವತಾ ವ್ಯತ್ಯಾಸಗಳು ಮಾನವರಲ್ಲಿಯೇ ಇವೆ.

ಜ್ಞಾನಶಕ್ತಿ ಇರುವವರೆಲ್ಲ ದೇವತೆಗಳೆಂದು ಹೇಳಬಹುದು. ಅವರವರ ಜ್ಞಾನಶಕ್ತಿಯಿಂದ ದೇವತೆಗಳಲ್ಲಿ ವ್ಯತ್ಯಾಸಗಳು ಇವೆ. ಅತ್ಯಧಿಕ ಜ್ಞಾನ ಶಕ್ತಿ ಇರುವವನು ವಿಷ್ಣು. ಆತನಿಗಿಂತ ಸ್ವಲ್ಪ ಕಡಿಮೆ ಇರುವವನು ರುದ್ರನು. ತದನಂತರ ಬ್ರಹ್ಮ ಹಾಗೆಯೇ ಜ್ಞಾನಶಕ್ತಿ ಕಡಿಮೆಯಾದಂತೆಲ್ಲ ಅವರಲ್ಲಿ ವ್ಯತ್ಯಾಸಗಳಿದ್ದು ಆಯಾ ದೇವತೆಗಳಾಗಿ ಹೇಳಲ್ಪಡುತ್ತಿದ್ದಾರೆ. ಇದರಿಂದ ಜ್ಞಾನಶಕ್ತಿ ಇರುವವರೆಲ್ಲರೂ ದೇವತೆಗಳೆಂದು, ಜ್ಞಾನಶಕ್ತಿ ಇಲ್ಲದವರೆಲ್ಲರೂ ರಾಕ್ಷಸರೆಂದು ಹೇಳಬಹುದು.

ದೇವತೆಗಳಾದ ವಿಷ್ಣು, ಈಶ್ವರ, ಬ್ರಹ್ಮ ಮೊದಲಾದವರು ಈ ಕಲಿಯುಗದಲ್ಲಿ ಇದ್ದಾರಾ? ವಿಶೇಷವಾದ ಜ್ಞಾನಶಕ್ತಿ ಇರುವ ವಿಷ್ಣು, ಈಶ್ವರ, ಬ್ರಹ್ಮ ಮೊದಲಾದವರು ಪರಮಾತ್ಮನಲ್ಲಿ ಐಕ್ಯವಾಗದೇ ಕಲಿಯುಗದಲ್ಲಿಯೂ ಸಹ ಇದ್ದಾರಾ? ಅವರಿಗೆ ಮುಕ್ತಿ ಬರಲಿಲ್ಲವಾ? ಅವರೂ ಎಲ್ಲರಂತೆ ಜನ್ಮಿಸುತ್ತಲೇ ಇದ್ದಾರಾ? ಎನ್ನುವ ಪ್ರಶ್ನೆಗಳು ಎಲ್ಲರಿಗೂ ಬರಬಹುದು. ಅದಕ್ಕೆ ಸಮಾಧಾನ ಏನೆಂದರೆ!

ದೇಶದಲ್ಲಿ ರಾಜ, ಯುವರಾಜ, ಪ್ರಧಾನಮಂತ್ರಿ, ಮಂತ್ರಿ ಎನ್ನುವ ಎಷ್ಟೋ ಲೆಕ್ಕವಿಲ್ಲದಷ್ಟು ಪದವಿಗಳಿವೆ ಅಲ್ಲವೆ! ಆ ಪದವಿಗಳು ಮೊದಲಿನಿಂದ ಇದ್ದರೂ ಒಂದು ಪದವಿಯಲ್ಲಿ ಒಬ್ಬನೇ ಮನುಷ್ಯ ಎಂದಿಗೂ ಇಲ್ಲ, ದೇಶಕ್ಕೆ ರಾಜನ ಪದವಿ ಶಾಶ್ವತವಾದುದು. ಆದರೂ ರಾಜನು ಮಾತ್ರ ಶಾಶ್ವತವಲ್ಲ. ಒಂದೇ ರಾಜ್ಯಕ್ಕೆ ರಾಜನಾಗಿ ಎಷ್ಟೋಜನ

ಬದಲಾಗಿರುವುದು ನಮಗೆ ತಿಳಿದಿರುವ ವಿಷಯವೇ. ಅಷ್ಟು ದೂರವೇಕೆ ಈಗಿರುವ ಪ್ರಧಾನಮಂತ್ರಿ ಪದವಿಯಲ್ಲಿ ಎಷ್ಟೋಜನ ಪ್ರಧಾನಿಗಳಾಗಿದ್ದು ಬದಲಾಗಿ ಹೋಗುವುದು ನೋಡುತ್ತಲೇ ಇದ್ದೇವಲ್ಲವೆ! ಎಷ್ಟುಜನ ಪ್ರಧಾನಿಗಳು ಬದಲಾದರೂ ಪ್ರಧಾನಮಂತ್ರಿ ಪದವಿ ಮಾತ್ರ ಹಾಗೇ ಶಾಶ್ವತವಾಗಿದೆಯಲ್ಲವೆ! ಹಾಗೇ ಭೂಮಿ ಮೇಲೆ ವಿಷ್ಣು, ಈಶ್ವರ, ಬ್ರಹ್ಮ ಎನ್ನುವ ಮೊದಲಾದ ದೇವತಾ ಪದವಿಗಳಿವೆ. ಈ ಪದವಿಗಳಿಗೆ ಅರ್ಹತೆ ಹೊಂದಿದ ಜೀವಾತ್ಮಗಳು ನಿರ್ಣಯಿಸಲ್ಪಡುತ್ತಿದ್ದಾರೆ. ಹಾಗೆಯೇ ಒಂದೇ ಜೀವಾತ್ಮ ಶಾಶ್ವತವಾಗಿ ಒಂದು ಪದವಿಗೆ ಅರ್ಹನಾಗಿಲ್ಲ. ಆತನು ಸ್ವಲ್ಪಕಾಲ ಇದ್ದರೆ, ಮತ್ತೊಬ್ಬನು ಸ್ವಲ್ಪಕಾಲ ಅರ್ಹತೆ ಹೊಂದುತ್ತಿದ್ದಾನೆ. ಒಬ್ಬ ಜೀವಾತ್ಮ ಪ್ರಪಂಚ ಎಲ್ಲದರಲ್ಲಿಯೂ ಜ್ಞಾನಶಕ್ತಿ (ಯೋಗಾಗ್ನಿ)ಯಲ್ಲಿ ಮೊದಲನೆಯವನಾಗಿದ್ದಾನೆಂದುಕೊಳ್ಳಿ. ಯೋಗಶಕ್ತಿಯಲ್ಲಿ ಮೊದಲನೆಯವನಾದ್ದರಿಂದ ಎಲ್ಲದಕ್ಕಿಂತ ದೊಡ್ಡ ದೇವತಾ ಪದವಿಯಾದ ವಿಷ್ಣು ಪದವಿಗೆ ಅರ್ಹತೆ ಹೊಂದಿರುತ್ತಾನೆ. ಆಗ ಆ ಜೀವಾತ್ಮ ಸ್ತ್ರೀ ಪುರುಷರಲ್ಲಿ ಯಾವ ಶರೀರ ಧರಿಸಿದ್ದರೂ ಆತನೇ ವಿಷ್ಣು. ಅಂತವನು ಸ್ವಲ್ಪಮಟ್ಟಿನ ಕರ್ಮದಿಂದ ಹುಟ್ಟಿರುತ್ತಾನೆ. ಆ ಜನ್ಮದಲ್ಲಿ ಪೂರ್ತಿ ಜ್ಞಾನಾಗ್ನಿಯನ್ನು ಸಂಪಾದಿಸಿಕೊಂಡು, ಇರುವ ಸ್ವಲ್ಪಮಟ್ಟಿನ ಕರ್ಮವನ್ನೂ ಸಹ ಇಲ್ಲದಂತೆ ಮಾಡಿಕೊಂಡು, ಆ ಜನ್ಮದಲ್ಲಿಯೇ ಮೋಕ್ಷ ಪಡೆಯುತ್ತಾನೆ. ಆಗ ಪುನಃ ಆ ಪದವಿಗೆ ಭೂಮಿ ಮೇಲೆ ಯಾರೋ ಒಬ್ಬನು ಜ್ಞಾನಶಕ್ತಿಯಲ್ಲಿ ಅಧಿಕನು ಅರ್ಹತೆ ಹೊಂದಿ ವಿಷ್ಣು ಆಗುತ್ತಾನೆ. ಈ ವಿಧವಾಗಿ ದೇವತೆಗಳ ಪದವಿಗಳು ಖಾಲಿ ಏರ್ಪಡುತ್ತಲೇ ಇರುತ್ತವೆ. ನಂತರ ಅವುಗಳಿಗೆ ಇತರರು ಅರ್ಹರಾಗುತ್ತಲೇ ಇರುತ್ತಾರೆ. ಭೂಮಿ ಮೇಲೆ ಜೀವಿಗಳು ಅವರವರ ಜ್ಞಾನಶಕ್ತಿಯಿಂದ ದೇವತೆಗಳ ಅರ್ಹತೆಗಳು ಹೊಂದಿದ್ದಾರೆಂದು ತಿಳಿಯುತ್ತಿದೆ. ವಿಷ್ಣು, ಈಶ್ವರ, ಬ್ರಹ್ಮರು ಭೂಮಿ ಮೇಲೆ ಮನುಷ್ಯರೇ ಎಂದು ತಿಳಿಯುತ್ತಿದೆ. ಹಾಗೆ ಶರೀರಧಾರಿಗಳಾದ ದೇವತೆಗಳು ಯೋಗವಾಚರಿಸಿ ಕರ್ಮ ಇಲ್ಲದಂತೆ ಮಾಡಿಕೊಂಡು ಮೋಕ್ಷ ಹೊಂದುತ್ತಿದ್ದಾರೆ. ದೊಡ್ಡ ದೊಡ್ಡ ದೇವತೆಗಳು ಭೂಮಿ ಮೇಲೆ ಇದ್ದರೂ, ಮಾಯೆ ಪ್ರಾಬಲ್ಯದಿಂದ ಅವರು ಯಾರಾಗಿರುವುದು ಅವರಿಗೇ ತಿಳಿಯುವುದಿಲ್ಲ. ದೇವತೆಗಳಾದವರು ಗುರುಗಳಾಗಿ, ಜ್ಞಾನಿಗಳಾಗಿ, ಯೋಗಿಗಳಾಗಿ, ಭಕ್ತಪರರಾಗಿ, ಸನ್ಯಾಸಿಗಳಾಗಿ ಎಷ್ಟೋಜನ ಇರುವಾಗ, ಅವರಿಗೆ ವಿರುದ್ಧವಾಗಿ ಎಷ್ಟೋಜನ ರಾಕ್ಷಸರೂ ಸಹ ಭೂಮಿ ಮೇಲೆ ಮನುಷ್ಯರ ರೂಪದಲ್ಲಿದ್ದಾರೆ.

ಜ್ಞಾನಹೊಂದಿದವರಿಗೆ ವಿರುದ್ಧವಾಗಿರುವವರೆಲ್ಲರೂ ರಾಕ್ಷಸರೇ, ಇವರಲ್ಲಿ ಜ್ಞಾನವಾಗಲಿ, ಜ್ಞಾನಶಕ್ತಿಯಾಗಲಿ ಇರುವುದಿಲ್ಲ. ಪರಮಾತ್ಮ ವಿಷಯಗಳು ಇವರಿಗೆ

ವಿರುದ್ಧವಾಗಿರುತ್ತವೆ. ಮುಖ್ಯವಾಗಿ ತಾಮಸ ಭಕ್ತಿ ಇರುವ ರಾಕ್ಷಸರು ತಾವೇ ನಿಜವಾದ ಭಕ್ತರೆಂದುಕೊಳ್ಳುವುದೂ ಸಹ ಇದೆ. ಇನ್ನೂ ಅವರು ಹೇಗಿದ್ದಾರೆ ಎಂದರೆ ಕೆಳಗಿನ ಶ್ಲೋಕಗಳನ್ನು ನೋಡೋಣ.

**(15) ಶ್ಲೋ॥ 7 : ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದು ರಾಸುರಾಃ ।**
**ನ ಶೌಚಂ ನಾಪಿ ಚಾ಻ಽಚಾರೋ ನ ಸತ್ಯಂ ತೇಷು ವಿದ್ಯತೇ ॥**
**(ಹೇತುವಾದ ಅಸುರಗುಣ)**

**ಭಾವಾರ್ಥ** : ಅಸುರರಾದವರು ಮನುಷ್ಯನೊಂದರ ಹುಟ್ಟುವಿಕೆಯನ್ನಾಗಲಿ, ಮರಣವನ್ನಾಗಲಿ ತಿಳಿದುಕೊಳ್ಳಲಾರರು. ಅವರ ಹತ್ತಿರ ಶುಚಿತ್ವವಾಗಲಿ, ಆಚಾರವಾಗಲಿ, ಸತ್ಯವಾಗಲಿ ಇರುವುದಿಲ್ಲ.

**ವಿವರ** : ಭೂಮಿ ಮೇಲೆ ದೇವತೆಗಳು, ರಾಕ್ಷಸರು ಎಂಬ ಎರಡು ವಿಧಗಳ ಮನುಷ್ಯರಿದ್ದಾರೆಂದು ಆರನೇ ಶ್ಲೋಕದಲ್ಲಿ ಹೇಳಿದ ಭಗವಂತನು, ಈ ಶ್ಲೋಕದಿಂದ ಅನೇಕ ವಿಧಗಳಾಗಿರುವ ರಾಕ್ಷಸರನ್ನು ಕುರಿತು ಹೇಳುವುದಕ್ಕೆ ಪ್ರಾರಂಭಿಸಿದ್ದಾನೆ. ಈಗ ಏಳನೇ ಶ್ಲೋಕದಲ್ಲಿ ಹೇತುವಾದಿಗಳನ್ನು ಕುರಿತು ಹೇಳಿ, ಎಂಟನೆಯ ಶ್ಲೋಕದಲ್ಲಿ ನಾಸ್ತಿಕವಾದಿಗಳನ್ನು ಕುರಿತು ಹೇಳಿ, ಒಂಭತ್ತನೆಯ ಶ್ಲೋಕದಲ್ಲಿ ಹೇತುವಾದಿಗಳನ್ನು, ನಾಸ್ತಿಕವಾದಿಗಳನ್ನು ಸೇರಿಸಿ ಎರಡು ವರ್ಗದವರನ್ನು ಕುರಿತು ಹೇಳಿದ್ದಾನೆ. ಈ ಶ್ಲೋಕದಲ್ಲಿ ಪ್ರತ್ಯೇಕಿಸಿ ಹೇತುವಾದಿಗಳನ್ನು ಕುರಿತು ಹೇಳಿದ್ದಾನೆ, ಆದ್ದರಿಂದ ಹೇತುವಾದಿಗಳನ್ನು ಭೂಮಿ ಮೇಲಿರುವ ಅಸುರರಾಗಿಯೇ ಲೆಕ್ಕಿಸಿಕೊಳ್ಳಬೇಕು. ಅಸುರರಾದ ಹೇತುವಾದಿಗಳು ಮನುಷ್ಯನೊಂದರ ಹುಟ್ಟವಿಕೆಯಾಗಲಿ, ಮರಣವಾಗಲಿ ಸ್ವಲ್ಪವೂ ತಿಳಿಯಲಾರರು ಎಂದಿದ್ದಾನೆ. ಅಷ್ಟೇ ಅಲ್ಲದೆ ಶುಚಿತ್ವ ಎನ್ನುವುದು, ಆಚಾರ ಎನ್ನುವುದು, ಸತ್ಯ ಎನ್ನುವುದು ಅವರಲ್ಲಿ ಇಲ್ಲವೆಂದು, ಅದು ಏನೋ ಅವರಿಗೆ ತಿಳಿದಿಲ್ಲ ಎಂದಿದ್ದಾನೆ. ಈ ಮಾತು ಕೇಳುತ್ತಲೇ ಬಹಳಜನರಿಗೆ ಕೆಲವು ಪ್ರಶ್ನೆಗಳು ತಕ್ಷಣ ಬರುತ್ತದೆ. ಹೇತುವಾದಿಗಳು ಭೂಮಿ ಮೇಲೆ ಎಷ್ಟೋಜನ ಇದ್ದಾರೆ. ಆಸ್ತಿಕರಿಗಿಂತ ಹೇತುವಾದಿಗಳು ಬಹಳ ತಿಳಿವಳಿಕೆಯುಳ್ಳವರಾಗಿ ಕಾಣಿಸುತ್ತಿದ್ದಾರೆ. ಮನುಷ್ಯ ಹುಟ್ಟುವುದು, ಸಾಯುವುದು ಅವರಿಗೆ ತಿಳಿಯದಿರುವುದೇನು? ಎಷ್ಟೋ ಜನ ಎಂ.ಡಿ ಡಾಕ್ಟರ್ಸ್, ಎಮ್.ಬಿ.ಬಿ.ಯಸ್ ಡಾಕ್ಟರ್ಸ್ ಹೇತುವಾದಿಗಳಾಗಿ ಇದ್ದಾರೆ. ಅವರಿಗೆ ಮನುಷ್ಯರ ಹುಟ್ಟು, ಸಾವು ತಿಳಿದಿಲ್ಲವಾ? ಈ ಮಾತು ನಂಬುವಂತದ್ದೇನಾ?

ಎಷ್ಟೋ ಶುಭ್ರವಾಗಿರುವವರಿಗೆ ಶುಭ್ರತೆ ಇಲ್ಲ ಎನ್ನುವುದು ಅಸತ್ಯ ಅಲ್ಲವೆ? ಎಷ್ಟೋಜನ ಹೇತುವಾದವನ್ನು ಮುಖ್ಯವಾದವಾಗಿ ಇಟ್ಟುಕೊಂಡವರು ಸತ್ಯ ನಿರ್ಧಾರಣೆಯೆಂದು, ಸತ್ಯಾನ್ವೇಷಣಾ ಎಂದು, ಸತ್ಯಪ್ರಚಾರವೆಂದು, ಸತ್ಯಶೋಧನೆಯೆಂದು, ಸತ್ಯವೆಂಬ ಹೆಸರಿನಿಂದ ಸಮಾಜಕ್ಕೆ ಸತ್ಯವನ್ನು ತಿಳಿಸುತ್ತಿದ್ದೇವೆನ್ನುತ್ತಿರುವಾಗ ಅವರ ಹತ್ತಿರ ಸತ್ಯ ಇಲ್ಲವೆಂದು, ಅವರಿಗೆ ಸತ್ಯ ತಿಳಿದಿಲ್ಲ ಎನ್ನುವುದು ಸಮಂಜಸವಾದ ಮಾತೇನಾ? ಹೇತುವಾದಿಗಳು ಒಂದು ಪದ್ಧತಿಯನ್ನು ಏರ್ಪಡಿಸಿಕೊಂಡು ಅದರ ಪ್ರಕಾರವೇ ಕೊನೆಯವರೆಗೂ ಕ್ರಮ ಬಿಡದಂತೆ ಆಚರಿಸುವವರ ಹತ್ತಿರ ಆಚಾರ ಇಲ್ಲವೆಂಬ ಗೀತೆಯ ಮಾತು ಸತ್ಯ ಹೇಗಾಗುತ್ತದೆ? ಇಷ್ಟು ಪ್ರಶ್ನೆಗಳು ಉದ್ಭವಿಸಿ, ಈ ಶ್ಲೋಕದಲ್ಲಿ ನಿಜವಿಲ್ಲವೆಂದೆನಿಸುತ್ತಿದೆ. ಆದರೂ ಆಳವಾಗಿ ಆಲೋಚಿಸಿ ನೋಡಿದರೆ ಎಲ್ಲಾ ಪ್ರಶ್ನೆಗಳಿಗೂ ಉತ್ತರ ದೊರೆತು ಶ್ಲೋಕದಲ್ಲಿನ ಅಸಲಾದ ಸತ್ಯ ತಿಳಿಯುತ್ತದೆ.

ಮಾನವ ಸಮಾಜದಲ್ಲಿ ಎಷ್ಟೋಜನ ಎಷ್ಟೋ ಕೆಲಸಗಳು ಮಾಡಿ ಬದುಕುತ್ತಿದ್ದಾರೆ. ಪ್ರತಿ ಕೆಲಸದಲ್ಲಿಯೂ ಅದಕ್ಕೆ ಸಂಬಂಧಿಸಿದ ವಿಜ್ಞತೆ, ಮಾಡಬೇಕಾದ ಪದ್ಧತಿ, ಕೆಲಸದ ಮೇಲೆ ಆಸಕ್ತಿ ಕೆಲಸದ ಬೆಲೆ ಎಲ್ಲವು ತಿಳಿದೇ ಮಾಡುತ್ತಾರೆ. ಎಲ್ಲರೂ ಬದುಕುವ ಉದ್ದೇಶದಿಂದಲೇ ಕೆಲಸ ಮಾಡುತ್ತಿದ್ದಾರೆ. ಆದರೆ ಕೆಲವರು ಮಾಡುವ ಕೆಲಸಗಳು ಕಾನೂನು ಸಮ್ಮತವಾದವುಗಳಾಗಿ, ಕೆಲವರು ಮಾಡುವ ಕೆಲಸಗಳು ಕಾನೂನಿಗೆ ವಿರುದ್ಧವಾಗಿರುತ್ತವೆ. ಕಳ್ಳತನ ಮಾಡುವವನಿಗೆ ಆ ಕೆಲಸದಲ್ಲಿ ನೈಪುಣ್ಯತೆ, ಮಾಡಬೇಕಾದ ಪದ್ಧತಿ, ಮಾಡುವುದರಲ್ಲಿ ಆಸಕ್ತಿ ಎಲ್ಲಾ ಇರುತ್ತವೆ. ಹಾಗೆ ಕೂಲಿ ಕೆಲಸ ಮಾಡುವವನಿಗೂ ಸಹ ಕ್ರಮಶಿಕ್ಷಣ, ನೈಪುಣ್ಯತೆ, ಒಂದು ಪದ್ಧತಿ, ಕೆಲಸದಲ್ಲಿ ಆಸಕ್ತಿ ಎಲ್ಲಾ ಇರುತ್ತವೆ. ಇಬ್ಬರ ಉದ್ದೇಶ ಹಣಕ್ಕೋಸ್ಕರವೇ ಆದರೂ ಸರ್ಕಾರದ ದೃಷ್ಠಿಯಲ್ಲಿ ಕಳ್ಳತನ ಕಾನೂನಿಗೆ ವಿರುದ್ಧವಾಗಿ, ಕೂಲಿ ಕೆಲಸ ಕಾನೂನಿನ ಸಮ್ಮತವಾಗಿ ಹೇಗಿದೆಯೋ, ಹಾಗೆಯೇ ಭೂಮಿ ಮೇಲೆ ಎಲ್ಲರಿಗೂ ಕಾಣಿಸದ ಕಾನೂನೊಂದಿದೆ. ಆ ಕಾನೂನಲ್ಲಿ ಕೆಲವರು ಧರ್ಮವಿರೋಧಿಗಳಾಗಿ, ಕೆಲವರು ಧರ್ಮಸಮ್ಮತರಾಗಿದ್ದಾರೆ. ಹೊರಗಿನ ಸರ್ಕಾರದ ಕಾನೂನಿನಲ್ಲಿ ಶಿಕ್ಷೆಗಳು ಇದ್ದಂತೆ, ಒಳಗಿನ ಸರ್ಕಾರವೊಂದರ ಧರ್ಮವೆಂಬ ಕಾನೂನಿನಲ್ಲಿಯೂ ಸಹ ಶಿಕ್ಷೆಗಳು ಇವೆ.

ಕೂಲಿ ಕೆಲಸ ಮಾಡುವವನಿಗಿಂತ ಹೆಚ್ಚಿನ ಶ್ರದ್ಧೆಯಿಂದ, ಕ್ರಮಶಿಕ್ಷಣದಿಂದ, ಪದ್ಧತಿಯಾಗಿ ನೈಪುಣ್ಯತೆಯಿಂದ ಬದುಕುವುದಕ್ಕೋಸ್ಕರ ಕಳ್ಳತನ ಮಾಡಿದರೆ, ಅವನಿಗಿಂತ

ಇವನು ಚೆನ್ನಾಗಿ ಮಾಡಿದ್ದಾನೆಂದು ಸರ್ಕಾರದ ಕಾನೂನು ಒಪ್ಪಿಕೊಳ್ಳುವುದಿಲ್ಲವಲ್ಲವೆ! ಹಾಗೆ ಆತ್ಮವಾದಿಗಳಿಗಿಂತ ಹೇತುವಾದಿಗಳು ಸಮಾಜ ಶ್ರೇಯಸ್ಸಿಗೋಸ್ಕರವೆಂದು ವಿಜ್ಞಾನದಿಂದ, ಕ್ರಮಶಿಕ್ಷಣದಿಂದ, ಪದ್ಧತಿ ಪ್ರಕಾರ ಆಚರಿಸಿದವನಿಗಿಂತ ಇವನು ಚೆನ್ನಾಗಿ ಮಾಡಿದ್ದಾನೆಂದು ದೇವರ ಧರ್ಮ ಒಪ್ಪಿಕೊಳ್ಳುವುದಿಲ್ಲ. ಎಲ್ಲರೂ ಬದುಕು ಬಾಳ್ವೆಗೆ ಕೆಲಸಗಳು ಮಾಡುತ್ತಿದ್ದರು ಅವನ ಕೆಲಸವನ್ನು ನೋಡಿ ಕೆಲವರನ್ನು ಮರ್ಯಾದಸ್ಥರೆಂದು, ಕೆಲವರನ್ನು ಅಪರಾಧಿಗಳೆಂದು ನ್ಯಾಯಶಾಸ್ತ್ರ ಹೇಗೆ ಹೇಳುತ್ತಿದೆಯೋ ಹಾಗೆಯೇ ಆತ್ಮವಾದಿಗಳು, ಹೇತುವಾದಿಗಳು ಸಮಾಜ ಶ್ರೇಯಸ್ಸಿಗೆ ಕೆಲಸ ಮಾಡುತ್ತಿದ್ದೇವೆಂದರೂ ಅವರ ಕೆಲಸವನ್ನು ಅನುಸರಿಸಿ ಕೆಲವರನ್ನು ಸುರರೆಂದು, ಕೆಲವರನ್ನು ಅಸುರರೆಂದು ಗೀತಾಶಾಸ್ತ್ರ ಹೇಳುತ್ತಿದೆ.

ತೀವ್ರವಾದಿಗಳು ಸರ್ಕಾರವನ್ನೂ, ಕಾನೂನನ್ನೂ ಒಪ್ಪಿಕೊಳ್ಳುವುದಿಲ್ಲ. ತಾವು ಮಾಡುತ್ತಿರುವ ತೀವ್ರವಾದ ಸರಿಯಾದುದೇ ಎನ್ನುತ್ತಾರೆ. ನಮ್ಮ ಕೆಲಸದಲ್ಲಿ ಪ್ರಾಣವನ್ನು ಸಹಿತ ಲೆಕ್ಕಮಾಡದಂತೆ ಕ್ರಮಶಿಕ್ಷಣದಿಂದ ನಮ್ಮ ಸಿದ್ಧಾಂತಗಳಿಗೆ ಅನುಗುಣವಾಗಿ ನಡೆದುಕೊಳ್ಳುತ್ತಿದ್ದೇವೆಂದರೂ ಸರ್ಕಾರ ಅವರ ಸಿದ್ಧಾಂತಗಳನ್ನು ಅವರ ಕ್ರಮಶಿಕ್ಷಣವನ್ನು ಒಪ್ಪಿಕೊಳ್ಳದೆ ತಪ್ಪಾಗಿ ಲೆಕ್ಕಿಸಿ ತೀವ್ರವಾದ ಕಾನೂನು ವಿರುದ್ಧವೆಂದು ಹೇಳುತ್ತಿದೆ. ಹಾಗೇ ತೀವ್ರವಾದಿಗಳು ಗವರ್ನಮೆಂಟನ್ನು ಒಪ್ಪಿಕೊಳ್ಳದಂತೆ, ಹೇತುವಾದಿಗಳು ದೇವರನ್ನು, ಧರ್ಮವನ್ನು ಒಪ್ಪಿಕೊಳ್ಳುವುದಿಲ್ಲ. ತಾವು ಅನುಸರಿಸುತ್ತಿರುವ ಹೇತುವಾದ ಸರಿಯಾದುದೆಂದು ಎನ್ನುತ್ತಿದ್ದಾರೆ. ಅವರು ಅವರ ಸಿದ್ಧಾಂತಗಳಿಗೆ ಅನುಗುಣವಾಗಿ ನಡೆದುಕೊಳ್ಳುತ್ತಿದ್ದರು, ಅವರ ವಿಧಾನದಲ್ಲಿ ಸತ್ಯವಾಗಿದ್ದರು, ಸರಿಯಾದ ಆಚರಣೆಹೊಂದಿದ್ದರು ದೇವರು ಅವರ ಸಿದ್ಧಾಂತಗಳನ್ನು, ಅವರ ಸತ್ಯವನ್ನು, ಅವರ ವಿಧಾನವನ್ನು ಧರ್ಮವಿರುದ್ಧವೆಂದು ಹೇಳುತ್ತಿದ್ದಾನೆ.

ಈಗ ಅಸಲು ವಿಷಯಕ್ಕೆ ಬರೋಣ. ಈ ಶ್ಲೋಕದಲ್ಲಿ ಮನುಷ್ಯ ನೊಂದರ ಹುಟ್ಟು, ಸಾವು ಎರಡು ತಿಳಿದಿಲ್ಲವೆಂದಿದ್ದಾನಲ್ಲವೆ! ಅದು ನಿಜವೇ ಎಂದು ಪ್ರಶ್ನೆಬಂದಿದೆ ಅಲ್ಲವೆ! ಅದಕ್ಕೆ ಉತ್ತರ ನೋಡೋಣ. ಒಂದು ಸಜೀವ ಶರೀರ ಪ್ರಪಂಚದಲ್ಲಿನ ಐದು ವಿಷಯ ಜ್ಞಾನಗಳನ್ನು, ಐದು ಇಂದ್ರಿಯಗಳಿಂದ ತಿಳಿದುಕೊಳ್ಳುತ್ತಿದೆ. ಪರಿಮಿತವಾದ ಜ್ಞಾನವನ್ನು ತಿಳಿದುಕೊಳ್ಳುವುದು ಪರಿಮಿತ ಅವಯವವೆಂದು ಗುರುತಿಸಿ ಅವುಗಳಿಗೆ ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ ಎಂದು ಹೆಸರು ಇಟ್ಟುಕೊಂಡಿದ್ದೇವೆ. ಇವುಗಳಿಂದ ದೃಶ್ಯ, ಶಬ್ದ, ವಾಸನೆ, ರುಚಿ, ಸ್ಪರ್ಶ ತಿಳಿಯುತ್ತಿವೆ. ಈ ಐದು ವಿಷಯಗಳು ಹೊರತು

ಇತರೆ ಏನು ಯಾರಿಗೂ ತಿಳಿದಿಲ್ಲ. ಒಬ್ಬ ಸಾಧಾರಣ ಅಮಾಯಕನಿಗಾದರು, ಶಾಸ್ತ್ರಜ್ಞನಾದ ವಿಜ್ಞಾನಿಗಾಗಲಿ ಐದು ಜ್ಞಾನಗಳೇ ತಿಳಿಯುತ್ತವೆ. ಐದು ಇಂದ್ರಿಯಗಳಿಗೆ ತಿಳಿಯದಿರುವುದು ಏನಾದರೂ ಇದ್ದರೆ ಅದು ಇಂದ್ರಿಯಾತೀತವಾದುದೆಂದು, ಇಂದ್ರಿಯಗಳಿಗೆ ಅಗೋಚರ ವಾದುದೆಂದು ಹೇಳಬಹುದು. ಉದಾಹರಣೆಗೆ ಎರಡು ಕಬ್ಬಿಣದ ತುಣುಕುಗಳನ್ನು (ಚೂರುಗಳನ್ನು) ತೆಗೆದುಕೊಂಡು ನೋಡಿದರೆ ಅವುಗಳ ಆಕಾರ, ಅವುಗಳ ಬಣ್ಣ ಎಲ್ಲಾ ಒಂದೇ ರೀತಿಯಲ್ಲಿವೆ. ಆ ಎರಡರಲ್ಲಿ ಒಂದು ಅಯಸ್ಕಾಂತ ಇದೆ. ಅದನ್ನು ನಾವು ಗುರುತಿಸಲಾರದೆ ಹೋಗಿದ್ದೇವೆ. ಅದರ ಅಯಸ್ಕಾಂತಶಕ್ತಿ ಕಣ್ಣಿಗಾಗಲಿ, ಕಿವಿಗಾಗಲಿ, ಸ್ಪರ್ಶಕ್ಕಾಗಲಿ, ರುಚಿಗಾಗಲಿ, ವಾಸನೆಗಾಗಲಿ ತಿಳಿಯದಂತಿದೆ. ಕಾಣಿಸದ ಅಯಸ್ಕಾಂತಶಕ್ತಿಯನ್ನು ಬೇರೆ ವಿಧಾನದ ಮೂಲಕ ತಿಳಿದುಕೊಳ್ಳಬಹುದು. ಆಗ ಅದು ಅಯಸ್ಕಾಂತವೆಂದು ತಿಳಿಯುತ್ತದೆ. ಆ ವಿಧಾನ ಇಲ್ಲದೆ ಇಂದ್ರಿಯಗಳಿಗೆ ಅಯಸ್ಕಾಂತಶಕ್ತಿ ತಿಳಿಯಲಿಲ್ಲ, ಆದ್ದರಿಂದ ಅದನ್ನು ಇಂದ್ರಿಯಾತೀತಶಕ್ತಿ ಎಂದು ಕರೆಯಬಹುದು. ಇಲ್ಲದಿದ್ದರೆ ಇಂದ್ರಿಯಾಗೋಚರಶಕ್ತಿ ಎನ್ನಬಹುದು. ಇಂತಹವು ಪ್ರಪಂಚದಲ್ಲಿ ಎಷ್ಟೋ ಇಂದ್ರಿಯಗಳಿಗೆ ತಿಳಿಯದಿರುವವು ಇವೆ. ಅವುಗಳನ್ನು ಪ್ರತ್ಯಕ್ಷವಾಗಿ ಅಲ್ಲದೇ ಪರೋಕ್ಷವಾಗಿ ತಿಳಿದುಕೊಳ್ಳಬಹುದು. ಪರೋಕ್ಷವಾಗಿ ತಿಳಿಯುವುದಕ್ಕೆ ಯಾವುದೋ ಒಂದು ವಿಧಾನ ಅಗತ್ಯ. ಆ ವಿಧಾನವನ್ನೇ ಪ್ರಯೋಗ ಎನ್ನುತ್ತಿದ್ದೇವೆ. ಆದರೆ ಎಲ್ಲವೂ ಪ್ರಯೋಗಗಳ ಮೂಲಕ ತಿಳಿಯುವುದಿಲ್ಲವೆಂದು ಮುಖ್ಯವಾಗಿ ಗುರುತಿಸಿಕೊಳ್ಳಬೇಕು. ಅಂತಹವುಗಳನ್ನು ಹೇಗೆ ತಿಳಿದುಕೊಳ್ಳಬೇಕೆಂದರೆ, ಕೇವಲ ಯೋಗಗಳಿಂದ ಮಾತ್ರವೇ ತಿಳಿಯಬಹುದು. ಐದು ಇಂದ್ರಿಯಗಳಿಗೆ ತಿಳಿಯದವುಗಳನ್ನು ಪ್ರಯೋಗಗಳ ಮೂಲಕವಾಗಲಿ, ಯೋಗಗಳ ಮೂಲಕವಾಗಲಿ ತಿಳಿಯಬಹುದು.

ಪ್ರಯೋಗಕ್ಕು, ಯೋಗಕ್ಕು ಏನು ವ್ಯತ್ಯಾಸ ಇದೆಯೆಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರ, **ಜ್ಞಾನೇಂದ್ರಿಯಗಳಿಗೆ ತಿಳಿಯದಿರುವುದನ್ನು ತಿಳಿದುಕೊಳ್ಳುವುದಕ್ಕೆ ಕರ್ಮೇಂದ್ರಿಯಗಳ ಸಹಾಯದಿಂದ ಮಾಡುವ ಕಾರ್ಯವನ್ನು ಪ್ರಯೋಗ ಎನ್ನುತ್ತಿದ್ದೇವೆ.** ಪ್ರಯೋಗದಲ್ಲಿ ಮನುಷ್ಯನಲ್ಲಿ ಜ್ಞಾನ ಕರ್ಮೇಂದ್ರಿಯಗಳು ಹತ್ತು ಕೆಲಸ ಮಾಡುತ್ತಿವೆ. ಕಾಣಿಸುವ ಇಂದ್ರಿಯಗಳಿಂದ ಕಾಣಿಸದಿರುವುದನ್ನು ತಿಳಿದುಕೊಳ್ಳುವುದಕ್ಕೆ ಮಾಡುವ ಕೆಲಸವನ್ನೇ ಪ್ರಯೋಗ ಎನ್ನುತ್ತಿದ್ದೇವೆ. ಪ್ರಯೋಗದಿಂದ ಕಾಣಿಸದ ಅಯಸ್ಕಾಂತಶಕ್ತಿಯನ್ನು, ಅದರ ಸಾಂದ್ರತೆಯನ್ನು, ಅದರ ಆವರಣ ಕ್ಷೇತ್ರವನ್ನು ತಿಳಿದುಕೊಳ್ಳಬಹುದು. ಪ್ರಯೋಗಕ್ಕೆ ತಕ್ಕ ಪರಿಕರಗಳು ಸಹ ಅಗತ್ಯ. ಉದಾಹರಣೆಗೆ ಐದು ಇಂದ್ರಿಯಗಳಿಗೆ ತಿಳಿಯದ ಸೂಕ್ಷ್ಮಕ್ರಿಮಿಗಳನ್ನು ಮೈಕ್ರೋಸ್ಕೋಪ್ ಮೂಲಕ ನೋಡುತ್ತಿದ್ದೇವೆ. ಇನ್ನು ಯೋಗದ

ವಿಷಯಕ್ಕೆ ಬಂದರೆ ಇಂದ್ರಿಯಗಳಿಗೆ ತಿಳಿಯದಿರುವುದನ್ನು ತಿಳಿದುಕೊಳ್ಳಬಹುದು. ಆದರೆ ಇಲ್ಲಿ ಯೋಗವನ್ನು ಶರೀರಕ್ಕಿರುವ ಕರ್ಮೇಂದ್ರಿಯ ಜ್ಞಾನೇಂದ್ರಿಯಗಳಿಂದ ಕೆಲಸವಿಲ್ಲದೆ ಮಾಡಬೇಕಾಗಿರುತ್ತದೆ. ಪ್ರಯೋಗದಲ್ಲಿ ಪ್ರಕೃತಿಗೆ ಸಂಬಂಧಿಸಿದ್ದು, ಇಂದ್ರಿಯಗಳಿಗೆ ಅತೀತವಾಗಿರುವ ಏನನ್ನಾದರು ತಿಳಿದುಕೊಳ್ಳಬಹುದು. ಪಂಚಭೂತಗಳಿಗೆ ಸಂಬಂಧವಿಲ್ಲದೆ ಇರುವುದನ್ನು ಪ್ರಯೋಗದ ಮೂಲಕ ತಿಳಿದುಕೊಳ್ಳುವುದಕ್ಕೆ ಸಾಧ್ಯವಿಲ್ಲ. **ಪಂಚಭೂತಗಳಿಗೆ ಸಂಬಂಧವಿಲ್ಲದೆ ಒಟ್ಟಾರೆ ಪ್ರಕೃತಿಗೆ ಅತೀತವಾದುದನ್ನು ಯೋಗದ ಮೂಲಕ ಮಾತ್ರವೇ ತಿಳಿದುಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ.** ಸರ್ವಜಗತ್ತಿನಲ್ಲಿ ಪಂಚಭೂತಗಳಿಗೆ ಅತೀತವಾದವು ಮೂರೆ ಇವೆ. 1)ಜೀವಾತ್ಮ 2)ಆತ್ಮ 3)ಪರಮಾತ್ಮ ಈ ಮೂರು ಎಂತಹ ಪ್ರಯೋಗಗಳಿಗೂ ಸಿಗುವವಲ್ಲ. ಇಲ್ಲಿಯವರೆಗೂ ಪ್ರಪಂಚದಲ್ಲಿ ಎಷ್ಟೋಜನ ಶಾಸ್ತ್ರಜ್ಞರು ಎಷ್ಟೋ ಪ್ರಯೋಗಗಳು ಮಾಡಿ ಕಂಡುಹಿಡಿದಿರುವವೆಲ್ಲ ಪ್ರಕೃತಿಗೆ ಸಂಬಂಧಿಸಿರುವವೆಂದು ತಿಳಿಯಬೇಕು. ಭೌತಿಕಶಾಸ್ತ್ರ ತಿಳಿದ ಡಾಕ್ಟರ್‌ಗೆ ಭೌತಿಕ ಶರೀರದ ಅಂತರ್‌ಭಾಗಗಳು, ಅವುಗಳ ರೋಗಗಳು, ಅವುಗಳ ನಿವಾರಣೆ ವಿಧಾನಗಳು ತಿಳಿದಿರುತ್ತಾರೆ. **ಹಾರ್ಟ್‌ನ್ನು(ಗುಂಡಿಗೆ) ತೆರೆದು ನೋಡಿದ ಡಾಕ್ಟರಾಗಲಿ, ಮೆದಳನ್ನು ಶಸ್ತ್ರಚಿಕಿತ್ಸೆಯಿಂದ ನೋಡಿದವರಾಗಲಿ, ಶರೀರದಲ್ಲಿನ ಜೀವಾತ್ಮವನ್ನಾಗಲಿ, ಶರೀರವೆಲ್ಲಾ ಇರುವ ಆತ್ಮವನ್ನಾಗಲಿ ನೋಡಲಿಲ್ಲ. ಏಕೆಂದರೆ ಇವರು ಮಾಡಿರುವುದು ಪ್ರಯೋಗವೇ ಆಗಲಿ ಯೋಗ ಅಲ್ಲ, ಆದ್ದರಿಂದ ಪ್ರಕೃತಿಗೆ ಅತೀತವಾದ ಆತ್ಮ ತಿಳಿಯಲಿಲ್ಲ.** ಕೊಯ್ದು ಒಳಗೆ ನೋಡಿದಾಗಲೇ ತಿಳಿಯದ ಆತ್ಮ, ಹುಟ್ಟಿದಾಗಾಗಲಿ, ಸತ್ತುಹೋದಾಗಾಗಲಿ ಮೇಲೆ ಮಾತ್ರವೇ ನೋಡುವವರಿಗೆ ಜೀವಾತ್ಮದ ಹುಟ್ಟಾಗಲಿ, ಸಾವಾಗಲಿ ಹೇಗೆ ತಿಳಿಯುತ್ತದೆ. ಬಹಳಜನ ಹೇತುವಾದಿಗಳು ಪ್ರಾಣವನ್ನು ಜೀವಾತ್ಮ ಎಂದುಕೊಂಡಿದ್ದಾರೆ. ಜೀವಾತ್ಮ ಬೇರೆ, ಪ್ರಾಣ ಬೇರೆ ಎಂದು ತಿಳಿಯದಿರುವುದು ಜೀವಿಯ ಪ್ರವೃತ್ತಿ ಎಂದರೆ ಹುಟ್ಟುವುದನ್ನು ಕುರಿತಾಗಲಿ, ನಿವೃತ್ತಿಯನ್ನು ಕುರಿತಾಗಲಿ ಹೇಗೆ ತಿಳಿಯುತ್ತಾರೆ. ಆದ್ದರಿಂದ ಈ ಶ್ಲೋಕದಲ್ಲಿ ಸಾವು, ಹುಟ್ಟುಗಳು ತಿಳಿಯದವರೆಂದು ಹೇಳುವುದು ನಡೆದಿದೆ.

ಶೌಚ(ಶುಚಿ) ಎಂದರೆ ಶುಭ್ರತೆ ಎಂದು ಅರ್ಥ ಇಲ್ಲಿ ಶುಭ್ರತೆ ನಿನಗಾ, ನಿನ್ನ ಶರೀರಕ್ಕಾ ಎಂದು ಯೋಚಿಸಬೇಕು. ಶರೀರ ಶುಭ್ರತೆ ಎಲ್ಲರೂ ಹೊಂದಿರುತ್ತಾರೆ. ಆದರೆ ಶರೀರದೊಳಗಿರುವವನು ಮಾತ್ರ ಶುಭ್ರವಾಗಿ ಇರುತ್ತಿಲ್ಲ. ಆದ್ದರಿಂದ ಕೆಟ್ಟಗುಣಗಳ ಮಲಿನ ಅಂಟಿಕೊಂಡವನನ್ನು ಶುಚಿತ್ವ ಇಲ್ಲದವನು ಎಂದಿದ್ದಾರೆ. ಹಾಗೆಯೇ ಶರೀರದೊಳಗಿನ ಸತ್ಯ ತಿಳಿಯದವನು, ಹೊರಗೆ ಸತ್ಯ ಎಂಬ ಹೆಸರಿನಿಂದ ಎಷ್ಟು ಬೋರ್ಡ್‌ಗಳು

ಇಟ್ಟುಕೊಂಡರು, ಅವನು ಸತ್ಯ ತಿಳಿಯದವನೆಂದೇ ಹೇಳಬೇಕು. ಹಾಗೆಯೇ ಶರೀರದಲ್ಲಿ ವಾಸಿಸುವವನು ಯಾರಾದರು ಒಳಗಿನ ತನ್ನ ಆಚಾರವೇನೆಂದು ತಿಳಿಯದೇ ಹೋದರೆ ಅವನು ಆಚಾರ ಇಲ್ಲದವನೆಂದು ಹೇಳಬೇಕು. ಜೀವಾತ್ಮ ಶರೀರದೊಳಗೆ ಬರುವುದು, ಹೋಗುವುದು ತಿಳಿಯದವನು, ಗುಣಗಳ ಮಲಿನ ಇರುವವನು, ಒಳಗಿನ ಸತ್ಯವನ್ನು, ಆಚಾರವನ್ನು ತಿಳಿಯದವನು, ಹೊರಗಿನ ಪ್ರಪಂಚದಲ್ಲಿ ದೇಶಕ್ಕೆ ರಾಜನಾದರೂ ಅವನು ಅಸುರನೇ ಎಂದು ಹೇಳಬೇಕು.

**(15) ಶ್ಲೋ॥ 8 : ಅಸತ್ಯ ಮಪ್ರತಿಷ್ಠಂ ತೇ ಜಗ ದಾಹು ರನೀಶ್ವರಮ್ ।**
**ಅಪರಸ್ಪರ ಸಂಭೂತಂ ಕಿಮನ್ಯತ್ಕಾ ಮಹೈತುಕಮ್ ॥**
**(ನಾಸ್ತಿಕವಾದ ಅಸುರಗುಣ)**

**ಭಾವಾರ್ಥ** : ದೇವರು ಎನ್ನುವವನು ಇಲ್ಲ ಎಂದೂ, ದೇವರಿಂದ ಜಗತ್ತು ಸೃಷ್ಟಿಸಲ್ಪಟ್ಟಿದೆ ಎನ್ನುವುದು ಅಸತ್ಯವೆಂದು, ಸ್ತ್ರೀ ಪುರುಷರ ಪರಸ್ಪರ ಸಂಬಂಧದಿಂದಲೇ ಜೀವರಾಶಿಗಳು ಹುಟ್ಟುತ್ತಿವೆಯೆಂದು, ಸ್ತ್ರೀ ಪುರುಷ ಸಂಬಂಧಕ್ಕೆ ಕಾಮ ಹೊರತು ಬೇರೆ ಏನಿದೆ ಎನ್ನುತ್ತಿದ್ದಾರೆ.

**ವಿವರ** : ಭೂಮಿ ಮೇಲೆ ನಾಲ್ಕು ವಿಧಗಳ ಮನುಷ್ಯರು ಇದ್ದಾರೆಂದು ಹೇಳಬಹುದು. ನಾಸ್ತಿಕರು–ದೇವರು ಇಲ್ಲ ಎನ್ನುವವರು. ಹೇತುವಾದಿಗಳು ದೇವರು ಇದ್ದರೆ ಹೇಗಿದ್ದಾನೆಂದು ಪ್ರಶ್ನಿಸುವವರು. ಆಸ್ತಿಕರು–ದೇವರಿದ್ದಾನೆಂದು ಹೇಳುತ್ತಾ, ದೇವರನ್ನು ಬಿಟ್ಟು ದೇವರು ಅಲ್ಲದವರನ್ನು ಆರಾಧಿಸುತ್ತಿದ್ದಾರೆ. ಆತ್ಮವಾದಿಗಳು–ಇವರು ಕೇವಲ ಆತ್ಮಗಳನ್ನು ಕುರಿತೆ ಮಾತನಾಡುತ್ತಾರೆ. ನಾಸ್ತಿಕರಿಗು ಆಸ್ತಿಕರಿಗು ಎಷ್ಟು ವಿರುದ್ಧವೋ ಹಾಗೆ ಹೇತುವಾದಿಗಳಿಗು ಆತ್ಮವಾದಿಗಳಿಗು ಅಷ್ಟೇ ವಿರುದ್ಧ ಭಾವಗಳಿರುತ್ತವೆ. ಹಿಂದಿನ ಏಳನೇ ಶ್ಲೋಕದಲ್ಲಿ ಆತ್ಮವಾದಿಗಳಿಗೆ ವಿರುದ್ಧವಾದಿಗಳಾದ ಹೇತುವಾದಿಗಳನ್ನು ಕುರಿತು ಹೇಳಿಕೊಂಡಿದ್ದೇವೆ. ಇಲ್ಲಿ ಈ ಶ್ಲೋಕದಲ್ಲಿ ನಾಸ್ತಿಕವಾದಿಗಳನ್ನು ಕುರಿತು ಹೇಳಿಕೊಳ್ಳಬೇಕಾಗಿದೆ.

ಭೂಮಿ ಮೇಲೆ ಹತ್ಯೆ ಮಾಡುವ ಹಂತಕನು, ಮಾನಭಂಗ ಮಾಡುವ ಹತ್ಯಾಚಾರನು ಅವರ ಮನೋಭಾವಗಳಲ್ಲಿ ಎಷ್ಟು ಹತ್ತಿರದವರೋ ಹಾಗೆಯೇ ನಾಸ್ತಿಕವಾದಿ, ಹೇತುವಾದಿ ಹತ್ತಿರ ಭಾವಗಳಿರುವವರು. ಒಬ್ಬನು ಹಾವು ಇಲ್ಲ ಎಂದರೆ, ಮತ್ತೊಬ್ಬನು ಇದ್ದರೆ ಹೇಳು ಇಲ್ಲದಂತೆ ಮಾಡುತ್ತೇನೆ ಎನ್ನುತ್ತಾನೆ. ಇನ್ನು ಆಸ್ತಿಕವಾದಿ, ಆತ್ಮವಾದಿಗಳ ವಿಷಯವನ್ನು ನೋಡಿದರೆ ಇವರೂ ಸಹ ಹತ್ತಿರ ಸಂಬಂಧ ಇರುವವರೇ. ಆಸ್ತಿಕವಾದಿ ಇಗೋ ಹಾವು

ಎಂದರೆ, ಆತ್ಮವಾದಿ ಅದು ವಿಷವಿರುವ ಹಾವೋ ಅಲ್ಲವೋ ನೋಡು ಎನ್ನುತ್ತಾನೆ. ಆಸ್ತಿಕನು ಹಾವು ಇದೆ ಎಂದರೆ, ನಾಸ್ತಿಕನು ಅಸಲಿಗೆ ಹಾವೇ ಇಲ್ಲವೆನ್ನುತ್ತಾನೆ. ವಿಷ ಇರುವುದನ್ನೇ ನಿಜವಾದ ಹಾವು ಎನ್ನಬೇಕು ಎಂದು ಆತ್ಮವಾದಿ ಎಂದರೆ, ಯಾವ ಹಾವು ಇದ್ದರು ಅದನ್ನು ಇಲ್ಲದಂತೆ ಮಾಡುತ್ತೇನೆನ್ನುತ್ತಾನೆ ಹೇತುವಾದಿ. ಈ ವಿಧವಾಗಿ ವಿಭಿನ್ನ ಭಾವಗಳಿರುವವರಾಗಿ ನಾಸ್ತಿಕ, ಆಸ್ತಿಕ, ಹೇತುವಾದ, ಆತ್ಮವಾದಿಗಳಿದ್ದಾರೆ. ನಾಸ್ತಿಕನು ಆಸ್ತಿಕನನ್ನು ಮೂಢನಂಬಿಕೆ ಇರುವವನೆಂದು ಮೂಢನೆಂದು ಎನ್ನುತ್ತಾನೆ. ಆಸ್ತಿಕನು ನಾಸ್ತಿಕನನ್ನು ಮೂರ್ಖಭಾವ ಇರುವವನೆಂದು ಮೂರ್ಖ ಎನ್ನುತ್ತಾನೆ. ಹಾಗೆಯೇ ಹೇತುವಾದಿ ಆತ್ಮವಾದಿಯನ್ನು ಭಾವವಾದಿ ಎನ್ನುತ್ತಾನೆ. ಆತ್ಮವಾದಿ ಹೇತುವಾದಿಯನ್ನು ಮೊಂಡುವಾದಿ ಎನ್ನುತ್ತಾನೆ. ಭಗದ್ಗೀತೆಯಲ್ಲಿ ಶ್ರೀ ಕೃಷ್ಣನು ನಾಲ್ಕು ವಿಧದವರನ್ನು ಕುರಿತು ಹೇಳಿದ್ದಾನೆ. ಗೀತೆಯಲ್ಲಿ ಹೆಚ್ಚಾಗಿ ಆತ್ಮವಾದಿಗಳನ್ನು ಕುರಿತು ಹೇಳಿ, ಅದಕ್ಕಿಂತ ಕಡಿಮೆಯಾಗಿ ಆಸ್ತಿಕತ್ವವನ್ನು ಹೇಳಿದ್ದಾನೆ. ಬಹಳಕಡಿಮೆಯಾಗಿ ಹೇತುವಾದವನ್ನು, ನಾಸ್ತಿಕವಾದವನ್ನು ಕುರಿತು ಹೇಳಿದ್ದಾನೆ. ಇಲ್ಲಿ ನಾಸ್ತಿಕವಾದವನ್ನು ಕುರಿತು ಹೇಳುತ್ತಾ, ನಾಸ್ತಿಕರು ದೇವರು ಇಲ್ಲವೆಂದು ವಿಶ್ವವನ್ನು ಸೃಷ್ಟಿಸಿದ್ದಾನೆನ್ನುವುದು ಪೂರ್ತಿ ಅಸತ್ಯವೆಂದು ಹೇಳುತ್ತಾರೆಂದಿದ್ದಾನೆ.

ನಮಗೆ ತಿಳಿದಿರುವ ವಿಧಾನವನ್ನು ಹೇಳಿಕೊಂಡರೆ, ಒಂದು ಊರಿನಲ್ಲಿ ರಂಗಯ್ಯ, ಮಲ್ಲಯ್ಯ ಎಂಬ ಇಬ್ಬರು ಗಂಡುಮಕ್ಕಳಿಗೆ ಅವರ ಹಿರಿಯರು ಏಳು ವರ್ಷಗಳ ಚಿಕ್ಕ ವಯಸ್ಸಿನಲ್ಲಿಯೇ ಮದುವೆ ಮಾಡಿದ್ದಾರೆ. ಯುಕ್ತ ವಯಸ್ಸು ಬಂದ ನಂತರ ಸಂಸಾರಕ್ಕೆ ಕಳುಹಿಸಬಹುದೆಂದು ಹೆಣ್ಣು ಮಕ್ಕಳನ್ನು ತವರುಮನೆಯವರು ಅವರ ಮನೆಯಲ್ಲಿಯೇ ಇಟ್ಟುಕೊಂಡಿದ್ದಾರೆ. ಯುಕ್ತವಯಸ್ಸು ಬರುವವರೆಗೂ ಒಬ್ಬರಿಗೊಬ್ಬರು ನೋಡಿಕೊಂಡಿಲ್ಲ. ಗಂಡುಮಕ್ಕಳಿಗೆ 22 ವರ್ಷಗಳ ವಯಸ್ಸು ಬಂದ ನಂತರ ಹೆಣ್ಣು ಮಕ್ಕಳನ್ನು ಸಂಸಾರಕ್ಕೆ ಕಳುಹಿಸಬೇಕೆಂದುಕೊಂಡಿದ್ದಾರೆ. ಗಂಡುಮಕ್ಕಳಿಗೆ ಯುಕ್ತವಯಸ್ಸು ಬಂದಿದೆ. ಆಗಲೇ ಅವರಿಬ್ಬರಿಗೆ ಒಂದು ರೋಗವೂ ಬಂದಿದೆ ಆ ಮಾಯದಾರಿ ಕಾಯಿಲೆಯಿಂದ ರಂಗಯ್ಯನಿಗೆ ಪೂರ್ತಿ ಜ್ಞಾಪಕಶಕ್ತಿಹೋಗಿದೆ. ಮಲ್ಲಯ್ಯನಿಗೆ ಪೂರ್ತಿ ಜ್ಞಾಪಕಹೋಗದೆ ಸ್ವಲ್ಪ ಮಾತ್ರ ಉಳಿದಿದೆ, ಆದರೂ ದೃಷ್ಟಿ ಸ್ವಲ್ಪ ಹೋಗಿದೆ. ಆ ದೃಷ್ಟಿ ಇದ್ದರು ಎದುರಿಗಿರುವುದು ಇದ್ದಂತೆ ಕಾಣಿಸುವುದಿಲ್ಲ. ಮತ್ತೊಂದು ವಿಧವಾಗಿ ಕಾಣಿಸುತ್ತದೆ. ಹೇಗಾದರೇನು ಚಿಕ್ಕಂದಿನಲ್ಲಿಯೇ ಮದುವೆಯಾಗಿದೆ ಆದ್ದರಿಂದ ಹೆಣ್ಣುಮಕ್ಕಳನ್ನು ಗಂಡನ ಮನೆಗೆ ಕಳುಹಿಸಬೇಕೆಂದು ಅವರ ಹಿರಿಯರು ಅಂದುಕೊಂಡರು. ಒಂದು ಒಳ್ಳೆಯ ದಿನ ನೋಡಿಕೊಂಡು, ಹೆಣ್ಣುಮಕ್ಕಳನ್ನು ಗಂಡನ ಮನೆಗೆ ಕರೆದುಕೊಂಡು ಬಂದಿದ್ದಾರೆ. ಮೊದಲು

ರಂಗಯ್ಯ ಹತ್ತಿರಕ್ಕೆ ಹೋಗಿ, ಏನಯ್ಯಾ ನಿನ್ನ ಹೆಂಡತಿಯನ್ನು ಕರೆದುಕೊಂಡು ಬಂದಿದ್ದೇವೆ ಅಂದರಂತೆ. ರಂಗಯ್ಯನಿಗೆ ಪೂರ್ತಿ ಜ್ಞಾಪಕ ಹೋಗಿದೆ. ಆದ್ದರಿಂದ ನನಗೆ ಮದುವೆಯೇ ಆಗಿಲ್ಲ, ನನಗೆ ಹೆಂಡತಿ ಇಲ್ಲ ಎಂದನಂತೆ. ಎಷ್ಟು ಹೇಳಿದರು ರಂಗಯ್ಯ ಕೇಳುವಂತಿಲ್ಲ. ಅಸಲಿಗೆ ನನಗೆ ಹೆಂಡತಿಯೇ ಇಲ್ಲ, ನನಗೆ ಮದುವೆಯೇ ಆಗಿಲ್ಲ, ನೀವು ಎಷ್ಟು ಹೇಳಿದರು ಕೇಳುವುದಿಲ್ಲ, ನನ್ನನ್ನು ಒಪ್ಪಿಸಲಾರರು ಎಂದನು. ರಂಗಯ್ಯನಿಗೆ ಸ್ವಲ್ಪವಾದರು ಜ್ಞಾಪಕವಿದ್ದರೆ ಹೇಗೋ ಒಂದು ರೀತಿಯಲ್ಲಿ ಹೇಳುತ್ತಿದ್ದರು. ಯಾವ ಮಾತ್ರ ಜ್ಞಾಪಕವಿಲ್ಲದೆ ನನಗೆ ಹೆಂಡತಿಯೇ ಇಲ್ಲವೆಂಬುವವನನ್ನು ಏನೂ ಅನ್ನಲಾರದೆ ಹಿಂದಿರುಗಿ ಹೋಗಿದ್ದಾರೆ. ಇನ್ನು ಮಲ್ಲಯ್ಯ ಹತ್ತಿರಕ್ಕೆ ಹೋಗಿದ್ದಾರೆ. ನಿನ್ನ ಹೆಂಡತಿಯನ್ನು ಕರೆದುಕೊಂಡು ಬಂದಿದ್ದೇವೆ ಎಂದು ಹೇಳಿದರು. ಮಲ್ಲಯ್ಯನಿಗೆ ಪೂರ್ತಿ ಜ್ಞಾಪಕ ಹೋಗಿಲ್ಲ, ಆದ್ದರಿಂದ ನನ್ನ ಹೆಂಡತಿಯನ್ನು ತೋರಿಸೆಂದನು. ಹಾಗೆಯೇ ಅವರ ಹಿರಿಯರು ಆತನ ಹೆಂಡತಿಯನ್ನು ತೋರಿಸಿದರು, ಹೆಂಡತಿಯನ್ನು ನೋಡಿದ ಮಲ್ಲಯ್ಯನ ದೃಷ್ಟಿ ಸರಿಯಾಗಿಲ್ಲದ ಕಾರಣ ಆತನ ಹೆಂಡತಿ ಒಂದು ಕತ್ತೆಯಂತೆ ಕಾಣಿಸಿದೆ. ಆತನಿಗೆ ಇರುವುದು ಇದ್ದಂತೆ ಕಾಣಿಸುವುದಿಲ್ಲವಲ್ಲವೆ! ಆಗ ಮಲ್ಲಯ್ಯ ನನ್ನ ಹೆಂಡತಿಯನ್ನು ತೋರಿಸುತ್ತೇವೆಂದು ಕತ್ತೆಯನ್ನು ತೋರಿಸುತ್ತೀರಾ ಅಂದನಂತೆ. ಆ ಮಾತಿಗೆ ಆಶ್ಚರ್ಯವಾದ ಹಿರಿಯರು ಆತನನ್ನು ಒಪ್ಪಿಸುವುದಕ್ಕೆ ಒಳ್ಳೆಯ ಒಡವೆಗಳನ್ನು ಹಾಕಿ, ಒಳ್ಳೆಯ ಬಟ್ಟೆಗಳನ್ನು ಹಾಕಿ ಕರೆದುಕೊಂಡುಬಂದು ತೋರಿಸಿದರಂತೆ. ಆಗ ಆತನಿಗೆ ಕರಡಿಯಂತೆ ಕಾಣಿಸಿದಳಂತೆ. ನನಗೆ ಕರಡಿಯನ್ನು ತೋರಿಸುತ್ತಿದ್ದಾರೆ ಎಂದು ಮಲ್ಲಯ್ಯ ಎಂದರೆ, ಅವರ ಹಿರಿಯರಿಗೆ ಏನೆಂದು ಹೇಳಬೇಕೋ ಅರ್ಥವಾಗದೆ, ಯಾವ ವಸ್ತ್ರಗಳಲ್ಲಿ ತೋರಿಸಿದರೆ ಚೆನ್ನಾಗಿರುತ್ತದೆಂದು ಆಲೋಚಿಸಿ ಪಂಜಾಬಿ ಡ್ರೆಸ್‌ನಲ್ಲಿ ತೋರಿಸಿದರಂತೆ. ಈ ಬಾರಿ ಮಲ್ಲಯ್ಯ ಗಮನವಿಟ್ಟು ನೋಡಿ ಕುದುರೆಯನ್ನು ತಂದಿದ್ದೀರಾ ಎಂದನು. ಆತನ ಹೆಂಡತಿಯನ್ನು ಹೆಂಡತಿಯಾಗಿ ಒಪ್ಪಿಸುವುದಕ್ಕೆ ನಾನಾ ಅವಸ್ಥೆಗಳು ಬಿದ್ದು, ಕೊನೆಗೆ ಒಂದು ಆಲೋಚನೆ ಪ್ರಕಾರ ಮಲ್ಲಯ್ಯನನ್ನು ಹೆಂಡತಿ ಹತ್ತಿರಕ್ಕೆ ಕರೆದುಕೊಂಡುಬಂದು ಕೈಯಿಂದ ತಾಕಿಸಿ ತೋರಿಸಿದರಂತೆ. ಇಷ್ಟು ಕೆಲಸಗಳು ಮಾಡಿದ ನಂತರ ಮಲ್ಲಯ್ಯನಿಗೆ ಆಕೆ ತನ್ನ ಹೆಂಡತಿಯೆಂದು ಅರ್ಥವಾಗಿದೆ. ಆದರೂ ಇಲ್ಲಿಯವರೆಗೂ ಕತ್ತೆ ಕುದುರೆ ಎಂದು ಈಗ ಒಪ್ಪಿಕೊಂಡರೆ ಚೆನ್ನಾಗಿರುವುದಿಲ್ಲ ಎಂದುಕೊಂಡನು. ಈ ಬಾರಿ ಈಕೆ ನನ್ನ ಹೆಂಡತಿಯೇ ಅಲ್ಲ ಎಂದನು. ತನಗೆ ಸರಿಯಾಗಿ ಕಾಣಿಸುವುದಿಲ್ಲ, ಆದ್ದರಿಂದ ಎಲ್ಲಿ ಮೋಸ ಮಾಡುತ್ತಾರೋ ಅಂದುಕೊಂಡು ಯಾವಾಗ

ತೋರಿಸಿದರು, ಹೇಗೆ ತೋರಿಸಿದರು ಆಕೆ ತನ್ನ ಹೆಂಡತಿ ಅಲ್ಲವೆನ್ನುವುದೇ ಕೆಲಸವಾಗಿಟ್ಟುಕೊಂಡಿದ್ದಾನೆ. ಈ ವಿಧವಾಗಿ ಜ್ಞಾಪಕವಿಲ್ಲದ ರಂಗಯ್ಯ ಹೆಂಡತಿ ಇಲ್ಲ ಎಂದರೆ, ಸ್ವಲ್ಪ ದೃಷ್ಟಿ ಇರುವ ಮಲ್ಲಯ್ಯನಿಗೆ ಹೆಂಡತಿಯನ್ನು ತೋರಿಸಿದರು ಅರ್ಥವಾಗದಿರುವಾಗ ಒಪ್ಪಿಕೊಳ್ಳದ ಆತನು ಅರ್ಥವಾದರೂ ಅಲ್ಲವೆನ್ನುವುದಕ್ಕೆ ಅಭ್ಯಾಸವಾಗಿದ್ದಾನೆ. ಹೀಗೆ ರಂಗಯ್ಯ ನಂತಹ ನಾಸ್ತಿಕರು ಅಸಲಿಗೆ ದೇವರೇ ಇಲ್ಲವೆಂದರೆ, ಮಲ್ಲಯ್ಯ ನಂತಹ ಹೇತುವಾದಿ ಅರ್ಥವಾದರು ಒಪ್ಪಿಕೊಳ್ಳುವುದಿಲ್ಲ.

ಏನು ಹೇಳಿದರು ಅಲ್ಲವೆನ್ನುವ ಹೇತುವಾದಿಗಳಿಗಿಂತ ಮೊದಲೇ ಅಸಲಿಗೆ ದೇವರು ಇಲ್ಲ ಎನ್ನುವ ನಾಸ್ತಿಕನೇ ವಾಸಿ ಎಂದುಕೊಳ್ಳುತ್ತೇವೆ. ಹೇಗೆ ಹೇಳಿದರು ಕಣ್ಣಿಲ್ಲದ ಕುರುಡನೊಬ್ಬನಾದರೆ, ಕಣ್ಣಿದ್ದು ಕುರುಡನು ಮತ್ತೊಬ್ಬನು ಎನ್ನುವಂತೆ ನಾಸ್ತಿಕರು, ಹೇತುವಾದಿಗಳು ಇಬ್ಬರು ದೇವರಿಲ್ಲವೆಂದು ವಾಧಿಸುವವರೇ. ಒಂದು ಕಾರ್ಯ ನಡೆಯಬೇಕೆಂದರೆ ಒಬ್ಬ ಕರ್ತನು ಬೇಕು ಎಂಬ ಸೂತ್ರದ ಪ್ರಕಾರ, ಇಷ್ಟು ದೊಡ್ಡ ವಿಶ್ವವು ಸೃಷ್ಟಿಸಲಾಗಿದೆ ಎಂದರೆ ಅದರ ಹಿಂದೆ ಒಬ್ಬ ಸೃಷ್ಟಿಕರ್ತ ಇರಲೇಬೇಕು. ಕಾರ್ಯವನ್ನು ಕರ್ತನನ್ನು ತಿಳಿದುಕೊಂಡು ಪ್ರಪಂಚ ಸೃಷ್ಟಿಗೂ ಸಹ ಒಬ್ಬ ಕರ್ತ ಇದ್ದಾನೆಂದು ಬಹಳ ಜನ ಒಪ್ಪಿಕೊಳ್ಳುತ್ತಿರುವಾಗ ನಾವು ಸೈನ್ಸು ಓದಿದ್ದೇವೆ, ನಮಗೆ ಆಧಾರ ಕಾಣಿಸಲಿಲ್ಲ, ನಾವು ನೋಡದೇ ವಿಶ್ವಾಸಿಸುವುದಿಲ್ಲ, ನಾವು ಶಾಸ್ತ್ರಜ್ಞರು ಎಂದು ನಾಲ್ಕಾಣೆ ಭಾಗ ತಿಳಿದ ಶಾಸ್ತ್ರಜ್ಞರು ಎನ್ನುತ್ತಿರುವಾಗ ದೊಡ್ಡ ಶಾಸ್ತ್ರಜ್ಞರು ವಿಶ್ವವನ್ನು ನಡೆಸುವ ಶಕ್ತಿ ಒಂದಿದೆ, ಅದೇ ದೇವರು ಎಂದು ಕರೆಯುತ್ತಿದ್ದಾರೆ. ಅಬ್ದುಲ್‌ಕಲಾಮ್ ದೊಡ್ಡ ಶಾಸ್ತ್ರಜ್ಞನಾದರು ಆತನಿಗೆ ದೇವರ ಮೇಲೆ ಒಳ್ಳೆಯ ಅಭಿಪ್ರಾಯ ಇದೆ, ಉಳಿದವರಿಗೆ ಏಕೆ ಇಲ್ಲವೋ? ಯಾರು ಯಾವ ಅಭಿಪ್ರಾಯದಲ್ಲಿ ಇದ್ದರು ನಾವು ತಿಳಿದುಕೊಳ್ಳಬೇಕಾಗಿರುವುದು, ತಿಳಿಯದಿರುವುದು ಒಂದಿದೆ. ಅದನ್ನು ತಿಳಿದುಕೊಳ್ಳುವುದಕ್ಕೆ ಒಂದು ವಿಧಾನವೂ ಸಹ ಇದೆ. ಭೌತಿಕ ಶರೀರದಲ್ಲಿ ಅಭೌತಿಕವಾಗಿರುವುದನ್ನು ತಿಳಿದುಕೊಳ್ಳವುದಕ್ಕೆ ಪರಿಕರಗಳು, ಪ್ರಯೋಗಗಳು ಕೆಲಸಕ್ಕೆ ಬರುವುದಿಲ್ಲ. ಭೌತಿಕ ಶರೀರದಲ್ಲಿ ಅಭೌತಿಕವಾಗಿರುವುದನ್ನು ಅಭೌತಿಕ ವಿಧಾನವಾದ ಜ್ಞಾನದಿಂದಲೇ ತಿಳಿದುಕೊಳ್ಳಬೇಕು. ಹಾಗಲ್ಲದೆ ಎಷ್ಟುದಿನ ವಾದಿಸಿದರು ಜನ್ಮವೃಥಾ ಆಗುತ್ತದೆ ಹೊರತು ಸಾಧಿಸಿರುವುದೇನು ಇರುವುದಿಲ್ಲ.

**(15) ಶ್ಲೋ॥ 9 : ಏತಾಂ ದೃಷ್ಟಿ ಮವಷ್ಟಭ್ಯ ನಷ್ಟಾತ್ಮಾನೋಽಲ್ಪ ಬುದ್ಧಯಃ ।**
**ಪ್ರಭವ ನ್ತ್ಯುಗ್ರ ಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥**
**(ಹೇತುವಾದ, ನಾಸ್ತಿಕ, ಅಸುರಗುಣ)**

**ಭಾವಾರ್ಥ** : ಈ ವಿಧವಾದ ಭಾವ ಇರುವ ಅಲ್ಪಬುದ್ಧಿ ಇರುವವರಾಗಿ, ನಷ್ಟಾತ್ಮರಾಗಿ, ಕ್ಷಯವನ್ನು ಹೊಂದುತ್ತಾ, ಇತರರಿಗೆ ಅಹಿತರಾಗುತ್ತಾ, ಭಯಂಕರವಾದ ಕರ್ಮವನ್ನು ಸಂಪಾದಿಸಿಕೊಂಡವರಾಗಿ ಪುನಃ ಹುಟ್ಟುತ್ತಿದ್ದಾರೆ.

**ವಿವರ** : ಈ ಶ್ಲೋಕದಲ್ಲಿ ವಿಶೇಷವಾದ ಪದ **ಉಗ್ರಕರ್ಮಾಣಃ** ಎನ್ನುವುದು. ನಾಸ್ತಿಕರಿಗೆ, ಹೇತುವಾದಿಗಳಿಗೆ ಕರ್ಮಸಿದ್ಧಾಂತ ಎಂದರೆ ಅಸಲು ಗಿಟ್ಟುವುದಿಲ್ಲ. ಕರ್ಮಸಿದ್ಧಾಂತದ ರಹಸ್ಯ ಅವರಿಗೆ ತಿಳಿಯದು. ಈ ಶ್ಲೋಕದಲ್ಲಿ ಹೇಳಿಕೊಳ್ಳಬೇಕಾದ ಪದ ಇನ್ನೊಂದು ಇದೆ. **ನಷ್ಟಾತ್ಮನಃ** ಎನ್ನುವ ಈ ಪದವನ್ನು ಕುರಿತು ಸ್ವಲ್ಪ ಯೋಚಿಸಬೇಕಾಗಿದೆ. ಆತ್ಮ ಅಂದರೇನೆ ಅಸತ್ಯ ಎನ್ನುವವರ ಬಗ್ಗೆ ನಷ್ಟಾತ್ಮ ಎಂಬ ಪದ ಉಪಯೋಗಿಸಲಾಗಿದೆ. ಒಂದು ರಾಜ್ಯದಲ್ಲಿ ಇರುವವರೆಲ್ಲರಿಗೂ ಆ ರಾಜ್ಯಾಂಗದ ಕಾನೂನು ಜಾರಿಗೆ ತರಲಾಗುತ್ತದೆ. ಆ ರಾಜ್ಯದಲ್ಲಿರುವ ಉಗ್ರವಾದಿಗಳು, ತೀವ್ರವಾದಿಗಳು ಕಾನೂನನ್ನು ವಿರೋಧಿಸಿದರು, ಕಾನೂನನ್ನು ಒಪ್ಪಿಕೊಳ್ಳದಿದ್ದರು ಅಲ್ಲಿರುವ ಕಾನೂನನ್ನೇ ಅವರ ಬಗ್ಗೆ ಜಾರಿಗೆಗೊಳಿಸಲಾಗುತ್ತದೆ. ಕಾನೂನನ್ನು ಒಪ್ಪಿಕೊಳ್ಳದ ಮಾತ್ರಕ್ಕೆ ಆ ಕಾನೂನಿಗೆ ಅತೀತರಲ್ಲ. ಅದರಿಂದಲೇ ಶಿಕ್ಷಿಸಲ್ಪಡುತ್ತಾರೆ. ಆ ವಿಧವಾಗಿಯೇ ದೇವರ ರಾಜ್ಯವೆಂಬ ಶರೀರದಲ್ಲಿ ಇದ್ದರೂ ಸಹ ದೇವರ ಧರ್ಮಗಳನ್ನು ಒಪ್ಪಿಕೊಳ್ಳದ ಮಾತ್ರಕ್ಕೆ ಧರ್ಮಕ್ಕೆ ಅವರು ಅತೀತರು ಅಲ್ಲ. ದೇವರ ಕಾನೂನಿನ ಪ್ರಕಾರ ಶರೀರದಲ್ಲಿಯೇ ತಕ್ಕ ಶಿಕ್ಷೆ ಅನುಭವಿಸಬೇಕಾಗಿ ಬರುತ್ತದೆ. ಯಾರ ಶರೀರ ರಾಜ್ಯದಲ್ಲಿ ಅವನೊಂದರ ಕರ್ಮ ಲೆಕ್ಕಿಸಲಾಗುತ್ತದೆ. ಅಲ್ಲಿ ಬರೆಯಲಾದ ಧರ್ಮ ವಿರುದ್ಧತೆಗೆ ತಕ್ಕಂತೆ ಶಿಕ್ಷೆ ಶರೀರದಲ್ಲಿಯೇ ಜಾರಿಗೆ ಮಾಡಲಾಗುತ್ತದೆ. ಹೊರಗಿನ ಕೋರ್ಟುಗಳಲ್ಲಿ ನ್ಯಾಯವಾದಿಗಳಿರುವಂತೆ ಅಲ್ಲಿ ನಿನ್ನ ಪರವಾಗಿ ವಾದಿಸುವವರು ಯಾರೂ ಇರುವುದಿಲ್ಲ. ಅಲ್ಲಿ ವಾದನೆಗಳು, ಸಾಕ್ಷಿಗಳು ಇರುವುದಿಲ್ಲ. ತಪ್ಪು ಮಾಡಿದ ದಿನವೇ ಶಿಕ್ಷೆಯನ್ನು ಬರೆದಿಡಲಾಗುತ್ತದೆ. ಮಾಡಿದ ತಪ್ಪಿನ ಜೊತೆಗೆ ಅದಕ್ಕೆ ತಕ್ಕಂತೆ ಶಿಕ್ಷೆಯೂ ಸಹ ನಿರ್ಣಯಿಸಿ ಬರೆಯಲಾಗಿರುತ್ತದೆ.

ತಪ್ಪಿಗೆ ಶಿಕ್ಷೆ ಸಹಜವೇ ಆದರೂ ಇಲ್ಲಿ ಅಸುರರಾದ ಹೇತುವಾದಿಗಳು, ನಾಸ್ತಿಕವಾದಿಗಳು ಉಗ್ರಕರ್ಮವನ್ನು ಸಂಪಾದಿಸಿಕೊಳ್ಳುವುದರಿಂದ ನಷ್ಟಾತ್ಮರಾಗುತ್ತಿದ್ದಾರೆ.

ಮಾನಸಿಕ ದುಃಖಗಳು, ಜವಾಬ್ದಾರಿಯುತ ನೋವುಗಳು, ಒದೆಗಳ ನೋವುಗಳು ಮೊದಲಾದ ನೋವುಗಳನ್ನು ಎಷ್ಟು ಅನುಭವಿಸಿದರು ಅವು ಉಗ್ರಕರ್ಮಗಳು ಅಲ್ಲ. ಶರೀರದಲ್ಲಿ ಆತ್ಮಶಕ್ತಿ ಸಿಗದೆ ಕೆಲವು ಅವಯವಗಳು ಕೆಲಸ ಮಾಡದೆಹೋಗುವುದು ಭಯಂಕರ ಕರ್ಮ ಆಗುತ್ತದೆ. ಶರೀರಕ್ಕೆ ಶಕ್ತಿಕೊಡುವುದು ಆತ್ಮ. ಆತ್ಮವನ್ನು ನಷ್ಟಹೋಗುವುದು ಎಂದರೆ ಶರೀರದಲ್ಲಿ ಶಕ್ತಿಯನ್ನು ನಷ್ಟಹೋಗುವುದೆಂದು ಅರ್ಥಮಾಡಿಕೊಳ್ಳಬೇಕು. ಆತ್ಮಶಕ್ತಿ ನಷ್ಟಹೋದವನಿಗೆ ಶರೀರದಲ್ಲಿ ಶಕ್ತಿ ಸಿಗದೆ, ಶರೀರ ಅನುಕೂಲಿಸದೆ ಹೋಗುವುದು ಎಲ್ಲದಕ್ಕಿಂತ ದೊಡ್ಡ ನರಕವಾಗುತ್ತದೆ. ಪೂರ್ತಿ ಪರಿಶೋಧಿಸದೇ, ಪೂರ್ತಿ ಅವಗಾಹನೆ ಯಾಗದ ಮೊದಲೆ, ತಾನು ಸ್ವತಃವಾಗಿ ಅನುಭವಿಸುವ ಆತ್ಮವನ್ನೇ ಇಲ್ಲ ಎನ್ನುವುದು ಮಹಾಪಾಪವಾಗುತ್ತದೆ. ಆದ್ದರಿಂದ ಶ್ಲೋಕದಲ್ಲಿ ಉಗ್ರಕರ್ಮ ಎಂಬ ಪದವನ್ನು ಬಳಸಿದ್ದಾರೆ. ಅವಯವಗಳಿಗೆ ಶಕ್ತಿ ಸೇರಿಸದೆಹೋದರೆ ಅದಕ್ಕೆ ಮೀರಿದ ಶಿಕ್ಷೆ ಇರುವುದಿಲ್ಲ. ಊಹಿಸಿಕೊಂಡರೆ ಭಯಂಕರವಾಗಿರುತ್ತದೆ. ಜೀವನವೇ ನರಕಯಾತನೆಯಾಗಿ ಹೇಗಾದರು ಅನುಭವಿಸಬೇಕಾಗಿಬರುತ್ತದೆ. ಅಷ್ಟೇ ಅಲ್ಲದೆ ತನ್ನ ಸುತ್ತಾ ಇರುವವರಿಗೆ ಹಿತವಿಲ್ಲದವ ರಾಗಿರುವುದರಿಂದ ಅವರಿಗೆ ಒಂದು ಜಂತುವಿನಂತೆ ಕಾಣಿಸುತ್ತದೆ. ಶರೀರ ಕ್ಷಯವನ್ನು ಉಂಟುಮಾಡುವ ಒಂದೊಂದು ಅವಯವವು ಶರೀರದಿಂದ ಬೇರೆಯಾಗಿ ಹೋಗುತ್ತದೆ. ಉಗ್ರವಾದಿಗಳನ್ನು ಸರ್ಕಾರ ದೇಶ ದ್ರೋಹಿಗಳಾಗಿ ಗ್ರಹಿಸಿ ಅವರಿಗೆ ಕಠಿಣಶಿಕ್ಷೆ ಜಾರಿ ಮಾಡಿದಂತೆ, ಹೇತುವಾದಿಗಳನ್ನು, ನಾಸ್ತಿಕವಾದಿಗಳನ್ನು ಆತ್ಮದ್ರೋಹಿಗಳಾಗಿ ಒಳಗಿನ ಆತ್ಮ ಗುರುತಿಸಿ ಶರೀರದಲ್ಲಿಯೇ ಶಿಕ್ಷೆಯನ್ನು ಜಾರಿ ಮಾಡುತ್ತದೆ. ಈಗ ಇಷ್ಟಬಂದಂತೆ ಮಾತನಾಡುವುದು ಏಕೆ? ನಂತರ ಜನ್ಮಗಳಲ್ಲಿ ಆತ್ಮನಿಂದ ಏಕೆ ನಷ್ಟಹೋಗಬೇಕು? ಹೊರಗಿನ ಸಮಾಜವನ್ನು ಉದ್ಧರಿಸುತ್ತೇನೆಂದು ನಿನ್ನ ಶರೀರದೊಳಗಿರುವ ಸಮಾಜಕ್ಕೆ ಕೆಟ್ಟವನಾಗಬೇಡ. ಮೊದಲು ಒಳಗಿನ ಸಮಾಜವನ್ನು ತಿಳಿದುಕೊಂಡು ನಂತರ ಹೊರಗಿನ ಸಮಾಜದ ಮೇಲೆ ದೃಷ್ಟಿ ಇಡು, ಅದೇ ಸರಿಯಾದ ಪದ್ಧತಿ.

**15) ಶ್ಲೋ॥ 10 : ಕಾಮ ಮಾಶ್ರಿತ್ಯ ದುಷ್ಪೂರಂ ದಮ್ಭಮಾನಮದಾನ್ವಿತಾಃ ।**
**ಮೋಹಾದ್ ಗೃಹೀತ್ವಾಽಸದ್ ಗ್ರಾಹಾನ್ ಪ್ರವರ್ತನ್ತೇಽಶುಚಿವ್ರತಾಃ**
**(ಅಸುರ ಗುಣ)**

**ಭಾವಾರ್ಥ** : ಜಂಭ, ಮಾನ, ಮಧ, ಗರ್ವಯುತರಾದ ರಾಕ್ಷಸರು ಈಡೇರದ ಕೋರಿಕೆಗಳು ಇರುವವರಾಗಿ, ಮೋಹದಿಂದ ತಮ್ಮ ತಪ್ಪುಗಳು ಗ್ರಹಿಸದವರಾಗಿ, ಶಾಸ್ತ್ರೀಯತೆ ಇಲ್ಲದ ಕೆಲಸಗಳಿಂದ ವ್ರತಗಳು ಆಚರಿಸುತ್ತಾರೆ.

**ವಿವರ :** ರಾಕ್ಷಸಾಂಶ ಇರುವವರೂ ಸಹ ವ್ರತಗಳು ಮಾಡುತ್ತಾರೆ. ಅದು ಹೆಚ್ಚು ಕೋರಿಕೆಗಳ ನಿಮಿತ್ತವಾಗಿರುತ್ತದೆ. ಅಷ್ಟೇ ಅಲ್ಲದೆ ತಮ್ಮ ಆಡಂಬರವನ್ನು ತೋರಿಸಬೇಕೆಂಬ ಉದ್ದೇಶದಿಂದ ಗರ್ವದಿಂದ ಮಾಡುವವಾಗಿರುತ್ತವೆ. ಎಂದಿಗೂ ಯಾರಿಗೂ ಒಂದು ಪೈಸಾ ಕೊಡದವರು, ತನ್ನ ದೊಡ್ಡತನವನ್ನು ಹೊರಗೆ ತಿಳಿಸುವುದಕ್ಕೆ, ಅನಗತ್ಯವಾದ ಸಂದರ್ಭದಲ್ಲಿ ಎಷ್ಟಾದರೂ ಖರ್ಚುಮಾಡಿ ವ್ರತಗಳನ್ನು ಮಾಡುತ್ತಾರೆ. ಆ ವ್ರತಗಳು ತೀರದ ಅಸಾಧಾರಣ ಕೋರಿಕೆಗಳಾಗಿರುತ್ತವೆ. ಅಂತಹ ಪೂಜೆಗಳು ಈ ಕಾಲದಲ್ಲಿ ಎಷ್ಟೋಜನ ಮಾಡುತ್ತಿದ್ದಾರೆ. ದೈವಾಂಶ ಇರುವವರು ಮಾಡುವ ಪೂಜೆಗಳು, ರಾಕ್ಷಸಾಂಶ ಇರುವವರು ಮಾಡುವ ಪೂಜೆಗಳಲ್ಲಿಯೂ ಸಹ ಎಷ್ಟೋ ವ್ಯತ್ಯಾಸ ಇರುತ್ತದೆ. ಅಸುರರ ಪೂಜೆಗಳು ಕೋರಿಕೆಗಳ ನಿಮಿತ್ತವಾಗಿದ್ದು ತಮ್ಮ ಪ್ರತ್ಯೇಕತೆಯನ್ನು ತೋರಿಸುವವಾಗಿರುತ್ತವೆ.

**(15) ಶ್ಲೋ॥ 11 : ಚಿನ್ತಾ ಮಪರಿಮೇಯಾಂ ಚ ಪ್ರಳಯಾನ್ತಾ ಮುಪಾಶ್ರಿತಾಃ ।**
**ಕಾಮೋಪಭೋಗಪರಮಾ ಏತಾವದಿತಿ ನಿಶ್ಚಿತಾಃ ॥**

**(ಅಸುರಗುಣ)**

**(15) ಶ್ಲೋ॥ 12 : ಆಶಾಪಾಶಶತೈ ರ್ಬದ್ಧಾಃ ಕಾಮಕ್ರೋಧ ಪರಾಯಣಾಃ ।**
**ಈಹನ್ತೇ ಕಾಮಭೋಗಾರ್ಥ ಮನ್ಯಾಯೇ ನಾರ್ಥ ಸಂಚಯಾನ್ ॥**

**(ಅಸುರಗುಣ)**

**ಭಾವಾರ್ಥ :** ಮರಣಿಸುವವರೆಗೂ ಬದುಕುವುದಕ್ಕಾಗಿ ಪರಿಮಿತಿ ಇಲ್ಲದಂತಹ ಚಿಂತೆಮಾಡುವವರಾಗಿ, ಕೋರಿಕೆಗಳಿಂದ ಉಂಟಾಗುವ ಸುಖಗಳೇ ದೊಡ್ಡವೆಂದು (ಸರ್ವಸ್ವ ಎಂದು) ಮನಸ್ಸಿನಲ್ಲಿ ನಿಶ್ಚಯ ಮಾಡಿಕೊಂಡವರಾಗಿ, ಆಸೆ ಎಂಬ ಪಾಶದಲ್ಲಿ (ಬಲೆಯಲ್ಲಿ) ಅನೇಕ ವಿಧಗಳಲ್ಲಿ ಬಂಧಿಸಿದವರಾಗಿ, ಕಾಮಕ್ರೋಧ ಪರವಶರಾಗಿ, ತಮ್ಮ ಕೋರಿಕೆಗಳನ್ನು ನೆರವೇರಿಸಿಕೊಳ್ಳುವುದಕ್ಕೆ ಅನ್ಯಾಯವಾದ ಮಾರ್ಗಗಳ ಮೂಲಕ ಹಣ ಸಂಪಾದಿಸುತ್ತಾರೆ.

**ವಿವರ :** ಅಸುರಜನರಿಗೆ ಮರಣಿಸುವ ಕೊನೆಯ ಕ್ಷಣದವರೆಗೂ ಕೋರಿಕೆಗಳೇ ಇರುತ್ತವೆ. ಮತ್ತೊಂದು ಗಂಟೆಯಲ್ಲಿ ಸಾವು ತಪ್ಪುವುದಿಲ್ಲ ಎಂದು ತಿಳಿದರೂ ಕೈಲಾದರೆ ಆ ಗಂಟೆಯಲ್ಲಿ ಸಹ ಏನೋ ಒಂದು ಸಂಪಾದಿಸಬೇಕೆಂಬ ಆಸೆಯೇ ಇರುತ್ತದೆ. ಹೇಗೋ ನಾನು ಹೋಗುತ್ತಿದ್ದೇನೆ ಅಲ್ಲವೆ! ಕೋರಿಕೆಗಳಿಂದ ನನಗೇನು ಕೆಲಸ ಎಂದುಕೊಳ್ಳುವುದಿಲ್ಲ. ಅಷ್ಟೇ ಅಲ್ಲದೆ ಅವರು ತಮ್ಮ ಜೀವನದಲ್ಲಿ ಕೋರಿಕೆಗಳೇ ದೇವರಿಗಿಂತ ದೊಡ್ಡವೆಂದು ತಿಳಿದವರಾಗಿ, ಸಂಪಾದನೆಯೇ ಬಹಳ ದೊಡ್ಡಕಾರ್ಯವೆಂದು ತಿಳಿದವರಾಗಿ, ತಮ್ಮ ಬುದ್ಧಿ ಎಲ್ಲವನ್ನು

ಸಂಪಾದಿಸುವುದರಲ್ಲಿಯೇ ಲಗ್ನ ಮಾಡಿರುತ್ತಾರೆ. ಹಣಕ್ಕೋಸ್ಕರ ಏನನ್ನಾದರೂ ಬಿಡುವಂತಹ ಸ್ವಭಾವ ಇರುವವರು ದೈವವನ್ನೂ ಸಹ ಲೆಕ್ಕ ಮಾಡುವುದಿಲ್ಲ. ಅವರ ಮನಸ್ಸಿನಲ್ಲಿ ಸಂಪಾದಿಸಬೇಕೆಂಬ ಕೋರಿಕೆ ಹೊರತು ಮತ್ತೇನು ಇರುವುದಿಲ್ಲ. ಅಂಥವರು ಅನೇಕ ಆಸೆಗಳೆಂಬ ಹಗ್ಗಗಳಿಂದ ಕಟ್ಟಿದವರಾಗಿ ನನಗೆ ಮನೆ ಬೇಕೆಂಬ ಕೋರಿಕೆ, ಭೂಮಿ ಬೇಕೆಂಬ ಕೋರಿಕೆ, ಬಂಗಾರ ಬೇಕೆಂಬ ಕೋರಿಕೆ, ಹಣ ಹೆಚ್ಚಾಗಿರಬೇಕೆಂಬ ಕೋರಿಕೆ ಮುಖ್ಯವಾಗಿದ್ದು, ಅವುಗಳ ಹಿಂದೆ ಅನೇಕ ಚಿಕ್ಕ ಚಿಕ್ಕ ಆಸೆಗಳಿದ್ದು, ಅವು ನೆರವೇರುವುದಕ್ಕೆ ಅನ್ಯಾಯವಾದ ಮಾರ್ಗಗಳ ಮೂಲಕ ಧನವನ್ನು ಸಂಪಾದಿಸುತ್ತಾರೆ. ರಾಜಕೀಯದಲ್ಲಾಗಲಿ, ವ್ಯಾಪಾರದಲ್ಲಾಗಲಿ ಅನ್ಯಾಯ ಮಾರ್ಗದಲ್ಲಿ ಹೆಚ್ಚಾಗಿ ಸಂಪಾದಿಸಿದರೂ ಇನ್ನು ಸಾಕೆಂಬ ತೃಪ್ತಿ ಇರದೆ ದಿನದಿನಕ್ಕೂ ಹೆಚ್ಚಾಗುತ್ತಲೇ ಇರುತ್ತದೆ. ಕೊನೆಗೆ ಮರಣಿಸುವಾಗಲೂ ಆ ಚಿಂತೆಯಲ್ಲಿಯೇ ಸತ್ತುಹೋಗುತ್ತಾರೆ.

**(15) ಶ್ಲೋ॥ 13 : ಇದ ಮದ್ಯ ಮಯಾ ಲಬ್ಧ ಮಿಮಂ ಪ್ರಾಪ್ಸ್ಯೇ ಮನೋರಥಮ್ ।**
**ಇದ ಮ ಸ್ತೀದ ಮಪಿ ಮೇ ಭವಿಷ್ಯತಿ ಪುನರ್ಧನಮ್ ॥**
**(ಅಸುರ ಗುಣ)**

**ಭಾವಾರ್ಥ** : ಈ ಹಣ ಈಗ ನನ್ನಿಂದ ಸಂಪಾದಿಸಲಾಗಿದೆ. ನಮ್ಮ ಕೋರಿಕೆಗಳನ್ನನುಸರಿಸಿ ಸಂಪಾದಿಸುತ್ತೇವೆ. ಈಗ ಸಂಪಾದಿಸಿದ ಧನವೆಲ್ಲವೂ ನನ್ನದು. ಮತ್ತೆ ನಾನು ಎಷ್ಟೋ ಹಣವನ್ನು ಸಂಪಾದಿಸುತ್ತೇನೆ.

**ವಿವರ** : ರಾಕ್ಷಸಾಂಶ ಇರುವವರು ಅನ್ಯಾಯ ಮಾರ್ಗದಿಂದ ಸಂಪಾದಿಸುತ್ತಾರೆಂದು ಕೊಂಡಿದ್ದೇವಲ್ಲವೆ! ಹಾಗೆ ಸಂಪಾದಿಸಿರುವುದನ್ನು ನೋಡಿ ನಾನು ಇಷ್ಟು ಹಣವನ್ನು ಸಂಪಾದಿಸಿದ್ದೇನೆಂದು ಹೆಮ್ಮೆ ಪಡುತ್ತಾನೆ. ಅಷ್ಟೇ ಅಲ್ಲದೆ ನಾವು ಹೇಗೆಂದುಕೊಂಡರೆ ಹಾಗೆ ಸಂಪಾದಿಸಬಲ್ಲೆವೆಂದು ಇತರರಿಗೂ ಹೇಳುವರು. ನನ್ನ ತಿಳುವಳಿಕೆಯಿಂದ ನಾನು ಇಷ್ಟು ಆಸ್ತಿಯನ್ನು ಸಂಪಾದಿಸಿದ್ದೇನೆ. ಇನ್ನು ಮುಂದೆಯು ಸಂಪಾದಿಸುತ್ತೇನೆಂದು ಹೇಳುತ್ತಾರೆ. ನೀತಿ ನಿಯಮಗಳಿಗೆ ನ್ಯಾಯಕ್ಕೆ ಒಳಪಟ್ಟು ಸಂಪಾದಿಸದವವನನ್ನು ಅಸಮರ್ಥನಂತೆ ತಾವು ಸಮರ್ಥರಂತೆ ಹೇಳಿಕೊಳ್ಳುತ್ತಾರೆ.

**(15) ಶ್ಲೋ॥ 14 : ಅಸೌ ಮಯಾ ಹತ ಶೃತ್ರು: ಹನಿಷ್ಯೇ ಚಾಪರಾ ನಪಿ ।**
**ಈಶ್ವರೋಽಹ ಮಹಂ ಭೋಗೀ ಸಿದ್ಧೋಽಹಂ ಬಲವಾನ್ ಸುಖೀ ॥**
**(ಅಸುರ ಗುಣ)**

**(15) ಶ್ಲೋ॥ 15 : ಆಢ್ಯೋಽಭಿಜನವಾ ನಸ್ಮಿಕೋಽನ್ಯೋಸ್ತಿ ಸದೃಶೋ ಮಯಾ ।**
**ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ ಇತ್ಯಜ್ಞಾನವಿಮೋಹಿತಾಃ ॥**

**(ಅಸುರ ಗುಣ)**

**(15) ಶ್ಲೋ॥ 16 : ಅನೇಕ ಚಿತ್ತವಿಭ್ರಾನ್ತಾ ಮೋಹಜಾಲ ಸಮಾವೃತಾಃ ।**
**ಪ್ರಸಕ್ತಾಃ ಕಾಮಭೋಗೇಷು ಪತನ್ತಿ ನರಕೇಽಶುಚೌ ॥**

**(ಅಸುರ ಗುಣ)**

**ಭಾವಾರ್ಥ** : ನಾನು ಶತ್ರುವನ್ನು ಸಾಯಿಸಿದ್ದೇನೆ. ಇತರ ಶತ್ರುಗಳನ್ನೂ ಸಹ ಸಾಯಿಸಬಲ್ಲೆನು. ನಾನೇ ಈಶ್ವರ, ಭೋಗಿ, ಸುಖಿ, ನಾನು ಸಿದ್ಧನು, ನಾನು ಬಲಶಾಲಿ, ಜನರಲ್ಲಿ ಒಳ್ಳೆಯ ಕುಲದವನು, ಭಾಗ್ಯವಂತನು, ನನಗೆ ಸಮಾನರು ಯಾರೂ ಇಲ್ಲ, ನಾನು ಯಜ್ಞ ಮಾಡುತ್ತೇನೆ, ದಾನ ಮಾಡುತ್ತೇನೆ, ಆನಂದ ಪಡೆಯುತ್ತೇನೆ ಎಂಬ ಅಜ್ಞಾನ ಭ್ರಮೆಯಿಂದ ಮೋಹಿತರಾದವರು, ಅನೇಕ ವಿಧಗಳಾಗಿ ಚಿತ್ತವಿಭ್ರಾಂತಿಪರರು, ಮೋಹವೆಂಬ ಬಲೆಯಲ್ಲಿ ಸಿಕ್ಕಿ ಕೋರಿಕೆಗಳನ್ನು ಅನುಭವಿಸುವುದರಲ್ಲಿ ಆಸಕ್ತಿ ಇರುವವರಾಗಿ ಪಾಪವನ್ನು ಸಂಪಾದಿಸಿಕೊಂಡು ನರಕವನ್ನು ಅನುಭವಿಸುವುದಕ್ಕೆ ಹೋಗುತ್ತಿದ್ದಾರೆ.

**ವಿವರ** : ಅಸುರಭಾವ ಇರುವವರು ಜ್ಞಾನವನ್ನು ಸ್ವಲ್ಪವೂ ತಿಳಿಯದವರಾಗಿರುವುದರಿಂದ ಅವರಿಗೆ ಕರ್ಮದ ವಿಧಾನ ಅಸಲಿಗೆ ತಿಳಿಯದು. ಪ್ರತಿ ಕೆಲಸಕ್ಕೂ ಕರ್ಮಕಾರಣವೆಂದು ಅದರ ಪ್ರಕಾರ ಮನುಷ್ಯರು ನಡೆದುಕೊಳ್ಳಬೇಕಾಗಿದೆ ಎಂದು ತಿಳಿಯದವರಾಗಿ, ಪ್ರತಿ ಕೆಲಸಕ್ಕೂ ತಾವೇ ಕಾರಣವೆಂದುಕೊಳ್ಳುತ್ತಾರೆ. ಹಾಗೆಂದುಕೊಳ್ಳುವುದರಿಂದ ಶತ್ರು ತನ್ನಿಂದಕೊಲೆಯಾದರೂ ಅದಕ್ಕೆ ಕಾರಣ ನಾನೇ ಎಂದು, ಶತ್ರುವನ್ನು ತನ್ನ ಬಲದಿಂದಲೇ ಕೊಂದಿದ್ದೇನೆಂದುಕೊಳ್ಳುತ್ತಾನೆ. ಕರ್ಮದಿಂದ ನಡೆದಿರುವ ಕಾರ್ಯವೆಂದು ತಿಳಿಯುವುದಿಲ್ಲ. ಹಾಗೆಯೇ ಕರ್ಮ ಕಾರಣದಿಂದ ಧನಿಕನಾದಂತಾದರೆ ತಾನೇ ಭೋಗಿ ಸುಖವಂತನು ಬಲಶಾಲಿ ಎಂದು ತಿಳಿದುಕೊಳ್ಳುತ್ತಾನೆ. ಯಜ್ಞ ದಾನಗಳನ್ನು ತಾನೇ ಮಾಡುತ್ತಿದ್ದೇನೆಂಬ ಭ್ರಮೆಯಲ್ಲಿಯೇ ಇರುತ್ತಾನೆ. ಅಂತಹ ಅಹಂಕಾರಯುಕ್ತರು ಮಾಡುವ ಕೆಲಸಗಳಲ್ಲಿ ಕರ್ಮ ಸಂಭವಿಸಿ ಅದನ್ನು ಅನುಭವಿಸುವುದಕ್ಕೆ ಪುನಃ ಹುಟ್ಟುತ್ತಾರೆ.

**(15) ಶ್ಲೋ॥ 17 : ಆತ್ಮಸಂಭಾವಿತಾಃ ಸ್ತಬ್ಧಾ ಧನಮಾನ ಮದಾನ್ವಿತಾಃ ।**
**ಯಜನ್ತೇ ನಾಮ ಯಜ್ಞೈ ಸ್ತೇದಮ್ಭೇ ನಾವಿಧಿಪೂರ್ವಕಮ್ ॥**

**(ಅಸುರ ಗುಣ)**

**ಭಾವಾರ್ಥ** : ತಮ್ಮನ್ನು ತಾವು ಹೊಗಳಿಕೊಳ್ಳುತ್ತಾ, ತಮ್ಮ ಪ್ರಭಾವವೇ ದೊಡ್ಡದೆನ್ನುತ್ತಾ, ಧನ ಮಾನ ಮಧಗಳಿಂದ ಕೂಡಿದ ಇವರು, ಗರ್ವದಿಂದ ಅಶಾಸ್ತ್ರೀಯಪದ್ಧತಿಯಲ್ಲಿ ಮಾಡುವ ಯಜ್ಞವನ್ನು ನಾಮಕಾರ್ಥಯಜ್ಞವೆನ್ನಬಹುದು.

**(15) ಶ್ಲೋ॥ 18 : ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ ।**
**ಮಾ ಮಾತ್ಮಪರ ದೇಹೇಷು ಪ್ರದ್ವಿಷನ್ತೋಽಭ್ಯಸೂಯಕಾಃ ॥**
**(ಅಸುರ ಗುಣ)**

**ಭಾವಾರ್ಥ** : ಅಂತಹ ಅಸುರ ಜನರು ಅಹಂಕಾರಗ್ನರಾಗಿದ್ದು, ಬಲ ಗರ್ವ ಕಾಮ ಕ್ರೋಧವನ್ನು ಆಶ್ರಿಯಿಸಿದವರಾಗಿ, ತಮ್ಮ ಶರೀರದಲ್ಲಿಯೂ, ಪರ ಶರೀರದಲ್ಲಿರುವ ನನ್ನನ್ನು ಅಸೂಯೆಯಿಂದ ದ್ವೇಷಿಸುತ್ತಾರೆ.

**ವಿವರ** : ಅಸುರ ಜನರಿಗೆ ತಮ್ಮ ಶರೀರದಲ್ಲಿರುವ ದೈವವೇ ಇತರರ ಶರೀರದಲ್ಲಿಯೂ ಇದೆಯೆಂದು ತಿಳಿದಿಲ್ಲ. ಅವನು ಬೇರೆ ತಾನು ಬೇರೆ ಎಂಬ ಭಾವದಲ್ಲಿ ಪೂರ್ತಿಯಾಗಿದ್ದು, ತನಗೆ ಉಂಟಾದವುಗಳಿಂದ ತನ್ನನ್ನು ಇಂತಹವನೆಂದು ತಿಳಿದುಕೊಳ್ಳುತ್ತಾ ಅಹಂಕಾರ ಇರುವವನಾಗಿ, ತನ್ನಲ್ಲಿ ಮತ್ತು ಇತರರಲ್ಲಿರುವ ದೈವವನ್ನೂ ಸಹ ಅಸೂಯೆಯಿಂದ ದ್ವೇಷಿಸುತ್ತಿದ್ದಾನೆ. ಆತ್ಮಜ್ಞಾನ ಬೇಕಿಲ್ಲದವರು ಮಾಡುವ ಬಾಹ್ಯಾರಾಧನೆಗಳನ್ನು ದೊಡ್ಡದಾಗಿ ತಿಳಿದುಕೊಂಡು, ಜ್ಞಾನ ಯೋಗ ಮೊದಲಾದ ಆತ್ಮ ವಿಷಯಗಳನ್ನು ಅಸೂಯೆಯಿಂದ ನೋಡುತ್ತಾ ದ್ವೇಷಿಸುತ್ತಾರೆ. ಕೋರಿಕೆಗಳಿಂದ ಕೂಡಿದ್ದು, ಕೋರಿಕೆಗಳಿಂದ ಮಾಡುವ ವ್ರತಕ್ರತುಗಳನ್ನೇ ದೊಡ್ಡದಾಗಿ ತಿಳಿದುಕೊಂಡು, ದೈವಿಕವಾದ ಆತ್ಮ, ಪರಮಾತ್ಮರನ್ನು ತಿಳಿಸುವ ಜ್ಞಾನಿಗಳನ್ನು, ಗುರುಗಳನ್ನು ದ್ವೇಷಿಸುವುದೇ ಅಲ್ಲದೆ, ಅವರಿಗೆ ಕೆಟ್ಟದ್ದನ್ನು ಮಾಡುವುದಕ್ಕೆ ಪ್ರಯತ್ನಿಸುತ್ತಾರೆ.

**(15) ಶ್ಲೋ॥ 19 : ತಾ ನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।**
**ಕ್ಷಿಪಾ ಮ್ಯಜಸ್ರ ಮಶುಭಾ ನಾ ಸುರೀಷ್ವೇವ ಯೋನಿಷು ॥**
**(ಜೀವಾತ್ಮ, ಪರಮಾತ್ಮ)**

**ಭಾವಾರ್ಥ** : ಕ್ರೂರಿಗಳು, ದ್ವೇಷಿಗಳು, ಶುಭವನ್ನು ಧೂಷಿಸುವ ಆ ನರಾಧಮರನ್ನು ಅಸುರ ಯೋನಿಯಲ್ಲಿಯೇ ತಳ್ಳುತ್ತಾ ಸಂಸಾರ ದುಃಖ ಗತಿಗಳನ್ನು ಪಡೆಯುವಂತೆ ನಾನೇ ಮಾಡುತ್ತೇನೆ.

**ವಿವರ** : ಶರೀರದಲ್ಲಿರುವ ಆತ್ಮ, ಪರಮಾತ್ಮರನ್ನು ಧೂಷಿಸುವವರು, ಜ್ಞಾನಿಗಳನ್ನು, ಗುರುಗಳನ್ನು ಶತ್ರುಗಳಾಗಿ ನೋಡಿ ಬಾಧಿಸುವವರು, ಕ್ರೂರಿಗಳು ದ್ವೇಷಿಗಳಾದವರನ್ನು ಜನ್ಮ ಜನ್ಮಗಳಿಗೂ ಅಸುರರಾಗಿಯೇ ಪರಮಾತ್ಮ ಹುಟ್ಟಿಸುತ್ತಿದ್ದಾನೆ. ಅವರನ್ನು ಪುನಃ ರಾಕ್ಷಸತ್ವ ಇರುವವರ ಮನೆಯಲ್ಲಿಯೇ ಹುಟ್ಟಿಸಿ ಅಲ್ಲಿಯೆ ಸಂಸಾರ ವಿಷಯಗಳಲ್ಲಿಯೇ ಮುಳುಗಿ ಹೋಗುವಂತೆ ಮಾಡುತ್ತಾನೆ.

**(15) ಶ್ಲೋ॥ 20 : ಆಸುರೀಂ ಯೋನಿ ಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।**
**ಮಾಮಪ್ರಾಪ್ಯೈವ ಕೌಂತೇಯ! ತತೋ ಯಾನ್ತ್ಯಧಮಾಂ ಗತಿಮ್ ॥**
**(ಜೀವಾತ್ಮ, ಪರಮಾತ್ಮ)**

**ಭಾವಾರ್ಥ** : ಹಾಗೆ ಅಸುರ ಯೋನಿಗಳಲ್ಲಿ ಜನ್ಮಿಸಿದವರು ಜನ್ಮ ಜನ್ಮಗಳಿಗೂ ಅಜ್ಞಾನಿಗಳಾಗುತ್ತಾ ನನ್ನನ್ನು ಹೊಂದುವ ಜ್ಞಾನದ ವಿಧಾನವೇ ತಿಳಿಯಲಾರರು. ಜನ್ಮ ಜನ್ಮಕ್ಕೂ ಅಧಮಗತಿ ಹೊಂದುತ್ತಾರೆ.

**ವಿವರ** : ಅಜ್ಞಾನಮಾರ್ಗದಲ್ಲಿ ನಡೆದುಕೊಳ್ಳುತ್ತಾ ಪ್ರಪಂಚದಲ್ಲಿ ಸ್ವಲ್ಪಕಾಲ ಬದುಕಿಹೋಗುವ ಮಾನವರು ಅಸುರ ಭಾವ ಹೊಂದಿದವರಾಗಿ, ತಾವು ಇರುವ ಸ್ಥಿತಿಯಲ್ಲಿ ತಮ್ಮನ್ನು ಇಂತಹವರೆಂದು ಲೆಕ್ಕಿಸಿಕೊಂಡು ಆತ್ಮಜ್ಞಾನಿಗಳನ್ನು, ಗುರುಗಳನ್ನು ಅಸೂಯೆಯಿಂದ ದ್ವೇಷಿಸಿದರು ಅದು ಪರಮಾತ್ಮನನ್ನೇ ದ್ವೇಷಿಸಿದಂತಾಗುತ್ತದೆ. ಉದಾಹರಣೆಗೆ ಒಬ್ಬ ಪೋಲೀಸ್ ಉದ್ಯೋಗಿ ಸಿ.ಐ. ಅಥವಾ ಡಿ.ಎಸ್.ಪಿ ಉದ್ಯೋಗ ಮಾಡುತ್ತಿದ್ದಾನೆಂದುಕೊಳ್ಳೋಣ. ಆತನು ಪ್ರಸ್ತುತ ಮಾಡುತ್ತಿರುವ ಉದ್ಯೋಗದಿಂದ ಇಂತಹವನೆಂದು ಅಹಂಕಾರ ಹೊಂದಿದ್ದು ನಾನು ಉದ್ಯೋಗರೀತ್ಯಾ ಯಾರಾದರು ಸಾಧಾರಣ ಜೀವಾತ್ಮ ಎಂಬ ವಿಷಯ ತಿಳಿಯದೆ ಅಹಂಕಾರದಿಂದ ತುಂಬಿ ಗರ್ವದಂಭಗಳು ಹೊಂದಿ ಒಬ್ಬ ಗುರುವನ್ನು ಅಥವಾ ಆತ್ಮಜ್ಞಾನಿಯುನ್ನು ಪೋಲೀಸ್ ಸ್ಟೇಷನ್‌ನಲ್ಲಿ ನಿಲ್ಲಿಸಿ ಅಸೂಯೆಯಿಂದ ದ್ವೇಷಿಸಿದ್ದಾನೆಂದುಕೊಳ್ಳೋಣ. ಇತರರನ್ನು ಬೈದರು ಅಷ್ಟು ಅಪಾಯವಿಲ್ಲವೇನೊ ಆದರೆ ಒಬ್ಬ ಜ್ಞಾನಿಯನ್ನು ಅದೇ ಕೆಲಸವಾಗಿ ತಪ್ಪು ಇಲ್ಲದಿದ್ದರೂ ಅಸೂಯೆಯಿಂದ ನಿಂದಿಸಿದರೆ ಅದು ದೈವದೂಷಣೆಯಾಗುತ್ತದೆ. ಅಂತಹವನ ಮೇಲೆ ಪರಮಾತ್ಮ ತಪ್ಪದೇ ಬೇಸರಗೊಂಡವನಾಗಿ ಅವನನ್ನು ಜ್ಞಾನವಿಲ್ಲದ ಅಸುರಜಾತಿಯಲ್ಲಿಯೇ ಹುಟ್ಟಿಸುತ್ತಾನೆ. ಇಲ್ಲಿ ಅವನ ಕರ್ಮ ಸಹ ಹುಟ್ಟುವುದನ್ನು ನಿರ್ಧರಿಸುವುದಿಲ್ಲ. ಇದು ಕರ್ಮಾತೀತವಾದ

ಪರಮಾತ್ಮನ ಕೆಲಸವಾಗಿ ಪರಿಗಣಿಸಲಾಗುತ್ತಿದೆ. ಹಾಗೆಯೇ ಅಸುರಯೋನಿಯಲ್ಲಿ ಹುಟ್ಟಿದವನು ಜನ್ಮ ಜನ್ಮಗಳಲ್ಲಿ ಜ್ಞಾನಕ್ಕೆ ದೂರವಾಗುತ್ತಾ, ಯಾವ ಜನ್ಮಕ್ಕೂ ಜ್ಞಾನದ ಗಟ್ಟು(ದಡ) ಸಿಗದ ಹಾಗೆ ಪರಮಾತ್ಮ ಮಾಡುತ್ತಿದ್ದಾನೆ. ಈ ವಿಧವಾಗಿ ಜನ್ಮ ಜನ್ಮಕ್ಕೂ ಅಧೋಗತಿ ಹೊರತು ಬೇರೆ ಇಲ್ಲ. ಆದುದರಿಂದ ಆತ್ಮಜ್ಞಾನ ಹೊಂದಿದವರ ಬಗ್ಗೆ ಎಷ್ಟು ದೊಡ್ಡ ಉದ್ಯೋಗಿಯಾದರೂ, ರಾಜಕೀಯ ವ್ಯಕ್ತಿಯಾದರೂ, ಧನಿಕನಾದರೂ ಜಾಗ್ರತೆಯಿಂದ ವಿನಯ ವಿಧೇಯತೆಗಳಿಂದ ನಡೆದುಕೊಳ್ಳಬೇಕು. ಹಾಗಲ್ಲದೆ ಅವರನ್ನು ಧೂಷಿಸಿ ದ್ವೇಷಿಸುವುದರಿಂದ ಅವರೇನು ತಿರುಗಿ ಅನ್ನುವುದಿಲ್ಲ, ಆದರೆ ಅವರಹಿಂದೆ ಕಾಣಿಸದಂತಿರುವ ಪರಮಾತ್ಮ ಏನಾದರು ಮಾಡುತ್ತಾನೆ.

**(15) ಶ್ಲೋ॥ 21 : ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನ ಮಾತ್ಮನಃ ।**
**ಕಾಮಃ ಕ್ರೋಧ ಸ್ತಥಾ ಲೋಭ ಸ್ತಸ್ಮಾ ದೇತ ತ್ರಯಂ ತ್ಯಜೇತ್ ॥**

**(ಪ್ರಕೃತಿ)**

**ಭಾವಾರ್ಥ** : ಆತ್ಮ ನಾಶಕರವಾದ ಈ ಅಸುರ ಭಾವಕ್ಕೆ ಮೂರು ದ್ವಾರಗಳಿರುತ್ತವೆ. ಕಾಮ, ಕ್ರೋಧ, ಲೋಭ ಮೂರನ್ನು ಬಿಡಬೇಕು.

**(15) ಶ್ಲೋ॥ 22 : ಏ ತೈರ್ವಿಮುಕ್ತಃ ಕೌನ್ತೇಯ! ತಮೋದ್ವಾರೈ ಸ್ತ್ರೀ ಭಿರ್ನರಃ ।**
**ಆಚರ ತ್ಯಾತ್ಮನಃ ಶ್ರೇಯ ಸ್ತತೋ ಯಾತಿ ಪರಾಂ ಗತಿಮ್ ॥**

**(ಪ್ರಕೃತಿ)**

**ಭಾವಾರ್ಥ** : ಈ ಮೂರು ತಮೋ ದ್ವಾರಗಳನ್ನು ಯಾರು ಬಿಡುತ್ತಾರೋ ಅವನಿಗೆ ಶುಭ ಏರ್ಪಟ್ಟು ಪರಮಪದವಿಯನ್ನು ಪಡೆಯುತ್ತಾನೆ.

**ವಿವರ** : ಅಸುರ ಭಾವವನ್ನು ಉಂಟುಮಾಡಿ ಮಾನವನನ್ನು ಅಧೋಗತಿಗೆ ಕಳಿಸುವ ಆಸೆ, ಕೋಪ, ಲೋಭ ಎನ್ನುವ ಮೂರನ್ನು ಬಿಟ್ಟು ಅವುಗಳಿಗೆ ವಿರುದ್ಧವಾದ ದಾನ, ದಯ, ಔದಾರ್ಯ ಹೊಂದಿರುವುದರಿಂದ ಅವುಗಳ ಮೂಲಕ ಕೆಲಸಮಾಡುತ್ತಾ ಜ್ಞಾನದ ಕಡೆ ದೃಷ್ಟಿ ಮರಳಿಸುವುದಕ್ಕೆ ಸಾಧ್ಯವಾಗುತ್ತದೆ. ನಂತರ ಕೆಲವು ಜನ್ಮಗಳಿಗಾದರೂ ಜ್ಞಾನವನ್ನಾರ್ಜಿಸಿ ಮೋಕ್ಷಕ್ಕೆ ಅರ್ಹನಾಗುತ್ತಾನೆ.

**(15) ಶ್ಲೋ॥ 23 : ಯಃ ಶಾಸ್ತ್ರವಿಧಿ ಮುತ್ಸೃಜ್ಯ ವರ್ತತೇ ಕಾಮಕಾರತಃ ।**
**ನ ಸ ಸಿದ್ಧಿ ಮವಾಪ್ನೋತಿ ನ ಸುಖಂ ನ ಪರಾಂ ಗತಿಮ್ ॥**
**(ಜೀವಾತ್ಮ)**

**ಭಾವಾರ್ಥ** : ಶಾಸ್ತ್ರವಿಧಿಗಳನ್ನು ಬಿಟ್ಟು ಆಸೆಗೋಸ್ಕರ ಸಂಚರಿಸುವವನು ಏನು ಸಾಧಿಸಲಾರನು. ಅವನು ಸುಖವನ್ನು ಪಡೆಯಲಾರನು, ಮೋಕ್ಷವನ್ನು ಹೊಂದಲಾರನು.

**ವಿವರ** : ಜೀವನಕ್ಕೊಂದು ವಿಧಾನ ಇರುತ್ತದೆಂದು, ಜೀವನವನ್ನು ಶಾಸನ ಬದ್ಧವಾಗಿ ದೊಡ್ಡವರು ಹೇಳಿದಂತೆ ಕಳೆಯಬೇಕೆಂದು ತಿಳಿಯದೆ, ಅವರ ಇಷ್ಟಬಂದಂತೆ ಸಂಚರಿಸುತ್ತಾ, ಆಸೆ ಎಂಬ ದೊಡ್ಡ ಗುಣದಿಂದ ಧನಾರ್ಜನೆ ಜೀವನದ ಧ್ಯೇಯವಾಗಿಟ್ಟುಕೊಂಡು, ಶಾಸ್ತ್ರವಿಧಿಗಳಾದ ನೀತಿ ನ್ಯಾಯ, ಜ್ಞಾನ ಧರ್ಮಗಳನ್ನು ಗಾಳಿಗೆ ಬಿಟ್ಟು, ಧನ ಸಮುಪಾರ್ಜನೆಗೆ ಹೇಗಾದರು ಮಾತನಾಡಿ ಹೇಗಾದರು ಮಾಡುವವನು ದೈವಪರವಾಗಿ ಏನು ಸಾಧಿಸಲಾರನು. ಎಷ್ಟು ಸಾಧಿಸಿದರು ಅವನಿಗೆ ಸುಖ ಇರುವುದಿಲ್ಲ, ಮೋಕ್ಷ ಎಂದಿಗೂ ಹೊಂದಲಾರನು.

**(15) ಶ್ಲೋ॥ 24 : ತಸ್ಮಾ ಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯ ವಸ್ಥಿತೌ ।**
**ಜ್ಞಾತ್ವಾ ಶಾಸ್ತ್ರ ವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ॥**
**(ಜೀವಾತ್ಮ)**

**ಭಾವಾರ್ಥ** : ಕಾರ್ಯ ಅಕಾರ್ಯಗಳನ್ನು ತಿಳಿಸುವುದು ಶಾಸ್ತ್ರ. ಆದುದರಿಂದ ಶಾಸ್ತ್ರ ವಿಧಾನ ತಿಳಿದು ಕರ್ಮಗಳಾಚರಿಸಬೇಕು.

**ವಿವರ** : ಮಾನವ ಜೀವನದಲ್ಲಿ ಕರ್ಮ ಪ್ರಕಾರ ನಡೆಯುವ ಕಾರ್ಯಗಳನ್ನು ಈ ಪ್ರಕಾರ ಮಾಡಬೇಕೆಂದು, ಈ ಪ್ರಕಾರವಾಗಿ ಮಾಡಬಾರದೆಂದು ತೀರ್ಮಾನಿಸಿ ಹೇಳುವುದು ಶಾಸ್ತ್ರ. ಶಾಸ್ತ್ರ ಶಾಸನಗಳಿಂದ ಕೂಡಿಕೊಂಡಿದೆ. ಶಾಸನ ನಿರ್ಣಯದ ಪ್ರಕಾರ ಕೆಲಸಗಳು ಮಾಡಿದರು ಅದರಲ್ಲಿನ ಕರ್ಮ ಅಂಟುವುದಿಲ್ಲ. ಶಾಸ್ತ್ರದ ಪ್ರಕಾರ ಮಾಡದಿದ್ದರೆ ಆ ಕೆಲಸಗಳಲ್ಲಿನ ಕರ್ಮ ಅಂಟಿಕೊಳ್ಳುತ್ತಿರುತ್ತದೆ. ಕೈಗೆ ಗ್ಲೌಜ್ ಹಾಕಿಕೊಂಡು ಕೆಲಸ ಮಾಡಿದರೆ ಯಾವ ಕೊಳೆ ಕೈಗೆ ಅಂಟುವುದಿಲ್ಲ. ಅದೇ ಕೆಲಸವನ್ನು ಗ್ಲೌಜ್ ಇಲ್ಲದಂತೆ ಮಾಡಿದರೆ

ಕೈಗೆ ಕೊಳೆ ಅಂಟಿಕೊಳ್ಳುತ್ತದೆ. ಹಾಗೆಯೇ ಶಾಸ್ತ್ರವನ್ನು ಅನುಸರಿಸಿ ಮಾಡುವ ಕೆಲಸದಲ್ಲಿ ಕರ್ಮ ಅಂಟುವುದಿಲ್ಲ. ಅದೇ ಕೆಲಸವನ್ನು ಶಾಸ್ತ್ರಬದ್ಧ ಇಲ್ಲದಂತೆ ಮಾಡಿದರೆ ಕರ್ಮ ಅಂಟುತ್ತದೆ.

ಇಲ್ಲಿಗೆ ದೈವಾಸುರ ಸಂಪದ್ವಿಭಾಗ ಯೋಗವೆಂಬ ಈ ಅಧ್ಯಾಯ ಮುಕ್ತಾಯವಾಗಿದೆ. ಇದರಲ್ಲಿನ ಶ್ಲೋಕಗಳ ವಿವರವನ್ನು ಕೆಳಗೆ ನೋಡಿರಿ.

| | | | |
|---|---|---|---|
| 1. | ದೈವ ಗುಣಗಳು | – | 3 |
| 2. | ಅಸುರ ಗುಣಗಳು | – | 13 |
| 3. | ಜೀವಾತ್ಮ, ಪರಮಾತ್ಮ | – | 2 |
| 4. | ದೈವ ಅಸುರ ಗುಣಗಳು | – | 2 |
| 5. | ಜೀವಾತ್ಮ | – | 2 |
| 6. | ಪ್ರಕೃತಿ | – | 2 |
| | ಒಟ್ಟು ಶ್ಲೋಕಗಳು | | 24 |

ಭಾವ, ವಿವರವನ್ನು ಬದಲಾಯಿಸಿ ಬರೆದ ಶ್ಲೋಕಗಳು – 7, 8, 9.



**ನಿಜವಾದ ರಚನಕಾರರು ಯಾರೋ ಗೊತ್ತಾ?**

**ಸಂಚಲನಾತ್ಮಕ ರಚನಕಾರ**

ಸಂ = ಒಳ್ಳೆ

ಚಲನೆ = ಚೈತನ್ಯ ಹೊಂದಿದ

ಆತ್ಮಕ = ಎರಡನೆ ಆತ್ಮ

ರಚನಕಾರ = ಬರೆಸಿದವನು

**ಹದಿನಾರನೆಯ ಅಧ್ಯಾಯ**

# ಶ್ರದ್ಧಾತ್ರಯ ವಿಭಾಗ ಯೋಗ

**ಅರ್ಜುನನು ಹೀಗೆ ಕೇಳುತ್ತಾನೆ :–**

**(16) ಶ್ಲೋ॥ 1 : ಯೇ ಶಾಸ್ತ್ರ ವಿಧಿ ಮುತ್ಸೃಜ್ಯ ಯಜನ್ತೇ ಶ್ರದ್ಧಯಾಽನ್ವಿತಾಃ ।**
**ತೇಷಾಂ ನಿಷ್ಠಾ ತು ಕಾ ಕೃಷ್ಣ! ಸತ್ತ್ವ ಮಾಹೋ ರಜ ಸ್ತಮಃ ॥**
**(ಪ್ರಕೃತಿ, ಗುಣಗಳು)**

**ಭಾವಾರ್ಥ** : ಯಾರಾದರೆ ಶಾಸ್ತ್ರಪದ್ಧತಿಗಳನ್ನು ಬಿಟ್ಟು ಶ್ರದ್ಧೆಯಿಂದ ಪೂಜೆಗಳು, ಆರಾಧನೆಗಳು ಮಾಡುತ್ತಿದ್ದಾರೋ ಅಂತವರ ನಿಷ್ಠೆಯನ್ನು ಏನನ್ನಬಹುದು? ಸತ್ತ್ವವಾ! ರಾಜಸವಾ! ತಾಮಸವಾ!

**ವಿವರ** : ಪ್ರತಿಯೊಂದು ಕೆಲಸ ಶಾಸ್ತ್ರಯುಕ್ತವಾಗಿ ಮಾಡಬೇಕೆಂದು ಹಿಂದಿನ ಅಧ್ಯಾಯದಲ್ಲಿನ ಕೊನೆಯ ಶ್ಲೋಕದಲ್ಲಿ ಹೇಳಲಾಗಿದೆ. ಪ್ರತಿಯೊಂದು ಕೆಲಸವನ್ನು ಶಾಸ್ತ್ರಯುಕ್ತವಾಗಿ ಮಾಡಿರೆನ್ನುವಂತೆ ದೇವತಾರಾಧನೆ ಮೊದಲುಗೊಂಡು ಎಲ್ಲಾ ಕೆಲಸಗಳನ್ನು ಶಾಸ್ತ್ರಯುಕ್ತವಾಗಿ ಮಾಡಬೇಕಾಗಿದೆ. ಆದರೆ ಎಲ್ಲರೂ ಹಾಗೆ ಮಾಡುತ್ತಿಲ್ಲ. ಶಾಸ್ತ್ರವಿಧಾನವನ್ನು ಬಿಟ್ಟು ಬಹಳಜನರು ಅನೇಕವಾದ ಕಾರ್ಯಗಳು ಮಾಡುತ್ತಿದ್ದಾರೆ. ಆಸೆಯಿಂದ ಲಾಭ ಬರುತ್ತದೆಂದು ತಿಳಿದು ಮಾಡುವ ಕೆಲಸಗಳಲ್ಲಿ ಶ್ರದ್ಧೆ ಇದೆ. ಎಷ್ಟೋ ಶ್ರದ್ಧೆಯಿಂದ ಮಾಡುವ ಶಾಸ್ತ್ರರಹಿತ ಕಾರ್ಯಗಳನ್ನು ಯಾವ ಗುಣ ಭಾಗಗಳಿಗೆ ಸಂಬಂಧಿಸಿರುವವೆಂದು, ಅವರ ಶ್ರದ್ಧೆ ಯಾವ ಗುಣ ಭಾಗಕ್ಕೆ ಸಂಬಂಧಿಸಿರುವುದೆಂದು ಕೇಳಬಹುದು. ಇದೇ ಇಲ್ಲಿ ಮುಖ್ಯವಾದ ಪ್ರಶ್ನೆ. ಅದಕ್ಕೆ ಭಗವಂತನು ಏನು ಹೇಳುತ್ತಿದ್ದಾನೋ ಕೆಳಗಿನ ಶ್ಲೋಕದಲ್ಲಿ ನೋಡೋಣ.

**ಶ್ರೀ ಭಗವಂತನು ಹೀಗೆ ಹೇಳುತ್ತಾನೆ :–**

**(16) ಶ್ಲೋ॥ 2 : ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ ।**
**ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು ॥**
**(ಗುಣಗಳು)**

**ಭಾವಾರ್ಥ** : ತ್ರಿವಿಧವಾದ ಶ್ರದ್ಧೆ ಸರ್ವದೇಹಗಳಿಗೂ ಸ್ವಭಾವ ಜನಿತವಾದುದು. ಸಾತ್ತ್ವಿಕ, ರಾಜಸ, ತಾಮಸ ಶ್ರದ್ಧೆ ಎನ್ನುವವುಗಳನ್ನು ಕೇಳು.

**ವಿವರ** : ನಮ್ಮ ಶರೀರದಲ್ಲಿ ಗುಣಚಕ್ರವೊಂದು ಇದೆಯೆಂದು, ಅದರಲ್ಲಿ ಮೂರು ಭಾಗಗಳು

ಇವೆಯೆಂದು, ಆ ಮೂರು ಭಾಗಗಳಿಗೆ ಸಾತ್ತ್ವಿಕ, ರಾಜಸ, ತಾಮಸ ಭಾಗಗಳೆಂದು ಹೆಸರು ಇಡಲಾಗಿದೆಯೆಂದು ಮೊದಲೆ ಹೇಳಿಕೊಂಡಿದ್ದೇವೆ. ಅಷ್ಟೇ ಅಲ್ಲದೆ ಒಂದೊಂದು ಭಾಗದಲ್ಲಿ 12 ಗುಣಗಳು ಇವೆಯೆಂದು ಅವುಗಳೊಂದಿಗೆ ಭಯ, ಧೈರ್ಯವೆಂಬ ಎರಡು ಗುಣಗಳು, ಶ್ರದ್ಧೆ ಎಂಬ ಪ್ರತ್ಯೇಕವಾದ ಒಂದು ಗುಣವನ್ನು ಹೊಂದಿ ಒಟ್ಟು 15 ಗುಣಗಳಾಗುತ್ತಿವೆ ಎಂದೂ ಸಹ ತಿಳಿದುಕೊಂಡಿದ್ದೇವೆ. ಈ ವಿಧವಾಗಿ ಒಂದೊಂದು ಗುಣಭಾಗದಲ್ಲಿ ಒಂದೊಂದು ಶ್ರದ್ಧೆ ಇದೆ. ಶ್ರದ್ಧೆ ಎಲ್ಲಾ ಗುಣಗಳಂತೆ ಇರುವುದಲ್ಲ. ಎಲ್ಲಾ ಗುಣಗಳು ಕರ್ಮಾನುಸಾರ ಪ್ರೇರೇಪಿಸಲ್ಪಡುತ್ತದೆ. ಶ್ರದ್ಧೆ ಮಾತ್ರ ಗುಣಭಾಗಗಳಲ್ಲಿ ಇದ್ದರೂ, ಕರ್ಮಾಧೀನವಲ್ಲ. ಜೀವಾತ್ಮಕ್ಕೆ ಸ್ವಭಾವ ಜನಿತವಾದದ್ದು ಶ್ರದ್ಧೆ, ಶ್ರದ್ಧೆ ಪ್ರಕಾರ ಇಷ್ಟವಾದ ಕೆಲಸವಾಗಲಿ, ಇಷ್ಟವಿಲ್ಲದ ಕೆಲಸವಾಗಲಿ ಕರ್ಮಾನುಸಾರ ಶರೀರದಲ್ಲಿ ನಡೆಯುತ್ತದೆ. **ಪರಮಾತ್ಮನನ್ನು ತಿಳಿಯಬೇಕೆಂಬ ಶ್ರದ್ಧೆ, ಜ್ಞಾನ ತಿಳಿಯಬೇಕೆಂಬ ಶ್ರದ್ಧೆ ಕರ್ಮಾತೀತವಾದವು. ಈ ಶ್ರದ್ಧೆ ಗುಣಾತೀತವಾದುದೆಂದು ಹೇಳಬಹುದು.** ಈ ಶ್ರದ್ಧೆಯಿಂದ ಕರ್ಮಾತೀತವಾದ ಜ್ಞಾನವನ್ನು ಆತ್ಮಪ್ರಾಪ್ತಿಯನ್ನು ಪಡೆಯಬಹುದು, ಆದರೆ ಗುಣಭಾಗದಲ್ಲಿನ ಶ್ರದ್ಧೆಯನ್ನನುಸರಿಸಿ ಕೆಲಸಗಳು ನಡೆಯಬಹುದು. ನಡೆಯದಿರಬಹುದು. ಮನುಷ್ಯನಿಗೊಂದು ಶ್ರದ್ದೆ ಇರುವಾಗ ಅದರ ಪ್ರಕಾರ ನಡೆಯದೆ ಮತ್ತೊಂದು ವಿಧವಾಗಿ ಕೆಲಸಗಳು ನಡೆಯುವುದು ಎಲ್ಲರಿಗೂ ಪ್ರತ್ಯಕ್ಷಾನುಭವವಾಗಿದೆ. **'ತಾನೊಂದು ಬಯಸಿದರೆ ಕರ್ಮವೊಂದು ಬಯಸಿತೆಂದು'** ಅಲ್ಲಲ್ಲಿ ಎನ್ನುವುದು ಕೇಳುತ್ತಲೇ ಇರುತ್ತೇವೆ.

**(16) ಶ್ಲೋ॥ 3 : ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ! ।**
**ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ ॥**
**(ಗುಣಗಳು)**

**ಭಾವಾರ್ಥ** : ಸರ್ವರಿಗೂ ಶ್ರದ್ಧೆ ಅವರ ಇಷ್ಟಾನುಸಾರ ಹುಟ್ಟುವುದು. ಯಾವ ಶ್ರದ್ಧೆ ಯಾರಿಗಿದೆಯೋ ಅವನನ್ನು ಆ ಶ್ರದ್ಧಾ ಪುರುಷನೆಂದು ಹೇಳಬಹುದು.

**ವಿವರ** : ಈ ಶ್ಲೋಕವು ಸ್ವಲ್ಪ ಸಾರಾಂಶದಿಂದ ಕೂಡಿಕೊಂಡಿದೆಯೆಂದು ಹೇಳಿಕೊಳ್ಳಬಹುದು. ಇದರಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಷಯ ಬಹಳ ಇದೆ. ಇದಕ್ಕೂ ಮೊದಲು ಗುಣತ್ರಯ ವಿಭಾಗಯೋಗವೆಂಬ ಅಧ್ಯಾಯದಲ್ಲಿ ಗುಣಗಳು ಮೂರು ಭಾಗಗಳಾಗಿ ಇವೆಯೆಂದು, ಒಂದೊಂದಕ್ಕೂ ಒಂದೊಂದು ಹೆಸರು ಇದೆಯೆಂದೂ ಸಹ ತಿಳಿದುಕೊಂಡಿದ್ದೇವೆ. ಶರೀರಧಾರಿಯಾದ ಜೀವಾತ್ಮನು ಆ ಗುಣಭಾಗದಲ್ಲಿಯೇ ಇರುತ್ತಾನೆಂದೂ, ಯಾವ ಗುಣಭಾಗದಲ್ಲಿ ಇದ್ದರೆ ಆ ಗುಣದ ಹೆಸರೇ ಜೀವಿಗೆ ಉಂಟಾಗುತ್ತದೆ

ಎಂದೂ ಸಹ ಹೇಳಿಕೊಂಡಿದ್ದೇವೆ. ತಾಮಸದಲ್ಲಿದ್ದರೆ ತಾಮಸನೆಂದು, ರಾಜಸದಲ್ಲಿ ಇದ್ದರೆ ರಾಜಸನೆಂದು, ಸಾತ್ತ್ವಿಕದಲ್ಲಿ ಇದ್ದರೆ ಸಾತ್ತ್ವಿಕನೆಂದುಕೊಂಡಿದ್ದೇವೆ. ಅಲ್ಲಿ ಹೇಳಿರುವುದು ಅಲ್ಲಿಯವರೆಗು ವಾಸ್ತವವೇ ಆದರೂ ಇಲ್ಲಿ ಮತ್ತಷ್ಟು ಬದಲಾವಣೆಯಿಂದ ಅರ್ಥ ಮಾಡಿಕೊಳ್ಳಬೇಕಾಗಿದೆ. ಇಲ್ಲಿ ಹೇಳಿರುವ ಶ್ಲೋಕದಲ್ಲಿ ಶ್ರದ್ಧೆ ಎನ್ನುವುದು ಜೀವಿಗೆ ಸ್ವಭಾವಜನಿತವಾದುದೆಂದು, ಶ್ರದ್ಧೆ ಮೂರು ವಿಧಗಳಾಗಿ ಇದೆಯೆಂದು, ಗುಣಗಳನ್ನನುಸರಿಸಿ ಶ್ರದ್ಧೆ ಇದೆಯೆಂದೂ ಹೇಳಲಾಗಿದೆ. ಯಾವ ಶ್ರದ್ಧೆ ಇದ್ದರು ಪುರುಷನನ್ನು ಆ ಗುಣ ಪುರುಷನನ್ನಾಗಿ ಹೇಳಲಾಗುತ್ತದೆ. ಒಂದೊಂದು ಬಾರಿ ಜೀವಿಯಿರುವ ಗುಣದಲ್ಲಿಯೇ ಶ್ರದ್ಧೆಯೂ ಸಹ ಇರುತ್ತದೆ. ಜೀವಾತ್ಮನಿಗಿರುವ ಶ್ರದ್ಧೆ ತಾಮಸ ಗುಣ ಭಾಗದಲ್ಲಿನ ಕೆಲಸಗಳ ಮೇಲೆ ಇದ್ದು ಜೀವಾತ್ಮನು ಮಾತ್ರ ಸಾತ್ತ್ವಿಕದಲ್ಲಿ ಇದ್ದಾನೆಂದುಕೊಳ್ಳೋಣ. ಆಗ ಅವನು ಸಾತ್ತ್ವಿಕನಾ ಎಂದರೆ ಅಲ್ಲವೆಂದು ಹೇಳಬಹುದು. ಅವನು ತಾಮಸನೆಂದೇ ಹೇಳಬಹುದು. ಜೀವಾತ್ಮ ಕರ್ಮರೀತ್ಯಾ ಬಲವಂತವಾಗಿ ಸಾತ್ತ್ವಿಕಗುಣ ಭಾಗದಲ್ಲಿ ಬಂಧಿಸಲ್ಪಟ್ಟಿದ್ದರೂ ಅವನು ಸಾತ್ತ್ವಿಕನು ಅಲ್ಲ. ಶ್ರದ್ಧೆಯನ್ನನುಸರಿಸಿ ಪುರುಷನು ಯಾರಾಗಿರುವುದು ನಿರ್ಣಯಿಸಲ್ಪಡುತ್ತಿದೆ. **"ಶ್ರದ್ಧಾಮಯೋಽಯಂ ಪುರುಷೋಯೋ ಯಚ್ಛ್ರದ್ಧಃ ಸ ಏವಸಃ"** ಎನ್ನುವ ಮಾತಿನ ಪ್ರಕಾರ ಯಾವ ಗುಣಶ್ರದ್ಧೆಯಿಂದ ಬೆರೆತವನು ಆ ಗುಣ ಪುರುಷನೆಂದೇ ಹೇಳಲಾಗುತ್ತದೆ. ಆದ್ದರಿಂದ ಸಾತ್ತ್ವಿಕದಲ್ಲಿ ಜೀವಿಯಿದ್ದು ಶ್ರದ್ಧೆ ತಾಮಸ ಗುಣಭಾಗದಲ್ಲಿ ಇರುವಾಗ ಅವನು ನಿಜವಾಗಲು ತಾಮಸದಲ್ಲಿ ಇರುವವನೇ ಆಗುತ್ತಾನೆ. ಸಾತ್ತ್ವಿಕದಲ್ಲಿ ಇರುವವನಲ್ಲವೆಂದು ತಿಳಿಯಬೇಕು.

ಒಂದು ವಿಷಯವನ್ನು ಕೇಳುತ್ತಿರುವಾಗ ಮನಸ್ಸೆಲ್ಲೋ ಇದ್ದಂತಾದರೆ ಆ ವಿಷಯ ತಲೆಗೇರದಂತೆ, ಒಂದು ಗುಣದಲ್ಲಿರುವ ಜೀವಿಯ ಶ್ರದ್ಧೆ ಮತ್ತೆಲ್ಲೋ ಇದ್ದಂತಾದರೆ ಜೀವಾತ್ಮ ಅಲ್ಲಿ ಇಲ್ಲದಂತೆ ಲೆಕ್ಕಿಸಲಾಗುತ್ತದೆ. ಎಲ್ಲಿ ಶ್ರದ್ಧೆ ಇದೆಯೋ ಅಲ್ಲಿಯೇ ಇರುವಂತೆ ಲೆಕ್ಕಿಸಬೇಕು. ಮತ್ತೊಂದು ಉದಾಹರಣೆ ತೆಗೆದುಕೊಳ್ಳೋಣ. ಜ್ಞಾನವನ್ನು ಸಂಪೂರ್ಣವಾಗಿ ತಿಳಿದವನು ಗುಣಗಳಲ್ಲಿ ಶ್ರದ್ಧೆ ಇಲ್ಲದವನಾಗಿ, ಗುಣವಿಲ್ಲದ ಅದರಲ್ಲಿ ಶ್ರದ್ಧೆ ಹೊಂದಿದ್ದಾನೆಂದುಕೊಳ್ಳೋಣ. ಆದರೆ ಅವನ ಪೂರ್ವಜನ್ಮ ಕರ್ಮದ ಪ್ರಕಾರ ಆ ಜೀವಾತ್ಮ ಬಲವಂತವಾಗಿ ರಾಜಸ ಗುಣಭಾಗದಲ್ಲಿ ಸಿಲುಕಿ ಅದರಲ್ಲಿನ ಗುಣಗಳ ಆಚರಣೆ ಮಾಡಬೇಕಾಗಿ ಬಂದಾಗ ಅವನ ಮೂಲಕ ನಡೆಯುವ ಕೆಲಸಗಳು ರಾಜಸ ಗುಣಗಳಲ್ಲಿರುವವಾದರೂ ಅವನನ್ನು ರಾಜಸ ಅನ್ನಬಾರದು. ಅವನಿಗಿರುವ ಶ್ರದ್ಧೆಯನ್ನನುಸರಿಸಿ ಗುಣಾತೀತನೆಂದು ಹೇಳಬಹುದು. ಶ್ರದ್ಧೆಯನ್ನನುಸರಿಸಿ ಅವನ ಸ್ಥಾನವನ್ನು ನಿರ್ಣಯಿಸಲಾಗುತ್ತದೆನ್ನುವುದೇ ಈ ಶ್ಲೋಕದಲ್ಲಿನ ಮುಖ್ಯಸೂತ್ರ. ಗುಣ ಭಾಗಗಳನ್ನನುಸರಿಸಿ

ಶ್ರದ್ಧೆ ಮೂರು ವಿಧಗಳಾದರು, ಗುಣಾತೀತ ಭಾಗವನ್ನನುಸರಿಸಿ ಸಹ ಶ್ರದ್ಧೆ ಇದೆ. ಮೂರು ಗುಣಗಳ ಶ್ರದ್ಧೆಯನ್ನನುಸರಿಸಿ ತಾಮಸರು, ರಾಜಸರು, ಸಾತ್ತ್ವಿಕರಲ್ಲದೆ ಗುಣಾತೀತ ಭಾಗವನ್ನನುಸರಿಸಿ ಯೋಗಿಗಳೂ ಸಹ ಇದ್ದಾರೆ. **'ಚಾತುರ್ವರ್ಣ್ಯಂ'** ಎನ್ನುವ ಶ್ಲೋಕದಲ್ಲಿ ಹೇಳಿದಂತೆ ನಾಲ್ಕು ಶ್ರದ್ಧೆಗಳೂ ಸಹ ಇವೆಯೆಂದು ತಿಳಿಯಬೇಕು.

**(16) ಶ್ಲೋ॥ 4 : ಯಜನ್ತೇ ಸಾತ್ತ್ವಿಕಾ ದೇವಾನ್ ಯಕ್ಷರಕ್ಷಾಂಸಿ ರಾಜಸಾಃ ।**
**ಪ್ರೇತಾನ್ ಭೂತಗಣಾಂ ಶ್ಚಾನ್ಯೇ ಯಜನ್ತೇ ತಾಮಸಾ ಜನಾಃ ॥**

**(ಗುಣಗಳು)**

**ಭಾವಾರ್ಥ :** ಸಾತ್ತ್ವಿಕಗುಣ ಇರುವವರು ದೇವತೆಗಳನ್ನು ಆರಾಧಿಸುತ್ತಾರೆ. ರಾಜಸರು ಯಕ್ಷರನ್ನು ರಾಕ್ಷಸರನ್ನು, ತಾಮಸರು ಪ್ರೇತಗಳನ್ನು ಭೂತಗಳನ್ನು ಪೂಜೆ ಮಾಡುತ್ತಾರೆ.

**ವಿವರ :** ಸಾತ್ತ್ವಿಕ ಶ್ರದ್ಧೆ ಇರುವ ಜೀವಿಗಳು ದೇವತೆಗಳನ್ನು ಆರಾಧಿಸುತ್ತಾರೆ. ರಾಜಸಶ್ರದ್ಧೆ ಇರುವವರು ದೇವತೆಗಳಿಗಿಂತ ಕಡಿಮೆಯಾದ ಯಕ್ಷ ರಾಕ್ಷಸರನ್ನು ಪೂಜಿಸುತ್ತಾರೆ. ತಾಮಸ ಶ್ರದ್ಧೆ ಇರುವವರು ಪ್ರೇತಗಳನ್ನು, ದೆವ್ವಗಳನ್ನು ಪೂಜಿಸುತ್ತಾರೆ.

**(16) ಶ್ಲೋ॥ 5 : ಅಶಾಸ್ತ್ರವಿಹಿತಂ ಘೋರಂ ತಪ್ಯನ್ತೇಯೇ ತಪೋಜನಾಃ ।**
**ದಮ್ಭಾಹಂಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ ॥**

**(ಗುಣಗಳು)**

**(16) ಶ್ಲೋ॥ 6 : ಕರ್ಶಯನ್ತ ಶ್ಶರೀರಸ್ಥಂ ಭೂತ ಗ್ರಾಮ ಮಚೇತಸಃ ।**
**ಮಾಂ ಚೈವಾನ್ತ ಶ್ಶರೀರಸ್ಥಂ ತಾನ್ ವಿದ್ಧ್ಯಾಸುರ ನಿಶ್ಚಯಾನ್ ॥**

**(ಗುಣಗಳು)**

**ಭಾವಾರ್ಥ :** ಯಾವ ಮನುಜರು ಅಹಂಕಾರ, ಗರ್ವದಿಂದ ಕೂಡಿದವರಾಗಿ, ಆಸೆ, ಪ್ರೇಮ ಗುಣಗಳ ಬಲ ಹೊಂದಿದವರಾಗಿ, ಇತರರನ್ನು ತೊಂದರೆ ಕೊಡುವವರಾಗಿ, ಅಶಾಸ್ತ್ರಪದ್ಧತಿಯಲ್ಲಿ ತಪಗಳು ಮಾಡುವವರಾಗಿ, ಅಜ್ಞಾನಿಗಳಾಗಿ ಶರೀರದಲ್ಲಿನ ಇಂದ್ರಿಯಗಳನ್ನು ಅವುಗಳೊಳಗಿರುವ ಆತ್ಮವಾದ ನನ್ನನ್ನು ಹಿಂಸೆ ಮಾಡುತ್ತಿದ್ದಾರೋ, ಅಂತಹವರು ಅಸುರರೆಂದು ತಿಳಿಯಿರಿ.

**ವಿವರ :** ಕೆಲವರು ಕೋರಿಕೆಗಳೇ ಮುಖ್ಯ ಆಶಯವಾಗಿಟ್ಟುಕೊಂಡು, ಅವು ನೆರವೇರುವುದಕ್ಕೆ ಕೆಲವು ನಿಯಮಗಳಿಂದ ಕೂಡಿದ ತಪಸ್ಸುಗಳನ್ನು ಸಹ ಮಾಡುತ್ತಾರೆ. ಶರೀರ ಕಷ್ಟದಿಂದ ಕೂಡಿಕೊಂಡ ಆರಾಧನೆಗಳನ್ನು ತಪಸ್ಸುಗಳೆನ್ನುತ್ತೇವೆ. ಶರೀರವನ್ನು ತಪಿಸುವಂತೆ ಮಾಡುವ

ನಿಯಮಗಳಿಂದ ಕೂಡಿದ ಆರಾಧನೆಗಳು, ಇತರರಿಗೂ ಸಹ ತೊಂದರೆ ಉಂಟುಮಾಡುವ ವಾಗಿರುತ್ತವೆ. ಉದಾಹರಣೆಗೆ ಮನೆ ಎಲ್ಲವೂ ಶುಭ್ರಮಾಡಿ ಬೊಟ್ಟು ಇಟ್ಟು ಮನೆಯಲ್ಲಿರು ವವರೆಲ್ಲರೂ ಒಂದೇ ಆಹಾರ ತಿಂದು ಹೊರಗಿನ ಕೆಲಸಗಳಿಗೆ ಹೋಗದಂತೆ ಮನೆಯಲ್ಲಿಯೇ ಇರುವಾಗ, ಆ ಮನೆಯಲ್ಲಿ ಒಬ್ಬನು ಪೂಜೆ ಪ್ರಾರಂಭಿಸುತ್ತಾನೆ. ಆ ಪೂಜೆ ಮಾಡುವವರೆಗೂ ಮನೆಯೊಳಗಿರುವವರು ಹೊರಗೆ, ಹೊರಗಿನವರು ಮನೆಯೊಳಗೆ ಬರಬಾರದು, ಪೂಜೆಮಾಡುವವನು ತನ್ನ ಮಂತ್ರ ಹತ್ತುಸಾವಿರ ಜಪ ಮುಗಿಯುವವರೆಗೂ ಮೇಲೇಳಬಾರದು, ಆಹಾರ ತೆಗೆದುಕೊಳ್ಳಬಾರದು. ಇಂತಹ ನಿಯಮವಿರುವ ಪೂಜೆ ಪ್ರಾರಂಭಮಾಡಿದ್ದಾರೆಂದುಕೊಳ್ಳಿ. ಮಲಮೂತ್ರಾದಿಗಳು ಬರುತ್ತಿದ್ದರು ಅವುಗಳ ವಿಸರ್ಜನೆಗೋಸ್ಕರ ಹೊರಗೆ ಹೋಗಬಾರದು. ಹೊದಂತಾದರು ನಿಯಮ ಉಲ್ಲಂಘಿಸಿದಂತಾಗುತ್ತದೆ. ಈ ನಿಯಮದಿಂದ ಮನೆಯಲ್ಲಿರುವವರು ಸಹ ಬಾಧೆ ಪಡಬೇಕಾಗಿದೆ. ಹಾಗೆಯೇ ಪೂಜೆ ಮಾಡುವವನು ಮಂತ್ರ ಹತ್ತುಸಾವಿರ ಆಗುವವರೆಗೂ ಏಳಬಾರದು. ಆ ನಿಯಮದ ಪ್ರಕಾರ ಕುಳಿತುಕೊಂಡವನಿಗೆ ಕಾಲು ನೋವು ಬಂದರೂ ಕದಲಬಾರದೆನ್ನುವುದರಿಂದ ಅವನ ಇಂದ್ರಿಯಗಳಿಗೆ ಕಷ್ಟ ಏರ್ಪಟ್ಟಿದೆ. ಅದರಲ್ಲಿನ ಚೈತನ್ಯವಾಗಿರುವ ಆತ್ಮಕ್ಕು ಸಹ ಆಹಾರ ಬಲವಿಲ್ಲದೆ ಶಕ್ತಿ ಬಲಹೀನವಾಗಿದೆ. ಕದಲದಂತಿರುವುದರಿಂದ ನರಗಳಲ್ಲಿ ಹಾನಿ ಏರ್ಪಟ್ಟು ಶಕ್ತಿ ಪ್ರಸಾರವಾಗುವುದಕ್ಕೆ ಆತಂಕ ಏರ್ಪಡುತ್ತಿದೆ. ಇಂತಹ ತಪನೆಯಿಂದ ಕೂಡಿಕೊಂಡ ಆಚರಣೆಗಳು ಮಾಡುವವರು ಶರೀರದಲ್ಲಿನ ಇಂದ್ರಿಯುಗಳನ್ನು, ಅದರಲ್ಲಿನ ದೈವವಾದ ಆತ್ಮವನ್ನು ಕಷ್ಟ ಕೊಡುವವರಾಗುವುದರಿಂದ ಅವರನ್ನು ರಾಕ್ಷಸಾಂಶ ಇರುವವರೆಂದು ಹೇಳಬಹುದು.

**(16) ಶ್ಲೋ॥ 7 : ಆಹಾರ ಸ್ತ್ವಪಿ ಸರ್ವಸ್ಯ ತ್ರಿವಿಧೋ ಭವತಿ ಪ್ರಿಯಃ ।**
**ಯಜ್ಞ ಸ್ತಪ ಸ್ತಥಾ ದಾನಂ ತೇಷಾಂ ಭೇದ ಮಿಮಂ ಶೃಣು ॥**

**(ಗುಣಗಳು)**

**ಭಾವಾರ್ಥ** : ಸರ್ವ ಜೀವರಾಶಿಗಳು ತೆಗೆದುಕೊಳ್ಳುವ ಆಹಾರವೂ ಸಹ ಮೂರು ಶ್ರದ್ಧೆಗಳಾಗಿದೆ. ಹಾಗೆ ತ್ರಿ ಶ್ರದ್ಧೆಗಳಾಗಿ ಯಜ್ಞ, ತಪಸ್ಸು, ದಾನ ಮೊದಲಾದವು ಇವೆ. ಅವುಗಳ ಭೇದಗಳನ್ನು ವಿವರಿಸುತ್ತೇನೆ ಕೇಳು.

**ವಿವರ** : ಮನುಷ್ಯ ತಿನ್ನುವ ಆಹಾರದಲ್ಲಿಯೇ ಅಲ್ಲದೆ ಮಾಡುವ ಕೆಲಸದಲ್ಲಿಯೂ ಹಾಗೇ ಆರಾಧನೆಯಲ್ಲಿಯೂ ಮೊದಲಾದ ಎಲ್ಲದರಲ್ಲಿಯೂ ಶ್ರದ್ಧೆ ಮೂರು ವಿಧಗಳಾಗಿದೆಯೆಂದು ಹೇಳಬಹುದು. ಮಾಡುತ್ತಿರುವ ಕೆಲಸ ಯಾವ ಗುಣದಾಗಿದ್ದರೂ ಶ್ರದ್ಧೆಯನ್ನನುಸರಿಸಿ

ಲೆಕ್ಕಿಸಲಾಗುತ್ತದೆಂದು ಹೇಳಿದ್ದೇವಲ್ಲವೆ! ಆ ಮೂರು ಗುಣಭಾಗಗಳ ಶ್ರದ್ದೆಗಳನ್ನು ಇಲ್ಲಿ ತಿಳಿಸುತ್ತಿದ್ದಾನೆ. ಮೊದಲು ಆಹಾರವನ್ನು ಕುರಿತು ತಿಳಿಸುತ್ತಿದ್ದಾನೆ ನೋಡಿರಿ.

**(16) ಶ್ಲೋ॥ 8 : ಆಯುಃಸತ್ತ್ವ ಬಲಾರೋಗ್ಯ ಸುಖ ಪ್ರೀತಿ ವಿವರ್ಧನಾಃ ।**
**ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ತ್ವಿಕ ಪ್ರಿಯಾಃ ॥**

**(ಸಾತ್ತ್ವಿಕಶ್ರದ್ಧೆ)**

**ಭಾವಾರ್ಥ** : ಆಯುಸ್ಸನ್ನು, ಶರೀರ ಉಲ್ಲಾಸ, ಬಲ, ಆರೋಗ್ಯ, ಉಂಟುಮಾಡುವವು, ನೋಡುವುದಕ್ಕೆ ಅಂದವಾಗಿಯೂ, ಪ್ರೀತಿಯನ್ನು ವೃದ್ಧಿಮಾಡುವ ರಸವತ್ತರವಾದವುಗಳು, ಎಣ್ಣೆ ಪದಾರ್ಥಗಳು ಇರುವವು, ದೀರ್ಘಕಾಲ ಇದ್ದರೂ ಕೆಡದ ಆಹಾರ ಪದಾರ್ಥಗಳ ಮೇಲೆ ಸಾತ್ತ್ವಿಕರಿಗೆ ಪ್ರೀತಿ ಇರುತ್ತದೆ.

**ವಿವರ** : ಆಹಾರದ ಮೇಲೆ ಶ್ರದ್ಧೆ ಯಾವ ಯಾವ ಗುಣಗಳಲ್ಲಿ ಹೇಗಿರುತ್ತದೋ ಇಲ್ಲಿ ವಿವರಿಸಲಾಗುತ್ತದೆ. ಮೊದಲು ಆಹಾರ ಎಂದರೆ ಏನೋ ತಿಳಿದುಕೊಳ್ಳೋಣ. ನಾವು ಬಾಯಿ ಮೂಲಕ ಒಳಗೆ ಹಾಕುವವೆಲ್ಲವೂ ಆಹಾರ ಅಲ್ಲ. ಬಾಯಿ ಮೂಲಕ ಹೊಟ್ಟೆಯೊಳಗೆ ಹೋಗುವ ಎಲ್ಲವೂ ಆಹಾರ ಅಲ್ಲವೆಂದು ಬಹಳಜನರಿಗೆ ತಿಳಿದಿಲ್ಲ. ಬಾಯಿ ಮೂಲಕ ಹೊಟ್ಟೆಯೊಳಗೆ ಹೋಗುವವುಗಳಲ್ಲಿ ಆಹಾರಪದಾರ್ಥಗಳೆಂದು, ಆಹಾರಪದಾರ್ಥಗಳು ಅಲ್ಲದಿರುವವೆಂದು ಎರಡು ವಿಧಗಳಾದ ಪದಾರ್ಥಗಳು ಇವೆ. ಶರೀರಕ್ಕೆ ಉಪಯೋಗಪಟ್ಟು, ಶರೀರ ಆರೋಗ್ಯವನ್ನು ಕಾಪಾಡುತ್ತಾ ಶರೀರ ಪೋಷಣೆಗೆ ಉಪಯೋಗಪಡುವ ಪೋಷಕ ಪದಾರ್ಥಗಳಿರುವವುಗಳನ್ನು ಆಹಾರ ಎನ್ನಬಹುದು. ಬಾಯಿ ಮೂಲಕ ತೆಗೆದುಕೊಳ್ಳುತ್ತಿದ್ದರು ಶರೀರ ಪೋಷಣೆಗೆ ಉಪಯೋಗಪಡದೆ ನೇರವಾಗಿ ಮೆದುಳಿನ ಮೇಲೆ ಕೆಲಸಮಾಡಿ ಮಾನಸಿಕ ಸುಖವನ್ನು ಉಂಟುಮಾಡುವ ಮತ್ತಿನ ಪದಾರ್ಥಗಳನ್ನು ಆಹಾರ ಪದಾರ್ಥಗಳೆನ್ನುವುದಿಲ್ಲ. ಅಂತಹ ಮಾದಕ ಪದಾರ್ಥಗಳಾದ ಗಂಜಾಯಿ, ಕಪ್ಪು ಔಷಧ, ಸಾರಾಯಿ, ಬ್ರಾಂದಿಗಳು ಮೊದಲುಗೊಂಡು ಇರುವ ಪ್ರತಿಯೊಂದು ಆಹಾರ ಪದಾರ್ಥದ ಗುಂಪಿಗೆ ಸೇರುವುದಿಲ್ಲ. ಶರೀರ ಪೋಷಣೆ ನಿಮಿತ್ತ ಪೋಷಕ ಪದಾರ್ಥಗಳಿರುವ ಅವುಗಳನ್ನೇ ಆಹಾರವಾಗಿ ಪರಿಗಣಿಸಬಹುದು. ಆಹಾರ ಪದಾರ್ಥ ತೆಗೆದುಕೊಳ್ಳುವುದರಲ್ಲಿ ಆಹಾರವಾದ ಯಾವ ಪದಾರ್ಥವಾದರೂ ಅಭ್ಯಂತರವಿಲ್ಲ. ಆದರೆ ಆಹಾರ ಪದಾರ್ಥಗಳು ಅಲ್ಲದ ಮಾದಕ ಪದಾರ್ಥಗಳು ತೆಗೆದುಕೊಳ್ಳುವುದು ಒಳ್ಳೆಯದಲ್ಲ. ಇಲ್ಲಿ ಕೆಲವರಿಗೊಂದು ಪ್ರಶ್ನೆ ಬರಬಹುದು. ಅದೇನೆಂದರೆ **'ಆಹಾರ ಪದಾರ್ಥಗಳಲ್ಲಿ ಮುಖ್ಯವಾಗಿ ಶಾಖಾಹಾರ, ಮಾಂಸಾಹಾರ ಎನ್ನುವ ಎರಡು ವಿಧಗಳಾಗಿವೆ ಅಲ್ಲವೆ! ಅವುಗಳಲ್ಲಿ ಶಾಖಾಹಾರ ಒಳ್ಳೆಯದು,**

**ಮಾಂಸಹಾರ ಕೆಟ್ಟದೆನ್ನುತ್ತಾ ಮಾಂಸಾಹಾರವನ್ನು ಬಿಡಬೇಕೆನ್ನುತ್ತಾರೆ ಮಾಂಸಾಹಾರದಿಂದ ಕೆಟ್ಟ ಗುಣಗಳು ಬರುತ್ತವೆಂದು ಹೇಳುತ್ತಾರೆ ಅದು ನಿಜವೇನಾ?"** ಈ ಪ್ರಶ್ನೆಗಳಿಗೆ ಉತ್ತರ ಏನೆಂದರೆ! ಆಹಾರ ಪದಾರ್ಥಗಳಲ್ಲಿ ಶರೀರಕ್ಕೆ ಉಪಯೋಗಪಡುವವು, ಮಾನಸಿಕವಾಗಿ ಕೆಲಸಮಾಡುವವೆಂದು ಎರಡು ವಿಧಗಳು ಇವೆ. ಆದರೆ ಶರೀರಕ್ಕೆ ಉಪಯೋಗಪಡುವ ಆಹಾರದಲ್ಲಿ ಇವು ತಿನ್ನಬಹುದು ಇವು ತಿನ್ನಬಾರದು ಎಂಬ ನಿಯಮಗಳಿರುವವು ಯಾವುವು ಇಲ್ಲ. ಮಾನಸಿಕ ಬದಲಾವಣೆ ಉಂಟುಮಾಡುವ ಮಾದಕ ಪದಾರ್ಥಗಳು ಹೊರತು ತಿನ್ನಬಾರದಂತವುಗಳು ಯಾವವು ಇಲ್ಲ. ಆಹಾರ ಸಂಪಾದಿಸಿಕೊಳ್ಳುವುದರಲ್ಲಿ ಪಾಪಪುಣ್ಯಗಳು ಬರಬಹುದಾಗಲಿ ತಿನ್ನುವುದರಲ್ಲಿ ಏನೂ ಇಲ್ಲ. ಆಹಾರದಿಂದ ಗುಣಗಳು ಬದಲಾಗುತ್ತವೆಂದು ಬಹಳ ಜನರು ಹೇಳಿದಾಗ ಕೇಳಿಯೂ, ಬಹಳ ಪುಸ್ತಕಗಳಲ್ಲಿ ಬರೆದಿರುವುದು ನೋಡಿದ್ದೇವೆ. ಯಾವ ಆಧಾರದಿಂದ ಹಾಗೆ ಬರೆದಿದ್ದಾರೋ ಅವರಿಗೇ ತಿಳಿಯದು. ಆಹಾರದಿಂದ ಗುಣಗಳು ಬದಲಾಗುವುದಾದರೆ ಜ್ಞಾನ ಬೋಧನೆಯ ಅವಶ್ಯಕತೆಯೇ ಇಲ್ಲ. ಎಲ್ಲರಿಗೂ ಒಳ್ಳೆಯ ಆಹಾರ ಇಟ್ಟು ಒಳ್ಳೆಯವರನ್ನಾಗಿ ಬದಲಾಯಿಸಬಹುದು. ಯಾವ ಆಹಾರ ತಿಂದರೂ ಅವರ ಶರೀರಕ್ಕೇ ಆಗಲಿ ಗುಣಗಳಿಗೆ ಆಧಾರವಲ್ಲ. ಗುಣಗಳಿಗೆ ಕಾರಣವಾದುದು ಹಿಂದಿನ ಜನ್ಮದ ಕರ್ಮವೇ. ಸೈನ್ಯದಲ್ಲಿ ಮೂನ್ನೂರು ಜನರಿಗೆ ಒಂದು ಕಡೆ ಒಂದೇ ಆಹಾರವನ್ನು ಕೊಡುವುದು ನಡೆಯುತ್ತಿದೆ. ಒಂದೇ ಆಹಾರವನ್ನು ತಿನ್ನುತ್ತಿರುವ ಮುನ್ನೂರು ಜನರಿಗೂ ಒಂದೇ ಗುಣವಿದೆಯಾ? ಎಂದು ನೋಡಿದ ಪಕ್ಷದಲ್ಲಿ ಹಾಗೆ ಯಾರಿಗೂ ಇಲ್ಲ. ಅವರಲ್ಲಿ ಒಬ್ಬೊಬ್ಬರು ಒಂದೊಂದು ಗುಣ ಹೊಂದಿದ್ದಾರೆ. ಆದ್ದರಿಂದ ಆಹಾರ ಗುಣಗಳನ್ನು ಬದಲಾಯಿಸುವುದಿಲ್ಲವೆಂದು ರುಜುವಾಗುತ್ತಿದೆ. ಇಲ್ಲಿ ಗೀತೆಯಲ್ಲಿ ಈ ಅಧ್ಯಾಯದಲ್ಲಿ ಗುಣಗಳನ್ನನುಸರಿಸಿ ಆಹಾರ ಇದೆಯೆಂದು ಹೇಳಿದ್ದಾನೆ, ಆದರೆ ಆಹಾರವನ್ನನುಸರಿಸಿ ಗುಣಗಳಿರುವಂತೆ ಹೇಳಲಿಲ್ಲವೆಂದು ಮುಖ್ಯವಾಗಿ ತಿಳಿಯಬೇಕು.

ಇಲ್ಲಿ ಮಾಂಸಾಹಾರವನ್ನು ವಿವರಿಸಿಕೊಂಡು ನೋಡಿದಂತಾದರೆ ಶರೀರ ಬೆಳೆವಣಿಗೆಗೆ ಮಾಂಸಕೃತುಗಳು ಎಂಬ ಪೋಷಕ ಪದಾರ್ಥಗಳು ಅಗತ್ಯ. ಮಾಂಸಕೃತುಗಳು (protiens) ಎನ್ನುವ ಪೋಷಕ ಪದಾರ್ಥಗಳು ಸಾಂಬಾರಿನ ಧಾನ್ಯಗಳಾದ ತೊಗರಿ, ಹೆಸರುಬೇಳೆ ಮೊದಲಾದ ಧಾನ್ಯಗಳಲ್ಲಿಯೂ ಪ್ರಾಣಿಗಳ ಮಾಂಸದಲ್ಲಿಯೂ ಇವೆ. ಧಾನ್ಯದಲ್ಲಿನ ಮಾಂಸಕೃತುಗಳು ಶರೀರಕ್ಕೆ ಹೇಗೆ ಉಪಯೋಗಪಡುತ್ತಿವೆಯೋ, ಹಾಗೆ ಪ್ರಾಣಿಗಳ ಮಾಂಸದಲ್ಲಿನ ಮಾಂಸಕೃತುಗಳು ಉಪಯೋಗಪಡುತ್ತಿವೆ. ಶರೀರದಲ್ಲಿ ಅವು ಒಳ್ಳೆಯದು ಇವು ಕೆಟ್ಟದ್ದು ಏನು ಮಾಡುವುದಿಲ್ಲ ಎಂದು ಮೊದಲೇ ಹೇಳಿದ್ದೇವೆ. ಆಹಾರ ಸಂಪಾದಿಸಿ ಕೊಳ್ಳುವುದರಲ್ಲಿ ಪಾಪ ಬರಬಹುದು, ಆದರೆ ಆಹಾರ ತಿನ್ನುವುದರಿಂದ ಶರೀರದಲ್ಲಿ

ಪಾಪ ಬರುವುದಾಗಲಿ, ಗುಣಗಳು ಬದಲಾಗುವುದಾಗಲಿ ನಡೆಯುವುದಿಲ್ಲ. ಆಹಾರದಲ್ಲಿ ಶಾಖಾಹಾರವಾದರೂ ಮಾಂಸಾಹಾರವಾದರೂ ಒಂದೇ. ಆಹಾರ ಶರೀರ ಆರೋಗ್ಯ ಅನಾರೋಗ್ಯ ಸಮಸ್ಯಗಳಿಗೆ ಸಂಬಂಧಿಸಿರುವುದು, ಆದರೆ ಗುಣಗಳ ವೃತ್ತಿ ನಿವೃತ್ತಿಗೆ ಸಂಬಂಧಿಸಿರುವುದು ಅಲ್ಲ. ಆಹಾರವೇ ಗುಣಗಳ ವೃತ್ತಿ ನಿವೃತ್ತಿಗೆ ಸಂಬಂಧಿಸಿರುವುದಾದರೆ ನಮಗೆ ಜ್ಞಾನ ಯೋಗಸಾಧನೆ ಅಗತ್ಯವೇ ಇಲ್ಲವಲ್ಲ! ಆಹಾರದಿಂದಲೇ ಗುಣಗಳನ್ನು ಇಲ್ಲದಂತೆ ಮಾಡಿಕೊಂಡು ಪರಮಾತ್ಮನನ್ನು ಹೊಂದಬಹುದಲ್ಲವೆ! ಹಾಗೆ ಎಂದಿಗೂ ಸಾಧ್ಯವಾಗುವುದಿಲ್ಲ ಆದ್ದರಿಂದಲೇ ಯೋಗ ಸಾಧನೆಗೆ ಜ್ಞಾನ ಅಗತ್ಯವಾಗಿದೆ. ಆಹಾರದಿಂದ ಗುಣಗಳಲ್ಲಿ ಬದಲಾವಣೆ ಬರುತ್ತದೆಂದು ದೊಡ್ಡ ಸ್ವಾಮಿಗಳು, ಗುರುಗಳು ಹೇಳುವುದು ವಿಚಾರಕರ. ಅಷ್ಟೇ ಅಲ್ಲದೆ ಆಹಾರ ಒಳ್ಳೆಯದಾದರೂ, ಇಡುವವರಲ್ಲಿ ಗುಣಗಳು ಒಳ್ಳೆಯವಾಗದ ಪಕ್ಷದಲ್ಲಿ ಅವರು ಇಟ್ಟಿರುವ ಆಹಾರ ತಿನ್ನುವುದರಿಂದ, ತಿನ್ನುವವರಿಗೂ ಸಹಿತ ಕೆಟ್ಟ ಗುಣಗಳು ಬರುತ್ತವೆನ್ನುವುದು ಮತ್ತಷ್ಟು ವಿಚಿತ್ರ. ಇಟ್ಟವರು ಎಂತಹವರಾದರೂ ಆಹಾರದಲ್ಲಿ ಯಾವ ಪ್ರಭಾವ ಇರುವುದಿಲ್ಲ. ಇಟ್ಟವನಿಗೂ, ಆಹಾರಕ್ಕೂ ಯಾವ ಸಂಬಂಧವಿಲ್ಲ. ಯಾರು ಇಟ್ಟರು ಅದು ಸಾಧಾರಣ ಆಹಾರವಾಗಿಯೇ ಇರುತ್ತದೆ. ತಪ್ಪು ಮಾಡಿದವನು ತನ್ನ ತಪ್ಪನ್ನು ಅನ್ನ ಇಟ್ಟವರ ಮೇಲೆ ಹಾಕುವ ದ್ರೋಹ ಬುದ್ಧಿಯಿಂದ ಕೆಲವರು ಹಾಗೆ ಕಥೆಗಳನ್ನು ಎಣೆದು ಇಟ್ಟಿದ್ದಾರೆ. ಹಾಗಾದರೆ ತಪ್ಪುಮಾಡಿದ ಪ್ರತಿಯೊಬ್ಬನು ಅನ್ನ ಇಟ್ಟವರ ಮೇಲೆ ತಮ್ಮ ತಪ್ಪನ್ನು ಹಾಕುತ್ತಾನೆ. ಇದು ಒಳ್ಳೆಯದೇನಾ ನೀವೆ ಯೋಚಿಸಿರಿ.

ಜಿಂಕೆ ಹುಲ್ಲನ್ನು ಮೇಯುತ್ತದೆ. ಆದರೆ ಕ್ರೂರ ಪ್ರಾಣಿ ಅಲ್ಲ. ಹುಲಿ ಮಾಂಸ ತಿನ್ನುತ್ತದೆ ಆದ್ದರಿಂದ ಕ್ರೂರ ಪ್ರಾಣಿಯಾಗಿ ತಯಾರಾಗಿದೆ ಎಂದು ಕೆಲವರು ಉಪಮಾನ ಹೇಳಬಹುದು. ಜಿಂಕೆ ಜನ್ಮತಃ ಸಾಧುಪ್ರಾಣಿ. ಹುಲಿ ಜನ್ಮತಃ ಕ್ರೂರಪ್ರಾಣಿ. ಅವುಗಳ ಸಾಧುತ್ವ ಕ್ರೂರತ್ವ ಸಹಜವಾಗಿ ಅವುಗಳೊಂದಿಗೆ ಹುಟ್ಟಿರುವುದೇ ಆಗಲಿ ಮಾಂಸ, ಹುಲ್ಲು ತಿನ್ನುವುದರಿಂದ ಮಧ್ಯದಲ್ಲಿ ಬಂದಿರುವವು ಅಲ್ಲ. ಶರೀರ ಪೋಷಣೆಗೆ ಯಾರಿಗೆ ಲಭ್ಯವಾದ ಆಹಾರವನ್ನು ಅವರು ತಿನ್ನಬಹುದು. ತಿಂದಂತಹ ಆಹಾರ ಶರೀರಕ್ಕೆ ಉಪಯೋಗಪಡುತ್ತದಾಗಲಿ ಗುಣಗಳನ್ನು ಬದಲಾಯಿಸುವುದಿಲ್ಲ. ಸಾರಾಯಿ ಕುಡಿದವನು ಮತ್ತೊಂದು ವಿಧವಾಗಿ ಬದಲಾಗುತ್ತಿದ್ದಾನೆ ಅಲ್ಲವೆ! ಅದು ಅವನು ತೆಗೆದುಕೊಂಡ ಸಾರಾಯಿಂದಲೇ ಅಲ್ಲವೆ ಬದಲಾಗಿರುವುದೆಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರ ಮೊದಲೆ ಹೇಳಿಕೊಂಡಿದ್ದೇವೆ, ಸಾರಾಯಿ ಆಹಾರ ಅಲ್ಲವೆಂದು, ಮತ್ತು ಪಾನೀಯವೆಂದು, ಮತ್ತನ್ನು ಉಂಟುಮಾಡುವ ಯಾವ ಪದಾರ್ಥವಾದರು ಅವನ ಮಾನಸಿಕ ಪ್ರವೃತ್ತಿಯನ್ನು ತಾತ್ಕಾಲಿಕವಾಗಿ ಬದಲಾಯಿಸುತ್ತದೆ. ಅವನಲ್ಲಿ ಅಡಗಿರುವುದನ್ನು ಪಾನೀಯ ಹೊರಗೆ

ಇಡುತ್ತದೆ, ಆದರೆ ಇಲ್ಲದಿರುವುದನ್ನು ಕಲ್ಪಿಸುವುದಿಲ್ಲ. ಒಳ್ಳೆಯವನಾಗಿ ಕಾಣಿಸುವ ಅವನ ನಿಜ ಸ್ವಭಾವ ಮತ್ತಿನಲ್ಲಿ ಹೊರ ಬೀಳಬಲ್ಲದು. ಒಳಗೆ ಅಡಗಿರುವ ವಿಷಯ ಹೊರಬೀಳುತ್ತದೆ. ಕೆಲವು ರಹಸ್ಯಗಳು ಸಹ ಆ ಸಮಯದಲ್ಲಿ ಹೊರಗೆ ಇಡುತ್ತಾರೆ. ನಶೆಯೇರಿದ ಸಮಯದಲ್ಲಿ ಮನಸ್ಸು ನಿಜವನ್ನು ಮುಚ್ಚಿಡುವ ಸ್ವಭಾವ ಕಳೆದುಕೊಳ್ಳುತ್ತದೆ. ಯಾವುದು ಏನಾದರೂ ಮತ್ತಿನ ಪದಾರ್ಥ ಆಹಾರ ಅಲ್ಲವಾದ್ದರಿಂದ ಅದು ಮಾನಸಿಕವಾಗಿ ಕೆಲಸ ಮಾಡುತ್ತದೆಂದು ಮೊದಲೇ ಹೇಳಿದ್ದೇವೆ. ಆಹಾರ ಶರೀರ ಬಲ ಅಬಲ, ಆರೋಗ್ಯ ಅನಾರೋಗ್ಯಗಳನ್ನು ನಿರ್ಣಯಿಸುವುದಾಗಿದೆ. ಮತ್ತಿನ ಪದಾರ್ಥ ಮಾನಸಿಕ ಬಲಾಬಲಗಳನ್ನು, ಗುಣವೃತ್ತಿ ಪ್ರವೃತ್ತಿಗಳನ್ನು ನಿರ್ಣಯಿಸುವುದಾಗಿದೆ. ಮತ್ತಿನ ಪಾನೀಯವಾದ ಸಾರಾಯಿ ಮಾನಸಿಕವಾಗಿ ಗುಣಗಳ ಪ್ರೇರಣೆ ಉಂಟುಮಾಡುವುದಾಗಿ ಮನೊಲ್ಲಾಸವನ್ನು ಉಂಟುಮಾಡುವು ದಾಗಿರುವಾಗ, ಗಾಂಜಾ ಎನ್ನುವ ಮತ್ತಿನ ಪದಾರ್ಥ ತಲೆಯಲ್ಲಿನ ಗುಣಗಳು ಕೆಲಸ ಮಾಡದಂತೆ ಸ್ತಬ್ಧತೆ ಉಂಟುಮಾಡುತ್ತದೆ. ಪ್ರಪಂಚದಲ್ಲಿ ಯಾವುದು ತನಗೆ ಸಂಬಂಧ ಇಲ್ಲದೆ ಯಾವ ಗುಣ ಕೆಲಸ ಮಾಡದೇ ಮತ್ತಿನಲ್ಲಿ ಜೀವಾತ್ಮವನ್ನು ಮುಳುಗಿಸಬಲ್ಲದು. ಆದ್ದರಿಂದ ಯಾವುದು ಆಹಾರ, ಯಾವುದು ಆಹಾರ ಅಲ್ಲವೆಂದು ಮೊದಲು ತಿಳಿಯುವುದು ನಮ್ಮ ಕರ್ತವ್ಯ.

ಆಹಾರವಾದಂತವುಗಳಲ್ಲಿ ಮಾಂಸಾಹಾರ ನಿಷೇಧ ಎನ್ನುವುದು ಒಳ್ಳೆಯದಲ್ಲ. ಅದರಿಂದ ಜ್ಞಾನ ಉಂಟಾಗುವುದಿಲ್ಲ ಎನ್ನುವುದು ಇನ್ನೂ ಒಳ್ಳೆಯದಲ್ಲ. ಕರ್ಮದಲ್ಲಿ ಮಾಂಸಾಹಾರವೇ ದೊರೆತಾಗ, ತಪ್ಪದೆ ತಿನ್ನಬೇಕಾಗಿ ಬಂದಾಗ, ನಾನು ತಿನ್ನುವುದಿಲ್ಲವೆಂದು ಕುಳಿತುಕೊಳ್ಳುವುದು ಸಾಧ್ಯವಾಗದು. ಯುದ್ಧ ಮಾಡುವುದಿಲ್ಲವೆಂದು ಅರ್ಜುನನು ಕುಳಿತುಕೊಂಡರೂ ಕರ್ಮದಲ್ಲಿ ನಿನ್ನ ಕೆಲಸ ನಿಲ್ಲುವುದಿಲ್ಲ ನಿನ್ನ ಕೈಯಿಂದಲೇ ನಡೆಯುತ್ತದೆ ಎನ್ನುವಂತೆ, ನಾನು ಈ ಆಹಾರವನ್ನು ತಿನ್ನುವುದಿಲ್ಲವೆಂದು ಕುಳಿತುಕೊಂಡರೂ ಕರ್ಮ ಇರುವಾಗ ಅವನೇ ತಿನ್ನುತ್ತಾನೆ. ಅಷ್ಟು ಮಾತ್ರಕ್ಕೆ ನಾನು ಜ್ಞಾನ ತಿಳಿಯುವುದಕ್ಕೆ ಕೆಲಸಕ್ಕೆ ಬರುವುದಿಲ್ಲವೆಂದು ತಿಳಿದುಕೊಳ್ಳಬಾರದು. ಕೆಲಸಕ್ಕೆ ಬರುವುದಿಲ್ಲವೆಂದು ಇತರರಿಗೂ ಸಹ ಹೇಳಬಾರದು. ಭಗವದ್ಗೀತೆಯಲ್ಲಿ ಆಹಾರಗಳನ್ನು ಕುರಿತು ಹೇಳುವಾಗ ಮಾಂಸಾಹಾರ ನಿಷೇಧವೆಂದು ಭಗವಂತನು ಎಲ್ಲೂ ಹೇಳಲಿಲ್ಲ. ಪ್ರತಿಯೊಂದನ್ನು ಜ್ಞಾನಪರವಾಗಿ ಯೋಚಿಸಬೇಕಾಗಲಿ ಅನ್ಯದಾ ಪರವಾಗಿ ಯೋಚಿಸಿ ಹೇಳಬಾರದು. ಇಲ್ಲಿಯೂ ಸಹ ಈ ಆಹಾರಗಳ ಮೇಲೆ ಈ ಗುಣಗಳಲ್ಲಿರುವವರಿಗೆ ಶ್ರದ್ಧೆ ಇರುತ್ತದೆಂದು ಹೇಳಿದ್ದಾನೆ ಹೊರತು ಇವು ತಿನ್ನುವುದರಿಂದ ಈ ಗುಣಗಳು ಅಭಿವೃದ್ಧಿ ಆಗುತ್ತವೆಂದು ಹೇಳಲಿಲ್ಲವೆಂದು ಗ್ರಹಿಸಬೇಕು.

ಇಲ್ಲಿ **ಅಹಾರವನ್ನನುಸರಿಸಿ ಗುಣಗಳು ಇಲ್ಲ, ಗುಣಗಳನ್ನನುಸರಿಸಿ ಅಹಾರವಿದೆ ಎಂಬುವುದೇ** ಸೂತ್ರ.

ಉದಾಹರಣೆಗೆ ಕರ್ಮದ ಪ್ರಕಾರ ಜೀವಾತ್ಮನು ತಾಮಸದಲ್ಲಿ ಇದ್ದರೂ, ಅಲ್ಲಿ ಪ್ರೇರಣೆಯಿಂದ ಆಯಾ ಗುಣಗಳಿಂದ ಲಭಿಸುವ ತಾಮಸ ಆಹಾರ ತಿಂದರೂ, ಅವನ ಶ್ರದ್ಧೆ ಸಾತ್ತ್ವಿಕದಲ್ಲಿದ್ದ ಪಕ್ಷದಲ್ಲಿ ಅವನನ್ನು ಜ್ಞಾನದ ಪ್ರಕಾರ ಸಾತ್ತ್ವಿಕನಾಗಿ ಲೆಕ್ಕಿಸಬೇಕೆಂದೂ ಸಹ ಹೇಳಿಕೊಂಡಿದ್ದೇವೆ. ಇಲ್ಲಿ ಈಗ ಹೇಳಿರುವ ಶ್ಲೋಕದಲ್ಲಿ ಸಾತ್ತ್ವಿಕ ಶ್ರದ್ಧೆ ಹೊಂದಿರುವವನಿಗಿರುವ ಆಹಾರ ಪ್ರೀತಿಯನ್ನು ಮಾತ್ರ ಹೇಳುತ್ತಿರುವಂತೆ ಗ್ರಹಿಸಬೇಕು. ಅದು ಅವನಿಗೆ ಲಭಿಸಬಹುದು ಲಭಿಸದಿರಬಹುದು. ಅದು ಕರ್ಮವನ್ನನುಸರಿಸಿ ಇರುತ್ತದೆ.

**(16) ಶ್ಲೋ॥ 9 : ಕಟ್ವಾಮ್ಲ ಲವಣಾತ್ಯುಷ್ಣ ತೀಕ್ಷ್ಣರೂಕ್ಷ ವಿದಾಹಿನಃ ।**
**ಆಹಾರಾ ರಾಜಸ ಸ್ಯೇಷ್ಟಾ ದುಃಖಶೋ ಕಾಮಯಪ್ರದಾಃ ॥**

**(ರಾಜಸಗುಣ ಶ್ರದ್ಧೆ)**

**ಭಾವಾರ್ಥ** : ಕಹಿ, ಹುಳಿ, ಉಪ್ಪು, ಕಾರ, ಬಿಸಿಯಾಗಿರುವ, ಸಾರವಿಲ್ಲದೆ ಒಣಗಿರುವವು, ದಾಹ ಉಂಟುಮಾಡುವವು, ತಿನ್ನುವುದರಲ್ಲಿ ಕಷ್ಟ, ತಿಂದ ನಂತರ ನೋವನ್ನುಂಟುಮಾಡುವ ಅನಾರೋಗ್ಯಕರ ಪದಾರ್ಥಗಳಲ್ಲಿ ರಜೋಗುಣ ಇರುವವರಿಗೆ ಶ್ರದ್ಧೆ ಇರುತ್ತದೆ.

**(16) ಶ್ಲೋ॥ 10 : ಯಾತ ಯಾಮಂ ಗತರಸಂ ಪೂತಿಪರ್ಯುಷಿತಂಚ ಯತ್ ।**
**ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಮ್ ॥**

**(ತಾಮಸ ಗುಣಶ್ರದ್ಧೆ)**

**ಭಾವಾರ್ಥ** : ಬೆಂದು ಬೇಯದಿರುವುದು, ರಸ ಹೋಗಿರುವುದು, ಕೆಟ್ಟುಹೋಗಿ ವಾಸನೆ ಬರುವುದು, ತಿಂದು ಬಿಟ್ಟಿರುವುದನ್ನು, ಪವಿತ್ರತೆ ಇಲ್ಲದಿರುವುದಾದ ಆಹಾರ ತಾಮಸರಿಗೆ ಪ್ರೀತಿಯಾಗಿರುತ್ತದೆ.

**(16) ಶ್ಲೋ॥ 11 : ಅಫಲಾಕಾಂಕ್ಷಿ ಭಿ ರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ ।**
**ಯಷ್ಟವ್ಯ ಮೇವೇತಿ ಮನಸ್ಸಮಾಧಾಯ ಸ ಸಾತ್ತ್ವಿಕಃ ॥**

**(ಸಾತ್ತ್ವಿಕ)**

**ಭಾವಾರ್ಥ** : ಫಲಿತದ ಮೇಲೆ ಕಾಂಕ್ಷೆ ಇಲ್ಲದೆ ಶಾಸ್ತ್ರವಿಧಿ ಪ್ರಮಾಣಗಳನ್ನು ಅನುಸರಿಸಿ ಯಜ್ಞ (ಪೂಜೆ) ಮಾಡಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿ, ಮಾಡುವ ಯಜ್ಞವನ್ನು ಸಾತ್ತ್ವಿಕ ಯಜ್ಞ ಎನ್ನುತ್ತೇವೆ.

**(16) ಶ್ಲೋ॥ 12 : ಅಭಿಸನ್ಧಾಯ ತು ಫಲಂ ದಂಭಾರ್ಥ ಮಪಿಚೈವ ಯತ್ ।**
**ಇಜ್ಯತೇ ಭರತಶ್ರೇಷ್ಠ! ತಂ ಯಜ್ಞಂ ವಿದ್ಧಿ ರಾಜಸಮ್ ॥**

**(ರಾಜಸ)**

**ಭಾವಾರ್ಥ** : ಮನಸ್ಸು ಫಲಿತದ ಮೇಲೆ ಸಂಬಂಧಿಸಿದವನಾಗಿ ಅಹಂಕಾರದಿಂದ ಇತರರಿಗೆ ತಿಳಿಯುವಂತೆ ಮಾಡುವ ಯಜ್ಞವನ್ನು ರಾಜಸಯಜ್ಞವೆಂದು ತಿಳಿಯಿರಿ.

**(16) ಶ್ಲೋ॥ 13 : ವಿಧಿಹೀನ ಮಸೃಷ್ಟಾನ್ನಂ ಮನ್ತ್ರ ಹೀನ ಮದಕ್ಷಿಣಮ್ ।**
**ಶ್ರದ್ಧಾ ವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ॥**

**(ತಾಮಸ)**

**ಭಾವಾರ್ಥ** : ಶಾಸ್ತ್ರಪದ್ಧತಿ ಇಲ್ಲದಿರುವುದು, ಅನ್ನದಾನ ಇಲ್ಲದಿರುವುದು, ಮಂತ್ರಗಳು ಇಲ್ಲದಿರುವುದು ದಕ್ಷಿಣೆ ಇಲ್ಲದಿರುವುದು ಅಸಲು ಶ್ರದ್ಧೆ ಇಲ್ಲದಂತೆ ಮಾಡುವ ಯಜ್ಞವನ್ನು ತಾಮಸ ಯಜ್ಞವೆಂದು ಹೇಳಬಹುದು.

**(16) ಶ್ಲೋ॥ 14 : ದೇವ ದ್ವಿಜ ಗುರು ಪ್ರಾಜ್ಞ ಪೂಜನಂ ಶೌಚಮಾರ್ಜವಮ್ ।**
**ಬ್ರಹ್ಮಚರ್ಯ ಮಹಿಂಸಾ ಚ ಶಾರೀರಂ ತಪ ಉಚ್ಯತೇ ॥**

**(ತಪಸ್ಸು)**

**ಭಾವಾರ್ಥ** : ದೇವತೆಗಳಲ್ಲಿಯೂ, ಬ್ರಾಹ್ಮಣರಲ್ಲಿಯೂ, ಗುರುಗಳಲ್ಲಿಯೂ ಜ್ಞಾನಿಗಳಲ್ಲಿಯೂ, ಭಕ್ತಿ, ಶುಚಿತ್ವ ಕಪಟ ಇಲ್ಲದಿರುವುದು, ಬ್ರಹ್ಮಚರ್ಯ ಅಹಿಂಸೆ ಪ್ರವರ್ತನೆಯನ್ನು, ಶರೀರ ತಪಸ್ಸೆಂದು ಹೇಳಲಾಗುತ್ತದೆ.

**(16) ಶ್ಲೋ॥ 15 : ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।**
**ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥**

**(ತಪಸ್ಸು)**

**ಭಾವಾರ್ಥ** : ಪರರು ದುಃಖಪಡದ ಮಾತುಗಳು, ಪ್ರಿಯವೂ, ಹಿತವೂ, ಸತ್ಯವಾದ ಮಾತುಗಳು, ಇತರರಿಗೆ ಒಳ್ಳೆಯದು ಮಾಡುವಂತೆ ಮಾತನಾಡುವುದು, ವೇದ ಅಭ್ಯಸಿಸುವುದು ವಾಕ್ ತಪಸ್ಸೆಂದು ಹೇಳಲಾಗುತ್ತದೆ.

**(16) ಶ್ಲೋ॥ 16 : ಮನಃಪ್ರಸಾದ ಸೌಮ್ಯತ್ವಂ ಮೌನ ಮಾತ್ಮವಿನಿಗ್ರಹಃ ।**
**ಭಾವಸಂಶುದ್ಧಿ ರಿತ್ಯೇತತ್ತಪೋ ಮಾನಸ ಮುಚ್ಯತೇ ॥**

**(ತಪಸ್ಸು)**

**ಭಾವಾರ್ಥ** : ಮನೋ ನಿರ್ಮಲತ್ವವನ್ನು, ಸೌಮ್ಯವನ್ನು, ಮೌನ ವಹಿಸುವುದು, ಜೀವಾತ್ಮ ಕಷ್ಟ ಸುಖಗಳಲ್ಲಿಯೂ ನಿಗ್ರಹವಾಗಿರುವುದು, ಭಾವ ಸಂಶುದ್ಧಿ ಹೊಂದಿರುವುದು ಮಾನಸ ತಪಸ್ಸುಗಳೆಂದು ಹೇಳುತ್ತಾರೆ.

**(16) ಶ್ಲೋ॥ 17 : ಶ್ರದ್ಧಯಾ ಪರಯಾ ತಪ್ತಂ ತಪ ಸ್ತ ತ್ರಿವಿಧಂ ನರೈಃ ।**
**ಅಫಲಾಕಾಂಕ್ಷಿ ಭಿ ರ್ಯುಕ್ತೈಃ ಸಾತ್ತ್ವಿಕಂ ಪರಿಚಕ್ಷತೇ ॥**

**(ಸಾತ್ತ್ವಿಕ)**

**ಭಾವಾರ್ಥ** : ಫಲಕಾಂಕ್ಷೆ ಇಲ್ಲದೇ ಪರಮಶ್ರದ್ಧೆಯಿಂದ, ಯೋಗ್ಯತೆ ಇರುವ ಮನುಜರು ಆಚರಿಸುವ ಈ ತ್ರಿವಿಧ ತಪಗಳನ್ನು ಸಾತ್ತ್ವಿಕ ತಪಗಳೆಂದು ಹೇಳುತ್ತಾರೆ.

**(16) ಶ್ಲೋ॥ 18 : ಸತ್ಕಾರ ಮಾನ ಪೂಜಾರ್ಥಂ ತಪೋದಂಭೇನ ಚೈವಯತ್ ।**
**ಕ್ರೀಯತೇ ತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಮ್ ॥**

**(ರಾಜಸ)**

**ಭಾವಾರ್ಥ** : ಸತ್ಕರಿಸುವುದಕ್ಕೋಸ್ಕರ, ಸನ್ಮಾನಕ್ಕೋಸ್ಕರ, ಪೂಜೆಗೋಸ್ಕರ, ಗರ್ವವಾಗಿ ಚಂಚಲ ಕ್ಷಯಕರವಾಗುವ ರೀತಿಯಲ್ಲಿ ಮಾಡುವ ತಪಸ್ಸನ್ನು ರಾಜಸ ತಪಸ್ಸೆನ್ನುವರು.

**(16) ಶ್ಲೋ॥ 19 : ಮೂಢಗ್ರಾಹೇ ಣಾತ್ಮನೋ ಯ ತ್ಪೀಡಯಾ ಕ್ರಿಯತೇ ತಪಃ ।**
**ಪರಸ್ಯೋತ್ಸಾದನಾರ್ಥಂ ವಾ ತತ್ತಾಮಸ ಮುದಾಹೃತಮ್ ॥**

**(ತಾಮಸ)**

**ಭಾವಾರ್ಥ** : ತಿಳುವಳಿಕೆ ಇಲ್ಲದಂತಹ ಛಲದಿಂದ ತನಗೆ ಕಷ್ಟವಾದರೂ ಮಾಡುವ ತಪಸ್ಸು, ಪರರ ವಿನಾಶಕ್ಕೆ ಮಾಡುವ ತಪಸ್ಸನ್ನು ತಾಮಸ ತಪವೆಂದು ಹೇಳಲಾಗುತ್ತದೆ.

**(16) ಶ್ಲೋ॥ 20 : ದಾತವ್ಯ ಮಿತಿ ಯ ದ್ದಾನಂ ದೀಯತೇ ನುಪಕಾರಿಣೇ ।**
**ದೇಶೇ ಕಾಲೇಚ ಪಾತ್ರೇ ಚ ತ ದ್ದಾನಂ ಸಾತ್ತ್ವಿಕಂ ಸ್ಮೃತಮ್ ॥**

**(ಸಾತ್ತ್ವಿಕಮ್)**

**ಭಾವಾರ್ಥ** : ದಾನ ಆಚರಿಸಬೇಕೆಂಬ ಉದ್ದೇಶ ಹೊಂದಿದ್ದು, ದೇಶ ಕಾಲಪಾತ್ರಾ ಪಾತ್ರಗಳು ತಿಳಿದು, ಪ್ರತಿಫಲವನ್ನು ಗಮನಿಸದೆ ಸಜ್ಜನನಿಗೆ ಕೊಡುವ ದಾನವನ್ನು ಸಾತ್ತ್ವಿಕ ದಾನ ಎನ್ನುತ್ತಾರೆ.

**ವಿವರ** : ಶರೀರದಲ್ಲಿನ ಗುಣಗಳಲ್ಲಿ ಜ್ಞಾನಕ್ಕೆ ನಿತ್ಯ ಶತ್ರುವಾಗುವ ಆಸೆ(ಕಾಮ) ಎನ್ನುವ ಗುಣಕ್ಕೆ ಪೂರ್ತಿ ವಿರುದ್ಧವಾದ ಗುಣ ದಾನ. ಒಬ್ಬರಿಂದ ತೆಗೆದುಕೊಳ್ಳುವುದು ಆಸೆಯಾಗಿದ್ದು, ಒಬ್ಬರಿಗೆ ಕೊಡುವುದು ದಾನ. ಮೂರು ಗುಣಭಾಗಗಳಲ್ಲಿ ಕಾಮವೆಂಬ ಗುಣ ಮೂರು ವಿಧಗಳಾಗಿ ಇರುವಂತೆ ದಾನವೂ ಸಹ ಮೂರು ವಿಧಗಳಾಗಿದೆ. ಅದರಲ್ಲಿ ಸಾತ್ತ್ವಿಕ ದಾನವನ್ನು ಕುರಿತು ಇಲ್ಲಿ ತಿಳಿಸಿದ್ದಾರೆ. ದಾನ ಮಾಡಬೇಕೆಂಬ ಆಲೋಚನೆ ಹೊಂದಿದ್ದು ಯಾವ ಕಾಲದಲ್ಲಿ ಅವಶ್ಯವೋ, ಯಾವ ಕಾಲದಲ್ಲಿ ಅವಶ್ಯವಿಲ್ಲವೋ ತಿಳಿದುಕೊಂಡು ಇನ್ನೊಬ್ಬನಿಗೆ ಅವಶ್ಯವಾದ ಸಮಯದಲ್ಲಿ ದಾನ ಮಾಡುವುದು, ಆತನು ದಾನಕ್ಕೆ ಯೋಗ್ಯನೋ, ಅಯೋಗ್ಯನೋ ತಿಳಿದುಕೊಂಡು ಆ ವ್ಯಕ್ತಿ ಯೋಗ್ಯನಾದಾಗಲೆ ದಾನ ಕೊಡಬೇಕು. ಪುನಃ ತಿರುಗಿ ಒಳ್ಳೆಯದು ಮಾಡದವನಿಗೆ ಕೊಡುವುದೇ ಸಾತ್ತ್ವಿಕ ದಾನವಾಗುತ್ತದೆ. ಹಾಗಲ್ಲದೆ ಅವನಿಗೆ ವಸ್ತುರೂಪವಾಗಿ ದಾನಕೊಟ್ಟು ಧನರೂಪವಾಗಿ ಸಹಾಯ ಪಡೆಯಬಾರದು. ಹಾಗೆ ಮಾಡಿದರೆ ಅದು ಸಾತ್ತ್ವಿಕ ದಾನ ಎನಿಸಿಕೊಳ್ಳುವುದಿಲ್ಲ. ಈ ಕಾಲದಲ್ಲಿ ಬಹಳಜನರು ಪ್ರತಿಫಲಾಕಾಂಕ್ಷೆ ಒಳಗಿಟ್ಟುಕೊಂಡು ಮೇಲಕ್ಕೆ ದಾನ ಮಾಡುತ್ತಾರೆ. ಇನ್ನೂ ಕೆಲವರು ರೂಪಾಯಿ ದಾನ ಮಾಡಿ ಹತ್ತು ರೂಪಾಯಿ ಕೆಲಸ ಮಾಡಿಸಿಕೊಳ್ಳುವವರೂ ಇದ್ದಾರೆ. ಹಾಗೆ ಮಾಡಿದರೆ ಮೊದಲು ಕೊಟ್ಟಿರುವುದು ದಾನವೇ ಆದರೂ ಅದು ಸಾತ್ತ್ವಿಕ ದಾನ ಎನಿಸಿಕೊಳ್ಳುವುದಿಲ್ಲ. ಪ್ರತಿಫಲಾಕಾಂಕ್ಷೆ ಇಲ್ಲದಿರುವುದು ಸಾತ್ತ್ವಿಕ ದಾನವಾಗುತ್ತದೆ. ದಾನಗಳಲ್ಲಿ ಯೋಗ್ಯತೆ, ಕಾಲವನ್ನು ತಿಳಿದು ಮಾಡಿದ ದಾನವೇ ಸಾತ್ತ್ವಿಕ ದಾನವಾಗುತ್ತದೆ.

**(16) ಶ್ಲೋ॥ 21 : ಯತ್ತು ಪ್ರತ್ಯುಪಕಾರಾರ್ಥಂ ಫಲ ಮುದ್ದಿಶ್ಯವಾ ಪುನಃ ।**
**ದೀಯತೇ ಚ ಪರಿಕ್ಲಿಷ್ಟಂ ತದ್ದಾನಂ ರಾಜಸಂ ಸ್ಮೃತಮ್ ॥**

**(ರಾಜಸ)**

**ಭಾವಾರ್ಥ** : ಫಲಗಳಲ್ಲಿ ಆಸೆ, ಪ್ರತ್ಯುಪಕಾರದಲ್ಲಿ ಆಲೋಚನೆ ಹೊಂದಿ, ಅತಿಕಷ್ಟದ ಮೇಲೆ ಮನಸ್ಸಿನಲ್ಲಿ ದುಃಖ ಪಡುತ್ತಾ ಕೊಡುವ ದಾನ ರಾಜಸ ದಾನವೆಂದು ಹೇಳಲಾಗುತ್ತಿದೆ.

**ವಿವರ:** ಈಗ ದಾನಕೊಡುವುದರಿಂದ ಅವನಿಂದ ಮತ್ತೊಂದು ವಿಧವಾಗಿ ಪ್ರತಿಫಲ ಪಡೆಯಬಹುದೆಂದು. ಆಸೆ ಹೊಂದಿ ಕೊಡುವ ದಾನವಾಗಲಿ, ನಾನು ದಾನ ಮಾಡುವುದರಿಂದ ಪುಣ್ಯ ಬರುತ್ತದೆಂದು ಆಲೋಚನೆಯಿಂದ ಕೊಡುವ ದಾನವಾಗಲಿ, ದಾನಕೊಡುವುದರಿಂದ ನನ್ನ ಹತ್ತಿರ ಇರುವುದು ಹೋಗುತ್ತಿದೆಯೆಂದು ಒಳಗೆ ದುಃಖಪಡುತ್ತಾ ಕೊಡುವ ದಾನವಾಗಲಿ ರಾಜಸದಾನ ಎನ್ನುತ್ತಾರೆ.

**(16) ಶ್ಲೋ॥ 22 : ಅದೇಶಕಾಲೇ ಯದ್ದಾನ ಮಪಾತ್ರೇ ಭ್ಯಶ್ಚ ದೀಯತೇ ।**
**ಅಸತ್ಕೃತ ಮವಜ್ಞಾತಂ ತ ತ್ತಾಮಸ ಮುದಾಹೃತಮ್ ॥**

**(ತಾಮಸ)**

**ಭಾವಾರ್ಥ** : ಗೌರವವಿಲ್ಲದೆ, ತಿರಸ್ಕಾರ ಪೂರ್ವಕವಾಗಿ, ದೇಶಕಾಲವನ್ನು ತಿಳಿದುಕೊಳ್ಳದೆ ಯೋಗ್ಯನಾಗುತ್ತಾನೋ ಇಲ್ಲವೋ ಆಲೋಚಿಸದೆ ಕೊಡುವದಾನ ತಾಮಸ ದಾನ ಎನ್ನುತ್ತಾರೆ.

**ವಿವರ** : ದಾನ ಕೊಡುವಾಗ ತೆಗೆದುಕೊಳ್ಳುವವನಿಗೆ ಮರ್ಯಾದೆ ಇಲ್ಲದಂತೆ ಬಿಸಾಡಿದಂತೆ ದಾನಕೊಡುವುದು, ಕೇಳಿದರೂ ತಿರಸ್ಕಾರವಾಗಿ ದಾನಕೊಡುವುದು, ಕಾಲಪರಿಸ್ಥಿತಿ ತಿಳಿದುಕೊಳ್ಳದೆ ಮಳೆಗಾಲದಲ್ಲಿ ಗಿಡಕ್ಕೆ ನೀರು ಎರೆದಂತೆ ಅಗತ್ಯ ಇಲ್ಲದಿರುವಾಗ ದಾನ ಕೊಡುವುದು. ದಾನಕ್ಕೆ ಪಾತ್ರನಾಗುತ್ತಾನೋ ಇಲ್ಲವೋ ನೋಡದೇ ಇರುವವನಿಗೆ ಕೊಡುವುದು ತಾಮಸ ದಾನವೆಂದು ದೊಡ್ಡವರು ಹೇಳುತ್ತಾರೆ.

ಇಲ್ಲಿಗೆ ಶ್ರದ್ಧಾತ್ರಯ ವಿಭಾಗಯೋಗವೆಂಬ ಈ ಅಧ್ಯಾಯ ಮುಕ್ತಾಯವಾಗಿದೆ. ಇದರಲ್ಲಿ ಇನ್ನೂ ಉಳಿದಿರುವ ಆರು ಶ್ಲೋಕಗಳು ಬರೆಯಲಿಲ್ಲ. ಇವು ತ್ರಿಶ್ರದ್ಧೆಗಳಿಗೆ ಸಂಬಂಧವಿಲ್ಲದ ವಿಷಯವೇ ಆಗಿದ್ದು ಗೀತೆಗೆ ಸಂಬಂಧವಿಲ್ಲದ ವಿಷಯಗಳು, ಭಗವಂತನು ಹೇಳದ ವಿಷಯಗಳಾದ್ದರಿಂದ ಆರು ಶ್ಲೋಕಗಳು ಇಲ್ಲಿ ಹೇಳಲಿಲ್ಲವೆಂದು ತಿಳಿಯಬೇಕು. ಯೋಗಶಾಸ್ತ್ರ ಅಲ್ಲದ ವಿಷಯಗಳನ್ನೇ ಹಿಂದಿನ ಆಧ್ಯಾಯಗಳಲ್ಲಿಯೂ ಸಹ ಬಿಡಲಾಗಿದೆ. ಹಾಗೆಯೇ ಈಗಲೂ ಸಹ ತೆಗೆದು ಹಾಕಲಾಗಿದೆ. ಇಂತವುಗಳೆ ಮುಂದೆ ಬರುವ ಅಧ್ಯಾಯಗಳಲ್ಲಿಯೂ ಸಹ ಇವೆ.

**(16) ಶ್ಲೋ॥ 23 : ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣ ಸ್ತ್ರಿವಿಧಃ ಸ್ಮೃತಃ ।**
**ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ ॥**

**(ಕಲ್ಪಿತ)**

**(16) ಶ್ಲೋ॥ 24 : ತಸ್ಮಾ ದೋ ಮಿತ್ಯು ದಾಹೃತ್ಯ ಯಜ್ಞದಾನತಪಃ ಕ್ರಿಯಾಃ ।**
**ಪ್ರವರ್ತನ್ತೇ ವಿಧಾನೋಕ್ತಾ ಸ್ಸತತಂ ಬ್ರಹ್ಮವಾದಿನಾಮ್ ॥**

**(ಕಲ್ಪಿತ)**

**(16) ಶ್ಲೋ॥ 25 : ತದಿತ್ಯನಭಿಸಂಧಾಯ ಫಲಂ ಯಜ್ಞ ತಪಃಕ್ರಿಯಾಃ ।**
**ದಾನಕ್ರಿಯಾಶ್ಚ ವಿವಿಧಾಃ ಕ್ರಿಯನ್ತೇ ಮೋಕ್ಷ ಕಾಂಕ್ಷಿಭಿಃ ॥**

**(ಕಲ್ಪಿತ)**

**(16) ಶ್ಲೋ॥ 26 : ಸದ್ಭಾವೇ ಸಾಧುಭಾವೇ ಚ ಸದಿತ್ಯೇತ ತ್ಪ್ರಯುಜ್ಯತೇ।**
**ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ಧಃ ಪಾರ್ಥ! ಯುಜ್ಯತೇ ॥**

**(ಕಲ್ಪಿತ)**

**(16) ಶ್ಲೋ॥ 27 : ಯಜ್ಞೇ ತಪಸಿದಾನೇ ಚ ಸ್ಥಿತಿ ಸ್ಸದಿತಿ ಚೋಚ್ಯತೇ ।**
**ಕರ್ಮಚೈವ ತದರ್ಥೀಯಂ ಸದಿತ್ಯೇವಾಭಿಧೀಯತೇ ॥**

**(ಕಲ್ಪಿತ)**

**(16) ಶ್ಲೋ॥ 28 : ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ ।**
**ಅಸ ದಿತ್ಯುಚ್ಯತೇ ಪಾರ್ಥ! ನ ಚ ತತ್ಪ್ರೇತ್ಯನೋ ಇಹ ॥**

**(ಕಲ್ಪಿತ)**

ಈ ಆರು ಶ್ಲೋಕಗಳಲ್ಲಿ ಓಂ ತತ್ ಸತ್ ಎನ್ನುವ ಪದವನ್ನು ಕುರಿತು ಹೇಳಿದ ವಿಷಯ ಇದೆ. **'ಓಂ ತತ್ ಸತ್'** ಎನ್ನುವ ಪದ ಉಚ್ಚರಣೆ ಯಜ್ಞ ದಾನ ತಪಸ್ಸುಗಳಲ್ಲಿ ಉಂಟಾಗುವ ದೋಷಗಳನ್ನು ಹೋಗಲಾಡಿಸುತ್ತದೆಂದು, ಆ ಪದಗಳು ಪರಬ್ರಹ್ಮ ಸ್ವರೂಪವೆಂದು ಹೇಳಲಾಗಿದೆ. ಅಷ್ಟೇ ಅಲ್ಲದೆ ಯಜ್ಞದಾನ ತಪಸ್ಸುಗಳಲ್ಲಿ ಮೋಕ್ಷಕಾಮಿಗಳು ಈ ಶಬ್ದಗಳ ನಾಮೋಚ್ಚರಣೆ ಮಾಡುತ್ತಿರುತ್ತಾರೆಂದು ಸಹ ಹೇಳಿದ್ದಾರೆ. ಭಗವಂತನು ಹೇಳಿದ ಭಗವದ್ಗೀತೆ ಒಂದೇ ಪದ್ಧತಿ ಒಂದೇ ಬೋಧನೆಯಾಗಿರಬೇಕು. ಮೋಕ್ಷಕಾಮಿಗಳಿಗೆ ಯೋಗವೇ ಶರಣ್ಯವೆಂದೂ, ಪರಮಾತ್ಮನನ್ನು ತಿಳಿಯುವವರಿಗೆ ಯಜ್ಞದಾನ ತಪಗಳು ಸಾಧನೆಗಳು ಅಲ್ಲವೆಂದು, ಅವುಗಳಿಂದ ತಿಳಿಯುವುದಕ್ಕೆ ಸಾಧ್ಯವಾಗುವುದಿಲ್ಲವೆಂದು ತಿಳಿಸಿದ ಭಗವಂತನ ಮಾತು ಬದಲಾಯಿಸಿ ಮೋಕ್ಷಾಸಕ್ತರಿಗೆ ಯಜ್ಞದಾನ ತಪಗಳು ಕೆಲಸಕ್ಕೆ ಬರುತ್ತವೆಂದು ಹೇಳುತ್ತಾನಾ? ಯೋಗವೇ ಶರಣ್ಯವೆಂದವನು ಯಜ್ಞದಾನತಪಗಳು ಸಾಧನೆಗಳೆಂದು ಹೇಳುತ್ತಾನಾ? ಇದು ಭಗವಂತನು ಹೇಳಿರುವವು ಅಲ್ಲ.

ಏಕೆಂದರೆ ಗೀತೆಯಲ್ಲಿ ಬಾಹ್ಯಯಜ್ಞಗಳನ್ನು ಕುರಿತು ಎಲ್ಲಿಯೂ ಹೇಳಲಿಲ್ಲ. ಆತನು ಹೇಳಿರುವವು ಎರಡೇ ಯಜ್ಞಗಳು. ಅವು ಶರೀರದೊಳಗೆ ನಡೆಯುವವು. ಜ್ಞಾನಯಜ್ಞ, ದ್ರವ್ಯಯಜ್ಞವೆಂದು ಹೆಸರು ಇಡಲಾಗಿದೆ ಎಂದು, ಎರಡು ಯಜ್ಞಗಳು ದೇಹದಲ್ಲಿ ನಡೆಯುವವೆಂದು, ತಿಳಿಸಿದವನು ಬಾಹ್ಯ ಯಜ್ಞಗಳನ್ನು ಕುರಿತು ಹೇಳುತ್ತಾನಾ? ದಾನ ಗುಣಚಕ್ರದಲ್ಲಿನ ಗುಣ ಭಾಗದಲ್ಲಿನ ಒಂದು ಗುಣವಾಗುತ್ತದೆ. ಗುಣದಿಂದ ಪ್ರಪಂಚ, ಗುಣ ವರ್ಜಿತದಿಂದ ಪರಬ್ರಹ್ಮ ತಿಳಿಯುತ್ತಾನೆಂದು ಹೇಳಿದವನು ಮೋಕ್ಷಕ್ಕೆ ದಾನವು ಕೆಲಸಕ್ಕೆ ಬರುತ್ತದೆಂದು ತಿಳಿಸುವುದು ಒಳ್ಳೆಯದಾ! ದಾನಗುಣದಿಂದ ಪುಣ್ಯ ಲಭಿಸುತ್ತದಾಗಲಿ

ಮೋಕ್ಷ ಲಭಿಸುತ್ತದಾ? ಒಂದು ಗುಣವಾದ ದಾನ ಪ್ರಪಂಚ ವಿಧಾನದಲ್ಲಿ ಒಳ್ಳೆಯದನ್ನು ಬೆಳೆಸುತ್ತದಾಗಲಿ ಮೋಕ್ಷವನ್ನು ತೋರಿಸಲಾರದು. ಅಷ್ಟೇ ಅಲ್ಲದೆ ತಪಸ್ಸಿಗಿಂತ ಯೋಗ ಅಧಿಕವೆಂದು ಯೋಗವನ್ನು ಆಚರಿಸಿ ಯೋಗಿಯಾಗೆಂದು ಹೇಳಿದವನು ತಪಸ್ಸನ್ನು ಕುರಿತು ದೊಡ್ಡದಾಗಿ ಹೇಳುವುದಿಲ್ಲ. ಹಾಗೆ ಹೇಳಿದ್ದಾನೆ ಎಂದರೆ ಅದು ಅಸತ್ಯವೆಂದು ಹೇಳಬಹುದು. ಆದುದರಿಂದ ಇಲ್ಲಿ ಯಜ್ಞದಾನ ತಪಗಳನ್ನು ಕುರಿತು ಹೇಳಿರುವ ಶ್ಲೋಕಗಳು ಆರನ್ನು ಕಲ್ಪಿತಗಳೆಂದು ಹೇಳಬಹುದು. **'ಓಂ'** ಎನ್ನುವುದನ್ನು ಕುರಿತು ಅದು ಯಾವ ವಿವರವನ್ನು ಕೊಡುತ್ತಿದೆಯೆಂದು, ಅದರ ಸಾರಾಂಶ ಏನೆಂದು ಹೇಳಿದವನು ಅದಕ್ಕೆ ತತ್‌ಸತ್ ಸೇರಿಸಿ ಪೂರ್ಣಮಾಡುವುದು ಆಂಜನೇಯನಿಗೇ ನಾಮವಿಟ್ಟು ಈಗ ಆಂಜನೇಯನು ಎನ್ನಬಹುದೆಂಬಂತಿದೆ. ಆದ್ದರಿಂದ ಜ್ಞಾನವನ್ನು ತಿಳಿಸದಿರುವವು, ಅಜ್ಞಾನವನ್ನು ಕೊಟ್ಟು ಸಂಶಯವನ್ನುಂಟುಮಾಡುವವಾಗಿದ್ದು, ಒಂದುಕಡೆ ಭಗವಂತನು ಹೇಳಿರುವುದಕ್ಕೆ ವಿರುದ್ಧವಾಗಿ ಮತ್ತೊಂದುಕಡೆ ಹೇಳಿದ ಶ್ಲೋಕಗಳನ್ನು ಇಲ್ಲಿಯೇ ಅಲ್ಲದೆ ಹಿಂದಿನ ಅಧ್ಯಾಯಗಳಲ್ಲಿಯೂ ಸಹ ಮೂರು ನಾಲ್ಕು ಕಡೆ ತೆಗೆದು ಪಕ್ಕಕ್ಕೆ ಇಡಲಾಗಿದೆ. ಹೇತುಬದ್ಧವಾದ ಜ್ಞಾನ ಜಿಜ್ಞಾಸಪರರು ನಾವು ಹೇಳಿದ ಮಾತುಗಳನ್ನು ಅರ್ಥ ಮಾಡಿಕೊಳ್ಳುತ್ತೀರೆಂದುಕೊಳ್ಳುತ್ತೇವೆ.

ಈ ಹದಿನಾರನೆಯ ಅಧ್ಯಾಯದಲ್ಲಿ ಹೇಳಲಾದ ಶ್ಲೋಕಗಳ ವಿವರಗಳು ಕೆಳಗೆ ನೋಡಬಹುದು.

| | | | |
|---|---|---|---|
| 1. | ಗುಣಗಳು | – | 6 |
| 2. | ಸಾತ್ತ್ವಿಕ ಗುಣ | – | 4 |
| 3. | ರಾಜಸ ಗುಣ | – | 4 |
| 4. | ತಾಮಸ ಗುಣ | – | 4 |
| 5. | ತಪಸ್ಸುಗಳು | – | 3 |
| 6. | ಪ್ರಕೃತಿ–ಗುಣಗಳು | – | 1 |
| 7. | ಕಲ್ಪಿತಗಳು | – | 6 |
| | **ಒಟ್ಟು ಶ್ಲೋಕಗಳು** | – | **28** |

*****

### ಹದಿನೇಳನೆ ಅಧ್ಯಾಯ

# ಮೋಕ್ಷ ಸನ್ಯಾಸ ಯೋಗ

**ಅರ್ಜುನನು ಹೀಗೆ ಕೇಳುತ್ತಾನೆ :-**

**(17) ಶ್ಲೋ॥ 1 : ಸನ್ಯಾಸಸ್ಯ ಮಹಾಬಾಹೋ ! ತತ್ತ್ವ ಮಿಚ್ಛಾಮಿ ವೇದಿತುಮ್ ।**
**ತ್ಯಾಗಸ್ಯ ಚ ಹೃಷೀಕೇಶ ! ಪೃಥ ಕ್ಕೇ ಶಿನಿಷೂದನ ! ॥**
**(ಕಾರ್ಯ ಸನ್ಯಾಸ, ಕರ್ಮತ್ಯಾಗ)**

**ಭಾವಾರ್ಥ** : ಓ ಕೃಷ್ಣಾ ! ಸನ್ಯಾಸ ಮತ್ತು ತ್ಯಾಗ ಎನ್ನುವವುಗಳ ನಿಜ ತತ್ತ್ವವನ್ನು ಬೇರೆ ಬೇರೆಯಾಗಿ ವಿಶದವಾಗಿ ತಿಳಿಸಲು ಕೋರುತ್ತಿದ್ದೇನೆ.

**ವಿವರ** : ಇಲ್ಲಿ ಅರ್ಜುನನಿಗೆ ತ್ಯಾಗ ಸನ್ಯಾಸ ಎನ್ನುವ ಎರಡರ ಮೇಲೆ ಸಂಶಯ ಬಂದು ಎರಡು ಬೇರೆ ಬೇರೆಯಾಗಿವೆ ಎಂದುಕೊಂಡು ಅವುಗಳ ವಿವರವನ್ನು ಕೇಳಿದ್ದಾನೆ. ತ್ಯಾಗ ಸನ್ಯಾಸ ಹೆಚ್ಚು ಕಡಿಮೆ ಒಂದೇ ಅರ್ಥ ಕೊಡುವವಾದರೂ ಅವುಗಳ ಪದಗಳಲ್ಲಿ ಭೇದವಿದೆಯೆಂದು ಒಪ್ಪಿಕೊಳ್ಳದೇ ತಪ್ಪುವುದಿಲ್ಲ. ಬಿಡುವುದೆಂಬ ಅರ್ಥಕೊಡುವ ತ್ಯಾಗ, ಸನ್ಯಾಸಗಳಲ್ಲಿ ಏನು ವ್ಯತ್ಯಾಸ ಇದೆಯೋ ಕೆಳಗಿನ ಶ್ಲೋಕದಲ್ಲಿ ನೋಡೋಣ.

**(17) ಶ್ಲೋ॥ 2 : ಕಾಮ್ಯಾನಾಂ ಕರ್ಮಣಾಂನ್ಯಾಸಂ ಸನ್ಯಾಸಂ ಕವಯೋ ವಿದುಃ ।**
**ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ ॥**
**(ಕಾರ್ಯ ಸಂನ್ಯಾಸ, ಕರ್ಮತ್ಯಾಗ)**

**ಭಾವಾರ್ಥ** : ಕೋರಿ ಮಾಡುವ ಕೆಲಸಗಳನ್ನೆಲ್ಲಾ ಬಿಡುವುದು ಸನ್ಯಾಸವೆಂದು ಕವಿಗಳೆನ್ನುತ್ತಾರೆ. ಕೋರಿ ಮಾಡಿದ ಕೆಲಸಗಳಲ್ಲಿನ ಫಲಿತವನ್ನು (ಕರ್ಮವನ್ನು) ಬಿಡುವುದು ತ್ಯಾಗವೆಂದು ಜ್ಞಾನಿಗಳೆನ್ನುತ್ತಾರೆ. (ಆತ್ಮಸಂಯಮ ಯೋಗದಲ್ಲಿ 1, 2 ಶ್ಲೋಕಗಳಲ್ಲಿ ತ್ಯಾಗವನ್ನೂ ಸಹ ಸನ್ಯಾಸವೆಂದು ಹೇಳಿದಂತೆ ಗ್ರಹಿಸಬೇಕು).

**ವಿವರ** : ಶರೀರದಲ್ಲಿ ಒಂದು ಕಾರ್ಯ ನಡೆಯುವುದಕ್ಕೆ ಕರ್ಮದಿಂದ ಗುಣಗಳು ಕೆಲಸ ಮಾಡುತ್ತವೆಂದು ತಿಳಿದುಕೊಂಡಿದ್ದೇವೆ. ಕರ್ಮದಿಂದ ಕಾರ್ಯ ಗುಣಗಳ ಮೂಲಕ ಆರಂಭವಾಗುತ್ತಿದ್ದರೂ, ಎಂತಹ ಜ್ಞಾನಿಗಾದರು ಕರ್ಮ ಯಾವುದೊ ತಿಳಿದಿಲ್ಲ. ಇಂತಹ ಗುಣ ನನ್ನಲ್ಲಿ ಕೆಲಸ ಮಾಡುತ್ತಿದೆ ಎಂದು ಗುಣವನ್ನು ತಿಳಿದುಕೊಳ್ಳಬಹುದು. ಹಾಗೇ

ಬುದ್ಧಿ ವಿವರವನ್ನು ಗಮನಿಸಬಹುದು. ಗುಣಗಳ ಹತ್ತಿರದಿಂದ ನಡೆಯುವ ಕೆಲಸದವರೆಗೂ ತಿಳಿದುಕೊಳ್ಳುತ್ತಿದ್ದೇವೆ. ಆ ಕೆಲಸಕ್ಕೆ ಕಾರಣವಾದ ಕರ್ಮ, ಗುಣದ ಹಿಂದೆ ಇರುವುದರಿಂದ ಪೂರ್ತಿ ಕೆಲಸ ನಡೆಯುವವರೆಗೂ ಕರ್ಮ ಯಾರಿಗೂ ಮೊದಲು ತಿಳಿಯುವುದಿಲ್ಲ. ಆದ್ದರಿಂದ ನಮಗೆ ಕಾರ್ಯ ಯಾವ ಗುಣಗಳಿಂದ ಆರಂಭವಾಗುತ್ತಿದೆಂದು ತಿಳಿಯುತ್ತದೆ. ಆದರೆ ಅದರ ಹಿಂದೆ ಎಷ್ಟು ಪ್ರಾರಬ್ಧಕರ್ಮ ಇರುವುದು ತಿಳಿಯುವುದಿಲ್ಲ. ಈಗ ಅಸಲು ವಿಷಯಕ್ಕೆ ಬರೋಣ. ಒಂದು ಕೆಲಸ ನಡೆಯಬೇಕಾಗಿರುವಾಗ ಬ್ರಹ್ಮಯೋಗದ ಮೂಲಕ ಆ ಸಮಯದಲ್ಲಿ ಆ ಕೆಲಸವನ್ನು ಮಾಡದಂತೆ ಬಿಡುವುದನ್ನು ಸನ್ಯಾಸವೆಂದು ಹೇಳುತ್ತಾರೆ. ಇಲ್ಲಿ ಕೆಲಸಕ್ಕೆ ಕಾರಣವಾದ ಆಸೆ ಮೊದಲಾದ ಗುಣಗಳನ್ನು ತ್ಯಜಿಸುವುದು ನಡೆಯುತ್ತಿದೆ. ಒಂದು ಬ್ರಹ್ಮಯೋಗದಲ್ಲಿ ಮಾತ್ರ ಗುಣಗಳನ್ನು ನಿರೋಧಿಸುವುದಕ್ಕೆ ಸಾಧ್ಯವಾಗುತ್ತದೆ. ಒಬ್ಬ ಬ್ರಹ್ಮಯೋಗಿ ಮಾತ್ರವೇ ಬ್ರಹ್ಮಯೋಗ ಸಮಯದಲ್ಲಿಯೇ ನಡೆಯುವ ಕೆಲಸಗಳನ್ನು ನಿರೋಧಿಸುತ್ತಿದ್ದಾನೆ. ಯಾವ ಗುಣ ಕೆಲಸ ಮಾಡದಿರುವುದು, ಯಾವ ಸಂಕಲ್ಪ ಬುದ್ಧಿಗೆ ಇಲ್ಲದಿರುವುದು, ಚಿತ್ತಕ್ಕೆ ಕಾರ್ಯ ನಿರ್ಣಯ ಇಲ್ಲದಿರುವುದು, ಇಂದ್ರಿಯಗಳಿಗೆ ಕೆಲಸವಿಲ್ಲದ್ದು ಒಂದು ಬ್ರಹ್ಮಯೋಗ ಸಮಯ ಮಾತ್ರವೇ. ಆದ್ದರಿಂದ ಅವನು ಕಾಮ್ಯಾದಿ ಕೆಲಸಗಳನ್ನು ಬಿಡುವುದು ಸನ್ಯಾಸವೆಂದು ಹೇಳುತ್ತಿದ್ದೇವೆ.

ತ್ಯಾಗ, ಸನ್ಯಾಸ ಎರಡು ಒಂದೇ ಅರ್ಥ ಕೊಡುವವಾದರೂ ಕಾರ್ಯ ನಡೆಯದ ಮೊದಲು ಕಾರ್ಯವನ್ನೇ ಬಿಡುವುದನ್ನು ಸನ್ಯಾಸವೆಂದೂ, ಕಾರ್ಯನಡೆದ ನಂತರ ಅದರಲ್ಲಿ ಬರುವ ಕರ್ಮವನ್ನು ಬಿಡುವುದು ತ್ಯಾಗವೆಂದು ಸ್ವಲ್ಪ ವ್ಯತ್ಯಾಸದಿಂದ ಹೇಳಬೇಕಾಗಿಬಂದಿದೆ. ತ್ಯಾಗವೆನ್ನುವುದನ್ನು ವಿವರಿಸಿ ನೋಡಿದರೂ, ಒಂದು ಕಾರ್ಯ ಸರ್ವಸಾಧಾರಣವಾಗಿ ಗುಣಗಳ ಪ್ರೇರಣೆಯಿಂದ ನಡೆದರೂ, ಆ ಕಾರ್ಯದಲ್ಲಿ ಬರುವ ಫಲಿತವಾದ ಪಾಪಪುಣ್ಯಗಳನ್ನು ಬಾರದಂತೆ ಬಿಡುವುದನ್ನು ತ್ಯಾಗ ಎನ್ನುತ್ತಿದ್ದೇವೆ. ಹಾಗೆ ಮಾಡುವವನನ್ನು ಕರ್ಮಯೋಗಿ ಎನ್ನುತ್ತಿದ್ದೇವೆ. ಈ ವಿಧಾನ ಒಬ್ಬ ಕರ್ಮಯೋಗಿಗಳಿಗೆ ಮಾತ್ರವೇ ಸಾಧ್ಯವಾಗುತ್ತದೆ. ಒಂದು ಸಮಯದಲ್ಲಿ ಕಾರ್ಯಫಲಿತವನ್ನು ಬಿಡುವುದನ್ನು ಸನ್ಯಾಸವೆಂದೂ, ಅದೇ ವಿಧವಾಗಿ ಒಂದು ಸಮಯದಲ್ಲಿ ಕಾರ್ಯವನ್ನು ಬಿಡುವುದನ್ನು ತ್ಯಾಗವೆನ್ನುತ್ತಿದ್ದೇವೆ. ಎರಡರ ಉದ್ದೇಶ ಅರ್ಥ ಒಂದೇ ಆದರೂ ಒಂದು ಕರ್ಮ ಯೋಗವೆಂದು, ಎರಡನೆಯದು ಬ್ರಹ್ಮಯೋಗವೆಂದು ತಿಳಿಯಬೇಕು. ಸನ್ಯಾಸದಲ್ಲಿ ಸಂಚಿತಕರ್ಮ, ತ್ಯಾಗದಲ್ಲಿ ಆಗಾಮಿಕಕರ್ಮ ಬಿಡಲಾಗುತ್ತದೆ. ಸನ್ಯಾಸದಲ್ಲಿರುವ ಸಂಚಿತಕರ್ಮ ಇಲ್ಲದಂತೆ ಹೋಗುತ್ತಿದೆ. ತ್ಯಾಗದಲ್ಲಿ ಬರುತ್ತಿರುವ ಆಗಾಮಿಕಕರ್ಮ ಬಾರದಂತೆ ಹೋಗುತ್ತದೆ. ಈ ವಿಷಯವನ್ನು ಕುರಿತು

ಕರ್ಮ ಸನ್ಯಾಸಯೋಗದಲ್ಲಿಯೂ ಸಹ ಮೊದಲೆ ಎರಡರ ಫಲಿತ ಒಂದೇ ಎಂದು ಹೇಳಲಾಗಿದೆ. ಈ ಎರಡೂ ಮೋಕ್ಷದ ಕಡೆ ಮಾರ್ಗವನ್ನು ತೋರಿಸುವವಾಗಿವೆ. ಇಲ್ಲಿ ವಿವರಿಸಿ ಹೇಳುವ ನಿಮಿತ್ತ ತ್ಯಾಗವನ್ನು ಸನ್ಯಾಸವನ್ನು ಬೇರೆ ಬೇರೆಯಾಗಿ ಹೇಳಬೇಕಾಗಿ ಬಂದಿದೆ. ಗೀತೆಯಲ್ಲಿ ಹಿಂದೆ ಎಲ್ಲಾ ಕಡೆ ತ್ಯಾಗವನ್ನೂ ಸಹ ಸನ್ಯಾಸವೆಂದೇ ಹೇಳಿದಂತೆ ಗ್ರಹಿಸಬೇಕು.

**(17) ಶ್ಲೋ॥ 3 : ತ್ಯಾಜ್ಯಂ ದೋಷವ ದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ ।**
**ಯಜ್ಞದಾನತಪಃ ಕರ್ಮನ ತ್ಯಾಜ್ಯ ಮಿತಿ ಚಾಪರೇ ॥**

**(ಕಲ್ಪಿತ)**

**(17) ಶ್ಲೋ॥ 4 : ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ! ।**
**ತ್ಯಾಗೋ ಹಿ ಪುರುಷವ್ಯಾಘ್ರ ! ತ್ರಿವಿಧಃ ಸಂಪ್ರಕೀರ್ತಿತಃ ॥**

**(ಕಲ್ಪಿತ)**

**(17) ಶ್ಲೋ॥ 5 : ಯಜ್ಞ ದಾನ ತಪಃಕರ್ಮ ನ ತ್ಯಾಜ್ಯಂ ಕಾರ್ಯ ಮೇವ ತತ್ ।**
**ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ ॥**

**(ಕಲ್ಪಿತ)**

**(17) ಶ್ಲೋ॥ 6 : ಏತಾನ್ಯಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿ ಚ ।**
**ಕರ್ತವ್ಯಾ ನೀತಿ ಮೇ ಪಾರ್ಥ! ನಿಶ್ಚಿತಂ ಮತ ಮುತ್ತಮಮ್ ॥**

**(ಕಲ್ಪಿತ)**

**ವಿವರ :** ಈ ನಾಲ್ಕು ಶ್ಲೋಕಗಳಲ್ಲಿ ಸಾರಾಂಶ ನೋಡಿದರೆ ಯಜ್ಞ, ದಾನ, ತಪಸ್ಸು ಎನ್ನುವವು ಮಾನವನನ್ನು ಪಾವನ ಮಾಡುವ ಕಾರ್ಯಗಳೆಂದು, ಇವುಗಳನ್ನು ಬಿಡಬಾರದೆಂದು, ಇವುಗಳಿಂದ ಕರ್ಮಬರುವುದಿಲ್ಲವೆಂದು, ಈ ಮೂರು ವಿನಹ ಸರ್ವ ಕಾರ್ಯಗಳಲ್ಲಿ ಕರ್ಮಗಳು ಅಂಟುತ್ತವೆಂದು ಕೆಲವರನ್ನುತ್ತಿದ್ದಾರೆಂದು ಹೇಳುವುದಲ್ಲದೇ, ಪ್ರತ್ಯೇಕಿಸಿ ಆರನೆಯ ಶ್ಲೋಕದಲ್ಲಿ ಯಜ್ಞ, ತಪ, ದಾನಗಳೆನ್ನುವವು ಕರ್ತವ್ಯಗಳೆಂದು, ಕೋರಿಕೆಗಳಿಲ್ಲದಂತೆ ಮಾಡುವುದೆನ್ನುವುದು ಒಂದು ವಿಧವಾಗಿ ಎಲ್ಲರಿಗೂ ಒಳ್ಳೆಯದಾಗಿ ಕಾಣಿಸಿದರೂ ಅದರಲ್ಲಿ ಅಸಲಾದ ಸತ್ಯವನ್ನು ಮುಚ್ಚಿಟ್ಟಿದ್ದಾರೆ. ಈ ಶ್ಲೋಕದಿಂದ ಬಹಳಜನರು ತಪ್ಪುದಾರಿ ಹಿಡಿಯುವುದಕ್ಕೆ ಅವಕಾಶವಿದೆ. ಭಗವಂತನು ಹೇಳಿರುವುದಕ್ಕೆ ಈ ಶ್ಲೋಕಗಳ ಭಾವ ಬೇರೆಯಾಗಿ ಕಾಣಿಸುತ್ತಿದೆ. ಅದು ಏನೆಂದರೆ! ಮಾನವನ ನಿತ್ಯ ಜೀವನದಲ್ಲಿ ಎಷ್ಟೋ

ವಿಧದ ಕೆಲಸಗಳು ನಡೆಯುತ್ತವೆ. ಅವುಗಳಿಂದ ಕರ್ಮಬರುತ್ತದೆನ್ನುವುದು ನಿಜವೇ. ಪ್ರತಿ ಕೆಲಸದಲ್ಲಿಯೂ ಕರ್ಮ ಇದೆಯೆಂಬ ಸೂತ್ರದ ಪ್ರಕಾರ ಯಜ್ಞ, ದಾನ, ತಪಗಳಲ್ಲಿಯೂ ಸಹ ಕರ್ಮ ಇದೆ. ಎಲ್ಲಾ ಕೆಲಸಗಳಂತೆ ಕರ್ಮವನ್ನಂಟಿಸುವ ಯಜ್ಞ, ದಾನ, ತಪಗಳು ಮಾನವನನ್ನು ಪಾವನ ಮಾಡುವ ಸಾಧನೆಗಳು ಹೇಗಾಗಿವೆ? ಅಷ್ಟೇ ಅಲ್ಲದೆ ಯಜ್ಞ, ದಾನ, ತಪಗಳನ್ನು ಕೋರಿಕೆ ಇಲ್ಲದಂತೆ ಮಾಡೆಂದು, ಅವು ತಪ್ಪದೇ ಮಾಡಬೇಕಾದ ಕಾರ್ಯಗಳೆಂದು ಹೇಳಿ, ಉಳಿದ ಕಾರ್ಯಗಳನ್ನು ಕುರಿತು ಹೇಳದೇ ಹೋಗಿರುವುದರಿಂದ, ಬಹಳ ಜನರು ಮೂರು ಕಾರ್ಯಗಳಲ್ಲಿ ಮಾತ್ರ ಕರ್ಮ ಅಂಟುವುದಿಲ್ಲವೆಂದು, ಉಳಿದ ಕಾರ್ಯಗಳಲ್ಲಿ ಕರ್ಮ ಅಂಟುತ್ತದೆಂದು ತಿಳಿಯುವುದಕ್ಕೆ ಅವಕಾಶ ಇದೆ. ಮಾನವನು ಮಾಡುವ ಸರ್ವಕಾರ್ಯಗಳನ್ನು ಸಮಾನವಾಗಿ ಹೇಳದೇ ಈ ವಿಧವಾಗಿ ಯಜ್ಞ, ದಾನ, ತಪಸ್ಸುಗಳನ್ನು ಪ್ರತ್ಯೇಕಿಸಿ ಹೇಳುವುದರಲ್ಲಿ ಭಗವಂತನು ತಿಳಿಸಿದ ಕರ್ಮಯೋಗಕ್ಕೆ ಮುಪ್ಪು ಏರ್ಪಡುತ್ತಿದೆ. ಭಗವಂತನು ಒಂದುಕಡೆ ಹೇಳಿದ ಸೂತ್ರಬದ್ಧವಾದ ವಿಷಯಕ್ಕೆ ವಿರುದ್ಧವಾಗಿರುವ ಶ್ಲೋಕಗಳು ಮಧ್ಯದಲ್ಲಿ ಮಾನವನು ಕಲ್ಪಿಸಿರುವವೆಂದು ಸುಲಭವಾಗಿ ಅರ್ಥವಾಗುತ್ತಿದೆ. ಮಾನವನ ಬುದ್ಧಿಯಲ್ಲಿ ಕಾರ್ಯಗಳ ವ್ಯತ್ಯಾಸಗಳಿವೆ. ಆದ್ದರಿಂದ ಯಜ್ಞ, ದಾನ, ತಪಗಳು ಪವಿತ್ರವಾದ ಕಾರ್ಯಗಳೆಂದಿದ್ದಾರೆ. ಭಗವಂತನು ಎಷ್ಟೋ ಕಡೆ ಸರ್ವಕಾರ್ಯಗಳಲ್ಲಿ ಕರ್ಮ ಅಂಟುತ್ತಿದೆ ಎಂದು ಹೇಳಿ, ಅವು ಅಂಟದ ವಿಧಾನಗಳನ್ನೂ ಸಹ ಬೋಧಿಸಿದ್ದಾನೆ. ಆದ್ದರಿಂದ ನಾವು ಪ್ರತ್ಯೇಕಿಸಿ ಪಕ್ಕದವರಿಂದ ಹೇಳಲಾದ ಯಜ್ಞದಾನ ತಪಗಳ ಶ್ಲೋಕಗಳನ್ನು ಹೊರಗಿಟ್ಟು ತೆಗೆದುಹಾಕಲಾಗಿದೆ.

**(17) ಶ್ಲೋ॥ 7 : ನಿಯತಸ್ಯ ತು ಸನ್ನ್ಯಾಸಃ ಕರ್ಮಣೋ ನೋಪಪದ್ಯತೇ ।**
**ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ ॥**

**(ಕಲ್ಪಿತ)**

**(17) ಶ್ಲೋ॥ 8 : ದುಃಖ ಮಿತ್ಯೇವ ಯತ್ಕರ್ಮ ಕಾಯಕ್ಲೇಶಭಯಾ ತ್ತ್ಯಜೇತ್ ।**
**ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗಫಲಂ ಲಭೇತ್ ॥**

**(ಕಲ್ಪಿತ)**

**ಭಾವಾರ್ಥ** : ನಿಯತ ಕಾರ್ಯಗಳನ್ನು ತ್ಯಜಿಸಬಾರದು. ಆ ಕಾರ್ಯಗಳನ್ನು ಅಜ್ಞಾನದಿಂದ ತ್ಯಜಿಸಿದರೂ ಅದನ್ನು ತಾಮಸ ತ್ಯಾಗವೆನ್ನುತ್ತಾರೆ. ಹಾಗೆ ದುಃಖಕರವಾದುದೆಂದು ಶರೀರಕ್ಕೆ ಕಷ್ಟವಾದುದೆಂದು ಕೆಲಸಗಳು ಮಾಡುವುದನ್ನು ಬಿಡುವುದು ರಾಜಸ ತ್ಯಾಗ ಎನ್ನುತ್ತಾರೆ.

**ವಿವರ** : ಇಲ್ಲಿ ಈ ಎರಡು ಶ್ಲೋಕಗಳು ಸಹ ಭಗವಂತನು ಹೇಳಿದ ಜ್ಞಾನಕ್ಕೆ ವಿರುದ್ಧವಾಗಿವೆ. ಕರ್ಮದ ಪ್ರಕಾರ ನಿಯಮಿಸಲ್ಪಟ್ಟಿರುವ ಕಾರ್ಯಗಳನ್ನು ಯಾರಾದರು ತಪ್ಪದೇ ಮಾಡಬೇಕಾಗಿದ್ದೇ ಎಂದು ಹಿಂದಿನ ಅಧ್ಯಾಯಗಳಲ್ಲಿ ತಿಳಿದುಕೊಂಡಿದ್ದೇವೆ. ಯಾರಾದರು ನಾನು ಮಾಡುವುದಿಲ್ಲವೆಂದು ಹಠ ಹಿಡಿದರೂ ಅವನಿಂದ ಬಲವಂತವಾಗಿ ಕರ್ಮ ಮಾಡಿಸುತ್ತದೆಂದು ಸಹ ಭಗವಂತನು ತಿಳಿಸಿದ್ದಾನೆ. ಯಾರ ಇಷ್ಟಗಳ ಮೇಲೆ ಸಂಬಂಧವಿಲ್ಲದ ಕರ್ಮ ನಿರ್ಣಯವನ್ನು ನಾನು ಮಾಡುವುದಿಲ್ಲವೆಂದು, ಮಾಡದಂತೆ ಯಾರಾದರು ತಪ್ಪಿಸಿಕೊಳ್ಳುವವನು ಇದ್ದಾನಾ? ತಪ್ಪದೇ ಮಾಡಬೇಕೆಂದು ಹೇಳಿದ ಪರಮಾತ್ಮ ಇಲ್ಲಿ ಹಾಗೆ ಮಾಡದಂತೆ ಬಿಡುವುದು ತಾಮಸತ್ಯಾಗವೆಂದು, ರಾಜಸತ್ಯಾಗವೆಂದು ಹೇಳುತ್ತಾನಾ? ಹಾಗೆ ಯಾವನಿಗಾದರು ಇಷ್ಟಬಂದಿರುವುದು ಅವನು ಮಾಡಿ, ಯಾರಿಗೂ ಇಷ್ಟವಿಲ್ಲದ್ದನ್ನು ಅವನು ಬಿಟ್ಟು ಹೋದಂತಾದರೆ, ಇನ್ನು ಕರ್ಮದ ಪ್ರಾಬಲ್ಯ ಏನಿದೆ? ಕರ್ಮ ನಿರ್ಣಯವನ್ನು ಯಾರೂ ಅತಿಕ್ರಮಿಸಲಾರನು. ನೀನು ಯುದ್ಧ ಮಾಡುವುದಿಲ್ಲವೆಂದು ಹಠ ಹಿಡಿದರೂ, ವಿಧಿ (ಕರ್ಮ) ಬಲವಂತವಾಗಿ ನಿನ್ನನ್ನು ಪ್ರೇರೇಪಿಸಿ ನಿನ್ನಿಂದ ಯುದ್ಧ ಮಾಡಿಸುತ್ತದೆಂದು ಹೇಳಿದ ವಿಧಾನವೇನಾಗುತ್ತದೆ? ಭಗವಂತನು ಹೇಳಿದ ಕರ್ಮ ಸೂತ್ರಗಳಿಗೆ ಈ ಎರಡು ಶ್ಲೋಕಗಳೂ ಸಹ ವಿರುದ್ಧವಾದವೆಂದು ತಿಳಿದುಬರುತ್ತಿವೆ. ಇಷ್ಟೇ ಅಲ್ಲದೆ ಒಂಭತ್ತನೆಯ ಶ್ಲೋಕದಲ್ಲಿ ನಿಯತಕರ್ಮದ ಪ್ರಕಾರ ಅಹಂಕಾರ ಇಲ್ಲದಂತೆ, ಫಲಿತದ ಮೇಲೆ ಆಸೆ ಇಲ್ಲದಂತೆ, ಕಾರ್ಯಗಳನ್ನು ಆಚರಿಸಿದರೂ ಅದನ್ನು ಸಾತ್ತ್ವಿಕ ತ್ಯಾಗವೆಂದು ಹೇಳಲಾಗುತ್ತದೆಂದಿದ್ದಾರೆ. 7, 8 ಎರಡು ಶ್ಲೋಕಗಳಲ್ಲಿ ಆಚರಿಸದಿರುವುದನ್ನು ತ್ಯಾಗವೆನ್ನುವುದೇನು? 9ನೇ ಶ್ಲೋಕದಲ್ಲಿ ಆಚರಿಸಿರುವುದನ್ನು ತ್ಯಾಗ ಎನ್ನುವುದೇನು? ಇಲ್ಲಿಯೇ 7, 8 ಶ್ಲೋಕಗಳಿಗೆ 9ನೇ ಶ್ಲೋಕಕ್ಕೆ ಪೂರ್ತಿ ವಿರುದ್ಧತೆ ಇರುವುದು ಎಲ್ಲರೂ ಗಮನಿಸಬಹುದು. ಸಂಸ್ಕೃತವನ್ನು ತಿಳಿದವರು ಅವರಿಗಿಷ್ಟ ಬಂದಂತೆ ಶ್ಲೋಕಗಳು ಎಣೆದು ಭಗವದ್ಗೀತೆಯಲ್ಲಿ ಜೋಡಿಸಿಟ್ಟು ಭಗವಂತನ ಭಾವಕ್ಕೆ ವಿರುದ್ಧ ಪ್ರಚಾರ ಮಾಡಿದ್ದಾರೆ. ಗೀತೆಯನ್ನು ಓದುವವರು ಅವುಗಳ ವ್ಯತ್ಯಾಸಗಳನ್ನು ಗಮನಿಸದೆ ಹೋಗುವುದು ಮತ್ತಷ್ಟು ವಿಚಿತ್ರ. ಭಗವಂತನ ಭಾವಕ್ಕೆ ವಿರುದ್ಧ ಭಾವ ಸೃಷ್ಟಿಸಿದವರು ಯಾರೇ ಆಗಲಿ, ಅವರಿಗೆ ಭಯಂಕರ ಪಾಪ ಅಂಟಿಕೊಳ್ಳುತ್ತದೆ. ಇಲ್ಲಿ ಕ್ರಮವಾಗಿ ಆರು ಶ್ಲೋಕಗಳು ಅಶಾಸ್ತ್ರೀಯವಾದ ಕಲ್ಪಿತವಾದವು. ಎರಡನೇ ಶ್ಲೋಕದ ನಂತರ ಒಂಭತ್ತನೆಯ ಶ್ಲೋಕದಿಂದ ಭಗವದ್ಗೀತೆ ಪ್ರಾರಂಭವಾಗುತ್ತಿದೆ.

**(17) ಶ್ಲೋ॥ 9 : ಕಾರ್ಯಮಿತ್ಯೇವ ಯ ತ್ಕರ್ಮ ನಿಯತಂ ಕ್ರಿಯತೇಽರ್ಜುನ ।**
**ಸಂಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಃ ಸ್ಸಾತ್ತ್ವಿಕೋ ಮತಃ ॥**

**(ಸಾತ್ವಿಕ)**

**ಭಾವಾರ್ಥ** : ಕರ್ಮ ನಿಯತವಾದುದು ಕಾರ್ಯವೆಂದು, ಕಾರ್ಯ ಮಾಡುವುದರಲ್ಲಿ ಸಂಗವು ಇಲ್ಲದಂತೆ ಫಲಿತದ ಮೇಲೆ ಧ್ಯಾಸ ಇಲ್ಲದಂತೆ ಮಾಡುವುದು ಸಾತ್ತ್ವಿಕ ತ್ಯಾಗವೆಂದು ಹೇಳುತ್ತಾರೆ.

**ವಿವರ** : ಇದು ಭಗವಂತನು ಹೇಳಿದ ಶ್ಲೋಕ ಎನ್ನುವುದರಲ್ಲಿ ಸಂಶಯವಿಲ್ಲ. ನಾವು ನಿತ್ಯ ಮಾಡುವ ಕೆಲಸಗಳು ಮೊದಲೇ ನಿರ್ಣಯಿಸಲ್ಪಟ್ಟಿವೆ. ಗತ ಜನ್ಮಗಳ ಸಂಚಿತವೆನ್ನುವ ಕರ್ಮದಿಂದ ಈಗಿನ ಜನ್ಮಕ್ಕೆ ಸ್ವಲ್ಪ ಕರ್ಮ ನಾವು ಹುಟ್ಟಿದಾಗಲೇ ನಿರ್ಣಯಿಸಲ್ಪಟ್ಟಿರುತ್ತವೆ. ಅದನ್ನೇ ಪ್ರಾರಬ್ಧಕರ್ಮ ಎನ್ನುತ್ತಿದ್ದೇವೆ. ಪ್ರಾರಬ್ಧಕರ್ಮ ಕ್ರಮ ತಪ್ಪುವುದಿಲ್ಲ. ಇದರ ಪ್ರಕಾರ ಯಾರಾದರು ಆಡಬೇಕಾಗಿದೆ. ನಮ್ಮ ಶರೀರದಲ್ಲಿನ ತಲೆಯಲ್ಲಿ ಎಷ್ಟು ಕೂದಲಿರಬೇಕೆನ್ನುವ ವಿಷಯದಿಂದ ಆರಂಭಗೊಂಡು ಯಾವಾಗೇನು ಮಾಡಬೇಕೆಂಬ ವಿಷಯದವರೆಗೂ ಒಂದು ಜನ್ಮಕ್ಕೆ ಪೂರ್ತಿ ನಿರ್ಣಯಿಸಲ್ಪಟ್ಟಿರುತ್ತದೆ. ಹಾಗೆ ನಿರ್ಣಯಿಸಲಾದ ಪ್ರಾರಬ್ಧಕರ್ಮವನ್ನು ನಿಯತಕರ್ಮ ಎನ್ನುತ್ತಿದ್ದೇವೆ. ನಿಯತಕರ್ಮದ ಪ್ರಕಾರ ನಡೆಯುತ್ತದೆಂದು ತಿಳಿದು ಜೀವನದಲ್ಲಿ ತನ್ನಿಂದ ನಡೆಯುವ ಕಾರ್ಯಗಳಲ್ಲಿ ಅಹಮ್‌ನೊಂದಿಗೆ ಕೂಡಿರದೆ, ಈ ಕಾರ್ಯಗಳಲ್ಲಿ ಪಾಪಪುಣ್ಯ ಫಲಿತ ಬರುತ್ತದೆಂಬ ಧ್ಯಾಸ ಇಲ್ಲದಂತೆ, ತಾನು ಮಾಡಬೇಕಾದ ಕೆಲಸ ಪದ್ಧತಿಯಾಗಿ ಮಾಡಬೇಕೆಂದು ನಿಮಿತ್ತ ಮಾತ್ರನಾಗಿ ಯಾರು ಮಾಡುತ್ತಿದ್ದಾನೋ, ಅಂತವನನ್ನು ಸಾತ್ತ್ವಿಕ ತ್ಯಾಗಿ ಎಂದು ಹೇಳುತ್ತಿದ್ದೇವೆ. ಇದರಲ್ಲಿ ಅವನು ಬಿಟ್ಟಿರುವುದೇನು? ಏನನ್ನು ತ್ಯಾಗ ಎನ್ನುತ್ತಿದ್ದೇವೆಂದು ಕೇಳಿದರೂ ಅದಕ್ಕೆ ಸಮಾಧಾನ ಏನೆಂದರೆ! ಕರ್ಮದ ಪ್ರಕಾರ ನಡೆಯುವ ಕಾರ್ಯದಲ್ಲಿಯೂ ಕಣ್ಣಿಗೆ ಕಾಣಿಸದಂತೆ ಕರ್ಮ ಹುಟ್ಟಿಕೊಂಡು ಬರುತ್ತಿದೆ. ಆ ಹೊಸ ಕರ್ಮವನ್ನು ಆಗಾಮಿಕರ್ಮ ಎನ್ನುತ್ತಿದ್ದೇವೆ. ಆ ಆಗಾಮಿಕ ಕರ್ಮವನ್ನು ಯಾರಾದರೆ ತನಗೆ ಅಂಟದಂತೆ ಮಾಡಿಕೊಳ್ಳುತ್ತಿದ್ದಾನೋ ಅದನ್ನು ತ್ಯಾಗ ಎನ್ನುತ್ತಿದ್ದೇವೆ. ಹೊಸದಾದ ಆಗಾಮಿಕ ಕರ್ಮವನ್ನು ತಗಲಿಸಿಕೊಳ್ಳದಂತೆ ಮಾಡಿಕೊಳ್ಳುವುದಕ್ಕೆ ಭಗವಂತನು ಕರ್ಮಯೋಗವೆಂಬ ವಿಧಾನವನ್ನು ಹೇಳಿದ್ದಾನೆ. ಅದರ ಪ್ರಕಾರ ಬರುವ ಕರ್ಮದ ಮೇಲೆ ಧ್ಯಾಸ ಇಲ್ಲದಂತೆ ಅಹಮ್‌ನನ್ನು ಬಿಟ್ಟು ಮಾಡಬೇಕಾದ ಕೆಲಸವನ್ನು ಮಾಡುವುದರಿಂದ ಹೊಸ ಕರ್ಮವನ್ನು ಬಿಟ್ಟವನಾಗುತ್ತಾನೆ. ಅದನ್ನೇ ತ್ಯಾಗವೆಂದೂ ಸಹ ಎನ್ನುತ್ತಿದ್ದೇವೆ.

**(17) ಶ್ಲೋ॥ 10 : ನ ದ್ವೇಷ್ಟ್ಯಕುಶಲಂ ಕರ್ಮ ಕುಶಲೇ ನಾನುಷಜ್ಜತೇ ।
ತ್ಯಾಗೀ ಸತ್ತ್ವಸಮಾವಿಷ್ಟೋ ಮೇಧಾವೀ ಛಿನ್ನಸಂಶಯಃ ॥**

**(ಕರ್ಮಯೋಗ)**

**ಭಾವಾರ್ಥ** : ಸತ್ತ್ವಗುಣ ತ್ಯಾಗಿಯಾದವನು ಮೇಧಾವಿಯಾಗಿ, ಸಂಶಯಗಳನ್ನು ಛೇದಿಸಿ ಜ್ಞಾನ ಇರುವವನಾಗಿದ್ದು, ಕಾರ್ಯಗಳಲ್ಲಿ ಉಂಟಾಗುವ ಕರ್ಮವನ್ನು ನಾಶ ಮಾಡುವ ಅಗ್ನಿ ಇರುವವನಾಗಿರುತ್ತಾನೆ. ತನಗೆ ಸುಖವನ್ನು ಕೊಡುವ ಕೆಲಸಗಳಲ್ಲಿ ಆಸಕ್ತಿ ಇಲ್ಲದಂತೆ, ದುಃಖ ಕಷ್ಟ ಉಂಟುಮಾಡುವ ಕೆಲಸಗಳಲ್ಲಿ ಅಯಿಷ್ಟತೆ ಇಲ್ಲದಂತಿರುತ್ತದೆ.

**ವಿವರ** : ಜ್ಞಾನ ತಿಳಿದವನು ನಿರ್ಣಯಿಸಲ್ಪಟ್ಟ ಪ್ರಾರಬ್ಧಕರ್ಮದ ಪ್ರಕಾರ ತನ್ನ ಶರೀರದ ಮೂಲಕ ಒಳ್ಳೆಯ ಕೆಟ್ಟ ಕಷ್ಟಸುಖಗಳನ್ನು ಉಂಟುಮಾಡುವವು, ಪಾಪಪುಣ್ಯಗಳನ್ನು ತಂದಿಡುವ ಕೆಲಸಗಳು ನಡೆಯುತ್ತವೆಂದು ತಿಳಿದಿರುತ್ತಾನೆ. ನಮ್ಮ ಪ್ರಮೇಯದೊಂದಿಗೆ ಸಂಬಂಧವಿಲ್ಲದೆ ಕೇವಲ ಪ್ರಾರಬ್ಧಕರ್ಮ ಪ್ರಮೇಯದಿಂದಲೇ ನಡೆಯುವ ಕೆಲಸಗಳಲ್ಲಿ ನಮ್ಮ ಇಷ್ಟಾಯಿಷ್ಟಗಳಿಗೆ ಸಂಬಂಧ ಇಲ್ಲವೆಂದು ತಿಳಿದವನು, ಒಳ್ಳೆಯ ಕೆಲಸಗಳಿಗೋಸ್ಕರ ಆಸಕ್ತಿ ತೋರಿಸುವುದಾಗಲಿ, ಕೆಟ್ಟ ಕೆಲಸಗಳಲ್ಲಿ ಆನಾಸಕ್ತಿ ತೋರಿಸುವುದಾಗಲಿ ಇಲ್ಲದಂತಿರುತ್ತದೆ. ಅಶುಭ ಕಾರ್ಯಗಳ ಮೇಲೆ ದ್ವೇಷವಾಗಲಿ, ಶುಭಕಾರ್ಯಗಳಲ್ಲಿ ಕೋರಿಕೆಯಾಗಲಿ ಇಲ್ಲದವನು, ಕಾರ್ಯಗಳಿಂದ ಉಂಟಾಗುವ ಕರ್ಮಗಳನ್ನು ಸುಟ್ಟುಹಾಕುವ ಅಗ್ನಿ ಇರುವವನು ದೊಡ್ಡ ಜ್ಞಾನಿಯಾಗಿ ಯೋಗಿಯಾಗಿ ಹೇಳಲ್ಪಡುತ್ತಿದ್ದಾನೆ.

**(17) ಶ್ಲೋ॥ 11 : ನಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯ ಶೇಷತಃ ।
ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ॥**

**(ಕರ್ಮಯೋಗ)**

**ಭಾವಾರ್ಥ** : ದೇಹವನ್ನು ಧರಿಸಿದವನು ಸಂಪೂರ್ಣವಾಗಿ ಕರ್ಮವನ್ನು ಬಿಡಲು ಸಾಧ್ಯವಿಲ್ಲ. ಯಾರು ಕರ್ಮಫಲತ್ಯಾಗ ಮಾಡುತ್ತಾನೋ ಅವನನ್ನು ತ್ಯಾಗಿ ಎನ್ನಲಾಗುತ್ತದೆ.

**ವಿವರ** : ಶರೀರ ಧರಿಸಿದ ಯಾವ ಜೀವಾತ್ಮನಾದರೂ ತನ್ನ ಜೀವನ ಕಾಲಕ್ಕೆ ಸರಿಪಡುವುದನ್ನು ನಿರ್ಣಯಿಸಲ್ಪಟ್ಟಿರುವ ಪ್ರಾರಬ್ಧಕರ್ಮ ಪ್ರಕಾರ ನಡೆಯಬೇಕಾದ ಕೆಲಸಗಳನ್ನು ಬಿಡುವುದಕ್ಕೆ ಸಾಧ್ಯವಿಲ್ಲ. ನಿರ್ಣಯಿಸಲಾದ ಕರ್ಮಗಳು ಕಾರ್ಯರೂಪವಾಗಿ ನಡೆದೇ ನಡೆಯಬೇಕು. ಅವುಗಳನ್ನು ಮಾಡಬಾರದೆನ್ನುವವನಾಗಲಿ, ಮಾಡುವುದಿಲ್ಲ ಎನ್ನುವವನಾಗಲಿ ಕರ್ಮ

ಶಾಸನಗಳನ್ನು ಪೂರ್ತಿಯಾಗಿ ತಿಳಿಯದವನೆಂದೇ ಹೇಳಬಹುದು. ನಿಯತ ಕರ್ಮವನ್ನು ಆಚರಿಸದಂತಿರುವುದಕ್ಕೆ ಯಾರಿಗೂ ಸಾಧ್ಯವಿಲ್ಲ. ನಿಯತವಾದ ಪ್ರಾರಬ್ಧಕರ್ಮದಲ್ಲಿ ಒಳ್ಳೆಯ ಕೆಲಸಗಳಿದ್ದರು, ಕೆಟ್ಟ ಕೆಲಸಗಳಿದ್ದರು ತಪ್ಪದೇ ಮಾಡಬೇಕು. ಒಳ್ಳೆಯ ಕೆಲಸಗಳನ್ನು ಮಾತ್ರ ಮಾಡುತ್ತೇನೆಂದು, ಕೆಟ್ಟ ಕೆಲಸಗಳು ಮಾಡುವುದಿಲ್ಲ ಎನ್ನುವುದಕ್ಕೆ ಸಾಧ್ಯವಿಲ್ಲ. ಒಂದುವೇಳೆ ಕೆಟ್ಟ ಕೆಲಸಗಳನ್ನೇ ಮಾಡುತ್ತೇನೆ ಒಳ್ಳೆಯ ಕೆಲಸಗಳು ಮಾಡುವುದಿಲ್ಲ ಎನ್ನುವುದಕ್ಕೂ ಸಾಧ್ಯವಿಲ್ಲ. ಆಚರಣೆಗೆ ಯಾವ ಕೆಲಸಗಳು ಬಂದರು ಅವುಗಳನ್ನು ಕರ್ಮ ಪ್ರೇರೇಪಿಸಿ ಅವನಿಂದ ತಪ್ಪದೇ ಮಾಡಿಸುತ್ತದೆ. ಕರ್ಮದ ಕೈಯಲ್ಲಿ ಕೀಲು ಗೊಂಬೆಯಂತೆ ಆಡುತ್ತಿರುವ ಮಾನವನು (ಜೀವಿಯೂ) ಎಲ್ಲಾ ಕೆಲಸಗಳು ಮಾಡಬೇಕಾಗಿಬರುತ್ತಿದೆ.

ಜ್ಞಾನಿಯಾದವನು ಕರ್ಮದಿಂದ ನಡೆಯಬೇಕಾದ ಕೆಲಸಗಳು ಮಾಡದೆ ತಪ್ಪುವುದಿಲ್ಲವೆಂದು ತಿಳಿದವನಾಗಿ, ನಡೆಯುವ ಕೆಲಸಗಳಲ್ಲಿ ಹೊಸದಾಗಿ ಬರುವ ಆಗಾಮಿಕಕರ್ಮವೆಂಬುವುದನ್ನು ಕರ್ಮಯೋಗ ಪದ್ದತಿ ಮೂಲಕ ಬಾರದಂತೆ ಮಾಡಿಕೊಳ್ಳುತ್ತಾನೆ. ಯೋಗಪದ್ಧತಿ ತಿಳಿದು ಪ್ರಾರಬ್ಧಕರ್ಮವನ್ನು ಕೆಲಸಗಳ ರೂಪದಲ್ಲಿ ಆಚರಿಸುತ್ತಾ, ಆ ಕೆಲಸಗಳ ಮೂಲಕ ಬರುವ ಆಗಾಮಿಕ ಕರ್ಮವನ್ನು ಬಾರದಂತೆ ಮಾಡಿಕೊಳ್ಳುವವನನ್ನು ತ್ಯಾಗಿ ಎನ್ನಬಹುದು. ಹಳೇ ಕರ್ಮಗಳನ್ನು ಅನುಭವಿಸುತ್ತಾ ಹೊಸ ಕರ್ಮಗಳು ಬಾರದಂತೆ ಮಾಡುವವನನ್ನು ಕರ್ಮಯೋಗಿ ಎಂದೂ ಕರ್ಮತ್ಯಾಗಿ ಎಂದೂ ಅನ್ನಬಹುದು.

**(17) ಶ್ಲೋ॥ 12 : ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಂ ಕರ್ಮಣಃ ಫಲಮ್ ।**
**ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸನ್ಯಾಸಿನಾಂ ಕ್ವಚಿತ್ ॥**
**(ಕರ್ಮಯೋಗ)**

**ಭಾವಾರ್ಥ** : ಅನಿಷ್ಟವೆಂದು, ಇಷ್ಟವೆಂದು, ಮಿಶ್ರಮವಾದುದೆಂದೂ ಮೂರು ವಿಧ ಕರ್ಮಗಳು ತ್ಯಾಗಿಗಳಲ್ಲದವರಿಗೆ ಮರಣಾನಂತರ ಉಂಟಾಗುತ್ತಿವೆ. ತ್ಯಾಗಿಯಾದವನಿಗೆ ಯಾವ ಕರ್ಮಗಳು ಇಲ್ಲ.

**ವಿವರ** : ಪ್ರಪಂಚದಲ್ಲಿ ನಿತ್ಯ ಕೆಲಸಗಳು ಮಾಡುವವನಿಗೆ ಮಾಡುವ ಕೆಲಸಗಳಿಂದ ಸುಕರ್ಮ, ದುಷ್ಕರ್ಮ, ಮಿಶ್ರಮಕರ್ಮ ಎಂದು ಮೂರು ವಿಧಗಳಾದ ಕರ್ಮಗಳು

ತಗಲಿಕೊಳ್ಳುತ್ತಿವೆ. ಮರಣಾನಂತರ ಜನ್ಮಗಳಲ್ಲಿ ಆ ಮೂರು ವಿಧಗಳಾದ ಕರ್ಮಗಳ ಫಲಿತಗಳಾದ ಸುಖಗಳನ್ನು, ಕಷ್ಟಗಳನ್ನು ಮತ್ತು ಕಷ್ಟಸುಖ ಮಿಶ್ರಗಳನ್ನು ಜೀವಾತ್ಮ ಅನುಭವಿಸಬೇಕಾಗಿರುತ್ತದೆ. ಇದು ಸಾಧಾರಣ ಮುನುಷ್ಯರಿಗೆ ನಡೆಯುವ ವಿಧಾನ. ಯೋಗಿಗಳಾದವರಿಗೆ ತ್ರಿವಿಧ ಕರ್ಮಗಳು ಇಲ್ಲ ಅವುಗಳ ಕೆಲಸಗಳು ಇಲ್ಲ. ಏಕೆಂದರೆ! ಕರ್ಮಯೋಗಿ ಆದವನು ಮೊದಲು ಕೆಲಸಗಳು ಮಾಡುವಾಗಲೇ ಜಾಗ್ರತೆಹೊಂದಿ ಆ ಕೆಲಸದಲ್ಲಿ ಕರ್ಮವನ್ನು ಅಂಟಿಸಿಕೊಳ್ಳುವುದಿಲ್ಲ. ಆದ್ದರಿಂದ ಯಾವ ಕರ್ಮ ಅವನಿಗಿಲ್ಲ.

**(17) ಶ್ಲೋ॥ 13 : ಪಂಚೈತಾನಿ ಮಹಾಬಾಹೋ! ಕಾರಣಾನಿ ನಿಬೋಧ ಮೇ ।**
**ಸಾಂಖ್ಯೇ ಕೃತಾನ್ತೇ ಪ್ರೋಕ್ತಾನಿ ಸಿದ್ಧಯೇ ಸರ್ವಕರ್ಮಣಾಮ್ ॥**

**(ಪ್ರಕೃತಿ)**

**ಭಾವಾರ್ಥ** : ಸರ್ವಕರ್ಮಗಳು ಆಚರಿಸುವುದಕ್ಕೆ ಸಾಂಖ್ಯಸೂತ್ರದ ಪ್ರಕಾರ ಐದು ಕಾರಣಗಳು ಇವೆಯೆಂದು ಹೇಳಲಾಗಿದೆ. ಅವುಗಳನ್ನು ವಿವರಿಸುತ್ತೇನೆ ತಿಳಿದುಕೊ.

**ವಿವರ** : ಪ್ರಾರಬ್ಧಕರ್ಮದಲ್ಲಿರುವ ಸರ್ವಕರ್ಮಗಳು ಕಾರ್ಯರೂಪವಾಗಿ ಜಗತ್ತಿನಲ್ಲಿ ನಡೆಯುವುದಕ್ಕೆ ಮುಖ್ಯವಾಗಿ ಶರೀರದಲ್ಲಿ ಐದು ಭಾಗಗಳು ಕಾರಣವಾಗಿವೆಯೆಂದು, ಶರೀರ ಯಂತ್ರಾಂಗವನ್ನು ಕುರಿತು ವಿವರವಾಗಿ ತಿಳಿದವರು ಹೇಳಿದ್ದಾರೆ.

**(17) ಶ್ಲೋ॥ 14 : ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಮ್ ।**
**ವಿವಿಧಾಶ್ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಂಚಮಮ್ ॥**

**(ಪ್ರಕೃತಿ)**

**ಭಾವಾರ್ಥ** : ಶರೀರವನ್ನು ಅಧಿಷ್ಟಿಸಿದವುಗಳಲ್ಲಿ ಅನೇಕ ಕಾರ್ಯಗಳು ಮಾಡುವ ಬಾಹ್ಯ ಕರಣಗಳು, ವಿವಿಧ ಕಾರ್ಯಗಳು ಮಾಡಿಸುವ ಅಂತಃಕರಣಗಳು ಇವುಗಳಲ್ಲಿ ದೈವವೊಂದು ಸೇರಿ ಒಟ್ಟು ಐದು ಕರ್ತರಾಗಿ ಇವೆ.

**ವಿವರ** : ಶರೀರವೆಂಬ ವೇದಿಕೆ ಮೇಲೆ ಪ್ರಾರಬ್ಧಕರ್ಮ ಜಾರಿಯಾಗಿ ಕಾರ್ಯಗಳು ನಡೆಯುವುದಕ್ಕೆ ಕಾರಣ ಮುಖ್ಯವಾಗಿ ಶರೀರದಲ್ಲಿನ ಐದು ಭಾಗಗಳೆಂದು ಮೊದಲೆ ತಿಳಿಸಿದ್ದಾರೆ. ಅಷ್ಟೇ ಅಲ್ಲದೆ ಕರ್ಮ ಕಾರ್ಯಗಳ ಒಟ್ಟಾರೆ ಎಲ್ಲಾ ಕೆಲಸಗಳಿಗೆ ವೇದಿಕೆಯಾಗಿ ಶರೀರವಿದೆ. ಶರೀರ ವೇದಿಕೆಯಲ್ಲಿ ಕಾರ್ಯ ನಡೆದು ಕರ್ಮ ಆಚರಣೆಯಾಗುವುದಕ್ಕೆ

ಮುಖ್ಯಕಾರಣಗಳಾದ ಭಾಗಗಳು 1) ಮನಸ್ಸು 2) ಬುದ್ಧಿ 3) ಚಿತ್ತ 4) ಶರೀರ ಬಾಹ್ಯ ಇಂದ್ರಿಯಗಳು. ಶರೀರದಲ್ಲಿ ಕಾರ್ಯಗಳು ನಡೆಯುವುದಕ್ಕೆ ಮುಖ್ಯ ಸೂತ್ರಧಾರಿಗಳಿಂದ ಈ ನಾಲ್ಕು ಬಾಹ್ಯ ಇಂದ್ರಿಯಗಳು, ಅಂತಃಕರಣಗಳು ಅಲ್ಲದೆ ಮತ್ತೊಂದು ಸಹ ಇದೆ ಅದೇ ಆತ್ಮ. ಆತ್ಮ ಎಲ್ಲದಕ್ಕೂ ಶಕ್ತಿಯನ್ನು ಕೊಟ್ಟು ಕೆಲಸ ಮಾಡಿಸುತ್ತಿದೆ. ವಿವಿಧ ಕೆಲಸಗಳು ಮಾಡುವ ಯಂತ್ರಗಳಿಗೆ ವಿದ್ಯುತ್ ಹೇಗೆ ಉಪಯೋಗಪಡುತ್ತಿದೆಯೋ, ಹಾಗೇ ಆತ್ಮದ ಚೈತನ್ಯದಿಂದಲೇ ಶರೀರ ಒಟ್ಟಾರೆ ಹೊರಗಿನ ಒಳಗಿನ ಭಾಗಗಳು ಕೆಲಸ ಮಾಡುತ್ತಿವೆ. ಹೀಗೆ ಆತ್ಮದೊಂದಿಗೆ ಸೇರಿ ಒಟ್ಟು ಐದು ಭಾಗಗಳು ಪ್ರಾರಬ್ಧಕರ್ಮ ಜಾರಿಯಾಗುವುದಕ್ಕೆ ಕರ್ತರಾಗಿವೆ. ಇದರಲ್ಲಿ ಮುಖ್ಯವಾಗಿ ಜ್ಞಾಪಕ ಇಟ್ಟುಕೊಳ್ಳಬೇಕಾಗಿರುವುದು ಏನೆಂದರೆ! ಶರೀರದಲ್ಲಿನ ಜೀವಿಗೆ ಕಾರ್ಯಗಳು ಮಾಡುವುದರಲ್ಲಿ ಯಾವ ಪಾತ್ರವೂ ಇಲ್ಲ. ಜೀವಾತ್ಮ ಶರೀರದಲ್ಲಿ ಕೇವಲ ಕಷ್ಟಸುಖಗಳನ್ನು ಅನುಭವಿಸುವುದಕ್ಕೆ ಮಾತ್ರವೆ ಇದ್ದಾನೆ. ಕೆಲಸಗಳು ನಡೆಯುವುದರಲ್ಲಿ ಅವನಿಗೇನು ಸಂಬಂಧವಿಲ್ಲ.

**(17) ಶ್ಲೋ॥ 15 : ಶರೀರವಾಙ್ಮನೋಭಿ ರ್ಯತ್ಕರ್ಮ ಪ್ರಾರಂಭತೇ ನರಃ ।**
**ನ್ಯಾಯ್ಯಂ ವಾ ವಿಪರೀತಂ ವಾಪಂಚೈತೇ ತಸ್ಯ ಹೇತವಃ ॥**

**(ಪ್ರಕೃತಿ)**

**ಭಾವಾರ್ಥ** : ಮಾನವನು ಮನೋವಾಕ್ಯಗಳಿಂದ ಪ್ರಾರಂಭಿಸುವ ಕಾರ್ಯಗಳು ನ್ಯಾಯವಾದುವಾಗಲಿ, ಅನ್ಯಾಯವಾದುವಾಗಲಿ ಅವುಗಳಿಗೆ ಮೇಲೆ ಹೇಳಲಾದ ಐದು ಭಾಗಗಳು ಕಾರಣಗಳೆಂದು ಹೇಳಬಹುದು.

**ವಿವರ** : ಮಾನವನು ಮಾಡುವ ಪ್ರತಿ ಕೆಲಸಕ್ಕೂ ಶರೀರದಲ್ಲಿನ ಹತ್ತು ಒಂದು ಗುಂಪಿರುವ ಹತ್ತು ಇಂದ್ರಿಯಗಳಾದ ಕರ್ಮೇಂದ್ರಿಯ, ಜ್ಞಾನೇಂದ್ರಿಯಗಳು, ಮತ್ತೊಂದು ಗುಂಪಾಗಿರುವ ಅಂತಃಕರಣಗಳಾದ ಮನೋಬುದ್ಧಿ ಚಿತ್ತಗಳೆಂಬ ನಾಲ್ಕು ಮತ್ತು ಆತ್ಮ ಒಂದು ಸೇರಿ ಐದು ಕರ್ತರಾಗಿವೆ. ಮನುಷ್ಯ ಮಾಡುವ ಒಳ್ಳೆಯ ಕೆಲಸವಾಗಲಿ, ಕೆಟ್ಟ ಕೆಲಸವಾಗಲಿ, ನ್ಯಾಯವಾದುದಾಗಲಿ, ಅನ್ಯಾಯವಾದುದಾಗಲಿ, ಕರ್ಮ ಪ್ರಕಾರ ಇರುವ ಯಾವುದಾಗಲಿ ಶರೀರದಲ್ಲಿ ಕಾರ್ಯರೂಪವಾಗಿ ಮಾಡುವುದಕ್ಕೆ ಈ ಐದೇ ಕರ್ತರೆಂದು ಗ್ರಹಿಸಬೇಕು. ಜೀವಿಯು ಯಾವ ಕರ್ತನೂ ಅಲ್ಲ, ಜೀವಾತ್ಮ ಸುಖದುಃಖಗಳನ್ನು ಅನುಭವಿಸುವ ಭೋಕ್ತ ಮಾತ್ರವೇ ಎಂದು ಗುರುತಿಸಿಕೊಳ್ಳಬೇಕು.

**(17) ಶ್ಲೋ॥ 16 : ತತ್ರೈವಂ ಸತಿ ಕರ್ತಾರಂ ಆತ್ಮಾನಂ ಕೇವಲಂ ತು ಯಃ ।**
**ಪಶ್ಯ ತ್ಯಕೃತ ಬುದ್ಧಿತ್ವಾತ್ ನ ಸ ಪಶ್ಯತಿ ದುರ್ಮತಿಃ ॥**

**(ಜೀವಾತ್ಮ)**

**ಭಾವಾರ್ಥ** : ಕರ್ಮ ಕಾರ್ಯ ವಿಷಯಗಳಲ್ಲಿ ಕರ್ತರು ಐದು ಇರುವಾಗ, ಅಜ್ಞಾನಿಯಾದವನು ಎಲ್ಲದಕ್ಕೂ ಜೀವಾತ್ಮವೇ (ತಾನೇ) ಕರ್ತನೆಂದು ತಿಳಿಯುತ್ತಾನೆ. ಅಂತಹವನು ಬುದ್ಧಿಹೀನನಾಗಿ ತನ್ನ ನಿಜಸ್ಥಿತಿಯನ್ನು ತಿಳಿಯದಂತಿದ್ದಾನೆ.

**ವಿವರ** : ಜಗತ್ತಿನಲ್ಲಿ ಕರ್ಮ ಪ್ರಕಾರ ಸರ್ವಕಾರ್ಯಗಳನ್ನು ನಡೆಸುವವು ಒಂದೇ ಗುಂಪಾಗಿ ಹೊರಗಿರುವ ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು, ಮನೋ, ಬುದ್ಧಿ, ಚಿತ್ತ ಮತ್ತು ಅವುಗಳಿಗೆ ಶಕ್ತಿಕೊಡುವ ಆತ್ಮ ಇರುವಾಗ ಅಜ್ಞಾನಿಯಾದ ಜೀವಾತ್ಮ ಎಲ್ಲಾ ಕೆಲಸಗಳಿಗೆ ತಾನೇ ಕರ್ತನೆಂದು ತಿಳಿಯುತ್ತಾನೆ. ನೋಡುವವನು ಮಾಡುತ್ತಿದ್ದೇನೆಂದುಕೊಳ್ಳುವುದು ತಪ್ಪಲ್ಲವೆ! ನಡೆಯುವ ಸಂಘಟನೆಯಲ್ಲಿನ ಅನುಭವಗಳನ್ನು ಮಾತ್ರ ಅನುಭವಿಸುತ್ತಾ, ಕೆಲಸಗಳು ಇತರರಿಂದ ನಡೆಯುತ್ತಿವೆ ಎಂದು ತಿಳಿಯದ ಜೀವಾತ್ಮ, ತಾನೇ ಕಾರ್ಯಗಳಿಗೆ ಕರ್ತನೆಂದುಕೊಳ್ಳುತ್ತಿದ್ದಾನೆ. ಶರೀರ ಯಂತ್ರಾಂಗ ವಿವರ ತಿಳಿಯದವನು, ಶರೀರದಲ್ಲಿ ತಾನೆಲ್ಲಿದ್ದೇನೆಂದು ತಿಳಿಯದವನು, ಶರೀರದಲ್ಲಿ ತಾನೇನು ಮಾಡುತ್ತಿದ್ದೇನೆಂದು ತಿಳಿಯದವನು, ತನಗೆ ಸಮೀಪದಲ್ಲಿರುವ ಅಹಮ್‌ನ ಮಾತು ಕೇಳಿ ಅಹಂಕಾರ ಮಗ್ನನಾಗಿ ಕೆಲಸಗಳೆಲ್ಲವನ್ನೂ ನಾನೇ ಮಾಡುತ್ತಿದ್ದೇನೆಂದು ತಿಳಿಯುತ್ತಿದ್ದಾನೆ. ಶರೀರ ಎಲ್ಲವೂ ನಾನೇ ಎಂಬ ಭಾವನೆ ಹೊಂದಿದ್ದಾನೆ. ಶರೀರ ಎಲ್ಲಾ ನಾನೇ ಎಂದುಕೊಳ್ಳುವುದರಿಂದ ಶರೀರದಲ್ಲಿ ಹಿಂದಿನ ಕರ್ಮದ ಪ್ರಕಾರ ನಡೆಯುವ ಕೆಲಸಗಳೆಲ್ಲವುಗಳಲ್ಲಿ ಹೊಸ ಆಗಾಮಿಕಕರ್ಮ ತಯಾರಾಗಿ ಜೀವಿಯನ್ನು ಅಂಟಿಕೊಳ್ಳುತ್ತಿದೆ. ಜೀವಾತ್ಮ ನಡೆಯುವ ಕೆಲಸಗಳನ್ನು ನಾನೇ ಮಾಡುತ್ತಿದ್ದೇನೆಂದುಕೊಳ್ಳುವುದರಿಂದಲೆ ಅಂಟಿಕೊಳ್ಳುತ್ತಿದೆ. ಹಾಗೆಂದುಕೊಳ್ಳದೇ ಹೋದರೆ ಹೊಸ ಕರ್ಮ ಅಂಟಿಕೊಳ್ಳುವುದಿಲ್ಲ. ಜಗತ್ತಿನಲ್ಲಿ ಅನೇಕ ಹುದ್ದೆಗಳಲ್ಲಿ ಅನೇಕ ವಿಧಗಳಾಗಿ ಜೀವಿಸುವ ಜೀವಾತ್ಮಗಳೆಲ್ಲರೂ ಕೆಲಸಗಳಿಗೆ ನಾನೇ ಕರ್ತನೆಂದುಕೊಳ್ಳುವುದರಿಂದಲೆ ಕರ್ಮಗಳು ಸಂಪಾದಿಸಿಕೊಂಡು, ಅವುಗಳನ್ನು ಅನುಭವಿಸುವುದಕ್ಕೆ ಮರುಜನ್ಮಗಳು ಪಡೆಯುತ್ತಾ, ಅಲ್ಲಿ ಕರ್ಮಗಳನ್ನು ಅನುಭವಿಸುತ್ತಾ ಪುನಃ ಹೊಸ ಕರ್ಮ ಸಂಪಾದಿಸಿಕೊಳ್ಳುತ್ತಾ, ಅವುಗಳನ್ನು ಅನುಭವಿಸುವುದಕ್ಕೆ ಪುನಃ ಹುಟ್ಟುತ್ತಾ, ಜನನ ಮರಣವೆಂಬ ವಿಧಾನವನ್ನು ಚಕ್ರದಂತೆ ತಯಾರು ಮಾಡಿಕೊಂಡಿದ್ದಾರೆ. ಕರ್ಮವನ್ನು

ಅನುಭವಿಸುವುದು ಸಂಪಾದಿಸಿಕೊಳ್ಳುವುದು ಒಂದಕ್ಕೊಂದು ಅನುಸಂದಾನವಾಗಿರುವುದರಿಂದ, ಅವುಗಳಿಂದ ಹೊರ ಬೀಳದಂತಿದ್ದಾರೆ. ಯಾರಾದರೆ ಶರೀರ ಯಂತ್ರಾಂಗದ ನಿಜಸ್ಥಿತಿಯನ್ನು ತಿಳಿದುಕೊಳ್ಳುತ್ತಾನೋ, ಅವನು ಹಳೆ ಕರ್ಮವನ್ನು ಅನುಭವಿಸುತ್ತಾ ಹೊಸ ಕರ್ಮವನ್ನು ಸಂಪಾದಿಸಿಕೊಳ್ಳುವುದಿಲ್ಲ. ಅಂತಹವನು ಹಳೆಕರ್ಮ ಮುಗಿದ ತಕ್ಷಣ ಮೋಕ್ಷವನ್ನು ಹೊಂದಿ ಪರಮಾತ್ಮನಲ್ಲಿ ಐಕ್ಯವಾಗುತ್ತಾನೆ.

**(17) ಶ್ಲೋ॥ 17 : ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ।**
**ಹತ್ವಾಪಿ ಸ ಇಮಾನ್ ಲ್ಲೋಕಾನ್ನ ಹನ್ತಿ ನನಿಬಧ್ಯತೇ ॥**

**(ಕರ್ಮಯೋಗ)**

**ಭಾವಾರ್ಥ** : ಯಾರ ಭಾವದಲ್ಲಿ ಅಹಮ್ ಇಲ್ಲವೋ, ಯಾರ ಬುದ್ಧಿ ಫಲಿತದ ಮೇಲೆ ಇರುವುದಿಲ್ಲವೋ, ಅವನು ಜಗತ್ತಿನಲ್ಲಿ ಎಲ್ಲರನ್ನು ಸಾಯಿಸಿದರೂ ಅವನಿಗೆ ಕರ್ಮ ಅಂಟುವುದಿಲ್ಲ. ಅವನು ಹಂತಕನೂ ಅಲ್ಲ.

**ವಿವರ** : ಜಗತ್ತಿನಲ್ಲಿ ಕಾರ್ಯಗಳೆಲ್ಲವೂ ಕರ್ಮದ ಪ್ರಕಾರ ಅಂತರ ಬಾಹ್ಯೇಂದ್ರಿಯಗಳ ಮೂಲಕ ಆತ್ಮಶಕ್ತಿಯಿಂದ ನಡೆಯುತ್ತಿವೆ ಎಂದು ತಿಳಿದವನಾಗಿ, ನಾನು ಕರ್ತನೆಂಬ ಅಹಮ್‌ನ್ನು ಬಿಟ್ಟು, ಬರುವ ಲಾಭನಷ್ಟಗಳ ಮೇಲೆ ಬುದ್ಧಿಯನ್ನಿಡದೇ ಇರುತ್ತಾನೋ ಅಂತಹವನಿಗೆ ಯಾವ ಕರ್ಮ ಅಂಟದು. ಅದೇ ಸೂತ್ರದ ಪ್ರಕಾರ ಯಾವ ಕೆಲಸ ನಡೆಯುತ್ತಿದ್ದರು ಕರ್ಮ ಅಂಟದು. ಈ ಸೂತ್ರದ ಪ್ರಕಾರವೇ ಎಷ್ಟೋಜನರನ್ನು ಹತ್ಯೆ ಮಾಡಿದರೂ ಅವನು ಹಂತಕನು ಅಲ್ಲ. ಹತ್ಯಾ ಪಾಪ ಅವನನ್ನು ಅಂಟುವುದಿಲ್ಲವೆಂದು ಹೇಳಬಹುದು. ಹೀಗೆಯೇ ದೊಡ್ಡ ಸತ್ಕರ್ಮ ಮಾಡಿದರು ಅವನಿಗೆ ಪುಣ್ಯ ಬರುವುದಿಲ್ಲ. ಅಹಮ್ ಇಲ್ಲದವನು ಮಾಡಿದ ಕೆಲಸಗಳಲ್ಲಿ ದುಷ್ಕರ್ಮ, ಸುಕರ್ಮ ಎನ್ನುವ ಪಾಪಪುಣ್ಯಗಳು ಅವನಿಗೆ ಬರುವುದಿಲ್ಲ.

**(17) ಶ್ಲೋ॥ 18 : ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ ।**
**ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಂಗ್ರಹಃ ॥**

**(ಯೋಗ,ವಿಯೋಗ)**

**ಭಾವಾರ್ಥ** : ಜ್ಞಾನ, ಜ್ಞೇಯ, ಪರಿಜ್ಞಾತ ಎಂದು, ಕರ್ಮಚ್ಛೇದನೆಗೆ ಮಾಡುವುದು, ಮಾಡುವವನು, ಸಂಭವಿಸುವುದೆಂದು ಕರ್ಮ ಸಂಭವನೆಗೂ ಮೂರು ವಿಧಗಳಿವೆ.

**ವಿವರ** : ಇಲ್ಲಿ ಶ್ಲೋಕದಲ್ಲಿ **'ಕರ್ಮಚೋದನ'** ಎಂಬ ಪದವನ್ನು ಉಪಯೋಗಿಸಲಾಗಿದೆ. ಕರ್ಮವನ್ನು ಚೋಧಿಸುವುದು ಅಥವಾ ಕರ್ಮವನ್ನು ತಿಳಿಯುವುದು ಎನ್ನುವ ಅರ್ಥಕೊಡುವ ಈ ಪದವು ಇಲ್ಲಿ ಸಂದರ್ಭಾನುಸಾರ ಸರಿಹೋಗುವುದಿಲ್ಲ. ವಾಸ್ತವವಾಗಿ ಇಲ್ಲಿ ಇರಬೇಕಾದ ಪದ ಕರ್ಮ ಚ್ಛೇದನಾ ಎಂದು ಇರಬೇಕು. **"ಕರ್ಮಚ್ಛೇದನಾ"** ಎನ್ನುವುದರಲ್ಲಿ ಅಪಾರ್ಥವಾಗಿ ಕರ್ಮಚೋದನಾ ಎನ್ನುವುದು ನಡೆದಿರುತ್ತದೆಂದುಕೊಳ್ಳುತ್ತೇವೆ. ಕರ್ಮಚ್ಛೇದನ ಎನ್ನುವುದರಲ್ಲಿ ಕರ್ಮವನ್ನು ಇಲ್ಲದಂತೆ ಮಾಡುವುದೆಂದು ಅರ್ಥ ಇದೆ.

ತಿಳಿಸುವುದು ಜ್ಞಾನ, ತಿಳಿಯುವುದು ಜ್ಞೇಯ. ತಿಳಿದುಕೊಳ್ಳುವನು ಪರಿಜ್ಞಾತ. ಜ್ಞಾನದಿಂದ ಜ್ಞೇಯವನ್ನು ತಿಳಿದವನು ಕರ್ಮಚ್ಛೇದನ ಮಾಡುತ್ತಾನೆ. ಹಾಗೇ ಮಾಡುವುದು ಕರಣ, ಮಾಡಿಸುವುದು ಕರ್ಮ, ಮಾಡುವವನು ಕರ್ತ ಎಂದೂ ಮೂರು ವಿಧಾನಗಳು ಇವೆ. ಇವುಗಳಿಂದ ಜೀವಾತ್ಮಕ್ಕೆ ಕರ್ಮ ಸಂಭವಿಸುತ್ತಿದೆ. ಮೂರು ವಿಧಗಳಾದ ಒಂದು ಪದ್ಧತಿಯಿಂದ ಕರ್ಮಚ್ಛೇದ. ಹಾಗೇ ಮೂರು ವಿಧಗಳಾದ ಮತ್ತೊಂದು ಪದ್ಧತಿಯಿಂದ ಕರ್ಮ ಸಂಗ್ರಹ ನಡೆಯುತ್ತಿದೆ.

**(17) ಶ್ಲೋ॥ 19 : ಜ್ಞಾನಂ ಕರ್ಮ ಚ ಕರ್ತಾ ಚ ತ್ರಿಧೈವ ಗುಣಭೇದತಃ ।**
**ಪ್ರೋಚ್ಯತೇ ಗುಣ ಸಂಖ್ಯಾನೇ ಯಥಾವ ಚ್ಛೃಣು ತಾ ನ್ಯಪಿ ॥**

**(ಗುಣಗಳು)**

**ಭಾವಾರ್ಥ** : ಗುಣ ವಿವರಣೆ ಸಾಂಖ್ಯದಲ್ಲಿ ಗುಣ ಭೇದಗಳಿಂದ ಜ್ಞಾನ, ಕರ್ತ, ಕರ್ಮ ಎನ್ನುವವು ಮೂರು ವಿಧಗಳಾಗಿವೆ. ಅವುಗಳ ವಿವರವನ್ನು ಹೇಳುತ್ತೇನೆ ಶ್ರದ್ಧೆಯಿಂದ ಕೇಳು.

**ವಿವರ** : ಸಾಂಖ್ಯಶಾಸ್ತ್ರ (ಶರೀರ ಯಂತ್ರಾಂಗ)ವನ್ನು ಅನುಸರಿಸಿ, ತಲೆಯಲ್ಲಿನ ಗುಣಚಕ್ರದಲ್ಲಿರುವ ಭೇದಗಳಿಂದ ಪ್ರತಿ ಮನುಷ್ಯ ಮಾಡುವ ಕಾರ್ಯಗಳಲ್ಲಿ ಕರ್ಮ, ಕರ್ತ, ಜ್ಞಾನ ಎನ್ನುವವುಗಳಲ್ಲಿ ಮೂರು ವಿಧಗಳು ಇವೆ. ಕೆಲಸ ಮಾಡುತ್ತಿರುವಾಗ ಇರುವ ಜ್ಞಾನವನ್ನು ಮೂರು ವಿಧಗಳಾದ ಗುಣಗಳ ಸಂಬಂಧವಾಗಿ ಹೇಳುತ್ತಾ, ಹಾಗೆ ಮಾಡುತ್ತಿರುವ ಕೆಲಸವನ್ನು ಮಾಡುತ್ತಿರುವನನ್ನೂ ಸಹ ಮೂರು ವಿಧಗಳಾಗಿ ಹೇಳುವುದು ನಡೆದಿದೆ. ಅದನ್ನು ಕೆಳಗಿನ ಶ್ಲೋಕಗಳಲ್ಲಿ ನೋಡಬಹುದು.

**(17) ಶ್ಲೋ॥ 20 : ಸರ್ವಭೂತೇಷು ಯೇನೈಕಂ ಭಾವ ಮವ್ಯಯ ಮೀಕ್ಷತೇ ।**
**ಅವಿಭಕ್ತಂ ವಿಭಕ್ತೇಷು ತದ್ ಜ್ಞಾನಂ ವಿದ್ಧಿ ಸಾತ್ತ್ವಿಕಮ್ ॥**

**(ಸಾತ್ತ್ವಿಕಜ್ಞಾನ)**

**ಭಾವಾರ್ಥ** : ಸರ್ವ ಜೀವರಾಶಿಗಳಲ್ಲಿರುವ ಪರಮಾತ್ಮ ನಾಶರಹಿತವಾಗಿ ಒಂದೇ ರೂಪವಾಗಿ ಇದೆಯೆಂದು, ಬೇರೆಬೇರೆ ಆಕಾರಗಳಾಗಿರುವ ಜೀವ ಶರೀರಗಳಲ್ಲಿ ಬೇರೆಬೇರೆಯಾಗಿ ವಿಭಜಿಸಿರುವುದಾಗಿ ಏಕವಾಗಿದೆ ಎಂದು ತಿಳಿಸುವ ಜ್ಞಾನವನ್ನು ಸಾತ್ತ್ವಿಕ ಜ್ಞಾನ ಎನ್ನುತ್ತಾರೆ.

**ವಿವರ** : ಅಣುಅಣುವಿನಲ್ಲಿ ವ್ಯಾಪಿಸಿರುವ ಪರಮಾತ್ಮನನ್ನು ಸರ್ವಜೀವರಾಶಿಗಳ ಶರೀರಗಳಲ್ಲಿ ಅವ್ಯಯನಾಗಿ ಯಾರು ನೋಡುತ್ತಿದ್ದಾನೋ, ಮತ್ತು ಅನೇಕ ವಿಧಗಳಾದ ಆಕಾರಗಳಾಗಿ ವಿಭಜಿಸಲಾದ ಶರೀರಗಳಲ್ಲಿ ಒಂದೇ ಆಕಾರವಾಗಿದ್ದು ವಿಭಜಿಸಲಾಗದ ಪರಮಾತ್ಮ ಇದೆಯೆಂದು ತಿಳಿಸುವ ಜ್ಞಾನ ಯಾರಿಗೆ ಇದೆಯೋ, ಆ ಜ್ಞಾನವನ್ನು ಸಾತ್ತ್ವಿಕ ಜ್ಞಾನ ಎನ್ನುತ್ತಾರೆ.

**(17) ಶ್ಲೋ॥ 21 : ಪೃಥಕ್ತ್ವೇನ ತು ಯದ್ ಜ್ಞಾನಂ ನಾನಾಭಾವಾನ್ ಪೃಥಗ್ವಿಧಾನ್ ।**
**ವೇತ್ತಿ ಸರ್ವೇಷು ಭೂತೇಷು ತದ್ ಜ್ಞಾನಂ ವಿದ್ಧಿ ರಾಜಸಮ್ ॥**

**(ರಾಜಸಜ್ಞಾನ)**

**ಭಾವಾರ್ಥ** : ಸರ್ವ ಜೀವರಾಶಿಗಳಲ್ಲಿನ ಭಾವವನ್ನನುಸರಿಸಿ ಅದರಲ್ಲಿನ ಪರಮಾತ್ಮ ಸಹ ಬೇರೆಬೇರೆ ಯಾಗಿದ್ದಾನೆಂದು ತಿಳಿಸುವ ಜ್ಞಾನ ರಾಜಸ ಜ್ಞಾನವಾಗುತ್ತದೆ.

**ವಿವರ** : ಎಲ್ಲಾ ಜೀವರಾಶಿಗಳಲ್ಲಿ ಅವುಗಳ ಭಾವಗಳು ಬೇರೆ ಆದರೂ, ಪರಮಾತ್ಮ ಅಂಶ ಒಂದಾಗಿಯೇ ಇದೆಯೆಂದು ತಿಳಿಯದೇ ಜೀವಿಗಳ ಭಾವಗಳಿರುವಂತೆ ಪರಮಾತ್ಮ ಸಹ ಅನೇಕ ವಿಧಗಳಾಗಿ ಇದೆಯೆಂದು ತಿಳಿಸುವ ಜ್ಞಾನ ರಾಜಸ ಜ್ಞಾನವೆಂದು ಹೇಳಬಹುದು.

**(17) ಶ್ಲೋ॥ 22 : ಯತ್ತು ಕೃತ್ಸ್ನವ ದೇಕಸ್ಮಿನ್ ಕಾರ್ಯೇ ಸಕ್ತ ಮಹೈತುಕಮ್ ।**
**ಅತತ್ತ್ವಾರ್ಥಪದಲ್ಪಂ ಚ ತತ್ತಾಮಸ ಮುದಾಹೃತಮ್ ॥**

**(ತಾಮಸಜ್ಞಾನ)**

**ಭಾವಾರ್ಥ** : ಶಾಸ್ತ್ರಬದ್ಧ ಅಲ್ಲದಿರುವುದು, ಅಸತ್ಯವಾದುದು, ಅಲ್ಪವಾದುದಾದ ಒಂದು ಕಾರ್ಯವೇ ಸರ್ವಾರ್ಥಸಿದ್ಧಿಯೆನ್ನುತ್ತಾ, ಆಸಕ್ತಿಯೆಲ್ಲವೂ ಅದರಲ್ಲಿಟ್ಟ ಜ್ಞಾನವನ್ನು ತಾಮಸ ಜ್ಞಾನ ಎನ್ನುತ್ತಾರೆ.

**(17) ಶ್ಲೋ॥ 23 : ನಿಯತಂ ಸಂಗರಹಿತಂ ಅರಾಗದ್ವೇಷತಃ ಕೃತಮ್ ।**
**ಅಫಲಪ್ರೇಪ್ಸುನಾ ಕರ್ಮ ಯತ್ತ ತ್ಸಾತ್ತ್ವಿಕ ಮುಚ್ಯತೇ ॥**

**(ಸಾತ್ತ್ವಿಕ ಕರ್ಮ)**

**ಭಾವಾರ್ಥ** : ಫಲಾಪೇಕ್ಷೆ ಇಲ್ಲದೆ, ಸಂಗರಹಿತವಾಗಿ, ಪ್ರೇಮ ದ್ವೇಷಗಳು ಇಲ್ಲದಂತೆ ಮಾಡುವ ನಿಯತಕರ್ಮ (ಪ್ರಾರಬ್ಧಕರ್ಮ) ವನ್ನು ಸಾತ್ತ್ವಿಕಕರ್ಮ ಎನ್ನಲಾಗುತ್ತದೆ.

**(17) ಶ್ಲೋ॥ 24 : ಯತ್ತು ಕಾಮೇಪ್ಸುನಾ ಕರ್ಮ ಸಾಹಂಕಾ ರೇಣ ವಾ ಪುನಃ ।**
**ಕ್ರಿಯತೇ ಬಹುಳಾಯಾಸಂ ತದ್ ರಾಜಸಮುದಾಹೃತಮ್ ॥**

**(ರಾಜಸ ಕರ್ಮ)**

**ಭಾವಾರ್ಥ** : ಕೋರಿಕೆಗಳಿರುವವನಾಗಿ ಬಹಳ ಪ್ರಯಾಸದಿಂದ, ಕರ್ತ ತಾನೆನ್ನುವ ಅಹಂ ಭಾವದಿಂದ ಗರ್ವಪಡುತ್ತಾ ಮಾಡುವ ಕರ್ಮವನ್ನು ರಾಜಸ ಕರ್ಮವೆಂದು ಹೇಳುತ್ತಾರೆ.

**(17) ಶ್ಲೋ॥ 25 : ಅನುಬಂಧಂ ಕ್ಷಯಂ ಹಿಂಸಾಂ ಅನಪೇಕ್ಷ್ಯ ಚ ಪೌರುಷಮ್ ।**
**ಮೋಹಾ ದಾರಭ್ಯತೇ ಕರ್ಮ ಯತ್ತ ತ್ತಾಮಸ ಮುಚ್ಯತೇ ॥**

**(ತಾಮಸ ಕರ್ಮ)**

**ಭಾವಾರ್ಥ** : ತಾನು ಮಾಡುವ ಕೆಲಸದಿಂದ ಉಂಟಾಗುವ ನಾಶವನ್ನು, ಹಿಂಸೆಯನ್ನು ಆಲೋಚಿಸದೆ, ತನ್ನ ಕೈಲಾಗುತ್ತದೋ ಇಲ್ಲವೋ ಎಂದು ಯೋಚಿಸದೆ, ಪೌರುಷಗಳಿಂದ ಅಜ್ಞಾನಭ್ರಾಂತಿಯಿಂದ ಮಾಡುವ ಕರ್ಮಗಳನ್ನು ತಾಮಸ ಕರ್ಮಗಳೆಂದು ಹೇಳುತ್ತಾರೆ.

**(17) ಶ್ಲೋ॥ 26 : ಮುಕ್ತಸಂಗೋಽನಹಂವಾದೀ ಧೃತ್ಯುತ್ಸಾಹಸಮನ್ವಿತಃ ।**
**ಸಿದ್ಧ್ಯ ಸಿದ್ಧ್ಯೋ ರ್ನಿರ್ವಿಕಾರಃ ಕರ್ತಾಸಾತ್ತ್ವಿಕ ಉಚ್ಯತೇ ॥**

**(ಸಾತ್ತ್ವಿಕಕರ್ತ)**

**ಭಾವಾರ್ಥ** : ಸಂಗರಹಿತನಾಗಿ ಕರ್ತ ತಾನೆಂಬ ಅಹಂಕಾರ ಇಲ್ಲದಂತೆ ಧೈರ್ಯ ಉತ್ಸಾಹ ಹೊಂದಿ, ಕಾರ್ಯಫಲಗಳಲ್ಲಿ ನಷ್ಟಲಾಭಗಳ ಮೇಲೆ ವ್ಯಾಕುಲತೆ ಹೊಂದದವನಾಗಿ, ಕೆಲಸಗಳು ಮಾಡುವವನನ್ನು ಸಾತ್ತ್ವಿಕ ಕರ್ತನೆಂದು ಹೇಳುತ್ತಾರೆ.

**(17) ಶ್ಲೋ॥ 27 : ರಾಗೀ ಕರ್ಮಫಲಪ್ರೇಪ್ಸು: ರ್ಲುಬ್ಧೋ ಹಿಂಸಾತ್ಮಕೋಽಶುಚಿ ।**
**ಹರ್ಷಶೋಕಾನ್ವಿತಃ ಕರ್ತಾರಾಜಸಃ ಪರಿಕೀರ್ತಿತಃ ॥**

**(ರಾಜಸ ಕರ್ತ)**

**ಭಾವಾರ್ಥ** : ಬಂಧುಗಳ ಮೇಲೆ ಪ್ರೇಮ ಹೊಂದಿ ಕಾರ್ಯಗಳಲ್ಲಿ ಲಾಭವನ್ನು ಕೋರುವನಾಗಿ, ಲೋಭಿಯಾಗುತ್ತಾ ಹಿಂಸೆ ಮಾಡುವನಾಗಿ, ಶುಭ್ರತೆ ಇಲ್ಲದವನಾಗಿ, ಸಂತೋಷ ದುಃಖಗಳಿಗೆ ಚಲಿಸುವವನು ರಾಜಸ ಕರ್ತನಾಗುತ್ತಾನೆ.

**(17) ಶ್ಲೋ॥ 28 : ಅಯುಕ್ತಃ ಪ್ರಾಕೃತ ಸ್ಸ್ತಬ್ಧಃ ಶಠೋ ನೈಷ್ಕೃತಿ ಕೋಽಲಸಃ ।**
**ವಿಷಾದೀ ದೀರ್ಘಸೂ ತ್ರೀ ಚ ಕರ್ತಾ ತಾಮಸ ಉಚ್ಯತೇ ॥**

**(ತಾಮಸಕರ್ತ)**

**ಭಾವಾರ್ಥ** : ಅಸ್ಥಿರ ಸ್ವಭಾವದವನು, ಅನರ್ಹನು, ಶಾಸ್ತ್ರವಿಧಾನ ತಿಳಿಯದ ಅವಿದ್ಯಾಪರನು, ಏನು ಆರಂಭಿಸದೆ ಇರುವವನು, ಮೋಸಗಾರನು, ಇತರರನ್ನು ಕೆಡಿಸುವವನು, ಸೋಮಾರಿತನ ಇರುವವನು, ವಿಷಾದಪರನು, ತಕ್ಷಣ ಮಾಡಬೇಕಾಗಿರುವುದನ್ನು ದೀರ್ಘಕಾಲದವರೆಗೂ ಮಾಡದವನು ತಾಮಸ ಕರ್ತನೆಂದು ಹೇಳುತ್ತಾರೆ.

**(17) ಶ್ಲೋ॥ 29 : ಬುದ್ಧೇ ರ್ಭೇದಂ ಧೃತೇ ಶ್ಚೈವ ಗುಣತ ಸ್ತ್ರಿವಿಧಂ ಶೃಣು ।**
**ಪ್ರೋಚ್ಯಮಾನ ಮಶೇಷೇಣ ಪೃಥಕ್ತ್ವೇನ ಧನಂಜಯ! ॥**

**(ಗುಣಗಳು)**

**ಭಾವಾರ್ಥ** : ಮಾನವನಿಗಿರುವ ತ್ರಿಗುಣಗಳನ್ನನುಸರಿಸಿ ಅವನಿಗಿರುವ ಬುದ್ಧಿ ಮತ್ತು ಧೈರ್ಯಗಳು ಮೂರು ವಿಧಗಳಾಗಿವೆ. ಅವುಗಳನ್ನು ಮೂರು ವಿಧಗಳಾಗಿ ಒಂದೊಂದನ್ನು ವಿವರಿಸಿ ತಿಳಿಸುತ್ತೇನೆ ಕೇಳು.

**(17) ಶ್ಲೋ॥ 30 : ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾ ಕಾರ್ಯೇ ಭಯಾಭಯೇ ।**
**ಬಂಧಂ ಮೋಕ್ಷಂ ಚ ಯಾ ವೇತ್ತಿ ಬುಧ್ಧಿಸ್ಸಾ ಪಾರ್ಥ! ಸಾತ್ತ್ವಿಕೀ ॥**

**(ಸಾತ್ತ್ವಿಕಬುದ್ಧಿ)**

**ಭಾವಾರ್ಥ** : ಇದು ಜನ್ಮಗಳು ಉಂಟುಮಾಡುವುದೆಂದು, ಇದು ಜನ್ಮರಾಹಿತ್ಯ ಮಾಡುವುದೆಂದು, ಇದು ಕಾರ್ಯವೆಂದು, ಇದು ಅಕಾರ್ಯವೆಂದೂ, ಇವು ಭಯಾಭಯಗ

ಳೆಂದು, ಇದು ಬಂಧ, ಇದು ಮೋಕ್ಷ ಎಂದು ವಿವರಿಸಿ ತಿಳಿಸುವ ಬುದ್ಧಿ ಸಾತ್ತ್ವಿಕಬುದ್ಧಿ ಎಂದು ಹೇಳಬಹುದು.

**(17) ಶ್ಲೋ॥ 31 : ಯಯಾ ಧರ್ಮ ಮಧರ್ಮಂಚ ಕಾರ್ಯಂ ಚಾಕಾರ್ಯ ಮೇವ ಚ ।**
**ಅಯಥಾವ ತ್ಪ್ರಜಾನಾತಿ ಬುದ್ಧಿಃ ಸಾಪಾರ್ಥ! ರಾಜಸೀ ॥**

**(ರಾಜಸಬುದ್ಧಿ)**

**ಭಾವಾರ್ಥ** : ಇದು ಧರ್ಮವೆಂದು, ಇದು ಅಧರ್ಮವೆಂದು, ಇದು ಕಾರ್ಯವೆಂದು, ಇದು ಅಕಾರ್ಯವೆಂದು ಇರುವುದು ಇದ್ದಹಾಗೆ ತಿಳಿಸದೆ ಅಪಾರ್ಥವಾಗಿ ಬೇರೆಯದನ್ನು ಸೂಚಿಸುವ ಬುದ್ಧಿ ರಾಜಸಬುದ್ಧಿ ಎಂದು ಹೇಳಬಹುದು.

**(17) ಶ್ಲೋ॥ 32 : ಅಧರ್ಮಂ ಧರ್ಮಮಿತಿ ಯಾ ಮನ್ಯತೇ ತಮಸಾಽವೃತಾ ।**
**ಸರ್ವಾರ್ಥಾನ್ ವಿಪರೀತಾಂಶ್ಚ ಬುದ್ಧಿಃ ಸಾಪಾರ್ಥ! ತಾಮಸೀ ॥**

**(ತಾಮಸಬುದ್ಧಿ)**

**ಭಾವಾರ್ಥ** : ಅಜ್ಞಾನದಿಂದ ಅಧರ್ಮವನ್ನು ಧರ್ಮವೆನಿಸುತ್ತಾ, ಮತ್ತು ತಿಳಿಯಬೇಕಾದವುಗಳಿಗೆಲ್ಲ ವಿರುದ್ಧವಾಗಿ ತಿಳಿಸುತ್ತಿರುವ ಬುದ್ಧಿಯನ್ನು ತಾಮಸ ಬುದ್ಧಿ ಎಂದು ಹೇಳುತ್ತಾರೆ.

**(17) ಶ್ಲೋ॥ 33 : ಧೃತ್ಯಾ ಯಯಾ ಧಾರಯತೇ ಮನಃ ಪ್ರಾಣೇನ್ದ್ರಿಯಕ್ರಿಯಾಃ ।**
**ಯೋಗೇ ನಾವ್ಯಭಿಚಾರಿಣ್ಯಾ ಧೃತಿ ಸ್ಸಾಪಾರ್ಥ! ಸಾತ್ತ್ವಿಕೀ ॥**

**(ಸಾತ್ತ್ವಿಕಧೃತಿ)**

**ಭಾವಾರ್ಥ** : ಶರೀರದಲ್ಲಿನ ಮನಸ್ಸು, ಇಂದ್ರಿಯಗಳು, ವಾಯುವುಗಳೊಂದರ ಕೆಲಸಗಳನ್ನು ನಿಲ್ಲಿಸಿ ಅವುಗಳನ್ನು ಯೋಗದಲ್ಲಿರಿಸಿಕೊಂಡು ನಿಲ್ಲುವಂತೆ ಮಾಡುವ ಧೈರ್ಯವನ್ನು ಸಾತ್ತ್ವಿಕ ಧೈರ್ಯವೆಂದು ಹೇಳಬಹುದು.

**(17) ಶ್ಲೋ॥ 34 : ಯಯಾ ತು ಧರ್ಮಕಾಮಾರ್ಥಾನ್ ಧೃತ್ಯಾ ಧಾರಯತೇಽರ್ಜುನ! ।**
**ಪ್ರಸಂಗೇನ ಫಲಾಕಾಂಕ್ಷೀ ಧೃತಿಃ ಸಾ ಪಾರ್ಥ! ರಾಜಸೀ ॥**

**(ರಾಜಸಧೃತಿ)**

**ಭಾವಾರ್ಥ** : ಹೆಚ್ಚಿನ ಆಸಕ್ತಿ ಇರುವ ಫಲಕಾಂಕ್ಷೆಯಿಂದ ಧರ್ಮದಲ್ಲಿಯೂ ಧನಕ್ಕೋಸ್ಕರ ಆಸೆಯನ್ನು ಉಂಟುಮಾಡುವ ಧೃತಿಯನ್ನು ರಾಜಸ ಧೈರ್ಯ ಎನ್ನಬಹುದು.

**(17) ಶ್ಲೋ॥ 35 : ಯಯಾ ಸ್ವಪ್ನಂ ಭಯಂಶೋಕಂ ವಿಷಾದಂ ಮದಮೇವಚ ।**
**ನ ವಿಮುಂಚತಿ ದುರ್ಮೇಧಾ ಧೃತಿ ಸ್ಸಾ ಪಾರ್ಥ! ತಾಮಸೀ ॥**

**(ತಾಮಸಧೃತಿ)**

**ಭಾವಾರ್ಥ** : ಸ್ವಪ್ನ, ಭಯ, ಶೋಕ, ವಿಷಾದ, ಮದಗಳು ಮೊದಲಾದವುಗಳಲ್ಲಿ ಇರುವ ವಿಷಯಗಳಲ್ಲಿ ದೃಡತ್ವವನ್ನು ಬಿಡದಂತೆ ನಿಲ್ಲಿಸುವ ದುಷ್ಟನಿಗಿರುವ ಧೈರ್ಯವನ್ನು ತಾಮಸಧೃತಿ ಎನ್ನಬಹುದು.

**(17) ಶ್ಲೋ॥ 36 : ಸುಖಂ ತ್ವಿದಾನೀಂ ತ್ರಿವಿಧಂ ಶೃಣು ಮೇ ಭರತರ್ಷಭ ।**
**ಅಭ್ಯಾಸಾ ದ್ರಮತೇ ಯತ್ರ ದುಃಖಾಂತಂ ಚ ನಿಗಚ್ಛತಿ ॥**

**(ಗುಣಗಳು)**

**ಭಾವಾರ್ಥ** : ಅಭ್ಯಾಸವಶದಲ್ಲಿ ಯಾವ ಸುಖ ಉಂಟಾಗುತ್ತದೋ, ಯಾವುದರಿಂದ ದುಃಖಗಳು ಸವೆದುಹೋಗುತ್ತಿವೆಯೋ, ಆ ಮೂರು ವಿಧಗಳಾದ ಸುಖಗಳನ್ನು ವಿವರಿಸುತ್ತೇನೆ ಕೇಳು.

**(17) ಶ್ಲೋ॥ 37 : ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಮ್ ।**
**ತತ್ಸುಖಂ ಸಾತ್ತ್ವಿಕಂ ಪ್ರೋಕ್ತಮಾತ್ಮ ಬುದ್ಧಿ ಪ್ರಸಾದಜಮ್ ॥**

**(ಸಾತ್ತ್ವಿಕ ಸುಖ)**

**ಭಾವಾರ್ಥ** : ಮೊದಲು ನೋಡಿದರೆ ವಿಷತುಲ್ಯವಾಗಿ ತೋಚುತ್ತಾ, ಕಾಲಕಳೆದಂತೆಲ್ಲಾ ಕೊನೆಗೆ ಅಮೃತ ತುಲ್ಯವಾಗಿ ಕಾಣಿಸುವ, ಆತ್ಮ ವಿಷಯದಲ್ಲಿ ಯೋಚಿಸುವ ಬುದ್ಧಿಗೆ ಉಂಟಾಗುವ ಸುಖವನ್ನು ಸಾತ್ತ್ವಿಕ ಸುಖ ಎನ್ನುತ್ತಾರೆ.

**(17) ಶ್ಲೋ॥ 38 : ವಿಷಯೇಂದ್ರಿಯ ಸಂಯೋಗಾ ದ್ಯತ್ತ ದಗ್ರೇಽಮೃತೋಪಮಮ್ ।**
**ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಿಮ್ ॥**

**(ರಾಜಸ ಸುಖ)**

**ಭಾವಾರ್ಥ** : ವಿಷಯಗಳು, ಇಂದ್ರಿಯಗಳು ಸೇರಿ ಏಕವಾಗಿ ಆದಿಯಲ್ಲಿ ಅಮೃತ ಸಮಾನವಾಗಿ ತೋಚುವ ಸುಖ, ಕಾಲಕಳೆದಂತೆಲ್ಲಾ ಪರಿಣಾಮ ಹೊಂದುತ್ತಾ ಕೊನೆಗೆ ವಿಷಕ್ಕೆ ಸಮಾನವಾಗಿ ಕಾಣಿಸುತ್ತದೆ. ಅಂತಹ ಸುಖವನ್ನು ರಾಜಸ ಸುಖವೆಂದು ಹೇಳುತ್ತಾರೆ.

**(17) ಶ್ಲೋ॥ 39 : ಯ ದಗ್ರೇ ಚಾನುಬಂಧೇ ಚ ಸುಖಂ ಮೋಹನ ಮಾತ್ಮನಃ ।**
**ನಿದ್ರಾಲಸ್ಯ ಪ್ರಮಾದೋತ್ಥಂ ತ ತ್ತಾಮಸ ಮುದಾಹೃತಮ್ ॥**
**(ತಾಮಸ ಸುಖ)**

**ಭಾವಾರ್ಥ :** ಆದಿಯಲ್ಲಿ ಅಂತ್ಯದಲ್ಲಿಯೂ ಸಹ ನಿದ್ರೆ, ಆಲಸ್ಯ, ಅಪಾಯಗಳಿಂದ ಕೂಡಿ ಮನಸ್ಸನ್ನು ಅಜ್ಞಾನದಲ್ಲಿ ಮುಳುಗಿಸುವ ಸುಖವನ್ನು ತಾಮಸಸುಖವೆಂದು ಹೇಳಬಹುದು.

**(17) ಶ್ಲೋ॥ 40 : ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾಪುನಃ ।**
**ಸತ್ತ್ವಂ ಪ್ರಕೃತಿ ಜೈರ್ಮುಕ್ತಂ ಯದೇಭಿಃ ಸ್ಯಾತ್ ತ್ರಿಭಿರ್ಗುಣೈಃ ॥**
**(ಗುಣಗಳು)**

**ಭಾವಾರ್ಥ** : ಭೂಮಿ ಮೇಲಿರುವ ಸಮಸ್ತ ಜೀವರಾಶಿಗಳಲ್ಲಿಯೂ ಮತ್ತು ದೈವತ್ವವಿರುವ ದೇವತೆಗಳಲ್ಲಿಯೂ ಯಾರಾದರಾಗಲಿ, ಪ್ರಕೃತಿ ಜನಿತ ಗುಣಗಳನ್ನು ಪೂರ್ತಿ ವಿಸರ್ಜಿಸಿ ಚರಿಸುವವನು ಇಲ್ಲ.

**ವಿವರ** : ಪ್ರತಿ ಮಾನವನು ಬದುಕು ಬಾಳ್ವಿಗಾಗಿ ಕೆಲಸ ಮಾಡಬೇಕಾಗಿದೆ. ಪ್ರತಿ ಕೆಲಸ ಗುಣಪ್ರೇರಿತವಾಗಿ ನಡೆಯಬೇಕಾಗಿದೆ. ಗುಣವಿಲ್ಲದೆ ಕೆಲಸವಿಲ್ಲ. ಕೆಲಸ ನಡೆಯಬೇಕೆಂದರೆ ಗುಣಗಳಿರಲೇಬೇಕು. ಅಂತಹದರಲ್ಲಿ ಯಾರಾದರಾಗಲಿ ದೇವತೆಗಳಲ್ಲಾಗಲಿ, ರಾಕ್ಷಸರಲ್ಲಾಗಲಿ ಮೂರು ಗುಣಗಳನ್ನು ಬಿಟ್ಟು ಇರುವವನು ಇಲ್ಲವೆಂದು ತಿಳಿಯುತ್ತಿದೆ. ಇಲ್ಲಿ ಕೆಲವರಿಗೊಂದು ಪ್ರಶ್ನೆ ಬರಬಹುದು. ಅದು ಏನೆಂದರೆ ಯೋಗ ಮಾಡುವ ಸಮಯದಲ್ಲಿ ಮೂರು ಗುಣಗಳು ಬಿಟ್ಟೇ ಅಲ್ಲವೆ! ಇರುವುದು ಎಂದು ಕೇಳಬಹುದು. ಅದಕ್ಕೆ ಸಮಾಧಾನ ಏನೆಂದರೆ! ಸಮಾಜದಲ್ಲಿ ವ್ಯವಹರಿಸುವ ಮನುಷ್ಯ ಗುಣಗಳು ಇರುವವನೆಂದು ಹೇಳಿದ್ದೇವೆ, ಆದರೆ ವ್ಯವಹರಿಸಿದಂತೆ ಯೋಗ ಮಾಡುವವರ ವಿಷಯ ಹೇಳಲಿಲ್ಲ. ಗುಣಗಳಿಲ್ಲದವನನ್ನು ಯೋಗಿ ಎನ್ನುತ್ತೇವೆ. ಆತನೂ ಸ್ವಲ್ಪ ಸಮಯ ಯೋಗದಲ್ಲಿದ್ದು, ಮತ್ತೆ ಸ್ವಲ್ಪ ಕಾಲ ಸಾಧಾರಣವಾಗಿ ಗುಣಗಳಲ್ಲಿಯೇ ಇರುತ್ತಾನೆಂದು ಗ್ರಹಿಸಬೇಕು.

ಇಲ್ಲಿ ಎಂಟು ಶ್ಲೋಕಗಳು ಕ್ರಮವಾಗಿ ಕಲ್ಪಿತ ಮಾಡಿ ಸೇರಿಸಲಾಗಿವೆ. ಈ ಎಂಟು ಶ್ಲೋಕಗಳಲ್ಲಿನ ಭಾವ ಭಗವಂತನು ಹೇಳಿದ ಜ್ಞಾನಕ್ಕೆ ಪೂರ್ತಿ ವಿರುದ್ಧವಾಗಿದೆ. ಆದ್ದರಿಂದ ಇವುಗಳನ್ನು ಹೊರಗಿಡಬೇಕಾಗಿದೆ. ಭಗವದ್ಗೀತೆ ಅಲ್ಲದಿರುವಂತಹ ಈ ಶ್ಲೋಕಗಳು ಗೀತೆಯಂತೆ ಇದ್ದರೂ, ಅವುಗಳ ಭಾವ ಸಂಕುಚಿತವಾಗಿದೆ ಆದ್ದರಿಂದ ಸುಲಭವಾಗಿ ಗುರುತಿಸುವುದಕ್ಕೆ ಸಾಧ್ಯವಾಗಿದೆ.

ಪರಮಾತ್ಮ ಮಾನವರನ್ನು ಸೃಷ್ಟಿಸಿ ತನ್ನನ್ನು ತಿಳಿದುಕೋ ಎಂದು ಹೇಳಿದ್ದಾನಾಗಲಿ ಕುಲಗಳ, ಮತಗಳ ಹೆಸರಿನಲ್ಲಿ ವಿಭಜಿಸಲಿಲ್ಲ. ಈದಿನ ಭೂಮಿ ಮೇಲಿರುವ ಕುಲಮತಗಳು ಮಾನವನ ಸೃಷ್ಟಿಯೇ ಆಗಲಿ ಪರಮಾತ್ಮ ಸೃಷ್ಟಿಯಲ್ಲವೆಂದು ತಿಳಿಯಬೇಕು. ಈ ವಿಷಯವಾಗಿ ಮೂರನೇ ಅಧ್ಯಾಯವಾದ ಜ್ಞಾನಯೋಗದಲ್ಲಿ 13ನೇ ಶ್ಲೋಕದಲ್ಲಿ **"ಚಾತುರ್ವರ್ಣ್ಯಂ ಮಯಾಸೃಷ್ಟಂ"** ಎನ್ನುವ ಮಾತಿನ ಹತ್ತಿರ ನಾಲ್ಕುವರ್ಣಗಳೆಂದರೆ ನಾಲ್ಕುಕುಲಗಳು ಅಲ್ಲವೆಂದು ಸಹ ಹೇಳಿದ್ದೇವೆ. ಇಲ್ಲಿ ಮತ್ತು ಈ ಶ್ಲೋಕಗಳಲ್ಲಿ ನಾಲ್ಕು ಕುಲಗಳಾದ ಬ್ರಾಹ್ಮಣ, ವೈಶ್ಯ, ಕ್ಷತ್ರಿಯ, ಶೂದ್ರರನ್ನು ಕುರಿತು ಹೇಳುತ್ತಾ ಅವರ ಕುಲಗಳನ್ನನುಸರಿಸಿ ಕೆಲಸಗಳನ್ನು ನಿರ್ಣಯಿಸಿ ಅವುಗಳೇ ಅವರ ಸ್ವಧರ್ಮಗಳೆಂದು ಹೇಳುವುದು ಬಹಳ ವಿಚಿತ್ರ, ಜ್ಞಾನವಿರುದ್ಧ. ಅಷ್ಟೇ ಅಲ್ಲದೇ ಕುಲಗಳನ್ನನುಸರಿಸಿ ಕೆಲಸ ಮಾಡುವುದು ಸ್ವಧರ್ಮವನ್ನು ಆಚರಿಸಿದಂತೆಯೇ ಎಂದು, ಸ್ವಧರ್ಮಾಚರಣೆಯಾದ ಅವರ ಕೆಲಸಗಳಿಗೆ ಕರ್ಮ ಅಂಟುವುದಿಲ್ಲವೆಂದು ಹೇಳುವುದು ಯೋಗಶಾಸ್ತ್ರವಾದ ಭಗವದ್ಗೀತೆಗೆ ವಿರುದ್ಧ. ಭಗವದ್ಗೀತೆಯಲ್ಲಿಯೇ ಭಗವದ್ಗೀತೆಗೆ ವಿರುದ್ಧ ಭಾವಕೊಡುವ ಶ್ಲೋಕಗಳಿರುವುದು ಗಮನಿಸಿದರೆ ಅದರ ಬಗ್ಗೆ ಏನೆಂದು ಹೇಳಬೇಕೋ ಅರ್ಥವಾಗುವುದಿಲ್ಲ. ಯಾವುದು ಏನಾದರೂ ಅವು ಹೊರಬೀಳುವುದು ನಮ್ಮ ಅದೃಷ್ಟವೆಂದುಕೊಳ್ಳಬಹುದು. ಕೆಳಗೆ ಅವುಗಳನ್ನು ಹೇಗೆ ಬರೆದಿದ್ದಾರೋ ಅವುಗಳಲ್ಲಿನ ಭಾವವೇನೋ ನೋಡಿ ಅವುಗಳ ವಿವರವನ್ನು ನಮ್ಮ ಬುದ್ಧಿಯಿಂದ ಯೋಚಿಸೋಣ.

**(17) ಶ್ಲೋ॥ 41 : ಬ್ರಾಹ್ಮಣ ಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರನ್ತಪ !।**
**ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವ ಪ್ರಭವೈರ್ಗುಣೈಃ ॥**

**(ಕಲ್ಪಿತ)**

**ಭಾವಾರ್ಥ** : ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಜಾತಿಗಳ ಸ್ವಭಾವಗಳನ್ನನುಸರಿಸಿ ಬೇರೆ ಬೇರೆ ಕೆಲಸಗಳಿವೆ ಅವುಗಳನ್ನು ವಿವರಿಸುತ್ತೇನೆ.

**ವಿಮರ್ಶೆ**: ಕುಲಗಳನ್ನನುಸರಿಸಿ ಕೆಲಸವೆಂದು, ಆ ಕೆಲಸಗಳು ಅವರ ಸ್ವಭಾವ

ಜನಿತಗಳಾದವೆಂದು, ಅವುಗಳೇ ಅವರ ಸ್ವಧರ್ಮಗಳೆನ್ನುವುದು ಜ್ಞಾನವಲ್ಲ. ಕುಲಗಳ ವ್ಯವಸ್ಥೆಯೇ ಜ್ಞಾನವಲ್ಲ. ಸರ್ವರಿಗೂ ಸಮಾನವಾದ ಪರಮಾತ್ಮ ಹೆಚ್ಚುಕಡಿಮೆ ಕುಲಗಳನ್ನು ಸೃಷ್ಟಿಸಲಿಲ್ಲ. ಜಗತ್ತಿನಲ್ಲಿನ ಸರ್ವಜೀವಿರಾಶಿಗಳಿಗೂ ಅನ್ವಯಿಸುವ ಬೋಧನೆ ಹೇಳಿ ಜಗದ್ಗುರುವೆಂದು ಹೆಸರುವಾಸಿಯಾದ ಪರಮಾತ್ಮ ಕೇವಲ ಮಾನವರಲ್ಲಿ ಮಾತ್ರ ಕುಲಗಳನ್ನು ಏರ್ಪಡಿಸಿ ಉಳಿದ ಜಾತಿಗಳನ್ನು ಬಿಡುವುದು ನಡೆಯುವುದಿಲ್ಲ. ಆತನು ಏನು ಹೇಳಿದರು ಅದು ಎಲ್ಲರಿಗೂ ಅನ್ವಯಿಸುವುದಾಗಿರುತ್ತದೆ. ಮಾನವರಿಗೆ ಅನ್ವಯಿಸಿ ಪ್ರಾಣಿಗಳಿಗೆ ಅನ್ವಯಿಸದ ಕುಲಗಳ ವಿವರವನ್ನು ಭಗವಂತನು ಹೇಳಿರುವುದಿಲ್ಲ. ಅದು ಜ್ಞಾನವಲ್ಲ.

**(17) ಶ್ಲೋ॥ 42 : ಶಮೋ ದಮಸ್ತಪ ಶ್ಔಚಂ ಕ್ಷಾನ್ತಿರಾರ್ಜವ ಮೇವಚ ।**
**ಜ್ಞಾನಂ ವಿಜ್ಞಾನ ಮಾಸ್ತಿಕ್ಯಂ ಬ್ರಾಹ್ಮ ಕರ್ಮ ಸ್ವಭಾವಜಮ್ ॥**

**(ಕಲ್ಪಿತ)**

**(17) ಶ್ಲೋ॥ 43 : ಶೌರ್ಯಂ ತೇಜೋ ಧೃತಿ ರ್ದಾಕ್ಷ್ಯಂ ಯುದ್ಧೇ ಚಾ ಪ್ಯಪಲಾಯನಮ್ ।**
**ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಮ್ ॥**

**(ಕಲ್ಪಿತ)**

**(17) ಶ್ಲೋ॥ 44 : ಕೃಷಿ ಗೋರಕ್ಷ ವಾಣಿಜ್ಯಂ ವೈಶ್ಯಂ ಕರ್ಮ ಸ್ವಭಾವಜಮ್ ।**
**ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಮ್ ॥**

**(ಕಲ್ಪಿತ)**

**ಭಾವಾರ್ಥ** : ಶಮ, ದಮಗಳು, ತಪಸ್ಸು, ಶೌಚ, ಶಾಂತಿ, ಜ್ಞಾನ, ವಿಜ್ಞಾನಗಳ ಆರ್ಜವ, ಆಸ್ತಿಕತೆ ಬ್ರಾಹ್ಮಣರಿಗೆಲ್ಲ ಸಹಜ ಕರ್ಮಗಳಾಗುತ್ತವೆ. ಹಾಗೆ ಶೌರ್ಯ ತೇಜಸ್ಸುಗಳನ್ನು, ಕಾರ್ಯದಕ್ಷತೆ ಧೈರ್ಯ, ಯದ್ಧದಲ್ಲಿ ಬೆನ್ನು ತೋರಿಸದಿರುವುದು, ದಾನ, ಅಧಿಕಾರ ವಹಿಸುವುದು ಕ್ಷತ್ರಿಯರಿಗೆ ಸ್ವಭಾವಕರ್ಮ ಎನ್ನಲಾಗುತ್ತದೆ. ಗೋವುಗಳನ್ನು ರಕ್ಷಿಸಿ ಪೋಷಿಸುವುದು, ವ್ಯಾಪಾರ ಮಾಡುವುದು, ವೈಶ್ಯರಿಗೆ ಸಹಜಕರ್ಮ ಎಂದೂ, ಪರಿಚರ್ಯಗಳು ಮಾಡುವುದೇ ಶೂದ್ರ ಜನರ ಸ್ವಭಾವಕರ್ಮ ಎಂದು ಹೇಳಲಾಗಿದೆ.

**ವಿಮರ್ಶೆ** : ಹೀಗೆ ಕುಲಗಳಿಗೆ ಕೆಲಸಗಳು ಅಂಟಿಸಿ ಆ ಕೆಲಸಗಳನ್ನೇ ಅವರ ಸಹಜಕರ್ಮ ವೆಂದು, ಅವು ಅವರ ಸ್ವಧರ್ಮಗಳೆಂದು ಹೇಳುವುದು ಪೂರ್ತಿ ಜ್ಞಾನವಿರುದ್ಧ. ಏಕೆಂದರೆ! ಕರ್ಮಯೋಗ ಎರಡನೇ ಅಧ್ಯಾಯದಲ್ಲಿ 35ನೇ ಶ್ಲೋಕದಲ್ಲಿ ಸ್ವಧರ್ಮ ಪರಧರ್ಮಗಳನ್ನೇ

ಕುರಿತು ಹೇಳಿದ್ದೇವೆ. ಅಲ್ಲಿ ಪ್ರಕೃತಿ ಕಾರ್ಯಗಳಿಗೆ ಸಂಬಂಧಿಸಿರುವವೆಲ್ಲವೂ ಪರಧರ್ಮ ಗಳೆಂದೂ ಕೇವಲವೊಂದು ಆತ್ಮ ಸಂಬಂಧವಾಗಿ ಇರುವವು ಮಾತ್ರವೇ ಸ್ವಧರ್ಮಗಳೆಂದು ಸೂತ್ರ ಬದ್ಧವಾಗಿ ಹೇಳಲಾಗಿದೆ. ಅವುಗಳ ಸೂತ್ರದ ಪ್ರಕಾರ ಇಲ್ಲಿ ಹೇಳಿದ ನಾಲ್ಕು ಜಾತಿಗಳ ಕೆಲಸಗಳು ಪ್ರಕೃತಿಗೆ ಸಂಬಂಧಿಸಿರುವವು. ಆದ್ದರಿಂದ ಅವು ಎಲ್ಲವೂ ಪರಧರ್ಮಗಳೇ ಎಂದು ಹೇಳಬಹುದು. ಪರಧರ್ಮಗಳಾದವುಗಳನ್ನು ಸ್ವಧರ್ಮಗಳು ಎಂದುಕೊಳ್ಳುವುದು ಅಜ್ಞಾನವೆಂದು ಹೇಳಬಹುದು. ಆದ್ದರಿಂದ ಈ ಶ್ಲೋಕಗಳು ಗೀತೆಯಿಂದ ಬಹಿಷ್ಕರಿಸಲ್ಪಟ್ಟಿವೆ.

**(17) ಶ್ಲೋ॥ 45 : ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ ।**
**ಸ್ವಕರ್ಮನಿರತಸ್ಸಿದ್ಧಿಂ ಯಥಾ ವಿನ್ಧತಿ ತಚ್ಛೃಣು ॥**

**(ಕಲ್ಪಿತ)**

**(17) ಶ್ಲೋ॥ 46 : ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂತತಮ್ ।**
**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ ॥**

**(ಕಲ್ಪಿತ)**

**(17) ಶ್ಲೋ॥ 47 : ಶ್ರೇಯಾನ್ ಸ್ವಧರ್ಮೋವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।**
**ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥**

**(ಕಲ್ಪಿತ)**

**(17) ಶ್ಲೋ॥ 48 : ಸಹಜಂ ಕರ್ಮಕೌಂತೇಯ ! ಸದೋಷ ಮಪಿನ ತ್ಯಜೇತ್ ।**
**ಸರ್ವಾರಂಭಾ ಹಿದೋಷೇಣ ಧೂಮೇ ನಾಗ್ನಿರಿವಾಽವೃತಾಃ ॥**

**(ಕಲ್ಪಿತ)**

**ಭಾವಾರ್ಥ:** ಅವರವರ ಕರ್ಮಗಳ ಬಗ್ಗೆ ಶ್ರದ್ಧೆಹೊಂದಿ ಮಾಡುವವರು ಮೋಕ್ಷ ಪಡೆಯುತ್ತಾರೆ. ನರನು ಸ್ವಧರ್ಮದಿಂದ ಸಿದ್ಧಿ ಹೇಗೆ ಪಡೆಯುತ್ತಾನೋ ಹೇಳುತ್ತೇನೆ. ಎಲ್ಲ ಜೀವರಾಶಿಗಳಿಗೆ ಸೃಷ್ಠಿಕರ್ತನಾದ ಪರಮಾತ್ಮನನ್ನು ಸ್ವಕೀಯಕರ್ಮ ಆಚರಿಸುವುದರಿಂದ ಪೂಜಿಸಿದವನಾಗಿ ಮೋಕ್ಷ ಹೊಂದಬಹದು. ಒಳ್ಳೆಯದಾಗಿ ಕಾಣಿಸುವ ಪರರ ಧರ್ಮಕ್ಕಿಂತ ಸ್ವಧರ್ಮ ಶ್ರೇಯಸ್ಕರ. ತನ್ನ ಕುಲ ಸ್ವಭಾವಜನಿತವಾದ ಕರ್ಮ ಮಾಡುವವನಿಗೆ ಪಾಪ ಬರುವುದಿಲ್ಲ. ಅಷ್ಟೇ ಅಲ್ಲದೆ ಅಗ್ನಿಗೆ ಹೊಗೆ ಅಂಟಿಕೊಂಡಿರುವಂತೆ ಸರ್ವಕಾರ್ಯಗಳಿಗೂ ಕರ್ಮವೆಂಬ

ದೋಷ ಇರುತ್ತದೆ. ಆದರೇ ಕುಲವನ್ನನುಸರಿಸಿ ಇರುವ ಕೆಲಸ ದೋಷ ಇರುವುದಾದರು ಬಿಡಬಾರದಾದರು ಮಾಡಬೇಕಾಗಿದೆ. ಸಹಜ ಕರ್ಮ ಮಾಡುವುದರಲ್ಲಿ ದೋಷವಿಲ್ಲ.

**ವಿಮರ್ಶೆ** : ಮಾನವರಲ್ಲಿ ಕುಲ ವಿಭಜನೆಮಾಡಿ ಆ ಕುಲಗಳಿಗೆ ನಿರ್ಣಯಿಸಿದ ಕೆಲಸಗಳನ್ನು ಸ್ವಧರ್ಮವೆಂದು, ಅವು ಆಚರಿಸುವುದೇ ಪರಮಾತ್ಮನನ್ನು ಆರಾಧಿಸಿದಂತಾಗುತ್ತದೆಂದು, ವೈಶ್ಯರು ವ್ಯಾಪಾರ ಮಾಡುವುದರಲ್ಲಿ ದೋಷವಿದ್ದರೂ ಪಾಪ ಬರುವುದಿಲ್ಲವೆಂದು, ಹಾಗೆ ಕ್ಷತ್ರಿಯರು ರಾಜ್ಯಕ್ಕೋಸ್ಕರ ಎಷ್ಟೋಜನರನ್ನು ಸಾಯಿಸುವುದು ಪಾಪದ ಕೆಲಸವಾದರು ಪಾಪ ಬರುವುದಿಲ್ಲವೆಂದು, ಸ್ವಭಾವ ಜನಿತವಾದ ಯಾವ ಕೆಲಸದಲ್ಲಿಯೂ ಕರ್ಮ ಅಂಟುವುದಿಲ್ಲವೆಂದು ಹೇಳುವುದು ಆಶ್ಚರ್ಯ, ವಿಪರೀತ ಅಜ್ಞಾನ, ಅಧರ್ಮ ಕುಲದಲ್ಲಿನ ಕೆಲಸಗಳು ಸ್ವಧರ್ಮವೆನ್ನುವುದೇ ದೊಡ್ಡ ಅಜ್ಞಾನ. ಅವು ಕರ್ಮತಂದಿಡುವವಾದರೂ ಅವುಗಳ ಮೂಲಕ ಮೋಕ್ಷ ಪಡೆಯಬಹುದೆಂದು ಹೇಳುವುದು ಮತ್ತಷ್ಟು ಅಜ್ಞಾನ, ಅಶಾಸ್ತ್ರೀಯ. ಕುಲವನ್ನನುಸರಿಸಿ ಇರುವ ಸ್ವಕರ್ಮ ದೋಷವಿರುವುದಾದರು ಆಚರಿಸುವುದು ಒಳ್ಳೆಯದೆಂದು ಹೇಳುವುದು ಪೂರ್ತಿ ಅಜ್ಞಾನ. ವ್ಯಾಪಾರ ವೈಶ್ಯರಲ್ಲದೆ ಇತರರು ಮಾಡಿದರೆ ಅಧರ್ಮವಾಗುತ್ತದಾ? ವ್ಯಾಪಾರದಲ್ಲಿ ಎಷ್ಟು ಮೋಸಗಳು ಮಾಡಿದರು ಕರ್ಮ ಅಂಟುವುದಿಲ್ಲವಾ? ಇಲ್ಲಿಯವರೆಗೂ ಭಗವಂತನು ಎಲ್ಲಿಯಾದರು ಈ ಮಾತುಗಳು ಹೇಳಿದ್ದಾನಾ? ಅಹಂಕಾರ ಬಿಟ್ಟು ಯಾರು ಯಾವ ಕೆಲಸ ಮಾಡಿದರೂ ಅವನಿಗೆ ಕರ್ಮ ಅಂಟುವುದಿಲ್ಲ ಎಂದಿದ್ದಾನೆ, ಆದರೆ ಯೋಗಪದ್ಧತಿ ಅಲ್ಲದೆ ಕುಲ ಕೆಲಸವನ್ನು ಮಾಡುವುದರಲ್ಲಿ ಪಾಪ ಬರುವುದಿಲ್ಲವೆಂದು ಹೇಳುವುದು ಯೋಗಶಾಸ್ತ್ರವಾದ ಭಗವದ್ಗೀತೆಗೆ ವಿರುದ್ಧ ಅಲ್ಲವೆ! ಹೀಗೆ ವಿರುದ್ಧ ಭಾವಗಳು ಬರೆದು ಗೀತೆಯಲ್ಲಿ ಹೇಳುವುದರಿಂದ ಎಷ್ಟೋಜನ ಗೀತೆಯಿಂದ ಅಜ್ಞಾನಿಗಳಾಗುವುದಕ್ಕೆ ಅವಕಾಶವಿದೆ. ಈ ಶ್ಲೋಕಗಳು ಇಲ್ಲಿ ಇರುವುದರಿಂದ ಭಗವಂತನ ಭಾವಕ್ಕೆ ಮುಪ್ಪು ತಂದಿಡುತ್ತವೆ. ದೊಡ್ಡ ಪಾತ್ರೆಯಲ್ಲಿರುವ ಪಾಯಸದಲ್ಲಿ ಚಿಕ್ಕ ವಿಷ ಬಿಂದು ಸೇರಿದಂತೆ, ಎಷ್ಟೋ ಶ್ಲೋಕಗಳ ರೂಪವಾಗಿ ಹೇಳಿದ ಕರ್ಮಯೋಗ ಪದ್ಧತಿಯನ್ನು ಈ ಎಂಟು ಶ್ಲೋಕಗಳು ಛಿನ್ನಾಭಿನ್ನವಾಗಿ ಮಾಡುತ್ತಿವೆ. ಆದ್ದರಿಂದ ಇಷ್ಟು ಕೆಟ್ಟದ್ದನ್ನು ಮಾಡುವ ಈ ಶ್ಲೋಕಗಳನ್ನು ಪೂರ್ತಿಯಾಗಿ ತೆಗೆದುಹಾಕಲಾಗಿದೆ. ನಾನು ಹೇಳುವುದೇ ಅಲ್ಲದೆ ನೀವೂ ಸಹ ಯೋಚಿಸಿ ತಿಳಿದುಕೊಳ್ಳುವುದು ಮುಖ್ಯ.

**(17) ಶ್ಲೋ॥ 49 : ಅಸಕ್ತಬುದ್ಧಿಃ ಸರ್ವತ್ರ ಜಿತಾತ್ಮಾವಿಗತಸ್ಪೃಹಃ ।**
**ನೈಷ್ಕರ್ಮ್ಯಸಿದ್ಧಿಂ ಪರಮಾಂ ಸನ್ನ್ಯಾಸೇ ನಾಧಿಗಚ್ಛತಿ ॥**
**(ಕರ್ಮಯೋಗ)**

**ಭಾವಾರ್ಥ** : ಯಾವುದರಲ್ಲಿಯೂ ಆಸಕ್ತಿ ಇಲ್ಲದವನಾಗಿ, ಮನಸ್ಸಿನಲ್ಲಿ ವಿಷಯ ಸ್ಪೃಹಗಳನ್ನು ಬಿಟ್ಟು ಕಾರ್ಯ ಮಾಡಿದರೆ, ಕರ್ಮ ಅಂಟದ ಸನ್ಯಾಸದಿಂದ ಆತ್ಮವನ್ನು ಜಯಿಸಿದ(ತಿಳಿದುಕೊಂಡ)ವನಾಗುತ್ತಿದ್ದಾನೆ.

**(17) ಶ್ಲೋ॥ 50: ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮತಥಾಽಪ್ನೋತಿ ನಿಬೋಧಮೇ ।**
**ಸಮಾಸೇನೈವ ಕೌಂತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ ॥**
**(ಯೋಗ)**

**ಭಾವಾರ್ಥ** : ಕರ್ಮಯೋಗಸಿದ್ಧಿಯನ್ನು ಹೊಂದಿದವನನ್ನು ಕುರಿತು ನಾನು ತಿಳಿಸಿದ್ದೇನೆ. ಹಾಗೇ ಬ್ರಹ್ಮಯೋಗ ಪದ್ಧತಿ ನನ್ನಿಂದ ತಿಳಿದುಕೊ. ಇದು ಜ್ಞಾನ ನಿಷ್ಠೆಯಲ್ಲಿ ಶ್ರೇಷ್ಟವಾದುದು.

**(17) ಶ್ಲೋ॥ 51 : ಬುದ್ಧ್ಯಾವಿಶುದ್ಧಯಾ ಯುಕ್ತೋ ಧೃತ್ಯಾಽತ್ಮಾನಂ ನಿಯಮ್ಯಚ ।**
**ಶಬ್ದಾದೀನ್ ವಿಷಯಾಂ ಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ॥**
**(ಯೋಗ)**

**(17) ಶ್ಲೋ॥ 52 : ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯ ಮಾನಸಃ ।**
**ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ ॥**
**(ಯೋಗ)**

**(17) ಶ್ಲೋ॥ 53 : ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂಪರಿಗ್ರಹಮ್ ।**
**ವಿಮುಚ್ಯ ನಿರ್ಮಮ ಶ್ಶಾನ್ತೋ ಬ್ರಹ್ಮಭೂಯಾಯ ಕಲ್ಪತೇ ॥**
**(ಯೋಗ)**

**ಭಾವಾರ್ಥ** : ಶುದ್ಧವಾದ ಬುದ್ಧಿಯಿಂದ, ವಿಷಯಗಳನ್ನು ಜಯಿಸಿ, ಆತ್ಮನಲ್ಲಿಯೇ ಮನಸ್ಸನ್ನು ನಿಯಮಿಸಿ, ಶಬ್ಧಾದಿ ವಿಷಯಗಳನ್ನು ತ್ಯಜಿಸಿ, ರಾಗದ್ವೇಷ ಗುಣಗಳನ್ನು ಬಿಟ್ಟು, ಏಕಾಂತವಾಸ ಮಾಡುತ್ತಾ, ಮಿತವಾಗಿ ಭುಜಿಸುತ್ತಾ, ವಾಕ್‌ಮನೋಕಾಯಗಳು ಕೆಲಸ ಮಾಡದಂತೆ ಮಾಡಿ, ನಿತ್ಯ ಧ್ಯಾನಯೋಗ (ಬ್ರಹ್ಮಯೋಗ) ದಲ್ಲಿಯೇ ಲಗ್ನವಾಗಿ, ಅಹಂಕಾರ ಬಲ,

ಗರ್ವ, ಕಾಮ, ಕ್ರೋಧ, ಬಾಹ್ಯ ವಸ್ತುಗಳ ಮೇಲೆ ಧ್ಯಾಸ ಬಿಟ್ಟು, ಮಮಕಾರವಿಲ್ಲದೆ ಶಾಂತಿ ಪಡೆಯುವವನು ಪರಬ್ರಹ್ಮವನ್ನು ಹೊಂದುವುದಕ್ಕೆ ಸಮರ್ಥನಾಗುತ್ತಾನೆ.

**ವಿವರ** : ಹಿಂದಿನ ಅಧ್ಯಾಯದಲ್ಲಿ ಎಷ್ಟೋ ಶ್ಲೋಕಗಳಲ್ಲಿ ಕರ್ಮ ಬ್ರಹ್ಮ ಯೋಗಗಳನ್ನು ಕುರಿತು ಬಹಳ ವಿವರವಾಗಿ ಹೇಳಿದ್ದರೂ ಕೊನೆಯ ಅಧ್ಯಾಯದಲ್ಲಿ ಮತ್ತೆ ಈಗ ಅವುಗಳನ್ನು ಕುರಿತು ಜ್ಞಾಪಕ ಮಾಡುತ್ತಿದ್ದಾನೆ. ಮೊದಲು ಕರ್ಮಯೋಗವನ್ನು ಹೇಳಿ ನಂತರ ಬ್ರಹ್ಮಯೋಗವನ್ನು ಕುರಿತು ಸಹ ಹೇಳಿದ್ದಾನೆ. ಇಲ್ಲಿಗೆ ಕರ್ಮ, ಬ್ರಹ್ಮಯೋಗಗಳನ್ನು ವಿವರಿಸಿ ಹೇಳುವುದು ಮುಕ್ತಾಯವಾಗಿದೆಯೆಂದುಕೊಳ್ಳುತ್ತೇವೆ. ಇಷ್ಟುಬಾರಿ ಜ್ಞಾಪಕ ಮಾಡುವುದರಲ್ಲಿ ಸಾರಾಂಶ ಇವುಗಳನ್ನು ಮರೆಯಬಾರದೆಂದೇ. ಆದ್ದರಿಂದ ಪರಮಾತ್ಮನನ್ನು ಸೇರುವುದಕ್ಕೆ ಯೋಗಪದ್ಧತಿಯಲ್ಲಿ ಎರಡೇ ಮಾರ್ಗಗಳಿವೆ ಎಂದು ಮರೆಯಬಾರದು.

**(17) ಶ್ಲೋ॥ 54 : ಬ್ರಹ್ಮಭೂತಃ ಪ್ರಸನ್ನಾತ್ಮಾ ನಶೋಚತಿ ನಕಾಂಕ್ಷತಿ ।**
**ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಮ್ ॥**

**(ಬ್ರಹ್ಮ, ಕರ್ಮಯೋಗಗಳು)**

**ಭಾವಾರ್ಥ**: ಬ್ರಹ್ಮಭೂತನು, ಆತ್ಮ ಪ್ರಸನ್ನನು ಕೋರಿಕೆಗಳನ್ನು ಕೋರುವುದಿಲ್ಲ. ದುಃಖಗಳನ್ನು ಹೊಂದುವುದಿಲ್ಲ, ಸರ್ವಭೂತಗಳನ್ನು ಸಮವಾಗಿ ನೋಡುವವನಾಗಿ ಉತ್ತಮನಾಗಿ ನನ್ನ ಭಕ್ತಪರನಾಗುತ್ತಾನೆ.

**ವಿವರ** : ಕರ್ಮಯೋಗವನ್ನು ಆಚರಿಸುವವನು ಪ್ರಾರಬ್ಧ ಕರ್ಮದ ಪ್ರಕಾರ ಸರ್ವ ಕಾರ್ಯಗಳು ನಡೆಯುತ್ತಿವೆ ಎಂದು, ಅವುಗಳಿಂದ ಕಷ್ಟಸುಖಗಳು ಉಂಟಾಗುತ್ತಿವೆ ಎಂದು, ತಿಳಿದವನಾಗಿ ಕಷ್ಟಬಂದರು ದುಃಖಪಡುವುದಿಲ್ಲ, ಸುಖಬೇಕೆಂಬ ಕೋರಿಕೆಯು ಕೋರುವುದಿಲ್ಲ. ಹಾಗೆ ಬ್ರಹ್ಮಯೋಗಿ ಆದವನು ಆತ್ಮ ತನ್ನಲ್ಲಿರುವಂತೆ ಸರ್ವರಲ್ಲಿದೆ ಎಂದು ತಿಳಿದವನಾಗಿ, ಸರ್ವ ಜೀವರಾಶಿಗಳಲ್ಲಿ ಆತ್ಮವನ್ನು ಸಮವಾಗಿ ನೋಡುವವನಾಗಿರುತ್ತಾನೆ. ಇವರಿಬ್ಬರು ಪರಮಾತ್ಮನಿಗೆ ಪರಮಭಕ್ತಿಪರರೆಂದು ತಿಳಿಯಬಹುದು.

**(17) ಶ್ಲೋ॥ 55 : ಭಕ್ತ್ಯಾ ಮಾ ಮಭಿಜಾನಾತಿ ಯಾವಾನ್ಯಶ್ಚಾಸ್ಮಿ ತತ್ತ್ವತಃ ।**
**ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನನ್ತ ರಮ್ ॥**

**(ಸಾಕಾರ, ನಿರಾಕಾರ)**

**ಭಾವಾರ್ಥ** : ನಾನು ನಿಶ್ಚಯವಾಗಿ ಎಂತಹವನೋ, ಯಾರಾಗಿ ಇದ್ದೇನೊ ಪರಮ ಭಕ್ತಿಯಿಂದ ತಿಳಿದವನು, ನನ್ನ ಯಥಾರ್ಥವೆಲ್ಲವೂ ತಿಳಿದವನಾಗಿ ತದ ನಂತರ ನನ್ನಲ್ಲಿಯೇ ಸೇರುತ್ತಾನೆ.

**ವಿವರ** : ಪರಮಾತ್ಮನ ನಿಜಸ್ಥಿತಿ ಏನೋ ತಿಳಿಯುವುದು ಬಹಳ ಕಷ್ಟ. ವಿಶೇಷವಾದ ಜ್ಞಾನ ಇರುವವನಿಗೆ ಮಾತ್ರವೇ ಪರಮಾತ್ಮನನ್ನು ಕುರಿತಾದ ಜ್ಞಾನ ತಿಳಿಯುತ್ತದೆ. ಇಲ್ಲದಿದ್ದರೆ ಭೂಮಿ ಮೇಲಿರುವ ಅನೇಕ ವಿಧ ದೇವತೆಗಳ ಮೇಲೆ ಪ್ರತಿಯೊಬ್ಬರಿಗೂ ಧ್ಯಾಸ, ಭಕ್ತಿ ಇರುತ್ತದೆ. ಎಷ್ಟೋ ಜನ್ಮಗಳಿಂದ ಜ್ಞಾನಪರವಾಗಿ ಆಸಕ್ತಿ ಇರುವವನಿಗೆ ಕೊನೆಗೆ ಪರಮಾತ್ಮ ಒಬ್ಬನಿದ್ದಾನೆಂದು ಆತನು ದೇವತೆಗಳೆಲ್ಲರಿಗೂ ದೇವರೆಂದು ತಿಳಿಯುತ್ತದೆ. ಕೇವಲ ಪರಮಾತ್ಮ ಎನ್ನುವವನು ಒಬ್ಬನಿದ್ದಾನೆಂದು ತಿಳಿಯುವುದಕ್ಕೆ ಎಷ್ಟೋ ಜನ್ಮಗಳು ಬೇಕಾಗಿಬಂದರೆ, ಆತನ ನಿಜಸ್ಥಿತಿಯನ್ನು ಕುರಿತು ತಿಳಿದುಕೊಳ್ಳಬೇಕೆಂದರು, ಆತನು ಯಾರಾಗಿರುವುದು ಹೇಗಿರುವುದು ತಿಳಿಯಬೇಕೆಂದರೆ ಕೆಲವು ಜನ್ಮಗಳು ಜ್ಞಾನಮಾರ್ಗದಲ್ಲಿ ನಡೆದರಾಗಲಿ ಅರ್ಥವಾಗುವುದಿಲ್ಲ. ಹಾಗೆ ಎಷ್ಟೋ ಜನ್ಮಗಳ ಜ್ಞಾನ ಅನ್ವೇಷಣೆಯಿಂದ ಕೊನೆಗೆ ಪರಮಾತ್ಮ ಸಮಸ್ತ ಸೃಷ್ಟಿಕರ್ತ, ಸ್ಥಿತಿಕರ್ತ, ಲಯಕರ್ತ ಎಂದೂ, ಆತನು ನಿರಾಕಾರವಾಗಿ ಅಣುಅಣುವಿನಲ್ಲಿ ಎಲ್ಲಾಕಡೆ ವ್ಯಾಪಿಸಿದ್ದಾನೆಂದು, ಆತನಿಗೆ ಹೆಸರು ರೂಪ ಇಲ್ಲವೆಂದು ತಿಳಿಯಬಹುದು. ಇನ್ನೂ ವಿಶೇಷವಾದ ಜ್ಞಾನ ಸಂಪಾದಿಸಿಕೊಂಡವನಿಗೆ ಪರಮಾತ್ಮ ನಿರಾಕಾರನಾಗಿದ್ದು, ಆಗಾಗ ಸಾಕಾರರೂಪವಾಗಿ ಭೂಮಿ ಮೇಲೆ ಹುಟ್ಟುತ್ತಾನೆಂದು, ಹುಟ್ಟಿ ತನ್ನ ಧರ್ಮಗಳನ್ನು ಕುರಿತು ತಾನೇ ತಿಳಿಸಿ ಹೋಗುತ್ತಾನೆಂದೂ ಸಹ ತಿಳಿಯುತ್ತದೆ. ಸಾಕಾರರೂಪದ ಮೇಲೆ ಹೆಚ್ಚಿನ ಭಕ್ತಿಹೊಂದಿದವರು ಆ ಜನ್ಮವನ್ನು ಗುರುತಿಸಿ, ಆ ಜನ್ಮದಲ್ಲಿಯೇ ಸಾಫಲ್ಯ ಹೊಂದುತ್ತಾರೆ. ಪರಮಾತ್ಮ ಸ್ಥಿತಿಗತಿಗಳನ್ನು ತಿಳಿದವರು ಕರ್ಮಯೋಗ ಪದ್ಧತಿಯಾಗಲಿ, ಬ್ರಹ್ಮಯೋಗ ಪದ್ಧತಿಯಾಗಲಿ ಅವಲಂಭಿಸಿ ಕೊನೆಗೆ ಮೋಕ್ಷ ಹೊಂದುತ್ತಾರೆ. ಭಕ್ತಿಯೋಗವೆಂಬ ಪ್ರತ್ಯೇಕ ಮಾರ್ಗವನ್ನು ಅನುಸರಿಸಿದವರು, ಸಾಕಾರದಲ್ಲಿರುವ ಪರಮಾತ್ಮನನ್ನು ಗುರುತಿಸಿದವರು ಒಂದೇ ಜನ್ಮದಲ್ಲಿ ಮೋಕ್ಷವನ್ನು ಹೊಂದಿದರೆ, ಕರ್ಮ ಬ್ರಹ್ಮಯೋಗ ಮಾರ್ಗಗಳನ್ನು ಅವಲಂಭಿಸಿದವರು ಕೆಲವು ಜನ್ಮಗಳ ನಂತರ ಮೋಕ್ಷ ಹೊಂದುತ್ತಾರೆ.

**(17) ಶ್ಲೋ॥ 56 : ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ ।**
**ಮತ್ಪ್ರಸಾದಾ ದವಾಪ್ನೋತಿ ಶಾಶ್ವತಂ ಪದ ಮವ್ಯಯಮ್ ॥**

**(ಮೋಕ್ಷ)**

**ಭಾವಾರ್ಥ** : ಸರ್ವಕರ್ಮಗಳನ್ನು ಯಾವಾಗಲೂ ನನ್ನ ಪದ್ಧತಿಯನ್ನು ಆಶ್ರಯಿಸಿ ಮಾಡುವವನಿಗೆ ನನ್ನ ಅನುಗ್ರಹದಿಂದ ಅವ್ಯಯವಾದ ಶಾಶ್ವತವಾದ ಪರಮಪದವಿ ಲಭಿಸುತ್ತದೆ.

**ವಿವರ** : ಪರಮಾತ್ಮ ತನ್ನ ಧರ್ಮಗಳನ್ನು ತಿಳಿಸುವ ಸಲುವಾಗಿ ಮಾನವನ ಅವತಾರ ಎತ್ತಿದಾಗ ಆತನು ಯಾವ ವಿಧವಾಗಿ ಕಾರ್ಯಗಳು ಮಾಡಿದ್ದಾನೋ, ಕಾರ್ಯಗಳು ಮಾಡುತ್ತಾ ಯಾವ ವಿಧವಾಗಿ ಕರ್ಮಗಳಂಟದ ವಿಧಾನವನ್ನು ಅವಲಂಭಿಸಿದ್ದಾನೋ ತಿಳಿದು, ಆ ಪದ್ಧತಿಗಳನ್ನೇ ಆಶ್ರಯಿಸಿದವನಾಗಿ ಕೆಲಸಗಳು ಮಾಡುತ್ತಾ ಹೋದರು ಪರಮಾತ್ಮ ಪ್ರಸಾದಿಸುವ ಶಾಶ್ವತ ಮೋಕ್ಷ ಹೊಂದಬಹುದು.

**(17) ಶ್ಲೋ॥ 57 : ಚೇತಸಾ ಸರ್ವಕರ್ಮಾಣಿ ಮಯಿ ಸನ್ನ್ಯಸ್ಯ ಮತ್ಪರಃ ।**
**ಬುದ್ಧಿಯೋಗ ಮುಪಾಶ್ರಿತ್ಯ ಮಚ್ಚಿತ್ತ ಸತತಂ ಭವ ॥**

**(ಕರ್ಮಯೋಗ)**

**ಭಾವಾರ್ಥ** : ಮನಸ್ಸಿನಿಂದ ಸರ್ವಕಾರ್ಯಗಳು ನನಗೇ ಸಮರ್ಪಿಸಿ, ನೀನು ಯಾವಾಗಲು ನನ್ನಲ್ಲಿಯೇ ಚಿತ್ತವನ್ನು ಲಗ್ನ ಮಾಡಿ, ನನಗಿಂತ ಇತರೆ ಇಲ್ಲವೆಂದು ತಿಳಿದು ಕರ್ಮಯೋಗ ವನ್ನು ಆರಾಧಿಸು.

**ವಿವರ** : ಇಲ್ಲಿಯವರೆಗೂ ಜ್ಞಾನವನ್ನು ವಿವರಿಸಿ ಹೇಳಿದ ಭಗವಂತನು ಈಗ ಅರ್ಜುನನಿಗೆ ಸಲಹೆ ಕೊಡುತ್ತಿದ್ದಾನೆ. ನೀನು ಹೀಗೇ ನಡೆದುಕೋ ಎಂದು ಹೇಳುತ್ತಿದ್ದಾನೆ. ಅದು ಏನೆಂದರೆ! ಮನಸ್ಸಿನ ಮೂಲಕ ಎಲ್ಲಾ ಕೆಲಸಗಳು ಪರಮಾತ್ಮನಿಗೆ ಸಮರ್ಪಿಸಿ, ಎಲ್ಲಾ ಕೆಲಸಗಳು ಮಾಡಿಸುವವನು ಪರಮಾತ್ಮನೆಂದು ಚಿತ್ತದಿಂದ ನಿರ್ಣಯಿಸಿ, ಮಾಡುವ ಕೆಲಸಗಳೆಲ್ಲ ಪರಮಾತ್ಮ ನಿರ್ಣಯವೆಂದು ತಿಳಿಯುತ್ತಾ, ಪರಮಾತ್ಮನಿಗಿಂತ ಬೇರೇನು ಇಲ್ಲವೆಂದು ತಿಳಿದು, ನಡೆಯುತ್ತಿರುವುದೆಲ್ಲ ಆತನು ನಡೆಸುವುದೇ ಎಂದು ಬುದ್ಧಿಯಿಂದ ಅಹಮ್‌ನನ್ನು ಅಡಗಿಸಿ ಕಾರ್ಯಗಳನ್ನು ಮಾಡೆಂದು ಹೇಳಿದ್ದಾನೆ.

**(17) ಶ್ಲೋ॥ 58 : ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾ ತ್ತರಿಷ್ಯಸಿ ।**
**ಅಥ ಚೇತ್ತ್ವಮಹಂಕಾರಾತ್ ನ ಶ್ರೋಷ್ಯಸಿ ವಿನಂಕ್ಷ್ಯಸಿ ॥**

**(ಕರ್ಮಯೋಗ)**

**ಭಾವಾರ್ಥ** : ನನ್ನಲ್ಲಿಯೇ ಚಿತ್ತವಿರಿಸಿದರು ನಾನು ಪ್ರಸಾದಿಸುವ ಪ್ರಸಾದದಿಂದ ಸರ್ವದುಃಖಗಳಿಂದ ಪಾರಾಗುತ್ತೀಯಾ. ಹಾಗಲ್ಲದೆ ಅಹಂಕಾರವನ್ನೇ ಹೊಂದಿ ನನ್ನಮಾತು ಕೇಳದಿದ್ದರು ಕೆಟ್ಟುಹೋಗುತ್ತೀಯಾ.

**ವಿವರ** : ಪರಮಾತ್ಮ ಭಗವಂತನಾಗಿದ್ದು, ಭಗವಂತನಾಗಿ ನಾನು ಹೇಳುವ ಮಾತುಗಳು ಕೇಳದಿದ್ದರೆ ಕೆಟ್ಟುಹೋಗುತ್ತೀಯಾ ಎಂದು ಎಚ್ಚರಿಸಿ ಹೇಳಿದ್ದಾನೆ. ಅದೇನೆಂದರೆ! ಸಾಕಾರ ರೂಪದಲ್ಲಿ ಭಗವಂತನಾಗಿ, ಪರಮಾತ್ಮ ಅರ್ಜುನನಿಗೆ ಕಾಣಿಸಿದ್ದಾನೆ. ಹೇಳುವುದು ಯಾರಾಗಿರುವುದು ಅರ್ಜುನನಿಗೆ ತಿಳಿದಿದೆ. ಭಗವಂತನು ಯುದ್ಧ ಮಾಡೆಂದು ಹೇಳಿದ್ದಾನೆ. ಅರ್ಜುನನಿಗೆ ಶರೀರದಲ್ಲಿನ ಚಿತ್ತವು ನಿರ್ಣಯಿಸಿದ ಪ್ರಕಾರ ನಡೆಯಬೇಕಾಗಿದೆ. ಆ ನಿರ್ಣಯ, ಏನಾದರೂ ಅಲ್ಲಿ ಚಿತ್ತದಲ್ಲಿ ನಿರ್ಣಯಿಸುವುದು ಪರಮಾತ್ಮನೇ ಎಂದು, ಆತನೇ ಎದುರಿಗಿರುವ ಭಗವಂತನೆಂದು ತಿಳಿದು, ಆತನಮಾತನ್ನು ಕೇಳುವುದೇ ಚಿತ್ತದ ನಿರ್ಣಯವೆಂದುಕೊಂಡು ಭಗವಂತನು ಹೇಳಿದಂತೆ ನಡೆದುಕೊಳ್ಳುವುದು ಆಗಿನ ಕೆಲಸ. ಆದರೂ ಅರ್ಜುನನು ನಾನು, ನನ್ನ ನಿರ್ಣಯ, ನಾನು ಹೇಗೆ ತಿಳಿದರೆ ಹಾಗೆಂದು ಅಹಮ್‌ನಿಂದ ಕೂಡಿ ಅಂದುಕೊಂಡರೆ, ಅಲ್ಲಿಯವರೆಗೂ ಕೇಳಿರುವುದು ತಿಳಿದುಕೊಂಡಿರುವುದು ಎಲ್ಲವೂ ವ್ಯರ್ಥವಾಗುತ್ತದೆ. ಆ ಭಾವದಲ್ಲಿ ಅರ್ಜುನನು ಏನು ಮಾಡಿದರು ಕರ್ಮ ಅಂಟುತ್ತದೆ. ಆತನು ಜ್ಞಾನಮಾರ್ಗದಿಂದ ಕೆಟ್ಟುಹೋದವನಾಗುತ್ತಾನೆ.

**(17) ಶ್ಲೋ॥ 59 : ಯದ್ಯಹಂಕಾರ ಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ ।**
**ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿ ಸ್ತ್ವಾಂ ನಿಯೋಕ್ಷ್ಯತಿ ॥**

**(ಪ್ರಕೃತಿ)**

**ಭಾವಾರ್ಥ** : ಹಾಗೆ ಅಹಂಕಾರವನ್ನೇ ವಹಿಸಿ ಯುದ್ಧ ಮಾಡುವುದಿಲ್ಲವೆಂದು ಪಟ್ಟು ಹಿಡಿದರು ನಿನ್ನ ನಿಶ್ಚಯ ನಿಲ್ಲುವುದಿಲ್ಲ. ಪ್ರಕೃತಿ ನಿನ್ನನ್ನು ನಿಯೋಗಿಸಿ ಕಳುಹಿಸುತ್ತದೆ.

**ವಿವರ** : ಅರ್ಜುನನಿಗೆ 'ನಾನು' ಎಂಬ ಭಾವ ಹಾಗೇ ಇದ್ದು ನಾನು ಯುದ್ಧ ಮಾಡಿದರು, ಅವರೆಲ್ಲರನ್ನೂ ಕೊಲ್ಲುತ್ತೇನೆಂದು ತಿಳಿದುಕೊಂಡು ಯುದ್ಧ ಮಾಡದಿದ್ದರೆ ಒಳ್ಳೆಯದೆಂದು ತಿಳಿದು ಯುದ್ಧ ಮಾಡದಂತೆ ಇದ್ದಂತಾದರೆ, ಪ್ರಾರಬ್ಧಕರ್ಮ ಪ್ರಕಾರ ಯುದ್ಧ ಮಾಡಬೇಕಾಗಿರುವಾಗ ಶರೀರದಲ್ಲಿ ಅರ್ಜುನನ ನಿರ್ಣಯ ನಿಲ್ಲುವುದಿಲ್ಲ. ಸ್ವಲ್ಪ ಸಮಯದವರೆಗೂ ಯುದ್ಧ ಮಾಡುವುದಿಲ್ಲ ಎಂದುಕೊಂಡರೂ ನಡೆಯಬೇಕಾದ ಕರ್ಮ ಇರುವಾಗ ಬುದ್ಧಿಯೋಚನೆಗಳಲ್ಲಿ ಮಾಡೆಂದು ಹೇಳುವ ನಿರ್ಣಯವನ್ನು ಚಿತ್ತ ನಿರ್ಣಯಿಸುತ್ತದೆ. ಹೊರಗೆ ಅರ್ಜುನನು ಯುದ್ಧ ಮಾಡದಂತೆ ಇದ್ದರೂ ಒಳಗಿನ ಬುದ್ಧಿ ಮಾಡಿದರೆ ಚೆನ್ನಾಗಿರುತ್ತದಾ? ಮಾಡದಿದ್ದರೆ ಚೆನ್ನಾಗಿರುತ್ತದಾ! ಎಂದು ಯೋಚನೆಯಲ್ಲಿ ಮುಳುಗಿರುತ್ತದೆ. ಹಾಗೆ ಪರಂಪರೆಯಾಗಿ ಸಾಗುವ ಬುದ್ಧಿ ಯೋಚನೆಗಳಲ್ಲಿ ಪ್ರಾರಬ್ಧಕರ್ಮದ

ಪ್ರಕಾರ ನಡೆಯಬೇಕಾಗಿರುವುದೇನೋ ಅದನ್ನು ಚಿತ್ತ ನಿರ್ಣಯಿಸುತ್ತದೆ. ಕೊನೆಯದಾಗಿ ಚಿತ್ತ ನಿರ್ಣಯಿಸಿರುವುದೇ ಶರೀರದ ಮೂಲಕ ನಡೆಯುತ್ತದೆ. ಆ ಸಮಯದಲ್ಲಿ ಯುದ್ಧವನ್ನು ಅರ್ಜುನನು ಮಾಡಬೇಕಾದ ಕರ್ಮ ಇದೆ, ಆದ್ದರಿಂದ ಕರ್ಮದ ಪ್ರಕಾರ ಪ್ರೇರೇಪಿಸಿ ಗುಣಗಳನ್ನು ಬುದ್ಧಿ ಯೋಚಿಸುವಾಗ, ಕರ್ಮದ ಪ್ರಕಾರ ನಡೆಯಬೇಕಾದ ಕಾರ್ಯವನ್ನು ಬುದ್ಧಿಯೋಚನೆಗಳಿಂದ ಚಿತ್ತ ನಿರ್ಣಯಿಸಿ, ಯುದ್ಧ ಮಾಡುವುದಕ್ಕೆ ಆಜ್ಞೆ ಕೊಡುವುದರಿಂದ ಅರ್ಜುನನ ಶರೀರ ಅಸ್ವತಂತ್ರವಾಗಿ ಕದಲಿ ಯುದ್ಧ ಮಾಡುತ್ತದೆ. ನಡೆಯಬೇಕಾಗಿರುವುದನ್ನು ಯಾರು ನಿಲ್ಲಿಸಲಾರರು. ಹಾಗೆ ನಿಲ್ಲಿಸುವ ಅಧಿಕಾರ ಜೀವಿಗಿಲ್ಲ. ಕರ್ಮವನ್ನು ಅನುಸರಿಸಿ ಚಿತ್ತದ ನಿರ್ಣಯ ಪ್ರಕಾರ ಸರ್ವವು ನಡೆಯಬೇಕಾಗಿದೆ. ಆದ್ದರಿಂದಲೇ ನೀನೆಂದುಕೊಳ್ಳುವಂತೆ ಇರುವುದಿಲ್ಲ. ಪ್ರಕೃತಿ ಜನಿತ ಗುಣ ಪ್ರೇರೇಪಿತನಾಗಿ ನೀನು ಯುದ್ಧ ಮಾಡುತ್ತೀಯಾ. ಪ್ರಕೃತಿ ನಿರ್ಮಾಣ ಹಾಗೆ ನಿನ್ನಿಂದ ಮಾಡಿಸುತ್ತದೆಂದು ಭಗವಂತನು ಹೇಳಿದ್ದಾನೆ.

**(17) ಶ್ಲೋ॥ 60 : ಸ್ವಭಾವಜೇನ ಕೌಂತೇಯ! ನಿಬದ್ಧಃ ಸ್ವೇನ ಕರ್ಮಣಾ ।**
**ಕರ್ತುಂನೇಚ್ಛಸಿ ಯನ್ಮೋಹಾ ತ್ಕರಿಷ್ಯಸ್ಯ ವಶೋಽಪಿತತ್ ॥**

**(ಪ್ರಕೃತಿ)**

**ಭಾವಾರ್ಥ** : ಅರ್ಜುನಾ! ಮೋಹದಿಂದ ಯುದ್ಧ ಮಾಡುವುದಿಲ್ಲ ಎಂಬ ನಿನ್ನ ನಿರ್ಣಯ ನಿನ್ನ ಸ್ವಭಾವದಲ್ಲಿ ನಿನ್ನಲ್ಲಿಯೇ ಇರುವ ಕರ್ಮದಿಂದ ಕಟ್ಟಿಹಾಕಿ, ನಿನ್ನ ಪ್ರಯತ್ನ ಇಲ್ಲದೆಯೇ ಅಸ್ವತಂತ್ರವಾಗಿ ಯುದ್ಧ ಮಾಡುತ್ತೀಯಾ.

**ವಿವರ** : ನಾನು ನನ್ನವರು ಎನ್ನುವ ಮೋಹದಿಂದ, ಅಹಮ್‌ನಿಂದ ಅರ್ಜುನನು ಯುದ್ಧ ಮಾಡಬಾರದು ಎಂದುಕೊಂಡಿದ್ದಾನೆ. ಆದರೆ ಅರ್ಜುನನ ಕರ್ಮಚಕ್ರದಲ್ಲಿರುವ ಪ್ರಾರಬ್ಧಕರ್ಮ ಆತನಲ್ಲಿಯೇ ಆತನ ನಿಶ್ಚಯವನ್ನು ಕಟ್ಟಿಹಾಕಿ, ನಿನ್ನ ನಿರ್ಣಯ ಕೆಲಸಕ್ಕೆ ಬರುವುದಿಲ್ಲವೆನ್ನುವಂತೆ ಮಾಡುತ್ತದೆ. ಈ ಪದ್ಧತಿ ಅರ್ಜುನನಿಗೇ ಅಲ್ಲ ಎಲ್ಲರಲ್ಲಿಯೂ ನಡೆಯುವುದೇ. ನಮಗೆ ಇಷ್ಟ ವಿದ್ದರು ಇಷ್ಟವಿಲ್ಲದಿದ್ದರೂ ಕರ್ಮನಿರ್ಣಯದ ಪ್ರಕಾರ ಕೆಲವು ಕೆಲಸಗಳು ಮಾಡಬೇಕಾಗಿರುತ್ತದೆ. ಹಾಗೆಯೇ ಅರ್ಜುನನಿಗೆ ನಡೆದಿರುವುದು. ಯಾರಿಗಾದರೂ ಕರ್ಮದ ಪ್ರಕಾರ ಯಾವ ಕೆಲಸವಾದರು, ಎಷ್ಟು ನೀಚ ಕಾರ್ಯವಾದರು, ತನ್ನ ಮನಸ್ಸು ಒಪ್ಪದಿದ್ದರೂ ತಪ್ಪದೇ ಮಾಡಬೇಕಾಗಿ ಬರುತ್ತದೆ. ಅದನ್ನು ಅನುಸರಿಸಿ ಬುದ್ಧಿ ಇರುವವನು ನಮ್ಮ ನಿರ್ಣಯವೇನೂ ಅಲ್ಲ. ಕರ್ಮ ನಿರ್ಣಯದ ಪ್ರಕಾರವೇ ನಡೆಯುತ್ತದೆಂದು ಸುಲಭವಾಗಿ ತಿಳಿದುಕೊಳ್ಳುತ್ತಾನೆ. ತಿಳುವಳಿಕೆ ಇಲ್ಲದವನು ಒಬ್ಬರು ಹೇಳಿದರೂ, ತಾನು ಅನುಭವಿಸಿದರೂ

ತಿಳಿದುಕೊಳ್ಳದೇ ಎಲ್ಲಾ ಕೆಲಸಗಳು ನನ್ನ ಇಷ್ಟಪ್ರಕಾರವೇ ನಡೆಯುತ್ತಿವೆ ಎಂದುಕೊಳ್ಳುತ್ತಾನೆ. ಅಂತಹವನು ನಿಜ ಸ್ಥಿತಿಯನ್ನು ತಿಳಿದುಕೊಳ್ಳಲಾರನು.

**(17) ಶ್ಲೋ॥ 61 : ಈಶ್ವರ ಸ್ಸರ್ವಭೂತಾನಾಂ ಹೃದ್ದೇಶೇ೭ರ್ಜುನತಿಷ್ಠತಿ ।**
**ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥**
**(ಪರಮಾತ್ಮ)**

**ಭಾವಾರ್ಥ** : ಸರ್ವ ಜೀವರಾಶಿಗಳ ಶರೀರ ಹೃದಯಗಳಲ್ಲಿ ಪರಮಾತ್ಮ ತಿಷ್ಟೆಹಾಕಿದ್ದೂ, ಯಂತ್ರವನ್ನೇರಿ ಆಡಿಸುವವನಂತೆ ತನ್ನ ಮಾಯೆಯಿಂದ ಸರ್ವ ಭೂತಗಳನ್ನು ಆಡಿಸುತ್ತಿದ್ದಾನೆ.

**ವಿವರ** : ಸರ್ವ ಜೀವರಾಶಿಗಳು ಅನೇಕ ವಿಧಗಳಾಗಿ ಚಲಿಸುತ್ತಾ ಕೆಲವು ಆಡುತ್ತಿರುವಾಗ, ಕೆಲವು ಹೊಡೆದಾಡುತ್ತಿರುವಾಗ, ಕೆಲವು ರಮಿಸುತ್ತಿರುವಾಗ, ಕೆಲವು ಓಡಿಹೋಗುತ್ತಿದ್ದರೆ, ಕೆಲವು ಎಗರುತ್ತಾ ಕೆಲವು ದುಮುಕುತ್ತಿವೆ. ಹಾಗೆ ನಾನಾ ವಿಧಗಳಾಗಿ ಕಾಣಿಸುವ ಜೀವರಾಶಿಗಳ ಶರೀರದಲ್ಲಿನ ಹೃದಿ ಸ್ಥಾನದಲ್ಲಿ ಪರಮಾತ್ಮ ನಿವಾಸ ಇರುತ್ತಿದ್ದಾನೆ. ಶರೀರವೆಲ್ಲವೂ ನಾಡಿಗಳಿಂದ ವ್ಯಾಪಿಸಿ ನಾಡಿಗಳಿಂದ ಕದಲಿಸಲಾಗುತ್ತಿದೆ. ನಾಡಿಗಳೆಲ್ಲವುಗಳಿಗೆ ಕೇಂದ್ರ ಮೆದುಳು. ಮೆದುಳಿನಿಂದ ಬರುವ ಆದೇಶಗಳು ನಾಡಿಗಳ ಮೂಲಕ ಶರೀರವೆಲ್ಲವೂ ಹರಡಿ ಶರೀರವನ್ನು ಕದಲಿಸಿ, ಆಡಿಸಿ ಹೇಳಿಸಿ ಅನೇಕವಾಗಿ ಮಾಡುತ್ತಿದೆ. ಮೆದುಳಿನಿಂದ ಪ್ರಸಾರವಾಗುವ ಆದೇಶ ಎಲ್ಲಿಯವು? ಯಾರವು? ಎನ್ನುವ ಪ್ರಶ್ನೆ ಹಾಕಿಕೊಂಡರೂ, ಮೆದುಳು ಭಾಗವನ್ನೇ ಹೃದಯವೆನ್ನುತ್ತಿದ್ದೇವಲ್ಲವೆ! ಹೃದಯದಲ್ಲಿಯೇ ಪರಮಾತ್ಮ ಇದೆ. ಕರ್ಮಚಕ್ರದಲ್ಲಿನ ಕರ್ಮಾನುಸಾರ ಮಾಯೆ ಎನ್ನುವ ಪರಿಕರಗಳಾದ ಬುದ್ಧಿ, ಚಿತ್ತ, ಮನಸ್ಸಿನ ಮೂಲಕ ಆದೇಶ ಕಳಿಸುತ್ತಾ ಅದರ ಪ್ರಕಾರ ನರಗಳನ್ನು ಎಳೆದು ಶರೀರವನ್ನು ಆಡುವಂತೆ ಮಾಡುತ್ತಿದ್ದಾನೆ.

ಯಂತ್ರದ ಮೇಲೆ ಕೆಲಸ ಮಾಡುವವನು ಯಂತ್ರದ (ಸ್ವಿಚ್‌ಗಳನ್ನು) ಮೀಟರ್‌ಗಳನ್ನು ತಿರುಗಿಸುತ್ತಾ ಯಂತ್ರದಿಂದ ಕೆಲಸ ಮಾಡಿಸಿದಂತೆ ದೇಹಾರೂಢನಾದ (ದೇಹವನ್ನು ಏರಿ ಇರುವವನಾದ) ಪರಮಾತ್ಮ ಒಟ್ಟು ಶರೀರವೆಂಬ ಯಂತ್ರದಲ್ಲಿನ ಮನೋ, ಬುದ್ಧಿ, ಚಿತ್ತಗಳನ್ನು ಗುಣಗಳಿಂದ ಸರಿಯಾಗಿ ಜೋಡಿಸಿ ಇರುವ ಕರ್ಮಪ್ರಕಾರ ಆಡಿಸುತ್ತಿದ್ದಾನೆ. **ಪರಮಾತ್ಮ ಶರೀರವನ್ನು ಆಡಿಸುವುದಕ್ಕೆ ಆತ್ಮವೆಂಬ ವಿದ್ಯುತ್ತನ್ನು, ಮನೋಬುದ್ಧಿ ಚಿತ್ತಗಳನ್ನು ಮುಖ್ಯ ಅನುಬಂಧ ಮೀಟರ್‌ಗಳನ್ನು, ಗುಣಗಳನ್ನು ಚಕ್ರಗಳನ್ನು, ಕರ್ಮವೆಂಬ ಪದ್ಧತಿಯನ್ನು ಉಪಯೋಗಿಸಿ ಕರ್ಮಸುಖಗಳನ್ನು ಉತ್ಪಾದನೆಗಳನ್ನು ತಯಾರು**

**ಮಾಡುತ್ತಿದ್ದಾನೆ.** ಈ ವಿಧಾನ ತಿಳಿಯದವರು ಪರಮಾತ್ಮ ಶರೀರವೆಂಬ ನಾಡಿಗಳಿಂದ ಬೊಂಬೆಗಳಂತೆ ಆಡಿಸುತ್ತಿದ್ದಾನೆಂದುಕೊಳ್ಳದೆ, ಎಲ್ಲದಕ್ಕೂ ತಾವೇ ಕಾರಣವೆಂದು ಅಜ್ಞಾನಿಗಳು ತಿಳಿಯುತ್ತಿದ್ದಾರೆ. ಪ್ರತಿಯೊಬ್ಬರಿಗೂ ಪ್ರತಿ ಕೆಲಸ ತಾವೇ ಮಾಡಿದಂತೆ ಅನಿಸುತ್ತದೆ. ಏಕೆಂದರೆ ಬೊಂಬೆಯಾಟಗಳಲ್ಲಿ ಬೊಂಬೆಗಳನ್ನು ಆಡಿಸುವವನು ಕಾಣಿಸದ ಹಾಗೆ ಬೊಂಬೆಗಳು ಕದಲುವುದು ಮಾತ್ರವೇ ಕಾಣಿಸುವಂತೆ, ಮನುಷ್ಯನಿಂದ ನಡೆಯುತ್ತಿರುವ ಕಾರ್ಯಗಳಲ್ಲಿ ಒಳಗೆ ಆಡಿಸುವ ಪದ್ಧತಿಯಾಗಲಿ, ಆಡಿಸುವವನಾಗಲಿ ತಿಳಿಯದೇ, ಮೇಲ್ನೋಟಕ್ಕೆ ಆಡುವವರು ಮಾತ್ರವೇ ಕಾಣಿಸುವುದರಿಂದ, ಪ್ರತಿಯೊಬ್ಬರು ತಮ್ಮಿಂದ ನಡೆಯುವ ಕೆಲಸಗಳು ತಾವೇ ಮಾಡಿದಂತೆ ಎಂದುಕೊಳ್ಳುತ್ತಾರೆ. ಪ್ರತಿ ಕದಲಿಕೆ ಪ್ರತಿ ಕೆಲಸ ನನ್ನದಲ್ಲ, ನಾನು ಮಾಡಲಿಲ್ಲ, ಪರಮಾತ್ಮ, ಆತ್ಮ (ಬಲ) ದಿಂದ ಇಂದ್ರಿಯಗಳು ಎನ್ನುವ ಶರೀರ ಭಾಗಗಳನ್ನು ಕರ್ಮ ಪ್ರಕಾರ ಕದಲಿಸುತ್ತಿದ್ದಾನೆಂದು, ತಾನು ಅದಕ್ಕೆ ಕಾರಣ ಅಲ್ಲವೆಂದು ಯಾರು ತಿಳಿಯುತ್ತಾರೋ ಅವನು ಅಹಮ್‌ನನ್ನು ಬಿಟ್ಟವನಾಗುತ್ತಾನೆ. ಶರೀರದಿಂದ ಯಾವ ಕೆಲಸ ನಡೆದರು ತಾನು ಕರ್ತನು ಅಲ್ಲವೆಂದು ತಿಳಿದುಕೊಳ್ಳುತ್ತಿದ್ದಾನೆ. ಆದ್ದರಿಂದ ನಡೆಯುವ ಕೆಲಸಗಳಿಗೆ ಅವನಿಗೆ ಯಾವ ಸಂಬಂಧ ಇಲ್ಲವೆಂದು ಹೇಳಬಹುದು. ಈ ಸೂತ್ರದ ಪ್ರಕಾರ ಒಂದು ಶರೀರದಿಂದ ಲೋಕದಲ್ಲಿರುವವರೆಲ್ಲರೂ ಸಾಯಲ್ಪಟ್ಟರು ಅದರಲ್ಲಿನ ಜೀವಾತ್ಮ ಹಂತಕನು ಅಲ್ಲವೆಂದು, ಅವನಿಗೆ ಪಾಪ ಅಂಟುವುದಿಲ್ಲವೆಂದು ಹೇಳಿದ್ದಾನೆ.

**(17) ಶ್ಲೋ॥ 62 : ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ! ।**
**ತತ್ಪ್ರಸಾದಾತ್ಪ ರಾಂಶಾನ್ತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ॥**
**(ಪರಮಾತ್ಮ)**

**ಭಾವಾರ್ಥ** : ಸರ್ವ ಭಾವಗಳಲ್ಲಿ ಪರಮಾತ್ಮನನ್ನು ಶರಣುಬೇಡು. ಆತನ ಅನುಗ್ರಹದಿಂದ ಪ್ರಕೃತಿಗಿಂತ ಅನ್ಯವಾದ ಶಾಂತಿಯನ್ನು ಮತ್ತು ಶಾಶ್ವತವಾದ ಮೋಕ್ಷ ಸ್ಥಾನವನ್ನು ಹೊಂದಬಹುದು.

**ವಿವರ** : ಹೊರಗಿನ ಪ್ರಪಂಚದಲ್ಲಿ ಯಾರೆಷ್ಟು ಯಶಸ್ಸು, ಕೀರ್ತಿಹೊಂದಿದ್ದರು, ಒಳಗಿನ ಪರಮಾತ್ಮನಿಂದಲೇ ಸರ್ವವು ನಡೆಯುತ್ತಿವೆಯೆಂದು ತಿಳಿದು, ಎಲ್ಲದಕ್ಕೂ ಮೂಲ ಕರ್ತನಾದ ಪರಮಾತ್ಮನನ್ನು ಎಲ್ಲಾ ಮನೋಭಾವಗಳ ಮೂಲಕ ಶರಣುಬೇಡಿ, ದೊಡ್ಡದಾಗಿ ತಿಳಿದುಕೊಂಡು, ತನ್ನದೇನು ಇಲ್ಲವೆಂದು ಇರುವುದೆಲ್ಲವೂ ಪರಮಾತ್ಮದೆ ಎಂದು, ತಾನು ಪರಮಾತ್ಮ ಆಡಿಸಿದಂತೆ ಆಡುವ ಆಟದ ಬೊಂಬೆಯಂತವನೆಂದು ತಿಳಿದು, ಆತನಿಗಿರುವ

ಅನೇಕ ಅಂಶಗಳಲ್ಲಿ ಒಂದು ಅಂಶದಿಂದಲೇ ಸರ್ವಪ್ರಪಂಚವನ್ನು ನಡೆಸುವಂತಹ ಮಹೋನ್ನತನೆಂದು, **ನಾನು ಅಂದುಕೊಂಡರೆ ನೀನು ನೀನಾಗಿಯೇ ಇರುತ್ತೀಯಾ, ನಾನು ಅಂದುಕೊಂಡರೆ ನೀನು ಎಲ್ಲಾಕಡೆ ಇರುತ್ತೀಯಾ** ಎನ್ನುವ ವಾಕ್ಯದ ಪ್ರಕಾರ ಆತನು ಅಂದುಕೊಂಡರೆ ಜೀವಿಯು ಜೀವಿಯಾಗಿಯೇ ಇರುತ್ತಾನೆಂದು, ಆತನು ಅಂದುಕೊಂಡರೆ ಜೀವಿಯು ಎಲ್ಲಾಕಡೆ ಅಣುಅಣುವಿನಲ್ಲಿ ವ್ಯಾಪಿಸಿ ಪರಮಾತ್ಮನಲ್ಲಿ ಐಕ್ಯವಾಗಬಲ್ಲನೆಂದು ತಿಳಿದು ಕೈ ಮುಗಿಯುವುದರಿಂದ, ಆರಾಧಿಸುವುದರಿಂದ ಯಾರಾದರಾಗಲಿ ಪರಮಾತ್ಮ ಅನುಗ್ರಹ ಹೊಂದಿ, ಆತನು ಪ್ರಸಾದಿಸುವ ಶಾಂತಿಯನ್ನು ಹೊಂದಿ, ಪ್ರಕೃತಿಗಿಂತ ಅನ್ಯವಾದ ಮೋಕ್ಷವನ್ನು (ಪರಮಾತ್ಮ) ಹೊಂದುತ್ತಾನೆ.

**(17) ಶ್ಲೋ॥ 63 : ಇತಿತೇ ಜ್ಞಾನ ಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ ।**
**ವಿಮೃಶ್ಯೈತ ದಶೇಷೇಣ ಯಥೇಚ್ಛಸಿ ತಥಾ ಕುರು ॥**

**(ಜ್ಞಾನ)**

**ಭಾವಾರ್ಥ** : ರಹಸ್ಯಗಳಿಗೆಲ್ಲಿ ಅತ್ಯಂತ ರಹಸ್ಯವಾದ ಜ್ಞಾನವನ್ನು ನಿನಗೆ ನಾನು ಹೇಳಿದೆನು. ಇದನ್ನು ಶೇಷ ಇಲ್ಲದಂತೆ ವಿವರಿಸಿಕೊಂಡು ನೋಡಿ ಹೇಗೆ ನಿನಗೆ ಇಷ್ಟವೋ ಹಾಗೆ ಮಾಡು.

**ವಿವರ** : ಇಲ್ಲಿಯವರೆಗೂ ಭಗವಂತನಿಂದ ಹೇಳಲಾದ ಜ್ಞಾನ ಬಹಳ ರಹಸ್ಯವಾದುದು. ಒಂದು ವಿಧವಾಗಿ ಬಿಡಿಸಿ ಹೇಳಿದರು ಅರ್ಥವಾಗದೇ ಇರುವುದು. ಪರಮಾತ್ಮನಿಗೆ ಹೊರತು ಯಾರಿಗೂ ತಿಳಿಯದಿರುವುದು. ಪರಮಾತ್ಮ ಮೂಲಕ ಕೇಳಿದರೂ ಕೆಲವರಿಗೆ ಅರ್ಥವಾಗದೆ ರಹಸ್ಯವಾಗಿಯೇ ಇರುತ್ತದೆ. ಆದ್ದರಿಂದ ರಹಸ್ಯಗಳಿಗೆಲ್ಲ ರಹಸ್ಯವಾದುದೆಂದು ಹೇಳಬಹುದು. ಇಂತಹ ಉನ್ನತ ಜ್ಞಾನ ತಿಳಿಯಬೇಕೆಂದರು, ಎಷ್ಟೋ ಜನ್ಮಗಳ ಜ್ಞಾನಸಂಬಂಧದ ಸುಕೃತ ಫಲವಿದ್ದರೇನೆ ಸಾಧ್ಯವಾಗುತ್ತದೆ. ಇಲ್ಲದಿದ್ದರೆ ಈ ಜ್ಞಾನದ ಹತ್ತಿರಕ್ಕೆ ಬರುವುದಿಲ್ಲ. ಒಂದುವೇಳೆ ಈ ವಿವರಗಳು ಹತ್ತಿರಕ್ಕೆ ಬಂದರು ಓದುವವರೇ ದೂರವಾಗುತ್ತಾರೆ. ಇಷ್ಟು ವಿವರವಾಗಿ ಹೇಳಿರುವುದು ಹದ್ದು (ಎಲ್ಲೆ) (ಗೆರೆ) ಗಳು ಗೀಚಿ ತೋರಿಸಿದರು ಗೀತೆಯನ್ನು ಯಾರಾದರು ಕೇಳಿದರು ಓದಿದರು ಎಲ್ಲವನ್ನೂ ವಿಶಧೀಕರಿಸಿ ಚೆನ್ನಾಗಿ ಯೋಚಿಸಿ ಹೇಗೆ ನಿಮಗೆ ಇಷ್ಟವೋ ಹಾಗೆ ನಡೆದುಕೊಳ್ಳಬಹುದು. ಭಗವಂತನು ತಿಳಿಸುವ ಜ್ಞಾನವೆಲ್ಲವನ್ನೂ ತಿಳಿಸಿ ಯಾರನ್ನೂ ಹೀಗೇ ನಡೆದುಕೋ ಎಂದು ಬಲವಂತಮಾಡದೆ ನಿನ್ನ ಇಷ್ಟ ಎಂದಿದ್ದಾನೆ. ಜ್ಞಾನ ಕರ್ಮಾತೀತವಾದುದು. ಜ್ಞಾನ

ಕರ್ಮವನ್ನನುಸರಿಸಿ ನಿರ್ಣಯಿಸಲ್ಪಟ್ಟು ನಿನಗೆ ಅಂಟುವಂತದಲ್ಲ. ಜ್ಞಾನ ಶ್ರದ್ಧಾನುಸಾರ ಲಭ್ಯವಾಗುವುದು. ಶ್ರದ್ಧೆ ಯಾರ ಇಷ್ಟಾನುಸಾರ ಅವರಿಗೆ ಹುಟ್ಟುವುದು. ಸ್ವತಃವಾಗಿ ಹುಟ್ಟುವುದು (ಸ್ವಯಂಭೂ) ಶ್ರದ್ಧೆಯಾದ್ದರಿಂದ ನಿನ್ನ ಇಷ್ಟವೆಂದು ಹೇಳಿದ್ದಾನೆ.

ಭಗವಂತನು ಜ್ಞಾನ ಅಜ್ಞಾನ ಎಂದೂ, ಪ್ರಕೃತಿ ಪರಮಾತ್ಮ ಎಂದೂ, ಮಾಯ ಈಶ್ವರನು ಎಂದು ಎರಡು ಮಾರ್ಗಗಳು ಸೂಚಿಸಿ ನೀನು ಯಾವ ಮಾರ್ಗದಲ್ಲಿ ಹೋಗುತ್ತೀಯೋ ಹೋಗೆಂದಿದ್ದಾನೆ. ಆತನು ನಮ್ಮ ಮೇಲೇ ಜವಾಬ್ದಾರಿ ವಹಿಸಿದಾಗ, ನಿಜಜ್ಞಾನ ತಿಳಿದವನು ನಾನು ಎನ್ನುವ ಅಹಮ್ ಹೊಂದದೆ, ನನ್ನ ಇಷ್ಟವೆಂದು ಮೋಹದಲ್ಲಿ ಬೀಳದೆ, ಸರ್ವವೂ ಪರಮಾತ್ಮನೇ ಎಂದು ನಂಬಿ ಭಕ್ತಿಯೆಲ್ಲವೂ ಆತನ ಮೇಲೆ ತೋರಿಸುತ್ತಾ, ಶರಣು ಹೊಂದಿದರೂ ಆತನು ಮತ್ತು ಆತನ ಜ್ಞಾನ ಸುಲಭವಾಗಿ ಅರ್ಥವಾಗುತ್ತದೆ. ಅಂತಹ ಶರಣ್ಯ ಇಲ್ಲದಂತೆ ನನ್ನ ಬುದ್ಧಿಯನ್ನು ಉಪಯೋಗಿಸಿ ಜ್ಞಾನ ತಿಳಿದುಕೊಳ್ಳುತ್ತೇನೆಂದು ಕೊಳ್ಳುವುದೂ ಸಹ ತಪ್ಪಾಗುತ್ತದೆ. ಹಾಗೆ ಪರಮಾತ್ಮನ ಜ್ಞಾನ ತಿಳಿದುಕೊಳ್ಳುವುದಕ್ಕೆ ಬಹಳ ಕಾಲ ಬೇಕಾಗುತ್ತದೆ. ಶರಣುಬೇಡಿದವನಿಗೆ ಬೇಗನೆ ಜ್ಞಾನ ಲಭ್ಯವಾಗುವುದಲ್ಲದೆ ಆ ಜನ್ಮದಲ್ಲಿಯೇ ಮೋಕ್ಷ ದೊರಕುತ್ತದೆ.

**(17) ಶ್ಲೋ॥ 64 : ಸರ್ವಗುಹ್ಯತಮಂ ಭೂಯಃ ಶ್ರೃಣು ಮೇ ಪರಮಂವಚಃ ।**
**ಇಷ್ಟೋಽಸಿಮೇ ಧೃಢಮಿತಿ ತತೋ ವಕ್ಷ್ಯಾಮಿ ತೇ ಹಿತಮ್ ॥**
**(ಗೀತಾ ಸಾರಾಂಶ)**

**ಭಾವಾರ್ಥ** : ಸರ್ವ ರಹಸ್ಯಗಳಲ್ಲಿ ಉತ್ತಮವಾದ ಪರಮವಚನ ಸಮುದಾಯವನ್ನು ಪುನಃ ಕೇಳು. ನೀನು ನನಗೆ ಅತ್ಯಂತ ಇಷ್ಟವಾದವನು ಆಗಿರುವುದರಿಂದ ಹಿತವು ಕೋರಿ ಹೇಳುತ್ತಿದ್ದೇನೆ.

**ವಿವರ** : ವಾಸ್ತವಕ್ಕೆ ಮೊದಲು ಹೇಳಿರುವ 63ನೇ ಶ್ಲೋಕದಿಂದಲೇ ಭಗವದ್ಗೀತೆ ಮುಗಿದರೂ ನಿಜಕ್ಕೆ ನಮ್ಮಹಿತ ಕೋರಿ ಗೀತೆಯ ಸಾರಾಂಶವನ್ನು ಎರಡು ಶ್ಲೋಕಗಳ ರೂಪವಾಗಿ ಭಗವಂತನು ಹೇಳಿದ್ದಾನೆ. ಅವುಗಳಿಗಿಂತ ಹಿಂದಿರುವ ಈ ಶ್ಲೋಕದಲ್ಲಿ ನೀನು ನನಗೆ ಇಷ್ಟವಾದವನೆಂದು, ನಿನ್ನ ಒಳ್ಳೆಯದನ್ನು ಬಯಸಿ ಎಂದು ಹೇಳುವುದು ವಿಶೇಷವಾದುದು. ಪರಮಾತ್ಮ ಏಕೆ ಕೆಲಸಕ್ಕೆ ಬಾರದ ನಮ್ಮನ್ನು ದೊಡ್ಡದಾಗಿ ಗುರುತಿಸಿ ಹಾಗೆ ಹೇಳಿದ್ದಾನೆಂದರೆ ಆತನಲ್ಲಿನ ಮಹೋನ್ನತವೇನೋ ಹೇಳುವಂಥದ್ದಲ್ಲ. ಆತನು ಅಷ್ಟಾಗಿ ಕೊನೆಯಲ್ಲಿ ನಮ್ಮ ಮೇಲೆ ಶ್ರದ್ಧೆ ಇಟ್ಟು ಹೇಳಿರುವ ಗೀತೆಯ ಒಟ್ಟು ಸಾರಾಂಶವೇನೋ ಕೆಳಗೆ ನೋಡೋಣ.

**(17) ಶ್ಲೋ॥ 65 : ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥**

**(ಗೀತಾ ಸಾರಾಂಶ)**

**ಭಾವಾರ್ಥ** : ನನ್ನನ್ನು ನಿನ್ನ ಮನಸ್ಸಿನಲ್ಲಿ ಯೋಚಿಸುತ್ತಿರು. ನೀನು ನನ್ನ ಭಕ್ತನಾಗು. ನನ್ನನ್ನೇ ಪೂಜಿಸುವವನಾಗು. ನನ್ನನ್ನೇ ನಮಸ್ಕರಿಸು. ನನ್ನನ್ನೇ ಹೊಂದುವೆ. ಇದು ಸತ್ಯ. ನೀನು ನನಗೆ ಅತ್ಯಂತ ಪ್ರೀಯನಾಗುತ್ತೀಯ. ಪ್ರತಿಜ್ಞೆ ಮಾಡಿ ಹೇಳುತ್ತಿದ್ದೇನೆ.

**ವಿವರ** : ಯಾರಾದರೆ ಪರಮಾತ್ಮನನ್ನು ಮನಸ್ಸಿನಲ್ಲಿ ನೆನಪಿಸಿಕೊಳ್ಳುತ್ತಾನೋ, ಪರಮಾತ್ಮನಿಗೆ ಭಕ್ತನಾಗಿದ್ದು ಆತನನ್ನೇ ಪೂಜಿಸಿ, ನಮಸ್ಕರಿಸುತ್ತಾನೋ ಅವನು ಪರಮಾತ್ಮನನ್ನೇ ಸೇರುತ್ತಾನೆ. ಅವನೇ ಪರಮಾತ್ಮನಿಗೆ ಅತ್ಯಂತ ಪ್ರಿಯನು. ಆ ಮಾತು ನಿಜ. ಅಷ್ಟು ದೊಡ್ಡ ಪರಮಾತ್ಮನಿಗೆ ಇಷ್ಟು ಚಿಕ್ಕವನು ಪ್ರಿಯನಾ ಎನ್ನುವ ಅನುಮಾನ ಇಟ್ಟುಕೊಳ್ಳಬೇಕಾದ ಅವಶ್ಯವಿಲ್ಲ. ಏಕೆಂದರೆ ಪರಮಾತ್ಮನೇ ಸ್ವತಃವಾಗಿ ಪ್ರತಿಜ್ಞೆಮಾಡಿ ಹೇಳಿದ್ದಾನೆ.

ಪರಮಾತ್ಮ ನಿರಾಕಾರವಾಗಿ ಇರುವಾಗಾಗಲಿ ಅಥವಾ ಪರಮಾತ್ಮ ಸಾಕಾರ ರೂಪದಲ್ಲಿರುವಾಗಾಗಲಿ ಆತನ ಮೇಲೆ ಭಕ್ತಿ, ಆತನ ಮೇಲೆ ಆರಾಧನೆ, ಆತನ ಮೇಲೇ ನಮಸ್ಕಾರ, ಆತನ ಮೇಲೆಯೇ ಮನೋಧ್ಯಾಸ ಹೊಂದಿರುವುದೇ ಮಹಾಭಾಗ್ಯವಾಗುತ್ತದೆ. ಅವನ ಪದ್ಧತಿಯೇ ಅವನನ್ನು ಪರಮಾತ್ಮನಿಗೆ ಪ್ರಿಯನನ್ನಾಗಿ ಮಾಡಿ ಆತನ ಸನ್ನಿಧಿಗೆ ಸೇರಿಸುತ್ತದೆ. ಇದು ಎಷ್ಟೋ ದೊಡ್ಡ ಸಾರಾಂಶವಾದ ಸಂದೇಶ.

**(17) ಶ್ಲೋ॥ 66 : ಸರ್ವಧರ್ಮಾನ್ ಪರಿತ್ಯಜ್ಯ ಮಾ ಮೇಕಂ ಶರಣಂ ವ್ರಜ ।**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ ॥**

**(ಗೀತಾ ಸಾರಾಂಶ)**

**ಭಾವಾರ್ಥ** : ಸರ್ವಧರ್ಮಗಳನ್ನು ಸಂಪೂರ್ಣವಾಗಿ ಬಿಟ್ಟು ನನ್ನನ್ನು ಮಾತ್ರವೇ ನೀನು ಶರಣು ಕೋರು. ನಿನ್ನನ್ನು ಪಾಪ ಕರ್ಮಗಳಿಂದ ಮುಕ್ತನನ್ನು ಮಾಡುತ್ತೇನೆ. ದುಃಖಿಸಬೇಡ.

**ವಿವರ** : ಭಗವದ್ಗೀತೆ ಎಲ್ಲವೂ ಧರ್ಮಗಳನ್ನು ಬೋಧಿಸಿ, ಅವುಗಳಿಂದಲೇ ಕರ್ಮಯೋಗ ಬ್ರಹ್ಮಯೋಗವನ್ನು ಸೂಚಿಸಿ, ಆ ಎರಡು ಯೋಗಗಳ ಮೂಲಕ ಕರ್ಮವನ್ನು ನಾಶಮಾಡಿ ಕೊಂಡು ಮೋಕ್ಷವನ್ನು ಪಡೆಯಿರೆಂದು ತಿಳಿಸಿದ ಭಗವಂತನು, ಗೀತೆ ಒಟ್ಟಾರೆ ಸಾರಾಂಶದಲ್ಲಿ

ಇಲ್ಲಿಯವರೆಗೂ ಹೇಳಿದ ಯೋಗಧರ್ಮಗಳನ್ನು ಬಿಟ್ಟು ನನ್ನನ್ನೇ ಶರಣು ಹೊಂದು ಎಂದಿದ್ದಾನೆ. ಎರಡು ಯೋಗಗಳ ಪದ್ಧತಿಗಳು ಪರಮಾತ್ಮನನ್ನು ಸೇರಿಸುವ ಮಾರ್ಗಗಳಾಗಿದ್ದು, ಕೊನೆಯಲ್ಲಿ ಹೇಳಿದ ಸಾರಾಂಶದಲ್ಲಿ ಸೂಕ್ಷ್ಮದಲ್ಲಿ ಮೋಕ್ಷವೆಂದು ಬಹಳ ಹತ್ತಿರದ ದಾರಿಯಲ್ಲಿ ಪರಮಾತ್ಮನನ್ನು ಸೇರುವ ಉಪಾಯವನ್ನು ಹೇಳಿದ್ದಾನೆ. ಗೀತಾ ಸಾರಾಂಶವಾದ ಎರಡು ಶ್ಲೋಕಗಳಲ್ಲಿ ಮೊದಲು ಹೇಳಿರುವುದು ಪರಮಾತ್ಮ ಸಾಕಾರವಾಗಿರುವಾಗಲೆ ಅಲ್ಲದೆ ನಿರಾಕಾರವಾಗಿ ಇರುವಾಗಲೂ ಸಹ ಆಚರಿಸಬೇಕಾದ ಭಕ್ತಿಮಾರ್ಗ ಬೋಧಿಸಿದಾಗ, ಇಲ್ಲಿ ಕೊನೆಯ ಮಾತಾಗಿ ಪರಮಾತ್ಮ ಕೇವಲ ಸಾಕಾರವಾಗಿ ಅಥವಾ ಭಗವಂತನಾಗಿ ಸಾಧಾರಣ ಮಾನವ ಆಕಾರದಲ್ಲಿರುವಾಗ, ಯಾವ ಗುರುತು ಇಲ್ಲದವನಾಗಿ ಕಂಡು ಕೊಳ್ಳುವುದಕ್ಕೆ ಕಷ್ಟವಾದಾಗ ಕಂಡುಕೊಂಡರೂ, ಸ್ವಲ್ಪ ಅನುಮಾನ ಇದ್ದರೂ ಅದನ್ನು ದೊಡ್ಡದು ಮಾಡಿ ತನಗೆ ದೂರವಾಗಿ ಕಳಿಸುವ ಸಾಕಾರವನ್ನು ಅತಿಕಷ್ಟದ ಮೇಲೆ ತಿಳಿದು, ಅನುಮಾನ ಇಲ್ಲದ ಭಕ್ತಿ ಇರುವವರಿಗೆ ಹೇಳಿದ ಮಾತುಗಳೆಂದು ಗ್ರಹಿಸಬೇಕು.

ಸಾಕ್ಷಾತ್ತು ಪರಮಾತ್ಮನಾದ ಸಾಕಾರವನ್ನು ಕಂಡುಹಿಡಿದವನಿಗೆ ಧರ್ಮಗಳಿಂದಲೂ ಸಹ ಕೆಲಸವಿಲ್ಲ. ಗೀತೆಯ ಉದ್ದಕ್ಕೂ ಕೇಳಿದ ಧರ್ಮಗಳನ್ನು ಸಹ ಬಿಟ್ಟು ಗೀತೆಯ ಕೊನೆಯಲ್ಲಿ ಪರಮಾತ್ಮನನ್ನು ಭಗವಂತನಾಗಿ ಶರಣು ಹೊಂದಿದವನನ್ನು, ಆತನು ಅವನ ಕರ್ಮವೆಲ್ಲವನ್ನು ಕ್ಷಮಿಸಿ ಇಲ್ಲದಂತೆ ಮಾಡಿ ತನ್ನಲ್ಲಿಯೇ ಸೇರಿಸಿಕೊಳ್ಳುತ್ತಾನೆ. ಎರಡು ಯೋಗಗಳ ಮೂಲಕ ಕೆಲವು ಜನ್ಮಗಳವರೆಗೂ ಮುಗಿಯದ ಕರ್ಮ, ಮೂರನೆಯದಾದ ಭಕ್ತಿ ಯೋಗದಿಂದ ಒಂದೇ ಜನ್ಮದಲ್ಲಿ ಮುಗಿದುಹೋಗಿ ಆ ಜನ್ಮದಲ್ಲಿಯೇ ಪರಮತಂದೆ ಪರಲೋಕ ರಾಜ್ಯಾಧಿಪತಿ ಆದ ಪರಮಾತ್ಮನನ್ನು ಸೇರಬಹುದು. ಕರ್ಮಯೋಗ ಬ್ರಹ್ಮಯೋಗಗಳ ಮೂಲಕ ಕರ್ಮ ಸುಟ್ಟುಹೋಗಬೇಕಾಗಿದೆ. ಆದರೆ ಕೊನೆಯಲ್ಲಿ ಹೇಳಿದ ಭಕ್ತಿಯೋಗದಲ್ಲಿ ಜ್ಞಾನಾಗ್ನಿ ಇಲ್ಲ, ಯೋಗ ಸಾಧನೆ ಇಲ್ಲ, ಯೋಗಿಕೃಷಿ ಇಲ್ಲ. ಕೇವಲ ಶರಣುಬೇಡಿ ತನ್ನನ್ನುತಾನು ಪೂರ್ತಿ ಸಮರ್ಪಿಸಿಕೊಂಡು ತಾನೂ ಶೂನ್ಯವಾಗಿ ನಿಂತುಹೋಗುವುದೇ. ಅಷ್ಟು ಮಾತ್ರಕ್ಕೆ ಭಯಂಕರ ಕರ್ಮಗಳೆಲ್ಲ ನಿಷ್ಫಲವಾಗಿ ಹೋಗುತ್ತವೆ. ಪರಮಾತ್ಮನೇ ಸ್ವತಃ ಕರ್ಮಗಳೆಲ್ಲವನ್ನು ಕ್ಷಮಿಸಿ ತನ್ನ ಹತ್ತಿರಕ್ಕೆ ಸೇರಿಸಿಕೊಳ್ಳುತ್ತಾನೆ.

ಇಲ್ಲಿಗೆ ಭಗವಂತನಾಗಿದ್ದು ಪರಮಾತ್ಮ ಹೇಳಿದ ಧರ್ಮಗಳಿರುವ ಹದ್ದು (ಎಲ್ಲೆ) ಎಂಬ ಈ ಗ್ರಂಥ ಮುಕ್ತಾಯವಾಗಿದೆ. ಇನ್ನೂ 12 ಶ್ಲೋಕಗಳು ಇವೆ ಅಲ್ಲವೆ! ಇಲ್ಲಿಗೆ ಏಕೆ ಮುಕ್ತಾಯವಾಗಿದೆಯೆಂದು ಕೇಳಿದರು, ಅದು ಭಗವದ್ಗೀತೆ ಅಲ್ಲವೆಂದು ಇಲ್ಲಿಯವರೆಗೇ ಭಗವಂತನು ಹೇಳಿರುವುದೆಂದು ಗ್ರಹಿಸಬೇಕು.

**ಈ ಕೊನೆಯ ಅಧ್ಯಾಯದಲ್ಲಿನ ಶ್ಲೋಕಗಳ ವಿವರಗಳು ಕೆಳಗೆ ಇವೆ.**

| | | | |
|---|---|---|---|
| 1. | ಕರ್ಮಸನ್ಯಾಸ, ಕರ್ಮ ತ್ಯಾಗ | – | 2 |
| 2. | ಸಾಕಾರ, ನಿರಾಕಾರ | – | 1 |
| 3. | ಕರ್ಮಯೋಗಿ, ಬ್ರಹ್ಮಯೋಗಿ | – | 1 |
| 4. | ಕರ್ಮಯೋಗ | – | 7 |
| 5. | ಯೋಗ | – | 4 |
| 6. | ಪ್ರಕೃತಿ | – | 5 |
| 7. | ಪರಮಾತ್ಮ | – | 2 |
| 8. | ಜ್ಞಾನ | – | 1 |
| 9. | ಗುಣಗಳ | – | 4 |
| 10. | ಜೀವಿಯು | – | 1 |
| 11. | ಯೋಗ, ವಿಯೋಗ | – | 1 |
| 12. | ಸಾತ್ತ್ವಿಕ | – | 1 |
| 13. | ಮೋಕ್ಷ | – | 1 |
| 14. | ಗೀತಾ ಸಾರಾಂಶ | – | 3 |
| 15. | ಸಾತ್ತ್ವಿಕ ಜ್ಞಾನ | – | 1 |
| 16. | ರಾಜಸ ಜ್ಞಾನ | – | 1 |
| 17. | ತಾಮಸ ಜ್ಞಾನ | – | 1 |
| 18. | ಸಾತ್ತ್ವಿಕ ಕರ್ಮ | – | 1 |
| 19. | ರಾಜಸ ಕರ್ಮ | – | 1 |
| 20. | ತಾಮಸ ಕರ್ಮ | – | 1 |
| 21. | ಸಾತ್ತ್ವಿಕ ಕರ್ತ | – | 1 |
| 22. | ರಾಜಸ ಕರ್ತ | – | 1 |
| 23. | ತಾಮಸ ಕರ್ತ | – | 1 |
| 24 | ಸಾತ್ತ್ವಿಕ ಬುದ್ಧಿ | – | 1 |
| 25. | ರಾಜಸ ಬುದ್ಧಿ | – | 1 |
| 26. | ತಾಮಸ ಬುದ್ಧಿ | – | 1 |

| | | | |
|---|---|---|---|
| 27. | ಸಾತ್ತ್ವಿಕ ಧೃತಿ | – | 1 |
| 28. | ರಾಜಸ ಧೃತಿ | – | 1 |
| 29. | ತಾಮಸ ಧೃತಿ | – | 1 |
| 30. | ಸಾತ್ತ್ವಿಕ ಸುಖ | – | 1 |
| 31. | ರಾಜಸ ಸುಖ | – | 1 |
| 32. | ತಾಮಸ ಸುಖ | – | 1 |
| 33. | ಕಲ್ಪಿತ ಶ್ಲೋಕಗಳು | – | 14 |
| 34. | ವರ್ಜಿಸಿದ ಶ್ಲೋಕಗಳು | – | 12 |
| | **ಒಟ್ಟು ಶ್ಲೋಕಗಳು** | – | **78** |

ಭಾವ, ವಿವರವನ್ನು ಬದಲಾಯಿಸಿ ಬರೆದ ಶ್ಲೋಕಗಳು – 2.



# ಕೊನೆಯದಾಗಿ ನಮ್ಮ ಮಾತು

ಈ ಗ್ರಂಥವನ್ನು ಪೂರ್ತಿಯಾಗಿ ಓದಿದ ನಂತರ ಇದರಲ್ಲಿನ ವಿಷಯವೆಲ್ಲವೂ ಶಾಸ್ತ್ರಬದ್ಧವಾದ ಸಮಾಚಾರವೇ ಎಂದು ತಿಳಿದರೂ, ಎಲ್ಲಾ ವಿಷಯಗಳು ಸ್ಪಷ್ಟವಾಗಿ ಅರ್ಥವಾದರೂ, ತ್ರೈತ ಸಿದ್ಧಾಂತದೊಂದಿಗೆ ಅನೇಕ ಹೊಸ ವಿಷಯಗಳು ಹೊರಬಿದ್ದಿವೆಯೆಂದು ಅನಿಸಿದರೂ, ಕೊನೆಗೆ ಮಾಯ ಪ್ರಭಾವದಿಂದ ಇದೆಲ್ಲವೂ ನಂಬುವಂತಹದ್ದೇನಾ! ಎನ್ನುವ ಸಂಶಯ ಬರುತ್ತದೆ. ಇದು ಸತ್ಯ ಅಲ್ಲವೇನೋ ಎಂದು ಅನಿಸುತ್ತದೆ. ಅಷ್ಟೇ ಅಲ್ಲದೆ ಹೆಸರುವಾಸಿಯಾದ ಎಷ್ಟೋಜನ ಹಿರಿಯರು, ಸ್ವಾಮೀಜಿಗಳು, ಪೀಠಾಧಿಪತಿಗಳು ಬರೆದಿರುವವುಗಳನ್ನು ತೆಗೆದುಹಾಕುವುದು ಏನೆಂದು, ಮೊದಲು ಯಾರೂ ಶ್ಲೋಕಗಳ ಭಾವವನ್ನು ಬದಲಾಯಿಸದಿರುವಾಗ ಈತನು ಮಾತ್ರವೇ ಒಂದಲ್ಲ, ಎರಡಲ್ಲ ಸುಮಾರು 55 ಶ್ಲೋಕಗಳ ಭಾವಗಳನ್ನು ಬದಲಾಯಿಸಿ ಬರೆಯುವುದು ಏನೆಂದು, ಶಾಸ್ತ್ರಬದ್ಧತೆ ಇಲ್ಲದಿರುವವೆಂದು ಹೆಸರಿಟ್ಟು ಅದರ ಕಾರಣದಿಂದ 122 ಶ್ಲೋಕಗಳನ್ನು

ತೆಗೆದುಹಾಕುವುದೇನೆಂದು. ಒಂದುಕಡೆ ಸೂಕ್ಷ್ಮಗಳೆಂದು, ಜ್ಞಾನದೃಷ್ಟಿಗೆ ಮಾತ್ರ ತಿಳಿಯುತ್ತದೆಂದು ಹೇಳುತ್ತಾ ಜೀವಾತ್ಮ ಆಕಾರವನ್ನು ಚಿತ್ರಿಸಿ ತೋರಿಸುವುದೇನೆಂದು, ಐದುಸಾವಿರ ವರ್ಷಗಳಿಂದ ಭಗವದ್ಗೀತೆಯ ನಿಜ ಸ್ವರೂಪ ಇಲ್ಲಿಯವರೆಗೂ ಯಾರಿಗೂ ಅರ್ಥವಾಗಲಿಲ್ಲ ಎನ್ನುವು ದೇನೆಂಬ, ಅನುಮಾನಗಳನ್ನು ಮಾಯೆ ಉಂಟುಮಾಡಬಲ್ಲದು. ಇಲ್ಲಿಯವರೆಗೂ ಯಾರಿಗೂ ತಿಳಿಯದಿರುವುದು ಈತನಿಗೊಬ್ಬನಿಗೆ ತಿಳಿದಿರುತ್ತದಾ ಎಂದು, ಆದಿಶಂಕರಾಚಾರ್ಯರ ಅದ್ವೈತವನ್ನು, ಮದ್ವಾಚಾರ್ಯರ ದ್ವೈತವನ್ನು ಮೀರಿರುವುದಾ ಈತನ ತ್ರೈತವೆಂದು, ಇದೆಲ್ಲ ನಂಬುವಂತಹದ್ದೇನಾ ಎಂದು, ವಿತಂಡವಾದವೆಂದು ಇನ್ನೂ ಎಷ್ಟೋ ವಿಧಗಳ ಯೋಚನೆಗಳನ್ನು ಮಾಯೆ ಹುಟ್ಟಿಸುತ್ತದೆ. ಆದರೂ ಈ ಗ್ರಂಥವನ್ನು ಕುರಿತು ಆತುರ ಪಟ್ಟು ಯಾವ ನಿರ್ಣಯವನ್ನು ತೆಗೆದುಕೊಳ್ಳಬೇಡಿ. ಕುರುಡರಂತೆ ಯಾವುದನ್ನು ನಂಬಬೇಡಿ. ಜಾಗ್ರತೆಯಿಂದ ಅರ್ಥ ಮಾಡಿಕೊಂಡು ಒಂದು ನಿರ್ಣಯಕ್ಕೆ ಬರಬೇಕೆಂದು ಓದುವವರನ್ನು ಕೋರುತ್ತಿದ್ದೇವೆ. ನಾವು ಯಾವ ವಿಧವಾಗಿ ಎಷ್ಟು ಹೇಳಿದರೂ ಯಾರಿಗಿರುವ ಶ್ರದ್ಧೆಯನ್ನನುಸರಿಸಿ ಅವರಿಗೆ ಇದರಲ್ಲಿನ ಜ್ಞಾನ ಅರ್ಥವಾಗುತ್ತದೆಂದು ಕೊನೆಯದಾಗಿ ಹೇಳುತ್ತಿದ್ದೇವೆ.

ಇಂತಿ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**



# ತ್ರೈತ ಸಿದ್ಧಾಂತ



ಆಧ್ಯಾತ್ಮಿಕ ವಿದ್ಯೆಯಲ್ಲಿ ಮೂರನೇ ಸಿದ್ಧಾಂತವಾದ ತ್ರೈತವು ಸೃಷ್ಠಿ ಆದಿಯಲ್ಲಿ ಪರಮಾತ್ಮ ನೆಲೆಗೊಳಿಸಿರುವುದಾಗಿ ಮಹಾವೃಕ್ಷದಂತೆ ಇತ್ತು. ಕಾಲಕ್ರಮದಲ್ಲಿ ಅದು ಯಾರಿಗೂ ತಿಳಿಯದಂತೆ ಹೋಗಿದೆ. ಮಾಯ ಪ್ರಭಾವದಿಂದ ಮಾನವ ಲೋಕದಲ್ಲಿ ಎಷ್ಟೋ ಕಾಲ ನಿಕ್ಷಿಪ್ತವಾಗಿ ತಿಳಿಯದಂತಿರುವ ತ್ರೈತ ಪ್ರಸ್ತುತ ಚಿಗುರೊಡೆದಿದೆ. ಈ ಮರ ಅಜ್ಞಾನವೆಂಬ ರೋಗಕ್ಕೆ ಒಳ್ಳೆ ಔಷಧವೆಂದು ತಿಳಿಸಿ ಎಷ್ಟೋ ಜನರನ್ನು ಇದರ ಹತ್ತಿರಕ್ಕೆ ಸೇರಿಸುವುದು ನಮ್ಮ ಭಾಗ್ಯ ಎಂದುಕೊಂಡಿದ್ದೇವೆ. ಎಷ್ಟೋ ದೊಡ್ಡ ಮತಚಾಂದಸವಾದಿಗಳಾಗಲಿ ಇದು ನಮ್ಮದು ಎಂದು ಒಪ್ಪಿಕೊಳ್ಳುವುದು ತ್ರೈತದಲ್ಲಿನ ವಿಶೇಷವೆಂದುಕೊಳ್ಳುತ್ತೇವೆ. ನಮ್ಮ ಮತ ಬೇರೆ, ನಮ್ಮ ದೇವರು ಬೇರೆಯೆಂದು ಇದನ್ನು ತಿಳಿದವರ್‍ಯಾರು ಹೇಳುವುದಿಲ್ಲ. ಇದು ಸ್ವಚ್ಛವಾದ ದೈವಜ್ಞಾನ ಪದ್ಧತಿಯಾಗಿರುವುದರಿಂದ ತಿಳಿಯದ ಮೊದಲು ಹೇಗೆ ಮಾತನಾಡಿ ವಿಮರ್ಶಿಸಿದರೂ ತಿಳಿದ ನಂತರ ತಪ್ಪದೇ ಒಪ್ಪಿಕೊಳ್ಳಬೇಕಾಗುತ್ತದೆ. ಸುಮಾರು ಒಂದೂವರೆ ಶತಾಬ್ಧಿಯಿಂದಿರುವ ಅದ್ವೈತ, ದ್ವೈತ ಸಿದ್ಧಾಂತ ಪರರಿಗೆ ಸ್ವಲ್ಪ ಅಯಿಷ್ಟತೆಯನ್ನು ಉಂಟು ಮಾಡುವುದಾದರೂ ಅವರು ಬುದ್ಧಿಯಿಂದ ಯೋಚಿಸಿ ಸ್ವಾನುಭವಗಳನ್ನನುಸರಿಸಿ ನೋಡಿದರೆ ದ್ವೈತ, ಅದ್ವೈತಗಳು ಮಾತನಾಡುವುದಕ್ಕೆ ಯೋಗ್ಯವಾದವುಗಳೆಂದು ನಿಜ ನಿರ್ಧಾರಣೆ ಅನುಭವ, ವಾಸ್ತವ ಆಚರಣೆ ಒಂದು ತ್ರೈತದಲ್ಲಿಯೇ ಇದೆಯೆಂದು ತಿಳಿಯಬಲ್ಲದು. ಇತರ ಮತಗಳನ್ನು ಸಹ ತನ್ನಲ್ಲಿ ಸೇರಿಸಿಕೊಳ್ಳುವ ತ್ರೈತ ಪರಮಾತ್ಮ ತಿಳಿಸಿದ ವಾಸ್ತವವಾದ ಇಂದೂ ಪಥ (ಜ್ಞಾನಮಾರ್ಗ) ವಾಗಿ ಪ್ರಕಾಶಿಸುತ್ತದೆಂದು ತಿಳಿಯುತ್ತಿದ್ದೇವೆ.

ಇಂತಿ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

**www.thraithashakam.org**